ಶ್ರೀ ಜಯಚಾಮರಾಜೇಂದ್ರ ಗ್ರಂಥರತ್ನಮಾಲಾ ಸಂಖ್ಯಾ ೧೪

# ಶ್ರೀಸ್ಕಾಂದಮಹಾಪುರಾಣಂ

## ವೈಷ್ಣವಖಂಡ

## ೫—೬—೭

## ಮಾರ್ಗಶೀರ್ಷ, ಶ್ರೀಮದ್ಭಾಗವತ
ಮತ್ತು
## ವೈಶಾಖಮಾಸ ಮಾಹಾತ್ಮ್ಯಗಳು

(ಮೂಲ ಮತ್ತು ಅನುವಾದ ಸಹಿತ)

ಅನುವಾದಕ
ಆಸ್ಥಾನ ವಿದ್ವಾನ್
**ಮೋಟಗಾನಹಳ್ಳಿ ಸುಬ್ರಹ್ಮಣ್ಯಶಾಸ್ತ್ರೀ**

ಬೆಂಗಳೂರು ಪ್ರೆಸ್
ಮೈಸೂರು ರೋಡು, ಬೆಂಗಳೂರು ಸಿಟಿ
೧೯೪೬

# ಅರಿಕೆ

ಈ ಸಂಪುಟದಲ್ಲಿ ಶ್ರೀ ಸ್ಕಾಂದಮಹಾಪುರಾಣದ ದ್ವಿತೀಯ ಮೂಲ ಖಂಡವಾದ ವೈಷ್ಣವ ಖಂಡದ ಐದು, ಆರು ಮತ್ತು ಏಳನೆಯ ಭಾಗಗಳಾದ ಮಾರ್ಗಶೀರ್ಷ, ಭಾಗವತ ಮತ್ತು ವೈಶಾಖ ಮಾಹಾತ್ಮ್ಯಗಳು ಸಂಪೂರ್ಣವಾಗಿರುತ್ತವೆ. ಇಲ್ಲಿಂದ ಮುಂದೆ ಈ ಖಂಡದ ಕಡೆಯ ಭಾಗಗಳಾದ ಅಯೋಧ್ಯಾ ಮತ್ತು ವಾಸುದೇವಮಾಹಾತ್ಮ್ಯಗಳು ವರ್ಣಿತವಾಗಿ, ಅಲ್ಲಿಗೆ ವೈಷ್ಣವಖಂಡವು ಸಮಾಪ್ತವಾಗುವುದು.

ಇಂತಹ ಅನೇಕಾನೇಕ ಕ್ಷೇತ್ರಮಾಹಾತ್ಮ್ಯಗಳ ಸಂಪುಟವೆನಿಸಿರುವ ಈ ಮಹಾಪುರಾಣವನ್ನು ಕನ್ನಡದ ಅನುವಾದದೊಡನೆ ಪ್ರಕಟಿಸಲು ಪ್ರೇರೇಪಿಸಿ ಕನ್ನಡಿಗರೆಲ್ಲರಿಗೂ ಮಹೋಪಕೃತಿಯೆನ್ನಸಗಿ ಅವರೆಲ್ಲರ ಚಿರಕೃತಜ್ಞತೆಗೆ ಪಾತ್ರರಾಗಿರುವ ನಮ್ಮನ್ನಾಳುವ ಶ್ರೀಮದ್ ಜಯಚಾಮರಾಜೇಂದ್ರ ಒಡೆಯರ್ ಬಹದ್ದೂರ್, ಜಿ.ಸಿ.ಎಸ್.ಐ., ಜಿ.ಸಿ.ಬಿ. ಮಹಾಪ್ರಭುಗಳವರಿಗೆ ಪರಮೇಶ್ವರನು ಇತೋಪ್ಯತಿಶಯವಾದ ಸಮಸ್ತ ಸನ್ಮಂಗಳಗಳನ್ನೂ ದಯಪಾಲಿಸಿ ಸಂರಕ್ಷಿಸಲೆಂದು ಸಂಪ್ರಾರ್ಥಿಸುತ್ತೇನೆ.

**ಮೋಟಗಾನಹಳ್ಳಿ ಸುಬ್ರಹ್ಮಣ್ಯಶಾಸ್ತ್ರೀ**

# ವಿಷಯಾನುಕ್ರಮಣಿಕೆ

## ಮಾರ್ಗಶೀರ್ಷಮಾಸಮಾಹಾತ್ಮ್ಯ

॥ ಶ್ರೀಃ ॥

ಅಥ ಮಂಗಳಾಚರಣಶ್ಲೋಕಃ

ಯಸ್ಯಾಜ್ಞಯಾ ಜಗತ್ಸ್ರಷ್ಟಾ ವಿರಿಂಚಿಃ ಪಾಲಕೋ ಹರಿಃ ।
ಸಂಹರ್ತಾ ಕಾಲರುದ್ರಾಖ್ಯೋ ನಮಸ್ತಸ್ಮೈ ಪಿನಾಕಿನೇ ॥

ತಾತ್ಪರ್ಯ

ಯಾವ ಪ್ರಭುವಿನ ಅಪ್ಪಣೆಯಿಂದ
ಬ್ರಹ್ಮನು ಜಗತ್ತನ್ನು ಸೃಜಿಸುವವನಾಗಿಯೂ
ಶ್ರೀಮನ್ನಾರಾಯಣಮೂರ್ತಿಯು ಸಂರಕ್ಷಿಸುವವನಾಗಿಯೂ
ಕಾಲರುದ್ರನೆಂದು ಹೆಸರಾದ ಸ್ವಾಮಿಯು ಸಂಹಾರಕರ್ತನಾಗಿಯೂ ಇರುವರೋ
ಆ ಪಿನಾಕಪಾಣಿಯಾದ ಪರಮಶಿವನಿಗೆ
ನಮಸ್ಕಾರವು

**ಯೇ ಕೇಚಿತ್ಪುಣ್ಯಕರ್ಮಾಣೋ ಮಮ ಭಕ್ತಿಪರಾಯಣಾಃ ।**
**ತೇಷಾಮವಶ್ಯಂ ಕರ್ತವ್ಯೋ ಮಾರ್ಗಶೀರ್ಷೋ ಮದಾಪನಃ ॥ ೧೩ ॥**
**ಮಾರ್ಗಶೀರ್ಷಂ ನ ಕುರ್ವಂತಿ ಯೇ ನರಾ ಭಾರತಾಽಜಿರೇ ।**
**ಪಾಪರೂಪಾಶ್ಚ ತೇ ಜ್ಞೇಯಾಃ ಕಲಿಕಾಲವಿಮೋಹಿತಾಃ ॥ ೧೪ ॥**
**ಅಷ್ಟಸ್ವಪಿ ಚ ಮಾಸೇಷು ಯತ್ಫಲಂ ಲಭತೇ ನರಃ ।**
**ತತ್ಫಲಂ ಪ್ರಾಪ್ಯತೇ ವತ್ಸ ಮಾಘೇ ಮಕರಗೇ ರವೌ ॥ ೧೫ ॥**
**ಮಾಘಾಚ್ಛತಗುಣಂ ಪುಣ್ಯಂ ವೈಶಾಖೇ ಮಾಸಿ ಲಭ್ಯತೇ ।**
**ತಸ್ಮಾತ್ಸಹಸ್ರಗುಣಿತಂ ತುಲಾಸಂಸ್ಥೇ ದಿವಾಕರೇ ॥ ೧೬ ॥**
**ತಸ್ಮಾತ್ಕೋಟಿಗುಣಂ ಪುಣ್ಯಂ ವೃಶ್ಚಿಕಸ್ಥೇ ದಿವಾಕರೇ ।**
**ಮಾರ್ಗಶೀರ್ಷೋಽಧಿಕಸ್ತಸ್ಮಾತ್ಸರ್ವದಾ ಚ ಮಮ ಪ್ರಿಯಃ ॥ ೧೭ ॥**
**ಉಷಸ್ಯುತ್ಥಾಯ ಯೋ ಮರ್ತ್ಯಃ ಸ್ನಾನಂ ವಿಧಿವದಾಚರೇತ್ ।**
**ತುಷ್ಟೋಽಹಂ ತಸ್ಯ ಯಚ್ಛಾಮಿ ಸ್ವಾತ್ಮಾನಮಪಿ ಪುತ್ರಕ ॥ ೧೮ ॥**

---

೧೩. ಲೋಕದಲ್ಲಿ ಪುಣ್ಯವಂತರಾದ ಯಾವ ಮಾನವರು ನನ್ನಲ್ಲಿನ ಭಕ್ತಿಯಲ್ಲಿಯೇ ನಿರತರಾಗಿರುವರೊ, ಅವರಿಗೆ ನನ್ನನ್ನು ಹೊಂದಲು ಮುಖ್ಯಕಾರಣವಾದ ಮಾರ್ಗಶೀರ್ಷವ್ರತವು ಆವಶ್ಯಕವಾದ ಕರ್ತವ್ಯವಾಗಿರುವುದು.

೧೪. ಯಾವ ಮನುಷ್ಯರು ಈ ಭರತಖಂಡದಲ್ಲಿ ಹುಟ್ಟಿದರೂ ಕೂಡ ಮಾರ್ಗಶೀರ್ಷ ವ್ರತವನ್ನಾಚರಿಸುವುದಿಲ್ಲವೊ, ಅವರೆಲ್ಲರೂ ಕಲಿಕಾಲದ ಮೋಹಕ್ಕೊಳಗಾದ ಪಾಪ ಸ್ವರೂಪರೆಂದೇ ತಿಳಿದುಕೊಳ್ಳಬೇಕು.

೧೫. ಎಲೈ ಪ್ರಿಯಪುತ್ರನೆ! ಇತರ ಎಂಟು ಮಾಸಗಳಲ್ಲಿ ಸೇವೆಯನ್ನು ಮಾಡಿದುದರಿಂದ ಮನುಷ್ಯನು ಯಾವ ಫಲವನ್ನು ಪಡೆಯುವನೊ, ಅಷ್ಟು ಪುಣ್ಯವನ್ನೇ ಸೂರ್ಯನು ಮಕರರಾಶಿಯಲ್ಲಿರುವಾಗ ಮಾಘಮಾಸದಲ್ಲಿ ಮಾಡಿದ ಪೂಜೆಯಿಂದ ಪಡೆಯುವನು.

೧೬. ಮಾಘಮಾಸದ ಸೇವೆಗಿಂತಲೂ ನೂರು ಪಾಲಿನಷ್ಟು ಪುಣ್ಯವು ವೈಶಾಖಮಾಸದಲ್ಲಿ ಲಭಿಸುವುದು. ಆ ವೈಶಾಖಮಾಸಕ್ಕಿಂತಲೂ ಕೋಟಿ ಗುಣಿತವಾದ ಸತ್ಫಲವು ಸೂರ್ಯನು ತುಲಾರಾಶಿಯಲ್ಲಿರುವಾಗ ಲಭಿಸುವುದು.

೧೭. ಆ ತುಲಾಮಾಸಕ್ಕಿಂತಲೂ ಸೂರ್ಯನು ವೃಶ್ಚಿಕರಾಶಿಸ್ಥನಾಗಿದ್ದಾಗ ಮಾಡಿದ ಸೇವೆಯು ಕೋಟಿಪಾಲಿನಷ್ಟು ಹೆಚ್ಚಿನದಾಗಿರುವುದು. ಇವುಗಳೆಲ್ಲಕ್ಕಿಂತಲೂ ಮಾರ್ಗಶೀರ್ಷಮಾಸವು ಅತ್ಯಧಿಕಫಲದಾಯಕವಾಗಿ ಯಾವಾಗಲೂ ನನಗೆ ಪ್ರಿಯವಾಗಿರುವುದು.

೧೮. ಆ ಮಾಸದಲ್ಲಿ ಉಷಃಕಾಲದಲ್ಲಿ ಎದ್ದು ಯಾವ ಮಾನವನು ವಿಧಿಪ್ರೋಕ್ತವಾದ ರೀತಿಯಿಂದ ಸ್ನಾನವನ್ನು ಮಾಡುವನೊ, ಅವನಿಗೆ ನಾನು ಸಂತೋಷಗೊಂಡು ನನ್ನ ಆತ್ಮವನ್ನಾದರೂ ಕೊಟ್ಟು ತೃಪ್ತಿಪಡಿಸುವೆನು.

ಅತ್ರಾಪ್ಯುದಾಹರಂತೀಮಂ ಶೃಣು ಪುತ್ರ ಕಥಾನಕಂ ।
ನಂದಗೋಪೋ ಮಹಾತ್ಮಾ ವೈ ಖ್ಯಾತೋ ಯೋ ಭೂತಲೇಽಭವತ್ ॥
ತಸ್ಯ ವೈ ಗೋಕುಲೇ ರಮ್ಯೇ ಗೋಪಕನ್ಯಾಃ ಸಹಸ್ರಶಃ ।
ತಾಸಾಂ ಚಿತ್ತಂ ಚ ಮದ್ರೂಪೇ ಲಗ್ನಮಾಸೀತ್ಪುರಾಽನಘ ॥ ೨೦ ॥
ತಾಸಾಂ ಬುದ್ಧಿರ್ಮಯಾ ದತ್ತಾ ಮಾರ್ಗಶೀರ್ಷಾಽವಗಾಹನೇ ।
ತತಸ್ತಾಭಿಃ ಕೃತಂ ಸ್ನಾನಂ ಪ್ರಾತಃಕಾಲೇ ಯಥಾವಿಧಿ ॥ ೨೦ ॥
ಪೂಜಾ ಕೃತಾ ಹವಿಷ್ಯಾನ್ನಂ ಭುಕ್ತಂ ತಾಭಿಃ ಕೃತಾ ನತಿಃ ।
ಏವಂ ಕೃತೇನ ವಿಧಿನಾ ಪ್ರಸನ್ನೋಽಹಂ ತತೋಽನಘ ॥ ೨೨ ॥
ವರೋ ದತ್ತೋ ಮಯಾಽಽತ್ಮಾ ಹಿ ತಾಸಾಂ ತುಷ್ಟೇನ ವೈ ಕಿಲ ।
ತಸ್ಮಾನ್ನರೈಸ್ತು ಕರ್ತವ್ಯೋ ಮಾರ್ಗಶೀರ್ಷೋ ಯಥಾವಿಧಿ ॥ ೨೩ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ದ್ವಿತೀಯೇ ವೈಷ್ಣವಖಂಡೇ ಮಾರ್ಗಶೀರ್ಷಮಾಹಾತ್ಮ್ಯೇ ಬ್ರಹ್ಮವಿಷ್ಣುಸಂವಾದೇ "ಗೋಪೀಕೃತ ಸ್ನಾನಫಲಕಥನಂ" ನಾಮ ಪ್ರಥಮೋಽಧ್ಯಾಯಃ

---

೧೯. ಎಲೈ ಪುತ್ರನೆ! ಈ ವಿಷಯದಲ್ಲಿ ಮುಂದೆ ಹೇಳುವ ಕಥೆಯನ್ನು ಬಲ್ಲವರು ಉದಹರಿಸುವರು, ಕೇಳುವವನಾಗು. ಪೂರ್ವಕಾಲದಲ್ಲಿ ಭೂಲೋಕದಲ್ಲಿ ನಂದಗೋಪನೆಂಬ ಪ್ರಖ್ಯಾತಿಯನ್ನು ಹೊಂದಿದ ಮಹಾತ್ಮನೊಬ್ಬನಿದ್ದನು.

೨೦. ಪಾಪರಹಿತನಾದ ಬ್ರಹ್ಮದೇವನೆ! ಆತನ ಗೋಕುಲದಲ್ಲಿ ಸಾವಿರಾರು ಗೋಪಿಕಾಸ್ತ್ರೀಯರು ವಾಸಮಾಡುತ್ತಿದ್ದರು. ಅವರೆಲ್ಲರ ಬುದ್ಧಿವ್ಯಾಪಾರಗಳೂ ನನ್ನ ರೂಪದಲ್ಲಿಯೇ ಮುನ್ನು ನಟ್ಟವುಗಳಾಗಿದ್ದುವು.

೨೧. ಅವರಿಗೆಲ್ಲ ಮಾರ್ಗಶೀರ್ಷಮಾಸದಲ್ಲಿ ಸ್ನಾನಮಾಡುವ ಸದ್ಬುದ್ಧಿಯನ್ನು ನಾನೇ ಅನುಗ್ರಹಿಸಿದೆನು. ಆದುದರಿಂದ ಅವರು ಪ್ರಾತಃಕಾಲದಲ್ಲಿ ವಿಧಿನಿಯಮಗಳನ್ನನುಸರಿಸಿ ಸ್ನಾನಗಳನ್ನಾಚರಿಸಿದರು.

೨೨. ಅವರಿಂದ ನನ್ನ ಪೂಜೆಯೂ ಮಾಡಲ್ಪಟ್ಟಿತು. ನೈವೇದ್ಯಾನ್ನವೂ ಸ್ವೀಕರಿಸಲ್ಪಟ್ಟಿತು. ನಮಸ್ಕಾರವೂ ಮಾಡಲ್ಪಟ್ಟಿತು. ಈ ರೀತಿಯಾಗಿ ಮಾಡಲ್ಪಟ್ಟ ಸದಾಚಾರದಿಂದ ನಾನು ಸುಪ್ರಸನ್ನನಾದೆನು.

೨೩. ಅವರ ವಿಷಯದಲ್ಲಿ ಸಂತೋಷಗೊಂಡ ನಾನು ನನ್ನ ಆತ್ಮವನ್ನೇ ಅವರಿಗೆ ವರವಾಗಿ ಕೊಟ್ಟೆನು. ಆದುದರಿಂದ ವಿಧ್ಯುಕ್ತವಾದ ರೀತಿಯಿಂದ ಸಮಸ್ತ ಮಾನವರೂ ಮಾರ್ಗಶೀರ್ಷ ವ್ರತವನ್ನು ಮಾಡಬೇಕು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀಸ್ಕಾಂದಮಹಾಪುರಾಣದ ಎರಡನೆಯ ವೈಷ್ಣವಖಂಡದ ಮಾರ್ಗಶೀರ್ಷಮಾಹಾತ್ಮ್ಯದ ಬ್ರಹ್ಮವಿಷ್ಣುಸಂವಾದದಲ್ಲಿ "ಗೋಪೀಕೃತ ಸ್ನಾನಫಲಕಥನ" ವೆಂಬ ಮೊದಲನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

# ಅಥ ದ್ವಿತೀಯೋಽಧ್ಯಾಯಃ

## ತ್ರಿಪುಂಡ್ರಧಾರಣವಿಧಿಕಥನಂ

ಬ್ರಹ್ಮೋವಾಚ :—

ತ್ವಯೋಕ್ತೋ ವಿಧಿಸಂಯುಕ್ತೋ ಮಾರ್ಗಶೀರ್ಷೋ ಮದಾಪನಃ ।
ಕೋ ವಿಧಿಸ್ತಸ್ಯ ದೇವೇಶ ಸರ್ವಂ ಮೇ ಬ್ರೂಹಿ ಕೇಶವ ॥ ೧ ॥

ಶ್ರೀ ಭಗವಾನುವಾಚ :—

ರಾತ್ರ್ಯಾವಂತೇ ಸಮುತ್ಥಾಯ ಉಪಸ್ಪೃಶ್ಯ ಯಥಾವಿಧಿ ।
ನಮಸ್ಕೃತ್ಯ ಗುರುಂ ಸ್ವೀಯಂ ಸಂಸ್ಮರೇನ್ಮಾಮತಂದ್ರಿತಃ ॥ ೨ ॥
ಸಹಸ್ರನಾಮಭಿರ್ಭಕ್ತ್ಯಾ ಕೀರ್ತಯೇದ್ವಾಗ್ಯತಃ ಶುಚಿಃ ।
ಬಹಿರ್ಗ್ರಾಮಾತ್ಸಮುತ್ಸೃಜ್ಯ ಮಲಮೂತ್ರಂ ಯಥಾವಿಧಿ ॥ ೩ ॥
ಶೌಚಂ ಕೃತ್ವಾ ಯಥಾ ನ್ಯಾಯಮಾಚಮ್ಯ ಪ್ರಯತಶ್ಶುಚಿಃ ।
ದಂತಧಾವನಪೂರ್ವಂ ಚ ಸ್ನಾನಂ ಕೃತ್ವಾ ಯಥಾವಿಧಿ ॥ ೪ ॥
ಆದಾಯ ತುಲಸೀಮೂಲಮೃದಂ ತತ್ಪತ್ರಸಂಯುತಾಂ ।
ಮೂಲಮಂತ್ರೇಣಾಽಭಿಮಂತ್ರ್ಯ ಗಾಯತ್ರ್ಯಾ ವಾ ಮಹಾಮತೇ ॥ ೫ ॥

---

## ಕನ್ನಡದ ಅನುವಾದ

### ತ್ರಿಪುಂಡ್ರಧಾರಣವಿಧಿಕಥನ

೧. ಬ್ರಹ್ಮದೇವನು ಹೇಳುತ್ತಾನೆ:—“ವಿಧಿಯಿಂದ ಕೂಡಿ ಆಚರಿಸಲ್ಪಟ್ಟ ಮಾರ್ಗಶೀರ್ಷಮಾಸದ ವ್ರತವು ನನ್ನನ್ನು ಹೊಂದಲು ಉತ್ತಮ ಸಾಧನ”ವೆಂದು ನೀನು ಹೇಳಿರುವೆಯಲ್ಲವೆ! ದೇವೇಶ್ವರನಾದ ಓ ಕೇಶವನೆ! ಆ ವ್ರತದ ವಿಧಿ ಯಾವುದೆಂಬುದನ್ನು ನನಗೆ ಸಂಪೂರ್ಣವಾಗಿ ತಿಳಿಸು.

೨. ಶ್ರೀಭಗವಂತನು ಹೇಳುತ್ತಾನೆ:—ಪ್ರತಿ ಮಾನವನೂ ರಾತ್ರಿಯ ಕಡೆಯಲ್ಲಿ (ನಾಲ್ಕನೆಯ ಝಾವದಲ್ಲಿ) ಹಾಸಿಗೆಯಿಂದೆದ್ದು ಶಾಸ್ತ್ರೋಕ್ತರೀತಿಯಿಂದ ಉದಕೋಪಸ್ಪರ್ಶನವನ್ನು ಮಾಡಿ ತನ್ನ ಗುರುವನ್ನು ಸ್ಮರಣೆ ಮಾಡಬೇಕು. ಬಳಿಕ ಏಕಾಗ್ರವಾದ ಮನಸ್ಸಿನಿಂದ ನನ್ನ ರೂಪವನ್ನು ಧ್ಯಾನಮಾಡಬೇಕು.

೩–೬. ಮಿತಭಾಷಿಯೂ, ಶೌಚಪರನೂ ಆಗಿ ನನ್ನ ಸಹಸ್ರನಾಮಗಳನ್ನು ಭಕ್ತಿಯುಕ್ತನಾಗಿ ಕೀರ್ತನೆಮಾಡಬೇಕು. ಬಳಿಕ ಗ್ರಾಮದ ಹೊರಗೆ ಯಥಾವಿಧಿಯಾಗಿ ಮಲಮೂತ್ರಗಳನ್ನು ವಿಸರ್ಜಿಸಿ, ಯಥೋಚಿತವಾದ ಶೌಚವನ್ನು ಮಾಡಿಕೊಂಡು, ಪ್ರಯತ್ನಪೂರ್ವಕವಾಗಿ ಶುಚಿರ್ಭೂತನಾಗಿ ದಂತಧಾವನಾದಿ

ಮಂತ್ರೇಣೈವಾಽನುಲಿಪ್ತಾಂಗಃ ಸ್ನಾಯಾದಘಮರ್ಷಣಂ ।
ಅನುದ್ಧೃತೈರುದ್ಧೃತೈರ್ವಾ ಜಲೈಃ ಸ್ನಾನಂ ವಿಧೀಯತೇ ॥ ೬ ॥
ತೀರ್ಥಂ ಪ್ರಕಲ್ಪಯೇದ್ವಿದ್ವಾನ್ಮಂತ್ರೇಣಾಽನೇನ ಮಂತ್ರವಿತ್ ।
ಓಂ ನಮೋ ನಾರಾಯಣಾಯೇತಿ ಮೂಲಮಂತ್ರ ಉದಾಹೃತಃ ॥ ೭ ॥
ದರ್ಭಪಾಣಿಸ್ತು ವಿಧಿನಾ ಆಚಾಂತಃ ಪುರತಃ ಶುಚಿಃ ।
ಚತುರ್ಹಸ್ತಸಮಾಯುಕ್ತಂ ಚತುರಸ್ರಂ ಸಮಂತತಃ ।
ಪ್ರಕಲ್ಪ್ಯಾಽಽವಾಹಯೇದ್ಗಂಗಾಮೇಭಿರ್ಮನ್ತ್ರೈರ್ವಿಚಕ್ಷಣಃ ॥ ೮ ॥
ವಿಷ್ಣುಪಾದಪ್ರಸೂತಾಽಸಿ ವೈಷ್ಣವೀ ವಿಷ್ಣುದೇವತಾ ।
ತ್ರಾಹಿ ನಸ್ತ್ವಮಘಾದಸ್ಮಾದಾಜನ್ಮಮರಣಾಂತಿಕಾತ್ ॥ ೯ ॥

ಗಳನ್ನು ತೀರಿಸಿಕೊಂಡು, ಬಳಿಕ ನಿಯಮಗಳನ್ನನುಸರಿಸಿ ಸ್ನಾನವನ್ನು ಮಾಡಿ, ತುಲಸೀಬೃಂದಾವನದ ಮೃತ್ತಿಕೆಯನ್ನೂ, ಅದರ ದಳಗಳನ್ನೂ ತೆಗೆದುಕೊಂಡು, ಅವುಗಳನ್ನು ಮೂಲ ಮಂತ್ರದಿಂದಾಗಲಿ ಗಾಯತ್ರೀ ಮಂತ್ರದಿಂದಾಗಲಿ ಅಭಿಮಂತ್ರಣ ಮಾಡಿ, ಅದೇ ಮಂತ್ರದಿಂದಲೇ ಶರೀರಕ್ಕೆ ಲೇಪನೆ ಮಾಡಿಕೊಂಡು ನೀರಿನಲ್ಲಿ ಪಾಪನಾಶಕವಾದ ಸ್ನಾನವನ್ನಾಚರಿಸಬೇಕು. ಕೂಪತಟಾಕಾದಿ ಜಲಾಶಯಗಳಿಂದ ಸೇದಿ ತಂದ ನೀರಿನಿಂದಾಗಲಿ ಆ ಜಲಾಶಯಗಳಲ್ಲಿಯೇ ಆಗಲಿ ಸ್ನಾನವನ್ನು ಮಾಡಬೇಕೆಂದು ಶಾಸ್ತ್ರಗಳಲ್ಲಿ ವಿಧಿಸಲ್ಪಟ್ಟಿರುವುದು.

೭. ವಿದ್ವಾಂಸನೂ, ಮಂತ್ರಜ್ಞನೂ ಆದ ಮನುಷ್ಯನು ಆ ಜಲವನ್ನು ಮುಂದೆ ಹೇಳುವ ಮಂತ್ರದ ಪುನರುಚ್ಚಾರಣೆಯಿಂದ ತೀರ್ಥೋದಕವನ್ನಾಗಿ ಮಾರ್ಪಡಿಸಿಕೊಳ್ಳಬೇಕು. "ಓಂ ನಮೋ ನಾರಾಯಣಾಯ" ಎಂಬ ಅಷ್ಟಾಕ್ಷರಿಯೇ ಈ ಕಾರ್ಯಕ್ಕೆ ಮೂಲ ಮಂತ್ರವೆಂದು ಹೇಳಲ್ಪಟ್ಟಿರುವುದು.

೮. ಕರ್ಮಗಳಲ್ಲಿ ವಿಚಕ್ಷಣನಾದ ಬ್ರಾಹ್ಮಣನು ನಾಲ್ಕು ಮೂಲೆಗಳಲ್ಲಿಯೂ ನಾಲ್ಕು ಹಸ್ತಗಳಿಂದ ಕೂಡಿದ ಚೌಕವಾದ ಮಂಡಲವೊಂದನ್ನು ನಿರ್ಮಿಸಿ, ದರ್ಭೆಯ ಪವಿತ್ರವನ್ನು ಕೈಬೆರಳಿಗೆ ಹಾಕಿಕೊಂಡು, ವಿಧ್ಯುಕ್ತವಿಧಾನದಿಂದ ಆಚಮನವನ್ನು ಮಾಡಿ, ಶುಚಿಯಾಗಿ ಆ ಮಂಡಲದ ಮುಂದೆ ಕುಳಿತು ಮುಂದೆ ಹೇಳುವ ಮಂತ್ರಗಳ ಪುರಶ್ಚರಣೆಯಿಂದ ಗಂಗಾದೇವಿಯನ್ನು ತೀರ್ಥದಲ್ಲಿ ಆವಾಹನೆ ಮಾಡಬೇಕು.

೯. "ದೇವಿ! ನೀನು ವಿಷ್ಣುವಿನ ಪಾದಗಳಿಂದ ಉದ್ಭವಿಸಿರುವೆ. ವಿಷ್ಣುವಿಗೆ ಪ್ರಿಯಳಾಗಿರುವೆ. ವಿಷ್ಣುವೇ ನಿನಗೆ ಅಧಿದೈವವಾಗಿರುವನು. ನಾವು ಹುಟ್ಟಿದ ಮೊದಲು ದೇಹವನ್ನು ಬಿಡುವ ಪರ್ಯಂತವೂ ಮಾಡಿರುವ ಮತ್ತು ಮಾಡುವ ಸಕಲ ಪಾಪಗಳಿಂದಲೂ ನಮ್ಮನ್ನು ಕಾಪಾಡು.

ತಿಸ್ರಃ ಕೋಟ್ಯೋಽರ್ಧಕೋಟೀ ಚ ತೀರ್ಥಾನಾಂ ವಾಯುರಬ್ರವೀತ್ ।
ದಿವಿ ಭುವ್ಯಂತರಿಕ್ಷೇ ಚ ತಾನಿ ತೇ ಸಂತಿ ಜಾಹ್ನವಿ ॥ ೧೦ ॥
ನಂದಿನೀತ್ಯೇವ ತೇ ನಾಮ ದೇವೇಷು ನಲಿನೀತಿ ಚ ।
ದಕ್ಷಪುತ್ರೀ ಚ ವಿಹಗಾ ವಿಶ್ವಗಾ ಯೋಗಿನಾಂ ಮತಾ ॥ ೧೧ ॥
ವಿದ್ಯಾಧರೀ ಸುಪ್ರಸನ್ನಾ ತಥಾ ಲೋಕಪ್ರಸಾದಿನೀ ।
ಕ್ಷೇಮಾ ಚ ಜಾಹ್ನವೀ ಚೈವ ಶಾಂತಾ ಶಾಂತಿಪ್ರದಾಯಿನೀ ॥ ೧೨ ॥
ಏತಾನಿ ಪುಣ್ಯನಾಮಾನಿ ಸ್ನಾನಕಾಲೇ ಸದಾ ಪಠೇತ್ ।
ಸದಾ ಸನ್ನಿಹಿತಾ ತತ್ರ ಗಂಗಾ ತ್ರಿಪಥಗಾಮಿನೀ ॥ ೧೩ ॥
ಸಪ್ತವಾರಾಭಿಜಪ್ತೇನ ಕರಸಂಪುಟಯೋಜಿತಂ ।
ಮೂರ್ಧ್ನಾ ಕೃತಾಂಜಲಿರ್ಭೂಯಸ್ತ್ರಿಚತುಃಪಂಚ ಸಪ್ತ ವಾ ।
ಸ್ನಾನಂ ಕುರ್ಯಾನ್ಮೃದಾ ತದ್ವದಾಮಂತ್ರ್ಯಾಽನುವಿಧಾನತಃ ॥ ೧೪ ॥

---

೧೦. ದೇವಲೋಕದಲ್ಲಿಯೂ, ಭೂಲೋಕದಲ್ಲಿಯೂ, ಅಂತರಿಕ್ಷದಲ್ಲಿಯೂ ಒಟ್ಟು ಮೂರೂವರೆ ಕೋಟಿ ತೀರ್ಥಗಳಿರುವುವೆಂದು ವಾಯುದೇವನು ನಿರೂಪಿಸಿರುವನು. ಎಲೌ ಜಹ್ನುಕನ್ಯೆಯಾದ ಗಂಗಾದೇವಿಯೆ! ಅವುಗಳೆಲ್ಲವೂ ನಿನ್ನಲ್ಲಿಯೇ ನೆಲೆಗೊಂಡಿರುವುವು.

೧೧. ದೇವತೆಗಳ ಲೋಕದಲ್ಲಿ ನಿನಗೆ ನಂದಿನಿಯೆಂದೂ, ನಳಿನಿಯೆಂದೂ ಹೆಸರುಗಳಿರುವುವು. ದಕ್ಷಬ್ರಹ್ಮನ ಪುತ್ರಿಯೂ, ಆಕಾಶಗಾಮಿನಿಯೂ, ವಿಶ್ವವ್ಯಾಪಕಳೂ ಆದ ನೀನು ಯೋಗಿ ಜನರಿಗೆ ಪ್ರೀತಿಜನಕಳಾಗಿರುವೆ.

೧೨. ನೀನೇ ಸಕಲ ವಿದ್ಯೆಗಳಿಗೂ ಆಧಾರಭೂತಳು. ಅತ್ಯಂತ ಪ್ರಸನ್ನಳಾಗಿರುವವಳು; ಮೂರು ಲೋಕಗಳಿಗೂ ಅನುಗ್ರಹವನ್ನು ಮಾಡುವವಳು. ಕ್ಷೇಮಂಕರಳು; ಜಹ್ನುಮಹರ್ಷಿಯ ಪುತ್ರಿಯು; ಶಾಂತಸ್ವರೂಪಳು; ಸ್ನಾನ ಮಾಡಿದವರಿಗೆ ಮನಶ್ಶಾಂತಿಯನ್ನುಂಟುಮಾಡುವವಳು!"

೧೩. ಗಂಗಾದೇವಿಯ ಈ ಪುಣ್ಯನಾಮಗಳನ್ನು ಪ್ರತಿಯೊಬ್ಬ ಮನುಷ್ಯನೂ ಸ್ನಾನ ಕಾಲದಲ್ಲಿ ಯಾವಾಗಲೂ ಜಪಿಸಬೇಕು. ಸ್ವರ್ಗ ಮರ್ತ್ಯ ಪಾತಾಳ ಲೋಕಗಳಲ್ಲಿ ಪ್ರವಹಿಸಿ ಜನರನ್ನು ಪಾವನಗೊಳಿಸುವ ಗಂಗೆಯು ಆ ಸ್ನಾನದ ನೀರಿನಲ್ಲಿ ಸನ್ನಿಹಿತಳಾಗಿರುತ್ತಾಳೆ.

೧೪–೧೫. ಈ ಮಂತ್ರದಿಂದ ಏಳುಸಲ ಅಭಿಮಂತ್ರಣವನ್ನು ಮಾಡಿ ತಲೆಯಲ್ಲಿ ಕೈಗಳನ್ನು ಜೋಡಿಸಿಕೊಂಡು ಮತ್ತೆ ಅಂಜಲಿಬದ್ಧನಾಗಿ ಮೂರು ಸಲವಾಗಲಿ, ಏಳು ಸಲವಾಗಲಿ ಮುಂದೆ ಹೇಳುವ ಮಂತ್ರಗಳನ್ನುಚ್ಚರಿಸಿ ಮೃತ್ತಿಕೆಯನ್ನು ಮಂತ್ರಪೂತವನ್ನಾಗಿ ಮಾಡಿ ಬಳಿಕ ಸ್ನಾನವನ್ನು ಮಾಡಬೇಕು. ಅಶ್ವಗಳಿಂದಲೂ, ರಥಗಳಿಂದಲೂ ಆಕ್ರಾಂತಳಾಗಿ ವಾಮನರೂಪಿಯಾದ

ಅಶ್ವಕ್ರಾಂತೇ ರಥಕ್ರಾಂತೇ ವಿಷ್ಣುಕ್ರಾಂತೇ ವಸುಂಧರೇ ।
ಮೃತ್ತಿಕೇ ಹರ ಮೇ ಪಾಪಂ ಯನ್ಮಯಾ ದುಷ್ಕೃತಂ ಕೃತಂ ॥ ೧೫ ॥
ಉದ್ಧೃತಾಽಸಿ ವರಾಹೇಣ ಕೃಷ್ಣೇನ ಶತಬಾಹುನಾ ।
ನಮಸ್ತೇ ಸರ್ವಭೂತಾನಾಂ ಪ್ರಭವಾಽರಣಿ ಸುವ್ರತೇ ॥ ೧೬ ॥
ಏವಂ ಸ್ನಾತ್ವಾ ತತಃ ಪಶ್ಚಾದಾಚಮ್ಯ ಚ ವಿಧಾನತಃ ।
ಉತ್ಥಾಯ ವಾಸಸೀ ಶುಕ್ಲೇ ಕೂಲೇ ವೈ ಪರಿಧಾಯ ಚ ॥ ೧೭ ॥
ಆಚಮ್ಯ ತರ್ಪಯೇದ್ದೇವಾನ್ಪಿತೄಂಶ್ಚೈವ ಋಷೀಂಸ್ತಥಾ ।
ನಿಷ್ಪೀಡ್ಯ ವಸ್ತ್ರಮಾಚಮ್ಯ ಧೌತವಸ್ತ್ರೇಣ ವೇಷ್ಟಿತಃ ॥ ೧೮ ॥
ವಿಮಲಾಂ ಮೃತ್ತಿಕಾಂ ರಮ್ಯಾಮಾದಾಯ ದ್ವಿಜಸತ್ತಮ ।
ಮಂತ್ರೇಣೈವಾಽಭಿಮಂತ್ರ್ಯಾಽಥ ಲಲಾಟಾದಿಷು ವೈಷ್ಣವಃ ।
ಧಾರಯೇದೂರ್ಧ್ವಪುಂಡ್ರಾಣಿ ಯಥಾಸಂಖ್ಯಮತಂದ್ರಿತಃ ॥ ೧೯ ॥
ಬ್ರಹ್ಮನ್ ದ್ವಾದಶಪುಂಡ್ರಾಣಿ ಬ್ರಾಹ್ಮಣಸ್ಸತತಂ ವಹೇತ್ ।
ಚತ್ವಾರಿ ಭೂಭೃತಾಂ ಪುತ್ರ ಪುಂಡ್ರಾಣಿ ದ್ವೇ ವಿಶಾಂ ಸ್ಮೃತೇ ।
ಏಕಂ ಪುಂಡ್ರಂ ಚ ನಾರೀಣಾಂ ಶೂದ್ರಾಣಾಂ ಚ ವಿಧೀಯತೇ ॥ ೨೦ ॥

---

ಮಹಾವಿಷ್ಣುವಿನ ವ್ಯಾಪನೆಗೊಳಗಾದ ಭೂದೇವಿಯೆ! ಸಕಲೈಶ್ವರ್ಯಸಮನ್ವಿತೆಯಾದ ನೀನು ನಾನೀವರೆಗೂ ಮಾಡಿರುವ ದುಷ್ಕೃತ್ಯಗಳ ಪ್ರತಿಫಲರೂಪವಾದ ಪಾಪವೆಲ್ಲವನ್ನೂ ನಾಶಗೊಳಿಸು.

೧೬. ಅನಂತ ಬಾಹುಗಳುಳ್ಳ ವರಾಹ ರೂಪಿಯಾದ ಶ್ರೀ ಕೃಷ್ಣನಿಂದ ನೀನು ಉದ್ಧೃತಳಾಗಿರುವೆ. ಸಕಲ ಭೂತಗಳ ಉತ್ಪತ್ತಿಗೂ ಅರಣಿಕಾಷ್ಠದಂತಿರುವ ಸದಾಚಾರಸಹಿತಳಾದ ನಿನಗೆ ನಮಸ್ಕಾರವನ್ನು ಮಾಡುವೆನು.

೧೭–೧೮. ಈ ಮಂತ್ರೋಚ್ಚಾರಣೆಗಳಿಂದ ಸ್ನಾನವನ್ನು ಮಾಡಿ ಬಳಿಕ ಶುದ್ಧಾಚಮನವನ್ನು ಮಾಡಿಕೊಂಡು ಮೇಲಕ್ಕೆ ಬಂದು ಜಲಾಶಯಗಳ ದಡದ ಮೇಲೆ ಬಿಳಿಯ ಬಟ್ಟೆಗಳೆರಡನ್ನು ಧರಿಸಿದವನಾಗಿ ಆಚಮನವನ್ನು ಮಾಡಿ ದೇವತೆಗಳಿಗೂ, ಪಿತೃಗಳಿಗೂ, ಋಷಿಗಳಿಗೂ ತರ್ಪಣಗಳನ್ನು ಕೊಡಬೇಕು. ಅಲ್ಲದೆ ಒದ್ದೆಯಾದ ತನ್ನ ಆ ವಸ್ತ್ರವನ್ನು ಹಿಂಡಿ ಮತ್ತೆ ಆಚಮನವನ್ನು ಮಾಡಿ ಒಗೆದು ಮಡಿ ಮಾಡಿದ ವಸ್ತ್ರಗಳನ್ನುಡಬೇಕು.

೧೯. ಆಮೇಲೆ ವಿಷ್ಣುಭಕ್ತನಾದ ಬ್ರಾಹ್ಮಣೋತ್ತಮನು ಪರಿಶುದ್ಧವೂ ಮನೋಹರವೂ ಆದ ಮೃತ್ತಿಕೆಯನ್ನು ತೆಗೆದುಕೊಂಡು ಮೇಲೆ ಹೇಳಿದ ಮಂತ್ರಗಳಿಂದ ಅಭಿಮಂತ್ರಣವನ್ನು ಮಾಡಿ ಏಕಾಗ್ರಚಿತ್ತನಾಗಿ ಲಲಾಟವೇ ಮೊದಲಾದ ಸ್ಥಳಗಳಲ್ಲಿ ತನ್ನ ವರ್ಣಕ್ಕನುಸಾರವಾದ ಸಂಖ್ಯೆಯುಳ್ಳ ಊರ್ಧ್ವಪುಂಡ್ರಗಳನ್ನು ಧಾರಣೆ ಮಾಡಬೇಕು.

೨೦. ಪ್ರಿಯಪುತ್ರನಾದ ಎಲೈ ಬ್ರಹ್ಮನೆ! ಬ್ರಾಹ್ಮಣನಾದವನು

ಲಲಾಟ ಉದರೇ ಚೈವ ವಕ್ಷೋ ವೈ ಕಂಠಕೂಬರೇ ।
ಕುಕ್ಷೌ ಬಾಹ್ವೋಃ ಕರ್ಣಯೋಶ್ಚ ಪೃಷ್ಠೇ ತ್ರಿಕೇ ಚ ವೈ ಶಿರಃ ।
ತಿಲಕಾ ದ್ವಾದಶ ಪ್ರೋಕ್ತಾ ಬ್ರಾಹ್ಮಣಸ್ಯ ಸದಾನಘ ॥ ೨೦ ॥
ಲಲಾಟೇ ಹೃದಿ ಬಾಹ್ವೋಶ್ಚ ಕ್ಷಾತ್ರಃ ಪುಂಡ್ರಾಣಿ ಧಾರಯೇತ್ ।
ಲಲಾಟೇ ಹೃದಯೇ ವೈಶ್ಯೋ ಭಾಲೇ ವೈ ಶೂದ್ರಯೋಷಿತಾಂ ॥ ೨೨ ॥
ಲಲಾಟೇ ಕೇಶವಂ ಧ್ಯಾಯೇನ್ನಾರಾಯಣಮಥೋದರೇ ।
ವಕ್ಷಃಸ್ಥಲೇ ಮಾಧವಂ ಚ ಗೋವಿಂದಂ ಕಂಠಕೂಬರೇ ॥ ೨೩ ॥
ವಿಷ್ಣುಂ ಚ ದಕ್ಷಿಣೇ ಕುಕ್ಷೌ ಬಾಹೌ ಚ ಮಧುಸೂದನಂ ।
ತ್ರಿವಿಕ್ರಮಂ ಕರ್ಣಮೂಲೇ ವಾಮನಂ ವಾಮಪಾರ್ಶ್ವಕೇ ॥ ೨೪ ॥
ಶ್ರೀಧರಂ ವಾಮಬಾಹೌ ಚ ಹೃಷೀಕೇಶಂ ಚ ಕರ್ಣಕೇ ।
ಪೃಷ್ಠೇ ತು ಪದ್ಮನಾಭಃ ಸ್ಯಾತ್ತ್ರಿಕೇ ದಾಮೋದರಂ ನ್ಯಸೇತ್ ॥ ೨೫ ॥
ತತ್ಪ್ರಕ್ಷಾಲನತೋಯೇನ ವಾಸುದೇವಂ ತು ಮೂರ್ಧನಿ ।
ಏವಂ ಕಾರ್ಯಂ ಬ್ರಾಹ್ಮಣಸ್ಯ ಕ್ಷತ್ರಿಯಸ್ಯೋಪಧಾರಯೇತ್ ॥ ೨೬ ॥

---

ಯಾವಾಗಲೂ ಹನ್ನೆರಡು ಪುಂಡ್ರಗಳನ್ನು ಧರಿಸಬೇಕು. ಕ್ಷತ್ರಿಯರಿಗೆ ನಾಲ್ಕು ಪುಂಡ್ರಗಳೂ, ವೈಶ್ಯರಿಗೆ ಎರಡೂ ಸ್ಮೃತಿಗಳಲ್ಲಿ ಹೇಳಲ್ಪಟ್ಟಿರುವುವು. ಸ್ತ್ರೀಯರಿಗೂ, ಶೂದ್ರರಿಗೂ ಒಂದು ಊರ್ಧ್ವಪುಂಡ್ರವು ಮಾತ್ರ ವಿಧಿಸಲ್ಪಟ್ಟಿರುವುದು.

೨೧. ಹಣೆ, ಹೊಟ್ಟೆ, ಎದೆ, ಕತ್ತಿನ ಗಂಟು, ಪಕ್ಕಗಳು, ಭುಜಗಳು, ಕಿವಿಗಳು, ಬೆನ್ನು, ಮೂಳೆಯ ಮೂಲ, ತಲೆ— ಈ ಹನ್ನೆರಡು ಸ್ಥಾನಗಳಲ್ಲಿ ತಿಲಕಗಳನ್ನು ಧರಿಸಬೇಕೆಂದು ಬ್ರಾಹ್ಮಣರಿಗೆ ಯಾವಾಗಲೂ ನಿಯಮಿತವಾಗಿರುವುದು.

೨೨. ಹಣೆ, ಹೃದಯ ಮತ್ತು ಬಾಹುಗಳಲ್ಲಿ ಕ್ಷತ್ರಿಯನು ಪುಂಡ್ರಗಳನ್ನು ಧರಿಸಬೇಕು. ವೈಶ್ಯನು ಹಣೆ ಮತ್ತು ಹೃದಯಗಳಲ್ಲಿಯೂ, ಸ್ತ್ರೀಯರು ಮತ್ತು ಶೂದ್ರರು ಲಲಾಟದಲ್ಲಿಯೂ ಊರ್ಧ್ವಪುಂಡ್ರಗಳನ್ನು ಧರಿಸಬೇಕು.

೨೩–೨೫. ಹಣೆಯಲ್ಲಿ ಕೇಶವನನ್ನೂ, ಹೊಟ್ಟೆಯಲ್ಲಿ ನಾರಾಯಣನನ್ನೂ, ಹೃದಯಪ್ರದೇಶದಲ್ಲಿ ಮಾಧವನನ್ನೂ ಗಂಟಲಿನಲ್ಲಿ ಗೋವಿಂದನನ್ನೂ ಧ್ಯಾನ ಮಾಡಬೇಕು. ಹೊಟ್ಟೆಯ ಬಲಗಡೆಯಲ್ಲಿ ವಿಷ್ಣುವನ್ನೂ, ಬಲಭುಜದಲ್ಲಿ ಮಧುಸೂದನನನ್ನೂ, ಕಿವಿಯ ಮೂಲದಲ್ಲಿ ತ್ರಿವಿಕ್ರಮಮೂರ್ತಿಯನ್ನೂ, ಎಡಭಾಗದಲ್ಲಿ ವಾಮನನನ್ನೂ, ಎಡಭುಜದಲ್ಲಿ ಶ್ರೀಧರನನ್ನೂ, ಎಡಗಿವಿಯಲ್ಲಿ ಹೃಷೀಕೇಶನನ್ನೂ, ಪೃಷ್ಠದಲ್ಲಿ ಪದ್ಮನಾಭನನ್ನೂ, ತ್ರಿಕಪ್ರದೇಶದಲ್ಲಿ ದಾಮೋದರನನ್ನೂ ಆವಾಹನೆ ಮಾಡಬೇಕು.

೨೬. ಬಳಿಕ ಪ್ರಕ್ಷಾಳನಮಾಡಿದ ನೀರಿನಿಂದ ತಲೆಯಲ್ಲಿ ವಾಸುದೇವನನ್ನು

ಲಲಾಟೇ ಕೇಶವಂ ಧ್ಯಾಯೇದ್ಧೃದಯೇ ಮಾಧವಂ ತಥಾ ।
ಬಾಹ್ವೋಶ್ಚೋಭಯೋರ್ವತ್ಸ ಸ್ಮರೇದ್ವೈ ಮಧುಸೂದನಂ ॥ ೨೭ ॥
ಕ್ಷತ್ರಿಯಸ್ಯ ವಿಧಿಃ ಪ್ರೋಕ್ತೋ ವೈಶ್ಯಕೃತ್ಯಂ ನಿಶಾಮಯ ।
ಲಲಾಟೇ ಕೇಶವಂ ಧ್ಯಾಯೇದ್ಧೃದಯೇ ಮಾಧವಂ ತಥಾ ॥ ೨೮ ॥
ಯೋಷಿಚ್ಛೂದ್ರೌ ಸ್ಮರೇತಾಂ ಚ ಕೇಶವಂ ಭಾಲದೇಶಕೇ ।
ಅನೇನ ವಿಧಿನಾ ಕುರ್ಯಾತ್ ಪುಂಡ್ರಾಣಿ ಮಮ ತುಷ್ಟಯೇ ॥ ೨೯ ॥
ಶ್ಯಾಮಂ ಶಾಂತಿಕರಂ ಪ್ರೋಕ್ತಂ ರಕ್ತಂ ವಶ್ಯಕರಂ ತಥಾ ।
ಶ್ರೀಕರಂ ಪೀತಮಿತ್ಯಾಹುಃ ಶ್ವೇತಂ ಮೋಕ್ಷಕರಂ ಶುಭಂ ॥ ೩೦ ॥
ಏಕಾಂತಿನೋ ಮಹಾಭಾಗಾಃ ಸರ್ವಲೋಕಹಿತೇ ರತಾಃ ।
ಸಾಂಽತರಾಲಂ ಪ್ರಕುರ್ವಂತಿ ಪುಂಡ್ರಂ ಹರಿಪದಾಕೃತಿಂ ॥ ೩೧ ॥

ನ್ಯಾಸಮಾಡಬೇಕು. ಇಂತು ಬ್ರಾಹ್ಮಣನು ಊರ್ಧ್ವಪುಂಡ್ರಗಳನ್ನು ಧರಿಸಬೇಕು. ಇನ್ನು ಕ್ಷತ್ರಿಯರಿಗೆ ಹೇಳಿದ ನಿಯಮಗಳನ್ನು ಕೇಳುವವನಾಗು.

೨೭. ಹಣೆಯಲ್ಲಿ ಕೇಶವನನ್ನೂ, ಹೃದಯದಲ್ಲಿ ಮಾಧವನನ್ನೂ ಧ್ಯಾನ ಮಾಡಬೇಕು. ವತ್ಸ! ಎರಡು ಬಾಹುಗಳಲ್ಲಿಯೂ ಮಧುಸೂದನನಿರುವಂತೆ ಮನನಮಾಡಬೇಕು.

೨೮. ಕ್ಷತ್ರಿಯವಿಧಿಯನ್ನು ಹೇಳಿದೆನು. ಇನ್ನು ವೈಶ್ಯನು ಮಾಡಬೇಕಾದುದನ್ನು ಕೇಳು. ಲಲಾಟದಲ್ಲಿ ಕೇಶವನನ್ನೂ, ಹೃದಯದಲ್ಲಿ ಮಾಧವನನ್ನೂ ಧ್ಯಾನಿಸಬೇಕು.

೨೯. ಸ್ತ್ರೀಯರೂ, ಶೂದ್ರರೂ ಲಲಾಟದಲ್ಲಿ ಕೇಶವನನ್ನು ಸ್ಮರಿಸುತ್ತ ಊರ್ಧ್ವಪುಂಡ್ರಗಳನ್ನು ಧರಿಸಬೇಕು. ಈ ವಿಧಾನದಿಂದ ನನಗೆ ಸಂತೋಷವನ್ನುಂಟುಮಾಡುವುದಕ್ಕಾಗಿ ಸಕಲರೂ ಪುಂಡ್ರಚಿಹ್ನೆಗಳನ್ನು ಶರೀರದಲ್ಲಿ ಧರಿಸಬೇಕು.

೩೦. ಪುಂಡ್ರಗಳಿಗೆ ಉಪಯೋಗಿಸುವ ಪದಾರ್ಥವು ಕಪ್ಪಾಗಿದ್ದರೆ ಶಾಂತಿಯನ್ನುಂಟು ಮಾಡುವುದೆಂದು ಹೇಳಲ್ಪಟ್ಟಿರುವುದು. ಕೆಂಪಾದ ಪುಂಡ್ರವು ಜನರನ್ನು ವಶಗೊಳಿಸುವುದು. ಹಳದಿಯ ತಿಲಕವು ಸಂಪತ್ಪ್ರದಾಯಕವಾಗಿರುವುದು. ಬಿಳಿಯ ಊರ್ಧ್ವಪುಂಡ್ರವು ಮೋಕ್ಷಪ್ರದವೂ, ಶೋಭನಯುಕ್ತವೂ ಆಗಿರುವುದು,

೩೧. ನನ್ನ ಏಕಾಂತಭಕ್ತರೂ, ಮಹಾಮಹಿಮೆಯುಳ್ಳವರೂ, ಸಕಲ ಲೋಕಗಳಹಿತವನ್ನೇ ಆಚರಿಸುವವರೂ ಆದ ಪುರುಷರು ವಿಷ್ಣುಪಾದಗಳ ಆಕೃತಿಯಿಂದ ಮಧ್ಯದಲ್ಲಿ ಛಿದ್ರದಿಂದ ಕೂಡಿದ ಊರ್ಧ್ವಪುಂಡ್ರಗಳನ್ನು ಧರಿಸುವರು.

ಮಧ್ಯೇ ಛಿದ್ರೇಣ ಸಂಯುಕ್ತಂ ಏತದ್ಧಿ ಹರಿಮಂದಿರಂ ।
ಊರ್ಧ್ವಂ ಸೌಮ್ಯಮೃಜುಂ ಸೂಕ್ಷ್ಮಂ ಸುಪಾರ್ಶ್ವಂ ಸುಮನೋಹರಂ ॥
ನಿರಂತರಾಲಂ ಯಃ ಕುರ್ಯಾದೂರ್ಧ್ವಪುಂಡ್ರಂ ದ್ವಿಜಾಧಮಃ ।
ಸ ಹಿ ತತ್ರ ಸ್ಥಿತಂ ಲಕ್ಷ್ಮ್ಯಾ ಸಹ ಮಾಂ ಚ ವ್ಯಪೋಹತಿ ॥ ೩೩ ॥
ಅಚ್ಛಿದ್ರಮೂರ್ಧ್ವಪುಂಡ್ರಂ ತು ಯೇ ಕುರ್ವಂತಿ ದ್ವಿಜಾಧಮಾಃ ।
ತೈರ್ಲಲಾಟೇ ಶುನಃ ಪಾದಂ ನಿಕ್ಷಿಪ್ತಂ ವೈ ನ ಸಂಶಯಃ ॥ ೩೪ ॥
ತಸ್ಮಾಚ್ಛಿದ್ರಾನ್ವಿತಂ ಪುಂಡ್ರಂ ಮಹಚ್ಛಿದ್ರಂ ಶುಭಾಶುಭಂ ।
ಧಾರಯೇದ್ಬ್ರಾಹ್ಮಣೋ ನಿತ್ಯಂ ಹರಿಸಾಲೋಕ್ಯಸಿದ್ಧಯೇ ॥ ೩೫ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ದ್ವಿತೀಯೇ ವೈಷ್ಣವಖಂಡೇ ಮಾರ್ಗಶೀರ್ಷಮಾಹಾತ್ಮ್ಯೇ ಬ್ರಹ್ಮವಿಷ್ಣುಸಂವಾದೇ "ತ್ರಿಪುಂಡ್ರಧಾರಣ ವಿಧಿಕಥನಂ" ನಾಮ ದ್ವಿತೀಯೋಽಧ್ಯಾಯಃ

---

೩೨. ಮಧ್ಯದಲ್ಲಿ ಛಿದ್ರದಿಂದ ಯುಕ್ತವಾಗಿರುವುದೂ, ಊರ್ಧ್ವಮುಖವಾಗಿರುವುದೂ, ಸೌಮ್ಯವೂ, ಋಜುವೂ, ಸೂಕ್ಷ್ಮವೂ, ಸುಪಾರ್ಶ್ವವೂ, ಮನೋಹರವಾದುದೂ ಆದ ಪುಂಡ್ರವೇ ಹರಿಯ ನಿವಾಸವಾಗಿರುವುದು.

೩೩. ಯಾವ ಬ್ರಾಹ್ಮಣಾಧಮನು ಅಂತರಾಳವಿಲ್ಲದಂತೆ ಊರ್ಧ್ವಪುಂಡ್ರವನ್ನು ಧರಿಸುವನೊ, ಅವನು ಆ ಅಂತರದಲ್ಲಿ ಲಕ್ಷ್ಮೀಸಮೇತನಾಗಿ ವಾಸಿಸುತ್ತಿರುವ ನನ್ನನ್ನು ನಿರಾಕರಿಸಿದವನೆಂದು ತಿಳಿಯಬೇಕು.

೩೪. ಛಿದ್ರವಿಲ್ಲದ ಊರ್ಧ್ವಪುಂಡ್ರವನ್ನು ಯಾವ ದ್ವಿಜಾಧಮರು ಧರಿಸುವರೊ, ಅವರು ನಿಜವಾಗಿಯೂ ತಮ್ಮ ಹಣೆಗಳಲ್ಲಿ ನಾಯಿಗಳ ಕಾಲ ಗುರುತುಗಳನ್ನೇ ಧರಿಸಿದರೆಂಬುದರಲ್ಲಿ ಸಂದೇಹವಿಲ್ಲ.

೩೫. ಆದುದರಿಂದ ಹರಿಯ ಸಾಲೋಕ್ಯಪದವಿಯನ್ನಪೇಕ್ಷಿಸುವ ಬ್ರಾಹ್ಮಣನು ನಿತ್ಯವೂ ಛಿದ್ರಯುಕ್ತವೂ, ಮಹಚ್ಛಿದ್ರವೂ, ಸೌಭಾಗ್ಯಯುಕ್ತವೂ ಆದ ಊರ್ಧ್ವಪುಂಡ್ರವನ್ನೇ ಧರಿಸಬೇಕು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂಬ ಪ್ರಸಿದ್ಧವಾದ ಶ್ರೀಸ್ಕಾಂದಮಹಾಪುರಾಣದ ಎರಡನೆಯ ವೈಷ್ಣವಖಂಡದ ಮಾರ್ಗಶೀರ್ಷಮಾಹಾತ್ಮ್ಯದ ಬ್ರಹ್ಮವಿಷ್ಣುಸಂವಾದದಲ್ಲಿ "ತ್ರಿಪುಂಡ್ರಧಾರಣವಿಧಿಕಥನ"ವೆಂಬ ಎರಡನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

# ಅಥ ತೃತೀಯೋಽಧ್ಯಾಯಃ

## ಗೋಪೀಚಂದನಮಾಹಾತ್ಮ್ಯಕಥನಂ

ಬ್ರಹ್ಮೋವಾಚ :—

ಪುಂಡ್ರಂ ಕತಿವಿಧಂ ಕಾರ್ಯಂ ಪ್ರಬ್ರೂಹಿ ಮಮ ಕೇಶವ ।
ಪುಂಡ್ರಾಣಾಂ ಶ್ರವಣೇಽತೀವ ಕೌತುಕಂ ಮಮ ಜಾಯತೇ ॥ ೧ ॥

ಶ್ರೀ ಭಗವಾನುವಾಚ :—

ಶೃಣು ಪುತ್ರ ಪ್ರವಕ್ಷ್ಯಾಮಿ ಪುಂಡ್ರಂ ಚ ತ್ರಿವಿಧಂ ಸ್ಮೃತಂ ।
ತುಲಸೀ ಮೃತ್ಸ್ನಯಾ ಸಾರ್ಧಂ ಶ್ರೀಗೋಪೀಚಂದನೇನ ಚ ॥ ೨ ॥
ಹರಿಚಂದನತಃ ಕಾರ್ಯಂ ಪುಂಡ್ರಂ ತತ್ರ ವಿಚಕ್ಷಣೈಃ ।
ಶ್ರೀಕೃಷ್ಣತುಲಸೀಮೂಲಮೃದಮಾದಾಯ ಭಕ್ತಿಮಾನ್ ।
ಧಾರಯೇದೂರ್ಧ್ವಪುಂಡ್ರಾಣಿ ಹರಿಸ್ತತ್ರ ಪ್ರಸೀದತಿ ॥ ೩ ॥
ಗೋಪೀಚಂದನಮಾಹಾತ್ಮ್ಯಂ ನಿಬೋಧ ಗದತೋ ಮಮ ॥ ೪ ॥

---

## ಕನ್ನಡದ ಅನುವಾದ

### ಗೋಪೀಚಂದನಮಾಹಾತ್ಮ್ಯಕಥನ

೧. ಬ್ರಹ್ಮನು ಕೇಳುತ್ತಾನೆ:—“ಎಲೈ ಕೇಶವನೆ! ಊರ್ಧ್ವಪುಂಡ್ರವು ಎಷ್ಟು ವಿಧಗಳಲ್ಲಿ ಮಾಡಬಹುದೆಂಬುದನ್ನು ನನಗೆ ತಿಳಿಸು. ಈ ಪುಂಡ್ರಗಳ ವಿಷಯವನ್ನು ಕೇಳಲು ನನಗೆ ಅತ್ಯಂತ ಕುತೂಹಲವುಂಟಾಗುತ್ತಿರುವುದು.”

೨. ಭಗವಂತನು ಹೇಳುತ್ತಾನೆ:—“ಎಲೈ ಪ್ರಿಯಪುತ್ರನೆ! ನೀನು ಕೇಳಿದುದನ್ನು ನಿರೂಪಿಸುವೆನು. ಊರ್ಧ್ವಪುಂಡ್ರವು ಮೂರು ವಿಧಗಳಾಗಿರುವುದು. ಮೊದಲನೆಯದು ತುಲಸೀಮೃತ್ತಿಕೆಯದು. ಎರಡನೆಯದು ಗೋಪೀಚಂದನ ಯುಕ್ತವಾದುದು.

೩. ಮೂರನೆಯದೇ ಪ್ರಾಜ್ಞರಾದ ವಿಷ್ಣುಭಕ್ತರು ಹರಿಚಂದನದಿಂದ ತಿದ್ದಿದ ಊರ್ಧ್ವಪುಂಡ್ರವು. ಭಕ್ತಿಯುಕ್ತನಾದ ಮನುಷ್ಯನು ಶ್ರೀಕೃಷ್ಣ ತುಲಸಿಯ ಗಿಡದ ಮೂಲದಪ್ರದೇಶದಿಂದ ಮೃತ್ತಿಕೆಯನ್ನು ತೆಗೆದುಕೊಂಡು ಊರ್ಧ್ವಪುಂಡ್ರಗಳನ್ನು ಶರೀರದಲ್ಲಿ ಧರಿಸಲು ಅದರಿಂದ ಶ್ರೀಹರಿಯು ಸುಪ್ರಸನ್ನನಾಗುವನು.

೪. ಇನ್ನು ಗೋಪೀಚಂದನದ ಮಾಹಾತ್ಮ್ಯವನ್ನು ವಿಸ್ತರಿಸುವ ನನ್ನ ಮಾತುಗಳನ್ನು ಶ್ರದ್ಧೆಯಿಂದ ಕೇಳುವವನಾಗು.

ಯೋ ಮೃತ್ತಿಕಾಂ ದ್ವಾರವತೀಸಮುದ್ಭವಾಂ
ಕರೇ ಸಮಾದಾಯ ಲಲಾಟಪಟ್ಟಕೇ ।
ಕರೋತಿ ನಿತ್ಯಂ ನರ ಊರ್ಧ್ವಪುಂಡ್ರಂ
ಕ್ರಿಯಾಫಲಂ ಕೋಟಿಗುಣಂ ತದಾ ಭವೇತ್ ॥ ೫ ॥
ಕ್ರಿಯಾವಿಹೀನಂ ಯದಿ ಮಂತ್ರಹೀನಂ
ಶ್ರದ್ಧಾವಿಹೀನಂ ಯದಿ ಕಾಲವರ್ಜಿತಂ ।
ಕೃತ್ವಾ ಲಲಾಟೇ ಯದಿ ಗೋಪಿಚಂದನಂ
ಪ್ರಾಪ್ನೋತಿ ತತ್ಕರ್ಮಫಲಂ ಸದಾಽವ್ಯಯಂ ॥ ೬ ॥
ಗೋಪೀಚಂದನ ಸಂಭವಂ ಸುರುಚಿರಂ ಪುಂಡ್ರಂ ಲಲಾಟೇ ದ್ವಿಜೋ
ನಿತ್ಯಂ ಧಾರಯತೇ ಯದಿ ಪ್ರತಿದಿನಂ ರಾತ್ರೌ ದಿವಾ ಸರ್ವದಾ ॥
ಯತ್ಪುಣ್ಯಂ ಕುರುಜಾಂಗಲೇ ರವಿಗ್ರಹೇ ಮಾಘೇ ಪ್ರಯಾಗೇ ತಥಾ ।
ತತ್ಪ್ರಾಪ್ನೋತಿ ತತೋಽಧಿಕಂ ಮಮ ಗೃಹೇ ಸಂತಿಷ್ಠತೇ ದೇವವತ್॥ ೭ ॥
ಯಸ್ಮಿನ್ ಗೃಹೇ ತಿಷ್ಠತಿ ಗೋಪಿಚಂದನಂ
ಭಕ್ತ್ಯಾ ಲಲಾಟೇ ಮನಜೋ ಬಿಭರ್ತಿ ಚೇತ್ ।
ತಸ್ಮಿನ್ ಗೃಹೇಽಹಂ ನಿವಸಾಮಿ ಸರ್ವದಾ
ಶ್ರಿಯಾನ್ವಿತಃ ಕಂಸನಿಹಾ ಚತುರ್ಮುಖ ॥ ೮ ॥

---

೫. ಯಾವ ಮನುಷ್ಯನು ದ್ವಾರಕಾಪ್ರದೇಶದ ಮೃತ್ತಿಕೆಯನ್ನು ಕೈಯಲ್ಲಿ ತೆಗೆದುಕೊಂಡು ವಿಶಾಲವಾದ ಹಣೆಯಲ್ಲಿ ಅದರಿಂದ ಊರ್ಧ್ವಪುಂಡ್ರವನ್ನು ನಿತ್ಯವೂ ತಿದ್ದಿಕೊಳ್ಳುವನೊ, ಅವನು ಮಾಡಿದ ಸತ್ಕಾರ್ಯಗಳೆಲ್ಲವೂ ಕೋಟಿ ಗುಣಿತವಾದ ಫಲವನ್ನು ಕೊಡುವುವು.

೬. ಹಣೆಯಲ್ಲಿ ಗೋಪೀಚಂದನದಿಂದ ಮಾಡಿದ ಊರ್ಧ್ವಪುಂಡ್ರಧಾರಿಯು ಕ್ರಿಯಾರಹಿತವಾದುದಾಗಲಿ, ಮಂತ್ರಹೀನವಾದುದಾಗಲಿ, ಶ್ರದ್ಧಾಭಕ್ತಿಗಳಿಲ್ಲ ದುದಾಗಲಿ, ಉಚಿತಕಾಲವರ್ಜಿತವಾದುದಾಗಲಿ ಆದ ಯಾವ ಕರ್ಮವನ್ನು ಮಾಡುತ್ತಾನೆಯೊ, ಆ ಕರ್ಮಫಲವನ್ನು ಆತನು ಶಾಶ್ವತವಾಗಿ ಪಡೆಯುವನು.

೭. ಬ್ರಾಹ್ಮಣನಾದವನು ಲಲಾಟದಲ್ಲಿ ನಿತ್ಯವೂ ಮನೋಹರವಾದ ಗೋಪೀ ಚಂದನದಿಂದ ಮಾಡಿದ ಊರ್ಧ್ವಪುಂಡ್ರವನ್ನು ರಾತ್ರಿಯಲ್ಲಾಗಲಿ, ಹಗಲಿನಲ್ಲಾ ಗಲಿ, ಸರ್ವಕಾಲಗಳಲ್ಲಿಯೂ ಧರಿಸುತ್ತಿರಲು, ಸೂರ್ಯಗ್ರಹಣದ ಕಾಲದಲ್ಲಿ ಕುರುಕ್ಷೇತ್ರದಲ್ಲಿಯೂ, ಮಾಘಮಾಸದಲ್ಲಿ ಪ್ರಯಾಗದಲ್ಲಿಯೂ ಯಾವ ಪುಣ್ಯವು ಲಭಿಸುವುದೊ ಆ ಫಲವನ್ನೇ ಹೊಂದುವನಲ್ಲದೆ ಮತ್ತೂ ಹೆಚ್ಚಾಗಿ ನನ್ನ ನಿವಾಸ ವಾದ ವೈಕುಂಠದಲ್ಲಿ ದೇವತೆಯಂತೆ ಸ್ಥಾನವನ್ನು ಹೊಂದುತ್ತಾನೆ.

೮. ಯಾವನ ಮನೆಯಲ್ಲಿ ಗೋಪೀಚಂದನವಿರುತ್ತದೆಯೊ, ಯಾವ

ಯೋ ಧಾರಯೇದ್ದ್ವಾರವತೀಸಮುದ್ಭವಾಂ
ಮೃತ್ಸ್ನಾಂ ಪವಿತ್ರಾಂ ಕಲಿಕಲ್ಮಷಾಪಹಾಂ ।
ನಿತ್ಯಂ ಲಲಾಟೇ ಮಮ ಮಂತ್ರಸಂಯುತಾಂ
ಯಮಂ ನ ಪಶ್ಯೇದಪಿ ಪಾಪಸಂಯುತಃ ॥ ೯ ॥
ಯಸ್ಯಾಂತಕಾಲೇ ಸುತ ಗೋಪಿಚಂದನಂ
ಬಾಹ್ವೋರ್ಲಲಾಟೇ ಹೃದಿ ಮಸ್ತಕೇ ಚ ।
ಪ್ರಯಾತಿ ಲೋಕೇ ಕಮಲಾಪತೇರ್ಮಮ
ಗೋಬಾಲಘಾತೀ ಯದಿ ಬ್ರಹ್ಮಹಾ ಸ್ಯಾತ್ ॥ ೧೦ ॥
ಗ್ರಹಾ ನ ಪೀಡ್ಯಂತಿ ನ ರಕ್ಷಸಾಂ ಗಣಾ
ಯಕ್ಷಾಃ ಪಿಶಾಚೋರಗಭೂತನಾಯಕಾಃ ।
ಲಲಾಟಪಟ್ಟೇ ಸುತ ಗೋಪಿಚಂದನಂ
ಸಂತಿಷ್ಠತೇ ಯಸ್ಯ ಮಮ ಪ್ರಭಾವಾತ್ ॥ ೧೧ ॥
ಊರ್ಧ್ವಪುಂಡ್ರಮೃಜುಂ ಸೌಮ್ಯಂ ಲಲಾಟೇ ಯಸ್ಯ ದೃಶ್ಯತೇ ।
ಸ ಚಂಡಾಲೋಽಪಿ ಶುದ್ಧಾತ್ಮಾ ಪೂಜ್ಯ ಏವ ನ ಸಂಶಯಃ ॥ ೧೨ ॥

---

ಮನುಷ್ಯನು ಭಕ್ತಿಯುಕ್ತನಾಗಿ ಅದರಿಂದ ಊರ್ಧ್ವಪುಂಡ್ರವನ್ನು ಹಣೆಯಲ್ಲಿ ಧರಿಸುವನೊ, ಆತನ ಗೃಹದಲ್ಲಿ ಕಂಸನಿಷೂದನನಾದ ನಾನು ಲಕ್ಷ್ಮೀಸಮೇತ ನಾಗಿ ಸತತವೂ ವಾಸಮಾಡುವೆನು.

೯. ಪವಿತ್ರವೂ, ಕಲಿಕಲ್ಮಷನಾಶಕವೂ, ದ್ವಾರವತೀಪ್ರದೇಶಸ್ಥವೂ ಆದ ಮೃತ್ತಿಕೆಯ ಪುಂಡ್ರವನ್ನು ನನ್ನ ಮಂತ್ರದ ಪುರಶ್ಚರಣೆಯೊಡನೆ ಯಾವ ಮಾನವನು ನಿತ್ಯವೂ ಲಲಾಟದಲ್ಲಿ ಧರಿಸುವನೊ, ಅವನು ಸಕಲ ಪಾಪಗಳನ್ನು ಮಾಡಿದವನಾದರೂ ಯಮನ ದರ್ಶನವನ್ನು ಮಾಡುವುದಿಲ್ಲವು.

೧೦–೧೧. ಪುತ್ರನಾದ ಎಲೈ ಚತುರ್ಮುಖನೆ! ದೇಹಾವಸಾನಕಾಲದಲ್ಲಿ ಯಾವನ ಬಾಹುಗಳಲ್ಲಿಯೂ, ಲಲಾಟದಲ್ಲಿಯೂ, ಹೃದಯದಲ್ಲಿಯೂ, ಮಸ್ತಕ ದಲ್ಲಿಯೂ ಗೋಪೀಚಂದನದ ಊರ್ಧ್ವಪುಂಡ್ರಗಳು ಶೋಭಿಸುತ್ತಿರುವುವೊ, ಅವನು ಗೋಹತ್ಯೆ, ಬಾಲಹತ್ಯೆ, ಬ್ರಹ್ಮಹತ್ಯೆ ಮುಂತಾದ ಮಹಾಪಾತಕಗಳನ್ನು ಮಾಡಿದವನಾದರೂ ಲಕ್ಷ್ಮೀರಮಣನಾದ ನನ್ನ ವೈಕುಂಠಲೋಕವನ್ನೇ ಸೇರು ವನು. ಯಾವನ ಲಲಾಟಫಲಕದಲ್ಲಿ ಗೋಪೀಚಂದನದ ಪುಂಡ್ರವು ರಾಜಿಸು ತ್ತಿರುವುದೊ, ಆತನನ್ನು ಕ್ರೂರಗ್ರಹಗಳು ಪೀಡಿಸಲಾರವು. ರಾಕ್ಷಸಗಣಗಳೂ, ಯಕ್ಷರೂ, ಪಿಶಾಚಗಳೂ, ನಾಗರೂ, ಭೂತಭೇತಾಳಾದಿಗಳೂ ನನ್ನ ಮಹಿಮೆಯ ದೆಸೆಯಿಂದ ಆತನನ್ನು ಕ್ಲೇಶಗೊಳಿಸಲಾರವು.

೧೨. ಋಜುವೂ, ಸೌಮ್ಯವೂ ಆದ ಊರ್ಧ್ವಪುಂಡ್ರವು ಯಾವನ ಹಣೆಯಲ್ಲಿ

ಅಸ್ನಾತೋ ಯಃ ಕ್ರಿಯಾಂ ಕುರ್ಯಾದಶುಚಿಃ ಪಾಪಸಂಯುತಃ ।
ಗೋಪೀಚಂದನಸಂಪರ್ಕಾತ್ ಪೂತೋ ಭವತಿ ತತ್ಕ್ಷಣಾತ್ ॥ ೧೩ ॥
ಅಶುಚಿರ್ವಾಪ್ಯನಾಚಾರೋ ಮಹಾಪಾಪಂ ಸಮಾಚರೇತ್ ।
ಶುಚಿರೇವ ಭವೇನ್ನಿತ್ಯಮೂರ್ಧ್ವಪುಂಡ್ರಾಂಕಿತೋ ನರಃ ॥ ೧೪ ॥
ಮತ್ಪ್ರಿಯಾರ್ಥಂ ಶುಭಾರ್ಥಂ ವಾ ರಕ್ಷಾರ್ಥಂ ಚತುರಾನನ ।
ಮತ್ಪೂಜಾ ಹೋಮಕಾಲೇ ಚೈವ ಸಾಯಂ ಪ್ರಾತಸ್ಸಮಾಹಿತಃ ।
ಮದ್ಭಕ್ತೋ ಧಾರಯೇನ್ನಿತ್ಯಮೂರ್ಧ್ವಪುಂಡ್ರಂ ಭವಾಪಹಂ ॥ ೧೫ ॥
ಊರ್ಧ್ವಪುಂಡ್ರಧರೋ ಮರ್ತ್ಯೋ ಮ್ರಿಯತೇ ಯದಿ ಕುತ್ರಚಿತ್ ।
ಶ್ವಪಾಕೋಽಪಿ ವಿಮಾನಸ್ಥೋ ಮಮ ಲೋಕೇ ಮಹೀಯತೇ ॥ ೧೬ ॥
ಊರ್ಧ್ವಪುಂಡ್ರಧರೋ ಮರ್ತ್ಯೋ ಯದಾ ಯಸ್ಯಾನ್ನಮಶ್ನುತೇ ।
ತದಾ ವಿಂಶತ್ಕುಲಂ ತಸ್ಯ ನರಕಾದುದ್ಧರಾಮ್ಯಹಂ ॥ ೧೭ ॥

---

ಕಾಣುತ್ತಿರುವುದೊ, ಅವನು ಚಂಡಾಲಜಾತಿಯವನಾದರೂ ಪರಿಶುದ್ಧದೇಹವುಳ್ಳವನೂ, ಪೂಜಾರ್ಹನೂ ಆಗುತ್ತಾನೆ. ಈ ವಿಷಯದಲ್ಲಿ ಸಂದೇಹವಿಲ್ಲವು.

೧೩. ಸ್ನಾನವನ್ನು ಮಾಡದೆ ಅಶುಚಿಯಾಗಿ ಪಾಪಗಳಿಂದ ಕೂಡಿದವನಾದರೂ ಸತ್ಕಾರ್ಯಗಳನ್ನು ಮಾಡುವ ಮನುಷ್ಯನು ಗೋಪೀಚಂದನದ ಸಂಪರ್ಕದಿಂದ ತತ್‌ಕ್ಷಣವೇ ಪವಿತ್ರದೇಹಿಯಾಗುವನು.

೧೪. ಶೌಚಹೀನನಾಗಲಿ, ಆಚಾರಹೀನನಾಗಲಿ, ಮಹಾಪಾಪಗಳನ್ನು ಮಾಡುವವನಾಗಲಿ, ನಿತ್ಯವೂ ಊರ್ಧ್ವಪುಂಡ್ರಗಳಿಂದ ಚಿಹ್ನಿತವಾದ ದೇಹವುಳ್ಳ ಮಾನವನು ಶುಚಿಯೆಂದೇ ಪರಿಗ್ರಹಿಸಲ್ಪಡಬೇಕು.

೧೫. ಎಲೈ ಚತುರ್ಮುಖನೆ! ನನ್ನ ಅನುಗ್ರಹವನ್ನು ಸಂಪಾದಿಸುವುದಕ್ಕೂ, ಶುಭಸೂಚಕವಾಗಿಯೂ, ತಾಪತ್ರಯಗಳ ದೆಸೆಯಿಂದ ಸಂರಕ್ಷಣೆಗಾಗಿಯೂ ಪ್ರತಿದಿವಸದಲ್ಲಿಯೂ ನನ್ನ ಭಕ್ತನಾದವನು ಏಕಾಗ್ರಮನಸ್ಕನಾಗಿ ವಿಶೇಷ ಹೋಮಗಳನ್ನು ಮಾಡುವಾಗಲೂ, ಸಾಯಂಕಾಲ ಪ್ರಾತಃಕಾಲಗಳಲ್ಲಿಯೂ, ಸಂಸಾರಬಂಧದಿಂದ ಬಿಡುಗಡೆಯನ್ನುಂಟುಮಾಡುವ ಊರ್ಧ್ವಪುಂಡ್ರಗಳನ್ನು ಧರಿಸಬೇಕು.

೧೬. ಚಂಡಾಲನಾದರೂ ಊರ್ಧ್ವಪುಂಡ್ರಗಳನ್ನು ಧರಿಸಿರುವಾಗ ಯಾವ ಸ್ಥಳದಲ್ಲಿ ಪ್ರಾಣಗಳನ್ನು ಬಿಟ್ಟರೂ ದಿವ್ಯವಿಮಾನವನ್ನೇರಿದವನಾಗಿ ನನ್ನ ಲೋಕವನ್ನು ಸೇರಿ ಅಲ್ಲಿ ಮಹಾಪೂಜೆಯನ್ನು ಸ್ವೀಕರಿಸುವನು.

೧೭. ಊರ್ಧ್ವಪುಂಡ್ರಗಳನ್ನು ಧರಿಸಿದ ಮನುಷ್ಯನು ಯಾವಾಗ ಯಾವನ ಮನೆಯಲ್ಲಿ ಅನ್ನವನ್ನು ಸೇವಿಸುವನೊ, ಆ ಅನ್ನದಾತೃವಿನ ಇಪ್ಪತ್ತು ಕುಲಗಳನ್ನು ನರಕದಿಂದ ನಾನು ಉದ್ಧಾರಮಾಡುವೆನು.

ವೀಕ್ಷ್ಯಾಽಽದರ್ಶೇ ಜಲೇ ವಾಽಪಿ ಯೋ ವಿದಧ್ಯಾತ್ಪ್ರಯತ್ನತಃ ।
ಊರ್ಧ್ವಂ ಪುಂಡ್ರಂ ಮಹಾಭಾಗ ಸ ಯಾತಿ ಪರಮಾಂ ಗತಿಂ ॥ ೧೮ ॥
ಅನಾಮಿಕಾ ಶಾಂತಿದೋಕ್ತಾ ಮಧ್ಯಮಾಯುಷ್ಕರೀ ಭವೇತ್ ।
ಅಂಗುಷ್ಠಃ ಪುಷ್ಟಿದಃ ಪ್ರೋಕ್ತಸ್ತರ್ಜನೀ ಮೋಕ್ಷದಾಯಿನೀ ॥ ೧೯ ॥
ಗೋಪೀಚಂದನಖಂಡಂತು ಯೋ ದದಾತಿ ಚ ವೈಷ್ಣವೇ ।
ಕುಲಮಷ್ಟೋತ್ತರಂ ತೇನ ತಾರಿತಂ ವೈಭವಾಚ್ಯುತಂ ॥ ೨೦ ॥
ಯಜ್ಞೋ ದಾನಂ ತಪೋ ಹೋಮಃ ಸ್ವಾಧ್ಯಾಯಃ ಪಿತೃತರ್ಪಣಂ ।
ವ್ಯರ್ಥಂ ಭವತಿ ತತ್ಸರ್ವಂ ಊರ್ಧ್ವಪುಂಡ್ರವಿನಾಕೃತಂ ॥ ೨೧ ॥
ಯಚ್ಛರೀರಂ ಮನುಷ್ಯಾಣಾಂ ಊರ್ಧ್ವಪುಂಡ್ರವಿನಾಕೃತಂ ।
ತನ್ಮುಖಂ ನೈವ ಪಶ್ಯಾಮಿ ಸ್ಮಶಾನಸದೃಶಂ ಹಿ ತತ್ ॥ ೨೨ ॥
ಊರ್ಧ್ವಂ ಪುಂಡ್ರಂ ಪ್ರಕುರ್ವೀತ ಮತ್ಸ್ಯಕೂರ್ಮಾದಿಧಾರಣಂ ।
ಕುರ್ಯಾದ್ವಿಷ್ಣುಪ್ರಸಾದಾರ್ಥಂ ಮಹಾವಿಷ್ಣೋರತಿಪ್ರಿಯಂ ॥ ೨೩ ॥

---

೧೮. ಕನ್ನಡಿಯಲ್ಲಾಗಲಿ, ನೀರಿನಲ್ಲಾಗಲಿ ತನ್ನ ಪ್ರತಿಬಿಂಬವನ್ನು ನೋಡಿಕೊಂಡು ಯಾವನು ಪ್ರಯತ್ನಪೂರ್ವಕವಾಗಿ ಊರ್ಧ್ವಪುಂಡ್ರಗಳನ್ನು ಧರಿಸಿಕೊಳ್ಳುವನೊ, ಆ ಮಹಾತ್ಮನು ಅತ್ಯುತ್ತಮಗಳಾದ ಲೋಕಗಳನ್ನು ಪಡೆಯುವನು.

೧೯. ಊರ್ಧ್ವಪುಂಡ್ರಗಳನ್ನು ರಚಿಸುವುದರಲ್ಲಿ ಅನಾಮಿಕೆಯು ಶಾಂತಿದಾಯಕವೆಂದೂ, ಮಧ್ಯಮಾಂಗುಲಿಯು ಆಯುಷ್ಕಾರಕವೆಂದೂ, ಅಂಗುಷ್ಠವು ದೇಹಪುಷ್ಟಿಯನ್ನುಂಟುಮಾಡುವುದೆಂದೂ, ತರ್ಜನಿಯು ಮೋಕ್ಷಪ್ರದವೆಂದೂ ಹೇಳಲ್ಪಟ್ಟಿರುವುದು.

೨೦. ಯಾವನು ಗೋಪೀಚಂದನದ ಖಂಡವನ್ನು ವೈಷ್ಣವನಿಗೆ ದಾನ ಮಾಡುವನೊ, ಆತನಿಂದ ಒಂದುನೂರ ಎಂಟು ಕುಲಗಳು ಸ್ವರ್ಗಲೋಕಕ್ಕೆ ಉದ್ಧರಿಸಲ್ಪಟ್ಟುವೆಂದು ತಿಳಿಯಬೇಕು.

೨೧. ಊರ್ಧ್ವಪುಂಡ್ರಧಾರಣೆಯಿಲ್ಲದೆ ಮಾಡಿದ ಯಜ್ಞ, ದಾನ, ತಪಸ್ಸು, ಹೋಮ, ವೇದಾಧ್ಯಯನ, ಪಿತೃತರ್ಪಣ ಮುಂತಾದ ಸಕಲ ಕರ್ಮಗಳೂ ವ್ಯರ್ಥವಾಗುವುವು.

೨೨. ಯಾವನ ಶರೀರವು ಊರ್ಧ್ವಪುಂಡ್ರಗಳ ಚಿಹ್ನೆಗಳನ್ನು ಧರಿಸಿರುವುದಿಲ್ಲವೊ ಅವರ ಮುಖಗಳನ್ನು ನಾನು ನೋಡುವುದಿಲ್ಲವು. ಆ ಮುಖಗಳು ಸ್ಮಶಾನಕ್ಕೆ ಸಮಾನವಾದುವುಗಳೇ ಸರಿ.

೨೩. ಆದುದರಿಂದ ಪ್ರತಿಯೊಬ್ಬ ಮನುಷ್ಯನೂ ಶ್ರೀ ಮಹಾವಿಷ್ಣುವಿನ ಅನುಗ್ರಹವನ್ನು ಸಂಪಾದಿಸುವುದಕ್ಕಾಗಿ ಆತನಿಗೆ ಅತ್ಯಂತ ಪ್ರೀತಿಕರಗಳಾದ

ಯತ್ಪುನಃ ಕಲಿಕಾಲೇ ತು ಮತ್ಪುರೀಸಂಭವಾಂ ಮೃದಂ ।
ಮತ್ಸ್ಯಕೂರ್ಮಾಂಕಿತಂ ಚಿಹ್ನಂ ಗೃಹೀತ್ವಾ ಕುರುತೇ ನರಃ ॥ ೨೪ ॥
ದೇಹೇ ತಸ್ಯ ಪ್ರವಿಷ್ಟಂ ಮಾಂ ಜಾನೀಹಿ ತ್ರಿದಶೋತ್ತಮ ।
ತಸ್ಯ ಮೇ ನಾಂತರಂ ಕಿಂಚಿತ್ ಕರ್ತವ್ಯಂ ಶ್ರೇಯ ಇಚ್ಛತಾ ॥ ೨೫ ॥
ಮಮಾವತಾರಚಿಹ್ನಾನಿ ದೃಶ್ಯಂತೇ ಯಸ್ಯ ವಿಗ್ರಹೇ ।
ಮರ್ತ್ಯೋ ಮರ್ತ್ಯೋ ನ ವಿಜ್ಞೇಯಃ ಸ ನೂನಂ ಮಾಮಕೀ ತನುಃ॥೨೬॥
ಪಾಪಂ ಸುಕೃತರೂಪಂ ತು ಜಾಯತೇ ತಸ್ಯ ದೇಹಿನಃ ।
ಮಮಾಯುಧಾನಿ ದೃಶ್ಯಂತೇ ಲಿಖಿತಾನಿ ಕಲೌ ಯುಗೇ ॥ ೨೭ ॥
ಉಭಾಭ್ಯಾಮಪಿ ಚಿಹ್ನಾಭ್ಯಾಂ ಯೋಽಂಕಿತೋ ಮತ್ಸ್ಯಮುದ್ರಯಾ ।
ಕೂರ್ಮಯಾ ಮಾಮಕಂ ತೇಜೋ ವಿಕ್ಷಿಪ್ತಂ ತಸ್ಯ ವಿಗ್ರಹೇ ॥ ೨೮ ॥

ಶಂಖಂ ಚ ಪದ್ಮಂ ಚ ಗದಾಂ ರಥಾಂಗಂ
ಮತ್ಸ್ಯಂ ಚ ಕೂರ್ಮಂ ರಚಿತಂ ಸ್ವದೇಹೇ ।
ಕರೋತಿ ನಿತ್ಯಂ ಸುಕೃತಸ್ಯ ಋದ್ಧಿಂ
ಪಾಪಕ್ಷಯಂ ಜನ್ಮ ಶತಾರ್ಜಿತಸ್ಯ ॥ ೨೯ ॥

---

ಊರ್ಧ್ವಪುಂಡ್ರಗಳನ್ನೂ ಮತ್ಸ್ಯಕೂರ್ಮಗಳೇ ಮೊದಲಾದ ಅವತಾರಗಳ ಚಿಹ್ನೆಗಳನ್ನೂ ದೇಹದಲ್ಲಿ ಧಾರಣೆಮಾಡಬೇಕು.

೨೪–೨೫. ಕಲಿಕಾಲದಲ್ಲಿ ನನ್ನ ಪಟ್ಟಣವಾದ ದ್ವಾರಕೆಯ ಮೃತ್ತಿಕೆಯನ್ನು ತೆಗೆದುಕೊಂಡು ಮತ್ಸ್ಯಕೂರ್ಮಗಳ ಆಕಾರಗಳುಳ್ಳ ಚಿಹ್ನೆಗಳನ್ನು ತನ್ನ ದೇಹದಲ್ಲಿ ಧರಿಸುವ ಮನುಷ್ಯನ ದೇಹದಲ್ಲಿಯೇ ನಾನು ಪ್ರವೇಶಮಾಡಿರುವೆನೆಂಬುದನ್ನು ತಿಳಿ. ಎಲೈ ದೇವೋತ್ತಮನೆ! ಶ್ರೇಯಸ್ಸನ್ನು ಅಪೇಕ್ಷಿಸುವ ಯಾವ ಮನುಷ್ಯನೂ ಆತನಿಗೂ ನನಗೂ ಎಂದಿಗೂ ಭೇದವನ್ನು ಕಲ್ಪಿಸಬಾರದು.

೨೬. ನನ್ನ ಅವತಾರಗಳ ಚಿಹ್ನೆಗಳು ಯಾವಾತನ ಶರೀರದಲ್ಲಿ ಕಾಣುತ್ತಿರುವುವೊ, ಆ ಮನುಷ್ಯನು ಸಾಮಾನ್ಯಮಾನವನಲ್ಲ. ನಿಜವಾಗಿಯೂ ಆತನು ನನ್ನ ಶರೀರವೆಂದೇ ತಿಳಿದುಕೊಳ್ಳಬೇಕು.

೨೭. ಈ ಕಲಿಯುಗದಲ್ಲಿ ಯಾವನ ಶರೀರದಲ್ಲಿ ನನ್ನ ಆಯುಧಗಳ ಚಿಹ್ನೆಗಳು ಮುದ್ರಿತಗಳಾಗಿರುವುವೊ, ಆ ಮನುಷ್ಯನು ಮಾಡಿದ ಪಾಪಕೃತ್ಯಗಳೂ ಪುಣ್ಯಫಲಪ್ರದಗಳಾಗಿ ಪರಿಣಮಿಸುವುವು.

೨೮. ಮತ್ಸ್ಯಮುದ್ರೆ ಮತ್ತು ಕೂರ್ಮಮುದ್ರೆಗಳೆಂಬ ಎರಡು ಚಿಹ್ನೆಗಳಿಂದಲೂ ಯಾವನು ಚಿಹ್ನಿತನಾಗಿರುವನೊ, ಅವನ ಶರೀರದಲ್ಲಿ ನನ್ನ ತೇಜೋರೂಪವೇ ಸನ್ನಿಹಿತವಾಗಿರುವುದೆಂದು ತಿಳಿಯಬೇಕು.

೨೯. ಶಂಖ, ಪದ್ಮ, ಗದೆ, ಚಕ್ರ, ಮತ್ಸ್ಯ, ಕೂರ್ಮ ಮುಂತಾದ

ನಾರಾಯಣಾಯುಧೈರ್ನಿತ್ಯಂ ಚಿಹ್ನಿತೋ ಯಸ್ಯ ವಿಗ್ರಹಃ ।
ಪಾಪಕೋಟಿಪ್ರಯುಕ್ತಸ್ಯ ತಸ್ಯ ಕಿಂ ಕುರುತೇ ಯಮಃ ॥ ೩೦ ॥
ಶಂಖೋದ್ಧಾರೇ ಚ ಯತ್ಪ್ರೋಕ್ತಂ ವಸತಾ ಕೋಟಿಜನ್ಮಭಿಃ ।
ತತ್ಫಲಂ ಲಭತೇ ಶಂಖೇ ಪ್ರತ್ಯಹಂ ದಕ್ಷಿಣೇ ಭುಜೇ ॥ ೩೧ ॥
ಯತ್ಫಲಂ ಪುಷ್ಕರೇ ಪ್ರೋಕ್ತಂ ಪುಂಡರೀಕಾಕ್ಷದರ್ಶನಾತ್ ।
ಶಂಖೋಪರಿ ಕೃತೇ ಪದ್ಮೇ ತತ್ಫಲಂ ಕೋಟಿಸಂಯುತಂ ॥ ೩೨ ॥
ವಾಮೇ ಭುಜೇ ಗದಾ ಯಸ್ಯ ಲಿಖಿತಾ ದೃಶ್ಯತೇ ಕಲೌ ।
ಗದಾಧರೋ ಗಯಾಪುಣ್ಯಂ ಪ್ರತ್ಯಹಂ ತಸ್ಯ ಯಚ್ಛತಿ ॥ ೩೩ ॥
ಯಚ್ಚಾನಂದಪುರೇ ಪ್ರೋಕ್ತಂ ಚಕ್ರಸ್ವಾಮಿಸಮೀಪತಃ ।
ಗದಾಚಕ್ರೇ ಚ ಲಿಖಿತೇ ತತ್ಫಲಂ ಲಿಂಗದರ್ಶನೇ ॥ ೩೪ ॥

ಚಿಹ್ನೆಗಳನ್ನು ದೇಹದಲ್ಲಿ ಧರಿಸಲು ನಿತ್ಯವೂ ಸುಕೃತದ ವೃದ್ಧಿಯನ್ನೂ ನೂರಾರು ಜನ್ಮಗಳಿಂದ ಆರ್ಜಿಸಿದ ಪಾಪಕೋಟಿಗಳ ನಾಶವನ್ನೂ ಉಂಟುಮಾಡುವುವು.

೩೦. ಯಾವನ ದೇಹವು ಪ್ರತಿದಿವಸದಲ್ಲಿಯೂ ಶ್ರೀಮನ್ನಾರಾಯಣನ ಆಯುಧಗಳ ಚಿಹ್ನೆಗಳಿಂದ ಶೋಭಿಸುತ್ತಿರುವುದೊ, ಅಂತಹವನು ಪಾಪಕೋಟಿಗಳಿಂದ ಕೂಡಿದವನಾದರೂ ಯಮನು ಏನನ್ನು ತಾನೆ ಮಾಡಲು ಸಮರ್ಥನಾಗುವನು ?

೩೧. ಶಂಖೋದ್ಧಾರಕ್ಷೇತ್ರದಲ್ಲಿ ಒಂದು ಕೋಟಿ ಜನ್ಮಗಳು ವಾಸಮಾಡಿದುದರಿಂದ ಯಾವ ಪುಣ್ಯವು ಲಭಿಸುವುದೊ, ಪ್ರತಿದಿನವೂ ಶಂಖಚಿಹ್ನೆಯನ್ನು ಬಲಭುಜದಲ್ಲಿ ಧರಿಸುವುದರಿಂದ ಆ ಫಲವೇ ಸಂಪಾದಿತವಾಗುವುದು.

೩೨. ಪುಷ್ಕರಕ್ಷೇತ್ರದಲ್ಲಿ ಶ್ರೀಮನ್ನಾರಾಯಣನ ದರ್ಶನವನ್ನು ಮಾಡಲು ಯಾವ ಫಲವು ಹೇಳಲ್ಪಟ್ಟಿರುವುದೊ, ಅದಕ್ಕೆ ಕೋಟಿಗುಣಿತವಾದ ಫಲವನ್ನು ಬಲಭುಜದಲ್ಲಿ ಶಂಖದ ಮೇಲೆ ಪದ್ಮದ ಚಿಹ್ನೆಯನ್ನು ಧರಿಸುವುದರಿಂದ ಹೊಂದಬಹುದು.

೩೩. ಕಲಿಯುಗದಲ್ಲಿ ಯಾವನ ಎಡಭುಜದಲ್ಲಿ ಗದಾಯುಧದ ಚಿಹ್ನೆಯು ಕಾಣುತ್ತಿರುವುದೊ, ಅವನಿಗೆ ಗದಾಧರನಾದ ಶ್ರೀಹರಿಯು ಪ್ರತಿದಿನವೂ ಗಯಾಕ್ಷೇತ್ರದ ಸೇವೆಯ ಪುಣ್ಯವನ್ನು ಕೊಡುವನು.

೩೪. ಗದಾಚಕ್ರಗಳನ್ನು ದೇಹದಲ್ಲಿ ಅಂಕನಮಾಡಿಕೊಂಡು ವೈಷ್ಣವತತ್ವವನ್ನು ತೋರಿಸಿಕೊಳ್ಳುವ ಮನುಷ್ಯನಿಗೆ ಆನಂದಪುರದಲ್ಲಿ ಚಕ್ರಸ್ವಾಮಿಯ ಸಮೀಪದಲ್ಲಿ ಸೇವೆಯನ್ನು ಮಾಡಿದ ಪುಣ್ಯವು ಲಭಿಸುವುದು.

ಮಮಾಯುಧಾಂಕಿತಂ ದೇಹಂ ಗೋಪೀಚಂದನಮೃತ್ಸ್ನಯಾ ।
ಪ್ರಯಾಗಾದಿಷು ತೀರ್ಥೇಷು ಸ ಗತ್ವಾ ಕಿಂ ಕರಿಷ್ಯತಿ ॥ ೩೫ ॥
ಯದಾ ಯದಾ ಪ್ರಪಶ್ಯೇತ ದೇಹಂ ಶಂಖಾದಿಚಿಹ್ನಿತಂ ।
ತದಾ ತದಾ ಪ್ರಸನ್ನೋಽಹಂ ಪಾಪಂ ತಸ್ಯ ದಹಾಮಿ ವೈ ॥ ೩೬ ॥
ತಿಷ್ಠತೇ ಯಸ್ಯ ದೇಹೇ ತ್ವಹೋರಾತ್ರಂ ದಿನೇ ದಿನೇ ।
ಶಂಖಚಕ್ರಗದಾಪದ್ಮಲಿಖಿತಂ ಸ ಮದಾತ್ಮಕಃ ॥ ೩೭ ॥
ನಾರಾಯಣಾಯುಧೈರ್ಯುಕ್ತಂ ಕೃತ್ವಾತ್ಮಾನಂ ಕಲೌ ಯುಗೇ ।
ಯತ್ಪುಣ್ಯಂ ಕರ್ಮ ಕುರುತೇ ಮೇರುತುಲ್ಯಂ ನ ಸಂಶಯಃ ॥ ೩೮ ॥
ಶಂಖಾಯುಧಾಂಕಿತೋ ಭಕ್ತ್ಯಾ ಯಶ್ಶ್ರಾದ್ಧಂ ಕುರುತೇ ಸುತ ।
ವಿಧಿಹೀನಂ ತು ಸಂಪೂರ್ಣಂ ಪಿತೄಣಾಂ ದತ್ತಮಕ್ಷಯಂ ॥ ೩೯ ॥
ಯಥಾಗ್ನಿರ್ದಹತೇ ಕಾಷ್ಠಂ ವಾಯುನಾ ಪ್ರೇಷಿತೋ ಭೃಶಂ ।
ತಥಾ ದಹಂತಿ ಪಾಪಾನಿ ದೃಷ್ಟ್ವಾ ಮೇ ಆಯುಧಾನಿ ವೈ ॥ ೪೦ ॥

೩೫. ಗೋಪೀಚಂದನದಿಂದಾಗಲಿ ಮೃತ್ತಿಕೆಯಿಂದಾಗಲಿ ಯಾವನು ತನ್ನ ದೇಹದಲ್ಲಿ ನನ್ನ ಆಯುಧಗಳ ಚಿಹ್ನೆಗಳನ್ನು ಧರಿಸುವನೊ, ಆ ಮಾನವನು ಪ್ರಯಾಗವೇ ಮೊದಲಾದ ಕ್ಷೇತ್ರಗಳಿಗೆ ಹೋಗಿ ಮಾಡಬೇಕಾದುದೇನು ?

೩೬. ಯಾವ ಯಾವ ಸಮಯದಲ್ಲಿ ನಾನು ಶಂಖಾದ್ಯಾಯುಧಗಳ ಚಿಹ್ನೆಗಳುಳ್ಳ ದೇಹವನ್ನು ನೋಡುವೆನೊ, ಆಗಲೇ ನಾನು ಪ್ರಸನ್ನನಾಗಿ ಆ ಮನುಷ್ಯನ ಪಾಪವನ್ನೆಲ್ಲ ಸುಟ್ಟುಹಾಕುವೆನು.

೩೭. ಯಾವನ ದೇಹದಲ್ಲಿ ಅಹೋರಾತ್ರಿಗಳಲ್ಲಿಯೂ ಪ್ರತಿದಿನದಲ್ಲಿಯೂ ಶಂಖ, ಚಕ್ರ, ಗದಾ ಮತ್ತು ಪದ್ಮಗಳ ಚಿಹ್ನೆಗಳು ಕಾಣುತ್ತಿರುವುವೊ, ಅವನಲ್ಲಿಯೇ ನನ್ನ ಸಾನ್ನಿಧ್ಯವಿರುವುದೆಂದು ತಿಳಿಯಬೇಕು.

೩೮. ಕಲಿಯುಗದಲ್ಲಿ ದೇಹವನ್ನು ಶ್ರೀಮನ್ನಾರಾಯಣನ ಆಯುಧ ಚಿಹ್ನೆಗಳಿಂದ ಅಂಕಿತವನ್ನಾಗಿ ಮಾಡಿಕೊಳ್ಳಲು ಆ ಪುರುಷನು ಮಾಡಿದ ಸತ್ಕಾರ್ಯಗಳೆಲ್ಲವೂ ಮೇರು ಸಮಾನವಾಗುವುದರಲ್ಲಿ ಸಂದೇಹವಿಲ್ಲ.

೩೯. ಪುತ್ರನಾದ ಎಲೈ ಬ್ರಹ್ಮದೇವನೆ! ಶಂಖಾದ್ಯಾಯುಧಗಳಿಂದ ಚಿಹ್ನಿತವಾದ ದೇಹವುಳ್ಳವನು ವಿಧಿರಹಿತವಾದ ಶ್ರಾದ್ಧವನ್ನು ಮಾಡಿದರೂ ಅದು ಸಮಗ್ರವಾದುದೆನಿಸಿ ಪಿತೃದೇವತೆಗಳಿಗೆ ಅಕ್ಷಯದತ್ತವಾಗಿ ಪರಿಣಮಿಸುವುದು.

೪೦. ದೇಹದಲ್ಲಿ ಧಾರಣೆಮಾಡಿದ ನನ್ನ ಆಯುಧಗಳ ಚಿಹ್ನೆಗಳನ್ನು ಕಂಡು ಸಕಲ ಪಾಪಗಳೂ ವಾಯುವಿನ ಘಾತದಿಂದ ಜ್ವಾಲಿತವಾದ ಅಗ್ನಿಯಿಂದ ಭಸ್ಮೀಭೂತವಾದ ಕಾಷ್ಠದಂತೆ ಕ್ಷಣಮಾತ್ರದಲ್ಲಿ ನಾಶವಾಗುವುವು.

ಮಮ ನಾಮಾಂಕಿತಾಂ ಮುದ್ರಾಂ ಅಷ್ಟಾಕ್ಷರಸಮನ್ವಿತಾಂ ।
ಶಂಖಾದಿ ಸ್ವಾಯುಧೈರ್ಯುಕ್ತಾಂ ಸ್ವರ್ಣತಾಪ್ಯಮಯೀಮಪಿ ॥ ೪೧ ॥
ಧತ್ತೇ ಭಗವತೋ ಯಸ್ತು ಕಲಿಕಾಲೇ ವಿಶೇಷತಃ ।
ಪ್ರಹ್ಲಾದಸ್ಯ ಸಮೋ ಜ್ಞೇಯೋ ನಾನ್ಯಥಾ ಮಮ ವಲ್ಲಭಃ ॥ ೪೨ ॥
ಯಸ್ಯ ನಾರಾಯಣೀ ಮುದ್ರಾ ದೇಹಂ ಶಂಖಾದಿಚಿಹ್ನಿತಂ ।
ಧಾತ್ರೀಫಲೈಃ ಕೃತಾ ಮಾಲಾ ತುಲಸೀಕಾಷ್ಠಸಂಭವಾ ॥ ೪೩ ॥
ದ್ವಾದಶಾಕ್ಷರಮಂತ್ರಸ್ತು ನಿಯುಕ್ತಾನಿ ಕಲೇವರೇ ।
ಆಯುಧಾನಿ ಚ ವಿಪ್ರಸ್ಯ ಮತ್ಸಮಃ ಸ ಚ ವೈಷ್ಣವಃ ॥ ೪೪ ॥
ಶಂಖಾಂಕಿತತನುರ್ವಿಪ್ರೋ ಭುಂಕ್ತೇ ವೈ ಯಸ್ಯ ವೇಶ್ಮನಿ ।
ತದನ್ನಂ ಸ್ವಯಮಶ್ನಾಮಿ ಪಿತೃಭಿಃ ಸಹ ಪುತ್ರಕ ॥ ೪೫ ॥
ಕೃಷ್ಣಾಯುಧಾಂಕಿತಂ ದೃಷ್ಟ್ವಾ ಸನ್ಮಾನಂ ನ ಕರೋತಿ ಯಃ ।
ದ್ವಾದಶಾಬ್ದಾರ್ಜಿತಂ ಪುಣ್ಯಂ ಬಾಷ್ಕಲೇಯಾಯ ಗಚ್ಛತಿ ॥ ೪೬ ॥

೪೧–೪೨. ಶಂಖವೇ ಮುಂತಾದ ನನ್ನ ಆಯುಧಗಳ ರೂಪವನ್ನೂ ಹೊಂದಿ ಚಿನ್ನ ಅಥವಾ ಬೆಳ್ಳಿಗಳಿಂದ ಮಾಡಲ್ಪಟ್ಟು ಅಷ್ಟಾಕ್ಷರೀಮಂತ್ರದಿಂದೊಡಗೂಡಿ ನನ್ನ ಹೆಸರಿನಲ್ಲಿ ಅಂಕಿತವಾದ ಮುದ್ರೆಯನ್ನು ವಿಶೇಷವಾಗಿ ಈ ಕಲಿಕಾಲದಲ್ಲಿ ಯಾವನು ಧರಿಸುವನೊ, ಅವನು ಪ್ರಹ್ಲಾದನಿಗೆ ಸಮಾನನಾದ ಭಗವದ್ಭಕ್ತನೆಂದು ತಿಳಿಯಬೇಕು. ಅವನೇ ನನಗೆ ಅತ್ಯಂತ ಪ್ರಿಯನಾದವನು; ಇದು ಸುಳ್ಳಲ್ಲವು.

೪೩–೪೪. ಯಾವ ಬ್ರಾಹ್ಮಣೋತ್ತಮನ ದೇಹದಲ್ಲಿ ನಾರಾಯಣ ಮುದ್ರೆಯಿರುವುದೊ, ಶಂಖಾದ್ಯಾಯುಧಗಳ ಚಿಹ್ನೆಗಳಿರುವುವೊ, ಧಾತ್ರೀಫಲ(ನೆಲ್ಲಿಯ ಕಾಯಿ)ಗಳಿಂದಾಗಲಿ ತುಲಸೀಕಾಷ್ಠಗಳಿಂದಾಗಲಿ ಮಾಡಿದ ಜಪಮಾಲೆಯು ಕಂಠದಲ್ಲಿ ಶೋಭಿಸುತ್ತಿರುವುದೊ, ಯಾವನು ದ್ವಾದಶಾಕ್ಷರಮಂತ್ರವನ್ನು ಜಪಿಸುತ್ತ ಕಲೇಬರದಲ್ಲಿ ಈ ಶುಭಚಿಹ್ನೆಗಳನ್ನು ಧರಿಸಿರುವನೊ, ಆ ವೈಷ್ಣವನೇ ನನಗೆ ಸಮಾನನೆನಿಸಿರುವನು.

೪೫. ಎಲೈ ಪುತ್ರನೆ! ಯಾವನ ಮನೆಯಲ್ಲಿ ಶಂಖಚಿಹ್ನೆಯುಳ್ಳ ಬ್ರಾಹ್ಮಣನು ಭೋಜನವನ್ನು ಮಾಡುವನೊ, ಆತನ ಭೋಜನವನ್ನು ನಾನೇ ಪಿತೃದೇವತೆಗಳೊಡನೆ ಸ್ವೀಕರಿಸುವೆನು.

೪೬. ಮಹಾವಿಷ್ಣುವಿನ ಆಯುಧಗಳ ಚಿಹ್ನೆಗಳನ್ನು ಧರಿಸಿರುವ ಮನುಷ್ಯನನ್ನು ಕಂಡು ಯಾವನು ಮರ್ಯಾದೆಯನ್ನು ಮಾಡುವುದಿಲ್ಲವೊ, ಅವನು ಹನ್ನೆರಡು ವರ್ಷಗಳಲ್ಲಿ ಸಂಪಾದಿಸಿದ ಪುಣ್ಯವೆಲ್ಲವೂ ನಿರರ್ಥಕವಾಗುವುದು.

ಕೃಷ್ಣಾಯುಧಾಂಕಿತೋ ಯಸ್ತು ಸ್ಮಶಾನೇ ಮ್ರಿಯತೇ ಯದಿ ।
ಪ್ರಯಾಗೇ ಯಾ ಗತಿಃ ಪ್ರೋಕ್ತಾ ಸಾಗತಿಸ್ತಸ್ಯ ಮಾನದ ॥ ೪೭ ॥
ಮಮಾಯುಧೈಃ ಕಲೌ ನಿತ್ಯಂ ಮಂಡಿತೋ ಯಸ್ಯ ವಿಗ್ರಹಃ ।
ತತ್ರಾಽಶ್ರಮಂ ಪ್ರಕುರ್ವಂತಿ ವಿಬುಧಾ ವಾಸವಾದಯಃ ॥ ೪೮ ॥
ಯಃ ಕರೋತಿ ಚ ಮೇ ಪೂಜಾಂ ಮಮ ಶಸ್ತ್ರಾಂಕಿತೋ ನರಃ ।
ಅಪರಾಧಸಹಸ್ರಾಣಿ ನಿತ್ಯಂ ತಸ್ಯ ಹರಾಮ್ಯಹಂ ॥ ೪೯ ॥
ಕೃತ್ವಾ ಕಾಷ್ಠಮಯಂ ಬಿಂಬಂ ಮಮ ಶಸ್ತ್ರೇ ಸುಚಿಹ್ನಿತಂ ।
ಯೋ ವಾಂಕಯತೇ ದೇಹಂ ತತ್ಸಮೋ ನಾಸ್ತಿ ವೈಷ್ಣವಃ ॥ ೫೦ ॥
ಅಷ್ಟಾಕ್ಷರಾಂಕಿತಾ ಮುದ್ರಾ ಯಸ್ಯ ಧಾತುಮಯೀ ಕರೇ ।
ಶಂಖಪದ್ಮಾದಿಭಿರ್ಯುಕ್ತಾ ಪೂಜ್ಯತೇಽಸೌ ಸುರಾಸುರೈಃ ॥ ೫೧ ॥
ಧೃತಾ ನಾರಾಯಣೀ ಮುದ್ರಾ ಪ್ರಹ್ಲಾದೇನ ಪುರಾ ಕರೇ ।
ವಿಭೀಷಣೇನ ಬಲಿನಾ ಧ್ರುವೇಣ ಚ ಶುಕೇನ ಚ ।
ಮಾಂಧಾತ್ರಾ ಹ್ಯಂಬರೀಷೇಣ ಮಾರ್ಕಂಡೇಯಮುಖೈರ್ದ್ವಿಜೈಃ ॥ ೫೨ ॥

---

೪೭. ಎಲೈ ಬ್ರಹ್ಮನೆ! ಶ್ರೀಹರಿಯ ಆಯುಧಗಳ ಚಿಹ್ನೆಗಳನ್ನು ಧರಿಸಿರುವವನು ಯಾವ ಸ್ಮಶಾನದಲ್ಲಿ ದೇಹವನ್ನು ತ್ಯಜಿಸಿದರೂ, ಪ್ರಯಾಗದಲ್ಲಿ ಪ್ರಾಣಗಳನ್ನು ಬಿಟ್ಟವರಿಗೆ ಶಾಸ್ತ್ರಗಳಲ್ಲಿ ಹೇಳಿರುವ ಉತ್ತಮ ಗತಿಯೇ ಆತನಿಗೂ ಲಭಿಸುವುದು.

೪೮. ನನ್ನ ಆಯುಧಗಳಿಂದ ಕಲಿಯುಗದಲ್ಲಿ ಯಾವನ ದೇಹವು ಪ್ರತಿದಿನವೂ ಅಲಂಕೃತವಾಗಿರುವುದೊ, ಆ ಶರೀರದಲ್ಲಿ ಮಹೇಂದ್ರನೇ ಮೊದಲಾದ ಸಕಲ ದೇವತೆಗಳೂ ಶಾಶ್ವತಾವಾಸವನ್ನು ಮಾಡಿಕೊಂಡಿರುತ್ತಾರೆ.

೪೯. ನನ್ನ ಆಯುಧಗಳ ಚಿಹ್ನೆಗಳನ್ನು ಧರಿಸಿ ಯಾವನು ನನ್ನ ಪೂಜೆಯನ್ನು ಮಾಡುವನೊ, ಪ್ರತಿ ದಿನವೂ ಆತನು ಮಾಡಿದ ಸಾವಿರಾರು ಅಪರಾಧಗಳನ್ನು ನಾನು ನಿರ್ಮೂಲಗೊಳಿಸುವೆನು.

೫೦. ಶಂಖಚಕ್ರಾದ್ಯಾಯುಧಗಳಿಂದ ಕೂಡಿದ ಒಂದು ಪ್ರತಿಮೆಯನ್ನು ಮರದಲ್ಲಿ ಮಾಡಿ ಆ ನನ್ನ ಶುಭಲಕ್ಷಣಲಕ್ಷಿತವಾದ ವಿಗ್ರಹದಿಂದ ತನ್ನ ದೇಹದಲ್ಲಿ ಯಾವನು ಚಿಹ್ನೆಗಳನ್ನು ಧರಿಸುವನೊ, ಅವನಿಗೆ ಸಮನಾದ ವೈಷ್ಣವನು ಮತ್ತೊಬ್ಬನಿಲ್ಲವು.

೫೧. ಯಾವನು ಭುಜಗಳಲ್ಲಿ ಶಂಖಪದ್ಮಾದಿಗಳಿಂದ ಕೂಡಿದ ಅಷ್ಟಾಕ್ಷರೀ ಮಂತ್ರದಿಂದ ಅಂಕಿತವಾದ ಲೋಹಮುದ್ರೆಯ ಚಿಹ್ನೆಗಳಿರುವುವೊ, ಅವನು ದೇವದಾನವರಿಂದಲೂ ಪೂಜೆಯನ್ನು ಕೈಕೊಳ್ಳುವವನಾಗುವನು.

೫೨. ಈ ನಾರಾಯಣಾಷ್ಟಾಕ್ಷರ ಮಂತ್ರದಿಂದೊಡಗೂಡಿದ ಮುದ್ರೆಯು

ಶಂಖಾದಿಚಿಹ್ನಿತೈಃ ಶಸ್ತ್ರೈರ್ದೇಹಂ ಕೃತ್ವಾ ಚ ಮಾನದ ।
ಏವಮಾರಾಧ್ಯ ಮಾಂ ಪ್ರಾಪ್ತಂ ಸಮೀಹಿತಫಲಂ ಮಹತ್ ॥ ೫೩ ॥
ಗೋಪೀಚಂದನಮೃತ್ಸ್ನಯಾ ಲಿಖಿತೋ ಯಸ್ಯ ವಿಗ್ರಹಃ ।
ಶಂಖಚಕ್ರಾದಿಪದ್ಮಾಂಕೋ ದೇಹೇ ತಸ್ಯ ವಸಾಮ್ಯಹಂ ॥ ೫೪ ॥
ಸೌವರ್ಣಂ ರಾಜತಂ ತಾಮ್ರಂ ಕಾಂಸ್ಯಮಾಯಸಮೇವಚ ।
ಚಕ್ರಂ ಕೃತ್ವಾ ತು ಮೇಧಾವೀ ಧಾರಯೇತ್ತು ವಿಚಕ್ಷಣಃ ।
ದ್ವಾದಶಾರಂ ತು ಷಟ್ಕೋಣಂ ವಲಿತ್ರಯವಿಭೂಷಿತಂ ॥ ೫೫ ॥
ಏವಂ ಸುದರ್ಶನಂ ಚಕ್ರಂ ಕಾರಯೇತ್ತು ವಿಚಕ್ಷಣಃ ।
ಉಪವೀತಾದಿವದ್ಧಾರ್ಯಾಃ ಶಂಖಚಕ್ರಗದಾಃ ಸದಾ ॥ ೫೬ ॥
ಬ್ರಾಹ್ಮಣೈಶ್ಚ ವಿಶೇಷೇಣ ವೈಷ್ಣವೈಶ್ಚ ವಿಶೇಷತಃ ।
ಉಪವೀತಂ ಶಿಖಾ ಯದ್ವಚ್ಚಕ್ರಂ ಲಾಂಛನಸಂಯುತಂ ॥ ೫೭ ॥

---

ಹಿಂದೆ ಪ್ರಹ್ಲಾದ, ವಿಭೀಷಣ, ಬಲಿಚಕ್ರವರ್ತಿ, ಧ್ರುವ, ಶುಕಯೋಗಿ, ಮಾಂಧಾತ, ಅಂಬರೀಷರಿಂದಲೂ, ಮಾರ್ಕಂಡೇಯನೇ ಮೊದಲಾದ ಬ್ರಾಹ್ಮಣೋತ್ತಮರಿಂದಲೂ ಧರಿಸಲ್ಪಟ್ಟಿತು.

೫೩. ಪ್ರಿಯಪುತ್ರನೆ! ಶಂಖವೇ ಮೊದಲಾದ ನನ್ನ ಶಸ್ತ್ರಗಳ ಮುದ್ರೆಗಳಿಂದ ಅಂಕಿತವಾದ ದೇಹವುಳ್ಳವನಾಗಿ ಆ ಆಯುಧಗಳನ್ನೇ ಧರಿಸಿ, ಪ್ರಾಪ್ತನಾಗಿರುವ ನನ್ನನ್ನು ಪೂಜಿಸಲು ಮನುಷ್ಯನಿಗೆ ಮಹತ್ತರವಾದ ಅಭೀಷ್ಟಫಲವು ಲಭಿಸುವುದು.

೫೪. ಗೋಪೀಚಂದನ ಮತ್ತು ಮೃತ್ತಿಕೆಗಳ ಊರ್ಧ್ವಪುಂಡ್ರಗಳು ಯಾವನ ದೇಹದಲ್ಲಿರುವುವೊ, ಯಾವನು ಶಂಖ, ಚಕ್ರ, ಪದ್ಮಾದಿ ಚಿಹ್ನೆಗಳನ್ನು ಧರಿಸಿರುವನೊ, ಅವನ ದೇಹದಲ್ಲಿ ನಾನೇ ವಾಸಮಾಡುತ್ತಿರುವೆನು.

೫೫. ಚಿನ್ನದಲ್ಲಾಗಲಿ, ಬೆಳ್ಳಿಯಲ್ಲಾಗಲಿ, ತಾಮ್ರದಲ್ಲಾಗಲಿ, ಕಂಚಿನಲ್ಲಾಗಲಿ, ಕಬ್ಬಿಣದಲ್ಲಾಗಲಿ ಹನ್ನೆರಡು ಅರಗಳೂ, ಆರು ಕೋಣಗಳೂ, ತ್ರಿವಳಿಗಳೂ ಉಳ್ಳಂತೆ ಒಂದು ಚಕ್ರದ ಮುದ್ರೆಯನ್ನು ಮಾಡಿಸಿ ಅದರ ಚಿಹ್ನೆಯನ್ನು ಬುದ್ಧಿವಂತನಾದ ಭಾಗವತನು ತನ್ನ ದೇಹದಲ್ಲಿ ಧಾರಣೆಮಾಡಬೇಕು.

೫೬. ಇಂತು ವಿಚಕ್ಷಣನು ಸುದರ್ಶನಚಕ್ರದ ಮುದ್ರೆಯನ್ನು ಮಾಡಿಸಬೇಕು. ಈ ಶಂಖಚಕ್ರಗದೆಗಳ ಮುದ್ರೆಗಳು ದೇಹದಲ್ಲಿ ನಿರಂತರವೂ ಯಜ್ಞೋಪವೀತದಂತೆ ಧರಿಸಲ್ಪಡಬೇಕಾದುವು.

೫೭. ವಿಶೇಷವಾಗಿ ಬ್ರಾಹ್ಮಣರಿಂದಲೂ ಅವರಲ್ಲಿಯೂ ವೈಷ್ಣವರಿಂದಲೂ ಶಿಖಾಯಜ್ಞೋಪವೀತಗಳಂತೆಯೇ ಚಕ್ರಲಾಂಛನವೂ ಸದಾಧಾರ್ಯವಾಗಿರುವುದು.

ಚಕ್ರಲಾಂಛನಹೀನಸ್ಯ ವಿಪ್ರಸ್ಯ ವಿಫಲಂ ಭವೇತ್ ।
ಮಮ ಚಕ್ರಾಂಕಿತೋ ದೇಹಃ ಪವಿತ್ರ ಇತಿ ವೈ ಶೃತಿಃ ॥ ೫೮ ॥
ಚಕ್ರಾಂಕಿತಾಯ ದಾತವ್ಯಂ ಹವ್ಯಂ ಕವ್ಯಂ ವಿಚಕ್ಷಣೈಃ ।
ಮಮ ಚಕ್ರಾಂಕಕವಚಮಭೇದ್ಯಂ ದೇವದಾನವೈಃ ।
ಅಜೇಯಃ ಸರ್ವಭೂತಾನಾಂ ಶತ್ರೂಣಾಂ ರಕ್ಷಸಾಮಪಿ ॥ ೫೯ ॥
ಮಮ ಚಕ್ರಾಂಕಕವಚಂ ಶರೀರೇ ಯಸ್ಯ ತಿಷ್ಠತಿ ।
ನಾಶುಭಂ ವಿದ್ಯತೇ ತಸ್ಯ ಗೃಹಪುತ್ರಾದಿಕಸ್ಯ ಹಿ ॥ ೬೦ ॥
ದಕ್ಷಿಣೇ ಚ ಭುಜೇ ವಿಪ್ರೋ ಬಿಭೃಯಾದ್ವೈ ಸುದರ್ಶನಂ ।
ಸವ್ಯೇ ಚ ಶಂಖಂ ಬಿಭೃಯಾದಿತಿ ವೇದವಿದೋ ವಿದುಃ ॥ ೬೧ ॥
ತತ್ತನ್ಮಂತ್ರೇಣ ಮಂತ್ರಜ್ಞಃ ಪ್ರತಿಷ್ಠಾಪ್ಯ ಪೃಥಕ್ ಪೃಥಕ್ ॥ ೬೨ ॥
ಲಲಾಟೇ ಚ ಗದಾ ಧಾರ್ಯಾ ಮೂರ್ಧ್ನಿ ಚಾಪಂ ಶರಸ್ತಥಾ ।
ನಂದಕಂ ಚೈವ ಹೃನ್ಮಧ್ಯೇ ಶಂಖಚಕ್ರೇ ಭುಜದ್ವಯೇ ॥ ೬೩ ॥

---

೫೮. ಚಕ್ರಾದಿಲಾಂಛನಗಳಿಲ್ಲದ ಬ್ರಾಹ್ಮಣನು ಮಾಡಿದ ಸತ್ಕರ್ಮಗಳೆಲ್ಲವೂ ನಿಷ್ಫಲಗಳಾಗುವುವು. ನನ್ನ ಸುದರ್ಶನಚಕ್ರದಿಂದ ಚಿಹ್ನಿತವಾದ ದೇಹವು ಪರಮ ಪವಿತ್ರವೆಂದು ವೇದಗಳಲ್ಲಿಯೂ ಪ್ರೋಕ್ತವಾಗಿರುವುದು.

೫೯. ವಿಚಕ್ಷಣರಾದವರು ಚಕ್ರಾಂಕಿತಬ್ರಾಹ್ಮಣರಿಗೆ ಮಾತ್ರ ದೇವಪಿತೃಯಜ್ಞಶೇಷಗಳನ್ನು ಸಮರ್ಪಣೆಮಾಡಬೇಕು. ನನ್ನ ಚಕ್ರದ ಚಿಹ್ನವೆಂಬ ಕವಚವು ಸುರಾಸುರರಿಗೂ ಭೇದಿಸಲಸದಳವಾಗಿರುವುದು. ಅದನ್ನು ಧರಿಸಿದ ಮನುಷ್ಯನು ಸಕಲಭೂತಗಳಿಂದಲೂ, ಶತ್ರುಗಳಿಂದಲೂ ರಾಕ್ಷಸರಿಂದಲೂ ಜಯಿಸಲ್ಪಡಲಾರನು.

೬೦. ಯಾವನ ಶರೀರದಲ್ಲಿ ನನ್ನ ಚಕ್ರಚಿಹ್ನೆಯ ರೂಪವಾದ ಕವಚವು ನೆಲೆಗೊಂಡಿರುವುದೊ, ಆತನಿಗೆ ಗೃಹ, ಪುತ್ರ, ಮಿತ್ರ, ಕಳತ್ರಾದಿ ಯಾವ ವಿಷಯಗಳಲ್ಲಿಯೂ ಅಶುಭವೆಂಬುದುಂಟಾಗುವುದಿಲ್ಲವು.

೬೧. ಬ್ರಾಹ್ಮಣನು ಬಲಭುಜದಲ್ಲಿ ಸುದರ್ಶನಚಕ್ರದ ಚಿಹ್ನೆಯನ್ನು ಧರಿಸಬೇಕು. ಎಡಭುಜದಲ್ಲಿ ಶಂಖವನ್ನು ಧರಿಸಬೇಕೆಂದು ವೇದರಹಸ್ಯಗಳನ್ನರಿತವರು ತಿಳಿಯುವರು.

೬೨. ಆಯಾ ಮಂತ್ರಗಳನ್ನುಚ್ಚರಿಸುತ್ತ ದೇಹದಲ್ಲಿ, ಮೇಲೆ ಹೇಳಿದಂತೆ ಶಂಖಚಕ್ರಾದಿ ಚಿಹ್ನೆಗಳನ್ನು ಬೇರೆ ಬೇರೆಯಾಗಿ ಧಾರಣಮಾಡಬೇಕು.

೬೩. ಹಣೆಯಲ್ಲಿ ಗದೆಯನ್ನು ಧರಿಸಬೇಕು. ನೆತ್ತಿಯಲ್ಲಿ ಚಾಪವನ್ನೂ ಬಾಣವನ್ನೂ, ಹೃದಯದಲ್ಲಿ ನಂದಕವೆಂಬ ಖಡ್ಗವನ್ನೂ ಎರಡು ಭುಜಗಳಲ್ಲಿ ಶಂಖಚಕ್ರಗಳನ್ನೂ ಧಾರಣೆಮಾಡಬೇಕು.

ತಸ್ಮಾತ್ಸರ್ವಪ್ರಯತ್ನೇನ ಚಕ್ರಾದೀನ್‌ಧಾರಯೇತ್ಸದಾ ।
ಧಾರಣಾನಂತರಂ ಬ್ರೂಯಾತ್ತತ್ರ ಚೈವಂ ದ್ವಿಜೋತ್ತಮಃ ॥ ೬೪ ॥
ಪುತ್ರಮಿತ್ರಕಲತ್ರಾದಿರ್ಯಃ ಕಶ್ಚಿನ್ಮತ್ಪರಿಗ್ರಹಃ ।
ಸಹ ದೇಹೇನ ಸರ್ವೋಽಸೌ ವಿಷ್ಣುಪ್ರೀತ್ಯೈ ಮಯಾರ್ಪಿತಃ ॥ ೬೫ ॥
ಪಶ್ಚಾತ್ ಸ್ವಧರ್ಮಮಾಸ್ಥಾಯ ತಿಷ್ಠೇದಾಜೀವನಂ ಮಮ ।
ಭಕ್ತ್ಯಾ ಚಾವ್ಯಭಿಚಾರಿಣ್ಯಾ ಸರ್ವದಾಪ್ತಮನೋರಥಃ ॥ ೬೬ ॥
ಶಂಖಚಕ್ರಾಂಕಿತಂ ದೃಷ್ಟ್ವಾ ಯೇ ನಿಂದಂತಿ ನರಾಧಮಾಃ ।
ಅವಲೋಕ್ಯ ಮುಖಂ ತೇಷಾಮಾದಿತ್ಯಮವಲೋಕಯೇತ್ ।
ಶ್ರೀಕೃಷ್ಣನಾಮ ಚೋಚ್ಚಾರ್ಯ ಶುದ್ಧೋ ಭವತಿ ನಾನ್ಯಥಾ ॥ ೬೭ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ದ್ವಿತೀಯೇ ವೈಷ್ಣವಖಂಡೇ ಮಾರ್ಗಶೀರ್ಷಮಾಹಾತ್ಮ್ಯೇ ಬ್ರಹ್ಮವಿಷ್ಣುಸಂವಾದೇ "ಗೋಪೀಚಂದನಮಾಹಾತ್ಮ್ಯಕಥನಂ" ನಾಮ ತೃತೀಯೋಽಧ್ಯಾಯಃ

---

೬೪. ಆದುದರಿಂದ ಸರ್ವಪ್ರಯತ್ನಗಳಿಂದಲೂ ಚಕ್ರಾದಿಚಿಹ್ನಗಳನ್ನು ಬ್ರಾಹ್ಮಣೋತ್ತಮನಾದವನು ದೇಹದಲ್ಲಿ ಸರ್ವಕಾಲಗಳಲ್ಲಿಯೂ ಧರಿಸಬೇಕು. ಮತ್ತು ಧಾರಣೆಮಾಡುವ ಕಾಲದಲ್ಲಿ ಮುಂದೆ ಹೇಳುವ ಶ್ಲೋಕವನ್ನು ಪಠನ ಮಾಡಬೇಕು.

೬೫. ಪುತ್ರರು, ಮಿತ್ರರು, ಹೆಂಡತಿ ಮುಂತಾಗಿ ನನ್ನದೆನಿಸಿದ ಯಾವ ಪರಿಗ್ರಹವಿರುವುದೊ, ಅದೆಲ್ಲವೂ ಈ ನನ್ನ ದೇಹದೊಡನೆ ನನ್ನಿಂದ ವಿಷ್ಣು ಪ್ರೀತ್ಯರ್ಥವಾಗಿ ಅರ್ಪಿಸಲ್ಪಟ್ಟಿರುವುದು.

೬೬. ಇಂತು ಚಿಹ್ನೆಗಳನ್ನು ಧಾರಣೆಮಾಡಿದಮೇಲೆ ತನ್ನ ವರ್ಣಾಶ್ರಮಕ್ಕೆ ಉಚಿತವಾದ ವೃತ್ತಿಯಿಂದ ಲೋಕಯಾತ್ರೆಯನ್ನು ನಡೆಸಬೇಕು. ಈ ರೀತಿ ಯಾಗಿ ನನ್ನಲ್ಲಿಯೆ ನಟ್ಟ ನಿಶ್ಚಂಚಲವಾದ ಮನಸ್ಸಿನಿಂದ ಮಾನವನು ಯಾವಾ ಗಲೂ ಸಕಲ ಮನೋರಥಗಳನ್ನೂ ಹೊಂದುವನು.

೬೭. ಯಾವ ಮನುಷ್ಯಾಧಮರು ಶಂಖಚಕ್ರಾದಿಮುದ್ರೆಗಳನ್ನುಧರಿಸಿರುವ ವೈಷ್ಣವನನ್ನು ನೋಡಿ ನಿಂದೆಮಾಡುವರೊ, ಅವರ ಮುಖವನ್ನು ಕಂಡರೆ ತತ್ ಕ್ಷಣವೇ ಶುದ್ಧ್ಯರ್ಥವಾಗಿ ಸೂರ್ಯನನ್ನು ನೋಡಬೇಕು. ಅಲ್ಲದೆ ಶ್ರೀಕೃಷ್ಣನ ನಾಮವನ್ನು ಉಚ್ಚರಿಸುವುದರಿಂದಲೇ ಅಂತಹವನು ಪೂತನಾಗುವನಲ್ಲದೆ ಅದಕ್ಕೆ ಅನ್ಯೋಪಾಯವಿಲ್ಲವು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀಸ್ಕಾಂದಮಹಾಪುರಾಣದ ಎರಡನೆಯ ವೈಷ್ಣವಖಂಡದ ಮಾರ್ಗಶೀರ್ಷಮಾಹಾತ್ಮ್ಯದ ಬ್ರಹ್ಮವಿಷ್ಣುಸಂವಾದದಲ್ಲಿ "ಗೋಪೀಚಂದನಮಾಹಾತ್ಮ್ಯಕಥನ"ವೆಂಬ ಮೂರನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥ ಚತುರ್ಥೋಽಧ್ಯಾಯಃ

### ಶಂಖಪೂಜಾವಿಧಿಕಥನಂ

ಬ್ರಹ್ಮೋವಾಚ :—

ತಪ್ತಚಕ್ರಾಂಕಿತಂ ಕೃತ್ವಾ ಹ್ಯಾತ್ಮಾನಮಥ ದೀಕ್ಷಿತಂ ।
ಪದ್ಮಾಕ್ಷತುಲಸೀಮಾಲಂ ಕಿಂ ಫಲಂ ಬ್ರೂಹಿ ಕೇಶವ ॥ ೧ ॥

ಶ್ರೀ ಭಗವಾನುವಾಚ :—

ತುಲಸೀಕಾಷ್ಠಸಂಭೂತಾಂ ಯೇ ಮಾಲಾಂ ವಹತೇ ದ್ವಿಜಃ ।
ಅಪ್ಯಶೌಚೋಪ್ಯನಾಚಾರೋ ಮಾಮೇವೈತಿ ನ ಸಂಶಯಃ ॥ ೨ ॥
ಧಾತ್ರೀಫಲಕೃತಾ ಮಾಲಾ ತುಲಸೀಕಾಷ್ಠಸಂಭವಾ ।
ದೃಶ್ಯತೇ ಯಸ್ಯ ದೇಹೇತು ಸ ವೈ ಭಾಗವತೋ ನರಃ ॥ ೩ ॥
ತುಲಸೀದಲಜಾಂ ಮಾಲಾಂ ಕಂಠಸ್ಥಾಂ ವಹತೇ ತು ಯಃ ।
ಮಮೋತ್ತ್ರೀರ್ಹಾಂ ವಿಶೇಷೇಣ ಸ ನಮಸ್ಯೋ ದಿವೌಕಸಾಂ ॥ ೪ ॥

## ಕನ್ನಡದ ಅನುವಾದ

### ಶಂಖಪೂಜಾವಿಧಿಕಥನವು

೧. ಬ್ರಹ್ಮದೇವನು ಕೇಳುತ್ತಾನೆ:—ತಪ್ತಾಂಕನಗಳನ್ನು ದೇಹದಲ್ಲಿ ಧಾರಣೆಮಾಡಿಕೊಂಡು ವೈಷ್ಣವಧರ್ಮಗಳಲ್ಲಿ ದೀಕ್ಷಿತನಾಗಿ ಪದ್ಮಾಕ್ಷ ಮತ್ತು ತುಲಸಿಗಳ ಮಾಲೆಗಳನ್ನು ಧರಿಸಿರುವವನು ಯಾವ ಫಲವನ್ನು ಪಡೆಯುವ ನೆಂಬುದನ್ನು ನನಗೆ ಹೇಳು.

೨. ಭಗವಂತನು ಹೇಳುತ್ತಾನೆ:—ಯಾವ ಬ್ರಾಹ್ಮಣನು ತುಲಸೀಕಾಷ್ಠ ಗಳಿಂದ ಮಾಡಿದ ಜಪಮಾಲೆಯನ್ನು ಧರಿಸಿರುವನೊ, ಅವನು ಶೌಚಾಚಾರಗಳಲ್ಲಿ ವಿಧಿಗಳನ್ನನುಸರಿಸದವನಾದರೂ ನನ್ನನ್ನೇ ಹೊಂದುವುದರಲ್ಲಿ ಸಂದೇಹವಿಲ್ಲವು.

೩. ಧಾತ್ರೀಫಲಗಳ ಮಾಲೆಯಾಗಲಿ, ತುಲಸೀಮಾಲೆಯಾಗಲಿ ಯಾವನ ದೇಹದಲ್ಲಿ ಕಾಣುತ್ತಿರುವುದೊ ಅವನೇ ಭಾಗವತನಾದ ಮನುಷ್ಯನೆಂದು ತಿಳಿಯಬೇಕು.

೪. ನನಗೆ ಅತ್ಯಂತ ಪ್ರೀತಿಕರವಾದ ತುಲಸೀದಳಗಳ ಮಾಲೆಯನ್ನು ಯಾವನು ಕೊರಳಿನಲ್ಲಿ ಧರಿಸಿರುವನೊ, ಆತನು ದೇವತೆಗಳಿಂದಲೂ ವಿಶೇಷ ವಾದ ಮರ್ಯಾದೆಯನ್ನು ಹೊಂದಲು ಅರ್ಹನಾದವನು.

ತುಲಸೀದಲಜಾಂ ಮಾಲಾಂ ಧಾತ್ರೀಫಲಕೃತಾಮಪಿ ।
ದದಾತಿ ಪಾಪಿನಾಂ ಮುಕ್ತಿಂ ಕಿಂ ಪುನರ್ಮಮ ಸೇವಿನಾಂ ॥ ೫ ॥
ತುಲಸೀದಲಜಾಂ ಮಾಲಾಂ ಮಮೋತ್ತೀರ್ಣಾಂ ವಹೇತ್ತು ಯಃ ।
ಪತ್ರೇ ಪತ್ರೇಽಶ್ವಮೇಧಾನಾಂ ದಶಾನಾಂ ಲಭತೇ ಫಲಂ ॥ ೬ ॥
ತುಲಸೀಕಾಷ್ಠಸಂಭೂತಾಂ ಯೋ ಮಾಲಾಂ ವಹತೇ ನರಃ ।
ಫಲಂ ಯಚ್ಛಾಮ್ಯಹಂ ವತ್ಸ ಪ್ರತ್ಯಹಂ ದ್ವಾರಕೋದ್ಭವಂ ॥ ೭ ॥
ನಿವೇದ್ಯ ಭಕ್ತ್ಯಾ ತಾಂ ಮಾಲಾಂ ತುಲಸೀಕಾಷ್ಠಸಂಭವಾಂ ।
ವಹತೇ ಯೋ ನರೋ ಭಕ್ತ್ಯಾ ತಸ್ಯ ವೈ ನಾಸ್ತಿ ಪಾತಕಂ ॥ ೮ ॥
ಸದಾ ಪ್ರೀತಮನಾಸ್ತಸ್ಯಾಽಹಂ ಪ್ರಾಣವರೋ ಹಿ ಸಃ ।
ತುಲಸೀಕಾಷ್ಠಸಂಭೂತಾಂ ಯೋ ಮಾಲಾಂ ವಹತೇ ನರಃ ।
ಪ್ರಾಯಶ್ಚಿತ್ತಂ ನ ತಸ್ಯಾಽಸ್ತಿ ನಾಶೌಚಂ ತಸ್ಯ ವಿಗ್ರಹೇ ॥ ೯ ॥
ತುಲಸೀಕಾಷ್ಠಸಂಭೂತಂ ಶಿರಸಃ ಕಾಷ್ಠಭೂಷಣಂ ।
ಬಾಹ್ವೋ ಕರೇ ಚ ಮರ್ತ್ಯಸ್ಯ ದೇಹೇ ಯಸ್ಯ ಸ ಮೇ ಪ್ರಿಯಃ ॥ ೧೦ ॥

೫. ತುಲಸೀದಳಗಳಿಂದಾಗಲಿ ಧಾತ್ರೀಫಲಗಳಿಂದಾಗಲಿ ಮಾಡಿದ ಮಾಲೆಯು ಪಾಪಾತ್ಮರಿಗೂ ಮೋಕ್ಷವನ್ನು ಕೊಡುವುದೆಂದಮೇಲೆ ನನ್ನನ್ನು ಸೇವಿಸುವ ಭಕ್ತರ ವಿಷಯವನ್ನು ಹೇಳುವ ಆವಶ್ಯಕತೆಯೇನು ?

೬. ನನಗೆ ಪರಮಪ್ರಿಯವಾದ ತುಲಸೀದಳಗಳ ಮಾಲೆಯನ್ನು ಯಾವನು ಧರಿಸುವನೊ, ಅವನು ಆ ಮಾಲೆಯ ದಳಗಳ ಪ್ರತಿಯೊಂದು ಪತ್ರದಿಂದಲೂ ಹತ್ತು ಅಶ್ವಮೇಧಯಜ್ಞಗಳ ಫಲವನ್ನು ಹೊಂದುವನು.

೭. ಎಲೈ ಪುತ್ರನೆ! ತುಲಸಿಯ ಕಾಷ್ಠಗಳಿಂದ ಮಾಡಿದ ಮಾಲೆಯನ್ನು ಯಾವನು ಕಂಠದಲ್ಲಿ ಧರಿಸಿರುವನೊ, ಅವನಿಗೆ ಪ್ರತಿದಿನವೂ ನಾನು ದ್ವಾರಕಾ ಕ್ಷೇತ್ರದ ಸೇವೆಯ ಫಲವನ್ನು ಕೊಡುವೆನು.

೮–೯. ತುಲಸೀಕಾಷ್ಠಗಳಿಂದ ಮಾಡಿದ ಮಾಲೆಯನ್ನು ಮೊದಲು ನನಗೆ ಭಕ್ತಿಯಿಂದ ನಿವೇದನಮಾಡಿ ಬಳಿಕ ದೇಹದಲ್ಲಿ ಧರಿಸುವನೊ, ಅವನಿಗೆ ಯಾವ ಪಾಪದ ಲೇಪವೂ ಆಗಲಾರದು. ಆತನಲ್ಲಿ ನಾನು ಯಾವಾಗಲೂ ಸಂತೋಷಗೊಂಡ ಮನಸ್ಸುಳ್ಳವನಾಗಿರುವೆನು. ಯಾವನು ತುಲಸೀಕಾಷ್ಠಮಾಲೆಯನ್ನು ಧರಿಸಿರುವನೊ, ಅವನ ಶರೀರಕ್ಕೆ ಪ್ರಾಯಶ್ಚಿತ್ತಕಾರ್ಯಗಳಾಗಲಿ, ಆಶೌಚಗಳ ಸಂಪರ್ಕಗಳಾಗಲಿ ಎಂದಿಗೂ ಇರಲಾರವು.

೧೦. ಯಾವ ಮಾನವನ ತಲೆಯಲ್ಲಿಯೂ, ಭುಜಗಳಲ್ಲಿಯೂ, ಕೈಗಳಲ್ಲಿಯೂ ದೇಹದಲ್ಲಿಯೂ ತುಲಸೀಕಾಷ್ಠಗಳ ಮಣಿಗಳಿಂದ ಮಾಡಿದ ಆಭರಣಗಳು ಕಂಗೊಳಿಸುತ್ತಿರುವುವೊ, ಅವನೇ ನನಗೆ ಅತ್ಯಂತ ಪ್ರೀತಿಪಾತ್ರನಾಗಿರುವನು.

ತುಲಸೀಕಾಷ್ಠಮಾಲಾಭಿರ್ಭೂಷಿತಃ ಪುಣ್ಯಮಾಚೇರೇತ್ ।
ಪಿತ್ರೂಣಾಂ ದೇವತಾನಾಂ ಚ ಪುಣ್ಯಂ ಕೋಟಿಗುಣಂ ಭವೇತ್ ॥ ೧೧ ॥
ತುಲಸೀಕಾಷ್ಠಮಾಲಾಂ ತು ಪ್ರೇತರಾಜಸ್ಯ ದೂತಕಾಃ ।
ದೃಷ್ಟ್ವಾ ನಶ್ಯಂತಿ ದೂರೇಣ ವಾತೋದ್ಧೂತಂ ಯಥಾ ದಲಂ ॥ ೧೨ ॥
ಯದ್ಗೃಹೇ ತುಲಸೀಕಾಷ್ಠಂ ಪತ್ರಂ ಶುಷ್ಕಮಥಾರ್ದ್ರಕಂ ।
ಭವಂತಿ ತದ್ಗೃಹೇನ್ನೈವ ಪಾಪಂ ಸಂಕ್ರಮತೇ ಕಲೌ ॥ ೧೩ ॥
ತುಲಸೀಕಾಷ್ಠಮಾಲಾಭಿರ್ಭೂಷಿತೋ ಭ್ರಮತೇ ಭುವಿ ।
ದುಃಸ್ವಪ್ನಂ ದುರ್ನಿಮಿತ್ತಂ ಚ ನ ಭಯಂ ಶಾತ್ರವಂ ಕ್ವಚಿತ್ ॥ ೧೪ ॥
ಧಾರಯಂತಿ ನ ಯೇ ಮಾಲಾಂ ಹೈತುಕಾಃ ಪಾಪಬುದ್ಧಯಃ ।
ನರಕಾನ್ನ ನಿವರ್ತಂತೇ ದಗ್ಧಾಃ ಕೋಪಾಗ್ನಿನಾ ಮಮ ॥ ೧೫ ॥
ತಸ್ಮಾದ್ಧಾರ್ಯಾ ಪ್ರಯತ್ನೇನ ಮಾಲಾ ತುಲಸಿಸಂಭವಾ ।
ಪದ್ಮಾಕ್ಷನಿರ್ಮಿತಾ ಭಕ್ತ್ಯಾ ಫಲೈರ್ಧಾತ್ರ್ಯಾ ಸಪುಣ್ಯದಾ ॥ ೧೬ ॥

---

೧೧. ತುಲಸೀಮಣಿಗಳ ಮಾಲೆಯಿಂದ ದೇಹವನ್ನು ಅಲಂಕರಿಸಿಕೊಂಡು ಯಾವನು ಸತ್ಕರ್ಮಗಳನ್ನು ಮಾಡುವನೊ, ಅವನ ಕಾರ್ಯವು ಪಿತೃಗಳಿಗೂ ದೇವತೆಗಳಿಗೂ ಕೋಟಿಗುಣಿತವಾದ ಫಲವನ್ನುಂಟುಮಾಡುವುದು.

೧೨. ಮನುಷ್ಯನ ದೇಹದಲ್ಲಿರುವ ತುಲಸೀಕಾಷ್ಠಮಣಿಗಳ ಮಾಲೆಯನ್ನು ಕಂಡು ಯಮದೂತರು ಬಿರುಗಾಳಿಯಿಂದ ದೂರಕ್ಕೊಗೆಯಲ್ಪಟ್ಟ ತರಗೆಲೆಯಂತೆ ನಾಶವನ್ನು ಹೊಂದುವರು.

೧೩. ಯಾವ ಮನೆಯಲ್ಲಿ ತುಲಸೀಕಾಷ್ಠವೂ, ಹಸಿಯ ಅಥವ ಒಣಗಿದ ತುಲಸಿಯ ದಳವೂ ಇರುವುವೊ, ಆ ಮನೆಯಲ್ಲಿ ಈ ಕಲಿಯುಗದಲ್ಲಿಯೂ ಪಾಪಗಳೂ ಉಂಟಾಗಲಾರವು; ಹೊರಗಿನಿಂದ ಹೊಗಲೂ ಆರವು.

೧೪. ತುಲಸೀಮಣಿಗಳ ಮಾಲೆಯನ್ನು ಕಂಠದಲ್ಲಿ ಧರಿಸಿಕೊಂಡು ಭೂಮಿಯಲ್ಲಿ ಸಂಚರಿಸುವವನಿಗೆ ಕೆಟ್ಟ ಸ್ವಪ್ನಗಳಾಗಲಿ ದುಶ್ಶಕುನಗಳಾಗಲಿ ಶತ್ರುಗಳಿಂದ ಭಯವಾಗಲಿ ಎಂದಿಗೂ ಸಂಭವಿಸಲಾರದು.

೧೫. ಯಾವ ಪಾಪಬುದ್ಧಿಗಳು ಹೇತುವಾದಗಳನ್ನವಲಂಬಿಸಿ ತುಲಸೀಮಾಲೆಗಳನ್ನು ದೇಹಗಳಲ್ಲಿ ಧಾರಣೆಮಾಡುವುದಿಲ್ಲವೊ, ಅವರು ನನ್ನ ಕೋಪವೆಂಬ ಬೆಂಕಿಗೆ ಆಹುತಿಗಳಾಗಿ ನರಕದಲ್ಲಿ ಬಿದ್ದು ಎಂದಿಗೂ ಉದ್ಧೃತರಾಗುವುದಿಲ್ಲವು.

೧೬. ಆದುದರಿಂದ ತುಲಸೀಕಾಷ್ಠಗಳಿಂದಾಗಲಿ, ಪದ್ಮಾಕ್ಷಗಳಿಂದಾಗಲಿ, ಧಾತ್ರೀಫಲಗಳಿಂದಾಗಲಿ ಮಾಡಿದ ಮಂಗಳಪ್ರದಗಳಾದ ಜಪಮಾಲೆಗಳನ್ನು ಭಕ್ತಿಯಿಂದ ಧರಿಸಬೇಕು.

ತದೂರ್ಧ್ವಪುಂಡ್ರಶಂಖಾದ್ಯೈರ್ಯುಕ್ತಸ್ತುಲಸಿಮೂಲಕೇ ।
ಸಂಧ್ಯೋಪಾಸ್ತ್ಯಾದಿಕಂ ಕುರ್ಯಾತ್ ಕುಶಪಾಣಿರ್ಹಿ ಮಾಂ ಸ್ಮರನ್॥೧೭॥
ಕೃತಸಂಧ್ಯಾದಿಕೋ ಭಕ್ತಸ್ತತಃ ಸಂಪೂಜಯೇಚ್ಚ ಮಾಂ ।
ಗುರುಶ್ಚೇತ್ತತ್ರ ವರ್ತೇತ ಆದೌ ಗತ್ವಾ ನಮೇದ್ಗುರುಂ ॥ ೧೮ ॥
ಕಿಂಚಿದ್ದತ್ವೋಪಾಯನಂ ಚ ದಂಡವತ್ಪ್ರಣಮೇನ್ಮುದಾ ।
ಆಚಮ್ಯೈಕಾಗ್ರಮನಸಾ ಪೂಜಾಮಂಡಪಮಾವಿಶೇತ್ ॥ ೧೯ ॥
ಉಪವಿಶ್ಯಾಸನೇ ರಮ್ಯೇ ಕೃಷ್ಣಾಜಿನಕುಶೋತ್ತರೇ ।
ಸಮ್ಯಕ್ಪದ್ಮಾಸನಾಸೀನೋ ಭೂತಶುದ್ಧಿಂ ಸಮಾಚರೇತ್ ॥ ೨೦ ॥
ಪ್ರಾಣಾಯಾಮತ್ರಯಂ ಕೃತ್ವಾ ಮಂತ್ರೇಣ ಚ ಜಿತೇಂದ್ರಿಯಃ ।
ಉದಙ್ಮುಖಸ್ತತಃ ಕೃತ್ವಾ ಹೃತ್ಪಂಕಜಮನುತ್ತಮಂ ।
ವಿಕಾಸಂ ತಸ್ಯ ಕುರ್ವೀತ ವಿಜ್ಞಾನರವಿಣಾ ಹೃದಿ ॥ ೨೧ ॥
ಕರ್ಣಿಕಾಯಾಂ ನ್ಯಸೇತ್ಸೂರ್ಯಂ ಶಶಿನಂ ಚಾಗ್ನಿಮೇವಚ ।
ತ್ರಯಂ ತ್ರಯಾತ್ಮಕೇ ತಸ್ಮಿಶ್ಚಿಂತಯೇದ್ವೈಷ್ಣವೋ ನರಃ ।
ನಾನಾರತ್ನಮಯಂ ಪೀಠಂ ತೇಷಾಮುಪರಿ ವಿನ್ಯಸೇತ್ ॥ ೨೨ ॥

---

೧೭. ಆ ಮಾಲೆಗಳಿಂದಲೂ, ಊರ್ಧ್ವಪುಂಡ್ರಗಳಿಂದಲೂ, ಶಂಖಚಕ್ರಾದ್ಯಾಯುಧಮುದ್ರೆಗಳಿಂದಲೂ, ಕೂಡಿದವನಾಗಿ ತುಲಸೀವೃಕ್ಷದ ಮೂಲದಲ್ಲಿ ಕುಳಿತು ಕುಶದ ಪವಿತ್ರವನ್ನು ಕೈಯಲ್ಲಿಟ್ಟುಕೊಂಡು ನನ್ನನ್ನೇ ಸ್ಮರಿಸುತ್ತ ಸಂಧ್ಯಾವಂದನಾದಿ ಕಾರ್ಯಗಳನ್ನು ಮಾಡಬೇಕು.

೧೮. ಸಂಧ್ಯಾದಿಕಾರ್ಯಗಳನ್ನು ಮಾಡಿದ ಮೇಲೆ ಭಗವದ್ಭಕ್ತನಾದವನು ನನ್ನ ಅರ್ಚನೆಯನ್ನು ಮಾಡಬೇಕು. ಗುರುವಿನ ಸಮೀಪದಲ್ಲಿರುವವನಾದರೆ ಆತನಲ್ಲಿಗೆ ಹೋಗಿ ನಮಸ್ಕಾರವನ್ನು ಮಾಡಬೇಕು.

೧೯. ಆತನಿಗೆ ಏನನ್ನಾದರೂ ಉಪಾಯನವನ್ನಾಗಿ ಸಮರ್ಪಿಸಿ ಸಂತೋಷದಿಂದ ಸಾಷ್ಟಾಂಗಪ್ರಣಾಮವನ್ನುಮಾಡಿ ಮರಳಿ ಬಂದು ಶುದ್ಧಾಚನವನ್ನು ಮಾಡಿ ಏಕಾಗ್ರಚಿತ್ತದಿಂದ ಪೂಜಾಗೃಹವನ್ನು ಪ್ರವೇಶಿಸಬೇಕು.

೨೦. ಕುಶಾಸ್ತರಣದ ಮೇಲೆ ಹಾಸಿರುವ ಕೃಷ್ಣಾಜಿನದ ಮನೋಹರವಾದ ಆಸನದಲ್ಲಿ ಕುಳಿತುಕೊಂಡು ಚೆನ್ನಾಗಿ ಪದ್ಮಾಸನವನ್ನು ಹಾಕಿ ಮೊದಲು ಭೂತಶುದ್ಧಿಯನ್ನು ಮಾಡಿಕೊಳ್ಳಬೇಕು.

೨೧. ಬಳಿಕ ಗಾಯತ್ರೀಮಂತ್ರಸಹಿತವಾಗಿ ಮೂರು ಪ್ರಾಣಾಯಾಮಗಳನ್ನು ಮಾಡಿ ಜಿತೇಂದ್ರಿಯನಾಗಿ ಉತ್ತರಾಭಿಮುಖನಾಗಿ ಕುಳಿತುಕೊಂಡು ಉತ್ತಮೋತ್ತಮವಾದ ಹೃದಯ ಕಮಲವನ್ನು ಅಲ್ಲಿಯೇ ನೆಲಸಿರುವ ವಿಜ್ಞಾನವೆಂಬ ಸೂರ್ಯನ ರಶ್ಮಿಗಳಿಂದ ವಿಕಾಸವಾಗುವಂತೆ ಮಾಡಬೇಕು.

೨೨. ಆ ಹೃದಯಪದ್ಮದ ಮಧ್ಯದ ಕರ್ಣಿಕಾರದಲ್ಲಿ ಸೂರ್ಯನನ್ನೂ,

**ತಸ್ಮಿನ್ಮೃದುಶ್ಲಕ್ಷ್ಣತರಂ ಬಾಲಾರ್ಕಸದೃಶದ್ಯುತಿಂ ।**
**ಅಷ್ಟೈಶ್ವರ್ಯದಲಂ ಪದ್ಮಂ ಮಂತ್ರಾಕ್ಷರಕಂ ನ್ಯಸೇತ್ ॥ ೨೩ ॥**
**ತಸ್ಮಿನ್ದೇವಂ ಸಮಾಸೀನಂ ಕೋಟಿಶೀತಾಂಶುಸನ್ನಿಭಂ ।**
**ಚತುರ್ಭುಜಂ ಮಹಾಪದ್ಮಶಂಖಚಕ್ರಗದಾಧರಂ ॥ ೨೪ ॥**
**ಪದ್ಮಪತ್ರವಿಶಾಲಾಕ್ಷಂ ಸರ್ವಲಕ್ಷಣಲಕ್ಷಿತಂ ।**
**ಶ್ರೀವತ್ಸಕೌಸ್ತುಭೋರಸ್ಕಂ ಪೀತವಸ್ತ್ರಾನ್ವಿತಂ ಚ ಮಾಂ ॥ ೨೫ ॥**
**ವಿಚಿತ್ರಾಭರಣೈರ್ಯುಕ್ತಂ ದಿವ್ಯಮಂಡನಮಂಡಿತಂ ।**
**ದಿವ್ಯಚಂದನಲಿಪ್ತಾಂಗಂ ದಿವ್ಯಪುಷ್ಪೋಪಶೋಭಿತಂ ॥ ೨೬ ॥**
**ತುಲಸೀಕೋಮಲದಲವನಮಾಲಾವಿಭೂಷಿತಂ ।**
**ಕೋಟಿಬಾಲಾರ್ಕಸದೃಶಂ ಕಾಂತಂ ದಿವ್ಯಶ್ರಿಯಾ ಸಹ ॥ ೨೭ ॥**
**ಸರ್ವಲಕ್ಷಣಲಕ್ಷಿಣ್ಯಾ ಸಮಾಶ್ಲಿಷ್ಟತನುಂ ಶಿವಂ ।**
**ಏವಂ ಧ್ಯಾತ್ವಾ ಜಪೇನ್ಮಂತ್ರಂ ಸಮಾಹಿತಮನಾಃ ಶುಚಿಃ ॥ ೨೮ ॥**

---

ಚಂದ್ರನನ್ನೂ, ಅಗ್ನಿಯನ್ನೂ ಆವಾಹನೆಮಾಡಬೇಕು. ವಿಷ್ಣುಭಕ್ತನಾದ ಮನುಷ್ಯನು ತ್ರಿಗುಣಾತ್ಮಕವಾದ ಆ ಪದ್ಮದಲ್ಲಿ ಈ ಮೂವರನ್ನೂ ಚಿಂತನೆ ಮಾಡಬೇಕು. ಅವರ ಮೇಲೆ ನವರತ್ನ ಖಚಿತವಾದ ಉತ್ತಮ ಪೀಠವನ್ನು ಧ್ಯಾನಿಸಬೇಕು.

೨೩. ಆ ಪೀಠದಲ್ಲಿ ಮೃದುವೂ, ಮನೋಹರವೂ, ಬೆಳಗಿನ ಸೂರ್ಯನನ್ನು ಹೋಲುವ ಹೊಂಬಣ್ಣವುಳ್ಳದೂ, ಅಷ್ಟೈಶ್ವರ್ಯಗಳೆಂಬ ಅಷ್ಟದಳಗಳಿಂದ ಕೂಡಿದುದೂ, ಅಷ್ಟಾಕ್ಷರಮಂತ್ರ ಸಹಿತವೂ ಆದ ಶ್ರೀಪದ್ಮವನ್ನು ಭಾವಿಸಬೇಕು.

೨೪–೨೮. ಆ ಪದ್ಮಾಸನದಲ್ಲಿ ಕುಳಿತಿರುವ ನನ್ನ ಮೂರ್ತಿಯನ್ನು ಬಳಿಕ ಧ್ಯಾನಮಾಡಬೇಕು. ಕೋಟಿ ಚಂದ್ರರಿಗೆ ಸಮಾನನಾಗಿ, ನಾಲ್ಕು ಭುಜಗಳುಳ್ಳವನಾಗಿ, ಶಂಖಚಕ್ರಗದಾಪದ್ಮಗಳನ್ನು ಕೈಗಳಲ್ಲಿ ಧರಿಸಿದವನಾಗಿ, ತಾವರೆಹೂವಿನ ದಳಗಳಂತೆ ವಿಶಾಲಗಳಾದ ನೇತ್ರಗಳುಳ್ಳವನಾಗಿ, ಸಕಲ ಶುಭಲಕ್ಷಣಗಳಿಂದ ಯುಕ್ತವಾದ ರೂಪಸಹಿತನೂ, ಶ್ರೀವತ್ಸಚಿಹ್ನೆಯಿಂದಲೂ ಕೌಸ್ತುಭಮಣಿಯಿಂದಲೂ ಶೋಭಿಸುವ ಎದೆಯುಳ್ಳವನೂ, ಪೀತಾಂಬರಧಾರಿಯೂ, ವಿಚಿತ್ರಾಭರಣಗಳಿಂದ ಕೂಡಿ ದಿವ್ಯಾಲಂಕಾರಗಳಿಂದ ಮಂಡಿತನಾದವನೂ, ದಿವ್ಯಚಂದನದಿಂದ ಅನುಲೇಪಿತವಾದ ದೇಹವುಳ್ಳವನೂ, ಸ್ವರ್ಗಲೋಕದ ಪಾರಿಜಾತಾದಿ ಪುಷ್ಪಗಳಿಂದ ರಂಜಿಸುವವನೂ, ತುಲಸಿಯ ಎಳೆಯ ದಳಗಳಿಂದ ನಿರ್ಮಿತವಾದ ವನಮಾಲಾವಿಭೂಷಿತನೂ, ಒಂದುಕೋಟಿ ಬಾಲಸೂರ್ಯರ ಕಾಂತಿಯಿಂದ ಮನೋಹರನಾದವನೂ, ಸಕಲ ಲಕ್ಷಣ ಲಕ್ಷಿತೆಯಾದ ಲಕ್ಷ್ಮೀದೇವಿಯಿಂದ

ಸಹಸ್ರಂ ಶತವಾರಂ ವಾ ಯಥಾಶಕ್ತಿ ಜಪೇನ್ಮನುಂ ।
ಮನಸ್ಯೈವಾರ್ಚನಂ ಕೃತ್ವಾ ತತೋ ವಿಧಿವದಾಚರೇತ್ ॥ ೨೯ ॥
ಸಂಪ್ರದಾಯಾನುರೋಧೇನ ಶಂಖಂ ಸ್ಥಾಪ್ಯ ಮಮಾಗ್ರತಃ ।
ದೂರ್ವಾಂಕುರೈಶ್ಚ ಪುಷ್ಪೈಶ್ಚ ಗಂಧೋದೇನ ಚ ಪೂರಿತಂ ॥ ೩೦ ॥
ದಕ್ಷಿಣೇ ಗಂಧಪುಷ್ಪಾಣಾಂ ಪಾತ್ರಂ ಸ್ಥಾಪ್ಯಂ ಚ ದೇಶಿಕೈಃ ।
ವಾಮಭಾಗೇ ನ್ಯಸೇತ್ಕುಂಭಂ ವಸ್ತ್ರಪೂತಂ ಸುವಾಸಿತಂ ॥ ೩೧ ॥
ಪುರತೋ ಮಮ ಘಂಟಾಂಚ ದಿಕ್ಷು ದೀಪಾನ್ನಿಯೋಜಯೇತ್ ।
ಅನ್ಯತ್ಸರ್ವಂ ಸಾಧನಂ ಚ ಯಥಾ ಸ್ಥಾನೇಷು ವಿನ್ಯಸೇತ್ ॥ ೩೨ ॥
ಅರ್ಘ್ಯಪಾದ್ಯಾಚಮನೀಯಮಧುಪರ್ಕಸ್ಯ ಕಾರಣಾತ್ ।
ವಿನ್ಯಸೇತ್ಪುರತೋ ಮಹ್ಯಂ ಚತ್ವಾರ್ಯಮತ್ರಕಾಣಿ ವೈ ॥ ೩೩ ॥
ಸಿದ್ಧಾರ್ಥಾಕ್ಷತಪುಷ್ಪಾಣಿ ಕುಶಾಗ್ರಂ ತಿಲಚಂದನಂ ।
ಫಲಂ ಯವಾಶ್ಚತುರ್ವಕ್ತ್ರ ಅರ್ಘ್ಯಪಾತ್ರೇ ವಿನಿಃಕ್ಷಿಪೇತ್ ॥ ೩೪ ॥

---

ಆಲಿಂಗಿತವಾದ ದೇಹವುಳ್ಳವನೂ ಆದ ನನ್ನ ರೂಪವನ್ನು ಧ್ಯಾನಮಾಡಿ ಶುಚಿಯಾಗಿ ಸಮಾಧಿಸ್ಥಿತವಾದ ಮನಸ್ಸಿನಿಂದ ಅಷ್ಟಾಕ್ಷರೀಮಂತ್ರವನ್ನು ಜಪಿಸಬೇಕು.

೨೯–೩೧. ಈ ಜಪವನ್ನು ಸಾವಿರಬಾರಿಯಾಗಲಿ, ನೂರು ಬಾರಿಯಾಗಲಿ ಶಕ್ತ್ಯನುಸಾರವಾಗಿ ಮಾಡಬೇಕು. ಇಂತು ಮನಸ್ಸಿನಲ್ಲಿಯೇ ಮೊದಲು ಪೂಜೆಯನ್ನು ಮಾಡಿ ಬಳಿಕ ಬಾಹ್ಯಪೂಜೆಯನ್ನು ವಿಧ್ಯುಕ್ತರೀತಿಯಿಂದ ನೆರವೇರಿಸಬೇಕು. ಪ್ರತಿಯೊಬ್ಬ ಭಕ್ತನೂ ತನ್ನ ಮನೆತನದ ಸಂಪ್ರದಾಯವನ್ನನುಸರಿಸಿ ದೂರ್ವಾದಳಗಳಿಂದಲೂ, ಪುಷ್ಪಗಳಿಂದಲೂ, ಗಂಧೋದಕದಿಂದಲೂ ತುಂಬಿದ ಶಂಖವನ್ನು ನನ್ನ ಇದಿರಿನಲ್ಲಿ ಸ್ಥಾಪಿಸಿ ಬಲಗಡೆಯಲ್ಲಿ ಪೂಜಕನು ಗಂಧಪುಷ್ಪಾದಿಗಳಿಂದೊಡಗೂಡಿದ ಪಾತ್ರೆಯನ್ನು ಸ್ಥಾಪಿಸಬೇಕು. ಎಡಭಾಗದಲ್ಲಿ ವಸ್ತ್ರಾಲಂಕೃತವಾಗಿ ಧೂಪವಾಸಿತವಾದ ಕುಂಭವೊಂದನ್ನು ನೆಲೆಗೊಳಿಸಬೇಕು.

೩೨. ನನ್ನ ಮುಂದೆಯೇ ಘಂಟೆಯನ್ನೂ ಎಂಟು ದಿಕ್ಕುಗಳಲ್ಲಿ ದೀಪಗಳನ್ನೂ ವಿಸ್ತರಿಸಬೇಕು. ಇತರ ಸಾಧನಸಾಮಗ್ರಿಗಳೆಲ್ಲವನ್ನೂ ತಮ್ಮ ತಮ್ಮ ಸ್ಥಾನಗಳಲ್ಲಿ ವಿನ್ಯಾಸಮಾಡಬೇಕು.

೩೩. ಅರ್ಘ್ಯ, ಪಾದ್ಯ, ಆಚಮನೀಯ ಮತ್ತು ಮಧುಪರ್ಕಗಳಿಗೋಸ್ಕರ ನನ್ನ ಮುಂದೆ ನಾಲ್ಕು ಪಾತ್ರೆಗಳನ್ನು ಸಿದ್ಧಗೊಳಿಸಬೇಕು.

೩೪. ಎಲೈ ಪದ್ಮಾಸನನೆ! ಬಿಳಿಯ ಸಾಸುವೆ, ಅಕ್ಷತೆ, ಪುಷ್ಪಗಳು, ಕುಶಾಗ್ರಗಳು, ಎಳ್ಳು, ಚಂದನ, ಫಲಗಳು ಮತ್ತು ಅಕ್ಕಿಗಳೆಂಬ ಎಂಟು ದ್ರವ್ಯಗಳನ್ನು ಅರ್ಘ್ಯಪಾತ್ರೆಯಲ್ಲಿ ಹಾಕಿರಬೇಕು.

ದೂರ್ವಾ ವಿಷ್ಣುಪದೀ ಶ್ಯಾಮಾ ಪದ್ಮಂ ಚೈವ ಚತುರ್ಥಕಂ ।
ಪಾದ್ಯಪಾತ್ರೇ ನ್ಯಸೇತ್ಪುತ್ರ ದೇಶಿಕೋ ಮಮ ತುಷ್ಟಯೇ ॥ ೩೫ ॥
ಕಂಕೋಲಂ ಚ ಲವಂಗಂ ಚ ಫಲಮಾಲತಿಸಂಭವಂ ।
ಕುರ್ಯಾದ್ವೈ ಶ್ರದ್ಧಯಾ ಪುತ್ರ ಪಾತ್ರ ಆಚಮನೀಯಕೇ ॥ ೩೬ ॥
ಗವ್ಯಂ ಪಯೋದಧಿಮಧುಘೃತಂ ಖಂಡಸಮನ್ವಿತಂ ।
ಮಧುಪರ್ಕಸ್ಯ ಪಾತ್ರೇ ವೈ ದದ್ಯಾದ್ವೈ ಶ್ರದ್ಧಯಾರ್ಚಕಃ ॥ ೩೭ ॥
ಉಕ್ತಾನಾಂ ದ್ರವ್ಯಜಾತೀನಾಮಲಾಭೇ ಪತ್ರಪುಷ್ಪಯೋಃ ।
ತತ್ತದ್ಭಾವನಯಾ ಕುರ್ಯಾತ್ಸರ್ವದಾ ವಿಧಿಕೋವಿದಃ ॥ ೩೮ ॥
ಕರನ್ಯಾಸಂ ತತಃ ಕುರ್ಯಾದಂಗನ್ಯಾಸಂ ತಥೈವಚ ।
ಪಂಚಾಂಗಂ ವಾ ಷಡಂಗಂ ವಾ ವಿನ್ಯಸೇತ್ಸಂಪ್ರದಾಯತಃ ॥ ೩೯ ॥
ಮಮಾನುಸ್ಮರಣಂ ಕಾರ್ಯಮಾತ್ಮಾನಂ ಮತ್ಸಮಂ ಸ್ಮರೇತ್ ।
ಪೂಜಾರಂಭೇ ಚತುರ್ವಕ್ತ್ರ ಮಂಗಲಂ ತು ಪಠೇನ್ನರಃ ॥ ೪೦ ॥

೩೫. ಗರಿಕೆ, ಗಂಗೋದಕ, ಅರಿಸಿನ ಮತ್ತು ನಾಲ್ಕನೆಯದಾಗಿ ಕಮಲ— ಇವುಗಳನ್ನು ಪ್ರಾಜ್ಞನಾದವನು ನನಗೆ ಸಂತೋಷವನ್ನುಂಟುಮಾಡುವುದಕ್ಕಾಗಿ ಪಾದ್ಯಪಾತ್ರೆಯಲ್ಲಿ ಸೇರಿಸಿಡಬೇಕು.

೩೬. ಎಲೈ ಪುತ್ರನೆ! ಆಚಮನಕ್ಕೆ ತೆಗೆದಿಟ್ಟ ಪಾತ್ರೆಯಲ್ಲಿ ಕಂಕೋಲ, ಲವಂಗ ಮತ್ತು ಜಾಯಿಕಾಯಿಗಳನ್ನು ಶ್ರದ್ಧೆಯಿಂದ ಒದಗಿಸಬೇಕು.

೩೭. ದೇವತಾರ್ಚನೆಯಲ್ಲಿ ನಿರತನಾದವನು ಮಧುಪರ್ಕದ ಪಾತ್ರೆಯಲ್ಲಿ ಶ್ರದ್ಧೆಯಿಂದ ಆಕಳಿನ ಹಾಲು, ಮೊಸರು, ತುಪ್ಪಗಳನ್ನೂ, ಜೇನುತುಪ್ಪವನ್ನೂ, ಕಲ್ಲುಸಕ್ಕರೆಯನ್ನೂ ಶೇಖರಿಸಿಡಬೇಕು.

೩೮. ಮೇಲೆ ಹೇಳಿದ ಪದಾರ್ಥಗಳಲ್ಲಿ ಎಲ್ಲವಾಗಲಿ ಕೆಲವಾಗಲಿ ಲಭಿಸದಿದ್ದರೆ ವಿಧಿಯನ್ನರಿತ ಪ್ರಾಜ್ಞನು ಕೇವಲ ಪತ್ರಗಳನ್ನಾಗಲಿ ಪುಷ್ಪಗಳನ್ನಾಗಲಿ ಆ ಪದಾರ್ಥಗಳೆಂದೇ ಭಾವಿಸಿ ಆ ಆ ಪಾತ್ರೆಗಳನ್ನು ಪೂರ್ತಿಗೊಳಿಸಬೇಕು.

೩೯. ಬಳಿಕ ಸುಖಾಸನದಲ್ಲಿ ಕುಳಿತು ಅಂಗನ್ಯಾಸ ಕರನ್ಯಾಸಗಳನ್ನು ಸಂಪ್ರದಾಯವನ್ನನುಸರಿಸಿ ಪಂಚಾಂಗ ಅಥವಾ ಷಡಂಗಸಹಿತವಾದುದನ್ನಾಗಿ ಮಾಡಬೇಕು.

೪೦. ಬಳಿಕ ನನ್ನ ಸ್ಮರಣೆಯನ್ನು ಮಾಡಬೇಕು. ತನ್ನ ಆತ್ಮವನ್ನು ನನ್ನ ಸಮಾನವಾದುದನ್ನಾಗಿ ಚಿಂತನೆಮಾಡಬೇಕು. ಎಲೈ ಚತುರಾನನೆ! ಪೂಜೆಯನ್ನು ಪ್ರಾರಂಭಿಸುವ ಸಮಯದಲ್ಲಿ ಅದರ ನಿರ್ವಿಘ್ನಪರಿಸಮಾಪ್ತಿಗೋಸ್ಕರ ಮಂಗಳ ಶ್ಲೋಕಗಳನ್ನು ಪಠಿಸಬೇಕು.

ಅಥ ಸಂಪೂಜಯೇಚ್ಛಂಖಂ ಪಾಂಚಜನ್ಯಂ ಮಮ ಪ್ರಿಯಂ ।
ಯಸ್ಯ ಸಂಪೂಜನಾದ್ವತ್ಸ ಆನಂದಃ ಪರಮೋ ಮಮ ।
ಶಂಖಸ್ಯ ಪೂಜನೇ ವತ್ಸ ಮಂತ್ರಾನೇತಾನುದೀರಯೇತ್ ॥ ೪೧ ॥
ತ್ವಂ ಪುರಾ ಸಾಗರೋತ್ಪನ್ನೋ ವಿಷ್ಣುನಾ ವಿಧೃತಃ ಕರೇ ।
ನಿರ್ಮಿತಸ್ಸರ್ವದೇವೈಶ್ಚ ಪಾಂಚಜನ್ಯ ನಮೋಽಸ್ತು ತೇ ॥ ೪೨ ॥
ತವ ನಾದೇನ ಜೀಮೂತಾ ವಿತ್ರಸಂತಿ ಸುರಾಽಸುರಾಃ ।
ಶಶಾಂಕಾಯುತದೀಪ್ತಾಭ ಪಾಂಚಜನ್ಯ ನಮೋಽಸ್ತು ತೇ ॥ ೪೩ ॥
ಗರ್ಭಾ ದೇವಾರಿನಾರೀಣಾಂ ವಿಲೀಯಂತೇ ಸಹಸ್ರಧಾ ।
ತವ ನಾದೇನ ಪಾತಾಲೇ ಪಾಂಚಜನ್ಯ ನಮೋಽಸ್ತು ತೇ ॥ ೪೪ ॥
ದರ್ಶನೇನೈವ ಶಂಖಸ್ಯ ಕಿಂ ಪುನಃ ಸ್ಪರ್ಶನೇ ಕೃತೇ ।
ವಿಲಯಂ ಯಾಂತಿ ಪಾಪಾನಿ ಹಿಮವದ್ಭಾಸ್ಕರೋದಯೇ ॥ ೪೫ ॥
ನತ್ವಾ ಶಂಖಂ ಕರೇ ಧೃತ್ವಾ ಮಂತ್ರೈರೇಭಿಸ್ತು ವೈಷ್ಣವಃ ।
ಯಃ ಸ್ನಾಪಯತಿ ಮಾಂ ಭಕ್ತ್ಯಾ ತಸ್ಯ ಪುಣ್ಯಮನಂತಕಂ ॥ ೪೬ ॥

೪೧. ಪ್ರಿಯ ಬಾಲಕನಾದ ಬ್ರಹ್ಮದೇವನೆ! ಆ ಬಳಿಕ ನನಗೆ ಪ್ರಿಯವಾದ ಪಾಂಚಜನ್ಯವೆಂಬ ಶಂಖವನ್ನು ಪೂಜೆಮಾಡಬೇಕು. ಅದನ್ನು ಪೂಜಿಸುವುದರಿಂದ ಭಕ್ತನಲ್ಲಿ ನನಗೆ ಪರಮಸಂತೋಷವುಂಟಾಗುವುದು. ಆ ಶಂಖವನ್ನು ಪೂಜಿಸುವ ವೇಳೆಯಲ್ಲಿ ಮುಂದೆ ಹೇಳುವ ಮಂತ್ರಗಳನ್ನುಚ್ಚರಿಸಬೇಕು.

೪೨. "ಎಲೈ ಶಂಖವೇ! ನೀನು ಮೊದಲು ಸಮುದ್ರದಲ್ಲಿ ಉದ್ಭವಿಸಿ ಮಹಾ ವಿಷ್ಣುವಿನಿಂದ ಕೈಯಲ್ಲಿ ಧರಿಸಲ್ಪಟ್ಟಿರುವೆ. ಸಕಲ ದೇವತೆಗಳಿಂದಲೂ ನಿರ್ಮಿತವಾಗಿರುವ ಪಾಂಚಜನ್ಯವೆಂಬ ನಿನಗೆ ನಮಸ್ಕರಿಸುವೆನು!

೪೩. ನಿನ್ನ ಧ್ವನಿಯ ಆರ್ಭಟಕ್ಕೆ ಪರ್ವತಗಳೂ, ದೇವತೆಗಳೂ, ದೈತ್ಯರೂ ನಡುಗುವರು. ಹತ್ತು ಸಾವಿರ ಚಂದ್ರರ ತೇಜಸ್ಸಿನಿಂದ ಹೊಳೆಯುವ ಓ ಪಾಂಚಜನ್ಯವೆ! ನಿನಗೆ ನಮಸ್ಕಾರವನ್ನು ಮಾಡುವೆನು.

೪೪. ನಿನ್ನ ಭಯಂಕರ ನಾದದಿಂದ ಪಾತಾಲ ಲೋಕದಲ್ಲಿರುವ ರಾಕ್ಷಸ ಸ್ತ್ರೀಯರ ಗರ್ಭಗಳು ಸಹ ಸಾವಿರ ಪಾಲುಗಳಾಗಿ ನಾಶವಾಗುವುವು. ಅಂತಹ ಮಹಿಮೆಯುಳ್ಳ ಪಾಂಚಜನ್ಯವೆಂಬ ನಿನಗೆ ನಮಸ್ಕಾರವು!

೪೫. ಸೂರ್ಯನು ಉದಯಿಸಿದ ಮಾತ್ರದಿಂದಲೇ ದಿಕ್ಕೆಟ್ಟು ಮಾಯ ವಾಗುವ ಮಂಜಿನಂತೆ ನಿನ್ನ ದರ್ಶನದಿಂದಲೇ ಸಕಲ ಪಾಪಗಳೂ ಲಯವನ್ನು ಹೊಂದುವುವು. ಇನ್ನು ಸ್ಪರ್ಶದಿಂದ ಲಭಿಸುವುದನ್ನು ಹೇಳಬೇಕೆ?"

೪೬. ಈ ಮಂತ್ರಗಳನ್ನು ಜಪಿಸುತ್ತ ಶಂಖವನ್ನು ಕೈಗೆ ತೆಗೆದುಕೊಂಡು

**ಸುವಾಸಿತೇನ ತೈಲೇನ ಕುರ್ಯಾದಭ್ಯಂಜನಂ ತತಃ ।**
**ಕಸ್ತೂರ್ಯಾ ಚಂದನೇನೈವ ಕುರ್ಯಾದುದ್ವರ್ತನಾದಿಕಂ ॥ ೪೭ ॥**
**ಸುಗಂಧವಾಸಿತೈಸ್ತೋಯೈಃ ಸ್ನಾಪ್ಯ ಮಂತ್ರಯುತೈಶ್ಶುಭೈಃ ।**
**ಅರ್ಘ್ಯಂ ದತ್ವಾ ತತೋ ವತ್ಸ ಪಾದ್ಯಮಾಚಮನೀಯಕಂ ।**
**ಮಧುಪರ್ಕಂ ತತೋ ದದ್ಯಾದಥ ಸರ್ವೋಪಚಾರಕಾನ್ ॥ ೪೮ ॥**
**ವಸ್ತ್ರೈರಾಭರಣೈರ್ದಿವ್ಯೈರಲಂಕೃತ್ಯ ಯಥಾವಿಧಿ ।**
**ಪುಷ್ಪೈಸ್ಸಂಪೂಜಯೇತ್ಪೀಠಂ ತತ್ರ ದೇವಂ ನಿಧಾಯ ಚ ॥ ೪೯ ॥**
**ವಸ್ತ್ರಾಲಂಕಾರಗಂಧಾದೀನರ್ಪಯೇಚ್ಛ್ರದ್ಧಯಾ ಮಮ ।**
**ನೈವೇದ್ಯಂ ವಿವಿಧಂ ದದ್ಯಾತ್ ಪಾಯಸಾಪೂಪಮಿಶ್ರಿತಂ ।**
**ಸಕರ್ಪೂರಂ ಚ ತಾಂಬೂಲಂ ಭಕ್ತ್ಯಾ ಚೈವ ನಿವೇದಯೇತ್ ॥ ೫೦ ॥**
**ಸುರಭೀಣಿ ಚ ಪುಷ್ಪಾಣಿ ಭಕ್ತ್ಯಾ ಸಮ್ಯಙ್ನಿವೇದಯೇತ್ ।**
**ಧೂಪಂ ದಶಾಂಗಮಷ್ಟಾಂಗಂ ದೀಪಂ ಚ ಸುಮನೋಹರಂ ॥ ೫೧ ॥**

---

ಯಾವ ವೈಷ್ಣವನು ಭಕ್ತಿಯುಕ್ತನಾಗಿ ನನಗೆ ಸ್ನಾನವನ್ನು ಮಾಡಿಸುವನೊ, ಅವನ ಪುಣ್ಯವು ಅನಂತವಾಗುವುದು.

೪೭. ಬಳಿಕ ಸುಗಂಧದ್ರವ್ಯಗಳೊಡಗೂಡಿದ ತೈಲದಿಂದ ನನಗೆ ಅಭ್ಯಂಜನವನ್ನು ಮಾಡಿಸಬೇಕು. ಬಳಿಕ ಕಸ್ತೂರಿ, ಚಂದನಾದಿ ದ್ರವ್ಯಗಳಿಂದ ಉದ್ವರ್ತನಾದಿಗಳನ್ನು ಮಾಡಬೇಕು.

೪೮. ವತ್ಸ! ಸುಗಂಧವಿಶಿಷ್ಟಗಳೂ, ಮಂತ್ರಪೂತಗಳೂ, ನಿರ್ಮಲಗಳೂ ಆದ ತೀರ್ಥೋದಕಗಳಿಂದ ನನಗೆ ಸ್ನಾನವನ್ನು ಮಾಡಿಸಿ ಅರ್ಘ್ಯವನ್ನೂ, ಬಳಿಕ ಪಾದ್ಯಾಚಮನೀಯಗಳನ್ನೂ ನಿವೇದಿಸಿ ಮಧುಪರ್ಕವನ್ನು ಆಮೇಲೆ ಕೊಡಬೇಕು. ಬಳಿಕ ಇತರ ಉಪಚಾರಗಳೆಲ್ಲವನ್ನೂ ಮಾಡಬೇಕು.

೪೯–೫೦. ವಸ್ತ್ರಗಳಿಂದಲೂ, ಆಭರಣಗಳಿಂದಲೂ, ವಿಧ್ಯುಕ್ತರೀತಿಯಾಗಿ ದಿವ್ಯಾಲಂಕಾರವನ್ನು ಮಾಡಿ ಪೀಠದಲ್ಲಿ ಕುಳ್ಳಿರಿಸಿ ಮೊದಲು ಆ ಪೀಠವನ್ನು ದಿವ್ಯಪುಷ್ಪಗಳಿಂದ ಪೂಜಿಸಬೇಕು. ಬಳಿಕ ಅರ್ಚಕನು ಶ್ರದ್ಧಾನ್ವಿತನಾಗಿ ನನಗೆ ವಸ್ತ್ರಾಲಂಕಾರಗಳನ್ನೂ ಗಂಧಾದಿ ದ್ರವ್ಯಗಳನ್ನೂ ಅರ್ಪಣೆ ಮಾಡಬೇಕು. ಬಳಿಕ ಪಾಯಸ, ಅಪೂಪಗಳೇ ಮೊದಲಾದ ಬಹುವಿಧ ದ್ರವ್ಯಗಳಿಂದ ಕೂಡಿದ ನೈವೇದ್ಯವನ್ನು ಸಮರ್ಪಿಸಬೇಕು. ಪಚ್ಚಕರ್ಪೂರ ಮೊದಲಾದ ದ್ರವ್ಯಗಳಿಂದ ಘಮಘಮಿಸುತ್ತಿರುವ ತಾಂಬೂಲವನ್ನು ಕೊನೆಯಲ್ಲಿ ಭಕ್ತಿಯಿಂದ ನಿವೇದನೆ ಮಾಡಬೇಕು.

೫೧. ಬಳಿಕ ಸುವಾಸನಾಯುಕ್ತಗಳಾದ ಪುಷ್ಪಗಳನ್ನೂ, ದಶಾಂಗ ಅಥವ ಅಷ್ಟಾಂಗಸಹಿತವಾದ ಧೂಪವನ್ನೂ, ಮನೋಹರವಾದ ಚಿತ್ರದೀಪವನ್ನೂ ಸಮರ್ಪಣೆ ಮಾಡಬೇಕು.

**ಪರಿಣೀಯ ಪ್ರಣಮ್ಯಾಥ ಸ್ತುತ್ವಾ ಸ್ತುತಿಭಿರಾದರಾತ್ ।**
**ಶಾಯಯಿತ್ವಾ ತು ಪರ್ಯಂಕೇ ಮಂಗಲಾರ್ಘ್ಯಂ ನಿವೇದಯೇತ್ ॥೫೨॥**

**ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ದ್ವಿತೀಯೇ ವೈಷ್ಣವಖಂಡೇ ಮಾರ್ಗಶೀರ್ಷಮಾಹಾತ್ಮ್ಯೇ ಬ್ರಹ್ಮವಿಷ್ಣುಸಂವಾದೇ "ಶಂಖಪೂಜಾವಿಧಿಕಥನಂ" ನಾಮ ಚತುರ್ಥೋಽಧ್ಯಾಯಃ**

---

೫೨. ಆ ಮೇಲೆ ಪ್ರದಕ್ಷಿಣೆಯನ್ನೂ ಸಾಷ್ಟಾಂಗನಮಸ್ಕಾರವನ್ನೂ ಮಾಡಿ ಭಕ್ತಿಭರಿತನಾಗಿ ಅನೇಕ ಸ್ತೋತ್ರಗಳಿಂದ ನನ್ನನ್ನು ಸಂತೋಷಗೊಳಿಸಿ ಹಾಸಿಗೆಯಲ್ಲಿ ಮಲಗಿಸಿ ಮಂಗಳಾರ್ಘ್ಯವನ್ನು ಪ್ರದಾನಮಾಡಬೇಕು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀಸ್ಕಾಂದಮಹಾಪುರಾಣದ ಎರಡನೆಯ ವೈಷ್ಣವಖಂಡದ ಮಾರ್ಗಶೀರ್ಷಮಾಹಾತ್ಮ್ಯದ ಬ್ರಹ್ಮವಿಷ್ಣುಸಂವಾದದಲ್ಲಿ "ಶಂಖಪೂಜಾವಿಧಿಕಥನ"ವೆಂಬ ನಾಲ್ಕನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥ ಪಂಚಮೋಽಧ್ಯಾಯಃ

### ಶಂಖಪೂಜನಫಲಕಥನಂ

ಬ್ರಹ್ಮೋವಾಚ :—

**ಪಂಚಾಮೃತಸ್ಯ ಸ್ನಪನಾತ್ ಯತ್ಫಲಂ ಲಭತೇ ಹರೇಃ ।**
**ಶಂಖೋದಕೇನ ಯತ್ಕಿಂಚಿತ್ತಸ್ಮಾತ್ ಬ್ರೂಹ್ಯಜಿತಾಽಚ್ಯುತ ॥ ೧ ॥**

ಶ್ರೀ ಭಗವಾನುವಾಚ :—

**ಕ್ಷೀರಸ್ನಾನಂ ಪ್ರಕುರ್ವಂತಿ ಯೇ ನರಾ ಮಮ ಮೂರ್ಧನಿ ।**
**ಶತಾಶ್ವಮೇಧಜಂ ಪುಣ್ಯಂ ಬಿಂದುನಾ ಬಿಂದುನಾ ಸ್ಮೃತಂ ॥ ೨ ॥**
**ಕ್ಷೀರಾದ್ದಶಗುಣಂ ದಧ್ನಾ ಘೃತೇನೈವ ದಶೋತ್ತರಂ ।**
**ಮಧುನಾ ತದ್ದಶಗುಣಂ ಸಿತಯಾ ತು ತತೋಽಧಿಕಂ ।**
**ಗಂಧಪುಷ್ಪೋದಕೇ ಮಂತ್ರಂ ಸರ್ವೋತ್ಕೃಷ್ಟಂ ಪ್ರಶಸ್ಯತೇ ॥ ೩ ॥**

## ಕನ್ನಡದ ಅನುವಾದ

### ಶಂಖಪೂಜನಫಲಕಥನ

೧. ಬ್ರಹ್ಮದೇವನು ಕೇಳುತ್ತಾನೆ :—ಅಜೇಯ ಪರಾಕ್ರಮನಾದ ಅಚ್ಯುತನೆ! ವಿಷ್ಣುವಿನ ಪ್ರತಿಮೆಗೆ ಪಂಚಾಮೃತದ ಸ್ನಾನವನ್ನು ಮಾಡಿಸುವುದರಿಂದ ಯಾವ ಫಲವು ಲಭಿಸುವುದೆಂಬುದನ್ನೂ ಶಂಖೋದಕದಿಂದ ಸ್ನಾನಮಾಡಿಸಿದುದರ ಫಲವನ್ನೂ ನನಗೆ ತಿಳಿಸು.

೨. ಭಗವಂತನು ಹೇಳುತ್ತಾನೆ :—ನನ್ನ ಮೂರ್ತಿಯ ಶಿರಸ್ಸಿನಲ್ಲಿ ಯಾರು ಕ್ಷೀರಾಭಿಷೇಕವನ್ನು ಮಾಡುವರೊ, ಅವರು ಆ ಕ್ಷೀರದ ಒಂದೊಂದು ಬಿಂದುವಿನಿಂದಲೂ ಒಂದು ನೂರು ಅಶ್ವಮೇಧ ಯಜ್ಞಗಳನ್ನು ಮಾಡಿದ ಪುಣ್ಯವನ್ನು ಪಡೆಯುವರು.

೩. ಕ್ಷೀರಸ್ನಾನಕ್ಕಿಂತಲೂ ದಧಿಸ್ನಾನವು ಹತ್ತರಷ್ಟು ಫಲವನ್ನು ಕೊಡುವುದು. ಅದಕ್ಕಿಂತಲೂ ಘೃತಸ್ನಾನವು ದಶಗುಣಿತವಾದ ಫಲವನ್ನು ಕೊಡುವುದು. ಅದಕ್ಕೂ ಹತ್ತರಷ್ಟು ಪುಣ್ಯವು ಮಧುಸ್ನಾನದಿಂದ ಲಭಿಸುವುದು. ಅದಕ್ಕಿಂತಲೂ ಹೆಚ್ಚಾದ ಫಲವನ್ನು ಶರ್ಕರಾಸ್ನಾನವು ಕೊಡುವುದು. ಗಂಧಪುಷ್ಪಗಳಿಂದ ಸುವಾಸಿತವಾದ ಶುದ್ಧೋದಕವು ಪುಣ್ಯಸಂಪಾದಕ ದ್ರವ್ಯಗಳಲ್ಲಿ ಸರ್ವೋತ್ಕೃಷ್ಟವೆಂದು ಹೊಗಳಲ್ಪಟ್ಟಿರುವುದು.

ದ್ವಾದಶ್ಯಾಂ ಪಂಚದಶ್ಯಾಂ ವಾ ಗವ್ಯೇನ ಪಯಸಾ ಮಮ ।
ಸ್ನಾಪನಂ ದೇವಶಾರ್ದೂಲ ಮಹಾಪಾತಕನಾಶನಂ ॥ ೪ ॥
ದಧ್ಯಾದೀನಾಂ ವಿಕಾರಾಣಾಂ ಕ್ಷೀರತಸ್ಸಂಭವೋ ಯಥಾ ।
ತಥೈವ ಶೇಷಕಾಮಾನಾಂ ಕ್ಷೀರಸ್ನಪನತೋ ಮಮ ॥ ೫ ॥
ಕ್ಷೀರಸ್ನಾನೇನ ಸೌಭಾಗ್ಯಂ ದಧ್ನಾ ಮಿಷ್ಟಾನ್ನಭೋಜನಂ ।
ಘೃತೇನ ಸ್ನಾಪಯೇದ್ಯೋ ಮಾಂ ನರೋ ಮಮ ಪುರಂ ವ್ರಜೇತ್ ॥ ೬ ॥
ಮಧುನಾ ಸಿತಯಾ ಯಸ್ತು ಕಾರಯನ್ ಮಾರ್ಗಶೀರ್ಷಕೇ ।
ಸ ರಾಜಾ ಜಾಯತೇ ಲೋಕೇ ಪುನಃ ಸ್ವರ್ಗಾದಿಹಾಗತಃ ॥ ೭ ॥
ಗಜಾಶ್ವರಥಸಂಪೂರ್ಣಂ ಸ ರಾಜ್ಯಂ ಲಭತೇ ಭುವಿ ।
ಕಾರಯೇನ್ಮಾರ್ಗಶೀರ್ಷೇ ವೈ ಯಃ ಕ್ಷೀರಸ್ನಾಪನಂ ಮಮ ॥ ೮ ॥
ಸ್ವರ್ಗೇ ಲೋಕೇ ಸ ಜಯತಿ ಚಂದ್ರೇಂದ್ರರುದ್ರಮಾರುತಾನ್ ।
ಕ್ಷೀರಸ್ನಾನಂ ಪರಂ ಶ್ರೇಷ್ಠಂ ಮಾರ್ಗಶೀರ್ಷೇ ಚ ಪುತ್ರಕ ॥ ೯ ॥

---

೪. ಎಲೈ ದೇವೋತ್ತಮನೆ! ದ್ವಾದಶಿಯ ದಿನದಲ್ಲಾಗಲಿ ಪೌರ್ಣಿಮಾ ಅಮಾವಾಸ್ಯೆಗಳಲ್ಲಾಗಲಿ ಆಕಳಿನ ಹಾಲಿನಿಂದ ನನಗೆ ಸ್ನಾನವನ್ನು ಮಾಡಿಸಲು ಮಹಾಪಾತಕಗಳೂ ನಾಶವಾಗುವುವು.

೫. ದಧಿ, ಘೃತ, ನವನೀತಗಳೇ ಮೊದಲಾದ ವಿಕಾರಗಳೆಲ್ಲವೂ ಹೇಗೆ ಹಾಲೆಂಬ ಒಂದೇ ಪದಾರ್ಥದಿಂದ ಉತ್ಪನ್ನಗಳಾಗಿರುವುವೊ, ಹಾಗೆಯೇ ಸಕಲ ಅಭೀಷ್ಟಸಿದ್ಧಿಗಳೂ ನನಗೆ ಕ್ಷೀರಸ್ನಾನವನ್ನು ಮಾಡಿಸುವುದರಿಂದ ಲಭಿಸುವುವು.

೬. ಭಕ್ತಿಯುಕ್ತನಾಗಿ ನನಗೆ ಪಂಚಾಮೃತದ ಸ್ನಾನವನ್ನು ಮಾಡಿಸುವ ಮನುಷ್ಯನು ಕ್ಷೀರಸ್ನಾನದಿಂದ ಅಷ್ಟೈಶ್ವರ್ಯಗಳನ್ನೂ, ದಧಿ ಸ್ನಾಪನದಿಂದ ಮೃಷ್ಟಾನ್ನಭೋಜನವನ್ನೂ, ಘೃತಸ್ನಾನದ ಫಲವಾಗಿ ನನ್ನ ಪಟ್ಟಣವಾದ ವೈಕುಂಠವನ್ನೂ ಪಡೆಯುವನು.

೭. ಯಾವ ಮಾನವನು ಮಾರ್ಗಶೀರ್ಷಮಾಸದಲ್ಲಿ ಜೇನುತುಪ್ಪದಿಂದಲೂ ಸಕ್ಕರೆಯಿಂದಲೂ ನನಗೆ ಸ್ನಾನಮಾಡಿಸುವನೊ, ಅವನು ಸ್ವರ್ಗಲೋಕದಲ್ಲಿ ಭೋಗಗಳನ್ನನುಭವಿಸಿ ಬಳಿಕ ಭೂಮಿಯಲ್ಲಿ ಮಹಾರಾಜನಾಗಿ ಹುಟ್ಟುವನು.

೮. ಮಾರ್ಗಶೀರ್ಷಮಾಸದಲ್ಲಿ ಯಾವನು ನನಗೆ ಕ್ಷೀರಸ್ನಾನವನ್ನು ಮಾಡಿಸುವನೊ, ಅವನು ಆನೆ, ಕುದುರೆ, ರಥಗಳಿಂದೊಡಗೂಡಿದ ರಾಜ್ಯವನ್ನು ಹೊಂದುವನು.

೯. ಎಲೈ ಪುತ್ರನೇ! ಮಾರ್ಗಶೀರ್ಷಮಾಸದಲ್ಲಿ ಅತ್ಯಂತ ಶ್ರೇಷ್ಠವಾದ ಕ್ಷೀರಸ್ನಾನವನ್ನು ನನಗೆ ಯಾವನು ಮಾಡಿಸುವನೊ, ಅವನು ಸ್ವರ್ಗಲೋಕಕ್ಕೆ ಹೋಗಿ ಚಂದ್ರ, ಮಹೇಂದ್ರ, ರುದ್ರ, ಮರುತ್ತುಗಳನ್ನೂ ಜಯಿಸುವನು.

ಕ್ಷೀರಸ್ನಪನಮಾಹಾತ್ಮ್ಯಂ ವರ್ಚಸ್ಕಂ ಪುಷ್ಟಿವರ್ಧನಂ ।
ದೌರ್ಭಾಗ್ಯಂ ವಿಲಯಂ ಯಾತಿ ಕ್ಷೀರಸ್ನಾನೇನ ಮೇ ಸುತ ॥ ೧೦ ॥
ಸ್ನಾಪಯೇನ್ಮಾರ್ಗಶೀರ್ಷೇ ಮಾಂ ಯೋ ವೈ ಪಂಚಾಮೃತೇನ ತು ।
ಸ ನ ಶೋಚ್ಯೋ ಭವೇಜ್ಜಂತುರ್ಬಂಧುನಾ ಭುವಿ ಮಾನದ ॥ ೧೧ ॥
ಕಪಿಲಾಕ್ಷೀರಮಾದಾಯ ಯಃ ಸ್ನಾಪಯತಿ ಮಾಂ ಸುತ ।
ಕಪಿಲಾಶತದಾನಸ್ಯ ಫಲಂ ಪ್ರಾಪ್ನೋತಿ ಮಾನವಃ ॥ ೧೨ ॥
ಶಂಖೇ ತೀರ್ಥೋದಕಂ ಕೃತ್ವಾ ಯಃ ಸ್ನಾಪಯತಿ ದೇಶಿಕಃ ।
ಬಿಂದುನಾಪಿ ಸಹೋಮಾಸೇ ಸ್ವಕುಲಂ ತಾರಯೇದ್ಧಿ ಸಃ ॥ ೧೩ ॥
ಕಾಪಿಲಂ ಕ್ಷೀರಮಾದಾಯ ಶಂಖೇ ಕೃತ್ವಾ ಚ ಮಾನವಃ ।
ಯಃ ಸ್ನಾಪಯತಿ ಮಾಂ ಭಕ್ತ್ಯಾ ಸರ್ವತೀರ್ಥಫಲಂ ಲಭೇತ್ ॥ ೧೪ ॥
ಶಂಖೇ ಕೃತ್ವಾ ತು ಪಾನೀಯಂ ಸಾಕ್ಷತಂ ಕುಶಸಂಯುತಂ ।
ಯಃ ಸ್ನಾಪಯೇತ್ ಸಹೋಮಾಸೇ ಸರ್ವತೀರ್ಥಫಲಂ ಲಭೇತ್॥ ೧೫ ॥

---

೧೦. ಈ ಕ್ಷೀರಸ್ನಪನದ ಮಾಹಾತ್ಮ್ಯವು ಮನುಷ್ಯನಿಗೆ ತೇಜಸ್ಸನ್ನುಂಟು ಮಾಡಿ ದೇಹಪುಷ್ಟಿಯನ್ನು ಕೊಡುವುದು. ಎಲೈ ಸುತನೆ! ನನ್ನ ಈ ಕ್ಷೀರಸ್ನಾನ ದಿಂದ ಅರ್ಚಕನಾದ ಭಕ್ತನ ಸಕಲ ಕಂಟಕಗಳೂ ಲಯವನ್ನು ಹೊಂದುವುವು.

೧೧. ಪ್ರೀತಿಪಾತ್ರನಾದ ಎಲೈ ಕಮಲಾಸನನೆ! ಯಾವನು ಮಾರ್ಗಶೀರ್ಷ ಮಾಸದಲ್ಲಿ ನನ್ನನ್ನು ಪಂಚಾಮೃತದಿಂದ ಸ್ನಾನಮಾಡಿಸುವನೊ, ಅವನು ದೇಹಾ ವಸಾನದಲ್ಲಿಯೂ ಬಂಧುಮಿತ್ರರ ಅಗಲಿಕೆಯ ಶೋಕಕ್ಕೆ ಪಾತ್ರನಾಗಲು ಅರ್ಹನಾಗುವುದಿಲ್ಲ.

೧೨. ಕಪಿಲವರ್ಣದ ಆಕಳಿನ ಹಾಲನ್ನು ತಂದು ನನ್ನ ಮೂರ್ತಿಗೆ ಯಾವನು ಸ್ನಾನಮಾಡಿಸುವನೋ ಆ ಮನುಷ್ಯನು ಒಂದುನೂರು ಕಪಿಲೆ ಗೋವು ಗಳನ್ನು ದಾನಮಾಡಿದ ಪುಣ್ಯವನ್ನು ಪಡೆಯುವನು.

೧೩. ಈ ಮಾರ್ಗಶೀರ್ಷಮಾಸದಲ್ಲಿ ಬಿಂದು ಮಾತ್ರ ತೀರ್ಥೋದಕ ವನ್ನಾದರೂ ಶಂಖದಲ್ಲಿ ಸುರಿದು ಅದರಿಂದ ನನಗೆ ಅಭಿಷೇಕವನ್ನು ಮಾಡುವ ಮಾನವನು ತನ್ನ ಕುಲವೆಲ್ಲವನ್ನೂ ಉದ್ಧರಿಸಲು ಶಕ್ತನಾಗುವನು.

೧೪. ಕಪಿಲೆಯಾದ ಆಕಳಿನ ಹಾಲನ್ನು ತೆಗೆದುಕೊಂಡು ಶಂಖದಲ್ಲಿ ಹಾಕಿ ಯಾವ ಮಾನವನು ಭಕ್ತಿಯಿಂದ ನನಗೆ ಸ್ನಾನವನ್ನು ಮಾಡಿಸುವನೊ, ಅವನು ಸಕಲ ತೀರ್ಥಗಳನ್ನೂ ಸೇವಿಸಿದ ಪುಣ್ಯವನ್ನು ಹೊಂದುವನು.

೧೫. ಶಂಖದಲ್ಲಿ ಅಕ್ಷತೆ ಮತ್ತು ಕುಶಗಳಿಂದ ಕೂಡಿದ ನೀರನ್ನು ತೆಗೆದುಕೊಂಡು ಯಾವ ಭಕ್ತನು ಮಾರ್ಗಶಿರಮಾಸದಲ್ಲಿ ನನಗೆ ಅಭಿಷೇಕವನ್ನು ಮಾಡುವನೊ, ಅವನು ಸರ್ವತೀರ್ಥಾವಗಾಹನದ ಫಲವನ್ನು ಹೊಂದುವನು.

ಶಂಖಾಷ್ಟಕೇನ ಯಃ ಸ್ನಾನಂ ಕಾರಯೇನ್ಮಾರ್ಗಶೀರ್ಷಕೇ ।
ಭಕ್ತ್ಯಾ ಭಗವತಃ ಶ್ರೇಷ್ಠೋ ಮಮ ಲೋಕೇ ಮಹೀಯತೇ ॥ ೧೬ ॥
ಶಂಖಷೋಡಶಕೇನಾಥ ಯಃ ಸ್ನಾಪಯತಿ ಮಾಂ ಸುತ ।
ಸ ಪಾಪಮುಕ್ತಃ ಸುಚಿರಂ ಸ್ವರ್ಗಲೋಕೇ ಮಹೀಯತೇ ॥ ೧೭ ॥
ಚತುರ್ವಿಂಶತಿಸಂಖ್ಯಾಕೈಃ ಶಂಖೈರ್ಯಃ ಸ್ನಾಪಯೇಚ್ಚ ಮಾಂ ।
ಇಂದ್ರಲೋಕೇ ಚಿರಂ ಸ್ಥಿತ್ವಾ ಸ ರಾಜಾ ಭುವಿ ಜಾಯತೇ ॥ ೧೮ ॥
ಶಂಖಾಷ್ಟೋತ್ತರಶತೇನೈವ ಸ್ನಾಪಯೇನ್ಮಾರ್ಗಶೀರ್ಷಕೇ ।
ಶಂಖೇ ಶಂಖೇ ಸುವರ್ಣಸ್ಯ ಫಲಂ ಪ್ರಾಪ್ನೋತಿ ಮಾನವಃ ॥ ೧೯ ॥
ಮಾರ್ಗಶೀರ್ಷೇ ಭಕ್ತಿಮಾನ್ಯಃ ಕೃತ್ವಾ ಶಂಖಧ್ವನಿಂ ಹಿ ಮಾಂ ।
ಸ್ನಾಪಯೇತ್ಪಿತರಸ್ತಸ್ಯ ಸ್ವರ್ಗಂ ತಾವತ್ಪ್ರತಿಷ್ಠಿತಾಃ ॥ ೨೦ ॥
ಅಷ್ಟೋತ್ತರಸಹಸ್ರಂತು ಶಂಖಸ್ನಾನಂ ತು ಯಶ್ಚರೇತ್ ।
ಸ ಗಣೋ ಮುಕ್ತಿಮಾಪ್ನೋತಿ ಯಾವದಾಭೂತಸಂಪ್ಲವಂ ॥ ೨೧ ॥

---

೧೬. ಯಾವ ಮನುಷ್ಯೋತ್ತಮನು ಭಕ್ತಿಸಮನ್ವಿತನಾಗಿ ಮಾರ್ಗಶೀರ್ಷ ಮಾಸದಲ್ಲಿ ಎಂಟುಸಲ ಶಂಖೋದಕದಿಂದ ನನಗೆ ಸ್ನಾನವನ್ನು ಮಾಡಿಸುವನೊ, ಅವನು ಭಗವಂತನಾದ ನನ್ನ ಲೋಕದಲ್ಲಿ ದೊಡ್ಡವನೆನಿಸಿಕೊಳ್ಳುವನು.

೧೭. ಪುತ್ರನಾದ ಎಲೈ ಬ್ರಹ್ಮನೆ! ಹದಿನಾರು ಶಂಖಗಳಷ್ಟು ಉದಕದಿಂದ ನನಗೆ ಅಭಿಷೇಕವನ್ನು ಯಾವನು ಮಾಡುವನೊ, ಅವನು ಸಕಲ ಪಾಪಗಳಿಂದಲೂ ಮುಕ್ತನಾಗಿ ಬಹಳ ಕಾಲದವರೆವಿಗೂ ಸ್ವರ್ಗಲೋಕದಲ್ಲಿ ಪೂಜ್ಯನೆನಿಸುವನು.

೧೮. ಇಪ್ಪತ್ತುನಾಲ್ಕು ಸಲ ಶಂಖೋದಕದಿಂದ ನನ್ನ ಅಭಿಷೇಕವನ್ನು ಮಾಡುವ ಭಕ್ತನು ಇಂದ್ರಲೋಕದಲ್ಲಿ ಬಹು ಕಾಲ ವಾಸಮಾಡಿ ಬಳಿಕ ಭೂಲೋಕದಲ್ಲಿ ಮಹಾರಾಜನಾಗಿ ಜನಿಸುವನು.

೧೯. ಮಾರ್ಗಶಿರಮಾಸದಲ್ಲಿ ನೂರೆಂಟು ಶಂಖಗಳ ಉದಕದಿಂದ ನನಗೆ ಅಭಿಷೇಕವನ್ನು ಯಾವನು ಮಾಡುವನೊ, ಅವನು ಒಂದೊಂದು ಶಂಖದ ಉದಕದಿಂದಲೂ ಸುವರ್ಣಾಭಿಷೇಕವನ್ನು ಮಾಡಿದ ಫಲವನ್ನು ಹೊಂದುವನು.

೨೦. ಮಾರ್ಗಶೀರ್ಷಮಾಸದಲ್ಲಿ ಯಾವನು ಭಕ್ತಿಯುಕ್ತನಾಗಿ ಶಂಖ ಧ್ವನಿಯನ್ನು ಮಾಡಿ ನನಗೆ ಸ್ನಾನವನ್ನು ಮಾಡಿಸುವನೊ, ಅವನಿಗೆ ಸ್ವರ್ಗ ಲೋಕವು ಎದುರಿನಲ್ಲಿಯೇ ಸನ್ನಿಹಿತವಾಗಿರುವುದು.

೨೧. ಒಂದುಸಾವಿರದ ಎಂಟುಸಲ ಶಂಖೋದಕದಿಂದ ಯಾವನು ಅಭಿಷೇಕವನ್ನು ಮಾಡುವನೊ, ಅವನು ನನ್ನ ಪರಿವಾರಗಣದಲ್ಲಿ ಒಬ್ಬನಾಗಿ ಪಂಚಭೂತಗಳು ನಾಶವಾಗುವ ಮಹಾ ಪ್ರಳಯವಾಗುವವರೆವಿಗೂ ಸಂಸಾರ ಬಂಧದಲ್ಲಿ ಸಿಕ್ಕಲಾರನು.

ನಿತ್ಯಂ ಸಂಸ್ನಾಪಯೇದ್ಯೋ ಮಾಂ ಶಂಖೇನ ಸುರಸತ್ತಮ ।
ಗಂಗಾಸ್ನಾನಫಲಂ ಪ್ರಾಪ್ಯ ನಿತ್ಯಂ ನಂದತಿ ದೇವವತ್ ॥ ೨೨ ॥
ಶಂಖೇ ತೋಯಂ ಸಮಾದಾಯ ಯಃ ಸ್ನಾಪಯತಿ ಮಾಂ ಸುತ ।
ನಮೋ ನಾರಾಯಣೇತ್ಯುಕ್ತ್ವಾ ಮುಚ್ಯತೇ ಸರ್ವಕಿಲ್ಬಿಷೈಃ ॥ ೨೩ ॥
ಕೃತ್ವಾ ಪಾದೋದಕಂ ಶಂಖೇ ವೈಷ್ಣವಾನಾಂ ಮಹಾತ್ಮನಾಂ ।
ಯೋ ದದಾತಿ ತಿಲೋನ್ಮಿಶ್ರಂ ಚಾಂದ್ರಾಯಣಫಲಂ ಲಭೇತ್ ॥ ೨೪ ॥
ನಾದ್ಯಂ ತಡಾಗಜಂ ಚೈವ ವಾಪೀಕೂಪಾದಿಕಂ ಚ ಯತ್ ।
ಗಾಂಗೇಯಂ ಜಾಯತೇ ಸರ್ವಂ ಜಲಂ ಶಂಖಕೃತಂ ಚ ಯತ್ ॥ ೨೫ ॥
ಗೃಹೀತ್ವಾ ಮಮ ಪಾದಾಂಬು ಶಂಖೇ ಕೃತ್ವಾ ತು ವೈಷ್ಣವಃ ।
ಯೋ ವಹೇತ್ ಶಿರಸಾ ನಿತ್ಯಂ ಸ ಮುನಿಸ್ತಪತಾಂ ವರಃ ॥ ೨೬ ॥
ತ್ರೈಲೋಕ್ಯೇ ಯಾನಿ ತೀರ್ಥಾನಿ ಮಮ ಚೈವಾಜ್ಞಯಾ ಸುತ ।
ಶಂಖೇ ತಾನಿ ವಸಂತೀಹ ತಸ್ಮಾತ್ ಶಂಖೋ ವರಃ ಸ್ಮೃತಃ ॥ ೨೭ ॥

---

೨೨. ದೇವೋತ್ತಮನಾದ ಬ್ರಹ್ಮನೆ! ಪ್ರತಿನಿತ್ಯವೂ ಯಾವನು ಶಂಖದಿಂದ ನನಗೆ ಸ್ನಾನವನ್ನು ಮಾಡಿಸುವನೊ, ಅವನು ಪ್ರತಿದಿವಸವೂ ಗಂಗೆಯಲ್ಲಿ ಸ್ನಾನ ಮಾಡಿದ ಫಲವನ್ನು ಹೊಂದಿ ದೇವತೆಗಳಂತೆ ಸುಖದಿಂದಿರುವನು.

೨೩. ಪುತ್ರನೆ! ಯಾವನು ಶಂಖದಲ್ಲಿ ನೀರನ್ನು ತೆಗೆದುಕೊಂಡು "ನಮೋ ನಾರಾಯಣಾಯ" ಎಂಬ ಮಂತ್ರವನ್ನುಚ್ಚರಿಸುತ್ತ ಅಭಿಷೇಕವನ್ನು ಮಾಡುವನೊ, ಅವನು ಸಕಲ ಪಾಪಗಳಿಂದಲೂ ಮುಕ್ತನಾಗುವನು.

೨೪. ಮಹಾತ್ಮರಾದ ವಿಷ್ಣುಭಕ್ತರ ಸಮೂಹಕ್ಕೆ ವಿಷ್ಣುಪಾದೋದಕವನ್ನು ಶಂಖದಲ್ಲಿ ತೆಗೆದುಕೊಂಡು ತಿಲಮಿಶ್ರಿತವಾಗಿ ಯಾವನು ಕೊಡುವನೊ, ಅವನು ಚಾಂದ್ರಾಯಣವ್ರತವನ್ನಾಚರಿಸಿದ ಫಲವನ್ನು ಹೊಂದುವನು.

೨೫. ನದಿ, ಸರೋವರ, ಇಳಿಯುವ ಭಾವಿ, ಸೇದುವ ಭಾವಿ ಮುಂತಾದುವುಗಳ ಯಾವ ಜಲವಾದರೂ ಶಂಖದಲ್ಲಿ ಬಿದ್ದೊಡನೆಯೇ ಅದು ಗಂಗಾಜಲದಂತೆಯೆ ಪವಿತ್ರವಾಗುವುದು.

೨೬. ಯಾವ ವೈಷ್ಣವನು ನನ್ನ ಪಾದೋದಕವನ್ನು ಶಂಖದಲ್ಲಿ ತೆಗೆದುಕೊಂಡು ನಿತ್ಯದಲ್ಲಿಯೂ ಶಿರಸ್ಸಿನಲ್ಲಿ ಧಾರಣಮಾಡುವನೊ, ಆತನೇ ತಪಸ್ವಿಗಳಲ್ಲಿ ಶ್ರೇಷ್ಠನಾದ ಮಹಾ ಮುನಿಯೆನಿಸುವನು.

೨೭. ಮಗನೆ! ಮೂರು ಲೋಕಗಳಲ್ಲಿಯೂ ಯಾವ ಯಾವ ತೀರ್ಥಗಳಿರುವುವೋ ಅವುಗಳೆಲ್ಲವೂ ಶಂಖದಲ್ಲಿ ನನ್ನ ಆಜ್ಞಾನುಸಾರವಾಗಿ ಪೂಜಾಕಾಲದಲ್ಲಿ ನೆಲಸಿರುವುವು. ಆದುದರಿಂದಲೇ ಶಂಖವು ಪರಮಶ್ರೇಷ್ಠವೆಂದು ಹೇಳಲ್ಪಟ್ಟಿರುವುದು.

ಸಾಂಬುಂ ಶಂಖಂ ಕರೇ ಧೃತ್ವಾ ಮಂತ್ರೈರೇತೈಸ್ತು ವೈಷ್ಣವಃ ।
ಯಃ ಸ್ನಾಪಯೇತ್ ಮಾರ್ಗಶೀರ್ಷೇ ತುಷ್ಟಸ್ತಸ್ಯ ಭವಾಮ್ಯಹಂ ॥ ೨೮ ॥
ಶಂಖಾದೌ ಚಂದ್ರದೈವತ್ಯಂ ಕುಕ್ಷೌ ವರುಣದೇವತಾ ।
ಪೃಷ್ಠೇ ಪ್ರಜಾಪತಿಶ್ಚೈವ ಅಗ್ರೇ ಗಂಗಾ ಸರಸ್ವತೀ ॥ ೨೯ ॥
ತೇಷಾಮುಚ್ಚಾರಪೂರ್ವಂ ತು ಸ್ನಾಪಯೇನ್ಮಾಮತಂದ್ರಿತಃ ।
ತಸ್ಯ ಪುಣ್ಯಸ್ಯ ಸಂಖ್ಯಾಂ ವೈ ಕರ್ತುಂ ನೈವ ಸುರಾ ಕ್ಷಮಾಃ ॥ ೩೦ ॥
ಪುರತೋ ಮಮ ದೇವೇಶ ಸಪುಷ್ಪಸ್ಸಜಲಾಕ್ಷತಃ ।
ಶಂಖಸ್ತ್ವಭ್ಯರ್ಚಿತಸ್ತಿಷ್ಠೇತ್ ತಸ್ಯ ಶ್ರೀಃ ಸರ್ವತೋಮುಖೀ ॥ ೩೧ ॥
ವಿಲೇಪನೇನ ಸಂಪೂರ್ಣಂ ಶಂಖಂ ಕೃತ್ವಾ ತು ಮಾಂ ಭಜೇತ್ ।
ತದಾ ಮೇ ಪರಮಾ ಪ್ರೀತಿರ್ಭವೇದ್ವೈ ಶತವಾರ್ಷಿಕೀ ॥ ೩೨ ॥
ಶಂಖೇ ಕೃತ್ವಾ ತು ಪಾನೀಯಂ ಸಪುಷ್ಪಂ ಸಜಲಾಕ್ಷತಂ ।
ಅರ್ಘ್ಯಂ ದದಾತಿ ಯೋ ಮಾಂ ವೈ ತಸ್ಯ ಪುಣ್ಯಮನಂತಕಂ ॥ ೩೩ ॥
ಅರ್ಘ್ಯಂ ಕೃತ್ವಾ ಸ್ವಯಂ ಶಂಖೇ ಯಃ ಕರೋತಿ ಪ್ರದಕ್ಷಿಣಾಂ ।
ಪ್ರದಕ್ಷಿಣೀಕೃತಾ ತೇನ ಸಪ್ತದ್ವೀಪಾ ವಸುಂಧರಾ ॥ ೩೪ ॥

೨೮. ನೀರಿನಿಂದ ಕೂಡಿದ ಶಂಖವನ್ನು ಕೈಯಲ್ಲಿ ಹಿಡಿದು ಮುಂದೆ ಹೇಳುವ ಮಂತ್ರಗಳಿಂದ ಯಾವನು ಮಾರ್ಗಶೀರ್ಷಮಾಸದಲ್ಲಿ ನನಗೆ ಅಭಿಷೇಕವನ್ನು ಮಾಡುವನೊ, ಅವನಲ್ಲಿ ನಾನು ಸಂತೋಷಗೊಳ್ಳುವೆನು.

೨೯. ಶಂಖದ ಆದಿಯಲ್ಲಿ ಚಂದ್ರದೇವತೆಯು; ಅಂತರದಲ್ಲಿ ವರುಣದೇವನು. ಪೃಷ್ಠದಲ್ಲಿ ಪ್ರಜಾಪತಿಯೂ ಅಗ್ರದಲ್ಲಿ ಗಂಗಾಸರಸ್ವತಿಯರೂ ಇರುವರು.

೩೦. ಈ ತೀರ್ಥಗಳ ಮತ್ತು ದೇವತೆಗಳ ಹೆಸರುಗಳನ್ನು ಉಚ್ಚಾರಮಾಡಿ ಭಕ್ತನು ಆಲಸ್ಯರಹಿತನಾಗಿ ನನಗೆ ಸ್ನಾನವನ್ನು ಮಾಡಿಸಬೇಕು. ಆತನ ಪುಣ್ಯದ ಇಯತ್ತೆಯನ್ನು ಕಂಡುಹಿಡಿದು ಹೇಳಲು ದೇವತೆಗಳೂ ಸಹ ಶಕ್ತರಲ್ಲ.

೩೧. ಎಲೈ ದೇವದೇವನೆ! ಪುಷ್ಪ, ಜಲ ಮತ್ತು ಅಕ್ಷತೆಗಳಿಂದ ಸಹಿತವಾದ ಶಂಖವನ್ನು ನನ್ನ ಎದುರಿನಲ್ಲಿಟ್ಟು ಯಾವನು ಪೂಜೆಯನ್ನು ಮಾಡುವನೊ, ಅವನಿಗೆ ಸಕಲಕಾರ್ಯಗಳಲ್ಲಿಯೂ ಅಪ್ರತಿಹತವಾದ ಐಶ್ವರ್ಯವು ಲಭಿಸುವುದು.

೩೨. ಗಂಧಾದಿ ಲೇಪನದ್ರವ್ಯಗಳಿಂದ ಶಂಖವನ್ನು ತುಂಬಿ ನನ್ನ ಪೂಜೆಯನ್ನು ಮಾಡಲು ನನಗೆ ಒಂದು ನೂರು ವರ್ಷಗಳವರೆವಿಗೂ ಅಪರಿಮಿತವಾದ ಆನಂದವುಂಟಾಗುವುದು.

೩೩. ಪುಷ್ಪಜಲಾಕ್ಷತೆಗಳನ್ನು ಶಂಖದಲ್ಲಿ ತುಂಬಿಕೊಂಡು ಯಾವನು ನನಗೆ ಅರ್ಘ್ಯವನ್ನು ಕೊಡುವನೊ, ಅವನ ಪುಣ್ಯವು ಕೊನೆಯಿಲ್ಲದುದೆನಿಸುವುದು.

೩೪. ಶಂಖದಲ್ಲಿ ಅರ್ಘ್ಯೋದಕವನ್ನು ಇಟ್ಟು ಪ್ರದಕ್ಷಿಣೆಯನ್ನು ಯಾವನು

ಭ್ರಾಮಯಿತ್ವಾ ಚ ಮೇ ಮೂರ್ಧ್ನಿ ಮಂದಿರಂ ಶಂಖವಾರಿಣಾ ।
ಪ್ರೋಕ್ಷಯೇದ್ವೈಷ್ಣವೋ ಯಸ್ತು ನಾಶುಭಂ ತದ್ಗೃಹೇ ಭವೇತ್ ॥೩೫॥
ನಾಧಯೋ ನ ಕ್ಲಮಸ್ತಸ್ಯ ನಾರಕಂ ನ ಭಯಂ ಕ್ವಚಿತ್ ।
ಯಸ್ಯ ಪಾದೋದಕಂ ಶಂಖೇ ಕೃತಂ ಮೂರ್ಧಾನಮಾಲಭೇತ್ ॥ ೩೬ ॥
ಗ್ರಹಾ ರಕ್ಷಾಂಸಿ ಕೂಷ್ಮಾಂಡಪಿಶಾಚೋರಗದಾನವಾಃ ।
ದೃಷ್ಟ್ವಾ ಶಂಖೋದಕಂ ಮೂರ್ಧ್ನಿ ವಿದ್ರವಂತಿ ದಿಶೋ ದಶ ॥ ೩೭ ॥
ವಾದಿತ್ರನಿನದೈರುಚ್ಚೈಃ ಗೀತಮಂಗಲನಿಃಸ್ವನೈಃ ।
ಯಃ ಸ್ನಾಪಯತಿ ಮಾಂ ಭಕ್ತ್ಯಾ ಜೀವನ್ಮುಕ್ತೋ ಭವೇದ್ಧಿ ಸಃ ॥ ೩೮ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ದ್ವಿತೀಯೇ ವೈಷ್ಣವಖಂಡೇ ಮಾರ್ಗಶೀರ್ಷಮಾಹಾತ್ಮ್ಯೇ ಬ್ರಹ್ಮವಿಷ್ಣುಸಂವಾದೇ "ಶಂಖಪೂಜನಫಲಕಥನಂ" ನಾಮ ಪಂಚಮೋಽಧ್ಯಾಯಃ

---

ಮಾಡುವನೊ, ಅವನಿಂದ ಸಪ್ತದ್ವೀಪಸಹಿತವಾದ ಭೂಮಂಡಲವೆಲ್ಲ ಪ್ರದಕ್ಷಿಣೆ ಮಾಡಲ್ಪಟ್ಟಿತೆಂದು ತಿಳಿಯಬೇಕು.

೩೫. ಶಂಖವನ್ನು ತಿರುಗಿಸುತ್ತ ನನ್ನ ಪ್ರತಿಮೆಯ ತಲೆಯಮೇಲೆಯೂ, ದೇವಾಗಾರವನ್ನೂ ಶಂಖೋದಕದಿಂದ ಪ್ರೋಕ್ಷಣೆ ಮಾಡುವ ವೈಷ್ಣವನ ಮನೆಯಲ್ಲಿ ಎಂದಿಗೂ ಅಮಂಗಳವುಂಟಾಗಲಾರದು.

೩೬. ಯಾವನ ತಲೆಯಲ್ಲಿ ನನ್ನ ಪಾದೋದಕವು ಶಂಖದಿಂದ ಪ್ರೋಕ್ಷಣೆ ಮಾಡಲ್ಪಡುತ್ತದೆಯೊ, ಅವನಿಗೆಂದಿಗೂ ಮನಃಕ್ಲೇಶವಾಗಲಿ, ದೇಹಾಲಸ್ಯವಾಗಲಿ, ನರಕವಾಸದ ಭಯವಾಗಲಿ ಸಂಭವಿಸಲಾರವು.

೩೭. ವಿಷ್ಣುಭಕ್ತನ ತಲೆಯಲ್ಲಿ ಪ್ರೋಕ್ಷಿತವಾಗಿರುವ ಶಂಖೋದಕವನ್ನು ಕಂಡು ಗ್ರಹಗಳೂ, ರಾಕ್ಷಸರೂ, ಕೂಷ್ಮಾಂಡರೂ, ಪಿಶಾಚಗಳೂ, ನಾಗರೂ, ದಾನವರೂ ಹತ್ತು ದಿಕ್ಕುಗಳಿಗೂ ಚೆದರಿಹೋಗುವರು.

೩೮. ಅತ್ಯುತ್ತಮವಾದ ವಾದ್ಯಘೋಷಗಳಿಂದಲೂ, ಸಂಗೀತಗಳಿಂದಲೂ ಮಂಗಳಧ್ವನಿಗಳಿಂದಲೂ ಯಾವನು ಭಕ್ತಿಯಿಂದ ನನಗೆ ಅಭಿಷೇಕವನ್ನು ನೆರವೇರಿಸುವನೊ, ಅವನು ಜೀವನ್ಮುಕ್ತನಾಗುವುದರಲ್ಲಿ ಸಂದೇಹವಿಲ್ಲವು.

ಇಲ್ಲಿಗೆ ಎಂಬತ್ತೊಂದು ಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀಸ್ಕಾಂದಮಹಾಪುರಾಣದ ಎರಡನೆಯ ವೈಷ್ಣವಖಂಡದ ಮಾರ್ಗಶೀರ್ಷಮಾಹಾತ್ಮ್ಯದ ಬ್ರಹ್ಮವಿಷ್ಣುಸಂವಾದದಲ್ಲಿ "ಶಂಖಪೂಜನಫಲಕಥನ"ವೆಂಬ ಐದನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥ ಷಷ್ಠೋಽಧ್ಯಾಯಃ

### ಘಂಟಾನಾದತುಲಸೀಕಾಷ್ಠಚಂದನಾರ್ಪಣಫಲಕಥನಂ

ಬ್ರಹ್ಮೋವಾಚ :—

ಘಂಟಾನಾದಸ್ಯ ಮಾಹಾತ್ಮ್ಯಂ ಚಂದನಸ್ಯ ತಥಾಽಚ್ಯುತ ।
ಯತ್ಫಲಂ ಲಭತೇ ಸ್ವಾಮಿನ್ ತತ್ಸರ್ವಂ ಬ್ರೂಹಿ ತತ್ತ್ವತಃ ॥ ೧ ॥

ಶ್ರೀ ಭಗವಾನುವಾಚ :—

ಸ್ನಾನಾರ್ಚನಕ್ರಿಯಾಕಾಲೇ ಘಂಟಾನಾದಂ ಕರೋತಿ ಯಃ ।
ಪುರತೋ ಮಮ ದೇವೇಶ ತಸ್ಯ ಪುಣ್ಯಫಲಂ ಶೃಣು ॥ ೨ ॥
ವರ್ಷಕೋಟಿಸಹಸ್ರಾಣಿ ವರ್ಷಕೋಟಿಶತಾನಿ ಚ ।
ವಸತೇ ಮಾಮಕೇ ಲೋಕೇ ಅಪ್ಸರೋಗಣಸೇವಿತಃ ॥ ೩ ॥
ಸರ್ವವಾದ್ಯಮಯೀ ಘಂಟಾ ಸರ್ವದೇವಮಯೀ ಯತಃ ।
ತಸ್ಮಾತ್ಸರ್ವಪ್ರಯತ್ನೇನ ಘಂಟಾನಾದಂ ತು ಕಾರಯೇತ್ ॥ ೪ ॥

---

## ಕನ್ನಡದ ಅನುವಾದ

### ಘಂಟಾನಾದತುಲಸೀಕಾಷ್ಠಚಂದನಾರ್ಪಣಫಲಕಥನ

೧. ಬ್ರಹ್ಮನು ಕೇಳುತ್ತಾನೆ:—ಲೋಕನಾಯಕನಾದ ಓ ನಾರಾಯಣನೆ! ಘಂಟಾನಾದದ ಮಾಹಾತ್ಮ್ಯವನ್ನೂ ಚಂದನಾರ್ಪಣದ ಮೇಲ್ಮೆಯನ್ನೂ ಇವುಗಳಿಂದ ಮನುಷ್ಯನಿಗೆ ಯಾವ ಪುಣ್ಯಫಲವು ಲಭಿಸುವುದೆಂಬುದನ್ನೂ ನನಗೆ ಯಥಾರ್ಥವಾಗಿ ತಿಳಿಸು.

೨. ಭಗವಂತನು ನಿರೂಪಿಸುತ್ತಾನೆ:— ಎಲೈ ದೇವೇಶ್ವರನೆ! ಸ್ನಾನ ಮತ್ತು ಅರ್ಚನೆಗಳನ್ನು ಮಾಡುವಾಗ ನನ್ನ ಎದುರಿನಲ್ಲಿ ಯಾವ ಭಕ್ತನು ಘಂಟಾನಾದವನ್ನು ಮಾಡುವನೊ, ಅವನು ಸಂಪಾದಿಸುವ ಪುಣ್ಯದ ಫಲವನ್ನು ಕೇಳುವವನಾಗು.

೩. ಅಂತಹ ಭಕ್ತೋತ್ತಮನು ಅನೇಕ ಕೋಟಿ ಸಾವಿರ ವರ್ಷಗಳೂ, ಅನೇಕ ಕೋಟಿ ನೂರು ವರ್ಷಗಳೂ ಅಪ್ಸರೆಯರ ಸಮೂಹಗಳಿಂದ ಸೇವೆಗಳನ್ನು ಕೈಗೊಳ್ಳುತ್ತ ನನ್ನ ಲೋಕದಲ್ಲಿ ವಾಸಮಾಡುವನು.

೪. ಘಂಟೆಯೆಂಬುದು ಸಕಲ ವಾದ್ಯಗಳಿಂದ ಕೂಡಿದುದೂ, ಸಮಸ್ತ ದೇವತೆಗಳ ಸಾನ್ನಿಧ್ಯವುಳ್ಳುದುದೂ ಆಗಿರುವುದು. ಆದುದರಿಂದ ಪೂಜಾಕಾಲ ದಲ್ಲಿ ಸರ್ವಪ್ರಯತ್ನದಿಂದಲೂ ಘಂಟಾನಾದವನ್ನು ಮಾಡಬೇಕು.

ಸರ್ವವಾದ್ಯಮಯೀ ಘಂಟಾ ಸರ್ವದಾ ಮಮ ವಲ್ಲಭಾ ।
ವಾದನಾಲ್ಲಭತೇ ಪುಣ್ಯಂ ಯಜ್ಞಕೋಟಿಶತೋದ್ಭವಂ ॥ ೫ ॥
ಘಂಟಾನಾದಃ ಸದಾ ಕಾರ್ಯಃ ಪೂಜಾಕಾಲೇ ವಿಶೇಷತಃ ।
ಮನ್ವಂತರಸಹಸ್ರಾಣಿ ಮನ್ವಂತರಶತಾನಿ ಚ ॥ ೬ ॥
ಪ್ರೀತೋ ಭವಾಮಿ ಸತತಂ ಘಂಟಾನಾದೇನ ಪುತ್ರಕ ।
ಭೇರೀಶಂಖನಿನಾದೇನ ಘಂಟಾನಾದಾನ್ವಿತೇನ ಚ ॥ ೭ ॥
ಮೃದಂಗಶಂಖೇನ ಯುತಂ ಪ್ರಣವೇನ ಸಮನ್ವಿತಂ ।
ಅರ್ಚನಂ ಮಮ ದೇವೇಶ ಸತತಂ ಮೋಕ್ಷದಂ ನೃಣಾಂ ॥ ೮ ॥
ಯತ್ರ ತಿಷ್ಠೇತ ಪುರತೋ ಘಂಟಾ ನಾದಾನ್ವಿತಾ ಮಮ ।
ಅರ್ಚಿತಾ ವೈಷ್ಣವೈರ್ಯತ್ರ ತತ್ರ ಮಾಂ ವಿದ್ಧಿ ಪುತ್ರಕ ॥ ೯ ॥
ವೈನತೇಯಾಂಕಿತಾ ಘಂಟಾ ಸುದರ್ಶನಯುತಾಽಥವಾ ।
ಮಮಾಗ್ರೇ ಸ್ಥಾಪಯೇದ್ಯಸ್ತು ತಸ್ಯ ಪಾಪಂ ಹರಾಮ್ಯಹಂ ॥ ೧೦ ॥
ಮದೀಯಾರ್ಚನವೇಲಾಯಾಂ ಘಂಟಾನಾದಂ ಕರೋತಿ ಯಃ ।
ನಶ್ಯಂತಿ ತಸ್ಯ ಪಾಪಾನಿ ಶತಜನ್ಮಾರ್ಜಿತಾನ್ಯಪಿ ॥ ೧೧ ॥

---

೫. ಸಮಸ್ತ ವಾದ್ಯಮಯವಾಗಿರುವ ಘಂಟೆಯು ಯಾವಾಗಲೂ ನನಗೆ ಅತ್ಯಂತ ಪ್ರಿಯವಾಗಿರುವುದು. ಅದನ್ನು ಬಾಜಿಸುವುದರಿಂದ ಮಾನವನು ಕೋಟಿ ಯಜ್ಞಗಳನ್ನು ಮಾಡಿದ ಪುಣ್ಯವನ್ನು ಸಂಪಾದಿಸುವನು.

೬–೮. ಘಂಟಾನಾದವನ್ನು ಸರ್ವಕಾಲದಲ್ಲಿಯೂ ವಿಶೇಷವಾಗಿ ಪೂಜೆಯ ಸಮಯದಲ್ಲಿಯೂ ಮಾಡಬೇಕು. ಸಾವಿರಾರು ಮತ್ತು ನೂರಾರು ಮನ್ವಂತರಗಳವರೆವಿಗೂ ನಾನು ಆ ಘಂಟಾನಾದದಿಂದ ಯಾವಾಗಲೂ ಸುಪ್ರೀತನಾಗುವೆನು. ಭೇರಿ ಮೊದಲಾದ ವಾದ್ಯಗಳ ಧ್ವನಿಯಿಂದಲೂ, ಘಂಟಾನಾದದಿಂದಲೂ, ಶಂಖನಿನಾದದಿಂದಲೂ, ಮೃದಂಗವಾದನದಿಂದಲೂ, ಪ್ರಣವಘೋಷದಿಂದಲೂ, ನನ್ನ ಪೂಜೆಯನ್ನು ಮಾಡಲು ಮನುಷ್ಯರಿಗೆ ಮೋಕ್ಷಸಾಮ್ರಾಜ್ಯವು ಲಭಿಸುವುದು.

೯. ಪುತ್ರನೆ! ಎಲ್ಲೆಲ್ಲಿ ನನ್ನ ಮುಂದೆ ನಾದದಿಂದ ಕೂಡಿದ ಘಂಟೆಯು ಇಡಲ್ಪಟ್ಟಿರುವುದೊ, ಎಲ್ಲಿ ವಿಷ್ಣುಭಕ್ತರಿಂದ ಅದಕ್ಕೆ ತಕ್ಕ ಪೂಜೆಯು ನಡೆಯುತ್ತಿರುವುದೊ, ಅಲ್ಲಿಯೇ ನಾನು ಸನ್ನಿಹಿತನಾಗಿರುವೆನೆಂಬುದನ್ನು ತಿಳಿ.

೧೦. ವೈನತೇಯನ (ಗರುಡನ) ಪ್ರತಿಮೆಯುಳ್ಳ ಘಂಟೆಯನ್ನಾಗಲಿ, ಸುದರ್ಶನ ಚಕ್ರದ ಲಾಂಛನವುಳ್ಳ ಘಂಟೆಯನ್ನಾಗಲಿ ನನ್ನ ಸಮ್ಮುಖದಲ್ಲಿ ಸ್ಥಾಪಿಸಿ ಪೂಜಿಸುವವನ ಪಾಪಗಳೆಲ್ಲವನ್ನೂ ನಾನು ಕ್ಷಣಮಾತ್ರದಲ್ಲಿ ಹೋಗಲಾಡಿಸುವೆನು.

೧೧. ನನ್ನ ಪೂಜೆಯ ಸಮಯದಲ್ಲಿ ಯಾವನು ಘಂಟೆಯನ್ನು ಬಾಜಿಸು

ಸ್ವಾಪಕಾಲೇ ಪ್ರಕುರ್ವೀತ ಘಂಟಾನಾದಂ ಸ್ವಭಕ್ತಿತಃ ।
ಮಮೈವಾರ್ಚನವೇಲಾಯಾಂ ಫಲಂ ಕೋಟಿಗುಣೋದ್ಭವಂ ॥ ೧೨ ॥
ಯೇ ಮಾಮರ್ಚಂತಿ ದೇವೇಶಂ ಸುಪರ್ಣೋಪರಿ ಸಂಸ್ಥಿತಂ ।
ಶಂಖಪದ್ಮಗದಾಯುಕ್ತಂ ಸಚಕ್ರಂ ಚ ಶ್ರಿಯಾ ಯುತಂ ॥ ೧೩ ॥
ಕಿಂ ಕರಿಷ್ಯಂತಿ ತೇ ತೀರ್ಥೈರ್ದೇವತಾನಾಂ ಚ ದರ್ಶನೈಃ ।
ಕಿಂ ಯಜ್ಞೈಃ ಕಿಂ ವ್ರತೈರ್ವಾಪಿ ಕಿಂ ದಾನೈಃ ಕಿಮುಪೋಷಣೈಃ ॥ ೧೪ ॥
ಮೂರ್ತಿರ್ನಾರಾಯಣೇ ಯೈಶ್ಚ ಮಾಮಕೀ ಗರುಡೋಪರಿ ।
ಸ್ಥಾಪಿತಾ ತೇ ಕಲೌ ಯಾಂತಿ ಕಲ್ಪಕೋಟಿಂ ಪದಂ ಮಮ ॥ ೧೫ ॥
ಮಮಾಗ್ರೇ ಸ್ಥಾಪಯೇದ್ಯಸ್ತು ಪ್ರಾಸಾದೇಽಥ ಗೃಹೇಽಥವಾ ।
ತೀರ್ಥಕೋಟಿಸಹಸ್ರಾಣಿ ತತ್ರ ತಿಷ್ಠಂತಿ ದೇವತಾಃ ॥ ೧೬ ॥
ಯಸ್ತು ಪೂಜಯತೇ ಧನ್ಯೋ ಗರುಡೋಪರಿಸಂಸ್ಥಿತಂ ।
ಏಕಾದಶ್ಯಾಂ ತಥಾ ರಾತ್ರೌ ವಾಸನಾಸಂಯುತೋ ಮಮ ।
ಕೃತ್ವಾ ಗೀತಂ ಚ ನೃತ್ಯಂ ಚ ತಾರಯೇನ್ನರಕಾತ್ ಪಿತೄನ್ ॥ ೧೭ ॥

---

ವನೊ, ಅವನ ನೂರು ಜನ್ಮಗಳಲ್ಲಿ ಆರ್ಜಿಸಿದ ಪಾಪಗಳೂ ಕೂಡ ನಾಶ ವಾಗುವುವು.

೧೨. ನನ್ನ ನಿದ್ರೆಯ ಕಾಲದಲ್ಲಿ ಮನುಷ್ಯನು ಭಕ್ತಿಭಾವದಿಂದ ಘಂಟಾನಾದ ವನ್ನು ಮಾಡಬೇಕು. ನನ್ನ ಅರ್ಚನೆಯ ವೇಳೆಯಲ್ಲಿ ಮಾಡಿದ ಘಂಟಾನಾದವು ಕೋಟಿಗುಣಿತವಾದ ಫಲವನ್ನು ಕೊಡುವುದು.

೧೩–೧೫. ದೇವದೇವನೂ, ಗರುಡವಾಹನನೂ, ಶಂಖ, ಚಕ್ರ, ಗದಾ, ಪದ್ಮಗಳನ್ನು ಕೈಗಳಲ್ಲಿ ಹಿಡಿದಿರುವವನೂ, ಲಕ್ಷ್ಮೀಸಮೇತನೂ, ಆದ ನನ್ನನ್ನು ಯಾರು ಪೂಜೆಮಾಡುವರೊ, ಅವರು ತೀರ್ಥಸೇವನೆಗಳಿಂದಲೂ, ದೇವತಾ ದರ್ಶನಗಳಿಂದಲೂ, ಯಜ್ಞಗಳನ್ನು ಮಾಡುವುದರಿಂದಲೂ, ವ್ರತನಿಯಮ ಗಳಿಂದಲೂ, ದಾನಧರ್ಮಗಳಿಂದಲೂ, ಉಪವಾಸಗಳಿಂದಲೂ ಸಂಪಾದಿಸ ಬೇಕಾದುದೇನು? ಗರುಡವಾಹನನಾಗಿರುವ ನನ್ನ ಮೂರ್ತಿಯನ್ನು ಯಾರು ಈ ಕಲಿಯುಗದಲ್ಲಿ ಪ್ರತಿಷ್ಠೆಗೊಳಿಸುವರೊ, ಅವರು ಕೋಟಿಕಲ್ಪಗಳವರೆಗೂ ನನ್ನ ವೈಕುಂಠಲೋಕದಲ್ಲಿ ಸ್ಥಾನವನ್ನು ಹೊಂದುವರು.

೧೬. ನನ್ನ ಸಮ್ಮುಖದಲ್ಲಿ ಯಾವನು ಸಹಸ್ರಕೋಟಿ ತೀರ್ಥಗಳ ಉದಕ ಗಳನ್ನು ಸ್ಥಾಪಿಸುವನೊ, ಅವನ ಪ್ರಾಸಾದದಲ್ಲಿಯೂ ಮನೆಯಲ್ಲಿಯೂ ಸಕಲ ದೇವತೆಗಳೂ ವಾಸಮಾಡುತ್ತಿರುವರು.

೧೭. ಯಾವ ಧನ್ಯಪುರುಷನು ಗರುಡವಾಹನನಾದ ನನ್ನನ್ನು ಕುರಿತು ಭಕ್ತಿಭಾವಭರಿತನಾಗಿ ಏಕಾದಶಿಯ ರಾತ್ರಿಯಲ್ಲಿ ಗೀತನೃತ್ಯಾದಿ ಸಲಕರಣೆ

ಪುನಶ್ಚ ಕಥಯಿಷ್ಯಾಮಿ ಶೃಣು ಘಂಟಾಮಹಂ ಸುತ ॥ ೧೮ ॥
ಮಮ ನಾಮಾಂಕಿತಾ ಘಂಟಾ ಪುರತೋ ಯಾ ಚ ತಿಷ್ಠತಿ ।
ಅರ್ಚಿತಾ ವೈಷ್ಣವೀ ಯತ್ರ ತತ್ರ ಮಾಂ ವಿದ್ಧಿ ಪುತ್ರಕ ॥ ೧೯ ॥
ಯಸ್ತು ವಾದಯತೇ ಘಂಟಾಂ ವೈನತೇಯವಿಚಿಹ್ನಿತಾಂ ।
ಧೂಪೇ ನೀರಾಜನೇ ಸ್ನಾನೇ ಪೂಜಾಕಾಲೇ ವಿಲೇಪನೇ ॥ ೨೦ ॥
ಮಮಾಗ್ರೇ ಪ್ರತ್ಯಹಂ ವತ್ಸ ಪ್ರತ್ಯೇಕಂ ಲಭತೇ ಫಲಂ ।
ಮಖಾಯುತಂ ಗೋಽಯುತಂ ಚ ಚಾಂದ್ರಾಯಣಶತೋದ್ಭವಂ ॥
ವಿಧಿಬಾಹ್ಯಕೃತಾ ಪೂಜಾ ಸಫಲಾ ಜಾಯತೇ ನೃಣಾಂ ।
ಘಂಟಾನಾದೇನ ತುಷ್ಟೋಽಹಂ ಪ್ರಯಚ್ಛಾಮಿ ಸ್ವಕಂ ಪದಂ ॥ ೨೨ ॥
ನಾಗಾರೀಚಿಹ್ನಿತಾ ಘಂಟಾ ರಥಾಂಗೇನ ಸಮನ್ವಿತಾ ।
ವಾದನಾತ್ಕುರುತೇ ನಾಶಂ ಜನ್ಮಕೋಟಿಭಯಸ್ಯ ವೈ ॥ ೨೩ ॥

---

ಗಳಿಂದ ಪೂಜೆಯನ್ನು ಮಾಡುವನೊ, ಅವನು ತನ್ನ ಪಿತೃಗಳೆಲ್ಲರನ್ನೂ ಉದ್ಧರಿಸುವನು.

೧೮. ಎಲೈ ಸುತನೆ! ಪುನಃ ನಿನಗೆ ಘಂಟೆಯ ಮಾಹಾತ್ಮ್ಯೆಯನ್ನು ವಿಸ್ತರಿಸುವೆನು. ಶ್ರದ್ಧೆಯಿಂದ ಕೇಳುವವನಾಗು.

೧೯. ನನ್ನ ಹೆಸರಿನಿಂದ ಚಿಹ್ನಿತವಾಗಿರುವ ವಿಷ್ಣುಪ್ರಿಯವಾದ ಘಂಟೆಯು ನನ್ನ ಸಮ್ಮುಖದಲ್ಲಿಡಲ್ಪಟ್ಟು ಎಲ್ಲಿ ಪೂಜಿಸಲ್ಪಡುವುದೊ, ಅಲ್ಲಿಯೇ ನಾನು ನೆಲೆಸಿರುವೆನೆಂದು ತಿಳಿದುಕೊ.

೨೦–೨೧. ವತ್ಸನೆ! ಯಾವನು ಗರುಡಲಾಂಛನದಿಂದ ಕೂಡಿದ ಘಂಟೆಯನ್ನು ಧೂಪಾಘ್ರಾಣದ ವೇಳೆಯಲ್ಲಿಯೂ, ದೀಪದೊಡನೆಯೂ, ಸ್ನಾನ ಕಾಲದಲ್ಲಿಯೂ, ಪುಷ್ಪಪೂಜೆಯ ಸಮಯದಲ್ಲಿಯೂ, ಗಂಧಾದಿಲೇಪನೆಗಳೊಡನೆಯೂ ನನ್ನೆದುರಿನಲ್ಲಿ ಪ್ರತಿದಿವಸವೂ ಬಾಜಿಸುತ್ತಿರುವನೊ, ಅವನು ಈ ಒಂದೊಂದು ಸೇವೆಗೂ ಹತ್ತುಸಾವಿರ ಯಜ್ಞಗಳ ಫಲವನ್ನೂ, ಹತ್ತುಸಾವಿರ ಗೋದಾನಗಳ ಪುಣ್ಯವನ್ನೂ, ಒಂದು ನೂರು ಚಾಂದ್ರಾಯಣವ್ರತಗಳ ಫಲವನ್ನೂ ಪಡೆಯುವನು.

೨೨. ವಿಧಿವಿಹೀನವಾಗಿ ಮಾಡಿದ ಪೂಜೆಯೂ ಕೂಡ ಘಂಟಾನಾದದಿಂದ ಮನುಷ್ಯರಿಗೆ ಫಲದಾಯಕವಾಗಿ ಪರಿಣಮಿಸುವುದು. ಘಂಟೆಯ ಶಬ್ದದಿಂದ ಸಂತುಷ್ಟನಾಗಿ ನಾನು ಅವರಿಗೆ ನನ್ನ ಸ್ಥಾನವನ್ನು ಕೊಡುವೆನು.

೨೩. ಗರುಡಚಿಹ್ನಿತವಾದ ಘಂಟೆಯೂ, ಚಕ್ರಾಂಕಿತವಾದ ಘಂಟೆಯೂ ವಾದನಮಾತ್ರದಿಂದ ಕೋಟಿ ಜನ್ಮಗಳಲ್ಲಿ ಸಂಪಾದಿಸಿದ ಪಾಪದ ಭಯವನ್ನೂ ನಾಶಗೊಳಿಸುವುದು.

ಗರುಡೇನಾಂಕಿತಾಂ ಘಂಟಾಂ ದೃಷ್ಟ್ವಾಽಹಂ ಪ್ರತ್ಯಹಂ ಮುದಾ ।
ಪ್ರೀತಿಂ ಕರೋಮಿ ದೇವೇಶ ಲಕ್ಷ್ಮೀಂ ಪ್ರಾಪ್ಯ ಯಥಾಽಧನಃ ॥ ೨೪ ॥
ಘಂಟಾದಂಡಸ್ಯ ಶಿರಸಿ ಸುಚಕ್ರಂ ಸ್ಥಾಪಯೇತ್ತು ಯಃ ।
ಮತ್ಪ್ರಿಯಂ ವೈನತೇಯಂ ವಾ ಸ್ಥಾಪಿತಂ ಭುವನತ್ರಯಂ ॥ ೨೫ ॥
ಘಂಟಾನಾದಂ ಸಚಕ್ರಂ ಚ ಅಂತಕಾಲೇ ಶೃಣೋತಿ ಯಃ ।
ಪಾಪಕೋಟಿಯುತಸ್ಯಾಽಪಿ ನಶ್ಯಂತಿ ಯಮಕಿಂಕರಾಃ ॥ ೨೬ ॥
ಸರ್ವೇ ದೋಷಾಃ ಪ್ರಣಶ್ಯಂತಿ ಘಂಟಾನಾದೇನ ವೈ ಸುತ ।
ದೇವತಾನಾಂ ಸ ರುದ್ರಾಣಾಂ ಪಿತೄಣಾಮುತ್ಸವೋ ಭವೇತ್ ॥ ೨೭ ॥
ಅಭಾವೇ ವೈನತೇಯಸ್ಯ ಚಕ್ರಸ್ಯಾಪಿ ನ ಸಂಶಯಃ ।
ಘಂಟಾನಾದೇನ ಭಕ್ತಾನಾಂ ಪ್ರಸಾದಂ ಪ್ರಕರೋಮ್ಯಹಂ ॥ ೨೮ ॥
ಗೃಹೇ ಯಸ್ಮಿನ್ ಭವೇನ್ನಿತ್ಯಂ ಘಂಟಾ ನಾಗಾರಿಸಂಯುತಾ ।
ಸರ್ಪಾಣಾಂ ನ ಭಯಂ ತತ್ರ ನಾಗ್ನಿವಿದ್ಯುತ್ಸಮುದ್ಭವಂ ॥ ೨೯ ॥

೨೪. ಎಲೈ ದೇವಮುಖ್ಯನೆ! ಗರುಡವಿಗ್ರಹಯುಕ್ತವಾದ ಘಂಟೆಯನ್ನು ಕಂಡು ನಾನು ಪ್ರತಿದಿನವೂ ಐಶ್ವರ್ಯವನ್ನು ಪಡೆದ ಬಡವನಂತೆ ಸಂತೋಷಗೊಂಡು ಆ ಭಕ್ತನಿಗೆ ಸುಖವನ್ನುಂಟುಮಾಡುವೆನು.

೨೫. ಘಂಟೆಯ ಹಿಡಿಯ ಮೇಲೆ ಸುದರ್ಶನ ಚಕ್ರವನ್ನಾಗಲಿ, ನನಗೆ ಪ್ರಿಯನಾದ ಗರುಡನನ್ನಾಗಲಿ ಯಾವನು ಸ್ಥಾಪಿಸಿರುವನೊ, ಅವನಿಂದ ಮೂರು ಲೋಕಗಳೂ ಸ್ಥಿರಗೊಳಿಸಲ್ಪಟ್ಟಿರುವುವೆಂದು ತಿಳಿಯಬೇಕು.

೨೬. ಚಕ್ರಲಾಂಛನ ಸಹಿತವಾದ ಘಂಟೆಯ ನಾದವನ್ನು ದೇಹಾವಸಾನದ ಸಮಯದಲ್ಲಿ ಕೇಳುವ ಮನುಷ್ಯನು ಅನೇಕ ಕೋಟಿ ಪಾಪಗಳನ್ನು ಮಾಡಿದ್ದರೂ ಯಮಕಿಂಕರರು ಅವನ ಹತ್ತಿರಕ್ಕೆ ಸುಳಿಯಲಾರರು.

೨೭. ಮಗನೆ! ಘಂಟೆಯನ್ನು ಬಾಜಿಸುವುದರಿಂದ ಸಕಲ ದೋಷಗಳೂ ದೂರವಾಗುವುವು. ಆ ನಾದವು ದೇವತೆಗಳಿಗೂ, ರುದ್ರರಿಗೂ, ಪಿತೃಗಳಿಗೂ ಮಹೋತ್ಸವವನ್ನುಂಟುಮಾಡುವುದು.

೨೮. ವೈನತೇಯ ಮತ್ತು ಸುದರ್ಶನಗಳ ಚಿಹ್ನೆಗಳಿಲ್ಲದಿದ್ದರೂ ಸಹ ಘಂಟೆಯನ್ನು ಬಾಜಿಸುವ ಮಾತ್ರದಿಂದಲೇ ನಾನು ಭಕ್ತರಿಗೆ ಅನುಗ್ರಹವನ್ನು ಮಾಡುವೆನೆಂಬುದರಲ್ಲಿ ಸಂದೇಹವಿಲ್ಲ.

೨೯. ಯಾವ ಮನೆಯಲ್ಲಿ ನಿತ್ಯವೂ ಗರುಡಚಿಹ್ನಿತವಾದ ಘಂಟೆಯ ನಾದವುಂಟಾಗುತ್ತಿರುವುದೊ, ಅಲ್ಲಿ ಸರ್ಪಗಳ ಭಯವಾಗಲಿ, ಬೆಂಕಿ ಸಿಡಿಲುಗಳ ಉಪದ್ರವಗಳಾಗಲಿ ಸಂಭವಿಸಲಾರವು.

ಯಸ್ಯ ಘಂಟಾ ಗೃಹೇ ನಾಸ್ತಿ ಶಂಖೋ ನ ಪುರತೋ ಮಮ ।
ಕಥಂ ಭಾಗವತೋ ಜ್ಞೇಯಃ ಕಥಂ ಭವತಿ ವಲ್ಲಭಃ ॥ ೩೦ ॥
ಚಂದನಸ್ಯ ಪ್ರವಕ್ಷ್ಯಾಮಿ ಮಾಹಾತ್ಮ್ಯಂ ತವ ಪುತ್ರಕ ।
ಯಸ್ಮಿನ್ ಕೃತೇ ಭವೇತ್ಪ್ರೀತಿಃ ಮಮಾತ್ಯಂತಂ ನ ಸಂಶಯಃ ॥ ೩೧ ॥
ಸಚಂದನಂ ಸಕುಸುಮಂ ಕರ್ಪೂರಾಗರುಮಿಶ್ರಿತಂ ।
ಮೃಗನಾಭಿಸಮಾಯುಕ್ತಂ ಜಾತೀಫಲಸಮನ್ವಿತಂ ॥ ೩೨ ॥
ತುಲಸೀಚಂದನೋಪೇತಂ ಮಮಾತ್ಯಂತಸುಖಾವಹಂ ।
ಯೋ ದದಾತಿ ಹಿ ಮಾಂ ನಿತ್ಯಂ ತುಲಸೀಕಾಷ್ಠಸಂಭವಂ ॥ ೩೩ ॥
ಯುಗಾನಿ ವಸತೇ ಸ್ವರ್ಗೇ ಹ್ಯನಂತಾನಿ ನರೋತ್ತಮಃ ।
ಮಹಾವಿಷ್ಣೋಃ ಕಲೌ ಭಕ್ತ್ಯಾ ದತ್ವಾ ತುಲಸಿಚಂದನಂ ॥ ೩೪ ॥
ಅರ್ಚಯೇನ್ಮಾಲತೀಪುಷ್ಪೈರ್ನ ಭೂಯಃ ಸ್ತನಪೋ ಭವೇತ್ ।
ತುಲಸೀಕಾಷ್ಠಸಂಭೂತಂ ಚಂದನಂ ಯಚ್ಛತೇ ಮಮ ॥ ೩೫ ॥
ದಹಾಮಿ ಪಾತಕಂ ಸರ್ವಂ ಪೂರ್ವಜನ್ಮಶತೈಃ ಕೃತಂ ।
ಸರ್ವೇಷಾಮೇವ ದೇವಾನಾಂ ತುಲಸೀಕಾಷ್ಠಚಂದನಂ ॥ ೩೬ ॥

---

೩೦. ಯಾವನ ಮನೆಯಲ್ಲಿ ಘಂಟೆಯಿಲ್ಲವೊ, ನನ್ನೆದುರಿನಲ್ಲಿ ಶಂಖವೂ ಪೂಜಿಸಲ್ಪಡುವುದಿಲ್ಲವೊ, ಅವನನ್ನು ಭಾಗವತನೆಂದು ಹೇಗೆ ತಿಳಿಯಬೇಕು? ಅವನು ನನಗೆ ಹೇಗೆ ಪ್ರೀತಿಪಾತ್ರನಾಗುವನು?

೩೧. ಪುತ್ರನೆ! ಇನ್ನು ಚಂದನ ಲೇಪನದ ಮಾಹಾತ್ಮ್ಯವನ್ನು ನಿನಗೆ ಹೇಳುವೆನು. ಅದನ್ನು ಮಾಡುವುದರಿಂದ ನನಗೆ ಅಪರಿಮಿತವಾದ ಸಂತೋಷ ವುಂಟಾಗುವುದರಲ್ಲಿ ಸಂಶಯವಿಲ್ಲ.

೩೨–೩೪. ಚಂದನ, ಪುಷ್ಪ, ಕರ್ಪೂರ, ಅಗರು, ಮುಂತಾದುವುಗಳಿಂದ ಮಾಡಲ್ಪಟ್ಟು ಕಸ್ತೂರಿಯಿಂದ ಕೂಡಿದುದಾಗಿ ಜಾಜಿಕಾಯಿಯ ಗಂಧದೊಡನೆಯೂ, ತುಲಸೀಚಂದನದೊಡನೆಯೂ, ತುಲಸೀಕಾಷ್ಠಗಳ ಗಂಧದೊಡನೆಯೂ ಕೂಡಿ ನನಗೆ ಅತ್ಯಂತ ಸುಖವನ್ನುಂಟುಮಾಡುವಂತಹ ಲೇಪನವನ್ನು ನಿತ್ಯವೂ ಯಾವನು ಸಮರ್ಪಿಸುವನೊ, ಆ ಮನುಷ್ಯೋತ್ತಮನು ಅನಂತ ಯುಗಗಳ ವರೆವಿಗೂ ಸ್ವರ್ಗಲೋಕದಲ್ಲಿ ವಾಸಮಾಡುವನು.

೩೫–೩೬. ಕಲಿಯುಗದಲ್ಲಿ ಭಕ್ತಿಯಿಂದ ಮಹಾವಿಷ್ಣುವಿಗೆ ತುಲಸಿಚಂದನ ವನ್ನು ಲೇಪಿಸಿ ಮಾಲತೀ ಪುಷ್ಪಗಳಿಂದ ಪೂಜೆಯನ್ನು ಮಾಡುವವನು ಮತ್ತೆ ತಾಯಿಯ ಸ್ತನ್ಯವನ್ನು ಪಾನಮಾಡುವುದಿಲ್ಲ. ತುಲಸೀಕಾಷ್ಠಗಳ ಗಂಧವನ್ನು ನನಗೆ ನಿವೇದನೆ ಮಾಡುವವನಿಗೆ ಪೂರ್ವದ ನೂರಾರು ಜನ್ಮಗಳಲ್ಲಿ ಮಾಡಿದ ಸಮಸ್ತ ಪಾತಕಗಳನ್ನೂ ಭಸ್ಮಗೊಳಿಸುವೆನು.

ಪಿತ್ರೂಣಾಂ ಚ ವಿಶೇಷೇಣ ಸದಾಽಭೀಷ್ಟಂ ಯಥಾ ಮಮ ॥ ೩೭ ॥
ಶ್ರೀಖಂಡಂ ಚಂದನಂ ತಾವತ್ ಶ್ರೇಷ್ಠಂ ಕೃಷ್ಣಾಗರುಂ ತಥಾ ।
ಯಾವನ್ನ ದೀಯತೇ ಮಹ್ಯಂ ತುಲಸೀಕಾಷ್ಠಚಂದನಂ ॥ ೩೮ ॥
ತಾವತ್ಕಸ್ತೂರಿಕಾಮೋದಃ ಕರ್ಪೂರಸ್ಯ ಸುಗಂಧಿತಾ ।
ಯಾವನ್ನ ದೀಯತೇ ಮಹ್ಯಂ ತುಲಸೀಕಾಷ್ಠಚಂದನಂ ॥ ೩೯ ॥
ಕಲೌ ಯಚ್ಛಂತಿ ಯೇ ಮಹ್ಯಂ ತುಲಸೀಕಾಷ್ಠಚಂದನಂ ।
ಮಾರ್ಗಶೀರ್ಷೇ ಶುಭೇ ಮಾಸೇ ತೇ ಕೃತಾರ್ಥಾ ನ ಸಂಶಯಃ ॥ ೪೦ ॥
ಯೋ ಹಿ ಭಾಗವತೋ ಭೂತ್ವಾ ಕಲೌ ತುಲಸಿಚಂದನಂ ।
ನಾರ್ಪಯೇದ್ವೈ ಸಹೋಮಾಸೇ ನಾಸೌ ಭಾಗವತೋ ನರಃ ॥ ೪೧ ॥
ಕುಂಕುಮಾಗರುಶ್ರೀಖಂಡಕರ್ದಮೈರ್ಮಮ ವಿಗ್ರಹಂ ।
ಆಲಿಂಪೇದ್ವೈ ಸಹೋಮಾಸೇ ಕಲ್ಪಕೋಟಿಂ ವಸೇದ್ದಿವಿ ॥ ೪೨ ॥
ಕರ್ಪೂರಾಗರುಮಿಶ್ರೇಣ ಚಂದನೇನಾನುಲಿಂಪಯೇತ್ ।
ಮೃಗದರ್ಪಂ ವಿಶೇಷೇಣ ಅಭೀಷ್ಟಂ ಚಂದನಂ ಮಮ ॥ ೪೩ ॥

---

೩೭. ತುಲಸೀಕಾಷ್ಠಜನಿತವಾದ ಚಂದನವು ನನಗೆ ಹೇಗೆಯೋ ಹಾಗೆಯೇ ಸಕಲ ದೇವತೆಗಳಿಗೂ, ವಿಶೇಷವಾಗಿ ಪಿತೃಗಳಿಗೂ, ಯಾವಾಗಲೂ ಅಪೇಕ್ಷಿತ ವಾಗಿರುವುದು.

೩೮–೪೦. ಶ್ರೀಖಂಡ, ಚಂದನ, ಉತ್ತಮವಾದ ಕರಿಯ ಗುಗ್ಗುಲ, ತುಲಸೀಕಾಷ್ಠಗಳ ಗಂಧ ಇವು ಎಲ್ಲಿಯವರೆಗೆ ಅರ್ಚಕನಿಗೆ ಲಭಿಸುವುದಿಲ್ಲವೊ, ಅಲ್ಲಿಯವರೆವಿಗೂ ಕರ್ಪೂರದ ಸುವಾಸನೆಯನ್ನೂ ಕಸ್ತೂರಿಯ ಸುಗಂಧವನ್ನೂ ನನಗೆ ಸಮರ್ಪಿಸಬೇಕು. ಮಾರ್ಗಶೀರ್ಷಮಾಸದಲ್ಲಿ ಯಾರು ಕಲಿಕಾಲದಲ್ಲಿ ನನಗೆ ತುಲಸೀಕಾಷ್ಠ ಚಂದನವನ್ನು ಅರ್ಪಿಸುವರೊ, ಅವರು ಕೃತಕೃತ್ಯರೆಂಬ ವಿಷಯದಲ್ಲಿ ಸಂದೇಹವಿಲ್ಲವು.

೪೧. ಯಾವ ಮನುಷ್ಯನು ಕಲಿಯುಗದಲ್ಲಿ ಭಗವದ್ಭಕ್ತನೆನಿಸಿಕೊಂಡು ನನಗೆ ಮಾರ್ಗಶೀರ್ಷಮಾಸದಲ್ಲಿ ತುಲಸಿಚಂದನವನ್ನು ಸಮರ್ಪಿಸುವುದಿಲ್ಲವೊ ಅವನು ನಿಜವಾಗಿಯೂ ಭಾಗವತನಲ್ಲ.

೪೨. ಯಾವನು ಮಾರ್ಗಶಿರಮಾಸದಲ್ಲಿ ನನ್ನ ವಿಗ್ರಹವನ್ನು ಕುಂಕುಮ, ಗುಗ್ಗುಲ, ಶ್ರೀಖಂಡ ಮುಂತಾದುವುಗಳ ಕರ್ದಮದಿಂದ ಲೇಪಿಸುವನೊ, ಅವನು ಕೋಟಿಕಲ್ಪಗಳವರೆವಿಗೂ ಸ್ವರ್ಗಲೋಕದಲ್ಲಿ ವಾಸಮಾಡುವನು.

೪೩. ಕರ್ಪೂರ, ಗುಗ್ಗುಲಗಳಿಂದ ಮಿಶ್ರವಾದ ಚಂದನದಿಂದ ನನ್ನ ಪ್ರತಿಮೆಯನ್ನು ಲೇಪಿಸಬೇಕು. ವಿಶೇಷವಾಗಿ ಕಸ್ತೂರಿಯೇ ನನಗೆ ಯಾವಾಗಲೂ ಅಪೇಕ್ಷಿತವೆನಿಸಿರುವುದು.

ವಿಲೇಪಯತಿ ಯೋ ಮಾಂ ವೈ ಶಂಖೇ ಕೃತ್ವಾ ತು ಚಂದನಂ ।
ಮಾರ್ಗಶೀರ್ಷೇ ತದಾ ಪ್ರೀತಿಂ ಕರೋಮಿ ಶತವಾರ್ಷಿಕೀಂ ॥ ೪೪ ॥
ಸೇವತೇ ತುಲಸೀಪತ್ರೈರ್ನಿತ್ಯಮಾಮಲಕೈಶ್ಚ ಯಃ ।
ಮಾರ್ಗಶೀರ್ಷೇ ಸದಾ ಭಕ್ತ್ಯಾ ಸ ಲಭೇದ್ವಾಂಛಿತಂ ಫಲಂ ॥ ೪೫ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ದ್ವಿತೀಯೇ ವೈಷ್ಣವಖಂಡೇ ಮಾರ್ಗಶೀರ್ಷಮಾಹಾತ್ಮ್ಯೇ ಬ್ರಹ್ಮವಿಷ್ಣುಸಂವಾದೇ
"ಘಂಟಾನಾದ ತುಲಸೀಕಾಷ್ಠ ಚಂದನಾರ್ಪಣ ಫಲಕಥನಂ"
ನಾಮ ಷಷ್ಠೋಽಧ್ಯಾಯಃ

---

೪೪. ಯಾವನು ಮಾರ್ಗಶಿರಮಾಸದಲ್ಲಿ ಪ್ರತಿದಿನವೂ ಚಂದನವನ್ನು ಶಂಖದಲ್ಲಿ ತೆಗೆದುಕೊಂಡು ನನ್ನ ವಿಗ್ರಹಕ್ಕೆ ಲೇಪನೆಮಾಡುವನೊ, ಅವನಿಗೆ ನಾನು ನೂರು ವರ್ಷಗಳವರೆವಿಗೂ ಸಂತೋಷವನ್ನುಂಟುಮಾಡುವೆನು.

೪೫. ಯಾವ ಭಕ್ತನು ಮಾರ್ಗಶೀರ್ಷಮಾಸದಲ್ಲಿ ನಿತ್ಯವೂ ನನ್ನನ್ನು ತುಲಸೀದಳಗಳಿಂದಲೂ ಆಮಲಕಪತ್ರಗಳಿಂದಲೂ ಸೇವಿಸುವನೊ, ಭಕ್ತಿಯುಕ್ತನಾದ ಆತನೇ ಅಭೀಪ್ಸಿತವಾದ ಪದವಿಯನ್ನು ಹೊಂದುವವನು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀಸ್ಕಾಂದಮಹಾಪುರಾಣದ ಎರಡನೆಯ ವೈಷ್ಣವಖಂಡದ ಮಾರ್ಗಶೀರ್ಷಮಾಹಾತ್ಮ್ಯದ
ಬ್ರಹ್ಮವಿಷ್ಣುಸಂವಾದದಲ್ಲಿ "ಘಂಟಾನಾದತುಲಸೀಕಾಷ್ಠಚಂದನಾರ್ಪಣಫಲಕಥನ"
ವೆಂಬ ಆರನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

# ಅಥ ಸಪ್ತಮೋಽಧ್ಯಾಯಃ

## ಜಾತೀಪುಷ್ಪಶ್ರೈಷ್ಠ್ಯಂ — ಸಹಸ್ರಪುಷ್ಪಮಾಲಾರ್ಪಣ ಫಲಕಥನಂ

ಬ್ರಹ್ಮೋವಾಚ :—

ಮಾಹಾತ್ಮ್ಯಂ ವದ ದೇವೇಶ ಪುಷ್ಪಜಾತಿಸಮುದ್ಭವಂ ।
ಯೇನ ಯೇನ ಚ ಪುಷ್ಪೇಣ ಯತ್ಫಲಂ ಲಭತೇ ನರಃ ॥ ೧ ॥

ಶ್ರೀ ಭಗವಾನುವಾಚ :—

ಶೃಣು ಪುತ್ರ ಪ್ರವಕ್ಷ್ಯಾಮಿ ಮಾಹಾತ್ಮ್ಯಂ ಪುಷ್ಪಸಂಭವಂ ।
ಯೇನ ಪುಷ್ಪೇಣ ಮೇ ಪ್ರೀತಿರ್ಭವೇತ್ಸಮ್ಯಙ್ನ ಸಂಶಯಃ ॥ ೨ ॥
ಮಲ್ಲಿಕಾ ಮಾಲತೀ ಚೈವ ಯೂಥಿಕಾ ಜಾತಿಮುಕ್ತಕಾ ।
ಪಾಟಲಾ ಕರವೀರಂ ಚ ಜಯಂತೀ ವಿಜಯಾ ತಥಾ ॥ ೩ ॥
ಕುಬ್ಜಕಸ್ತಬಕಶ್ಚೈವ ಕರ್ಣಿಕಾರಂ ಕುರಂಟಕಃ ।
ಚಂಪಕಶ್ಚೂತಕಃ ಕುಂದೋ ಬಾಣಃ ಕರ್ಚೂರಮಲ್ಲಿಕಾ ॥ ೪ ॥
ಅಶೋಕಸ್ತಿಲಕಶ್ಚೈವ ತಥೈವಾಪರಯೂಥಿಕಃ ।
ಅಮೀ ಪುಷ್ಪಪ್ರಕಾರಾಸ್ತು ಶಸ್ತಾ ಮೇ ಪೂಜನೇ ಸುತ ॥ ೫ ॥

---

## ಕನ್ನಡದ ಅನುವಾದ

### ಜಾತೀಪುಷ್ಪಶ್ರೈಷ್ಠ್ಯಂ—ಸಹಸ್ರಪುಷ್ಪಮಾಲಾರ್ಪಣಫಲಕಥನ

೧. ಬ್ರಹ್ಮದೇವನು ಪ್ರಶ್ನೆಮಾಡುತ್ತಾನೆ:— ಎಲೈ ದೇವನಾಯಕನೆ! ಯಾವ ಪುಷ್ಪಗಳಿಂದ ನಿನ್ನನ್ನು ಪೂಜಿಸಲು ಮನುಷ್ಯನು ಯಾವ ಫಲಗಳನ್ನು ಪಡೆಯುವನೆಂಬ ವಿಷಯದಲ್ಲಿ ಪುಷ್ಪಜಾತಿಗಳ ಮಾಹಾತ್ಮ್ಯವನ್ನು ನನಗೆ ತಿಳಿಯಹೇಳು.

೨. ಭಗವಂತನು ಹೇಳುತ್ತಾನೆ:— ಎಲೈ ಪುತ್ರನೆ! ಪುಷ್ಪಗಳಲ್ಲಿರುವ ಮಾಹಾತ್ಮ್ಯೆಯನ್ನೂ ಯಾವ ಪುಷ್ಪದಿಂದ ನನಗೆ ನಿಜವಾದ ಪ್ರೀತಿಯುಂಟಾಗುವುದರಲ್ಲಿ ಸಂದೇಹವಿಲ್ಲವೆಂಬ ವಿಚಾರವನ್ನೂ ನಿನಗೆ ವಿಸ್ತರಿಸಿ ಹೇಳುವೆನು, ಕೇಳು.

೩–೫. ಮಲ್ಲಿಗೆ, ಮಾಲತಿ, ಅಡವಿಮಲ್ಲಿಗೆ, ತಿನಿಶಿ, ಪಾದರಿ, ಕಣಿಗಲೆ, ಜಯಂತಿ, ವಿಜಯ, ಕುಬ್ಜಕ, ಕರ್ಣಿಕಾರ, ಕುರಂಟಕ (ಗೋರಂಟಿ), ಸಂಪಗೆ, ಚೂತಕ, ಮಲ್ಲೆ, ಬಾಣ, ಕಚೋರಮಲ್ಲಿಗೆ, ಅಶೋಕ, ತಿಲಕ, ಮತ್ತು ಅಪರಯೂಥಿಕಗಳೆಂಬ ಈ ಪುಷ್ಪಜಾತಿಗಳು ನನ್ನ ಪೂಜೆಗೆ ಪ್ರಶಸ್ತಗಳಾದುವೆಂದು ತಿಳಿಯಬೇಕು.

ಕೇತಕೀಪತ್ರಪುಷ್ಪಂ ಚ ಭೃಂಗರಾಜಸ್ತಥೈವ ಚ ।
ತುಲಸೀಪತ್ರಪುಷ್ಪಂ ಚ ಸದ್ಯಃ ಪ್ರೀತಿಕರಂ ಮಮ ॥ ೬ ॥
ಪದ್ಮಾನ್ಯಂಬುಸಮುತ್ಥಾನಿ ರಕ್ತನೀಲೋತ್ಪಲೇ ತಥಾ ।
ಪೀತೋತ್ಪಲಂ ಸಹೋಮಾಸೇ ಮಮಾತ್ಯಂತಂ ಹಿ ವಲ್ಲಭಂ ॥ ೭ ॥
ತಾನ್ಯೇವ ಚ ಪ್ರಶಸ್ತಾನಿ ಕುಸುಮಾನಿ ಚ ಮೇ ಸುತ ।
ಯಾನಿ ಸ್ಯುರ್ವರ್ಣಯುಕ್ತಾನಿ ರಸಗಂಧಯುತಾನಿ ಚ ॥ ೮ ॥
ನಿರ್ಗಂಧಾನ್ಯಪಿ ಶಸ್ತಾನಿ ಕುಸುಮಾನಿ ಮತಾನಿ ಮೇ ।
ಸುರಭೀಣಿ ತಥಾಽನ್ಯಾನಿ ವರ್ಜಯಿತ್ವಾ ತು ಕೇತಕೀಂ ॥ ೯ ॥
ಬಾಣಂ ಚ ಚಂಪಕಾಶೋಕಂ ಕರವೀರಂ ಚ ಯೂಥಿಕಾ ।
ಪಾರಿಭದ್ರಂ ಪಾಟಲಾ ಚ ಬಕುಲಂ ಗಿರಿಶಾಲಿನೀ ॥ ೧೦ ॥
ಬಿಲ್ವಪತ್ರಂ ಶಮೀಪತ್ರಂ ಪತ್ರಂ ಭೃಂಗಿರಜಸ್ಯ ಚ ।
ತಮಾಲಾಮಲಕೀಪತ್ರಂ ಶಸ್ತಂ ಮೇ ಪೂಜನೇ ಸುತ ॥ ೧೧ ॥
ಪುಷ್ಪೈರರಣ್ಯಸಂಭೂತೈಃ ಪತ್ರೈರ್ವಾ ಗಿರಿಸಂಭವೈಃ ।
ಅಪರ್ಯುಷಿತ ನಿಶ್ಛಿದ್ರೈಃ ಪ್ರೋಕ್ಷಿತೈರ್ಜಂತುವರ್ಜಿತೈಃ ॥ ೧೨ ॥

---

೬. ಕೇದಿಗೆಯ ಪುಷ್ಪದ ಪತ್ರಗಳೂ, ಭೃಂಗರಾಜಪುಷ್ಪವೂ, ತುಲಸೀ ಪತ್ರ ಪುಷ್ಪಗಳೂ, ನನಗೆ ತತ್‌ಕ್ಷಣದಲ್ಲಿಯೇ ಆನಂದವನ್ನುಂಟುಮಾಡುವುವು.

೭. ನೀರಿನಲ್ಲಿ ಬೆಳೆದಿರುವ ಕಮಲಗಳೂ, ಕೆಂದಾವರೆಗಳೂ, ಕನ್ನೈದಿಲೆಗಳೂ, ಬಿಳಿದಾವರೆಗಳೂ, ಮಾರ್ಗಶಿರಮಾಸದಲ್ಲಿ ನನಗೆ ಅತ್ಯಂತ ಹಿತವನ್ನುಂಟುಮಾಡುವುವು.

೮. ಪುತ್ರನೆ! ಯಾವ ಪುಷ್ಪಗಳು ವರ್ಣವಿಶಿಷ್ಟಗಳಾಗಿರುವುವೊ, ಮತ್ತು ರಸಗಂಧಾಢ್ಯಗಳಾಗಿರುವುವೊ, ಅವುಗಳೇ ನನ್ನ ಪೂಜೆಗೆ ಬಹಳ ಪ್ರಶಸ್ತಗಳಾಗಿರುವುವು.

೯. ಗಂಧರಹಿತಗಳಾದ ಪುಷ್ಪಗಳೂ ಪ್ರಶಸ್ತಗಳೆಂಬುದಾಗಿ ನನ್ನ ಮತವಾಗಿರುವುದು. ಅಲ್ಲದೆ ಕೇದಿಗೆಯೊಂದನ್ನು ಬಿಟ್ಟು ಸುಗಂಧಯುಕ್ತಗಳಾದ ಇತರ ಪುಷ್ಪಗಳೂ ಕೂಡ ನನಗೆ ಪ್ರಿಯವನ್ನುಂಟುಮಾಡುವುವು.

೧೦–೧೧. ಬಾಣ, ಸಂಪಗೆ, ಅಶೋಕ, ಕಣಗಿಲೆ, ಜಾಜಿ, ಪಾರಿಭದ್ರ, ಪಾಟಲ, ಬಕುಲ, ಗಿರಿಕರ್ಣಿಕೆ, ಬಿಲ್ವಪತ್ರೆ, ಶಮೀಪತ್ರೆ, ಭೃಂಗರಾಜಪತ್ರೆ, ತಮಾಲ ಪತ್ರೆ ಮತ್ತು ಆಮಲಕಪತ್ರೆಗಳೇ ನನ್ನ ಪೂಜೆಯಲ್ಲಿ ಶ್ರೇಷ್ಠಗಳೆನಿಸಿರುವುವು.

೧೨–೧೩. ಅರಣ್ಯದಲ್ಲಿ ಶೇಖರಿಸಿದ ಪುಷ್ಪಗಳಿಂದಾಗಲಿ, ಪರ್ವತಪ್ರದೇಶಗಳಲ್ಲಿ ಬೆಳೆದಿರುವ ಪತ್ರಗಳಿಂದಾಗಲಿ, ಕೃಷಿಮಾಡಿ ಬೆಳಸಿದ ತೋಟಗಳ ಹೂವು

ಅಥಾಽರಾಮೋದ್ಭವೈರ್ವಾಪಿ ಪುಷ್ಪೈಸ್ಸಂಪೂಜಯೇಚ್ಚ ಮಾಂ ।
ಪುಷ್ಪಜಾತಿವಿಶೇಷೇಣ ಭವೇತ್ಪುಣ್ಯಂ ವಿಶೇಷತಃ ॥ ೧೩ ॥
ತಪಃಶೀಲಗುಣೋಪೇತೇ ಪಾತ್ರೇ ದೇವಸ್ಯ ಪಾರಗೇ ।
ದಶ ದತ್ವಾ ಸುವರ್ಣಾನಿ ಯತ್ಫಲಂ ಲಭತೇ ನರಃ ।
ತತ್ಫಲಂ ಲಭತೇ ಮರ್ತ್ಯಃ ಸಹೇ ಕುಸುಮದಾನತಃ ॥ ೧೪ ॥
ದ್ರೋಣಪುಷ್ಪೇ ತಥೈಕಸ್ಮಿನ್ ಮಹ್ಯಂ ಚ ವಿನಿವೇದಿತೇ ।
ದಶ ದತ್ವಾ ಸುವರ್ಣಾನಿ ಫಲಂ ತದಧಿಕಂ ಸುತ ॥ ೧೫ ॥
ಪುಷ್ಪಾತ್ಪುಷ್ಪಾಂತರೇ ಭೇದೋ ಯಥಾಸೀತ್ತನ್ನಿಬೋಧ ಮೇ ॥ ೧೬ ॥
ದ್ರೋಣಪುಷ್ಪಸಹಸ್ರೇಭ್ಯಃ ಖಾದಿರಂ ತು ವಿಶಿಷ್ಯತೇ ।
ಖಾದಿರಾತ್ ಪುಷ್ಪಸಾಹಸ್ರಾತ್ ಶಮೀಪುಷ್ಪಂ ವಿಶಿಷ್ಯತೇ ॥ ೧೭ ॥
ಶಮೀಪುಷ್ಪಸಹಸ್ರೇಭ್ಯೋ ಬಿಲ್ವಪುಷ್ಪಂ ವಿಶಿಷ್ಯತೇ ।
ಬಿಲ್ವಪುಷ್ಪಸಹಸ್ರೇಭ್ಯೋ ಬಕಪುಷ್ಪಂ ವಿಶಿಷ್ಯತೇ ॥ ೧೮ ॥

---

ಗಳಿಂದಾಗಲಿ, ಸೂರ್ಯೋದಯವಾದ ಮೇಲೆ ಅರಳಿರುವುವೂ, ಛಿದ್ರಗಳಾಗದಿರುವುವೂ, ನೀರಿನಲ್ಲಿ ತೊಳೆದಿರುವುವೂ ಕ್ರಿಮಿವರ್ಜಿತಗಳಾಗಿರುವುವೂ ಆದ ಪುಷ್ಪಗಳಿಂದಲೇ ನನ್ನನ್ನು ಪೂಜಿಸಬೇಕು. ಪುಷ್ಪಗಳಲ್ಲಿ ಜಾತಿ ವಿಶೇಷಗಳಿದ್ದಷ್ಟೂ ಪುಣ್ಯವಿಶೇಷವು ಅರ್ಚಕನಿಗೆ ಲಭಿಸುವುದು.

೧೪. ತಪಸ್ಸು ಮತ್ತು ಆಚಾರಗಳಿಂದ ಕೂಡಿದವನೂ, ಸತ್ಪಾತ್ರನೂ, ವೇದವೇದಾಂಗಪಾರಂಗತನೂ ಆದವನಿಗೆ ಹತ್ತು ಸುವರ್ಣಗಳನ್ನು ಕೊಡುವುದರಿಂದ ಯಾವ ಫಲವುಂಟಾಗುವುದೊ, ನನ್ನ ಭಕ್ತನು ಅದೇ ಫಲವನ್ನೇ ಮಾರ್ಗಶೀರ್ಷಮಾಸದಲ್ಲಿ ಪುಷ್ಪಾರ್ಚನೆಯನ್ನು ಮಾಡುವುದರಿಂದ ಸಂಪಾದಿಸುವನು.

೧೫. ಎಲೈ ಪುತ್ರನೆ! ಒಂದೇ ಒಂದು ದ್ರೋಣಪುಷ್ಪವನ್ನು ನನಗೆ ನಿವೇದನೆಮಾಡುವುದರಿಂದ ಹತ್ತು ಸುವರ್ಣಗಳನ್ನು ಸಮರ್ಪಿಸಿದುದಕ್ಕಿಂತಲೂ ಅಧಿಕವಾದ ಫಲವು ಲಭಿಸುವುದು.

೧೬. ಒಂದು ಜಾತಿಯ ಪುಷ್ಪಗಳಿಗೂ, ಜಾತ್ಯಂತರ ಪುಷ್ಪಗಳಿಗೂ ಇರುವ ಪೂಜಾಕಲ್ಪಭೇದವನ್ನು ತಿಳಿಸುವೆನು, ಶ್ರದ್ಧೆಯಿಂದ ಕೇಳು.

೧೭. ಒಂದು ಸಾವಿರ ದ್ರೋಣಪುಷ್ಪಗಳಿಗಿಂತಲೂ ಒಂದು ಖಾದಿರ ಪುಷ್ಪವು ಪ್ರಶಸ್ತವಾಗಿರುವುದು. ಒಂದು ಸಹಸ್ರ ಖಾದಿರ ಪುಷ್ಪಗಳನ್ನು ಒಂದು ಶಮೀ ಪುಷ್ಪವು ಮೀರಿಸುವುದು.

೧೮. ಶಮೀಪುಷ್ಪಗಳ ಒಂದು ಸಾವಿರಕ್ಕಿಂತ ಒಂದು ಬಿಲ್ವಪುಷ್ಪವು ಹೆಚ್ಚೆನಿಸಿರುವುದು. ಸಾವಿರ ಬಿಲ್ವಪುಷ್ಪಗಳಿಗಿಂತ ಒಂದು ಬಕಪುಷ್ಪವು ಅಧಿಕವಾಗಿರುವುದು.

ಬಕಪುಷ್ಪಸಹಸ್ರೇಭ್ಯೋ ನಂದ್ಯಾವರ್ತಂ ವಿಶಿಷ್ಯತೇ ।
ನಂದ್ಯಾವರ್ತಸಹಸ್ರಾದ್ಧಿ ಕರವೀರಂ ವಿಶಿಷ್ಯತೇ ॥ ೧೯ ॥
ಕರವೀರಸಹಸ್ರಸ್ಯ ಕುಸುಮಂ ಶ್ವೇತಮುತ್ತಮಂ ।
ಕರವೀರಶ್ವೇತಪುಷ್ಪಾತ್ಪಾಲಾಶಂ ಪುಷ್ಪಮುತ್ತಮಂ ॥ ೨೦ ॥
ಪಾಲಾಶಪುಷ್ಪಸಾಹಸ್ರಾತ್ ಕುಶಪುಷ್ಪಂ ವಿಶಿಷ್ಯತೇ ।
ಕುಶಪುಷ್ಪಸಹಸ್ರಾದ್ಧಿ ವನಮಾಲಾ ವಿಶಿಷ್ಯತೇ ॥ ೨೧ ॥
ವನಮಾಲಾಸಹಸ್ರಾದ್ಧಿ ಚಂಪಕಂ ಚ ವಿಶಿಷ್ಯತೇ ।
ಚಂಪಕಸ್ಯ ಪುಷ್ಪಶತಾದಶೋಕಂ ಪುಷ್ಪಮುತ್ತಮಂ ॥ ೨೨ ॥
ಅಶೋಕಪುಷ್ಪಸಾಹಸ್ರಾತ್ ಸೇವಂತೀಪುಷ್ಪಮುತ್ತಮಂ ।
ಸೇವಂತೀಪುಷ್ಪಸಾಹಸ್ರಾತ್ ಕುಜಕಂ ಪುಷ್ಪಮುತ್ತಮಂ ॥ ೨೩ ।
ಕುಜಪುಷ್ಪಸಹಸ್ರಾದ್ಧಿ ಮಾಲತೀಪುಷ್ಪಮುತ್ತಮಂ ।
ಮಾಲತೀಪುಷ್ಪಸಾಹಸ್ರಾತ್ ಸಂಧ್ಯಾಪುಷ್ಪಂ ವಿಶಿಷ್ಯತೇ ॥ ೨೪ ॥
ಸಂಧ್ಯಾಪುಷ್ಪಸಹಸ್ರಾದ್ಧಿ ತ್ರಿಸಂಧ್ಯಾಪುಷ್ಪಮುತ್ತಮಂ ॥ ೨೫ ॥

---

೧೯. ಸಾವಿರ ಬಕಪುಷ್ಪಗಳಿಗಿಂತಲೂ ಒಂದು ನಂದ್ಯಾವರ್ತಪುಷ್ಪವು ಉತ್ತಮವಾಗಿರುವುದು. ಒಂದು ಸಹಸ್ರ ನಂದ್ಯಾವರ್ತ ಪುಷ್ಪಗಳನ್ನು ಒಂದೇ ಕರವೀರಪುಷ್ಪವು ಮೀರಿಸುವುದು.

೨೦. ಆ ಕರವೀರಪುಷ್ಪ ಸಹಸ್ರಗಳಿಗಿಂತಲೂ ಶ್ವೇತಪುಷ್ಪವು ವಿಶೇಷ ವಾಗಿರುವುದು. ಕರವೀರ, ಶ್ವೇತಪುಷ್ಪಕ್ಕಿಂತಲೂ ಪಲಾಶಪುಷ್ಪವು ಉತ್ತಮ ವೆನಿಸಿರುವುದು.

೨೧. ಒಂದು ಸಾವಿರ ಪಲಾಶಪುಷ್ಪಗಳಿಗಿಂತಲೂ ಕುಶಪುಷ್ಪವೊಂದು ಮಿಗಿಲಾಗಿರುವುದು. ಸಹಸ್ರ ಕುಶಪುಷ್ಪಗಳಿಗಿಂತಲೂ ವನಮಾಲೆಯು ಅಧಿಕ ವಾಗಿರುವುದು.

೨೨. ಸಾವಿರ ವನಮಾಲೆಗಳಿಗಿಂತ ಒಂದು ಚಂಪಕಪುಷ್ಪವು ಉತ್ತಮವು. ನೂರು ಚಂಪಕ ಪುಷ್ಪಗಳನ್ನು ಒಂದು ಅಶೋಕ ಪುಷ್ಪವು ಮೀರಿಸುವುದು.

೨೩. ಸಾವಿರ ಅಶೋಕಪುಷ್ಪಗಳಿಗಿಂತಲೂ ಒಂದು ಸೇವಂತಿಗೆಯು ಉತ್ತಮವು. ಸಹಸ್ರ ಸೇವಂತಿಗೆಗಳಿಗಿಂತ ಒಂದು ಕುಜಪುಷ್ಪವು ವಿಶೇಷ ಫಲದಾಯಕವಾಗಿರುವುದು.

೨೪. ಸಹಸ್ರ ಕುಜಪುಷ್ಪಗಳಿತಂತಲೂ ಮಾಲತೀ ಪುಷ್ಪವು ಉತ್ತಮವು. ಸಾವಿರ ಮಾಲತೀ ಪುಷ್ಪಗಳಿಗಿಂತಲೂ ಸಂಧ್ಯಾಪುಷ್ಪವು ಮಿಗಿಲಾಗಿರುವುದು.

೨೫. ಸಹಸ್ರ ಸಂಧ್ಯಾಪುಷ್ಪಗಳಿಗಿಂತಲೂ ಒಂದು ತ್ರಿಸಂಧ್ಯಾಪುಷ್ಪವು ಶ್ರೇಷ್ಠವು.

ತ್ರಿಸಂಧ್ಯಾರಕ್ತಸಾಹಸ್ರಾತ್ ತ್ರಿಸಂಧ್ಯಾಶ್ವೇತಮುತ್ತಮಂ ।
ತ್ರಿಸಂಧ್ಯಾಶ್ವೇತಸಾಹಸ್ರಾತ್ ಕುಂದಪುಷ್ಪಂ ವಿಶಿಷ್ಯತೇ ॥ ೨೬ ॥
ಕುಂದಪುಷ್ಪಸಹಸ್ರಾದ್ಧಿ ಜಾತೀಪುಷ್ಪಂ ವಿಶಿಷ್ಯತೇ ।
ಸರ್ವಾಸಾಂ ಪುಷ್ಪಜಾತೀನಾಂ ಜಾತೀಪುಷ್ಪಮಿಹೋತ್ತಮಂ ॥ ೨೭ ॥
ಜಾತೀಪುಷ್ಪಸಹಸ್ರೇಣ ಯಚ್ಛ್ವೇನ್ಮಾಲಾಂ ಸುಶೋಭನಾಂ ।
ಮಹ್ಯಂ ಯೋ ವಿಧಿವದ್ದದ್ಯಾತ್ತಸ್ಯ ಪುಣ್ಯಫಲಂ ಶೃಣು ॥ ೨೮ ॥
ಕಲ್ಪಕೋಟಿಸಹಸ್ರಾಣಿ ಕಲ್ಪಕೋಟಿಶತಾನಿ ಚ ।
ಮತ್ಪುರೇ ವಸತೇ ನಿತ್ಯಂ ಮಮ ತುಲ್ಯಪರಾಕ್ರಮಃ ॥ ೨೯ ॥
ಯೇಷಾಂ ಸಂತಿ ಚ ಪುಷ್ಪಾಣಿ ಪ್ರಶಸ್ತಾನಿ ಮಮಾರ್ಚನೇ ।
ತೇಷಾಂ ಪತ್ರಾಣಿ ಶಸ್ತಾನಿ ತದಭಾವೇ ಫಲಾನಿಚ ॥ ೩೦ ॥
ಏತೈಃ ಪತ್ರೈಶ್ಚ ಪುಷ್ಪೈಶ್ಚ ಫಲೈಶ್ಚಾಪಿ ತಥಾ ಹಿ ಮಾಂ ।
ಅರ್ಚನೇ ದಶಸುವರ್ಣಸ್ಯ ಪ್ರತ್ಯೇಕಂ ಫಲಮಾಪ್ನುಯಾತ್ ॥ ೩೧ ॥

---

೨೬. ಕೆಂಪಾದ ತ್ರಿಸಂಧ್ಯಾಪುಷ್ಪಗಳ ಒಂದು ಸಾವಿರಕ್ಕಿಂತಲೂ ಅವರ ಶ್ವೇತಜಾತಿಯ ಪುಷ್ಪವು ಉತ್ತಮವೆನಿಸಿರುವುದು. ಆ ಶ್ವೇತತ್ರಿಸಂಧ್ಯಾಪುಷ್ಪ ಸಹಸ್ರಕ್ಕಿಂತಲೂ ಕುಂದಪುಷ್ಪವು ಉತ್ತಮಫಲದಾಯಕವಾಗಿರುವುದು.

೨೭. ಸಾವಿರ ಕುಂದಪುಷ್ಪಗಳಿಗಿಂತಲೂ ಜಾತೀಪುಷ್ಪವು ವಿಶೇಷ ಫಲದಾಯಕವು. ಭೂಲೋಕದಲ್ಲಿರುವ ಸಕಲ ಪುಷ್ಪಗಳಲ್ಲಿಯೂ ಜಾತೀಪುಷ್ಪವೇ ಸರ್ವೋತ್ತಮವೆನಿಸಿರುವುದು.

೨೮. ಒಂದು ಸಹಸ್ರ ಪಾರಿಜಾತಪುಷ್ಪಗಳಿಂದ ಮಾಲೆಯನ್ನು ಕಟ್ಟಿ ವಿಧಿವಿಹಿತರೀತಿಯಲ್ಲಿ ಯಾವನು ನನಗೆ ಅರ್ಪಿಸುವನೊ, ಮಂಗಳಕರವಾದ ಆ ಮಾಲೆಯ ಸಮರ್ಪಣದಿಂದ ಆತನಿಗೆ ಲಭಿಸುವ ಪುಣ್ಯಫಲವನ್ನು ಕೇಳುವವನಾಗು.

೨೯. ಸಾವಿರಾರು, ನೂರಾರು ಕಲ್ಪಕೋಟಿಗಳವರೆಗೂ ಆತನು ನನ್ನ ಪರಾಕ್ರಮಕ್ಕೆ ಸಮಾನವಾದ ಪರಾಕ್ರಮವನ್ನು ಹೊಂದಿ ನನ್ನ ಸ್ಥಳವಾದ ವೈಕುಂಠದಲ್ಲಿಯೇ ವಾಸಿಸುವನು.

೩೦. ಯಾರಿಗೆ ನನ್ನ ಪೂಜೆಗಾಗಿ ಪ್ರಶಸ್ತಗಳಾದ ಪುಷ್ಪಗಳು ಲಭಿಸುವುವೊ, ಅವರು ಪತ್ರಗಳನ್ನೂ ಪೂಜಾರ್ಥವಾಗಿ ಸಂಗ್ರಹಿಸಿದರೆ ಉತ್ತಮವು. ಅವುಗಳ ಅಭಾವದಲ್ಲಿ ಫಲಗಳನ್ನಾದರೂ ಶೇಖರಿಸಬೇಕು.

೩೧. ಈ ಪತ್ರಗಳಿಂದಲಾಗಲಿ, ಪುಷ್ಪಗಳಿಂದಾಗಲಿ, ಫಲಗಳಿಂದಾಗಲಿ ನನ್ನನ್ನು ಪೂಜಿಸಲು ಒಂದೊಂದರಿಂದಲೂ ಹತ್ತು ಸುವರ್ಣಗಳಿಂದ ಪೂಜೆಯೆಸಗಿದ ಫಲವನ್ನು ಅರ್ಚಕನು ಹೊಂದುವನು.

ಏತಾಭಿಃ ಪುಷ್ಪಜಾತಿಭಿಃ ಸಹೋಽಮಾಸೇಽರ್ಚಯಂತಿ ಯೇ ।
ಭಕ್ತಿಂ ದದಾಮಿ ತೇಷಾಂ ವೈ ತುಷ್ಟಃಸನ್ನಾತ್ರ ಸಂಶಯಃ ॥ ೩೨ ॥
ಧನಂ ಪುತ್ರಾನ್ ತಥಾ ದಾರಾನ್ ಯತ್ಕಿಂಚಿದ್ವಾಂಛತೇ ಹಿ ಸಃ ।
ತತ್ತದ್ದದಾಮಿ ದೇವೇಶ ಪುಷ್ಪೈರೇಭಿಃ ಪ್ರತೋಷಿತಃ ॥ ೩೩ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ದ್ವಿತೀಯೇ ವೈಷ್ಣವಖಂಡೇ ಮಾರ್ಗಶೀರ್ಷಮಾಹಾತ್ಮ್ಯೇ ಬ್ರಹ್ಮವಿಷ್ಣುಸಂವಾದೇ
"ಜಾತೀಪುಷ್ಪಶ್ರೈಷ್ಠ್ಯಂ — ಸಹಸ್ರಪುಷ್ಪಮಾಲಾರ್ಪಣ ಫಲಕಥನಂ"
ನಾಮ ಸಪ್ತಮೋಽಧ್ಯಾಯಃ

---

೩೨. ಮಾರ್ಗಶೀರ್ಷಮಾಸದಲ್ಲಿ ಈ ಪುಷ್ಪಜಾತಿಗಳಿಂದ ಯಾವ ಭಕ್ತನು ನನ್ನನ್ನು ಪೂಜಿಸುವನೊ, ಅವನಿಗೆ ನಾನು ಸಂತೋಷಗೊಂಡು ಅಚಲಭಕ್ತಿಯನ್ನು ಅನುಗ್ರಹಿಸುವೆನೆಂಬುದರಲ್ಲಿ ಸಂದೇಹವಿಲ್ಲವು.

೩೩. ಎಲೈ ದೇವೋತ್ತಮನಾದ ಬ್ರಹ್ಮನೆ! ಅಂತಹ ಭಕ್ತನು ಧನ, ಸಂತತಿ, ಕಳತ್ರಗಳೇ ಮೊದಲಾದ ಯಾವ ಯಾವ ಅನುಕೂಲಗಳನ್ನು ಅಪೇಕ್ಷಿಸುವನೊ, ಪುಷ್ಪಾರ್ಚನೆಯಿಂದ ಆನಂದಿತಾಂತರಂಗನಾದ ನಾನು ಆತನಿಗೆ ಅವುಗಳೆಲ್ಲವನ್ನೂ ಒದಗಿಸಿಕೊಡುವೆನು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀಸ್ಕಾಂದಮಹಾಪುರಾಣದ ಎರಡನೆಯ ವೈಷ್ಣವಖಂಡದ ಮಾರ್ಗಶೀರ್ಷಮಾಹಾತ್ಮ್ಯದ
ಬ್ರಹ್ಮವಿಷ್ಣುಸಂವಾದದಲ್ಲಿ "ಜಾತೀಪುಷ್ಪಶ್ರೈಷ್ಠ್ಯ–ಸಹಸ್ರಪುಷ್ಪಮಾಲಾರ್ಪಣಫಲಕಥನ"
ವೆಂಬ ಏಳನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥಾಷ್ಟಮೋಽಧ್ಯಾಯಃ

### ದೀಪದಾನಮಾಹಾತ್ಮ್ಯಕಥನಂ

ಬ್ರಹ್ಮೋವಾಚ :—

ಶ್ರೀಮತ್ತುಲಸಿಮಾಹಾತ್ಮ್ಯಂ ಯಥಾವದ್ವರ್ಣಯ ಪ್ರಭೋ ।
ಯಸ್ಯಾಃ ಸನ್ನಿಧಿಮಾತ್ರೇಣ ಪ್ರೀತಿರ್ಭವತಿ ತೇಽಧಿಕಾ ॥ ೧ ॥

ಶ್ರೀ ಭಗವಾನುವಾಚ :—

ಮಣಿಕಾಂಚನಪುಷ್ಪಾಣಿ ತಥಾ ಮುಕ್ತಾಮಯಾನಿ ಚ ।
ತುಲಸೀಪತ್ರದಾನಸ್ಯ ಕಲಾಂ ನಾರ್ಹಂತಿ ಷೋಡಶೀಂ ॥ ೨ ॥
ತುಲಸೀಮಂಜರೀಭಿರ್ಯಃ ಕುರ್ಯಾದ್ವೈ ಮಮ ಪೂಜನಂ ।
ನ ಸ ಗರ್ಭಗೃಹಂ ಯಾಯಾತ್ ಮುಕ್ತಿಭಾಗೀ ಭವೇನ್ನರಃ ॥ ೩ ॥
ಆರೋಪ್ಯ ತುಲಸೀಂ ವತ್ಸ ಪೂಜಯೇತ್ತದ್ದಲೈಶ್ಚ ಮಾಂ ।
ದಿವಿ ಸಂಮೋದಮಾನಸ್ಸ ಶ್ವೇತದ್ವೀಪೇ ಚ ಮೇ ಗೃಹೇ ॥ ೪ ॥

---

### ಕನ್ನಡದ ಅನುವಾದ

### ದೀಪದಾನಮಾಹಾತ್ಮ್ಯಕಥನ

೧. ಬ್ರಹ್ಮದೇವನು ಕೇಳುತ್ತಾನೆ:—ಲೋಕನಾಥನೆ! ಇನ್ನು ಶ್ರೀತುಲಸಿಯ ಮಾಹಾತ್ಮ್ಯವನ್ನು ಯಥಾವತ್ತಾಗಿ ನನಗೆ ವಿವರಿಸು. ಅದರ ಸಾನ್ನಿಧ್ಯ ಮಾತ್ರದಿಂದಲೇ ನಿನಗೆ ಅತ್ಯಂತ ಸಂತೋಷವುಂಟಾಗುವುದಲ್ಲವೆ.

೨. ಭಗವಂತನು ನಿರೂಪಿಸುತ್ತಾನೆ:—ನವರತ್ನಗಳಿಂದಾಗಲಿ, ಚಿನ್ನ ದಿಂದಾಗಲಿ, ಮುತ್ತುಗಳಿಂದಾಗಲಿ ಮಾಡಿದ ಪುಷ್ಪಗಳೂ ಸಹ ನನಗೆ ಅರ್ಪಿತ ವಾದ ಒಂದು ತುಲಸೀದಳದ ಮಾಹಾತ್ಮ್ಯದಲ್ಲಿ ಹದಿನಾರನೆಯ ಒಂದು ಭಾಗ ವನ್ನೂ ಪಡೆಯಲಾರವು.

೩. ತುಲಸೀದಳಗಳಿಂದ ಯಾವನು ನನ್ನ ಪೂಜೆಯನ್ನು ಮಾಡುವನೊ, ಅವನು ಪುನಃ ತಾಯಿಯ ಗರ್ಭದಲ್ಲಿ ವಾಸಮಾಡುವುದಿಲ್ಲ. ಆ ಮನುಷ್ಯನು ಶಾಶ್ವತವಾದ ಮೋಕ್ಷಪದವಿಗೆ ಭಾಗಿಯಾಗುವನು.

೪. ಎಲೈ ವತ್ಸನೆ! ತುಲಸೀವೃಕ್ಷವನ್ನು ಬೆಳಸಿ ಅದರ ದಳಗಳಿಂದ ನನ್ನನ್ನು ಪೂಜಿಸುವ ಭಾಗವತನು ಸ್ವರ್ಗಲೋಕದಲ್ಲಿಯೂ, ಶ್ವೇತದ್ವೀಪ ದಲ್ಲಿಯೂ ನನ್ನ ನಿವಾಸವಾದ ವೈಕುಂಠದಲ್ಲಿಯೂ, ಆನಂದದಿಂದ ವಾಸ ಮಾಡುವನು.

ಶ್ರೀಮತ್ತುಲಸ್ಯಾರ್ಚಯತೇ ಸಕೃದ್ಧಿ ಮಾಂ
ಪತ್ರೈಸ್ಸುಗಂಧೈರ್ವಿಮಲೈರಖಂಡಿತೈಃ ।
ಯಸ್ತಸ್ಯ ಪಾಪಂ ಪಟಸಂಸ್ಥಿತಂ ತದಾ
ನಿರೀಕ್ಷಯಿತ್ವಾ ಪರಿಮಾರ್ಜಯೇದ್ಯಮಃ ॥ ೫ ॥
ತುಲಸೀ ನ ಯೇಷಾಂ ಮಮ ಪೂಜನಾರ್ಥಂ
ಸಂಪಾದಿತೈಕಾದಶಿಪುಣ್ಯವಾಸರೇ ।
ಧಿಗ್ಯೌವನಂ ಜೀವಿತಮರ್ಥಸಂತತಿ
ಸ್ತೇಷಾಂ ಸುಖಂ ನೇಹ ಚ ದೃಶ್ಯತೇ ಪರೇ ॥ ೬ ॥
ಲಿಂಗಮಭ್ಯರ್ಚಿತಂ ದೃಷ್ಟ್ವಾ ಸಹೋಮಾಸೇ ಚ ಮಾಮಕಂ ।
ತುಲಸೀಪತ್ರನಿಕರೈ ರ್ಮುಚ್ಯತೇ ಬ್ರಹ್ಮಹತ್ಯಯಾ ॥ ೭ ॥
ನಿತ್ಯಮಭ್ಯರ್ಚಯೇದ್ಯೋ ವೈ ತುಲಸ್ಯಾ ಮಾಂ ರಮೇಶ್ವರಂ ।
ಮಹಾಪಾಪಾನಿ ನಶ್ಯಂತಿ ಕಿಂ ಪುನಶ್ಚೋಪಪಾತಕಂ ॥ ೮ ॥
ವರ್ಜ್ಯಂ ಪರ್ಯುಷಿತಂ ಪುಷ್ಪಂ ವರ್ಜ್ಯಂ ಪರ್ಯುಷಿತಂ ಜಲಂ ।
ನ ವರ್ಜ್ಯಂ ತುಲಸೀಪತ್ರಂ ನ ವರ್ಜ್ಯಂ ಜಾಹ್ನವೀಜಲಂ ॥ ೯ ॥

೫. ಯಾವನು ಒಮ್ಮೆಯಾದರೂ ಸುಗಂಧಯುತಗಳೂ, ಪರಿಶುದ್ಧಗಳೂ, ಅಖಂಡಗಳೂ ಆದ ಪತ್ರಗಳುಳ್ಳ ತುಲಸೀದಳಗಳಿಂದ ನನ್ನನ್ನು ಪೂಜಿಸುವನೋ, ಅವನ ಪರಮಾಂತರಂಗದಲ್ಲಿರುವ ಪಾಪಗಳನ್ನು ಕೂಡ ಯಮನು ತೊಡೆದು ಹಾಕುವನು.

೬. ಯಾರು ಏಕಾದಶಿಯ ಶುಭವಾಸರದಲ್ಲಿ ನನ್ನ ಪೂಜೆಗಾಗಿ ತುಲಸೀ ದಳಗಳನ್ನು ಸಂಪಾದಿಸುವುದಿಲ್ಲವೊ, ಅವರ ಯೌವನಕ್ಕೂ, ಜೀವಿತಕ್ಕೂ, ಐಶ್ವರ್ಯಕ್ಕೂ, ಪುತ್ರ ಸಂತತಿಗೂ ಧಿಕ್ಕಾರವಿರಲಿ. ಅವರಿಗೆ ಈ ಲೋಕದಲ್ಲಾಗಲಿ ಪರಲೋಕದಲ್ಲಾಗಲಿ ಸೌಖ್ಯವುಂಟಾಗಲಾರದು.

೭. ಮಾರ್ಗಶೀರ್ಷಮಾಸದಲ್ಲಿ ತುಲಸೀದಳಗಳ ಸಮೂಹಗಳಿಂದ ಪೂಜಿಸಲ್ಪಟ್ಟಿರುವ ನನ್ನ ಮೂರ್ತಿಯನ್ನು ನೋಡುವ ಮಾತ್ರದಿಂದಲೇ ಮಾನವನು ಬ್ರಹ್ಮಹತ್ಯೆಯೆಂಬ ಮಹಾಪಾತಕದಿಂದಲೂ ಬಿಡುಗಡೆಯನ್ನು ಹೊಂದುವನು.

೮. ಲಕ್ಷ್ಮೀಸಮೇತನಾದ ನನ್ನನ್ನು ನಿತ್ಯದಲ್ಲಿಯೂ ಯಾವನು ತುಲಸೀ ದಳಗಳಿಂದ ಪೂಜಿಸುವನೋ, ಅವನ ಮಹಾಪಾಪಗಳೂ ನಾಶವಾಗುವುವೆಂದ ಮೇಲೆ ಉಪಪಾತಕಗಳ ಮಾತನ್ನು ಹೇಳಬೇಕಾದದೇ ಇಲ್ಲವು.

೯. ಪೂಜಾಸಾಮಗ್ರಿಗಳಲ್ಲಿ ಹಿಂದಿನ ದಿನ ಸಿದ್ಧಗೊಳಿಸಿದ ಪುಷ್ಪಗಳೂ ಜಲವೂ ಮಾರನೆಯ ದಿನದ ಪೂಜೆಗೆ ಅನರ್ಹಗಳೆನಿಸುವುವು. ಆದರೆ ತುಲಸೀ ಪತ್ರಗಳೂ, ಗಂಗೋದಕವೂ ಎಂದಿಗೂ ವರ್ಜ್ಯಗಳಾಗಲಾರವು.

ತಾವದ್ಗರ್ಜಂತಿ ಪುಷ್ಪಾಣಿ ಮಾಲತ್ಯಾದೀನಿ ಭೋಃ ಸುತ ।
ಯಾವನ್ನ ಪ್ರಾಪ್ಯತೇ ಪುಣ್ಯಾ ತುಲಸೀ ಮಮ ವಲ್ಲಭಾ ॥ ೧೦ ॥
ಸಕೃದಭ್ಯರ್ಚಯೇದ್ಯೋ ಮಾಂ ಬಿಲ್ವಪತ್ರೇಣ ಮಾನವಃ ।
ಮುಕ್ತಿಭಾಗೀ ನಿರಾತಂಕೋ ಮಮ ಪಾರ್ಶ್ವಗತೋ ಭವೇತ್ ॥ ೧೧ ॥
ಬಿಲ್ವಪತ್ರಾಚ್ಛಮೀಪತ್ರಾಜ್ಜಾತೀಪತ್ರಾತ್ಸರೋರುಹಾತ್ ।
ವಲ್ಲಭಂ ತುಲಸೀಪತ್ರಂ ಕೌಸ್ತುಭಾದಧಿಕಂ ಮಮ ॥ ೧೨ ॥
ಅಭಿನ್ನಪತ್ರಾ ತುಲಸೀ ಹೃದ್ಯಾ ಮಂಜರಿಸಂಯುತಾ ।
ಕ್ಷೀರೋದಾರ್ಣವಸಂಭೂತಾ ಪದ್ಮೇವೇಯಂ ಸದಾ ಮಮ ॥ ೧೩ ॥
ಅಕೃಷ್ಣಾಽಪ್ಯಥವಾ ಕೃಷ್ಣಾ ತುಲಸೀ ಮಮ ವಲ್ಲಭಾ ।
ಸಿತಾ ವಾಪ್ಯಸಿತಾ ವಾಪಿ ದ್ವಾದಶೀ ವಲ್ಲಭಾ ಯಥಾ ॥ ೧೪ ॥
ಗೃಹೀತ್ವಾ ತುಲಸೀಪತ್ರಂ ಭಕ್ತ್ಯಾ ಯೋ ಮಾಂ ಸಮರ್ಚಯೇತ್ ।
ಅರ್ಚಿತಂ ತೇನ ಸಕಲಂ ಸದೇವಾಸುರಮಾನುಷಂ ॥ ೧೫ ॥

೧೦. ನನಗೆ ಅತ್ಯಂತಪ್ರಿಯವಾದ ಪುಣ್ಯತಮವಾದ ತುಲಸಿಯು ಎಲ್ಲಿಯ ವರೆಗೆ ಲಭಿಸುವುದಿಲ್ಲವೊ, ಅಲ್ಲಿಯವರೆವಿಗೆ ಮಾತ್ರ ಮಾಲತಿಯೇ ಮೊದಲಾದ ಇತರ ಪುಷ್ಪಗಳು ಪೂಜಾಸಾಮಗ್ರಿಗಳಲ್ಲಿ ಮೆರೆಯುವುವು.

೧೧. ಯಾವ ಮನುಷ್ಯನು ಒಮ್ಮೆ ನನ್ನನ್ನು ಬಿಲ್ವಪತ್ರಗಳಿಂದ ಪೂಜಿಸು ವನೊ, ಅವನು ಸಕಲ ಆತಂಕಗಳನ್ನೂ ಕಳೆದು ಮೋಕ್ಷಪದವಿಗೆ ಭಾಗಿಯಾಗಿ ನನ್ನ ಪಾರ್ಶ್ವದಲ್ಲಿಯೇ ನಿಂತಿರುವನು.

೧೨. ಈ ಶ್ರೀತುಲಸಿಯೆಂಬುದು ಬಿಲ್ವಪತ್ರ, ಶಮೀಪತ್ರ, ಜಾತೀಪತ್ರ, ಕಮಲಗಳಿಗಿಂತ ನನಗೆ ಪ್ರಿಯವಾಗಿರುವುದು. ಹೆಚ್ಚೇಕೆ, ನನ್ನ ಕೌಸ್ತುಭ ಮಣಿಗಿಂತಲೂ ಪ್ರೀತಿಕರವಾಗಿರುವುದು.

೧೩. ಕುಡಿಯಿಂದ ಕೂಡಿ ಭಿನ್ನವಲ್ಲದ ಎಲೆಗಳಿಂದ ಕೂಡಿದ ತುಲಸೀ ದಳವು ಕ್ಷೀರಸಮುದ್ರದಲ್ಲಿ ಜನಿಸಿದ್ದು ನನಗೆ ಅನಪಾಯಿನಿಯಾಗಿರುವ ಲಕ್ಷ್ಮಿ ಯಂತೆ ಪ್ರಿಯವಾಗಿರುವುದು.

೧೪. ಮಾಸದಲ್ಲಿ ಶುಕ್ಲಕೃಷ್ಣಪಕ್ಷಗಳೆರಡರ ದ್ವಾದಶಿಗಳೂ ನನಗೆ ಪ್ರಿಯ ವಾಗಿರುವಂತೆಯೇ ಶ್ರೀತುಲಸಿ ಮತ್ತು ಕೃಷ್ಣತುಲಸಿಗಳ ದಳಗಳೆರಡೂ ನನಗೆ ಸಂತೋಷವನ್ನುಂಟುಮಾಡುವುವು.

೧೫. ಯಾವನು ಭಕ್ತಿಯಿಂದ ತುಲಸೀದಳವನ್ನು ತೆಗೆದುಕೊಂಡು ನನ್ನನ್ನು ಪೂಜಿಸುವನೊ, ಅವನಿಂದ ದೇವತೆಗಳು, ಮನುಷ್ಯರು, ರಾಕ್ಷಸರುಗಳಿಂದ ತುಂಬಿದ ಮೂರು ಲೋಕಗಳೂ ಪೂಜಿಸಲ್ಪಟ್ಟುವೆಂದು ತಿಳಿಯಬೇಕು

ತಾವದ್ಗರ್ಜಂತಿ ರತ್ನಾನಿ ಕೌಸ್ತುಭಾದೀನ್ಯನಂತಶಃ ।
ಯಾವನ್ನ ಪ್ರಾಪ್ಯತೇ ಕೃಷ್ಣತುಲಸೀ ಕೃಷ್ಣಮಂಜರೀ ॥ ೧೬ ॥
ಕೃಷ್ಣಂ ಕೃಷ್ಣತುಲಸ್ಯಾ ಹಿ ಯೋ ಭಕ್ತ್ಯಾ ಪೂಜಯೇನ್ನರಃ ।
ಸ ಯಾತಿ ಭುವನಂ ಶುಭ್ರಂ ಯತ್ರ ವಿಷ್ಣುಃ ಶ್ರಿಯಾ ಸಹ ॥ ೧೭ ॥
ಮಮಾರ್ಚನಾರ್ಥಂ ಭಿಕ್ಷೂಣಾಂ ಯಚ್ಛಂತಿ ತುಲಸೀದಲಂ ।
ಅನ್ಯೇಷಾಮಪಿ ಭಕ್ತಾನಾಂ ಯಾಂತಿ ತೇ ಪದಮವ್ಯಯಂ ॥ ೧೮ ॥
ತುಲಸೀ ಕೃಷ್ಣಗೌರಾ ಯಾ ತಯಾ ಯೋ ಮಾಂ ಸಮರ್ಚಯೇತ್ ।
ನರೋ ಯಾತಿ ತನುಂ ತ್ಯಕ್ತ್ವಾ ವೈಷ್ಣವೀಂ ಶಾಶ್ವತೀಂ ಗತಿಂ ॥ ೧೯ ॥

ಬ್ರಹ್ಮೋವಾಚ :—

ಧೂಪದಾನಸ್ಯ ಮಾಹಾತ್ಮ್ಯಂ ದೀಪಸ್ಯಾಪಿ ಚ ಕೇಶವ ।
ಯತ್ಫಲಂ ಲಭತೇ ಮರ್ತ್ಯಃ ತನ್ಮೇ ಬ್ರೂಹಿ ಯಥಾರ್ಥತಃ ॥ ೨೦ ॥

ಶ್ರೀ ಭಗವಾನುವಾಚ :—

ಶೃಣು ಪುತ್ರ ಪ್ರವಕ್ಷ್ಯಾಮಿ ಧೂಪದಾನಸ್ಯ ಯತ್ಫಲಂ ।
ದೀಪದಾನಸ್ಯ ಮಾಹಾತ್ಮ್ಯಂ ಮಮ ಪ್ರೀತಿಕರಂ ಪರಂ ॥ ೨೧ ॥

---

೧೬. ಕೃಷ್ಣತುಲಸಿಯ ದಳಗಳು ಎಲ್ಲಿಯುವರೆವಿಗೆ ಪೂಜೆಗೆ ಲಭಿಸುವುದಿಲ್ಲವೊ, ಅಲ್ಲಿಯುವರೆವಿಗೆ ಇತರ ರತ್ನಾದ್ಯಾಭರಣಗಳೂ ಕೌಸ್ತುಭಮಣಿಯೂ ನನಗೆ ಪ್ರಿಯಗಳಾಗಿರುವುವು.

೧೭–೧೮. ಯಾವನು ಭಕ್ತಿಯುಕ್ತನಾಗಿ ಕೃಷ್ಣತುಲಸಿಯ ದಳಗಳಿಂದ ಶ್ರೀಕೃಷ್ಣನನ್ನು ಪೂಜಿಸುವನೊ, ಅವನು ಲಕ್ಷ್ಮೀಸಮೇತನಾಗಿ ಶ್ರೀಮಹಾವಿಷ್ಣುವು ವಾಸಮಾಡುತ್ತಿರುವ ಪಾಪಲೇಪವಿಲ್ಲದ ವೈಕುಂಠಲೋಕವನ್ನು ಕುರಿತು ಪ್ರಯಾಣಮಾಡುವನು. ಯಾರು ಭಿಕ್ಷುಕರಿಗೂ ಇತರ ಭಕ್ತರಿಗೂ ನನ್ನ ಪೂಜೆಗಾಗಿ ತುಲಸೀದಳಗಳನ್ನು ಕೊಡುವರೊ, ಅವರು ನಾಶರಹಿತವಾದ ಪರಮಪದವನ್ನು ಹೊಂದುವರು.

೧೯. ಕೆಂಪು ಮತ್ತು ಕಪ್ಪು ಬಣ್ಣಗಳಿಂದ ಕೂಡಿದ ಯಾವ ತುಲಸಿಯಿರುವುದೊ, ಅದರ ದಳಗಳಿಂದ ನನ್ನನ್ನು ಯಾವ ಮಾನವನು ಪೂಜಿಸುವನೊ, ಅವನು ದೇಹಾವಸಾನದಲ್ಲಿ ಶಾಶ್ವತವಾದ ವೈಷ್ಣವಲೋಕವನ್ನು ಪಡೆಯುವನು.

೨೦. ಬ್ರಹ್ಮದೇವನು ಕೇಳುತ್ತಾನೆ:—ಕೇಶವನೆ! ವಿಷ್ಣುವಿಗೆ ಧೂಪದಾನವನ್ನೂ ದೀಪದಾನವನ್ನೂ ಮಾಡುವುದರ ಮಾಹಾತ್ಮ್ಯವನ್ನೂ, ಅವುಗಳಿಂದ ಮನುಷ್ಯನು ಯಾವ ಫಲವನ್ನು ಪಡೆಯುವನೆಂಬುದನ್ನೂ ನನಗೆ ಯಥಾರ್ಥವಾಗಿ ತಿಳಿಸುವವನಾಗು.

೨೧. ಭಗವಂತನು ಹೇಳುತ್ತಾನೆ:—ಪುತ್ರನೆ! ಧೂಪದಾನದಿಂದುಂಟಾ

ಅಗುರುಂ ಚ ಸಕರ್ಪೂರಂ ದಿವ್ಯಚಂದನಸೌರಭಂ ।
ದತ್ವಾ ಮಾಂ ವೈ ಸಹೋಮಾಸೇ ಕುಲಾನಾಂ ತಾರಯೇಚ್ಛತಂ ॥ ೨೨ ॥
ಕೃಷ್ಣಾಗುರುಸಮುತ್ಥೇನ ಧೂಪೇನ ಚ ಮಮಾಲಯಂ ।
ಧೂಪಯೇದ್ವೈಷ್ಣವೋ ಯಸ್ತು ಸ ಮುಕ್ತೋ ನರಕಾರ್ಣವಾತ್ ॥೨೩॥
ಮಾಹಿಷಂ ಗುಗ್ಗುಲಂ ಯಸ್ತು ಆಜ್ಯಯುಕ್ತಂ ಸಶರ್ಕರಂ ।
ಧೂಪಂ ದದಾತಿ ಯೋ ವೈ ಮಾಂ ತಸ್ಯೇಚ್ಛಾಂ ಪ್ರದದಾಮ್ಯಹಂ ॥ ೨೪ ॥
ಗುಗ್ಗುಲೋ ಹಂತ್ಯಶೇಷಾಣಿ ಅರಿಷ್ಟಾನಿ ಚ ಧೂಪಿತಃ ।
ಕಾಮಾನ್ನಾನಾವಿಧಾಂಶ್ಚೈವ ಅಗುರುಃ ಸಂಪ್ರಯಚ್ಛತಿ ॥ ೨೫ ॥
ದೇಹಂ ಗೇಹಂ ಪುನಾತ್ಯೇವ ಧೂಪಸ್ತ್ವಗುರುಸಂಭವಃ ।
ನಾಶಯೇದ್ಯಕ್ಷರಕ್ಷಾಂಸಿ ಧೂಪಃ ಸರ್ಜರಸೋದ್ಭವಃ ॥ ೨೬ ॥
ಜಾತಿಪುಷ್ಪಮಥೈಲಾ ಚ ಗುಗ್ಗುಲಶ್ಚ ಹರೀತಕೀ ।
ಕೊಟಃ ಸರ್ಜರಸಶ್ಚೈವ ಗುಡಃ ಸೈಲಾಚ್ಛದಸ್ತಥಾ ।
ನಖಯುಕ್ತಾನಿ ಚೈತಾನಿ ದಶಾಂಗೋ ಧೂಪ ಉಚ್ಯತೇ ॥ ೨೭ ॥

ಗುವ ಫಲವನ್ನೂ ನನಗೆ ಅತ್ಯಂತ ಪ್ರೀತಿಕರವಾದ ದೀಪದಾನದ ಮಾಹಾತ್ಮ್ಯೆ ವನ್ನೂ ಹೇಳುವೆನು, ಕೇಳು.

೨೨. ಮಾರ್ಗಶಿರಮಾಸದಲ್ಲಿ ನನಗೆ ಪೂಜೆಯನ್ನು ಮಾಡಿ ಅಗರುಧೂಪ ವನ್ನೂ, ಕರ್ಪೂರದ ಆರತಿಯನ್ನೂ, ದಿವ್ಯಚಂದನಗಂಧವನ್ನೂ ಯಾವನು ಸಮರ್ಪಿಸುವನೊ, ಅವನು ತನ್ನ ನೂರು ಕುಲಗಳನ್ನು ಉದ್ಧರಿಸುವನು.

೨೩. ಕರಿಗುಗ್ಗುಲದ ಧೂಪದಿಂದ ಯಾವ ವಿಷ್ಣುಭಕ್ತನು ನನ್ನ ದೇವಾ ಲಯವನ್ನು ತುಂಬುವನೊ, ಅವನು ನರಕವೆಂಬ ಸಮುದ್ರದಿಂದ ಉತ್ತೀರ್ಣ ನಾಗುವನು.

೨೪. ಎಮ್ಮೆಯ ತುಪ್ಪದಿಂದಲೂ ಸಕ್ಕರೆಯಿಂದಲೂ ಕೂಡಿದ ಗುಗ್ಗುಲದ ಧೂಪವನ್ನು ಯಾವನು ನನಗೆ ಅರ್ಪಿಸುವನೊ, ಅವನ ಅಭೀಷ್ಟಗಳೆಲ್ಲವನ್ನೂ ನಾನು ಪೂರೈಸುವೆನು.

೨೫. ನನ್ನ ಸೇವೆಗೆ ಉಪಯೋಗಿಸಲ್ಪಟ್ಟ ಗುಗ್ಗುಲದ ಧೂಪದಿಂದ ಸಮಸ್ತ ಪಾಪಗಳೂ ನಾಶವಾಗುವುವು. ಅಗರುಧೂಪವು ಅರ್ಚಕನಿಗೆ ಬಹು ವಿಧಗಳಾದ ವಾಂಛಿತಾರ್ಥಗಳನ್ನೆಲ್ಲ ಒಡಗೂಡಿಸಿಕೊಡುವುದು.

೨೬. ಅಗರುವಿನ ಧೂಪವು ಭಕ್ತನ ದೇಹವನ್ನೂ ಗೃಹವನ್ನೂ ಪವಿತ್ರಗೊಳಿ ಸುವುದು. ಸರ್ಜಕ ವೃಕ್ಷದ ರಸದ ಧೂಪವು ಯಕ್ಷರಾಕ್ಷಸಾದಿಗಳನ್ನು ನಾಶ ಗೊಳಿಸುವುದು.

೨೭. ಜಾತಿಪುಷ್ಪ, ಏಲಕ್ಕಿ, ಗುಗ್ಗುಲ, ಅಳಲೆಕಾಯಿ, ಕೊಟ, ಸರ್ಜರಸ,

ಧೂಪಂ ದಶಾಂಗಂ ಯದಿ ಚೇತ್ಕರೋತಿ
ಮಾಸೇ ಸಹೇ ಮೇ ಅತಿವಲ್ಲಭೇ ಚ ।
ದದಾಮಿ ಕಾಮಾನತಿದುರ್ಲಭಾನಪಿ
ಬಲಂ ಚ ಪುಷ್ಟಿಂ ಸುತದಾರಭಕ್ತಿಂ ॥ ೨೮ ॥

ಮುಸ್ತಾಧೂಪೇ ಮಾನುಷಾಣಾಂ ಪ್ರಿಯತ್ವಂ
ಮಾಂಗಲ್ಯಕಂ ವಶ್ಯಕರಂ ಗುಡಸ್ಯ ।
ಕುರ್ಯಾತ್ಸಹೋಮಾಸಿ ಮಮಾಗ್ರತೋ ಯೋ
ವಿಹಾಯ ಪಾಪಾನಿ ಸ ಮಾಂ ಸಮಾಪ್ನುಯಾತ್॥ ೨೯ ॥

ನ ಭಯಂ ವಿದ್ಯತೇ ತಸ್ಯ ದಿವ್ಯಭೌಮಾಂತರಿಕ್ಷಜಂ ।
ಮಮ ಧೂಪಾವಶೇಷೇಣ ಯಸ್ಯಾಂಗಂ ಪರಿಮಾರ್ಜಿತಂ ॥ ೩೦ ॥
ನ ಚಾಪದ್ವಿದ್ಯತೇ ತಸ್ಯ ಭವಂತಿ ಸಂಪದೋಽಖಿಲಾಃ ।
ಧೂಪೇ ಕೃತೇ ಸಹೋಮಾಸೇ ಮಮಾಗ್ರೇ ಶ್ರದ್ಧಯಾಽನಿಶಂ ॥ ೩೧ ॥

ಗುಡ, ಏಲಾಚ್ಛಡ, ಶಂಖನಖಗಳಿಂದ ಕೂಡಿದ ಧೂಪವೇ ದಶಾಂಗ ಧೂಪವೆನ್ನಲ್ಪಡುವುದು.

೨೮. ನನಗೆ ಪ್ರಿಯತಮವಾದ ಮಾರ್ಗಶಿರಮಾಸದಲ್ಲಿ ಯಾವನು ದಶಾಂಗ ಸಹಿತವಾದ ಧೂಪವನ್ನುಂಟುಮಾಡುವನೊ, ಅವನಿಗೆ ನಾನು ಅತ್ಯಂತ ದುರ್ಲಭಗಳಾದ ಈಪ್ಸಿತಾರ್ಥಗಳನ್ನೂ, ದೇಹಬಲವನ್ನೂ, ಪುಷ್ಟಿಯನ್ನೂ, ವಿಧೇಯರಾದ ಪುತ್ರಕಳತ್ರರನ್ನೂ ಅನುಗ್ರಹಿಸುವೆನು.

೨೯. ತುಂಗಮುಸ್ತೆಯ ಧೂಪದಿಂದ ಮನುಷ್ಯರಿಗೆ ಪ್ರಿಯವುಂಟಾಗುವುದು. ಗುಡಧೂಪದಿಂದ ಮಂಗಳವುಂಟಾಗಿ ದೇವತೆಗಳೂ ವಶೀಕೃತರಾಗುವರು. ಈ ಧೂಪಸೇವೆಗಳನ್ನು ಮಾರ್ಗಶಿರಮಾಸದಲ್ಲಿ ಯಾವನು ನನಗೆ ಮಾಡಿಸುವನೊ, ಅವನು ಸಕಲಪಾಪಗಳನ್ನೂ ಕಳೆದುಕೊಂಡು ನನ್ನ ಸಾಯುಜ್ಯವನ್ನು ಪಡೆಯುವನು.

೩೦. ಯಾವನ ಶರೀರವು ನನ್ನ ಸೇವೆಯ ಅವಶೇಷವಾದ ಧೂಪದಿಂದ ಲೇಪಿಸಲ್ಪಟ್ಟಿರುವುದೊ, ಅವನಿಗೆ ಆಧಿದೈವಿಕ, ಆಧಿಭೌತಿಕ, ಆಧ್ಯಾತ್ಮಿಕ ಭಯಗಳಾಗಲಿ, ಭೂಮ್ಯಂತರಿಕ್ಷಾಕಾಶಗಳ ಭಯಗಳಾಗಲಿ ಸಂಭವಿಸಲಾರವು.

೩೧. ಮಾರ್ಗಶೀರ್ಷಮಾಸದಲ್ಲಿ ನಿರಂತರವೂ ಶ್ರದ್ಧೆಯಿಂದ ಧೂಪಸೇವೆಯನ್ನು ನನಗೆ ನಡೆಸುವ ಮನುಷ್ಯನಿಗೆ ಯಾವ ವಿಧವಾದ ಆಪತ್ತುಗಳೂ ಉಂಟಾಗಲಾರವು. ಅವನಿಗೆ ಸಕಲೈಶ್ವರ್ಯಗಳೂ ಕೈಗೂಡಿಬರುವುವು.

ಧೂಪಸ್ಸ್ವರೂಪತಾಂ ಧತ್ತೇ ಧೂಪಃ ಪವನಮುತ್ತಮಂ ।
ವನಸ್ಪತಿರಸೋ ದಿವ್ಯಃ ಪರಮಃ ಪಾವನಶ್ಶುಚಿಃ ॥ ೩೨ ॥
ಅತಃ ಪರಂ ಪ್ರವಕ್ಷ್ಯಾಮಿ ದೀಪಮಾಹಾತ್ಮ್ಯಮುತ್ತಮಂ ।
ಯಸ್ಮಿನ್ ಕೃತೇ ನರೋ ಯಾತಿ ವೈಕುಂಠಂ ನಾತ್ರ ಸಂಶಯಃ ॥ ೩೩ ॥
ಬಹುವರ್ತಿಸಮಾಯುಕ್ತಂ ಘೃತಪೂರಸಮನ್ವಿತಂ ।
ಕುರ್ಯಾದಾರಾರ್ತಿಕಂ ಯೋ ವೈ ಕಲ್ಪಕೋಟಿಂ ದಿವಂ ವಿಶೇತ್॥ ೩೪ ॥
ನೀರಾಜನಂ ತು ಯಃ ಪಶ್ಯೇತ್ ಸಹೋಮಾಸೇ ಮಮಾಗ್ರತಃ ।
ಸಪ್ತಜನ್ಮ ಭವೇದ್ವಿಪ್ರೋ ಹ್ಯಂತೇ ಚ ಪರಮಂ ಪದಂ ॥ ೩೫ ॥
ಕರ್ಪೂರೇಣ ತು ಯಃ ಕುರ್ಯಾತ್ ಭಕ್ತ್ಯಾ ಚೈವ ಮಮಾಗ್ರತಃ ।
ಆರಾರ್ತಿಕಂ ದ್ವಿಜಶ್ರೇಷ್ಠ ಪ್ರವಿಶೇನ್ಮಾಮನಂತಕಂ ॥ ೩೬ ॥
ಮಂತ್ರಹೀನಂ ಕ್ರಿಯಾಹೀನಂ ಯತ್ಕೃತಂ ಪೂಜನಂ ಮಮ ।
ಸರ್ವಂ ಸಂಪೂರ್ಣತಾಮೇತಿ ಕೃತೇ ನೀರಾಜನೇ ಸುತ ॥ ೩೭ ॥

೩೨. ಧೂಪವೇ ಸೌಂದರ್ಯವನ್ನುಂಟುಮಾಡುವುದು. ಧೂಪವೇ ಪವಿತ್ರಪದಾರ್ಥಗಳಲ್ಲೆಲ್ಲ ಉತ್ತಮವೆನಿಸಿರುವುದು. ವನಸ್ಪತಿ ರಸವು ದಿವ್ಯವೂ, ಉತ್ತಮವೂ, ಪವಿತ್ರವೂ, ನಿರ್ಮಲವೂ ಆಗಿರುವುದು.

೩೩. ಇನ್ನು ಮೇಲೆ ಉತ್ತಮವಾದ ದೀಪದರ್ಶನದ ಮಾಹಾತ್ಮ್ಯವನ್ನು ನಿರೂಪಿಸುವೆನು. ಆ ಸೇವೆಯಿಂದ ಮನುಷ್ಯನು ವೈಕುಂಠವನ್ನು ಪಡೆಯುವುದರಲ್ಲಿ ಸಂದೇಹವಿಲ್ಲ.

೩೪. ತುಪ್ಪದಲ್ಲಿ ನೆನೆಸಿದ ಅನೇಕ ಬತ್ತಿಗಳಿಂದ ಕೂಡಿದ ಆರತಿಯನ್ನು ಯಾವನು ನನಗೆ ಬೆಳಗುವನೊ, ಅವನು ಒಂದು ಕೋಟಿಕಲ್ಪಗಳವರೆವಿಗೂ ಸ್ವರ್ಗಲೋಕದಲ್ಲಿ ವಾಸಮಾಡುವನು.

೩೫. ಮಾರ್ಗಶಿರಮಾಸದಲ್ಲಿ ನನ್ನ ಪೂಜೆಯು ನಡೆಯುವಾಗ ಮಾಡುವ ನೀರಾಜನದ ಸೇವೆಯನ್ನು ಯಾವನು ನೋಡುವನೊ, ಅವನು ಏಳು ಜನ್ಮಗಳ ವರೆವಿಗೂ ಬ್ರಾಹ್ಮಣನಾಗಿ ಜನಿಸಿ ಬಳಿಕ ಪರಮಪದವನ್ನು ಪಡೆದು ಸುಖಿಸುವನು.

೩೬. ಯಾವನು ಭಕ್ತಿಯಿಂದ ನನ್ನೆದುರಿನಲ್ಲಿ ನಿಂತು ಕರ್ಪೂರದ ಆರಾರ್ತಿಕವನ್ನು ಬೆಳಗಿಸುವನೊ, ಆ ಬ್ರಾಹ್ಮಣೋತ್ತಮನು ಶಾಶ್ವತವಾಗಿ ನನ್ನಲ್ಲಿ ಐಕ್ಯವನ್ನು ಹೊಂದುವನು.

೩೭. ಪುತ್ರನಾದ ಬ್ರಹ್ಮನೆ! ಮಂತ್ರಹೀನವಾಗಿಯಾಗಲಿ, ಕ್ರಿಯಾರಹಿತ

ಯಃ ಕರೋತಿ ಸಹೋಮಾಸೇ ಕರ್ಪೂರೇಣ ಚ ದೀಪಕಂ ।
ಅಶ್ವಮೇಧಮವಾಪ್ನೋತಿ ಕುಲಂ ಚೈವ ಸಮುದ್ಧರೇತ್ ॥ ೩೮ ॥
ಮಮಾಗ್ರೇ ವೈ ದ್ವಿಜಾನಾಂ ಚ ದೀಪಂ ದದ್ಯಾಚ್ಚತುಷ್ಪಥೇ ।
ಮೇಧಾವೀ ಜ್ಞಾನಸಂಪನ್ನಃ ಚಕ್ಷುಷ್ಮಾನ್ ಜಾಯತೇ ನರಃ ॥ ೩೯ ॥
ಘೃತೇನ ವಾಥ ತೈಲೇನ ದೀಪಂ ಪ್ರಜ್ವಾಲಯೇನ್ನರಃ ।
ಸಹೋಮಾಸೇ ಮಮಾಗ್ರೇ ಚ ತಸ್ಯ ಪುಣ್ಯಫಲಂ ಶೃಣು ॥ ೪೦ ॥
ವಿಹಾಯ ಸಕಲಂ ಪಾಪಂ ಸಹಸ್ರಾದಿತ್ಯಸಂನಿಭಃ ।
ಜ್ಯೋತಿಷ್ಮತಾ ವಿಮಾನೇನ ಮಮ ಲೋಕೇ ಮಹೀಯತೇ ॥ ೪೧ ॥
ತಸ್ಮಾತ್ಸರ್ವಪ್ರಯತ್ನೇನ ದೀಪಂ ದದ್ಯಾದ್ವಿಚಕ್ಷಣಃ ।
ತಂ ಚ ದತ್ವಾ ವಿಹಿಂಸೇದ್ಯಃ ಸ ಪತೇತ್ ನರಕೇ ಧ್ರುವಂ ॥ ೪೨ ॥

ವಾಗಿಯಾಗಲಿ ಮಾಡಿದ ಪೂಜೆಯೂ ಕೂಡ ನೀರಾಜನವನ್ನು ಮಾಡುವ ಮಾತ್ರದಿಂದ ಸಕಲವೂ ಸಂಪೂರ್ಣತೆಯನ್ನು ಹೊಂದುವುದು.

೩೮. ಯಾವನು ಮಾರ್ಗಶೀರ್ಷಮಾಸದಲ್ಲಿ ನನಗೆ ಕರ್ಪೂರದ ನೀರಾಜನದ ಸೇವೆಯನ್ನು ಮಾಡಿಸುವನೊ, ಅವನು ಅಶ್ವಮೇಧಯಜ್ಞದ ಫಲವನ್ನು ಹೊಂದುವನಲ್ಲದೆ ಕುಲವನ್ನೂ ಉದ್ಧರಿಸುವನು.

೩೯. ಭಾಗವತನು ನನ್ನ ಸನ್ನಿಧಿಯಲ್ಲಿಯೂ, ಬ್ರಾಹ್ಮಣರ ಸಮೂಹದಲ್ಲಿಯೂ, ಚತುಷ್ಪಥಗಳಲ್ಲಿಯೂ, ದೀಪ, ನೀರಾಜನಗಳನ್ನು ದಾನಮಾಡಬೇಕು. ಆ ಮನುಷ್ಯನು ಬುದ್ಧಿಶಾಲಿಯೂ, ಜ್ಞಾನಸಂಪನ್ನನೂ, ನೇತ್ರಪಾಟವವುಳ್ಳವನೂ ಆಗುವನು.

೪೦. ಪ್ರತಿಮಾನವನೂ ಮಾರ್ಗಶಿರಮಾಸದಲ್ಲಿ ತುಪ್ಪದಿಂದಾಗಲಿ, ಎಣ್ಣೆಯಿಂದಾಗಲಿ ಹೊತ್ತಿಸಿದ ದೀಪವನ್ನು ಸಮರ್ಪಿಸಬೇಕು. ಅವನಿಗೆ ಲಭಿಸುವ ಪುಣ್ಯದ ಫಲವನ್ನು ಕೇಳುವವನಾಗು.

೪೧. ಆ ಭಕ್ತನು ತನ್ನ ಸಮಸ್ತ ಪಾಪಗಳನ್ನೂ ಕಳೆದುಕೊಂಡು ಸಾವಿರ ಸೂರ್ಯರನ್ನು ಧಿಕ್ಕರಿಸುವ ತೇಜಸ್ಸುಳ್ಳವನಾಗಿ ದೇದೀಪ್ಯಮಾನವಾದ ವಿಮಾನದಲ್ಲಿ ಪ್ರಯಾಣಮಾಡಿ ನನ್ನ ಲೋಕದಲ್ಲಿ ಉತ್ತಮ ಪದವಿಯನ್ನು ಪಡೆಯುವನು.

೪೨. ಆದುದರಿಂದ ಬುದ್ಧಿವಂತನಾದವನು ಸರ್ವಪ್ರಕಾರದಿಂದಲೂ ನನಗೆ ದೀಪೋತ್ಸವವನ್ನು ನಡೆಸಬೇಕು. ಯಾವನು ಹಚ್ಚಿದ ದೀಪಗಳನ್ನು ಬಲವಂತವಾಗಿ ಆರಿಸುವನೊ, ಅವನು ಶಾಶ್ವತವಾಗಿ ನರಕವನ್ನನುಭವಿಸುವನು.

ದೀಪಂ ಯೋ ವೈ ಹರೇತ್ಪಾಪೀ ಲೋಭಾದ್ದ್ವೇಷಾದ್ದ್ವಿಜೋತ್ತಮ ।
ಉದ್ದೀಪಹರಣಾತ್ಸೋಽಪಿ ಮೂಕೋಽಂಧಶ್ಚ ಪ್ರಜಾಯತೇ ॥ ೪೩ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ದ್ವಿತೀಯೇ ವೈಷ್ಣವಖಂಡೇ ಮಾರ್ಗಶೀರ್ಷಮಾಹಾತ್ಮ್ಯೇ ಬ್ರಹ್ಮವಿಷ್ಣುಸಂವಾದೇ "ದೀಪದಾನಮಾಹಾತ್ಮ್ಯಕಥನಂ"ನಾಮಾಷ್ಟಮೋಽಧ್ಯಾಯಃ

---

೪೩. ಎಲೈ ಬ್ರಹ್ಮದೇವನೆ! ಯಾವ ಪಾಪಿಯು ಲೋಭದಿಂದಾಗಲಿ, ದ್ವೇಷದಿಂದಾಗಲಿ ಪರಮಾತ್ಮನಿಗರ್ಪಿಸಿರುವ ದೀಪಗಳನ್ನು ಅಪಹರಿಸುವನೊ, ಆ ದೀಪಹರಣದ ನೀಚಕೃತ್ಯದ ಫಲವಾಗಿ ಅವನು ಮೂಗನೂ, ಅಂಧನೂ ಆಗಿ ಜನಿಸುವನು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀ ಸ್ಕಾಂದಮಹಾಪುರಾಣದ ಎರಡನೆಯ ವೈಷ್ಣವಖಂಡದ ಮಾರ್ಗಶೀರ್ಷಮಾಹಾತ್ಮ್ಯದ ಬ್ರಹ್ಮವಿಷ್ಣುಸಂವಾದದಲ್ಲಿ "ದೀಪದಾನಮಾಹಾತ್ಮ್ಯಕಥನ"ವೆಂಬ ಎಂಟನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

# ಅಥ ನವಮೋಽಧ್ಯಾಯಃ

## ನೈವೇದ್ಯವಿಧಿಕಥನಂ

ಬ್ರಹ್ಮೋವಾಚ :-

ನೈವೇದ್ಯಸ್ಯ ವಿಧಿಂ ಬ್ರೂಹಿ ದೇವ ಮೇ ತತ್ತ್ವತಃ ಪ್ರಭೋ ।
ಅನ್ನಂ ಕತಿ ವಿಧಂ ಚೇಷ್ಟಂ ವ್ಯಂಜನಾದೀನ್ಯಶೇಷತಃ ॥ ೧ ॥

ಶ್ರೀ ಭಗವಾನುವಾಚ :—

ಸಾಧು ಪೃಷ್ಟಂ ತ್ವಯಾ ವತ್ಸ ಮಮ ಪ್ರೀತಿಕರಂ ಪರಂ ।
ವಕ್ಷ್ಯಾಮಿ ತೇಽನ್ನಪಾನಾದಿ ವ್ಯಂಜನಾದೀನ್ಯಶೇಷತಃ ॥ ೨ ॥
ಆದೌ ಹಿರಣ್ಮಯಂ ಪಾತ್ರಂ ತದಭಾವೇ ಚ ರಾಜತಂ ।
ತದಭಾವೇ ಚ ಪಾಲಾಶಂ ವಿಸ್ತೀರ್ಣಂ ಬಹುಸುಂದರಂ ॥ ೩ ॥
ಕಚೋಲಾ ಶತಶಃ ಕಾರ್ಯಾಃ ಪಾತ್ರೇ ವೈ ಪರಿತೋಽನಘ ।
ತನ್ಮಧ್ಯೇ ವ್ಯಂಜನಾ ದೇಯಾ ನಾನಾಫಲಮಯಾಶ್ಶುಭಾಃ ॥ ೪ ॥

---

## ಕನ್ನಡದ ಅನುವಾದ

### ನೈವೇದ್ಯವಿಧಿಕಥನ

೧. ಬ್ರಹ್ಮದೇವನು ಕೇಳುತ್ತಾನೆ:—ದೇವೇಶ್ವರನಾದ ಸ್ವಾಮಿಯೆ ! ನಿನಗೆ ನೈವೇದ್ಯವನ್ನರ್ಪಿಸುವ ವಿಧಿಯನ್ನು ಆಮೂಲಾಗ್ರವಾಗಿ ತಿಳಿಸು. ಎಷ್ಟುವಿಧಗಳ ಅನ್ನವು ನಿನಗೆ ಇಷ್ಟವು? ಯಾವ ವ್ಯಂಜನಾದಿಗಳನ್ನು ನಿನಗೆ ಸಮರ್ಪಿಸಬೇಕು? ಇದನ್ನು ನಿಶ್ಶೇಷವಾಗಿ ಹೇಳುವವನಾಗು.

೨. ಭಗವಂತನು ಹೇಳುತ್ತಾನೆ:—ಪುತ್ರನೆ! ನನಗೆ ಅತ್ಯಂತ ಪ್ರಿಯವನ್ನುಂಟುಮಾಡುವ ವಿಷಯದಲ್ಲಿಯೇ ನೀನು ಉಚಿತಪ್ರಶ್ನೆಯನ್ನು ಮಾಡಿದೆ. ನನಗೆ ನಿವೇದನೆ ಮಾಡಬೇಕಾಗಿರುವ ಅನ್ನಪಾನಗಳನ್ನೂ ವ್ಯಂಜನದ್ರವ್ಯಗಳನ್ನೂ ಸಮಗ್ರವಾಗಿ ನಿನಗೆ ಹೇಳುವೆನು.

೩. ಮೊದಲು ಚಿನ್ನದ ತಟ್ಟೆಯನ್ನಾಗಲಿ, ಅದಿಲ್ಲದಿದ್ದರೆ ಬೆಳ್ಳಿಯದಾಗಲಿ, ಅದಕ್ಕೂ ಅಭಾವವಾದಲ್ಲಿ ವಿಶಾಲವೂ ಬಹಳ ಮನೋಹರವೂ ಆದ ಮುತ್ತುಗದ ಪತ್ರಾವಳಿಯನ್ನಾಗಲಿ ಸಿದ್ಧಗೊಳಿಸಬೇಕು.

೪. ಎಲೈ ನಿಷ್ಪಾಪನೆ! ಆ ಪಾತ್ರೆಯ ಸುತ್ತಲೂ ನೂರಾರು ದೊನ್ನೆಗಳನ್ನು ಶೇಖರಿಸಿಡಬೇಕು. ಅವುಗಳ ಮಧ್ಯದಲ್ಲಿ ಅನೇಕ ಫಲಗಳಿಂದ ಮಾಡಲ್ಪಟ್ಟ ವ್ಯಂಜನಗಳನ್ನು ಬಡಿಸಿರಬೇಕು.

ಪಾಯಸಂ ಚಂದ್ರಸಂಕಾಶಂ ಪಾತ್ರೇ ವೈ ಶರ್ಕರಾಯುತಂ ।
ಭಕ್ತಂ ಕುಮುದಸಂಕಾಶಂ ಮುದ್ಗಾನ್ ಕಾಚಪ್ರಭಾನ್ ಶುಭಾನ್ ॥ ೫ ॥
ನಾನಾವ್ಯಂಜನಸಮೃದ್ಧಂ ತ್ರಿಭಿಃ ಪಂಕ್ತಿಭಿರೇವ ಚ ।
ನಿಂಬೂರಸೇನ ಚಂದ್ರೇಣ ಫಲಮೂಲಯುತೇನ ಚ ॥ ೬ ॥
ನೈಕೃತಾಶ್ಚ ತದಾ ಕಾರ್ಯಾಃ ಶತಶೋ ಭೋಜನೇ ಮಮ ।
ದ್ರಾಕ್ಷಾಸ್ತು ಮಿಶ್ರಿತಾ ಚೂತಕರಮರ್ದಕೃತಾಶ್ಶುಭಾಃ ॥ ೭ ॥
ಮರೀಚಿಪಿಪ್ಪಲೀಸಾರ್ದ್ರಕೈಲಾಚಂದ್ರಕಸಂಯುತಾಃ ।
ಕ್ವಾಥಿತಾ ಕ್ವಥಿಕಾಃ ಕಾರ್ಯಾಃ ಶತಶೋ ಭೋಜನೇ ಮಮ ॥ ೮ ॥
ಪ್ರಲೇಹನಾಸ್ತಥಾ ಕಾರ್ಯಾಃ ಕಚೋಲಶತಸಂಕುಲಾಃ ।
ನಾನಾಕುಸುಮಸಂಮೋದಯುಕ್ತಾ ಸಹಸಿ ಮೇ ಪ್ರಿಯಾಃ ॥ ೯ ॥
ಹುಂಡಕಾ ವರ್ತುಲಾ ರಮ್ಯಾಃ ಸಮಾಸ್ಸರ್ವತ್ರ ಬಿಂದುವತ್ ।
ಸಿತಯಾ ಸಹಿತೇನಾಥ ದುಗ್ಧೇನ ಕ್ವಥಿತೇನ ಚ ॥ ೧೦ ॥
ಮಧುವರ್ಣೇನ ಗವ್ಯೇನ ಯುಕ್ತೇ ತಸ್ಮಿನ್ ಸುಭೋಜನೇ ।
ಕಚೋಲೇ ಸುಪ್ರಭೇ ವತ್ಸ ಸ್ಥಿತಂ ಕಾಂಚನಸುಪ್ರಭಂ ॥ ೧೧ ॥

---

೫. ಒಂದು ಪಾತ್ರೆಯಲ್ಲಿ ಸಕ್ಕರೆಯಿಂದ ಕೂಡಿ ಚಂದ್ರನಂತೆ ಶುಭ್ರವರ್ಣ ವಿಶಿಷ್ಟವಾದ ಪಾಯಸವನ್ನೂ, ಕುಮುದವನ್ನು ಹೋಲುವ ಅನ್ನವನ್ನೂ, ಗಾಜಿನಂತೆ ಮಿರುಗುತ್ತಿರುವ ನಿರ್ಮಲವಾದ ಹೆಸರುಬೇಳೆಯನ್ನೂ ಇಟ್ಟಿರಬೇಕು.

೬–೮. ಎಲೆಯ ಸುತ್ತಲೂ ಮೂರು ಪಙ್ತಿಗಳಲ್ಲಿ ಅನೇಕ ವಿಧಗಳಾದ ವ್ಯಂಜನಗಳನ್ನು ಸಿದ್ಧಗೊಳಿಸಬೇಕು. ನನ್ನ ನೈವೇದ್ಯಕ್ಕಾಗಿ ನಿಂಬೆಯರಸದಿಂದಲೂ ಶೊಂಠಿಯಿಂದಲೂ ಪಾಕಗೊಳಿಸಲ್ಪಟ್ಟ ನೂರಾರು ಪದಾರ್ಥಗಳನ್ನು ಹಣ್ಣು ಗಳಲ್ಲಿಯೂ ಗೆಡ್ಡೆಗೆಣಸುಗಳಲ್ಲಿಯೂ ಮಾಡಿಸಬೇಕು. ದ್ರಾಕ್ಷೆ, ಮಾವು, ಕರಮರ್ದ, ಮೆಣಸು, ಹಿಪ್ಪಲಿ, ಶೊಂಠಿ, ಏಲಕ್ಕಿ, ಕರಿಮೆಣಸು ಮುಂತಾದ ದ್ರವ್ಯಗಳ ನೂರಾರು ಕಷಾಯಗಳು ನನ್ನ ನೈವೇದ್ಯಕ್ಕಾಗಿ ಮಾಡಲ್ಪಡಬೇಕು.

೯. ಕಚೋರವೇ ಮೊದಲಾದ ನೂರಾರು ಸುಗಂಧದ್ರವ್ಯಗಳಿಂದ ಕೂಡಿದ ಲೇಹ್ಯಪದಾರ್ಥಗಳನ್ನೂ ಹಾಗೆಯೇ ಸಿದ್ಧಗೊಳಿಸಬೇಕು. ಮಾರ್ಗಶಿರಮಾಸದಲ್ಲಿ ಇವುಗಳನ್ನು ಅನೇಕ ಕುಸುಮಗಂಧಸಹಿತವಾಗಿ ನನಗೆ ನಿವೇದಿಸಲು ನನಗೆ ಪ್ರಿಯಗಳಾಗಿರುವುವು.

೧೦. ಸಕ್ಕರೆಯಿಂದ ಕೂಡಿದವುಗಳೂ, ಕಾಸಿದ ಹಾಲಿನಲ್ಲಿ ನೆನೆಸಿದವು ಗಳೂ, ಸಮನಾದ ಘನವುಳ್ಳವುಗಳೂ, ಗುಂಡಗೆ ಮನೋಹರಗಳೂ ಆದ ದೋಸೆಗಳನ್ನು ನನಗೆ ನಿವೇದಿಸಬೇಕು.

೧೧–೧೩. ಎಲೈ ಪುತ್ರನೆ! ಜೇನುತುಪ್ಪಕ್ಕೆ ಸಮಾನವಾದ ಗೋಕ್ಷೀರಾದಿ

ಘೃತಂ ಸುವಾಸಿತಂ ಪ್ರೀತ್ಯಾ ದೇಯಂ ಹಿ ಮಮ ಭೋಜನೇ ।
ತತ್ರ ಗೋಧೂಮಪಾತ್ರೇಣ ಚಂದ್ರಕೇಣ ಹಿ ಚೋಜ್ಜ್ವಲಂ ॥ ೧೨ ॥
ಸೌಬಾಹ್ಲಿಕಾಃ ಪೂರಿಕಾಸ್ತು ಶತಛಿದ್ರಾಃ ಸವೇಷ್ಟಿಕಾಃ ।
ಅಪೂಪಾಂಶ್ಚ ತಥಾ ಕ್ಷೀರಪ್ರಕಾರಾಂಸ್ತು ಪ್ರಕಾರಯೇತ್ ॥ ೧೩ ॥
ಮಣಯಃ ಸೂತ್ರಸಂಜ್ಞಾಶ್ಚ ಮಾಲತೀಕುಸುಮಾದಯಃ ।
ಪರ್ಪಟಾ ವರ್ಪಟಾ ರಮ್ಯಾಮಾಷಕೂಷ್ಮಾಂಡಸಂಭವಾಃ ॥ ೧೪ ॥
ವಟಕಾನ್ ನವಧಾ ರಮ್ಯಾನ್ ಕುರ್ಯಾನ್ಮಾಸೇ ಸಹೇ ಮಮ ।
ದ್ವಿಧಾ ಜಾತೀಮರೀಚೈಶ್ಚ ಪೂರಿತಾ ದ್ರೋಣಕೇ ಶುಭಾಃ ॥ ೧೫ ॥
ಯುಕ್ತೇನ ಲವಣೇನಾತಿಶುದ್ಧತೈಲೇನ ಪೂರಿತಾಃ ।
ಕುಂಕುಮಾಭಾಃ ಸ್ನೇಹಹೀನಾಃ ಸಕ್ಷತಾ ಇವ ದುರ್ಜನಾಃ ॥ ೧೬ ॥
ದಧಿದುಗ್ಧಯುತಾಃ ಕೇಚಿತ್ ಚಿಂಚಿಣೀಚೂತಸಂಭವಾಃ ।
ದ್ರಾಕ್ಷಾರಸಯುತಾಃ ಕೇಚಿತ್ ತಥೈವೇಕ್ಷುರಸೈರ್ಯುತಾಃ ॥ ೧೭ ॥

ಗಳಿಂದ ಕೂಡಿದ ಆ ಭೋಜನಕ್ಕಾಗಿ ಮಿರುಗುತ್ತಿರುವ ಚಿನ್ನದ ಬಟ್ಟಲಿನಲ್ಲಿ ಸುವಾಸನೆಯುಳ್ಳ ತುಪ್ಪವನ್ನು ಪ್ರೀತಿಯಿಂದ ಕೊಡಬೇಕು. ಮೆಣಸಿನಿಂದ ಕೂಡಿದ ಗೋಧಿಯ ಭಕ್ಷ್ಯಗಳನ್ನೂ ಮನೋಹರವಾಗಿರುವಂತೆ ಬಡಿಸಿ ಕೇಸರೀಯುಕ್ತಗಳೂ, ಶತಚ್ಛಿದ್ರಗಳೂ ಆದ ಪೂರಿಗಳನ್ನೂ, ವೇಷ್ಟನಸಹಿತಗಳಾದ ಅಪೂಪಗಳನ್ನೂ, ಹಾಲಿನಿಂದ ಮಾಡಿದ ಇತರ ಪದಾರ್ಥಗಳನ್ನೂ ನಿವೇದನೆ ಮಾಡಬೇಕು.

೧೪–೧೫. ಸೂತ್ರಸಂಜ್ಞಗಳೆಂಬ ಕಾಳುಗಳೂ, ಮಾಲತೀಪುಷ್ಪಸದೃಶಗಳಾದ ಉದ್ದು ಮತ್ತು ಕೂಷ್ಮಾಂಡಗಳಿಂದ ಮಾಡಲ್ಪಟ್ಟ ಒಡೆಗಳೇ ಮುಂತಾದುವುಗಳೂ ಸಿದ್ಧವಾಗಿರಬೇಕು. ಮತ್ತು ವಿಶೇಷವಾಗಿ ಮಾರ್ಗಶೀರ್ಷ ಮಾಸದಲ್ಲಿ ಒಂಬತ್ತು ವಿಧಗಳಾದ ವಟಕಗಳೆಂಬ ದೋಸೆಗಳನ್ನು ಮಾಡಬೇಕು. ಎರಡು ವಿಧವಾಗಿ ಜಾಜಿಕಾಯಿ ಮತ್ತು ಮೆಣಸುಗಳಿಂದ ಕೂಡಿದ ನಿರ್ಮಲಗಳಾದ ಬಟ್ಟಲುಗಳನ್ನು ಇಡಬೇಕು.

೧೬. ಈ ಭಕ್ಷ್ಯಗಳೆಲ್ಲವೂ ಲವಣಯುಕ್ತಗಳಾಗಿ ಅತ್ಯಂತ ಪರಿಶುದ್ಧವಾದ ತೈಲದಲ್ಲಿ ಪಕ್ವಮಾಡಲ್ಪಟ್ಟು ಕುಂಕುಮವರ್ಣವಿಶಿಷ್ಟಗಳಾಗಿ ದುರ್ಜನರಂತೆ ಸ್ನೇಹಹೀನಗಳೂ, ಸಚ್ಛಿದ್ರಗಳೂ ಆಗಿರಬೇಕು.

೧೭. ಕೆಲವು ಮೊಸರು ಹಾಲುಗಳಿಂದಲೂ, ಕೆಲವು ಹುಣಿಸೆ ಮಾವುಗಳ ಕಾಯಿಗಳಿಂದಲೂ, ಹಲವು ದ್ರಾಕ್ಷಾರಸದಿಂದಲೂ, ಮತ್ತೆ ಕೆಲವು ಕಬ್ಬಿನ ಹಾಲಿನಿಂದಲೂ ಮಾಡಲ್ಪಟ್ಟಿರಬೇಕು.

ರಾಜಿಕಾ ಜಲಮಧ್ಯಸ್ಥಾಃ ತಥಾನ್ಯೇ ಸಿತಯಾ ಸಹ ।
ರಸೈಶ್ಚತುರ್ವಿಧೈಶ್ಚಾನ್ಯೈಃ ವಟಿಕಾ ನವಧಾ ಮತಾಃ ॥ ೧೮ ॥
ವಜ್ರಪ್ರಭಾನುಕಣಿಕಾ ಚಾರಬೀಜಸುಚಾರಿಕೈಃ ।
ಶಕಲೈರ್ನಾರಿಕೇಳಸ್ಯ ಲವಂಗಶತಸಂಯುತಾಃ ॥ ೧೯ ॥
ಘೃತಕ್ಷೀರಸಿತಾದ್ಯಾಸ್ತಾಃ ಕಟಾಹೇ ಸುಪ್ರಲೋಡಿತಾಃ ।
ಲಬ್ಧಾ ಸಿತಾದಿಕೃಸರರಮ್ಯಾಃ ಸ್ನಿಗ್ಧಾಶ್ಚ ಫೇಣಿಕಾಃ ॥ ೨೦ ॥
ಪರಾಕಿಕಾಸು ವೈ ಪಕ್ವಾಃ ಕೃತಾಶ್ಚಂದ್ರೇಣ ಪೋಲಿಕಾಃ ।
ಮೋದಕಾಸ್ತತ್ರ ವೈ ಕಾರ್ಯಾಃ ಚಾರಬೀಜಭವಾಃ ಪರೇ ॥ ೨೧ ॥
ಸಿತಯಾ ಸಹಿತಾಃ ಕಾರ್ಯಾ ಅನ್ಯೇ ದುಗ್ಧೇನ ನಿರ್ಮಿತಾಃ ।
ನಾರಿಕೇಳಫಲೈಶ್ಚಾನ್ಯೇ ವೃಕ್ಷನಿರ್ಯಾಸನಿರ್ಮಿತಾಃ ॥ ೨೨ ॥
ಬದಾಮೈಶ್ಚ ಶುಭಾಶ್ಚಾನ್ಯೇ ತಿಲೈಶ್ಚ ಕಣಬೀಜಕೈಃ ।
ಈದೃಶಾನ್ ಮೋದಕಾಂಶ್ಚಾನ್ಯಾನ್ ತುಷ್ಟ್ಯರ್ಥಂ ಮಮ ಕಾರಯೇತ್ ॥
ಅರ್ಶೋಘ್ನಂ ಮೋಚನೀಕಂದಂ ತಥಾರ್ದ್ರಂ ಕರಮರ್ದಕಂ ।
ನಾರಿಂಗಂ ಚಿಂಚಿಣೀಕಂ ಚ ಕಂಕೋಲಫಲಮೇವ ಚ ॥ ೨೪ ॥

---

೧೮. ನೀರಿನಲ್ಲಿ ನೆನೆಸಿದ ಮೆಣಸಿನಿಂದಲೂ, ಕಲ್ಲುಸಕ್ಕರೆಯಿಂದಲೂ, ಇತರ ಪದಾರ್ಥಗಳಿಂದಲೂ, ಚತುರ್ವಿಧರಸಯುಕ್ತಗಳಾಗಿ ಮಾಡುವುವುಗಳೇ ಒಂಭತ್ತು ವಿಧಗಳಾದ ವಟಿಕಗಳೆಂದು ಹೇಳಲ್ಪಟ್ಟಿರುವುವು.

೧೯. ಈ ವಟಿಕಗಳು ವಜ್ರಸಮಾನಗಳಾದ ರವೆಯಿಂದಲೂ ಹೊಟ್ಟಿಲ್ಲದ ಕಾಳುಗಳಿಂದಲೂ ಮಾಡಲ್ಪಟ್ಟು ತೆಂಗಿನಕಾಯಿಯ ಚೂರುಗಳಿಂದಲೂ ಅನೇಕ ಲವಂಗಗಳಿಂದಲೂ ಕೂಡಿರಬೇಕು.

೨೦. ತುಪ್ಪ, ಹಾಲು, ಸಕ್ಕರೆ ಮುಂತಾದುವುಗಳಿಂದ ಕೂಡಿ ಬಾಣಲೆಯಲ್ಲಿ ಕೆಂಪಗೆ ಕರಿದು ಸ್ನೇಹಯುಕ್ತಗಳಾಗಿರುವ ಫೇಣಿಗಳನ್ನೂ ಪಾಯಸದೊಡನೆ ಸಿದ್ಧಪಡಿಸಬೇಕು.

೨೧–೨೩. ಹಿಟ್ಟಿನಿಂದ ಮಾಡಲ್ಪಟ್ಟು ಕಾವಲಿಯಲ್ಲಿ ಪಕ್ವಮಾಡಿರುವ ಹೋಳಿಗೆಗಳೂ, ಚಾರಬೀಜಗಳಿಂದ ಮಾಡಿದ ಮೋದಕಗಳೂ ನೈವೇದ್ಯಕ್ಕಾಗಿ ಸಿದ್ಧವಾಗಬೇಕು. ಕೆಲವನ್ನು ಸಕ್ಕರೆಯಿಂದ ಮಾಡಬೇಕು. ಕೆಲವನ್ನು ಹಾಲಿನಿಂದ ಮಾಡಬೇಕು. ಮತ್ತೆ ಕೆಲವನ್ನು ತೆಂಗಿನಕಾಯಿಗಳಿಂದಲೂ, ಗಿಡಗಳ ಅಂಟಿನಿಂದಲೂ, ಮತ್ತೆ ಹಲವನ್ನು ಶುದ್ಧವಾದ ಬಾದಾಮಿಯಿಂದಲೂ, ಎಳ್ಳಿನಿಂದಲೂ, ಕಣಬೀಜಗಳಿಂದಲೂ, ಇತರ ಧಾನ್ಯಗಳಿಂದಲೂ ನನ್ನ ಸಂತೋಷಕ್ಕಾಗಿ ಮೋದಕಗಳನ್ನು ಮಾಡಿಸಬೇಕು.

೨೪–೩೭. ಕಂದ, ಬಾಳೆಯ ದಿಂಡು, ಕೃಷ್ಣಪಾಕ, ಕಿತ್ತಳೆ, ಹುಣಿಸೆ,

ದಶಾರಂ ತ್ರಿಪುರೀಜಾತಂ ಶುಭಂ ನಿಂಬಫಲಂ ಬಿಸಂ ।
ತಿಂದೂಫಲಂ ಲವಂಗಂ ಚ ಶ್ರೀಫಲಂ ತಿಲಕಂ ಲುತಿ ॥ ೨೫ ॥
ವಲ್ಕಲಂ ವಂಶಕಾರೀರಂ ತಥಾ ಕಾಯಫಲಂ ಬಲಂ ।
ದ್ರಾಕ್ಷಾಫಲಂ ಚೂತಫಲಂ ರಮ್ಯಂ ಕಂಟಕಿನೀಫಲಂ ॥ ೨೬ ॥
ಧಾತ್ರೀಫಲಂ ಶುಕ್ತಿಭವಂ ಫಲಮಂಬಾಡವಂ ತಥಾ ।
ರಂಭಾಫಲಂ ಪಿಪ್ಪಲೀ ಚ ಮರೀಚಾಶ್ಚ ಮನೋಹರಾಃ ॥ ೨೭ ॥
ಶುದ್ಧಸರ್ಪಿಷತ್ತೈಲೇನ ಲವಣೇನ ಸುವೇಧಿತಂ ।
ತಥಾ ರಾಜಿಕಯಾ ವಿದ್ಧಂ ತ್ರಿಭಿರ್ವರ್ಷೈರ್ಘಟೇ ಸ್ಥಿತಂ ॥ ೨೮ ॥
ಏವಂವಿಧಾನಿ ಜಾತಾನಿ ವ್ಯಂಜನಾನಿ ಚ ಮಾನದೆ ।
ಕರ್ತವ್ಯಾನಿ ಸಹೋಮಾಸೇ ಮಮ ಪ್ರೀತಿಕರಾಣಿ ವೈ ॥ ೨೯ ॥
ಏತಾದೃಶೇ ಭೋಜನೇ ಚೇತ್ ಅಸಾಮರ್ಥ್ಯಂ ಭವೇದ್ಯದಿ ।
ಏವಂ ಕಾರ್ಯಂ ತದಾ ತೇನ ಸಂಕ್ಷೇಪೇಣ ಶೃಣುಷ್ವ ಮೇ ॥ ೩೦ ॥

ಲಡ್ಡೂಕಮೇಕಂ ಘೃತಪೂರಮೇಕಂ
ಫೇನದ್ವಯಂ ಕೋಕರಸತ್ರಯಂ ಚ ।
ಘೃತಪ್ಲುತಂ ಮಂಡಕಷೋಡಶಾನಾಂ
ವಟಾಷ್ಟದಾಯೀ ನರಕಂ ನ ಪಶ್ಯೇತ್ ॥ ೩೧ ॥

---

ಕಂಕೋಲಫಲ, ದಶಾರ, ತ್ರಿಪುರೀಫಲ, ನಿಂಬೆ, ಕಮಲ, ತಿಂದುಕ, ಲವಂಗ, ಬಿಲ್ವ, ತಿಲಕ, ವಲ್ಕಲ, ವಂಶಕಾರೀರ, ಕಾಯಫಲ, ದ್ರಾಕ್ಷೆ, ಮಾವು, ಹಲಸು, ನೆಲ್ಲಿ, ಶುಕ್ತಿಭವ, ಅಂಬಷ್ಠ, ಬಾಳೆ, ಹಿಪ್ಪಲಿ, ಮೆಣಸು ಮುಂತಾದ ಮನೋಹರ ಹಣ್ಣುಹಂಪಲುಗಳನ್ನು ನೈವೇದ್ಯಮಾಡಬೇಕು.

೨೮. ಶುದ್ಧವಾದ ಸಾಸುವೆಣ್ಣೆಯಲ್ಲಿ ಉಪ್ಪುಸಾಸುವೆಗಳೊಡನೆ ಕರೆದು ಮೂರು ವರ್ಷಗಳವರೆವಿಗೂ ಭಾಂಡಗಳಲ್ಲಿ ಪಕ್ವಗೊಳಿಸಿದ ಉಪ್ಪಿನಕಾಯಿ ಮೊದಲಾದುವುಗಳನ್ನೂ ನಿವೇದಿಸಬೇಕು.

೨೯. ಈ ವಿಧವಾಗಿ ಅನೇಕ ಬಗೆಯ ವ್ಯಂಜನಗಳನ್ನು ನನಗೆ ಸಂತೋಷ ವುಂಟಾಗುವಂತೆ ಮಾರ್ಗಶೀರ್ಷಮಾಸದಲ್ಲಿ ನೈವೇದ್ಯಕ್ಕಾಗಿ ಸಿದ್ಧಗೊಳಿಸಬೇಕು.

೩೦. ಈ ತೆರನಾದ ಉಪಹಾರವನ್ನು ನಿವೇದಿಸಲು ಸಮರ್ಥನಲ್ಲದಿದ್ದರೆ ಭಕ್ತನು ಮುಂದೆ ಹೇಳುವಂತೆ ಸಂಕ್ಷೇಪವಾದ ನೈವೇದ್ಯವನ್ನು ಅರ್ಪಿಸಬೇಕು. ಅದರ ವಿಧಾನವನ್ನು ಕೇಳು.

೩೧. ಒಂದು ಲಡ್ಡುಕವು, ಒಂದು ಜಿಲೇಬಿಯು, ಎರಡು ಸಂಡಿಗೆಗಳು, ಮೂರು ಕೋಕರಸಗಳು ತುಪ್ಪದಲ್ಲಿ ಬೇಯಿಸಿದ ಹದಿನಾರು ದೋಸೆಗಳು, ಎಂಟು ವಟಕಗಳು—ಇವುಗಳನ್ನು ನೈವೇದ್ಯಕ್ಕೆ ಸಿದ್ಧಗೊಳಿಸಿದವನು ಎಂದಿಗೂ ನರಕ ಭಾಜನನಾಗುವುದಿಲ್ಲ.

ಅರ್ಧಾರ್ಢಕಂ ಸುಚಿರಪರ್ಯುಷಿತಂ ಚ ದುಗ್ಧಂ
ಖಂಡಸ್ಯ ಷೋಡಶಪಲಾನಿ ಶಶಿಪ್ರಭಸ್ಯ ।
ಸರ್ಪಿಷ್ಪಲಂ ಮಧುಫಲಂ ಮರಿಚಂ ದ್ವಿಕರ್ಷಂ
ಶುಂಠ್ಯಾಃ ಪಲಾರ್ಧಮಥವಾರ್ಧಪಲಂ ಚತುರ್ಣಾಂ ॥
ಶ್ಲಕ್ಷ್ಣೇ ಪಟೇ ಲಲನಯಾ ಮೃದುಪಾಣಿಘೃಷ್ಟಾಂ
ಕರ್ಪೂರಧೂಲಿಧವಲೀಕೃತಭಾಂಡಸಂಸ್ಥಾಂ ।
ಏತಾಂ ಶುಭಾಂ ರಸವತೀಂ ಪ್ರಕರೋತಿ ಯೋ ವೈ ।
ಕಾಮಾನ್ ದದಾಮಿ ಸಕಲಾನ್ ಮನುಜಸ್ಯ ತಸ್ಯ ॥ ೩೩ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ದ್ವಿತೀಯೇ ವೈಷ್ಣವಖಂಡೇ ಮಾರ್ಗಶೀರ್ಷಮಾಹಾತ್ಮ್ಯೇ ಬ್ರಹ್ಮವಿಷ್ಣುಸಂವಾದೇ "ನೈವೇದ್ಯವಿಧಿಕಥನಂ"ನಾಮ ನವಮೋಽಧ್ಯಾಯಃ

---

೩೨–೩೩. ಹಿಂದಿನ ದಿನ ಕರೆದಿರಿಸಿದ ಹಾಲಿನ ಅರ್ಧ ಆಢಕವು, ಚಂದ್ರ ಮಂಡಲದಂತೆ ಶುಭ್ರವಾದ ಕಲ್ಲುಸಕ್ಕರೆಯ ಹದಿನಾರು ಪಲಗಳು, ಸಾಸುವೆಯ ಒಂದು ಪಲವು, ಜೇನುತುಪ್ಪದ ಒಂದು ಪಲವು, ಮೆಣಸು ಎರಡು ಕರ್ಷಗಳು, ಅರ್ಧಪಲದಷ್ಟು ಶುಂಠಿ (ಅಥವಾ ಕೊನೆಯ ನಾಲ್ಕರಲ್ಲಿ ಪ್ರತಿಯೊಂದೂ ಅರ್ಧ ಪಲದಷ್ಟು) ಶುಭ್ರವಾದ ವಸ್ತ್ರದಲ್ಲಿ ಸ್ತ್ರೀಯ ಮೃದುಹಸ್ತಗಳಿಂದ ಶೋಧಿಸಲ್ಪಟ್ಟು ಕರ್ಪೂರಚೂರ್ಣದಿಂದ ಧವಳಿತವಾದ ಭಾಂಡದಲ್ಲಿ ಪಕ್ವಮಾಡಲ್ಪಟ್ಟ ಶುಭ್ರವಾದ ರಸಭಕ್ಷ್ಯವನ್ನು ಯಾವನು ನೈವೇದ್ಯಮಾಡುವನೊ. ಆ ಮನುಷ್ಯನಿಗೆ ಸಕಲ ಇಷ್ಟಾರ್ಥಗಳನ್ನೂ ನಾನು ಕೈಗೂಡುವಂತೆ ಮಾಡುವೆನು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀಸ್ಕಾಂದಮಹಾಪುರಾಣದ ಎರಡನೆಯ ವೈಷ್ಣವಖಂಡದ ಮಾರ್ಗಶೀರ್ಷಮಾಹಾತ್ಮ್ಯದ ಬ್ರಹ್ಮವಿಷ್ಣುಸಂವಾದದಲ್ಲಿ "ನೈವೇದ್ಯವಿಧಿಕಥನ"ವೆಂಬ ಒಂಬತ್ತನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

# ಅಥ ದಶಮೋಽಧ್ಯಾಯಃ

## ಪೂಜಾಸಮಾಪನಂ — ತತ್ಫಲಕಥನಂ

ಬ್ರಹ್ಮೋವಾಚ :—

ನೈವೇದ್ಯಾನಂತರಂ ತಾತ ಕಿಂ ಕರ್ತವ್ಯಂ ನೃಭಿಃ ಪ್ರಭೋ ।
ಯತ್ಕರ್ತವ್ಯಂ ಸಹೋಮಾಸೇ ತತ್ಸರ್ವಂ ಬ್ರೂಹಿ ತತ್ವತಃ ॥ ೧ ॥

ಶ್ರೀ ಭಗವಾನುವಾಚ :—

ಅಥ ಭುಕ್ತವತೇ ದತ್ವಾ ಜಲೈಃ ಕರ್ಪೂರವಾಸಿತೈಃ ।
ಆಚಮನಂ ಚ ತಾಂಬೂಲಂ ಚಂದನಂ ಕರಮಾರ್ಜನಂ ॥ ೨ ॥
ಪುಷ್ಪಾಂಜಲಿಂ ತತಃ ಕುರ್ಯಾತ್ ಭಕ್ತ್ಯಾಽದರ್ಶಂ ಪ್ರದರ್ಶಯೇತ್ ।
ನೀರಾಜನಂ ತತಃ ಕಾರ್ಯಂ ಕರ್ಪೂರಂ ವಿಭವೇ ಸತಿ ॥ ೩ ॥
ಸಮರ್ಪ್ಯ ಮುಕುಟಾದೀನಿ ಭೂಷಣಾನಿ ವಿಚಕ್ಷಣಃ ।
ತತಃ ಪಶ್ಚಾನ್ಮಹಾಭಾಗ ಪ್ರಕಲ್ಪ್ಯ ಛತ್ರಚಾಮರೇ ॥ ೪ ॥
ಪ್ರಸಾದಸುಮುಖಂ ಧ್ಯಾತ್ವಾ ಶ್ಯಾಮಸುಂದರವಿಗ್ರಹಂ ।
ಜಪೇದಷ್ಟೋತ್ತರಶತಂ ಸ್ತುವೀತ ಸ್ತುತಿಭಿಃ ಪ್ರಭುಃ ॥ ೫ ॥

---

## ಕನ್ನಡದ ಅನುವಾದ

### ವಿಷ್ಣು ಪೂಜಾವಿಧಿ–ಉದ್ಯಾಪನೆಗಳ ಕಥನವು

೧. ಬ್ರಹ್ಮದೇವನು ಹೇಳುತ್ತಾನೆ:—ಸ್ವಾಮಿಯೆ! ನೈವೇದ್ಯವನ್ನು ಮಾಡಿದ ಮೇಲೆ ಮುಂದಿನ ಕರ್ತವ್ಯವೇನು? ಮನುಷ್ಯರು ಮಾರ್ಗಶೀರ್ಷ ಮಾಸದಲ್ಲಿ ಏನನ್ನು ಮಾಡಬೇಕೊ, ಅದೆಲ್ಲವನ್ನೂ ಯಥಾರ್ಥವಾಗಿ ನಿರೂಪಣೆ ಮಾಡು.

೨–೩. ಭಗವಂತನು ಹೇಳುತ್ತಾನೆ:—ಇಂತು ನೈವೇದ್ಯವನ್ನರ್ಪಿಸಿದ ಮೇಲೆ ಪರಮಾತ್ಮನಿಗೆ ಕರ್ಪೂರವಾಸನೆಯೊಡಗೂಡಿದ ನೀರಿನಿಂದ ಆಚಮನೋದಕವನ್ನಿತ್ತು ತಾಂಬೂಲವನ್ನೂ ಚಂದನವನ್ನೂ ಕರಮಾರ್ಜನವನ್ನೂ ಒಪ್ಪಿಸಿ ಬಳಿಕ ಭಕ್ತಿಯಿಂದ ಅಂಜಲಿಯಲ್ಲಿ ಪುಷ್ಪಗಳನ್ನು ಅರ್ಪಿಸಬೇಕು. ಆಮೇಲೆ ಕನ್ನಡಿಯನ್ನು ತೋರಿಸಬೇಕು. ಭಕ್ತನಿಗೆ ಉಪಪತ್ತಿಯಿದ್ದಲ್ಲಿ ಬಳಿಕ ಕರ್ಪೂರದ ನೀರಾಜನವನ್ನು ಬೆಳಗಬೇಕು.

೪–೫. ಕಿರೀಟವೇ ಮೊದಲಾದ ಭೂಷಣಗಳನ್ನು ಸಮರ್ಪಿಸಿ ಬುದ್ಧಿಶಾಲಿಯಾದವನು ಛತ್ರಚಾಮರಗಳ ಸೇವೆಯನ್ನು ನಡೆಸಿ ಪ್ರಸನ್ನ ಸುಮುಖನಾಗಿರುವ ಶ್ಯಾಮಸುಂದರ ಮೂರ್ತಿಯನ್ನು ಮನಸ್ಸಿನಲ್ಲಿ ಧ್ಯಾನಿಸುತ್ತ ಅಷ್ಟೋತ್ತರ

ಶಂಖಶಾಪ್ಯಮಯೀ ಮಾಲಾ ಕಾಂಚನೀ ಚ ವಿಶೇಷತಃ ।
ಪದ್ಮಾಕ್ಷೈಶ್ಚೈವ ಸುಭಗೈಃ ವಿದ್ರುಮೈರ್ಮಣಿಮೌಕ್ತಿಕೈಃ ॥ ೬ ॥
ರಚಿತೇಂದ್ರಾಕ್ಷಕೈರ್ಮಾಲಾ ತಥೈವಾಂಗುಲಿಪರ್ವಭಿಃ ।
ಪುತ್ರಜೀವಮಯೀ ಮಾಲಾ ಶಸ್ತಾ ವೈ ಜಪಕರ್ಮಣಿ ॥ ೭ ॥
ನ ಚ ಕ್ರಮನ್ನ ಚ ಹಸನ್ ನ ಪಾರ್ಶ್ವಮವಲೋಕಯನ್ ।
ನ ಪದಾ ಪದಮಾಕ್ರಾಮ್ಯ ಕರಪ್ರಾಪ್ತಶಿರಸ್ತಥಾ ॥ ೮ ॥
ನೋತ್ತಿಷ್ಠನ್ ಮನ್ಮನುಂ ವಿದ್ವಾನ್ ನ ಜಪೇತ್ ವ್ಯಗ್ರಮಾನಸಃ ।
ಜಪಕಾಲೇ ನ ಭಾಷೇತ ವ್ರತಹೋಮಾರ್ಚನಾದಿಷು ॥ ೯ ॥
ಗೃಹೇಷ್ವೇಕಗುಣಂ ಜಾಪ್ಯಂ ಗೋಷ್ಠೇ ದಶಗುಣಂ ಭವೇತ್ ।
ನದೀತೀರೇ ಶತಂ ವಿದ್ಯಾತ್ ಅಗ್ನ್ಯಗಾರೇ ದಶಾಧಿಕಂ ॥ ೧೦ ॥
ತೀರ್ಥಾದಿಷು ಸಹಸ್ರಂ ಸ್ಯಾದನಂತಂ ಮಮ ಸನ್ನಿಧೌ ।
ಏವಂ ಕೃತ್ವಾ ಸಹೋಮಾಸೇ ಯಃ ಕುರ್ಯಾಚ್ಚ ಪ್ರದಕ್ಷಿಣಾಂ ॥ ೧೧ ॥

---

ಶತನಾಮಗಳನ್ನು ಜಪಿಸಬೇಕು. ಬಳಿಕ ಲೋಕನಾಯಕನಾದ ಸ್ವಾಮಿಯನ್ನು ಅನೇಕ ಸ್ತೋತ್ರಗಳಿಂದ ಸ್ತುತಿಸಬೇಕು.

೬-೮. ಬೆಳ್ಳಿಯ ಅಥವ ಚಿನ್ನದ ದಾರದಿಂದ ಮಾಲೆಯು ಮಾಡಲ್ಪಟ್ಟು ಶಂಖಯುಕ್ತವಾಗಿದ್ದರೆ ವಿಶೇಷ ಫಲದಾಯಕವು. ಸೌಭಾಗ್ಯಸಮನ್ವಿತಗಳಾದ ಪದ್ಮಾಕ್ಷಿಗಳಿಂದಾಗಲಿ, ಹವಳಗಳಿಂದಾಗಲಿ, ರತ್ನಗಳಿಂದಾಗಲಿ, ಮುತ್ತು ಗಳಿಂದಾಗಲಿ, ಇಂದ್ರಾಕ್ಷಕಗಳಿಂದಾಗಲಿ, ಗಜಕರ್ಣಿಕೆ- ಪುಷ್ಪಜೀವಿಗಳ ಕಾಷ್ಠ ಮಣಿಗಳಿಂದಾಗಲಿ ಮಾಡಿದ ಮಾಲೆಗಳು ಜಪಕರ್ಮಕ್ಕೆ ಉತ್ತಮಗಳೆನಿಸಿ ರುವುವು. ಜಪಕಾಲದಲ್ಲಿ ಓಡಾಡಬಾರದು; ನಗಬಾರದು. ಅಕ್ಕಪಕ್ಕಗಳನ್ನು ನೋಡಬಾರದು. ಕಾಲಿನ ಮೇಲೆ ಕಾಲನ್ನು ಚಾಚಿಕೊಂಡಾಗಲಿ ತಲೆಯಲ್ಲಿ ಕೈಯಿಟ್ಟುಕೊಂಡಾಗಲಿ ಜಪವನ್ನು ಮಾಡಬಾರದು.

೯. ಜಪವು ಮುಗಿಯುವವರೆವಿಗೂ ಮೇಲಕ್ಕೇಳಬಾರದು. ನನ್ನ ಮಂತ್ರ ವನ್ನು ವ್ಯಗ್ರಮನಸ್ಸಿನಿಂದ ಜಪಿಸಬಾರದು. ಪ್ರಾಜ್ಞನಾದವನು ಜಪಕಾಲದಲ್ಲಿ ಯಾಗಲಿ ಪೂಜಾಹೋಮ ವ್ರತಗಳನ್ನು ಮಾಡುವಾಗಲಾಗಲಿ ಮತ್ತೊಬ್ಬರೊಡನೆ ಮಾತನಾಡಬಾರದು.

೧೦. ಮನೆಯಲ್ಲಿ ಒಂದು ಸಲ ಜಪವನ್ನು ಮಾಡುವುದನ್ನೇ ಗೋಷ್ಠದಲ್ಲಿ ಮಾಡಲು ಹತ್ತರಷ್ಟು ಪುಣ್ಯವನ್ನು ಕೊಡುವುದು. ಅದೇ ಜಪವೇ ನದೀತೀರದಲ್ಲಿ ಶತಗುಣಿತವೂ, ಯಜ್ಞಶಾಲೆಯಲ್ಲಿ ಸಹಸ್ರ ಗುಣಿತವೂ ಆದ ಫಲವನ್ನು ಕೊಡುವುದು.

೧೧-೧೩. ತೀರ್ಥಕ್ಷೇತ್ರಗಳಲ್ಲಿ ಸಹಸ್ರ ಜಪಗಳ ಫಲವನ್ನೂ ನನ್ನ

ಸಪ್ತದ್ವೀಪವತೀಪುಣ್ಯಂ ಲಭತೇ ಸ ಪದೇಪದೇ ।
ಪಠನ್ ನಾಮಸಹಸ್ರಂ ತು ಅಥವಾ ನಾಮ ಕೇವಲಂ ॥ ೧೨ ॥
ಏಕಾ ಪ್ರದಕ್ಷಿಣಾ ಭಕ್ತ್ಯಾ ದಹೇತ್ಪಾಪಂ ಸದಾಽಽಹ್ನಿಕಂ ।
ಪ್ರದಕ್ಷಿಣೀಕೃತಾ ತೇನ ಸಪ್ತದ್ವೀಪಾ ವಸುಂಧರಾ ॥ ೧೩ ॥
ದಿನಸಪ್ತೋದ್ಭವಂ ಪಾಪಂ ಮಮ ತಿಸ್ರಃ ಪ್ರದಕ್ಷಿಣಾಃ ।
ತತ್ಕ್ಷಣಾನ್ನಾಶಯನ್ತ್ಯೇವ ಪಾಪಂ ದೇಹೇ ದಶಾಹ್ನಿಕಂ ॥ ೧೪ ॥
ಕೃತಾಃ ಪ್ರದಕ್ಷಿಣಾ ಯೇನ ಏಕವಿಂಶತಿ ಭಕ್ತಿತಃ ।
ಭ್ರೂಣಹತ್ಯಾದಿಪಾಪಾನಿ ನಾಶಮಾಯಂತಿ ತತ್ಕ್ಷಣಾತ್ ॥ ೧೫ ॥
ಅಷ್ಟೋತ್ತರಶತಂ ಯೇನ ಕೃತಾ ಭಕ್ತ್ಯಾ ಪ್ರದಕ್ಷಿಣಾಃ ।
ತೇನೇಷ್ಟಂ ಕ್ರತುಭಿಸ್ಸರ್ವಂ ಸಮಾಪ್ತವರದಕ್ಷಿಣೈಃ ॥ ೧೬ ॥
ಪ್ರದಕ್ಷಿಣೀಕೃತಾ ತೇನ ತಾವದ್ವಾರಂ ವಸುಂಧರಾ ।
ಮಾತುಃ ಪ್ರದಕ್ಷಿಣಾಸ್ತದ್ವತ್ ಭೂತಧಾತ್ರೀಪ್ರದಕ್ಷಿಣಾಃ ॥ ೧೭ ॥

---

ಸನ್ನಿಧಿಯಲ್ಲಿ ಅನಂತ ಫಲವನ್ನೂ ಆ ಜಪವೇ ಕೊಡುವುದು. ಇಂತು ಜಪವನ್ನು ಮಾಡಿ ಮಾರ್ಗಶೀರ್ಷಮಾಸದಲ್ಲಿ ಭಕ್ತನಾದವನು ಪ್ರದಕ್ಷಿಣೆಯನ್ನು ಮಾಡಲು ಒಂದೊಂದು ಹೆಜ್ಜೆಗೂ ಭೂಪ್ರದಕ್ಷಿಣೆಯ ಪುಣ್ಯವನ್ನು ಪಡೆಯುವನು. ನನ್ನ ಸಹಸ್ರನಾಮಾವಳಿಯನ್ನಾಗಲಿ ಒಂದೇ ನಾಮವನ್ನಾಗಲಿ ಜಪಿಸುತ್ತ ಭಕ್ತಿಯಿಂದ ಮಾಡಿದ ಒಂದು ಪ್ರದಕ್ಷಿಣೆಯೂ ಒಂದು ದಿವಸದಲ್ಲಿ ಮಾಡಿದ ಪಾಪಗಳನ್ನು ನಾಶಗೊಳಿಸುವುದು. ಆ ಭಾಗವತನಿಂದ ಸಪ್ತದ್ವೀಪವತಿಯಾದ ಭೂಮಿಯೇ ಪ್ರದಕ್ಷಿಣೆಮಾಡಲ್ಪಟ್ಟಂತಾಗುವುದು.

೧೪. ಏಳು ದಿವಸಗಳಲ್ಲಿ ಮಾಡಿದ ಪಾಪಗಳೂ ಸೂತಕಾದಿಗಳಿಂದ ಹತ್ತು ದಿವಸಗಳವರೆವಿಗೆ ದೇಹದಲ್ಲಿರುವ ಮೈಲಿಗೆಗಳೂ ನನ್ನ ಮೂರು ಪ್ರದಕ್ಷಿಣೆಗಳಿಂದ ತತ್‌ಕ್ಷಣದಲ್ಲಿಯೇ ನಾಶವಾಗುವುವು.

೧೫. ಯಾವನು ಭಕ್ತಿಯುಕ್ತನಾಗಿ ನನಗೆ ಇಪ್ಪತ್ತೊಂದು ಪ್ರದಕ್ಷಿಣೆಗಳನ್ನು ಮಾಡುವನೊ, ಅವನು ಹಿಂದೆ ಮಾಡಿರಬಹುದಾದ ಭ್ರೂಣಹತ್ಯಾದಿ ಮಹಾ ಪಾತಕಗಳೂ ಕ್ಷಣದಲ್ಲಿಯೇ ವಿನಾಶವನ್ನು ಹೊಂದುವುವು.

೧೬. ಯಾವನಿಂದ ಭಕ್ತಿಸಹಿತವಾದ ನೂರೆಂಟು ಪ್ರದಕ್ಷಿಣೆಗಳು ಮಾಡಲ್ಪಡುವುವೊ, ಅವನಿಂದ ಸಾಂಗದಕ್ಷಿಣೆಗಳೊಡನೆ ಸಕಲ ಯಜ್ಞಗಳೂ ನೆರವೇರಿರುವುದೆಂದು ತಿಳಿಯಬೇಕು.

೧೭–೨೦. ಆತನಿಂದ ಅಷ್ಟೇ ಸಲ ಭೂಲೋಕವು ಪ್ರದಕ್ಷಿಣೆಮಾಡಲ್ಪಟ್ಟಿತೆಂದು ತಿಳಿಯಬೇಕು. ತಾಯಿಗೆ ಪ್ರದಕ್ಷಿಣೆಯನ್ನು ಮಾಡುವುದು, ಭೂಪ್ರದಕ್ಷಿಣೆಯನ್ನು ಮಾಡುವುದು, ವಿಷ್ಣು ಸಾಲಗ್ರಾಮದ ಪ್ರದಕ್ಷಿಣೆಯನ್ನು

ಶಾಲಗ್ರಾಮಶಿಲಾಯಾಶ್ಚ ಸಮಮೇತತ್ತ್ರಯಂ ಸ್ಮೃತಂ ।
ಏಕೋ ದಂಡಪ್ರಪಾತಶ್ಚ ಸಹೇ ಸಪ್ತ ಪ್ರದಕ್ಷಿಣಾಃ ॥ ೧೮ ॥
ಸಮಮೇತದ್ದ್ವಯಂ ನೋ ವಾ ದಂಡಪಾತೋ ವಿಶಿಷ್ಯತೇ ।
ಪ್ರದಕ್ಷಿಣೇ ದಂಡಪಾತಂ ಯಃ ಕರೋತಿ ಸದಾ ಮಮ ॥ ೧೯ ॥
ಸಹೋಮಾಸೇ ವಿಶೇಷೇಣ ಆಕಲ್ಪಂ ಸ ವಸೇದ್ದಿವಿ ।
ಕಲ್ಪಾದನಂತರಂ ತಾತ ಚಕ್ರವರ್ತೀ ಪ್ರಜಾಯತೇ ॥ ೨೦ ॥
ಚಿರಾಯುರ್ಧನವಾನ್ ಭೋಗೀ ದಾನವಾನ್ ಧರ್ಮವತ್ಸಲಃ ।
ಸಹಸ್ರನಾಮಪಠನಾತ್ ಪಾಪಂ ನಶ್ಯೇತ್ ತ್ರಿಧಾ ಕೃತಂ ॥ ೨೧ ॥
ಅಥ ಕಿಂ ಬಹುನೋಕ್ತೇನ ಶೃಣು ಗುಹ್ಯಂ ಚ ಮೇ ಸುತ ।
ದಾಮೋದರೇತಿ ನಾಮ್ನಾ ವೈ ಭವೇತ್ಪ್ರೀತಿರ್ಮಮಾತುಲಾ ॥ ೨೨ ॥
ಗುಣಸಂಬಂಧಿ ಮನ್ನಾಮ ಕೃತಂ ಮಾತ್ರಾ ಯಶೋದಯಾ ।
ಯದಾ ಮೇ ದಧಿಭಾಂಡಸ್ಯ ಸ್ಫೋಟನಂ ಗೋಕುಲೇ ಕೃತಂ ॥ ೨೩ ॥

---

ಮಾಡುವುದು—ಈ ಮೂರು ಕಾರ್ಯಗಳೂ ಸಮಾನ ಫಲದಾಯಕಗಳೆಂದು ಸ್ಮೃತಿಗಳಲ್ಲಿ ಹೇಳಲ್ಪಟ್ಟಿರುವುದು. ಮಾರ್ಗಶಿರಮಾಸದಲ್ಲಿ ಮಾಡಿದ ಒಂದು ದಂಡಪ್ರಣಾಮವು ಏಳು ಪ್ರದಕ್ಷಿಣೆಗಳಿಗೆ ಸಮಾನವಾದುದು. ಅಥವಾ ಹಾಗೂ ಅಲ್ಲ. ಸಾಷ್ಟಾಂಗಪ್ರಣಾಮವೇ ಹೆಚ್ಚಿನದೆಂದು ಹೇಳಬೇಕು. ಸರ್ವಕಾಲದಲ್ಲಿಯೂ, ವಿಶೇಷವಾಗಿ ಮಾರ್ಗಶಿರಮಾಸದಲ್ಲಿಯೂ ಪ್ರದಕ್ಷಿಣೆಮಾಡುವಾಗಲೆಲ್ಲ ದಂಡಪ್ರಣಾಮಗಳನ್ನು ಯಾವನು ಮಾಡುವನೊ, ಅವನು ಕಲ್ಪಾಂತದವರೆವಿಗೂ ಸ್ವರ್ಗಲೋಕದಲ್ಲಿ ವಾಸಮಾಡಿ ಕಲ್ಪಾವಸಾನದಲ್ಲಿ ಭೂಲೋಕದಲ್ಲಿ ಚಕ್ರವರ್ತಿಯಾಗಿ ಜನಿಸುವನು.

೨೧. ಆತನು ದೀರ್ಘಾಯುಷ್ಯವುಳ್ಳವನೂ, ಧನವಂತನೂ, ಭೋಗೈಶ್ವರ್ಯ ಸಮನ್ವಿತನೂ, ದಾನಶೀಲನೂ, ಧರ್ಮಾಭಿಮಾನಿಯೂ ಆಗುವನು. ನನ್ನ ಸಹಸ್ರ ನಾಮದ ಪಠನದಿಂದ ಕಾಯಿಕ ಮಾನಸಿಕ ವಾಚಿಕ ಪಾಪಗಳೆಲ್ಲವೂ ನಾಶವನ್ನು ಹೊಂದುವುವು.

೨೨. ಪ್ರಿಯ ಪುತ್ರನೆ! ಹೆಚ್ಚು ಮಾತುಗಳನ್ನು ಹೇಳಿದುದರಿಂದೇನು? ಗುಹ್ಯವಾದ ವಿಷಯವೊಂದನ್ನು ಕೇಳುವವನಾಗು. ದಾಮೋದರನೆಂಬ ಹೆಸರಿನಿಂದಲೇ ನನಗೆ ಅಪರಿಮಿತವಾದ ಆನಂದವುಂಟಾಗುವುದು.

೨೩–೨೪. ಗುಣಸೂಚಕವಾದ ಈ ನನ್ನ ನಾಮವು ತಾಯಿಯಾದ ಯಶೋದೆಯ ಕಾರಣದಿಂದ ನನಗುಂಟಾಯಿತು. ಪೂರ್ವದಲ್ಲಿ ನಾನು ಗೋಕುಲದಲ್ಲಿ ಅವತಾರವನ್ನೆತ್ತಿ ಮನೆಯಲ್ಲಿ ಮೊಸರಿನ ಮಡಿಕೆಯನ್ನು ಒಡೆದು ಹಾಕಿದ ಸಮಯದಲ್ಲಿ ಯಶೋದೆಯು ನನ್ನನ್ನು ಹಗ್ಗದಿಂದ ಒರಳುಕಲ್ಲಿಗೆ

ತದಾ ಯಶೋದಯಾ ಗಾಢಂ ಬದ್ಧೋ ದಾಮ್ನಾ ಹ್ಯುಲೂಖಲೇ ।
ತತಃ ಪ್ರಭೃತಿ ಮೇ ನಾಮ ಖ್ಯಾತಂ ದಾಮೋದರೇತಿ ಚ ॥ ೨೪ ॥
ನಮೋ ದಾಮೋದರಾಯೇತಿ ಜಪೇದ್ಯಃ ಸುಸಮಾಹಿತಃ ।
ಸೂರ್ಯೋದಯೇ ಶುಚಿರ್ಭೂತ್ವಾ ತ್ರಿಸಹಸ್ರಂ ದಿನೇ ದಿನೇ ॥ ೨೫ ॥
ಸಾರ್ಧಲಕ್ಷತ್ರಯಂ ಯಾವತ್ ತತ ಉದ್ಯಾಪಯೇದ್ಬುಧಃ ।
ತರ್ಪಣಂ ಹವನಂ ಚೈವ ಬ್ರಹ್ಮಭೋಜ್ಯಂ ದಶಾಂಶತಃ ॥ ೨೬ ॥
ಏವಂ ಯಃ ಕುರುತೇ ಭಕ್ತ್ಯಾ ತಸ್ಯ ಯಚ್ಛಾಮಿ ವಾಂಛಿತಂ ।
ಧನಂ ಧಾನ್ಯಂ ತಥಾ ದಾರಾನ್ ಪುತ್ರಾಂಶ್ಚಾನ್ಯಚ್ಚ ವಾಂಛಿತಂ ॥ ೨೭ ॥
ತ್ರಿಸತ್ಯೇನ ಮಯಾ ಚೋಕ್ತಂ ಶ್ರದ್ಧತ್ಸ್ವ ತ್ವಂ ಮಹಾಮತೇ ।
ಮಂತ್ರರಾಜಮಿಮಂ ಪುತ್ರ ಕೃಪಯಾ ಮೇ ಪ್ರಕಾಶಿತಂ ॥ ೨೮ ॥
ದಾಮೋದರಾಯೇತಿ ಪಠನ್ನಿತ್ಯಂ ಕುರ್ಯಾತ್ಪ್ರದಕ್ಷಿಣಂ ।
ದಂಡಪಾತಂ ತಥಾ ಪುತ್ರ ಅಷ್ಟಾಂಗೇನ ಸಮನ್ವಿತಂ ॥ ೨೯ ॥

---

ಬಿಗಿಯಾಗಿ ಕಟ್ಟಿಹಾಕಿದಳು. ಅಂದಿನಿಂದ ನನಗೆ ದಾಮೋದರನೆಂಬ ಹೆಸರು ಪ್ರಖ್ಯಾತಿಗೆ ಬಂದಿತು.

೨೫–೨೬. ನನ್ನ ಭಕ್ತನು ಪ್ರತಿದಿನವೂ ಸೂರ್ಯೋದಯಕಾಲದಲ್ಲಿ ಸ್ನಾನವನ್ನು ಮಾಡಿಕೊಂಡು ಶುಚಿರ್ಭೂತನಾಗಿ ಏಕಾಗ್ರವಾದ ಮನಸ್ಸಿನಿಂದ ಮೂರು ಸಾವಿರ ಸಲ "ಓಂ ನಮೋ ದಾಮೋದರಾಯ" ಎಂಬ ಮಂತ್ರವನ್ನು ಜಪಿಸುತ್ತಿರಬೇಕು. ಇಂತು ಮೂರುವರೆಲಕ್ಷ ಸಂಖ್ಯೆಯಾಗುವವರೆವಿಗೂ ಜಪವನ್ನು ಮಾಡಿ ಬಳಿಕ ಉದ್ಯಾಪನೆಯನ್ನು ಮಾಡಬೇಕು. ದೇವ, ಋಷಿ, ಪಿತೃಗಳಿಗೆ ತರ್ಪಣಗಳನ್ನೂ, ಹೋಮವನ್ನೂ ಮಾಡಿ ಜಪ ಸಂಖ್ಯೆಯ ದಶಾಂಶದಷ್ಟು ಸಂಖ್ಯೆಯ ಬ್ರಾಹ್ಮಣರಿಗೆ ಭೋಜನವನ್ನು ಮಾಡಿಸಬೇಕು.

೨೭. ಇಂತು ಯಾವನು ಭಕ್ತಿಯಿಂದ ಉದ್ಯಾಪನೆಯನ್ನು ಮಾಡುವನೊ, ಅವನಿಗೆ ಪುತ್ರ ಕಳತ್ರ ಧನಧಾನ್ಯಗಳನ್ನೂ ಇತರ ಅಭೀಷ್ಟಗಳನ್ನೂ ದಯೆಪಾಲಿಸುವೆನು.

೨೮. ಮಹಾ ಬುದ್ಧಿಶಾಲಿಯೆ! ಮೂರು ಸಲ ಪ್ರತಿಜ್ಞೆಯನ್ನು ಮಾಡಿ ಹೇಳುವ ಈ ಸತ್ಯವಾಕ್ಯದಲ್ಲಿ ನಂಬಿಕೆಯನ್ನಿಡುವವನಾಗು. ಮಂತ್ರಗಳಲ್ಲೆಲ್ಲ ಉತ್ತಮವಾದ ಈ ಮಂತ್ರವು ನಿನಗೆ ಕೃಪಶಾಲಿಯಾದ ನನ್ನಿಂದ ಪ್ರಕಾಶಗೊಳಿಸಲ್ಪಟ್ಟಿತು.

೨೯. ಎಲೈ ಪುತ್ರನೆ! "ನಮೋ ದಾಮೋದರಾಯ" ಎಂಬುದಾಗಿ ಜಪಿಸುತ್ತ ನಿತ್ಯವೂ ಪ್ರದಕ್ಷಿಣೆಯನ್ನು ಮಾಡಬೇಕು. ಮತ್ತು ಅಷ್ಟಾಂಗಯುಕ್ತವಾದ ದೀರ್ಘದಂಡಪ್ರಣಾಮವನ್ನೂ ಹಾಗೆಯೇ ಮಾಡಬೇಕು.

ಪದ್ಭ್ಯಾಂ ಕರಾಭ್ಯಾಂ ಜಾನುಭ್ಯಾಮುರಸಾ ಶಿರಸಾ ತಥಾ ।
ಮನಸಾ ವಚಸಾ ದೃಷ್ಟ್ಯಾ ಪ್ರಣಾಮೋಽಷ್ಟಾಂಗ ಉಚ್ಯತೇ ॥ ೩೦ ॥
ಶಿರೋ ಮತ್ಪಾದಯೋಃ ಕೃತ್ವಾ ಬಾಹುಭ್ಯಾಂ ಚ ಪರಸ್ಪರಂ ।
ಪ್ರಪನ್ನಂ ಪಾಹಿ ಮಾಮೀಶ ಭೀತಂ ಮೃತ್ಯುಗ್ರಹಾರ್ಣವಾತ್ ॥ ೩೧ ॥
ಪಶ್ಚಾಚ್ಛೇಷಾಂ ಮಯಾ ದತ್ತಾಂ ಶಿರಸ್ಯಾದಾಯ ಸಾದರಂ ।
ಏವಂ ಬ್ರೂಯಾತ್ ತತೋ ವತ್ಸ ಮಮ ಪೂಜಾಪ್ರಪೂರ್ತಯೇ ॥೩೨॥
ಮಂತ್ರಹೀನಂ ಕ್ರಿಯಾಹೀನಂ ಭಕ್ತಿಹೀನಂ ಜನಾರ್ದನ ।
ಯತ್ಪೂಜಿತಂ ಮಯಾ ದೇವ ಪರಿಪೂರ್ಣಂ ತದಸ್ತು ಮೇ ॥ ೩೩ ॥
ಮೃದಂಗವಾದ್ಯೇನ ಸಮಂ ಪ್ರಣವೇನ ಸುಸಂಯುತಂ ।
ಏವಂ ಕಾರ್ಯಂ ಸಹೋಮಾಸೇ ನೃತ್ಯಂ ಪುಣ್ಯಪ್ರದಂ ನೃಣಾಂ ॥ ೩೪ ॥
ಗೀತಂ ವಾದ್ಯಂ ಚ ನೃತ್ಯಂ ಚ ತಥಾ ಪುಸ್ತಕವಾಚನಂ ।
ಪೂಜಾಕಾಲೇ ಚತುರ್ವಕ್ತ್ರ ಸರ್ವದಾ ಮಮ ಚ ಪ್ರಿಯಂ ॥ ೩೫ ॥

---

೩೦. ಕಾಲುಗಳು, ಕೈಗಳು, ಮೊಣಕಾಲುಗಳು, ಎದೆಯು, ತಲೆಯು, ಮನಸ್ಸು, ಮಾತು, ದೃಷ್ಟಿ—ಈ ಎಂಟರಿಂದ ಮಾಡುವ ನಮಸ್ಕಾರಗಳೇ ಸಾಷ್ಟಾಂಗಪ್ರಣಾಮವೆನ್ನಲ್ಪಡುವುದು.

೩೧–೩೨. ತಲೆಯನ್ನು ನನ್ನ ಪಾದಗಳಲ್ಲಿಟ್ಟು ಕೈಗಳಿಂದ ಕಾಲುಗಳನ್ನು ಅಪ್ಪಿಕೊಂಡು "ಎಲೈ ಸ್ವಾಮಿಯೆ! ಮೃತ್ಯುವೆಂಬ ಮೊಸಳೆಯಿಂದೊಡಗೂಡಿದ ಸಂಸಾರ ಸಮುದ್ರದಿಂದ ಭಯಗೊಂಡು ಶರಣಾಗತನಾಗಿ ಬಂದಿರುವ ನನ್ನನ್ನು ಕಾಪಾಡು" ಎಂಬುದಾಗಿ ಪ್ರಾರ್ಥನೆಯನ್ನು ಮಾಡಬೇಕು. ಬಳಿಕ ನನ್ನಿಂದ ಕೊಡಲ್ಪಟ್ಟ ನಿರ್ಮಾಲ್ಯವನ್ನು ಆದರದಿಂದ ತಲೆಯಲ್ಲಿ ಧರಿಸಿ ಪೂಜೆಯು ಸಾಫಲ್ಯತೆಯನ್ನು ಹೊಂದಲು ಮುಂದೆ ಹೇಳುವ ಮಂತ್ರವನ್ನು ಜಪಿಸಬೇಕು.

೩೩. ದೇವದೇವನಾದ ಜನಾರ್ದನನೆ! ಮಂತ್ರಹೀನವಾಗಿಯೂ, ಕ್ರಿಯಾ ಲೋಪಸಹಿತವಾಗಿಯೂ, ಭಕ್ತಿರಹಿತವಾಗಿಯೂ ನಾನು ಯಾವ ಪೂಜೆಯನ್ನು ಮಾಡಿರುವೆನೊ, ಆ ಪೂಜೆಯೇ ನನಗೆ ಪರಿಪೂರ್ಣಫಲದಾಯಕವಾಗಿ ಪರಿಣಮಿಸುವಂತೆ ಅನುಗ್ರಹಿಸು.

೩೪. ಮಾರ್ಗಶೀರ್ಷಮಾಸದಲ್ಲಿ ಮೃದಂಗವಾದ್ಯದೊಡನೆ ಪ್ರಣವ ಘೋಷಣೆಯನ್ನು ಮಾಡುತ್ತ ನೃತ್ಯದ ಸೇವೆಯನ್ನರ್ಪಿಸಲು ಆ ಕಾರ್ಯವು ಮಾನವರಿಗೆ ಮಹಾಪುಣ್ಯಪ್ರದವಾಗಿರುವುದು.

೩೫. ಚತುರಾನನೆ! ನನ್ನ ಪೂಜಾಕಾಲದಲ್ಲಿ ಸಂಗೀತ, ವಾದ್ಯಘೋಷ, ನೃತ್ಯ ಮತ್ತು ಪುರಾಣವಾಚನಗಳು ಯಾವಾಗಲೂ ನನಗೆ ಅತ್ಯಂತ ಪ್ರೀತಿಕರಗಳಾಗಿರುವುವು.

ಗೀತವಾದ್ಯಾದ್ಯಭಾವೇ ಚ ಮಮ ನಾಮಸಹಸ್ರಕಂ ।
ಸ್ತವರಾಜಂ ತಥಾ ಪುತ್ರ ಗಜೇಂದ್ರಸ್ಯ ಚ ಮೋಕ್ಷಣಂ ॥ ೩೬ ॥
ಅನುಸ್ಮೃತಿಶ್ಚ ಗೀತಾ ಚ ಸ್ತವನಂ ಪಂಚಧಾ ಮತಂ ।
ಪಂಚಸ್ತವಂ ಮಹಾಭಾಗ ಮಮ ಪ್ರೀತಿಕರಂ ಪರಂ ॥ ೩೭ ॥
ಪಾದೋದಕಂ ಪಿಬೇದ್ಯೋ ವೈ ಶಾಲಿಗ್ರಾಮಸಮುದ್ಭವಂ ।
ಪಂಚಗವ್ಯಸಹಸ್ರೈಸ್ತು ಪ್ರಾಶಿತೈಃ ಕಿಂ ಪ್ರಯೋಜನಂ ॥ ೩೮ ॥
ಶಾಲಿಗ್ರಾಮಶಿಲಾತೋಯಂ ಯಃ ಪಿಬೇದ್ಬಿಂದುನಾ ಸಮಂ ।
ಮಾತುಃ ಸ್ತನ್ಯಂ ಪುನರ್ನೈವ ಸ ಪಿಬೇನ್ಮುಕ್ತಿಭಾಙ್ನರಃ ॥ ೩೯ ॥
ಆಶೌಚಂ ನೈವ ವಿದ್ಯೇತ ಸೂತಕೇ ಮೃತಕೇಽಪಿ ಚ ।
ಯೇಷಾಂ ಪಾದೋದಕಂ ಮೂರ್ಧ್ನಿ ಪ್ರಾಶನಂ ಯೇ ಪ್ರಕುರ್ವತೇ॥ ೪೦॥
ಅಂತಕಾಲೇಽಪಿ ಯಸ್ಯೇದಂ ದೀಯತೇ ಪಾದಯೋರ್ಜಲಂ ।
ಸೋಽಪಿ ಸದ್ಗತಿಮಾಪ್ನೋತಿ ಸದಾಚಾರಬಹಿಷ್ಕೃತಃ ॥ ೪೧ ॥
ಅಪೇಯಂ ಪಿಬತೇ ಯಸ್ತು ಭುಂಕ್ತೇ ಯದ್ಯಪ್ಯಭೋಜನಂ ।
ಅಗಮ್ಯಾಗಮನೋ ಯೋ ವೈ ಪಾಪಾಚಾರಶ್ಚ ಯೋ ನರಃ ॥ ೪೨ ॥

---

೩೬–೩೮. ಸಂಗೀತ ವಾದ್ಯಾದಿಗಳು ಲಭಿಸದಿದ್ದಲ್ಲಿ ನನ್ನ ಸಹಸ್ರನಾಮಾವಳಿಯನ್ನೂ, ಭೀಷ್ಮಸ್ತವರಾಜವನ್ನೂ, ಗಜೇಂದ್ರಮೋಕ್ಷವನ್ನೂ, ಅನುಸ್ಮೃತಿಯನ್ನೂ, ಭಗವದ್ಗೀತೆಯನ್ನೂ ಪಾರಾಯಣಮಾಡಬೇಕು. ಇವುಗಳಿಗೇ ಪಂಚಸ್ತವಗಳೆಂದು ಹೆಸರು. ಎಲೈ ಮಹಾಶಯನೆ! ಈ ಪಂಚಸ್ತವವು ನನಗೆ ಅತ್ಯಂತ ಪ್ರಿಯವಾಗಿರುವುದು. ಯಾವನು ಸಾಲಿಗ್ರಾಮದ ಅಭಿಷೇಕದ ಪಾದೋದಕವನ್ನು ಸೇವಿಸುವನೊ, ಅವನಿಗೆ ಒಂದು ಸಾವಿರ ಪಂಚಗವ್ಯ ಪ್ರಾಯಶ್ಚಿತ್ತಗಳಿಂದಲೂ ಯಾವ ಪ್ರಯೋಜನವುಂಟಾದೀತು?

೩೯. ಸಾಲಿಗ್ರಾಮದ ನಿರ್ಣೇಜನೋದಕದ ಬಿಂದುಮಾತ್ರವನ್ನಾದರೂ ಯಾವನು ಪಾನಮಾಡುವನೊ, ಆ ಮನುಷ್ಯನು ಪುನಃ ತಾಯಿಯ ಸ್ತನ್ಯವನ್ನು ಪಾನಮಾಡುವುದಿಲ್ಲ. ಮತ್ತು ಮೋಕ್ಷಪದವಿಗೆ ಅರ್ಹನಾಗುವನು.

೪೦. ಯಾರ ಶಿರಸ್ಸಿನಲ್ಲಿ ವಿಷ್ಣುಪಾದೋದಕವು ಧರಿಸಲ್ಪಟ್ಟಿರುವುದೊ, ಯಾರು ಆ ತೀರ್ಥವನ್ನು ಪಾನಮಾಡಿರುವರೊ, ಅವರಿಗೆ ಬಂಧುಬಳಗಗಳ ಹುಟ್ಟುಸಾವುಗಳಿಂದ ಆಶೌಚವೆಂಬುದು ಎಂದಿಗೂ ಸಂಭವಿಸುವುದಿಲ್ಲವು.

೪೧. ಹುಟ್ಟಿದ ಮೊದಲ್ಗೊಂಡು ಯಾವ ಸದಾಚಾರಗಳನ್ನೂ ಮಾಡದೆ ಇರುವವನಾದರೂ ಅಂತ್ಯಕಾಲದಲ್ಲಿ ವಿಷ್ಣುಪಾದೋದಕವು ಯಾವನಿಂದ ಸೇವಿಸಲ್ಪಡುವುದೊ, ಅವನೂ ಕೂಡ ಉತ್ತಮಗತಿಯನ್ನು ಹೊಂದುವನು.

೪೨–೪೩. ಪಾನಕ್ಕೆ ಅನರ್ಹಗಳಾದ ಮದ್ಯಾದಿಗಳನ್ನು ಸೇವಿಸಿದವನೂ,

ಸೋಽಪಿ ಪೂತೋ ಭವತ್ಯಾಶು ಸದ್ಯಃ ಪಾದಾಂಬುಧಾರಣಾತ್ ।
ಚಾಂದ್ರಾಯಣಾತ್ಪಾದಕೃಚ್ಛ್ರಾದಧಿಕಂ ಪಾದಯೋರ್ಜಲಂ ॥ ೪೩ ॥
ಅಗುರುಂ ಕುಂಕುಮಂ ವಾಪಿ ಕರ್ಪೂರಂ ಚಾನುಲೇಪನಂ ।
ಮಮ ಪಾದಾಂಬುಸಂಸ್ಪೃಷ್ಟಂ ತದ್ವೈ ಪಾವನಪಾವನಂ ॥ ೪೪ ॥
ದೃಷ್ಟಿಪೂತಂ ತು ಯತ್ತೋಯಂ ಭವೇದ್ವೈ ವಿಪ್ರಸತ್ತಮ ।
ತದ್ವೈ ಪಾಪಹರಂ ನೃಣಾಂ ಕಿಂ ಪುನಃ ಪಾದಯೋರ್ಜಲಂ ॥ ೪೫ ॥
ಪ್ರಿಯಸ್ತ್ವಂ ಮೇಽಗ್ರಜಃ ಪುತ್ರೋ ವಿಶೇಷೇಣ ಚ ಮತ್ಪ್ರಿಯಃ ।
ತದರ್ಥಂ ಕಥಿತಂ ಸರ್ವಂ ರಹಸ್ಯಂ ಯಚ್ಚ ಮೇ ಸ್ಥಿತಂ ॥ ೪೬ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ದ್ವಿತೀಯೇ ವೈಷ್ಣವಖಂಡೇ ಮಾರ್ಗಶೀರ್ಷಮಾಹಾತ್ಮ್ಯೇ ಬ್ರಹ್ಮವಿಷ್ಣುಸಂವಾದೇ "ಪೂಜಾಸಮಾಪನಂ — ತತ್ಫಲಕಥನಂ" ನಾಮ ದಶಮೋಽಧ್ಯಾಯಃ

---

ಭೋಜನಕ್ಕೆ ಅಯೋಗ್ಯಗಳಾದ ಮಾಂಸಾದಿಗಳನ್ನು ಭಕ್ಷಿಸಿದವನೂ, ಸಂಪರ್ಕಕ್ಕೆ ಅರ್ಹರಲ್ಲದ ಸ್ತ್ರೀಯರನ್ನು ಕೂಡಿದವನೂ, ಯಾವಾಗಲೂ ಇತರ ಪಾಪ ಕೃತ್ಯಗಳಲ್ಲಿ ನಿರತನಾಗಿರುವವನೂ ಕೂಡ ವಿಷ್ಣು ಪಾದೋದಕವನ್ನು (ತೀರ್ಥ ಅಥವ ಗಂಗೋದಕವನ್ನು) ಸೇವಿಸುವುದರಿಂದ ತತ್‌ಕ್ಷಣದಲ್ಲಿಯೇ ಪುನೀತ ನಾಗುವನು. ಚಾಂದ್ರಾಯಣ, ಪಾದಕೃಚ್ಛ್ರಗಳೆಂಬ ಪ್ರಾಯಶ್ಚಿತ್ತಗಳಿಗಿಂತಲೂ ಪಾದತೀರ್ಥವು ಅಧಿಕ ಪುಣ್ಯಫಲದಾಯಕವಾಗಿರುವುದು.

೪೪. ಅಗುರು, ಕುಂಕುಮಕೇಸರಿ, ಕರ್ಪೂರ, ಗಂಧ ಮುಂತಾದುವುಗಳಿಂದ ಸುವಾಸಿತವಾದ ನನ್ನ ಪಾದೋದಕದ ಅನುಲೇಪನವೇ ಪವಿತ್ರ ವಸ್ತುಗಳಲ್ಲಿ ಪವಿತ್ರತಮವಾಗಿರುವುದು.

೪೫. ಎಲೈ ಬ್ರಹ್ಮದೇವನೆ! ಯಾವ ಜಲವು ನನ್ನ ದೃಷ್ಟಿಮಾತ್ರದಿಂದ ಕೂಡಿರುವುದೊ, ಅದೂ ಸಹ ಮನುಷ್ಯರ ಸಕಲ ಪಾಪಗಳನ್ನೂ ನಾಶಗೊಳಿಸು ವುದೆಂದ ಮೇಲೆ ನನ್ನ ಪಾದೋದಕದ ವಿಷಯವಾಗಿ ಹೆಚ್ಚು ಹೇಳಬೇಕಾ ದುದೇನು?

೪೬. ನೀನು ನನಗೆ ಪ್ರಿಯನು. ವಿಶೇಷವಾಗಿ ಜ್ಯೇಷ್ಠಪುತ್ರನಾದುದರಿಂದಲೂ ಪ್ರೀತಿಪಾತ್ರನಾಗಿರುವೆ. ಆದುದರಿಂದಲೇ ನಿನಗೆ ನನ್ನಲ್ಲಿರುವ ರಹಸ್ಯಗಳೆಲ್ಲವನ್ನೂ ವಿಶದವಾಗಿ ಹೇಳಿರುವೆನು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀಸ್ಕಾಂದಮಹಾಪುರಾಣದ ಎರಡನೆಯ ವೈಷ್ಣವಖಂಡದ ಮಾರ್ಗಶೀರ್ಷಮಾಹಾತ್ಮ್ಯದ ಬ್ರಹ್ಮವಿಷ್ಣುಸಂವಾದದಲ್ಲಿ "ವಿಷ್ಣುಪೂಜಾವಿಧಿ—ಉದ್ಯಾಪನೆಗಳ ಕಥನವು"ವೆಂಬ ಹತ್ತನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

# ಅಷ್ಟೈಕಾದಶೋಽಧ್ಯಾಯಃ

## ಏಕಾದಶ್ಯಾಖ್ಯಾನಕಥನಂ

ಬ್ರಹ್ಮೋವಾಚ :—

ಏಕಾದಶ್ಯಾಶ್ಚ ಮಾಹಾತ್ಮ್ಯಂ ಮೂರ್ತೀನಾಂ ಚ ವಿಧಾನಕಂ ।
ಸರ್ವಂ ಬ್ರೂಹಿ ಮಮ ಸ್ವಾಮಿನ್ ಕೃಪಯಾ ಭೂತಭಾವನ ॥ ೧ ॥

ಶ್ರೀ ಭಗವಾನುವಾಚ :—

ಶೃಣುಷ್ವ ದ್ವಿಜಶಾರ್ದೂಲ ಕಥಾಂ ಪಾಪಪ್ರಣಾಶಿನೀಂ ।
ಯಾಂ ಶೃತ್ವಾ ಯಾತಿ ವಿಲಯಂ ಪಾಪಂ ಬ್ರಹ್ಮವಧಾದಿಕಂ ॥ ೨ ॥
ಕಾಂಪಿಲ್ಯೇ ನಗರೇ ರಾಜಾ ವೀರಬಾಹುರಿತಿ ಸ್ಮೃತಃ ।
ಸತ್ಯವಾದೀ ಜಿತಕ್ರೋಧೋ ಬ್ರಹ್ಮಜ್ಞೋ ಮಮ ತತ್ಪರಃ ॥ ೩ ॥
ಭಾವವಾನ್ ಸ ದಯಾಶಿಲೋ ರೂಪವಾನ್ ಬಲವಾನ್ ನರಃ ।
ಭಕ್ತೋ ಭಾಗವತಾನಾಂ ಚ ಸದಾ ಮಮ ಕಥಾರುಚಿಃ ॥ ೪ ॥

## ಕನ್ನಡದ ಅನುವಾದ

### ಏಕಾದಶ್ಯಾಖ್ಯಾನಕಥನವು

೧. ಬ್ರಹ್ಮದೇವನು ಕೇಳುತ್ತಾನೆ:—ಸರ್ವಭೂತಗಳಲ್ಲಿಯೂ ಅಂತರ್ಯಾಮಿಯಾಗಿರುವ ಓ ಸ್ವಾಮಿಯೆ! ಏಕಾದಶಿಯ ಮಾಹಾತ್ಮ್ಯವನ್ನೂ, ಮೂರ್ತಿಗಳ ವಿಧಾನಗಳನ್ನೂ ನನ್ನಲ್ಲಿ ಕೃಪೆಯಿಟ್ಟು ವಿಸ್ತಾರವಾಗಿ ಹೇಳುವವನಾಗು.

೨. ಭಗವಂತನು ಹೇಳುತ್ತಾನೆ :—ಎಲೈ ಬ್ರಹ್ಮದೇವನೆ! ಪಾಪಪ್ರಣಾಶಕವೆನಿಸಿದ ಕಥೆಯೊಂದನ್ನು ಕೇಳು. ಆ ಚರಿತ್ರೆಯನ್ನು ಕೇಳುವುದರಿಂದ ಬ್ರಹ್ಮಹತ್ಯಾದಿ ಮಹಾಪಾತಕಗಳೂ ನಾಶವನ್ನು ಹೊಂದುವುವು.

೩. ಮುನ್ನು ಕಾಂಪಿಲ್ಯವೆಂಬ ಪಟ್ಟಣದಲ್ಲಿ ವೀರಬಾಹುವೆಂಬ ರಾಜನೊಬ್ಬನಿದ್ದನು. ಆತನು ಸತ್ಯವಾಕ್ಯಪರನೂ, ಕ್ರೋಧಾದಿ ಅರಿಷಡ್ವರ್ಗಗಳನ್ನು ಜಯಿಸಿದವನೂ, ವೇದವೇದಾಂಗಗಳನ್ನು ತಿಳಿದವನೂ ಆಗಿ ನನ್ನಲ್ಲಿಯೇ ಭಕ್ತಿಭರಿತನಾಗಿದ್ದನು.

೪. ಆತನು ಪ್ರಭಾವಶಾಲಿಯೂ, ದಯಾಶಾಲಿಯೂ, ಸೌಂದರ್ಯಬಲಗಳಿಂದ ಕೂಡಿದವನೂ, ನಿರಂತರವೂ ಭಾಗವತರಲ್ಲಿ ಭಕ್ತಿಯುಳ್ಳವನೂ ಆಗಿ ನನ್ನ ಚರಿತ್ರೆಗಳಲ್ಲಿಯೇ ಅಭಿಲಾಷೆಯಿಂದಿದ್ದನು.

ಸದಾ ಮಮ ಕಥಾಸಕ್ತಃ ಸದಾ ಜಾಗರಣಪ್ರಿಯಃ ।
ದಾತಾ ವಿದ್ವಾನ್ ಕ್ಷಮಾಶೀಲೋ ವಿಕ್ರಮೀ ವಿಜಿತೇಂದ್ರಿಯಃ ॥ ೫ ॥
ವಿಜಯೀ ರಣಶೀಲಶ್ಚ ಋದ್ಧ್ಯಾಯಾ ಧನದೋಪಮಃ ।
ಪುತ್ರವಾನ್ ಪಶುಮಾಂಶ್ಚೈವ ಸ್ವದಾರನಿರತಸ್ತಥಾ ॥ ೬ ॥
ತಸ್ಯ ಭಾರ್ಯಾ ಕಾಂತಿಮತೀ ರೂಪೇಣಾಪ್ರತಿಮಾ ಭುವಿ ।
ಪತಿವ್ರತಾ ಮಹಾಸಾಧ್ವೀ ಮಮ ಭಕ್ತಿರತಾ ಸದಾ ॥ ೭ ॥
ತಯಾ ಸಹ ವಿಶಾಲಾಕ್ಷೋ ಬುಭುಜೇ ಮೇದಿನೀಂ ಯುವಾ ।
ಮುಕ್ತ್ವೈಕಂ ಮಾಂ ಮಹಾಬಾಹೋ ನಾನ್ಯಜ್ಜಾನಾತಿ ದೈವತಂ ॥ ೮ ॥
ಏಕಸ್ಮಿನ್ ದಿವಸೇ ಪುತ್ರ ಭಾರದ್ವಾಜೋ ಮಹಾಮುನಿಃ ।
ಸಮಾಗತೋ ಗೃಹೇ ತಸ್ಯ ವೀರಬಾಹೋರ್ಮಹಾತ್ಮನಃ ॥ ೯ ॥
ದೃಷ್ಟ್ವಾ ಸಮಾಗತಂ ದೂರಾತ್ ಭಾರದ್ವಾಜಂ ಮಹಾಮುನಿಂ ।
ಸ್ವಾಗತಂ ಕಾರಯಾಮಾಸ ದತ್ವಾರ್ಘ್ಯಂ ವಿಧಿವತ್ತದಾ ॥ ೧೦ ॥

೫. ನಿರಂತರವೂ ನನ್ನ ಕಥೆಗಳನ್ನೇ ಕೇಳುವ ಮನಸ್ಸುಳ್ಳವನೂ, ಜಾಗರಣಾದಿವ್ರತಗಳಲ್ಲಿ ಆಸಕ್ತಿಯುಳ್ಳವನೂ, ದಾನಶೀಲನೂ, ವಿದ್ಯಾವಂತನೂ, ಸೈರಣೆಯುಳ್ಳವನೂ, ಪರಾಕ್ರಮಿಯೂ, ಜಿತೇಂದ್ರಿಯನೂ ಆಗಿದ್ದನು.

೬. ವಿಜಯಶಾಲಿಯೂ, ಯುದ್ಧಕುಶಲನೂ, ಐಶ್ವರ್ಯದಲ್ಲಿ ಕುಬೇರನಿಗೆ ಸಮಾನನಾದವನೂ, ಪುತ್ರವಂತನೂ, ಪಶುಸಂಪದ್ಯುಕ್ತನೂ, ಏಕಪತ್ನೀವ್ರತ ನಿರತನೂ ಆಗಿದ್ದನು.

೭. ಆತನಿಗೆ ಅನ್ಯಾದೃಶರೂಪಸಹಿತಳಾದ ಕಾಂತಿಮತಿಯೆಂಬ ಪತ್ನಿಯು ಇದ್ದಳು. ಆಕೆಯು ಪತಿವ್ರತೆಯೂ, ಸಾಧುಗುಣಾನ್ವಿತೆಯೂ ನನ್ನಲ್ಲಿ ಅನನ್ಯ ಭಕ್ತಿಯುಳ್ಳವಳೂ ಆಗಿದ್ದಳು.

೮. ವಿಶಾಲನೇತ್ರನೂ, ಯೌವನಶಾಲಿಯೂ ಆದ ಆ ಮಹಾರಾಜನು ಆಕೆಯೊಡನೆ ಚಕ್ರಾಧಿಪತ್ಯವನ್ನು ಅನುಭವಿಸುತ್ತಿದ್ದನು. ಎಲೈ ಮಹಾಬಾಹುವೆ! ನನ್ನೊಬ್ಬನನ್ನು ಬಿಟ್ಟು ಮತ್ತೆ ಯಾವ ದೈವವನ್ನೂ ಆತನು ತಿಳಿದಿರಲಿಲ್ಲ.

೯. ಎಲೈ ಪುತ್ರನೆ! ಒಂದಾನೊಂದು ದಿವಸ ಮಹಾತ್ಮನಾದ ಆ ವೀರಬಾಹುವಿನ ಅರಮನೆಗೆ ಭರದ್ವಾಜಮಹಾಮುನಿಯು ಯಾದೃಚ್ಛಿಕವಾಗಿ ಚಿತ್ತೈಸಿದನು.

೧೦. ಆ ಮಹಾರಾಜನಾದರೊ ಮಹಾಮುನಿಯಾದ ಭರದ್ವಾಜನನ್ನು ದೂರದಿಂದಲೇ ಕಂಡು ವಿಧಿವಿಹಿತರೀತಿಯಿಂದ ಅರ್ಘ್ಯವನ್ನು ಕೊಟ್ಟು ಸ್ವಾಗತವನ್ನು ಬಯಸಿ ಬರಮಾಡಿಕೊಂಡನು.

ಆಸನಂ ಕಲ್ಪಯಾಮಾಸ ಸ್ವಯಮೇವ ಮಹೀಪತಿಃ ।
ಪ್ರಣಮ್ಯ ಪರಯಾ ಭಕ್ತ್ಯಾ ತಸ್ಥೌ ಮುನಿವರಾಗ್ರತಃ ॥ ೧೧ ॥

ರಾಜೋವಾಚ :—

ಅದ್ಯ ಮೇ ಸಫಲಂ ಜನ್ಮ ಅದ್ಯ ಮೇ ಸಫಲಂ ದಿನಂ ।
ಅದ್ಯ ಮೇ ಸಫಲಂ ರಾಜ್ಯಂ ಅದ್ಯ ಮೇ ಸಫಲಂ ಗೃಹಂ ॥ ೧೨ ॥
ಪ್ರಸನ್ನೋ ಮಮ ವಿಪ್ರರ್ಷೇ ಪರಮಾತ್ಮಾ ಜನಾರ್ದನಃ ।
ಯತ್ತ್ವಂ ಸಮಾಗತೋ ಹ್ಯದ್ಯ ಗೃಹೇ ಯೋಗಿವರಸ್ತಥಾ ॥ ೧೩ ॥
ಮುಕ್ತೋಽಹಂ ಪಾಪಕೋಟ್ಯಾದ್ಯ ಯತ್ತ್ವಯಾಹಂ ನಿರೀಕ್ಷಿತಃ ।
ರಾಜ್ಯಂ ಲಕ್ಷ್ಮೀರ್ಗಜಾಶ್ವಾಶ್ಚ ಮಯಾ ತುಭ್ಯಂ ನಿವೇದಿತಾಃ ॥ ೧೪ ॥
ವೈಷ್ಣವೋಽಸಿ ಮುನಿಶ್ರೇಷ್ಠ ನಾಸ್ತ್ಯದೇಯಂ ಮಯಾ ತವ ।
ಮೇರುತುಲ್ಯಂ ಭವೇತ್ಸರ್ವಂ ವೈಷ್ಣವಸ್ಯ ವರಾಟಿಕಾ ॥ ೧೫ ॥
ನಾಯಾತಿ ಹಿ ಗೃಹೇ ಯಸ್ಯ ವೈಷ್ಣವೋ ವೈ ದ್ವಿಜೋತ್ತಮಃ ।
ತದ್ದಿನಂ ವಿಫಲಂ ತಸ್ಯ ಕಥಿತಂ ಬ್ರಾಹ್ಮಣೈರ್ಮಮ ॥ ೧೬ ॥

---

೧೧. ಆ ಭೂಮಿಪತಿಯು ತನ್ನ ಕೈಗಳಿಂದಲೇ ಆತನಿಗೆ ಆಸನವನ್ನು ಸಿದ್ಧಗೊಳಿಸಿದನು. ಅಪಾರವಾದ ಭಕ್ತಿಯಿಂದ ಆತನಿಗೆ ನಮಸ್ಕಾರವನ್ನು ಮಾಡಿ ಆತನ ಇದುರಿನಲ್ಲಿ ನಿಂತನು.

೧೨. ರಾಜನು ಹೇಳುತ್ತಾನೆ:— "ಇಂದಿಗೆ ನನ್ನ ಜನ್ಮವು ಸಾಫಲ್ಯವನ್ನು ಹೊಂದಿತು. ಇಂದೇ ನನಗೆ ಸುದಿನವಾಯಿತು. ಇಂದು ನನ್ನ ರಾಜ್ಯಭಾರವು ಸಫಲವಾಯಿತು. ನನ್ನ ಗೃಹವೂ ಇಂದಿಗೆ ಪವಿತ್ರವೆನಿಸಿತು.

೧೩. ಎಲೈ ಬ್ರಾಹ್ಮಣೋತ್ತಮನೆ! ಯೋಗಿಗಳಲ್ಲಿ ಉತ್ತಮನಾದ ನೀನು ನನ್ನ ಮನೆಗೆ ದಯಮಾಡಿಸಿದುದರಿಂದ ಇಂದು ಪರಮಾತ್ಮನಾದ ಜನಾರ್ದನನೂ ನನ್ನಲ್ಲಿ ಸುಪ್ರಸನ್ನನಾದನು.

೧೪. ನಿನ್ನ ದೃಷ್ಟಿಪಥಕ್ಕೆ ಗೋಚರನಾದ ನಾನು ಪಾಪಕೋಟಿಗಳ ದೆಸೆಯಿಂದ ಬಿಡುಗಡೆಯನ್ನು ಹೊಂದಿದೆನು. ನನ್ನ ರಾಜ್ಯವೂ ಐಶ್ವರ್ಯವೂ ಆನೆಗಳೂ, ಕುದುರೆಗಳೂ ನಿನಗೆ ಸಮರ್ಪಿಸಲ್ಪಟ್ಟಿರುವುವು.

೧೫. ಎಲೈ ಮುನಿವರ್ಯನೆ! ನೀನು ವಿಷ್ಣುಭಕ್ತನಾದುದರಿಂದ ನಿನಗೆ ನಾನು ಕೊಡಬಾರದ ಪದಾರ್ಥವೊಂದೂ ಇಲ್ಲವು. ವೈಷ್ಣವನಿಗೆ ಸಮರ್ಪಿಸಿದ ಕವಡೆಯಾದರೂ ಮೇರುಪರ್ವತದ ಸಮಾನವಾಗುವುದಲ್ಲವೆ.

೧೬. ಯಾವ ಗೃಹಸ್ಥನ ಮನೆಗೆ ಬ್ರಾಹ್ಮಣೋತ್ತಮನಾದ ವೈಷ್ಣವನು ಎಂದು ಬರುವುದಿಲ್ಲವೊ, ಆ ದಿನವು ಗೃಹಸ್ಥನಿಗೆ ನಿಷ್ಫಲವೆಂದು ಬ್ರಾಹ್ಮಣರಿಂದ ನನಗೆ ಹೇಳಲ್ಪಟ್ಟಿರುವುದು.

ವಿಷ್ಣುಭಕ್ತಾಶ್ಚ ಯೇ ಕೇಚಿತ್ ಸರ್ವೇ ವರ್ಣಾ ದ್ವಿಜಾತಯಃ ।
ಕಥಿತಂ ಮಮ ಗಾರ್ಗ್ಯೇಣ ಗೌತಮೇನ ಸುಮಂತುನಾ ॥ ೧೭ ॥
ಯೇ ತ್ವಭಕ್ತಾ ಹೃಷೀಕೇಶೇ ಪಿಶಾಚಾಸ್ತೇ ಹಿ ಮಾನವಾಃ ।
ಮಹಾಪಾತಕಲಿಪ್ತಾಸ್ತೇ ಯೇ ಭುಜಂತಿ ಹರೇರ್ದಿನೇ ॥ ೧೮ ॥
ಶಿವವ್ರತಸಹಸ್ರೈಸ್ತು ಸೌರ್ಯೈರ್ಬ್ರಾಹ್ಮೈಶ್ಚ ಕೋಟಿಭಿಃ ।
ಯತ್ಫಲಂ ಕವಿಭಿಃ ಪ್ರೋಕ್ತಂ ವಾಸರೈಕೇನ ತದ್ಧರೇಃ ॥ ೧೯ ॥
ಗರ್ವಮುದ್ವಹತೇ ತಾವತ್ ತಿಥಿರ್ಬ್ರಾಹ್ಮೀ ಚ ಶಾಂಕರೀ ।
ಯಾವನ್ನ ಯಾತಿ ವಿಪ್ರೇಂದ್ರ ದ್ವಾದಶೀ ಚ ಮಮ ಪ್ರಿಯಾ ॥ ೨೦ ॥
ತಾವತ್ಪ್ರಭಾವಸ್ತಾರಾಣಾಂ ಯಾವನ್ನೋದಯತೇ ಶಶೀ ।
ತಿಥಿಸ್ತಥಾ ಚ ವಿಪ್ರೇಂದ್ರ ಯಾವನ್ನಾಯಾತಿ ದ್ವಾದಶೀ ॥ ೨೧ ॥
ನಾರದೇನ ಪುರಾ ಪ್ರೋಕ್ತಂ ವಸಿಷ್ಠೇನ ಮಮಾಗ್ರತಃ ।
ತ್ವಂ ವೇತ್ತಾ ಸರ್ವಧರ್ಮಾಣಾಂ ವೈಷ್ಣವಾನಾಂ ಮಹಾಮುನೇ ॥ ೨೨ ॥

೧೭. ವಿಷ್ಣುಭಕ್ತರಾದವರು ಯಾರಿರುವರೊ, ಅವರೆಲ್ಲರೂ ವರ್ಣದಲ್ಲಿ ಬ್ರಾಹ್ಮಣರೆಂದೇ ನಿಶ್ಚಯಿಸಬೇಕೆಂದು ನನಗೆ ಗಾರ್ಗ್ಯನೂ, ಸುಮಂತುವೂ, ಗೌತಮನೂ ಹೇಳಿರುವರು.

೧೮. ಯಾರು ಇಂದ್ರಿಯನಿಯಾಮಕನಾದ ಮಹಾ ವಿಷ್ಣುವಿನಲ್ಲಿ ಭಕ್ತಿಯನ್ನು ಮಾಡುವುದಿಲ್ಲವೊ, ಆ ಮನುಷ್ಯರು ಪಿಶಾಚಸದೃಶರೇ ಸರಿ. ಯಾರು ಹರಿವಾಸರಗಳಲ್ಲಿ ಭೋಜನವನ್ನು ಮಾಡುವರೊ, ಅವರು ಮಹಾ ಪಾತಕಗಳ ಪಾಪವನ್ನು ಹೊಂದುವರು.

೧೯. ಒಂದು ಸಹಸ್ರ ಶಿವವ್ರತಗಳಿಂದಲೂ, ಕೋಟಿ ಸೂರ್ಯ ಬ್ರಹ್ಮ ವ್ರತಗಳಿಂದಲೂ ಯಾವ ಪುಣ್ಯವು ಲಭಿಸುವುದೆಂದು ಬಲ್ಲವರು ಹೇಳಿರುವರೊ, ಆ ಪುಣ್ಯವೆಲ್ಲವೂ ಒಂದೇ ಹರಿವಾಸರವನ್ನು ನಿಯಮವಾಗಿ ಆಚರಿಸುವುದರಿಂದ ಲಭಿಸುವುದು.

೨೦. ಎಲೈ ಬ್ರಾಹ್ಮಣೋತ್ತಮನೆ! ನನಗೆ ಅತ್ಯಂತ ಅಭಿಲಷಿತವಾದ ದ್ವಾದಶಿಯು ಎಲ್ಲಿಯವರೆಗೆ ಬರುವುದಿಲ್ಲವೊ, ಅಲ್ಲಿಯವರೆಗೆ ಮಾತ್ರ ಬ್ರಹ್ಮನ ಮತ್ತು ಶಂಕರನ ತಿಥಿಗಳು ತಾವೇ ದೊಡ್ಡವುಗಳೆಂದು ಮೆರೆಯುತ್ತಿರುವುವು.

೨೧. ಚಂದ್ರನು ಎಲ್ಲಿಯವರೆಗೆ ಉದಯಿಸುವುದಿಲ್ಲವೊ, ಅಲ್ಲಿಯವರೆಗೂ ನಕ್ಷತ್ರಗಳೇ ಪ್ರಭಾವಶಾಲಿಗಳಾಗಿರುವುವು. ಹಾಗೆಯೇ ದ್ವಾದಶಿಯು ಪ್ರಾಪ್ತವಾಗುವವರೆಗೂ ಇತರ ತಿಥಿಗಳು ಪವಿತ್ರಗಳೆನಿಸುವುವು.

೨೨. ಎಲೈ ಮಹಾಮುನಿಯೆ! ನೀನೊಬ್ಬನೇ ಸಕಲ ವೈಷ್ಣವ ಧರ್ಮ

ಭಾರದ್ವಾಜ ಉವಾಚ :—

ಸಾಧುಪೃಷ್ಟಂ ಮಹಾಭಾಗ ಯತ್ತ್ವಂ ಭಕ್ತೋऽಸಿ ವೈಷ್ಣವಃ ।
ಸಾ ಸುಪ್ರಜಾ ಮಹೀ ಧನ್ಯಾ ಯಾಂ ತ್ವಂ ರಕ್ಷಸಿ ಭೂಮಿಪ ॥ ೨೩ ॥
ತಸ್ಮಿನ್ ರಾಷ್ಟ್ರೇ ನ ವಸ್ತವ್ಯಂ ಯತ್ರ ರಾಜಾ ನ ವೈಷ್ಣವಃ ।
ವರಂ ವಾಸೋ ವನೇ ತೀರ್ಥೇ ನ ತು ರಾಷ್ಟ್ರೇ ತ್ವವೈಷ್ಣವೇ ॥ ೨೪ ॥
ಯತ್ರ ಭಾಗವತೋ ರಾಜಾ ಸಂಪ್ರಶಾಸ್ತಿ ಚ ಮೇದಿನೀಂ ।
ವೈಕುಂಠಮಿತಿ ಮಂತವ್ಯಂ ತದ್ರಾಷ್ಟ್ರಂ ಪಾಪವರ್ಜಿತಂ ॥ ೨೫ ॥
ಚಕ್ಷುರ್ಹೀನಂ ಯಥಾ ದೇಹಂ ಪತಿಹೀನಾ ಯಥಾ ಸ್ತ್ರಿಯಃ ।
ದ್ವಾದಶೀ ದಶಮೀಯುಕ್ತಾ ತಥಾ ರಾಷ್ಟ್ರಮವೈಷ್ಣವಂ ॥ ೨೬ ॥
ಯಥಾ ಪುತ್ರೋ ಮಹೀಪಾಲ ಮಾತಾಪಿತ್ರೋರತೋಷಕಃ ।
ದ್ವಾದಶೀ ದಶಮೀಯುಕ್ತಾ ತಥಾ ರಾಷ್ಟ್ರಮವೈಷ್ಣವಂ ॥ ೨೭ ॥
ದಾನಹೀನೋ ಯಥಾ ರಾಜಾ ಬ್ರಾಹ್ಮಣೋ ರಸವಿಕ್ರಯೀ ।
ದ್ವಾದಶೀ ದಶಮೀಯುಕ್ತಾ ತಥಾ ರಾಷ್ಟ್ರಮವೈಷ್ಣವಂ ॥ ೨೮ ॥

---

ಗಳನ್ನೂ ಬಲ್ಲವನೆಂದು ನನಗೆ ಹಿಂದೆಯೇ ನಾರದನೂ ವಸಿಷ್ಠನೂ ನಿರೂಪಿಸಿರುವನು.

೨೩. ಭರದ್ವಾಜನು ಹೇಳುತ್ತಾನೆ:—ಮಹಾತ್ಮನಾದ ರಾಜನೆ! ನಿನ್ನ ಪ್ರಶ್ನೆಯು ಬಹಳ ಉಪಯುಕ್ತವಾಗಿರುವುದು. ನೀನೇ ವೈಷ್ಣವನೂ ವಿಷ್ಣುಭಕ್ತನೂ ಆಗಿರುವೆ. ನೀನು ಪಾಲಿಸುತ್ತಿರುವ ಸತ್ಪ್ರಜೆಗಳಿಂದ ತುಂಬಿರುವ ಈ ಭೂಭಾಗವೂ ಧನ್ಯವಾದುದೇ ಸರಿ.

೨೪. ಯಾವ ರಾಷ್ಟ್ರದಲ್ಲಿ ರಾಜನು ವಿಷ್ಣುಭಕ್ತನಾಗಿಲ್ಲವೊ, ಆ ಪ್ರದೇಶದಲ್ಲಿ ಸಜ್ಜನರು ವಾಸಮಾಡಬಾರದು. ವೈಷ್ಣವರಹಿತವಾದ ರಾಷ್ಟ್ರದ ವಾಸಕ್ಕಿಂತ ವನದಲ್ಲಿಯಾಗಲಿ ತೀರ್ಥಸ್ಥಳದಲ್ಲಾಗಲಿ ವಾಸಮಾಡುವುದೊಳ್ಳೆಯದು.

೨೫. ಯಾವ ದೇಶದ ರಾಜನು ಭಗವದ್ಭಕ್ತನಾಗಿ ರಾಜ್ಯವನ್ನಾಳುತ್ತಿರುವನೊ, ಆ ರಾಷ್ಟ್ರವು ಪಾಪರಹಿತವಾಗಿ ವೈಕುಂಠಸಮಾನವೆಂದೇ ತಿಳಿಯಬೇಕು.

೨೬. ನೇತ್ರಹೀನವಾದ ದೇಹದಂತೆಯೂ, ಗಂಡಂದಿರಿಲ್ಲದ ಸ್ತ್ರೀಯರಂತೆಯೂ, ದಶಮಿಯೊಡನೆ ಕೂಡಿದ ದ್ವಾದಶಿಯಂತೆಯೂ ವೈಷ್ಣವರಿಲ್ಲದ ರಾಜ್ಯವು ನಿಷ್ಪ್ರಯೋಜನವು.

೨೭. ಎಲೈ ಮಹಾರಾಜನೆ! ತಾಯಿತಂದೆಗಳನ್ನು ಪೋಷಣೆ ಮಾಡದ ಪುತ್ರನಂತೆಯೂ, ದಶಮಿಯೊಡಗೂಡಿದ (ಅವಮಾಹದ) ದ್ವಾದಶಿಯಂತೆಯೂ ವೈಷ್ಣವಹೀನವಾದ ರಾಜ್ಯವು ನಿಷ್ಪ್ರಯೋಜನವು.

೨೮. ದಾನಗಳನ್ನು ಮಾಡದ ರಾಜನಂತೆಯೂ, ರಸವ್ಯಾಪಾರವನ್ನು

ದಂತಹೀನೋ ಯಥಾ ಹಸ್ತೀ ಪಕ್ಷಹೀನೋ ಯಥಾ ಖಗಃ ।
ದ್ವಾದಶೀ ದಶಮೀ ಯುಕ್ತಾ ತಥಾ ರಾಷ್ಟ್ರಮವೈಷ್ಣವಂ ॥ ೨೯ ॥
ಪ್ರತಿಗ್ರಹಾರ್ಥಂ ವೇದಾದಿ ದ್ರವ್ಯಾರ್ಥಂ ಸುಕೃತಂ ಯಥಾ ।
ದ್ವಾದಶೀ ದಶಮೀಯುಕ್ತಾ ತಥಾ ರಾಷ್ಟ್ರಮವೈಷ್ಣವಂ ॥ ೩೦ ॥
ದರ್ಭಹೀನಾ ಯಥಾ ಸಂಧ್ಯಾ ಯಥಾ ಶ್ರಾದ್ಧಮದಕ್ಷಿಣಂ ।
ದ್ವಾದಶೀ ದಶಮೀಯುಕ್ತಾ ತಥಾ ರಾಷ್ಟ್ರಮವೈಷ್ಣವಂ ॥ ೩೧ ॥
ಸಶಿಖಶ್ಚ ಯಥಾ ಶೂದ್ರೋ ಕಪಿಲಾಕ್ಷೀರಪಾಯಕಃ ।
ದ್ವಾದಶೀ ದಶಮೀಯುಕ್ತಾ ತಥಾ ರಾಷ್ಟ್ರಮವೈಷ್ಣವಂ ॥ ೩೨ ॥
ಶೂದ್ರಶ್ಚ ಬ್ರಾಹ್ಮಣೀಗಾಮೀ ಹೇಮಘ್ನೋ ಧರ್ಮದೂಷಕಃ ।
ದ್ವಾದಶೀ ದಶಮೀಯುಕ್ತಾ ತಥಾ ರಾಷ್ಟ್ರಮವೈಷ್ಣವಂ ॥ ೩೩ ॥
ಹರಿಸೂರ್ಯಾದಿವೃಕ್ಷಾಣಾಂ ಯಥಾ ಛೇದೋ ನರೋತ್ತಮ ।
ದ್ವಾದಶೀ ದಶಮೀಯುಕ್ತಾ ತಥಾ ರಾಷ್ಟ್ರಮವೈಷ್ಣವಂ ॥ ೩೪ ॥

---

ಮಾಡುವ ಬ್ರಾಹ್ಮಣನಂತೆಯೂ ದಶಮಿಯೊಡನೆ ಬರುವ ದ್ವಾದಶಿಯಂತೆಯೂ ವೈಷ್ಣವರಿಲ್ಲದ ರಾಜ್ಯವು ಕಳಾಹೀನವು.

೨೯–೩೦. ದಂತಗಳಿಲ್ಲದ ಗಜದಂತೆಯೂ, ರೆಕ್ಕೆಗಳಿಲ್ಲದ ಪಕ್ಷಿಯಂತೆಯೂ, ದಶಮಿಯೊಡನೆ ಕೂಡಿದ ದ್ವಾದಶಿಯಂತೆಯೂ ವೈಷ್ಣವರಿಲ್ಲದ ರಾಷ್ಟ್ರವು ನಿರರ್ಥಕವು. ಯಾಚನೆಗಾಗಿ ಮಾಡಿದ ವೇದಾಧ್ಯಯನದಂತೆಯೂ, ದ್ರವ್ಯ ಲಾಭಕ್ಕಾಗಿ ಮಾಡಿದ ಪುಣ್ಯಕರ್ಮದಂತೆಯೂ, ದಶಮಿಯೊಡನಿರುವ ದ್ವಾದಶಿಯಂತೆಯೂ ವೈಷ್ಣವರಿಲ್ಲದ ರಾಜ್ಯವು ಫಲಹೀನವು.

೩೧. ಪವಿತ್ರವಾದ ದರ್ಭೆಯಿಲ್ಲದೆ ಮಾಡಿದ ಸಂಧ್ಯಾವಂದನೆಯಂತೆಯೂ, ದಕ್ಷಿಣೆಯಿಲ್ಲದ ಶ್ರಾದ್ಧಕರ್ಮದಂತೆಯೂ ದಶಮೀಯುಕ್ತವಾದ ದ್ವಾದಶಿಯಂತೆಯೂ ವೈಷ್ಣವಹೀನವಾದ ರಾಜ್ಯವು ಫಲಕಾರಿಯಾಗುವುದಿಲ್ಲ.

೩೨. ಶಿಖೆಯನ್ನಿಟ್ಟುಕೊಂಡು ಕಪಿಲೆಯಾದ ಆಕಳಿನ ಹಾಲನ್ನು ಪಾನ ಮಾಡುವ ಶೂದ್ರನಂತೆಯೂ, ದಶಮೀ ಸಹಿತವಾದ ದ್ವಾದಶಿಯಂತೆಯೂ ವೈಷ್ಣವರಿಲ್ಲದ ರಾಷ್ಟ್ರವು ನಿರರ್ಥಕವು.

೩೩. ಬ್ರಾಹ್ಮಣಸ್ತ್ರೀಯನ್ನು ಕೂಡಿದ ಶೂದ್ರನಂತೆಯೂ, ಧರ್ಮದ್ವೇಷಿಯಾದ ಅಕ್ಕಸಾಲಿಗನಂತೆಯೂ, ದಶಮೀಯುಕ್ತವಾದ ದ್ವಾದಶಿಯಂತೆಯೂ ವೈಷ್ಣವರಹಿತವಾದ ರಾಜ್ಯವು ನಿಂದ್ಯವು.

೩೪. ಎಲೈ ಚಕ್ರವರ್ತಿಯೆ! ಹರಿದ್ರುಮ, ಅರ್ಕದ್ರುಮಗಳ ಛೇದದಂತೆಯೂ, ದಶಮಿಯೊಡನಿರುವ ದ್ವಾದಶಿಯಂತೆಯೂ ವೈಷ್ಣವಹೀನವಾದ ರಾಜ್ಯವು ನೀಚವೆನಿಸುವುದು.

ಯಥಾಹುತಿರ್ಮಂತ್ರಹೀನಾ ಮೃತವತ್ಸಾಪಯೋ ಯಥಾ ।
ದ್ವಾದಶೀ ದಶಮೀಯುಕ್ತಾ ತಥಾ ರಾಷ್ಟ್ರಮವೈಷ್ಣವಂ ॥ ೩೫ ॥
ಸಕೇಶಾ ವಿಧವಾ ಯದ್ವತ್ ವ್ರತಂ ಸ್ನಾನವಿವರ್ಜಿತಂ ।
ದ್ವಾದಶೀ ದಶಮೀಯುಕ್ತಾ ತಥಾ ರಾಷ್ಟ್ರಮವೈಷ್ಣವಂ ॥ ೩೬ ॥
ಸ ರಾಜಾ ಪ್ರೋಚ್ಯತೇ ಸದ್ಭಿಃ ಯೋ ಭಕ್ತೋ ಮಧುಸೂದನೇ ।
ತದ್ರಾಷ್ಟ್ರಂ ವರ್ಧತೇ ನಿತ್ಯಂ ಸುಖೀ ಭವತಿ ಸಪ್ರಜಃ ॥ ೩೭ ॥
ದೃಷ್ಟಿರ್ಮೇ ಸಫಲಾ ರಾಜನ್ ಯನ್ಮಯಾ ತ್ವಂ ನಿರೀಕ್ಷಿತಃ ।
ಅದ್ಯ ಮೇ ಸಫಲಾ ವಾಣೀ ಜಲ್ಪತೇ ಯಾ ತ್ವಯಾ ಸಹ ॥ ೩೮ ॥
ದೂರಮೇವ ಹಿ ಗಂತವ್ಯಂ ಶ್ರೂಯತೇ ಯತ್ರ ವೈಷ್ಣವಃ ।
ದರ್ಶನಾತ್ತು ಭವೇತ್ಪುಣ್ಯಂ ತೀರ್ಥಸ್ನಾನಸಮುದ್ಭವಂ ॥ ೩೯ ॥
ಸ ತ್ವಂ ರಾಜನ್ಮಯಾ ದೃಷ್ಟೋ ವಿಷ್ಣುಭಕ್ತಿರತಃ ಶುಚಿಃ ।
ಸ್ವಸ್ತಿ ತೇಽಸ್ತು ಗಮಿಷ್ಯಾಮಿ ಸುಖೀ ಭವ ನರಾಧಿಪ ॥ ೪೦ ॥

---

೩೫. ಮಂತ್ರಪಠನವಿಲ್ಲದೆ ಮಾಡಿದ ಆಹುತಿಯಂತೆಯೂ, ಸತ್ತ ಕರುವುಳ್ಳ ಆಕಳಿನ ಹಾಲಿನಂತೆಯೂ, ದಶಮಿಯೊಡಗೂಡಿದ ದ್ವಾದಶಿಯಂತೆಯೂ ವೈಷ್ಣವರಿಲ್ಲದ ರಾಷ್ಟ್ರವು ಸತ್ಫಲವರ್ಜಿತವು.

೩೬. ಸಕೇಶಿಯಾದ ವಿಧವೆಯಂತೆಯೂ, ಸ್ನಾನಶೌಚಗಳಿಲ್ಲದೆ ಮಾಡಿದ ವ್ರತದಂತೆಯೂ, ದಶಮಿಯೊಡನಿರುವ ದ್ವಾದಶಿಯಂತೆಯೂ ವೈಷ್ಣವರಿಲ್ಲದ ರಾಜ್ಯವು ನಿರರ್ಥಕವು.

೩೭. ಯಾವನು ಮಹಾ ವಿಷ್ಣುವಿನಲ್ಲಿ ಭಕ್ತಿಯುಕ್ತನಾಗಿರುವನೊ, ಅವನೇ ನಿಜವಾದ ರಾಜನೆಂದು ಸಜ್ಜನರು ಹೇಳುವರು. ಆತನ ರಾಜ್ಯವು ದಿನದಿನಕ್ಕೂ ಅಭಿವೃದ್ಧಿಯನ್ನು ಹೊಂದುವುದು. ಆತನೂ ತನ್ನ ಪ್ರಜೆಗಳೊಡನೆ ಸುಖಿಯಾಗಿರುವನು.

೩೮. ಎಲೈ ಮಹಾರಾಜನೆ! ನಿನ್ನನ್ನು ನಿರೀಕ್ಷಿಸಿದುದರಿಂದ ಇಂದಿಗೆ ನನ್ನ ದೃಷ್ಟಿಯು ಸಫಲವಾಯಿತು. ಇಂದೇ ನಿನ್ನೊಡನೆ ಸಂಭಾಷಿಸುತ್ತಿರುವ ನನ್ನ ವಾಣಿಯೂ ಸಾರ್ಥಕವಾಯಿತು.

೩೯. ಎಲ್ಲಿ ವೈಷ್ಣವನಿರುವನೊ, ಅಲ್ಲಿಗೆ ಎಷ್ಟು ದೂರದ ಪ್ರಯಾಣವನ್ನಾದರೂ ಮಾಡಬೇಕಲ್ಲವೆ. ಆತನ ದರ್ಶನದಿಂದಲೇ ತೀರ್ಥಸ್ನಾನವನ್ನು ಮಾಡಿದ ಪುಣ್ಯವು ಲಭಿಸುವುದು.

೪೦. ಎಲೈ ರಾಜನೆ! ಅಂತಹ ವಿಷ್ಣುಭಕ್ತನೂ ಶೌಚಾಚಾರಪರನೂ ಆದ ನಿನ್ನನ್ನು ಇಂದು ನಾನು ನೋಡಿದೆನು. ನಿನಗೆ ಮಂಗಳವಾಗಲಿ. ನಾನು ಹೋಗಿ ಬರುವೆನು. ನೀನು ಸುಖಿಯಾಗಿ ರಾಜ್ಯಭಾರವನ್ನು ಮಾಡಿಕೊಂಡಿರು.

ಏತಸ್ಮಿನ್ನಂತರೇ ರಾಜ್ಞ್ಯಾ ಕಾಂತಿಮತ್ಯಾ ನಮಸ್ಕೃತಃ ।
ಭಾರದ್ವಾಜೋ ಮುನಿಶ್ರೇಷ್ಠಃ ಪ್ರವರಃ ಸರ್ವಯೋಗಿನಾಂ ॥ ೪೧ ॥
ಅವೈಧವ್ಯಂ ವರಾರೋಹೇ ಭಕ್ತ್ಯಾ ಭವ ಸ್ವಭರ್ತರಿ ।
ನಿಶ್ಚಲಾ ಕೇಶವೇ ಭಕ್ತಿಃ ಸದಾ ಭವತು ತೇ ಶುಭೇ ॥ ೪೨ ॥
ಏತಸ್ಮಿನ್ನಂತರೇ ರಾಜಾ ಭಾರದ್ವಾಜಂ ಮಹಾಮುನಿಂ ।
ಉವಾಚ ಪ್ರೀಣಯನ್ವಾಚಾ ಮೇಘನಾದಗಭೀರಯಾ ॥ ೪೩ ॥

ರಾಜೋವಾಚ :—

ವಿಪುಲಾ ಮೇ ಕಥಂ ಲಕ್ಷ್ಮೀಃ ಕಿಂ ಕೃತಂ ಪೂರ್ವಜನ್ಮನಿ ।
ಸರ್ವಂ ಬ್ರೂಹಿ ಮುನಿಶ್ರೇಷ್ಠ ಕೃಪಾ ಯದಿ ಮಮೋಪರಿ ॥ ೪೪ ॥
ಏತನ್ಮಯಾ ಕಥಂ ಪ್ರಾಪ್ತಂ ರಾಜ್ಯಂ ನಿಹತಕಂಟಕಂ ।
ಪುತ್ರೋ ವೈ ಗುಣವಾನ್ ಶ್ರೇಷ್ಠಃ ಪ್ರಿಯಾ ಚ ಸುಮನೋಹರಾ॥ ೪೫ ॥
ಮಚ್ಚಿತ್ತಾ ಮದ್ಗತಪ್ರಾಣಾ ಚಿಂತಯಂತೀ ಜನಾರ್ದನಂ ।
ಕೋಽಹಂ ಮುನೇ ಕಥಂ ಚೈಷಾ ಕಶ್ಚ ಧರ್ಮೋ ಮಯಾ ಕೃತಃ ॥೪೬॥

೪೧. ಇಷ್ಟರಲ್ಲಿ ಮಹಾರಾಣಿಯಾದ ಕಾಂತಿಮತಿಯಿಂದ ನಮಸ್ಕರಿಸಲ್ಪಟ್ಟ ವನಾಗಿ, ಮುನಿಶ್ರೇಷ್ಠನೂ ಯೋಗಿಗಳಲ್ಲಿ ಸರ್ವೋತ್ತಮನೂ ಆದ ಭರದ್ವಾಜನು ಆಕೆಗೆ ಆಶೀರ್ವದಿಸಿದನು.

೪೨. "ಎಲೌ ಮಂಗಳಾಂಗಿಯೆ! ಕೋಮಲಗಾತ್ರಳೆ! ನಿನಗೆ ವೈಧವ್ಯ ವೆಂಬುದಿಲ್ಲದಿರಲಿ. ನಿನ್ನ ಪತಿಯಲ್ಲಿಯೇ ಯಾವಾಗಲೂ ಅನುರಕ್ತಳಾಗಿರು. ಯಾವಾಗಲೂ ನಿನಗೆ ಶ್ರೀ ಮಹಾ ವಿಷ್ಣುವಿನಲ್ಲಿ ಅಚಂಚಲವಾದ ಭಕ್ತಿ ಯುಂಟಾಗಲಿ."

೪೩. ಆ ಸಮಯದಲ್ಲಿ ಮಹಾರಾಜನೂ ಕೂಡ ಮಹಾ ಮುನಿಯಾದ ಭರದ್ವಾಜನನ್ನು ಸಂತೋಷಗೊಳಿಸಿ ಮೇಘಗಂಭೀರವಾದ ವಾಣಿಯೊಡನೆ ಆತನನ್ನು ಕುರಿತು ಹೇಳತೊಡಗಿದನು.

೪೪. ರಾಜನು ಹೇಳುತ್ತಾನೆ:—"ಎಲೈ ಮುನಿಶ್ರೇಷ್ಠನೆ! ಅಪರಿಮಿತವಾದ ಈ ಐಶ್ವರ್ಯವು ನನಗೆ ಹೇಗೆ ಪ್ರಾಪ್ತವಾಯಿತು? ನಾನು ಪೂರ್ವಜನ್ಮದಲ್ಲಿ ಯಾವ ಪುಣ್ಯವನ್ನು ಮಾಡಿದ್ದೆನು? ನನ್ನಲ್ಲಿ ನಿನಗೆ ಕೃಪೆಯಿರುವುದಾದರೆ ಈ ವಿಷಯವೆಲ್ಲವನ್ನೂ ನನಗೆ ತಿಳಿಸು.

೪೫. ನಿಹತಶತ್ರುಕವಾದ ಈ ಸಮೃದ್ಧರಾಜ್ಯವು ನನಗೆ ಹೇಗೆ ಪ್ರಾಪ್ತ ವಾಯಿತು? ಸದ್ಗುಣವಂತನೂ ಶ್ರೇಷ್ಠನೂ ಆದ ಮಗನೂ ಮನೋನುಕೂಲೆ ಯಾದ ಪತ್ನಿಯೂ ನನಗೆ ಹೇಗೆ ಲಭಿಸಿದರು?

೪೬. ನನ್ನಲ್ಲಿಯೇ ಮನಸ್ಸನ್ನಿಟ್ಟವಳೂ ನನ್ನನ್ನೇ ಪ್ರಾಣವನ್ನಾಗಿ

ಕಿಂಚಾನಯಾಪಿ ಚಾರ್ವಂಗ್ಯಾ ಮಮ ಪತ್ನ್ಯಾ ಕೃತಂ ಮುನೇ ।
ಕೇನ ಪುಣ್ಯೇನ ಮೇ ಲಕ್ಷ್ಮೀರ್ಮರ್ತ್ಯಲೋಕೇ ಸುದುರ್ಲಭಾ ॥ ೪೭ ॥
ಅಶೇಷಾ ಭೂಮಿಪಾಲಾ ವೈ ವರ್ತಂತೇ ಯಸ್ಯ ಮೇ ವಶೇ ।
ವಿಕ್ರಮಂ ಚಾಪ್ರತಿಹತಂ ಶರೀರಾರೋಗ್ಯತಾ ತಥಾ ॥ ೪೮ ॥
ಮಮಾಪಿ ವಿಪುಲಂ ತೇಜೋ ನ ಕಶ್ಚಿತ್ಸಹತೇ ಮುನೇ ।
ಇಚ್ಛಾಮ್ಯದ್ಯ ಪ್ರತಿಜ್ಞಾತುಂ ಯಥಾ ಚೇಯಮನಿಂದಿತಾ ॥ ೪೯ ॥
ಮಯಾಪಿ ಸುಕೃತಂ ವಿಪ್ರ ಕಿಂ ಕೃತಂ ಪೂರ್ವಜನ್ಮನಿ ।
ಇತಿ ಪೃಷ್ಟೋ ನರೇಂದ್ರೇಣ ಪೂರ್ವಜನ್ಮವಿಚೇಷ್ಟಿತಂ ॥ ೫೦ ॥
ಸ್ವಪತ್ನ್ಯಾಶ್ಚೇಷ್ಟಿತಂ ಚೈವ ಸಂಪದಾಂ ಚೈವ ಕಾರಣಂ ।
ಯೋಗೋತ್ಥಂ ಸ ಚಿರಂ ಕಾಲಂ ತಥಾವಿಂದತ ಮಾನಸೇ ॥ ೫೧ ॥

ಭರದ್ವಾಜ ಉವಾಚ:—

ವಿಜ್ಞಾತಮೇತನ್ನೃಪತೇ ಪೂರ್ವಜನ್ಮವಿಚೇಷ್ಟಿತಂ ।
ತವ ಪತ್ನ್ಯಾಶ್ಚ ರಾಜರ್ಷೇ ಶೃಣುಷ್ವ ಕಥಯಾಮ್ಯಹಂ ॥ ೫೨ ॥

---

ತಿಳಿದವಳೂ ಆಗಿ ಯಾವಾಗಲೂ ಜನಾರ್ದನನ ಸ್ಮರಣೆಯನ್ನೇ ಮಾಡುತ್ತಿರುವಳು. ಮುನಿವರ್ಯನೆ! ನಾನು ಯಾರು! ಈಕೆಯು ಹೇಗೆ ನನಗೆ ಲಭಿಸಿದಳು? ನಾನು ಯಾವ ಧರ್ಮವನ್ನಾಚರಿಸಿದೆನು?

೪೭. ಸುಂದರಿಯೂ ನನ್ನ ಪತ್ನಿಯೂ ಆದ ಈಕೆಯಿಂದ ಯಾವ ಸತ್ಕರ್ಮವು ಮಾಡಲ್ಪಟ್ಟಿತು? ಯಾವ ಪುಣ್ಯದ ಫಲವಾಗಿ ಮನುಷ್ಯಲೋಕದಲ್ಲಿ ದುರ್ಲಭವಾದ ಈ ಐಶ್ವರ್ಯವು ನನಗೆ ಲಭಿಸಿತು?

೪೮. ನನ್ನ ವಶದಲ್ಲಿ ಅನೇಕ ರಾಜರು ವರ್ತಿಸುತ್ತಿರುವರು. ನನ್ನ ಪರಾಕ್ರಮವೂ ದುರಾಸದವಾಗಿರುವುದು. ಹಾಗೆಯೇ ದೇಹಾರೋಗ್ಯವೂ ನನಗೆ ಅಖಂಡವಾಗಿರುವುದು.

೪೯. ಮಹಾ ಮುನಿಯೆ! ನನ್ನ ಅಪಾರವಾದ ತೇಜಸ್ಸನ್ನು ಯಾರೊಬ್ಬರೂ ಸಹಿಸಲಾರರು. ಈ ನನ್ನ ಪತ್ನಿಯು ಸರ್ವಲಕ್ಷಣಸಂಪನ್ನೆಯಾಗಿರುವುದಕ್ಕೆ ಕಾರಣವನ್ನು ತಿಳಿಯಲು ಕುತೂಹಲಪಡುತ್ತಿರುವೆನು.

೫೦–೫೧. ಬ್ರಾಹ್ಮಣೋತ್ತಮನೆ! ನನ್ನಿಂದಲೂ ಪೂರ್ವದಲ್ಲಿ ಯಾವ ಸುಕೃತವು ಮಾಡಲ್ಪಟ್ಟಿತೊ?" ಇಂತು ರಾಜನಿಂದ ಪೂರ್ವಜನ್ಮದ ಚರಿತ್ರೆಯನ್ನು ಕುರಿತು ಪ್ರಶ್ನೆಮಾಡಲ್ಪಟ್ಟವನಾಗಿ ಆತನ ಪತ್ನಿಯ ಪೂರ್ವಜನ್ಮ ಸುಕೃತವನ್ನೂ ಅವರ ಐಶ್ವರ್ಯಕ್ಕೆ ಕಾರಣವನ್ನೂ ತಿಳಿಯಲು ಭರದ್ವಾಜನು ಬಹಳಕಾಲ ಯೋಗದೃಷ್ಟಿಯಿಂದ ಕೂಡಿದವನಾಗಿ ಮನಸ್ಸಿನಲ್ಲಿಯೇ ಕಾರಣವನ್ನು ತಿಳಿದನು.

೫೨. ಭರದ್ವಾಜನು ಹೇಳುತ್ತಾನೆ:— "ಎಲೈ ರಾಜರ್ಷಿಯೆ! ನೀನು

ಶೃಣು ಭೂಪಾಲ ಸಕಲಂ ಯಸ್ಯೇದಂ ಕರ್ಮಣಃ ಫಲಂ ।
ತ್ವಮಾಸೀಃ ಶೂದ್ರಜಾತೀಯೋ ಜೀವಹಿಂಸಾಪರಾಯಣಃ ॥ ೫೩ ॥
ನಾಸ್ತಿಕೋ ದುಷ್ಟಚಾರಿತ್ರಃ ಪರದಾರಪ್ರಧರ್ಷಕಃ ।
ಕೃತಘ್ನೋ ದುರ್ವಿನೀತಶ್ಚ ಸುಷ್ಠ್ವಾಚಾರವಿವರ್ಜಿತಃ ॥ ೫೪ ॥
ಇಯಂ ಯಾ ಭವತೋ ಭಾರ್ಯಾ ಪೂರ್ವಮಪ್ಯಾಯತೇಕ್ಷಣಾ ।
ಕರ್ಮಣಾ ಮನಸಾ ವಾಚಾ ನಾನ್ಯದಸ್ಯಾಸ್ತ್ವಯಾ ವಿನಾ ॥ ೫೫ ॥
ಪತಿವ್ರತಾ ಮಹಾಭಾಗಾ ಭಜಮಾನಾ ನಿರಂತರಂ ।
ಭಾವಂ ನ ಕುರುತೇ ದುಷ್ಟಂ ತವೋಪರಿ ತಥಾ ಸತೀ ॥ ೫೬ ॥
ಸಖಿಭಿಸ್ತ್ವಂ ಪರಿತ್ಯಕ್ತೋ ಬಂಧುಭಿಃ ಪಾಪಕರ್ಮಕೃತ್ ।
ಕ್ಷಯಂ ಜಗಾಮ ಚಾರ್ಥೋ ಯಃ ಸಂಚಿತಸ್ತವ ಪೂರ್ವಜೈಃ ॥ ೫೭ ॥
ನಷ್ಟೇ ದ್ರವ್ಯೇ ಫಲಾಕಾಂಕ್ಷೀ ತ್ವಮಾಸೀರ್ಜಗತೀಪತೇ ।
ಪೂರ್ವಕರ್ಮವಿಪಾಕೇನ ಕೃಷಿಶ್ಚ ವಿಫಲಾ ಗತಾ ॥ ೫೮ ॥

---

ಮತ್ತು ನಿನ್ನ ಪತ್ನಿಯು ಪೂರ್ವಜನ್ಮದಲ್ಲಿ ಮಾಡಿದುದೆಲ್ಲವನ್ನೂ ತಿಳಿದುಕೊಂಡಿರುವೆನು. ನಾನು ಹೇಳುವ ಚರಿತ್ರೆಯೆಲ್ಲವನ್ನೂ ಆದರದಿಂದ ಲಾಲಿಸು.

೫೩. ಎಲೈ ಭೂಪಾಲಕನೆ! ಈ ಸಮಗ್ರವಿಭವವೂ ಯಾವ ಕರ್ಮದ ಫಲವಾಗಿರುವುದೊ, ಅದನ್ನೆಲ್ಲವನ್ನೂ ಕೇಳು. ಮುನ್ನಿನ ಜನ್ಮದಲ್ಲಿ ನೀನು ಶೂದ್ರಯೋನಿಯಲ್ಲಿ ಜನಿಸಿ ಸಕಲ ಜೀವಜಂತುಗಳ ಹಿಂಸೆಯಲ್ಲಿಯೇ ನಿರತನಾಗಿರುತ್ತಿದ್ದೆ.

೫೪. ನೀನು ನಾಸ್ತಿಕನೂ, ದುಷ್ಟಚರಿತ್ರನೂ, ಪರಸ್ತ್ರೀಯರನ್ನು ಬಲದಿಂದ ಉಪಭೋಗಿಸುವವನೂ, ಕೃತಘ್ನನೂ, ಗುರುಹಿರಿಯರಲ್ಲಿ ವಿನಯಭಾವವಿಲ್ಲದವನೂ, ಸದಾಚಾರರಹಿತನೂ ಆಗಿದ್ದೆ.

೫೫. ಈ ವಿಶಾಲನೇತ್ರೆಯೇ ಆಗಲೂ ನಿನಗೆ ಪತ್ನಿಯಾಗಿದ್ದಳು. ಕರ್ಮದಿಂದಾಗಲಿ, ಮನಸ್ಸಿನಿಂದಾಗಲಿ, ಮಾತಿನಿಂದಾಗಲಿ ಈಕೆಯು ನಿನ್ನನ್ನು ಬಿಟ್ಟು ಮತ್ತೊಬ್ಬನನ್ನು ಅಪೇಕ್ಷಿಸುತ್ತಿರಲಿಲ್ಲ.

೫೬. ಆಕೆಯು ಪ್ರತಿವ್ರತೆಯೂ, ಮಹಾಬುದ್ಧಿಶಾಲಿನಿಯೂ, ನಿರಂತರವೂ ನಿನ್ನನ್ನು ಸೇವಿಸುತ್ತಿರುವವಳೂ ಆಗಿದ್ದಳು. ನೀನು ಇಂತಹ ಅಯೋಗ್ಯನಾಗಿದ್ದರೂ ನಿನ್ನ ವಿಷಯದಲ್ಲಿ ಈಕೆಯು ದುಷ್ಟಬುದ್ಧಿಯನ್ನು ಮಾಡಲಿಲ್ಲ.

೫೭. ಇಂತು ಪಾಪಕರ್ಮಗಳಲ್ಲಿಯೇ ನಿರತನಾಗಿದ್ದ ನಿನ್ನನ್ನು ಸ್ನೇಹಿತರೂ ಬಾಂಧವರೂ ಪರಿತ್ಯಜಿಸಿದರು. ನಿನ್ನ ಪೂರ್ವಜರು ಶೇಖರಿಸಿಟ್ಟಿದ್ದ ಧನವೂ ಕಾಲಕ್ರಮದಲ್ಲಿ ಕ್ಷಯವನ್ನು ಹೊಂದಿತು.

೫೮. ಎಲೈ ಮಹಾರಾಜನೆ! ನಿನ್ನ ದ್ರವ್ಯವೆಲ್ಲವೂ ನಷ್ಟವಾಗಲು ನೀನು

ತತೋ ವಿತ್ತೇ ಪರಿಕ್ಷೀಣೇ ಪರಿತ್ಯಕ್ತಶ್ಚ ಬಾಂಧವೈಃ ।
ಕ್ಷೀಯಮಾಣಾಪಿ ಸಾಧ್ವೀಯಮತ್ಯಜತ್ತ್ವಾಂ ನ ಭಾಮಿನೀ ॥ ೫೯ ॥
ತ್ವಂ ಭಗ್ನಃ ಸರ್ವಕಾಮೇಭ್ಯೋ ಗತವಾನ್ ನಿರ್ಜನೇ ವನೇ ।
ಹತ್ವಾ ಜೀವಾನನೇಕಾಂಶ್ಚ ಚಕಾರಾತ್ಮವಿಪೋಷಣಂ ॥ ೬೦ ॥
ಏವಂ ಪ್ರವೃತ್ತಸ್ಯ ತವ ಸಹಪತ್ನ್ಯಾ ತದಾ ನೃಪ ।
ಗತಾನಿ ಬಹುವರ್ಷಾಣಿ ಪಾಪವೃತ್ತ್ಯಾ ಮಹೀತಲೇ ॥ ೬೧ ॥
ಅನ್ಯಸ್ಮಿನ್ ವಾಸರೇ ರಾಜನ್ ಮಾರ್ಗಭ್ರಷ್ಟೋ ಮಹಾಮುನಿಃ ।
ನ ದಿಶಂ ವಿದಿಶಂ ವೇತ್ತಿ ದೇವಶರ್ಮಾ ದ್ವಿಜೋತ್ತಮಃ ॥ ೬೨ ॥
ಕ್ಷುತ್ತೃಷಾಪೀಡಿತೋಽತ್ಯರ್ಥಂ ಮಧ್ಯಾಹ್ನಗದಿವಾಕರೇ ।
ಪತಿತೋ ವನಮಧ್ಯೇ ತು ಮಾರ್ಗಭ್ರಷ್ಟೋ ಮಹೀಪತೇ ॥ ೬೩ ॥
ದಯಾ ಜಾತಾ ಚ ತೇ ಭೂಪ ದೃಷ್ಟ್ವಾ ದುಃಖೇನ ಪೀಡಿತಂ ।
ಬ್ರಾಹ್ಮಣಂ ವೃದ್ಧಮಜ್ಞಾತಂ ಗೃಹೀತ್ವಾ ತು ಕರೇಣ ವೈ ॥ ೬೪ ॥

---

ಮತ್ತೆ ಸಂಪಾದನೆಯನ್ನು ಮಾಡುವ ಆಕಾಂಕ್ಷೆಯುಳ್ಳವನಾದೆ. ನಿನ್ನ ಪೂರ್ವ ಪಾಪಗಳ ಫಲವಾಗಿ ಕೃಷಿಕರ್ಮವೂ ಫಲವನ್ನು ಕೊಡದಂತಾಯಿತು.

೫೯. ಬಳಿಕ ಧನವೆಲ್ಲವೂ ಕ್ಷೀಣವಾಗಲು ಸಕಲ ಬಾಂಧವರಿಂದಲೂ ತ್ಯಜಿಸಲ್ಪಡುವವನಾದೆ. ಆದರೆ ಕ್ಷುಧಾದಿಗಳಿಂದ ಕೃಶಳಾದರೂ ಸಾಧ್ವಿಯಾದ ಈ ಸ್ತ್ರೀಯು ನಿನ್ನನ್ನು ಎಡಬಿಡಲಿಲ್ಲ.

೬೦. ನೀನು ಸಕಲ ಇಷ್ಟಾರ್ಥಗಳಲ್ಲಿಯೂ ಭಗ್ನಮನೋರಥನಾಗಿ ನಿರ್ಜನವಾದ ಅರಣ್ಯವನ್ನು ಸೇರಿದೆ. ಅಲ್ಲಿ ಅನೇಕ ಮೃಗಗಳನ್ನು ಸಂಹರಿಸಿ ಆತ್ಮಪೋಷಣೆಯನ್ನು ಮಾಡಿಕೊಳ್ಳುವವನಾದೆ.

೬೧. ಎಲೈ ರಾಜನೆ! ಇಂತು ಹಿಂಸಾವೃತ್ತಿಯಲ್ಲಿ ನಿರತನಾಗಿರಲು ಪತ್ನೀಸಮೇತನಾದ ನಿನಗೆ ಭೂಲೋಕದಲ್ಲಿ ಈ ಪಾಪಜೀವನದಲ್ಲಿಯೇ ಅನೇಕ ವರ್ಷಗಳು ಕಳೆದುಹೋದುವು.

೬೨–೬೩. ಒಂದಾನೊಂದು ದಿವಸ ಮುನಿವರ್ಯನಾದ ದೇವಶರ್ಮನೆಂಬ ಬ್ರಾಹ್ಮಣೋತ್ತಮನು ಮಾರ್ಗವನ್ನು ಕಾಣದವನಾಗಿ ದಿಕ್ಕು ವಿದಿಕ್ಕುಗಳನ್ನೇ ತಿಳಿಯದೆ ಕಾಡಿನಲ್ಲಿ ಸಂಚರಿಸುತ್ತಿದ್ದನು. ಅತ್ಯಂತ ಪ್ರಬಲಗಳಾದ ಹಸಿವು ನೀರಡಿಕೆಗಳಿಂದ ಪೀಡಿತನಾಗಿ ಮಧ್ಯಾಹ್ನದ ಸೂರ್ಯನು ನೆತ್ತಿಯನ್ನು ಸುಡುತ್ತಿರಲು ಆ ಬ್ರಾಹ್ಮಣನು ಮಾರ್ಗಭ್ರಷ್ಟನಾಗಿ ವನಮಧ್ಯದಲ್ಲಿ ಬಿದ್ದಿದ್ದನು.

೬೪. ಎಲೈ ಭೂಪಾಲಕನೆ! ದುಃಖದಲ್ಲಿ ಸಿಕ್ಕಿದವನೂ ದಾರಿಗಾಣದವನೂ ವೃದ್ಧನೂ ಆದ ಬ್ರಾಹ್ಮಣನನ್ನು ಕಂಡು ನಿನ್ನಲ್ಲಿ ಅನುಕಂಪವುಂಟಾಯಿತು. ನೀನು ಆತನ ಕೈಯನ್ನು ಹಿಡಿದುಕೊಂಡೆ.

ಉತ್ಥಾಪ್ಯ ಪತಿತಂ ಭೂಮೌ ತ್ವಯೋಕ್ತಂ ಹಿ ತದಾ ನೃಪ ।
ಪ್ರಸಾದಂ ಕುರು ವಿಪ್ರರ್ಷೇ ಆಗಚ್ಛ ತ್ವಂ ಮಮಾಶ್ರಮಂ ॥ ೬೫ ॥
ಜಲಪೂರ್ಣಂ ತಡಾಗಂ ಚ ಪದ್ಮಿನೀಖಂಡಮಂಡಿತಂ ।
ವೃಕ್ಷೈರ್ಮನೋಹರೈರ್ಯುಕ್ತಂ ಫಲೈಃ ಪುಷ್ಪೈರ್ಮನೋರಮೈಃ ॥೬೬॥
ಸ್ನಾತ್ವಾ ಸುಶೀತಲೇ ತೋಯೇ ಕೃತ್ವಾ ಕರ್ಮ ಚ ನೈತಿಕಂ ।
ಕುರು ವಿಪ್ರ ಫಲಾಹಾರಂ ಪಿಬ ವಾರಿ ಸುಶೀತಲಂ ॥ ೬೭ ॥
ಸುಖೇನ ಕುರು ವಿಶ್ರಾಮಂ ಮಯಾ ಸಂರಕ್ಷಿತಃ ಸ್ವಯಂ ।
ವಿಪ್ರೇಂದ್ರ ತೃಪ್ತಿಪರ್ಯಂತಂ ವಸ ತ್ವಂ ಚ ಮಮಾಶ್ರಮೇ ॥ ೬೮ ॥
ಉತ್ತಿಷ್ಠ ಚ ದ್ವಿಜಶ್ರೇಷ್ಠ ಪ್ರಸಾದಂ ಕರ್ತುಮರ್ಹಸಿ ।
ಲಬ್ಧಸಂಜ್ಞಸ್ತದಾ ವಿಪ್ರಃ ಶ್ರುತ್ವಾ ಶೂದ್ರಸ್ಯ ಭಾಷಿತಂ ॥ ೬೯ ॥
ಕರೇ ಜಗ್ರಾಹ ತಂ ಶೂದ್ರಂ ಗತೋ ಯತ್ರ ಜಲಾಶಯಃ ।
ಉಪವಿಷ್ಟೋ ಮಹಾಬಾಹೋ ಛಾಯಾಮಾಶ್ರಿತ್ಯ ತತ್ತಟೇ ॥ ೭೦ ॥

೬೫. ಆಗ ನೀನು ಭೂಮಿಯಲ್ಲಿ ಬಿದ್ದಿದ್ದ ಆತನನ್ನು ಮೇಲಕ್ಕೆಬ್ಬಿಸಿ ಇಂತೆಂದು ಹೇಳಿದೆ. "ಎಲೈ ಬ್ರಹ್ಮರ್ಷಿಯೆ! ನನ್ನಲ್ಲಿ ಅನುಗ್ರಹವನ್ನುಮಾಡು. ನೀನು ನನ್ನ ಆಶ್ರಮಕ್ಕೆ ದಯಮಾಡಿ ಬಾ.

೬೬. ಆ ಆಶ್ರಮವು ನೀರಿನಿಂದ ತುಂಬಿ ಕಮಲವೃಂದದಿಂದ ಶೋಭಿಸುತ್ತಿರುವ ತಟಾಕವುಳ್ಳದುದಾಗಿ ಮನೋಹರಗಳಾದ ವೃಕ್ಷಗಳಿಂದಲೂ, ಫಲಗಳಿಂದಲೂ ಮನೋರಮವಾದ ಪುಷ್ಪಾದಿಗಳಿಂದಲೂ ರಂಜಿಸುತ್ತಿರುವುದು.

೬೭. ಎಲೈ ಬ್ರಾಹ್ಮಣನೆ! ಆ ತಟಾಕದ ತಂಪಾದ ನೀರಿನಲ್ಲಿ ಸ್ನಾನವನ್ನು ಮಾಡಿ ನಿನ್ನ ನಿತ್ಯಕರ್ಮವನ್ನು ನೆರವೇರಿಸಿಕೊಂಡು ನಾವು ಕೊಡುವ ಹಲವು ಫಲಗಳನ್ನು ತಿಂದು ಶೀತಲವಾದ ನೀರನ್ನು ಪಾನಮಾಡು.

೬೮. ಓ ಬ್ರಾಹ್ಮಣಶ್ರೇಷ್ಠನೆ! ನನ್ನಿಂದ ರಕ್ಷಿಸಲ್ಪಟ್ಟವನಾಗಿ ನೀನು ಸುಖವಾದ ವಿಶ್ರಾಂತಿಯನ್ನು ಪಡೆಯುವವನಾಗು. ನಿನ್ನ ಮನಸ್ತೃಪ್ತಿಯಾಗುವವರೆಗೂ ನನ್ನ ಆಶ್ರಮದಲ್ಲಿಯೇ ವಾಸಮಾಡಿಕೊಂಡಿರು.

೬೯. ಎಲೈ ದ್ವಿಜೋತ್ತಮನೇ! ಇನ್ನು ಏಳು. ನಮ್ಮಲ್ಲಿ ಅನುಗ್ರಹವನ್ನು ಮಾಡಲು ನೀನೇ ಅರ್ಹನಾಗಿರುವೆ." ಆಗ ಶೂದ್ರನ ಆ ಮಾತುಗಳನ್ನು ಕೇಳಿ ಬ್ರಾಹ್ಮಣನು ಮೂರ್ಛೆಯಿಂದ ಎಚ್ಚತ್ತನು.

೭೦. ಬಳಿಕ ಆ ಶೂದ್ರನ ಕೈಯನ್ನು ಹಿಡಿದುಕೊಂಡು ಮೆಲ್ಲಗೆ ಸರೋವರವಿದ್ದಲ್ಲಿಗೆ ಬಂದು ಸೇರಿದನು. ಎಲೈ ಮಹಾಬಾಹುವೆ! ಆಗಲಾತನು ಅದರ ತೀರದಲ್ಲಿಯೇ ಒಂದು ಮರದ ನೆರಳನ್ನು ಆಶ್ರಯಿಸಿಕೊಂಡು ಕುಳಿತನು.

ಸ್ನಾನಂ ಚಕಾರ ವಿಧಿವತ್ ಪೂಜಯಾಮಾಸ ಕೇಶವಂ ।
ತರ್ಪಯಿತ್ವಾ ಪಿತೄನ್ ದೇವಾನ್ ಪಪೌ ನೀರಂ ಸುಶೀತಲಂ ॥ ೭೧ ॥
ವಿಶ್ರಾಂತೋ ವೃಕ್ಷಮೂಲೇಽಭೂತ್ ದೇವಶರ್ಮಾ ದ್ವಿಜೋತ್ತಮಃ ।
ಸಾಷ್ಟಾಂಗಂ ಮುನಯೇ ಕೃತ್ವಾ ನಮಸ್ಕಾರಂ ಸಹ ಸ್ತ್ರಿಯಾ ॥ ೭೨ ॥
ಶೂದ್ರಸ್ತು ಪರಯಾ ಭಕ್ತ್ಯಾ ಪ್ರೋವಾಚ ಮುನಿಸನ್ನಿಧೌ ।
ಆವಯೋಸ್ತ್ರರಣಾರ್ಥಾಯ ಅತಿಥಿಸ್ತ್ವಂ ಸಮಾಗತಃ ॥ ೭೩ ॥
ದರ್ಶನಾತ್ತವ ವಿಪ್ರರ್ಷೇ ಜಾತಃ ಪಾಪಸ್ಯ ಸಂಕ್ಷಯಃ ।
ಪ್ರಿಯೇ ಫಲಾನಿ ಸ್ವಾದೂನಿ ಪ್ರಯಚ್ಛಾಸ್ಮೈ ದ್ವಿಜಾತಯೇ ।
ಮೃದೂನಿ ರಸಯುಕ್ತಾನಿ ಸುಪಕ್ವಾನಿ ಪ್ರಿಯಾಣಿ ಚ ॥ ೭೪ ॥

ಬ್ರಾಹ್ಮಣ ಉವಾಚ :—

ತ್ವಾಮಹಂ ನೈವ ಜಾನಾಮಿ ಸ್ವಜಾತಿಂ ಕಥಯಸ್ವ ಮೇ ।
ನಾಜ್ಞಾತಸ್ಯ ಹಿ ಭೋಕ್ತವ್ಯಂ ಬ್ರಾಹ್ಮಣಸ್ಯಾಪಿ ಪುತ್ರಕ ॥ ೭೫ ॥

೭೧. ಕೆಲವು ಕಾಲದ ಮೇಲೆ ಆತನು ಸ್ನಾನವನ್ನು ಮಾಡಿಕೊಂಡು ವಿಧಿ ವಿಹಿತಕ್ರಮದಿಂದ ಶ್ರೀಮನ್ನಾರಾಯಣನ ಪೂಜೆಯನ್ನು ಮುಗಿಸಿದನು. ದೇವತೆಗಳಿಗೂ, ಪಿತೃಗಳಿಗೂ ತರ್ಪಣಗಳನ್ನು ಕೊಟ್ಟು ತಂಪಾದ ಆ ಕೊಳದ ನೀರನ್ನು ಬಳಿಕ ಕುಡಿದನು.

೭೨–೭೩. ಬ್ರಾಹ್ಮಣೋತ್ತಮನಾದ ಆ ದೇವಶರ್ಮನು ಒಂದಾನೊಂದು ಮರದಡಿಯಲ್ಲಿ ವಿಶ್ರಾಂತಿಯನ್ನು ತೆಗೆದುಕೊಳ್ಳುತ್ತಿರಲು ಶೂದ್ರನು ಆ ಮುನಿಗೆ ಸಾಷ್ಟಾಂಗನಮಸ್ಕಾರವನ್ನುಮಾಡಿ ಅತ್ಯಂತ ಭಕ್ತಿಯುಕ್ತನಾಗಿ ಪತ್ನೀಸಮೇತನಾಗಿ ಆತನ ಸನ್ನಿಧಿಯಲ್ಲಿ ಹೇಳತೊಡಗಿದನು. "ನಮ್ಮಿಬ್ಬರನ್ನು ಉದ್ಧಾರ ಮಾಡುವುದಕ್ಕಾಗಿಯೇ ಅತಿಥಿಯಾದ ನೀನು ನಮ್ಮ ಮನೆಗೆ ಬಂದಿರುವೆ.

೭೪. ಎಲೈ ಬ್ರಹ್ಮರ್ಷಿಯೆ! ನಿನ್ನ ದರ್ಶನ ಮಾತ್ರದಿಂದಲೇ ನಮ್ಮ ಪಾಪಗಳೆಲ್ಲವೂ ನಾಶವನ್ನು ಹೊಂದಿದುವು. ಎಲೌ ಪ್ರಿಯಪತ್ನಿಯೆ! ರುಚಿಕರಗಳೂ, ಮೃದುಗಳೂ, ರಸಯುಕ್ತಗಳೂ, ಅಭೀಪ್ಸಿತಗಳೂ ಆದ ಫಲಗಳನ್ನು ಈ ಬ್ರಾಹ್ಮಣೋತ್ತಮನಿಗೆ ತಂದೊಪ್ಪಿಸು."

೭೫. ಬ್ರಾಹ್ಮಣನು ಹೇಳುತ್ತಾನೆ:— "ಅಯ್ಯಾ! ನಿನ್ನನ್ನು ನಾನು ಬಲ್ಲವನಲ್ಲ. ಆದುದರಿಂದ ನಿನ್ನ ಕುಲಗೋತ್ರಾದಿ ವಿಷಯಗಳನ್ನು ನನಗೆ ಹೇಳುವವನಾಗು. ಮಗನೆ! ಕುಲಗೋತ್ರಗಳು ತಿಳಿಯದ ಬ್ರಾಹ್ಮಣನಲ್ಲಿಯೂ ಭೋಜನವನ್ನು ಮಾಡಬಾರದೆಂದು ಹೇಳಲ್ಪಟ್ಟಿರುವುದು."

ಶೂದ್ರ ಉವಾಚ :-

ಶೂದ್ರೋಽಹಂ ದ್ವಿಜಶಾರ್ದೂಲ ನ ಕಾರ್ಯಃ ಸಂಶಯಸ್ತ್ವಯಾ ।
ಆತ್ಮಜೈರ್ದುರ್ಜನೈರ್ವಿಪ್ರ ಪರಿತ್ಯಕ್ತಃ ಸ್ವಬಂಧುಭಿಃ ॥ ೭೬ ॥
ತಯೋಸ್ಸಂವದತೋರೇವಂ ಶೂದ್ರಪತ್ನ್ಯಾ ಫಲಾನಿ ಚ ।
ದತ್ತಾನಿ ತಸ್ಮೈ ವಿಪ್ರಾಯ ತೇನ ಭುಕ್ತಾನಿ ತಾನಿ ವೈ ॥ ೭೭ ॥
ಅಭೂತ್ಪ್ರೀತಮನಾ ವಿಪ್ರಃ ಪೀತ್ವಾ ನೀರಂ ಸುಶೀತಲಂ ।
ಸುಖಂ ಸಂಪ್ರಾಪ್ಯ ಸ ಮುನಿಃ ವಿಶ್ರಾಂತಸ್ತರುಮೂಲಕೇ ॥ ೭೮ ॥
ಸ ಚ ಶೂದ್ರಃ ಸಪತ್ನೀಕೋ ಭುಕ್ತ್ವಾ ಚ ಪುನರಾಗತಃ ।
ಸ್ವಾಗತಂ ತೇ ಮುನಿಶ್ರೇಷ್ಠ ಕುತಸ್ತ್ವಮಿಹ ಚಾಗತಃ ॥ ೭೯ ॥
ಶೂನ್ಯಾಟವೀಂ ದ್ವಿಜಶ್ರೇಷ್ಠ ದುಷ್ಟಸತ್ತ್ವಭಯಾಕುಲಾಂ ।
ನಿರ್ಮನುಷ್ಯಾಂ ದುಃಖಯುಕ್ತಾಂ ದಿವಾರಾತ್ರಂ ಭಯಾನಕಾಂ ॥ ೮೦ ॥

ಬ್ರಾಹ್ಮಣ ಉವಾಚ :

ಬ್ರಾಹ್ಮಣೋಽಹಂ ಮಹಾಭಾಗ ಪ್ರಯಾಗಗಮನಂ ಪ್ರತಿ ।
ಅಹಮಜ್ಞಾತಮಾರ್ಗೇಣ ಪ್ರವಿಷ್ಟೋ ದಾರುಣೇ ವನೇ ॥ ೮೧ ॥

---

೭೬. ಶೂದ್ರನು ಹೇಳುತ್ತಾನೆ:—“ಬ್ರಾಹ್ಮಣೋತ್ತಮ! ನಾನು ಶೂದ್ರ ಜಾತಿಯವನು. ನನ್ನ ವಿಷಯದಲ್ಲಿ ನೀನು ಸಂದೇಹಪಡಬೇಕಾದ ಪ್ರಮೇಯ ವಿಲ್ಲ. ನಾನು ದುರ್ಜನರಾದ ಮಕ್ಕಳಿಂದಲೂ ಬಾಂಧವರಿಂದಲೂ ತ್ಯಜಿಸಲ್ಪ ಟ್ಟಿರುವೆನು.”

೭೭. ಇವರಿಬ್ಬರೂ ಇಂತು ಸಂಭಾಷಣೆಯನ್ನು ಮಾಡುತ್ತಿರಲು ಶೂದ್ರ ಪತ್ನಿಯು ಹಲವು ಹಣ್ಣುಗಳನ್ನು ತಂದು ಆ ಬ್ರಾಹ್ಮಣನಿಗೆ ಅರ್ಪಿಸಿದಳು. ಆತನೂ ಅವುಗಳನ್ನು ಭಕ್ಷಿಸಿದನು.

೭೮. ಬಳಿಕ ತಂಪಾದ ತಟಾಕೋದಕವನ್ನು ಕುಡಿದು ಆ ಬ್ರಾಹ್ಮಣನು ಸುಪ್ರೀತಮನಸ್ಕನಾದನು. ದೇಹಸೌಖ್ಯವನ್ನು ಹೊಂದಿದವನಾಗಿ ಒಂದು ಮರದ ನೆರಳಿನಲ್ಲಿ ವಿಶ್ರಾಂತಿಯನ್ನು ಹೊಂದಿದನು.

೭೯-೮೦. ಆ ಶೂದ್ರನೂ ಪತ್ನಿಯೊಡನೆ ಭೋಜನವನ್ನು ಮುಗಿಸಿಕೊಂಡು ಮರಳಿ ಬ್ರಾಹ್ಮಣನಿದ್ದಲ್ಲಿಗೆ ಬಂದನು. “ಎಲೈ ಮುನಿಶ್ರೇಷ್ಠನೆ! ನಿನಗೆ ಸುಸ್ವಾಗತ ವಾಗಲಿ. ನೀನು ಈ ಜನಶೂನ್ಯವಾದ ಅರಣ್ಯದಲ್ಲಿ ಯಾವ ಕಾರ್ಯಗೌರವ ದಿಂದ ಬರುವವನಾದೆ? ಈ ಘೋರಕಾನನವು ದುಷ್ಟಮೃಗಗಳಿಂದ ಭಯವ ನ್ನುಂಟುಮಾಡುವುದೂ, ಜನರಹಿತವಾದುದೂ, ಕ್ಲೇಶದಾಯಕವಾದುದೂ, ಅಹೋರಾತ್ರಿಗಳಲ್ಲಿಯೂ ಭಯಂಕರವಾದುದೂ ಆಗಿರುವುದು.”

೮೧. ಬ್ರಾಹ್ಮಣನು ಹೇಳುತ್ತಾನೆ:—“ಮಹಾತ್ಮನೆ! ನಾನೊಬ್ಬ

ಮಮ ಪುಣ್ಯಪ್ರಭಾವೇಣ ಜಾತೋಽಸಿ ವರಬಾಂಧವಃ ।
ಜೀವಿತಂ ಮೇ ತ್ವಯಾ ದತ್ತಂ ಬ್ರೂಹಿ ಕಿಂ ಕರವಾಣಿ ತೇ ॥ ೮೨ ॥
ಭವಾನಪಿ ಕುತಃ ಪ್ರಾಪ್ತೋ ನಿರ್ಮನುಷ್ಯೇ ವನೇ ಖಲು ।
ಕೋ ಭವಾನ್ ಕಾರಣಂ ಕಿಂ ಸ್ವಿತ್ಕಥಯಸ್ವ ಮಮಾಗ್ರತಃ ॥ ೮೩ ॥

ಶೂದ್ರ ಉವಾಚ:—

ವಿದರ್ಭನಗರೀರಾಜ್ಞಾ ಭೀಮಸೇನೇನ ರಕ್ಷಿತಾ ।
ವಾಸೋ ಮಮ ಮಹಾರಾಷ್ಟ್ರೇ ಶೂದ್ರೋಽಹಂ ಪಾಪಲಂಪಟಃ ॥ ೮೪ ॥
ಸ್ವಕರ್ಮವಿಹಿತೋ ಧರ್ಮೋ ಮಯಾ ತ್ಯಕ್ತೋ ದ್ವಿಜೋತ್ತಮ ।
ತ್ಯಕ್ತೋಽಹಂ ಬಂಧುವರ್ಗೇಣ ತತೋಽಹಂ ವನಮಾಗತಃ ॥ ೮೫ ॥
ಕೃತ್ವಾ ಜೀವವಧಂ ನಿತ್ಯಂ ಜೀವೇಯಂ ಭಾರ್ಯಯಾ ಸಹ ।
ಸಾಂಪ್ರತಂ ಪಾತಕಾತ್ ಸಮ್ಯಕ್ ನಿರ್ವಿಣ್ಣೋಽಸ್ಮಿ ಮಹಾಮುನೇ ॥ ೮೬ ॥

ಬ್ರಾಹ್ಮಣನು. ಪ್ರಯಾಗಕ್ಷೇತ್ರಕ್ಕೆ ಯಾತ್ರೆಯನ್ನು ಮಾಡಲು ಹೊರಟು ನಾನು ಮಾರ್ಗವನ್ನು ತಿಳಿಯಲಾರದೆ ಭಯಂಕರವಾದ ಈ ಅರಣ್ಯವನ್ನು ಪ್ರವೇಶ ಮಾಡಿದೆನು.

೮೨. ನನ್ನ ಪೂರ್ವಪುಣ್ಯದ ಫಲವಾಗಿಯೇ ನೀನು ಈಗ ನನಗೆ ಉತ್ತಮ ಬಂಧುವಾಗಿರುವೆ. ನೀನು ನನಗೆ ಪುನರ್ಜನ್ಮವನ್ನೇ ಕೊಟ್ಟಿರುವೆಯಾದುದರಿಂದ ನಿನಗಾಗಿ ನಾನು ಯಾವುದನ್ನು ಮಾಡಲಿ?

೮೩. ನೀನೂ ಸಹ ನಿರ್ಮಾನುಷವಾದ ಈ ಅರಣ್ಯವನ್ನು ಯಾವ ಕಾರಣದಿಂದ ಸೇರುವವನಾದೆ? ನೀನು ಯಾರೆಂಬ ವಿಚಾರವೆಲ್ಲವನ್ನೂ ನನ್ನೆದುರಿನಲ್ಲಿ ವಿಸ್ತಾರವಾಗಿ ತಿಳಿಸುವವನಾಗು.''

೮೪. ಶೂದ್ರನು ಹೇಳುತ್ತಾನೆ:—''ಭೀಮಸೇನ ಮಹಾರಾಜನಿಂದ ಪಾಲಿಸಲ್ಪಡುತ್ತಿರುವ ಮಹಾರಾಷ್ಟ್ರದೇಶದ ವಿದರ್ಭಪಟ್ಟಣವೇ ನನ್ನ ವಾಸಸ್ಥಳವು. ನಾನು ಪಾಪಕೃತ್ಯಗಳಲ್ಲಿಯೇ ನಿರತನಾದ ಒಬ್ಬ ಶೂದ್ರನು.

೮೫. ಎಲೈ ಬ್ರಾಹ್ಮಣೋತ್ತಮನೆ! ನನ್ನಿಂದ ವರ್ಣಾಶ್ರಮೋಚಿತವಾದ ಧರ್ಮವು ಪರಿತ್ಯಕ್ತವಾಯಿತು. ನನ್ನ ಬಂಧುಗಳೆಲ್ಲರೂ ನನ್ನನ್ನು ದೂರಗೊಳಿಸಿದರು. ಆದುದರಿಂದ ನಾನು ಈ ಅರಣ್ಯವನ್ನು ಸೇರಲು ನಿಶ್ಚಯವನ್ನು ಮಾಡಿದೆನು.

೮೬. ಎಲೈ ಮಹಾಮುನಿಯೆ! ಇಲ್ಲಿರುವ ಪ್ರಾಣಿಗಳನ್ನು ಕೊಂದು ನಾನು ಹೆಂಡತಿಯೊಡನೆ ಜೀವನವನ್ನು ಸಾಗಿಸುತ್ತಿರುವೆನು. ಈಗ ಆ ಪಾಪರಾಶಿಯನ್ನು ಕಂಡು ದಿಗ್ಭ್ರಾಂತನಾಗಿರುವೆನು.

ಕುರುಷ್ವಾನುಗ್ರಹಂ ಕಿಂಚಿತ್ ಪಾಪಯುಕ್ತಸ್ಯ ಮೇ ಪ್ರಭೋ ।
ಮಮ ಪುಣ್ಯಪ್ರಭಾವೇಣ ಆಗತಸ್ತ್ವಂ ದ್ವಿಜೋತ್ತಮ ॥ ೮೭ ॥
ನ ಪಶ್ಯಾಮಿ ಯಥಾ ಸೌರಿಂ ಪತ್ನ್ಯಾ ಸಹ ಮಹಾಮುನೇ ।
ಉಪದೇಶಪ್ರಭಾವೇಣ ಪ್ರಸಾದಂ ಕರ್ತುಮರ್ಹಸಿ ॥ ೮೮ ॥
ನಾನ್ಯದಿಚ್ಛಾಮ್ಯಹಂ ಕಿಂಚಿತ್ ಮುಕ್ತ್ವಾ ದೇವಂ ಜನಾರ್ದನಂ ।
ಕುರುಷ್ವಾನುಗ್ರಹಂ ಮೇಽದ್ಯ ಪ್ರಸಾದಂ ಋಷಿಸತ್ತಮ ॥ ೮೯ ॥

ಭಾರದ್ವಾಜ ಉವಾಚ :—

ಇತಿ ತೇನ ಸಮಾಪೃಷ್ಟೋ ದೇವಶರ್ಮಾ ದ್ವಿಜಾಗ್ರಣೀಃ ।
ಶೂದ್ರೇಣ ಪರಯಾ ಭಕ್ತ್ಯಾ ಪ್ರಹಸನ್ ವಾಕ್ಯಮಬ್ರವೀತ್ ॥ ೯೦ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ದ್ವಿತೀಯೇ ವೈಷ್ಣವಖಂಡೇ ಮಾರ್ಗಶೀರ್ಷಮಾಹಾತ್ಮ್ಯೇ ಬ್ರಹ್ಮವಿಷ್ಣುಸಂವಾದೇ "ಏಕಾದಶ್ಯಾಖ್ಯಾನಕಥನಂ" ನಾಮ ಏಕಾದಶೋಽಧ್ಯಾಯಃ

---

೮೭. ದ್ವಿಜೋತ್ತಮನೆ! ಪಾಪಯುಕ್ತನಾದ ನನ್ನಲ್ಲಿ ಗುರುವಾದ ನೀನು ಸ್ವಲ್ಪ ಅನುಗ್ರಹವನ್ನು ಮಾಡು. ನನ್ನ ಯತ್ಕಿಂಚಿತ್ತಾದ ಪುಣ್ಯದ ಫಲವಾಗಿಯೇ ನೀನು ನಮ್ಮಲ್ಲಿಗೆ ಬಂದಿರುವೆ.

೮೮. ಮುನಿವರ್ಯನೆ! ಹೆಂಡತಿಯೊಡಗೂಡಿದ ನಾನು ಯಾವ ಉಪದೇಶದ ಪ್ರಭಾವದಿಂದ ಯಮನನ್ನು ಕಾಣದಿರುವೆನೊ, ಅಂತಹ ಮಂತ್ರೋಪದೇಶವನ್ನು ಪ್ರಸನ್ನನಾದ ನೀನು ನನಗೆ ಮಾಡಬೇಕು.

೮೯. ಈಗ ನಾನು ದೇವದೇವನಾದ ಜನಾರ್ದನನನ್ನು ಬಿಟ್ಟು ಮತ್ತೆ ಯಾವುದನ್ನೂ ಅಪೇಕ್ಷಿಸುವುದಿಲ್ಲ. ಎಲೈ ಋಷಿವರ್ಯನೆ! ನನ್ನಲ್ಲಿ ಅನುಗ್ರಹವನ್ನೂ ಉಪದೇಶವನ್ನೂ ಮಾಡುವವನಾಗು."

೯೦. ಭರದ್ವಾಜನು ಹೇಳುತ್ತಾನೆ:—ಇಂತು ಅತ್ಯಂತ ಭಕ್ತಿಯುಕ್ತನಾದ ಶೂದ್ರನಿಂದ ಪ್ರಶ್ನೆಮಾಡಲ್ಪಟ್ಟು ಬ್ರಾಹ್ಮಣಾಗ್ರೇಸರನಾದ ಆ ದೇವಶರ್ಮನು ನಗುತ್ತ ಹೇಳತೊಡಗಿದನು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀಸ್ಕಾಂದಮಹಾಪುರಾಣದ ಎರಡನೆಯ ವೈಷ್ಣವಖಂಡದ ಮಾರ್ಗಶೀರ್ಷಮಾಹಾತ್ಮ್ಯದ ಬ್ರಹ್ಮವಿಷ್ಣುಸಂವಾದದಲ್ಲಿ "ಏಕಾದಶ್ಯಾಖ್ಯಾನಕಥನ"ವೆಂಬ ಹನ್ನೊಂದನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

# ಅಥ ದ್ವಾದಶೋಽಧ್ಯಾಯಃ

## ಅಖಂಡೈಕಾದಶೀವ್ರತಕಥನಂ

ದೇವಶರ್ಮೋವಾಚ :—

ತವೇದೃಶೀ ಮತಿರ್ಜಾತಾ ಸಹಸಾ ಕೇಶವೋಪರಿ ।
ಏತಸ್ಮಾನ್ಮೇ ಗತಂ ಪಾಪಂ ಪೂರ್ವಜನ್ಮಶತೋದ್ಭವಂ ॥ ೧ ॥
ವಿನಾ ವ್ರತೈರ್ವಿನಾ ತೀರ್ಥೈರ್ಮುಕ್ತಸ್ತ್ವಂ ಪಾಪಕೋಟಿಭಿಃ ।
ಮಮಾತಿಥ್ಯೇನ ಭಕ್ತ್ಯಾ ಚ ಜಾತಂ ತವ ಹರೇಃ ಪದಂ ॥ ೨ ॥
ತೇನ ಪುಣ್ಯಪ್ರಭಾವೇಣ ಮತಿರ್ಜಾತಾ ತವೇದೃಶೀ ।
ಧ್ಯಾತ್ವಾ ಸಂಚಿಂತ್ಯ ಮನಸಾ ಜ್ಞಾತಂ ಪೂರ್ವವಿಚೇಷ್ಟಿತಂ ॥ ೩ ॥
ಪೂರ್ವಜನ್ಮನಿ ವಿಪ್ರಸ್ತ್ವಮವಂತ್ಯಾಂ ಧರ್ಮತತ್ಪರಃ ।
ಸದಾಧ್ಯಯನಶೀಲಶ್ಚ ಸುಶೀಲಶ್ಚ ಸದಾ ವ್ರತೀ ॥ ೪ ॥
ಏಕಾತು ದ್ವಾದಶೀ ವಿಷ್ಣೋಃ ಕೃತಾ ಚ ದಶಮೀಯುತಾ ।
ತತ್ಪಾಪಸ್ಯ ಪ್ರಭಾವೇಣ ಸಮಸ್ತಂ ಸುಕೃತಂ ಗತಂ ॥ ೫ ॥

---

## ಕನ್ನಡದ ಅನುವಾದ

### ಅಖಂಡೈಕಾದಶೀವ್ರತಕಥನ

೧. ದೇವಶರ್ಮನು ಹೇಳುತ್ತಾನೆ:—" ನಿನಗೆ ಕೇಶವನಲ್ಲಿ ಈ ವಿಧವಾದ ಭಕ್ತಿಯು ಅಕಸ್ಮಾತ್ತಾಗಿ ಸಂಭವಿಸಿರುವುದು. ಇದರಿಂದಲೇ ನನ್ನ ಹಿಂದಿನ ನೂರು ಜನ್ಮಗಳಲ್ಲಿ ಮಾಡಿದ ಪಾಪವೆಲ್ಲವೂ ನಾಶವಾಯಿತು.

೨. ವ್ರತಾಚಾರಗಳಿಲ್ಲದೆ, ತೀರ್ಥಸೇವನೆಗಳಿಲ್ಲದೆ, ನೀನು ಕೋಟಿಪಾಪಗಳಿಂದ ಬಿಡುಗಡೆಯನ್ನು ಹೊಂದಿರುವೆ. ನಿನ್ನ ಆತಿಥ್ಯದಿಂದಲೂ ಭಕ್ತಿಯಿಂದಲೂ ನಿನಗೆ ಶ್ರೀಹರಿಯ ನಿಲಯವಾದ ವೈಕುಂಠವು ಲಭಿಸಿರುವುದು.

೩. ಆ ಪುಣ್ಯದ ಪ್ರಭಾವದಿಂದಲೇ ನಿನಗೆ ಈ ವಿಧವಾದ ಸದ್ಬುದ್ಧಿಯು ಉಂಟಾಗಿರುವುದು. ಧ್ಯಾನಾವಸ್ಥಿತವಾದ ಮನಸ್ಸಿನಿಂದ ಯೋಚಿಸುತ್ತಿರಲು ನನಗೆ ನಿನ್ನ ಪೂರ್ವಜನ್ಮದ ವಿಚಾರವೆಲ್ಲವೂ ತಿಳಿಯಿತು.

೪. ಮುನ್ನಿನ ಜನ್ಮದಲ್ಲಿ ನೀನು ಅವಂತೀ ನಗರದಲ್ಲಿ ಧರ್ಮಕಾರ್ಯನಿರತನೂ, ಯಾವಾಗಲೂ ಅಧ್ಯಯನಪರನೂ, ಸೌಶೀಲ್ಯವಂತನೂ, ವ್ರತೋಪವಾಸಗಳನ್ನು ಮಾಡುವವನೂ ಆದ ಬ್ರಾಹ್ಮಣನಾಗಿ ಜನಿಸಿದೆ.

೫. ನೀನು ಒಮ್ಮೆ ದಶಮೀಯುಕ್ತವಾಗಿ ಅವಮಾಹೈಕಾದಶಿಯೊಡನಿದ್ದ ದ್ವಾದಶಿಯನ್ನು ಆಚರಿಸಿದೆ. ಆ ಪಾಪದ ಪ್ರಭಾವದಿಂದ ನಿನ್ನ ಸಮಸ್ತಪುಣ್ಯವೂ ನಾಶವನ್ನು ಹೊಂದಿತು.

ಸರ್ವಂ ತದ್ವಿಫಲಂ ಜಾತಂ ಯಥಾ ಶೂದ್ರಾಪತಿರ್ದ್ವಿಜಃ ।
ಬಹುವರ್ಷಸಹಸ್ರಾಣಿ ಪ್ರಾಪ್ತಾ ನರಕಯಾತನಾಃ ॥ ೬ ॥
ತಸ್ಮಾದೇವಂ ತ್ವಯಾ ಪೂರ್ವಂ ಕೃತಂ ದುಷ್ಟಂ ಚಿರಂ ಬಹು ।
ಕೃತಾ ತು ದಶಮೀಮಿಶ್ರಾ ತಿಥಿರ್ವಿಷ್ಣೋರ್ಮಹಾತ್ಮನಃ ॥ ೭ ॥
ತೇನ ಶೂದ್ರೋ ಭವಾನ್ ಜಾತಃ ಪಾಪೇ ತವ ಮತಿಸ್ತಥಾ ।
ಧರ್ಮೇ ನ ರಮತೇ ಚಿತ್ತಂ ದಶಮೀವೇಧದೂಷಿತಂ ॥ ೮ ॥
ವಿದರ್ಭನಗರೇ ವತ್ಸ ಅಸ್ತಿ ತೇ ಪುತ್ರಿಕಾಸುತಃ ।
ಕೃತಂ ತೇನ ವಿಧಾನೋಕ್ತಂ ಹರೇರೇಕಾದಶೀವ್ರತಂ ॥ ೯ ॥
ಪ್ರದತ್ತಂ ತೇನ ತತ್ಪುಣ್ಯಮಖಂಡೈಕಾದಶೀವ್ರತಂ ।
ಧರ್ಮೋಪರಿ ಮತಿರ್ಜಾತಾ ಜಾತಃ ಪಾಪಸ್ಯ ಸಂಕ್ಷಯಃ ॥ ೧೦ ॥
ತೇನ ಪುಣ್ಯಪ್ರಭಾವೇಣ ಏಕಾದಶ್ಯಾ ವ್ರತೇನ ಚ ।
ದಶಮೀವೇಧಜಂ ಪಾಪಂ ಯಮೇನ ಪರಿಮಾರ್ಜಿತಂ ॥ ೧೧ ॥

೬. ಶೂದ್ರಸ್ತ್ರೀಯಳ ಸಂಪರ್ಕವನ್ನುಮಾಡಿದ ದ್ವಿಜನ ಬ್ರಾಹ್ಮಣ್ಯದಂತೆ ನಿನ್ನ ಸಕಲ ಸತ್ಕರ್ಮವೂ ನಿಷ್ಫಲವಾಗಿ ಪರಿಣಮಿಸಿತು. ಮತ್ತು ಅನೇಕ ಸಾವಿರ ವರ್ಷಗಳವರೆವಿಗೂ ನೀನು ನರಕಯಾತನೆಗಳನ್ನು ಅನುಭವಿಸಿದೆ.

೭. ಈ ರೀತಿಯಾಗಿ ಪೂರ್ವದಲ್ಲಿ ದೀರ್ಘವೂ ದೊಡ್ಡದೂ ಆದ ದುಷ್ಕೃತವು ಮಾಡಲ್ಪಟ್ಟಿತು. ಮಹಾಮಹಿಮನಾದ ವಿಷ್ಣುವಿಗೆ ಪ್ರಿಯವಾದ ದಶಮಿ ಯೊಡನೆ ಸೇರಿದ ದ್ವಾದಶೀ ವ್ರತವನ್ನು ನೀನು ಆಚರಿಸಿದೆ.

೮. ಆದುದರಿಂದಲೇ ನೀನು ಶೂದ್ರನಾಗಿ ಹುಟ್ಟಿದೆ. ಮತ್ತು ನಿನ್ನ ಮನಸ್ಸೂ ಪಾಪಕರ್ಮಗಳಲ್ಲಿಯೇ ಪ್ರವಹಿಸುತ್ತಿರುವುದು. ಆ ದಶಮೀವೇಧೆ ಯಿಂದ ಕಲುಷಿತವಾದ ನಿನ್ನ ಮನಸ್ಸು ಧರ್ಮಕಾರ್ಯಗಳಲ್ಲಿ ಆಸಕ್ತಿಯನ್ನು ತೋರಿಸುವುದಿಲ್ಲ.

೯. ಎಲೈ ವತ್ಸನೆ! ವಿದರ್ಭನಗರದಲ್ಲಿ ನಿನ್ನ ಮಗಳ ಮಗನೊಬ್ಬನು ವಾಸಿಸುತ್ತಿರುವನು. ಆತನು ವಿಧ್ಯುಕ್ತರೀತಿಯಿಂದ ವೈಷ್ಣವೈಕಾದಶಿಯ ವ್ರತವನ್ನು ಮಾಡುತ್ತಿದ್ದನು.

೧೦. ಅವನು ಅಖಂಡೈಕಾದಶಿಯ ಪುಣ್ಯದ ಫಲವನ್ನು ನಿನಗೆ ದಾನವಾಡಿ ದನು. ಆದುದರಿಂದಲೇ ನಿನಗೆ ಧರ್ಮದಲ್ಲಿ ಅಭಿಲಾಷೆಯುಂಟಾಗಿ ಪಾತಕದ ನಾಶವುಂಟಾಯಿತು.

೧೧. ಆ ಪುಣ್ಯದ ಪ್ರಭಾವದಿಂದಲೂ ಏಕಾದಶೀವ್ರತದಿಂದಲೂ ದಶಮೀ ವೇಧೆಯಿಂದುಂಟಾದ ನಿನ್ನ ಪಾಪವು ಯಮನಿಂದ ತೊಡೆದುಹಾಕಲ್ಪಟ್ಟಿತು.

ಇಹ ಜನ್ಮನಿ ಯತ್ಪಾಪಂ ಜನ್ಮಾಯುತಕೃತಾನಿ ಚ ।
ಮಾರ್ಜಿತಾನಿ ಯಮೇನೈವ ಪಾಪಾನಿ ತವ ಸಾಂಪ್ರತಂ ॥ ೧೨ ॥
ತಯೋರ್ವಿವದತೋರೇವಂ ವಿಷ್ವಕ್ಸೇನಸ್ಸಮಾಗತಃ ।
ವರ್ಣಾವರ ಸ್ವಾಗತಂ ತೇ ತುಷ್ಟಸ್ತೇಽಹಂ ಜನಾರ್ದನಃ ॥ ೧೩ ॥
ವಿಪ್ರಸ್ಯಾತಿಥ್ಯಹೇತುತ್ವಾತ್ ಜಾತಃ ಪಾಪಸ್ಯ ಸಂಕ್ಷಯಃ ।
ಪರದತ್ತೇನ ಪುಣ್ಯೇನ ಏಕಾದಶ್ಯಾ ವ್ರತೇನ ಚ ॥ ೧೪ ॥
ದಶಮೀವೇಧಜಂ ಪಾಪಂ ತವ ಶೂದ್ರ ಲಯಂ ಗತಂ ।
ವ್ರತಂ ಕೃತ್ವಾ ದದೌ ಪುಣ್ಯಂ ದೌಹಿತ್ರಸ್ತೇನ ತಾರಿತಃ ॥ ೧೫ ॥
ಪತ್ನ್ಯಾ ಸಹ ಮಹಾಭಾಗ ವೈನತೇಯಂ ಸಮಾರುಹ ।
ಇತ್ಯುಕ್ತ್ವಾ ದೇವದೇವೇನ ವಿಮಾನೇ ಸ್ಥಾಪಿತಸ್ಸದಾ ॥ ೧೬ ॥
ಸ್ವರ್ಗಂಗತಸ್ಸಪತ್ನೀಕಃ ಶೂದ್ರತ್ವೇನ ನೃಪೋತ್ತಮ ।
ದೇವಶರ್ಮಾ ತು ವಿಪ್ರೋ ವೈ ತೀರ್ಥರಾಜಂ ಯಯೌ ಪುನಃ ॥ ೧೭ ॥

೧೨. ಈ ಜನ್ಮದಲ್ಲಿ ಮಾಡಿದ ಪಾಪವೂ ಹಿಂದಿನ ಹತ್ತುಸಾವಿರ ಜನ್ಮಗಳಲ್ಲಿ ಮಾಡಿದ ಪಾಪಗಳೂ ಈ ಕ್ಷಣದಲ್ಲಿಯೇ ಯಮನಿಂದ ಧ್ವಂಸಮಾಡಲ್ಪಟ್ಟುವು.

೧೩. ಅವರಿಬ್ಬರೂ ಇಂತು ಮಾತನಾಡುತ್ತಿರಲು ಅಲ್ಲಿಗೆ ಶ್ರೀಮನ್ನಾರಾಯಣನು ಪ್ರಾಪ್ತನಾದನು. ಮತ್ತು ಹೇಳತೊಡಗಿದನು. ಹೀನಜಾತಿಯ ಭಕ್ತನೆ! ನಿನಗೆ ಸ್ವಾಗತವಾಗಲಿ. ಜನಾರ್ದನನಾದ ನಾನು ನಿನ್ನ ವಿಷಯದಲ್ಲಿ ಸಂತೋಷಗೊಂಡಿರುವೆನು.

೧೪–೧೫. ಈ ಬ್ರಾಹ್ಮಣೋತ್ತಮನಿಗೆ ಆತಿಥ್ಯವನ್ನು ನೀಡಿದುದರಿಂದ ನಿನ್ನ ಪಾಪದ ನಾಶವುಂಟಾಯಿತು. ನಿನ್ನ ಮೊಮ್ಮಗನು ಕೊಟ್ಟ ಏಕಾದಶಿಯ ವ್ರತದ ಪುಣ್ಯದಿಂದ ನೀನು ಮಾಡಿದ ದಶಮೀ ವೇಧೆಯ ವ್ರತದ ಪಾಪವು ನಾಶವಾಯಿತು. ಎಲೈ ಶೂದ್ರನೆ! ನಿನ್ನ ದೌಹಿತ್ರನು ಉತ್ತಮವಾದ ಏಕಾದಶೀವ್ರತವನ್ನುಮಾಡಿ ಅದರ ಪುಣ್ಯವನ್ನು ನಿನಗೆ ಧಾರೆಯೆರೆದನು. ಅದರಿಂದ ನೀನು ಮುಕ್ತನಾದೆ.

೧೬. ಮಹಾತ್ಮನೆ! ನಿನ್ನ ಪತ್ನಿಯೊಡನೆ ಗರುಡವಾಹನವನ್ನೇರುವವನಾಗು. ಇಂತೆಂದು ಪರಮಾತ್ಮನೇ ಆತನನ್ನು ಆಗ ದಿವ್ಯವಿಮಾನದಲ್ಲಿ ಕುಳ್ಳಿರಿಸಿದನು.

೧೭. ಎಲೈ ಮಹಾರಾಜನೆ! ಶೂದ್ರನಾಗಿಯೇ ಆತನು ಪತ್ನಿಯೊಡನೆ ಸ್ವರ್ಗವನ್ನು ಸೇರಿದನು. ಬ್ರಾಹ್ಮಣನಾದ ದೇವಶರ್ಮನು ಮತ್ತೆ ತನ್ನ ತೀರ್ಥಯಾತ್ರೆಯನ್ನು ಮುಂದುವರೆಸಿದನು.

ಏತತ್ತೇ ಸರ್ವಮಾಖ್ಯಾತಂ ಯತ್ತ್ವಯಾ ಪರಿಪೃಚ್ಛಿತಂ ।
ಅಖಂಡೈಕಾದಶೀಪುಣ್ಯಾತ್ ಪ್ರಾಪ್ತಸ್ಯಾತಿಥ್ಯಕಾರಣಾತ್ ।
ವಿಷ್ಣುಭಕ್ತಿಮತೀ ಭಾರ್ಯಾ ರಾಜ್ಯಂ ನಿಹತಕಂಟಕಂ ॥ ೧೮ ॥

ರಾಜೋವಾಚ :—

ಬ್ರಹ್ಮನ್ನಖಂಡ್ಯೈಕಾದಶ್ಯಾ ವಿಧಿಂ ಸಮ್ಯಕ್ ಸಮಾದಿಶ ।
ವಿಷ್ಣೋಸ್ಸಂಪ್ರೀಣನಾರ್ಥಾಯ ಪ್ರಸಾದಂ ಕರ್ತುಮರ್ಹಸಿ ॥ ೧೯ ॥

ಋಷಿರುವಾಚ :—

ಶೃಣುಷ್ವ ನೃಪಶಾರ್ದೂಲ ಏಕಾದಶ್ಯಾ ವಿಧಿಂ ಶುಭಂ ।
ಪುರಾಽಸೀತ್ ಭಗವಾನ್ ವಿಷ್ಣುಃ ನಾರದಾಯ ಯದುಕ್ತವಾನ್ ।
ತತ್ತೇಽಹಂ ಸಂಪ್ರವಕ್ಷ್ಯಾಮಿ ಉದ್ಯಾಪನವಿಧಿಂ ಶುಭಂ ॥ ೨೦ ॥
ಮಾರ್ಗಶೀರ್ಷಾದಿಮಾಸೇಷು ದ್ವಾದಶೀಷು ನರೋತ್ತಮ ।
ವ್ರತಂ ಶುಭಮಿದಂ ಕಾರ್ಯಂ ಅಖಂಡೈಕಾದಶೀವ್ರತಂ ॥ ೨೧ ॥
ದಶಮ್ಯಾಂ ಚೈವ ನಕ್ತಂ ಚ ಏಕಾದಶ್ಯಾಮುಪೋಷಣಂ ।
ದ್ವಾದಶ್ಯಾಮೇಕಭುಕ್ತಂ ಚ ಅಖಂಡಾ ಇತಿ ಕಥ್ಯತೇ ॥ ೨೨ ॥

೧೮. ನೀನು ಪ್ರಶ್ನೆಮಾಡಿದಂತೆ ನಿನ್ನ ಪೂರ್ವಜನ್ಮದ ಚರಿತ್ರೆಯೆಲ್ಲವೂ ನಿರೂಪಿಸಲ್ಪಟ್ಟಿತು. ಇಂತು ಅಖಂಡೈಕಾದಶೀವ್ರತದ ಪುಣ್ಯದಿಂದಲೂ, ಗೃಹಕ್ಕೆ ಪ್ರಾಪ್ತನಾದ ಅತಿಥಿಗೆ ಮಾಡಿದ ಸತ್ಕಾರದಿಂದಲೂ, ನಿನಗೆ ವಿಷ್ಣುಭಕ್ತಿಯುತಳಾದ ಈ ಹೆಂಡತಿಯೂ ನಿಷ್ಕಂಟಕವಾದ ಈ ರಾಷ್ಟ್ರವೂ ಪ್ರಾಪ್ತವಾಗಿರುವುವು.

೧೯. ರಾಜನು ಕೇಳುತ್ತಾನೆ:—ಬ್ರಾಹ್ಮಣಶ್ರೇಷ್ಠನೆ! ಮಹಾವಿಷ್ಣುವಿನ ಸುಪ್ರಸಾದವನ್ನು ಸಂಪಾದಿಸುವುದಕ್ಕಾಗಿ ಮಾಡಬೇಕಾಗಿರುವ ಅಖಂಡೈಕಾದಶಿಯ ವಿಧಿಯನ್ನು ನನಗೆ ಚೆನ್ನಾಗಿ ತಿಳಿಯುವಂತೆ ಹೇಳು. ನನಗೆ ಅನುಗ್ರಹವನ್ನು ಮಾಡಲು ನೀನೇ ಅರ್ಹನಾಗಿರುವೆ.

೨೦. ಭರದ್ವಾಜನು ಹೇಳುತ್ತಾನೆ:—ಎಲೈ ರಾಜಶಾರ್ದೂಲನೆ! ಏಕಾದಶಿ ವ್ರತದ ಪವಿತ್ರವಾದ ವಿಧಿಯನ್ನು ಕೇಳುವವನಾಗು. ಪೂರ್ವದಲ್ಲಿ ಭಗವಂತನಾದ ಮಹಾವಿಷ್ಣುವು ನಾರದಮಹರ್ಷಿಗೆ ಪರಮಪವಿತ್ರವಾದ ಯಾವ ಉದ್ಯಾಪನೆಯ ವಿಧಿಯನ್ನು ನಿರೂಪಿಸಿದನೊ, ಅದನ್ನೇ ನಿನಗೆ ವಿಸ್ತರಿಸುವೆನು.

೨೧. ಮಹಾರಾಜನೆ! ಮಾರ್ಗಶೀರ್ಷವೇ ಮೊದಲಾದ ಮಾಸಗಳ ಪ್ರತಿ ದ್ವಾದಶಿಯಲ್ಲಿಯೂ ಅಖಂಡೈಕಾದಶಿಯೆಂಬ ಈ ಶುಭಪ್ರದವಾದ ವ್ರತವನ್ನಾಚರಿಸಬೇಕು.

೨೨. ದಶಮಿಯ ರಾತ್ರಿಯೂ ಏಕಾದಶಿಯ ಪೂರ್ತಿಯೂ ಉಪವಾಸದಿಂದ

ದಿವಸಸ್ಯಾಷ್ಟಮೇ ಭಾಗೇ ಮಂದೀಭೂತೇ ದಿವಾಕರೇ ।
ತದ್ಧಿ ನಕ್ತಂ ವಿಜಾನೀಯಾತ್ ನ ನಕ್ತಂ ನಿಶಿ ಭೋಜನಂ ॥ ೨೩ ॥
ಕಾಂಸ್ಯಂ ಮಾಂಸಂ ಮಸೂರಾಂಶ್ಚ ಚಣಕಾನ್ ಕೋದ್ರವಾಂಸ್ತಥಾ ॥
ಶಾಕಂ ಮಧು ಪರಾನ್ನಂ ಚ ಪುನರ್ಭೋಜನಮೈಥುನೇ ।
ವಿಷ್ಣುಭಕ್ತೋ ನರೋ ವಾಪಿ ದಶಮ್ಯಾಂ ದಶ ವರ್ಜಯೇತ್ ॥ ೨೫ ॥
ದಶಮ್ಯಾ ವಿಧಿರುಕ್ತೋಽಯಂ ಏಕಾದಶ್ಯಾಸ್ತಥಾ ಶೃಣು ।
ಅಸಕೃಜ್ಜಲಪಾನಂ ಚ ಹಿಂಸಾಶೌಚಮಸತ್ಯತಾ ॥ ೨೬ ॥
ತಾಂಬೂಲಂ ದಂತಕಾಷ್ಠಂ ಚ ದಿವಾಶಯನಮೈಥುನೇ ।
ದ್ಯೂತಂ ಕ್ರೀಡಾ ನಿಶಿ ಸ್ವಾಪಃ ಪತಿತೈಸ್ಸಹಭಾಷಣಂ ।
ಏಕಾದಶ್ಯಾಂ ದಶೈತಾನಿ ವಿಷ್ಣುಭಕ್ತಸ್ತು ವರ್ಜಯೇತ್ ॥ ೨೭ ॥
ಅದ್ಯ ಮೇ ಸ್ತ್ರೀಸುಖಂ ನಾಸ್ತಿ ಭೋಜನಂ ನಾಸ್ತಿ ಕೇಶವ ।
ಪ್ರೀತ್ಯರ್ಥಂ ತವ ದೇವೇಶ ನಿಯಮಸ್ತು ದಿವಾನಿಶಿ ॥ ೨೮ ॥

---

ಕಳೆದ ಮೇಲೆ ದ್ವಾದಶಿಯ ದಿನದಲ್ಲಿ ಏಕಭುಕ್ತವನ್ನು ಮಾಡುವುದೇ ಅಖಂಡೈಕಾದಶಿಯೆನಿಸುವುದು.

೨೩. ಹಗಲನ್ನು ಎಂಟು ಭಾಗಗಳಾಗಿ ಮಾಡಲು ಸೂರ್ಯನು ಮಂದರಶ್ಮಿಯಾಗಿರುವ ಕಡೆಯಭಾಗಕ್ಕೆ ನಕ್ತವೆಂದು ಹೆಸರು. ಆಗಲಾಗಲಿ ರಾತ್ರಿಯಲ್ಲಾಗಲಿ ಭೋಜನವನ್ನು ಮಾಡಬಾರದು.

೨೪–೨೫. ಕಂಚಿನ ಪಾತ್ರೆಗಳು, ಮಾಂಸ, ತೊಗರಿ, ಕಡಲೆ, ಕೋದ್ರವ, ಸೊಪ್ಪಿನ ಪಲ್ಯಗಳು, ಜೇನು ತುಪ್ಪ, ಪರಗೃಹಭೋಜನ, ರಾತ್ರಿಭೋಜನ, ಗ್ರಾಮ್ಯಧರ್ಮ—ಈ ಹತ್ತನ್ನೂ ದಶಮಿಯಲ್ಲಿ ಪ್ರತಿಮಾನವನೂ, ವಿಶೇಷವಾಗಿ ವಿಷ್ಣುಭಕ್ತನೂ ತ್ಯಜಿಸಬೇಕು.

೨೬–೨೭. ಇಂತು ದಶಮಿಯ ನಿಯಮವನ್ನು ತಿಳಿಸಿರುವೆನು. ಇನ್ನು ಏಕಾದಶಿಯ ದಿನದ ನಿಯಮಗಳನ್ನು ಕೇಳುವವನಾಗು. ಅಡಿಗಡಿಗೆ ನೀರನ್ನು ಕುಡಿಯುವುದು, ಪರಹಿಂಸೆಯು, ಆಶೌಚವು, ಅಸತ್ಯಭಾಷಣವು, ತಾಂಬೂಲ ಚರ್ವಣದ ಮೇಲೆ ಹಲ್ಲುಗಳಿಗೆ ಕಡ್ಡಿಯನ್ನಿಡುವುದು, ಹಗಲಿನಲ್ಲಿ ಶಯನ ಮೈಥುನಗಳು, ಜೂಜಾಟವು, ಕ್ರೀಡೆಯು, ರಾತ್ರಿಯಲ್ಲಿ ನಿದ್ದೆಯು, ಜಾತಿಭ್ರಷ್ಟರೊಡನೆ ಸಂಭಾಷಣೆ—ಈ ಹತ್ತನ್ನೂ ವಿಷ್ಣುಭಕ್ತನಾದ ಮಾನವನು ಏಕಾದಶಿಯಲ್ಲಿ ವರ್ಜನಮಾಡಬೇಕು.

೨೮. ಕೇಶವನೆ! ಇಂದು ನನಗೆ ಸ್ತ್ರೀ ಸೌಖ್ಯವಿಲ್ಲ. ಭೋಜನವನ್ನು ಮಾಡುವುದಿಲ್ಲ. ನಿನ್ನ ಪ್ರೀತ್ಯರ್ಥವಾಗಿ ಇಂದು ಅಹೋರಾತ್ರಗಳಲ್ಲಿಯೂ ಈ ನಿಯಮವನ್ನು ಪಾಲಿಸುತ್ತೇನೆ.

ಸಪ್ತೇಂದ್ರಿಯೈಸ್ತು ವೈಕ್ಲವ್ಯಂ ಭೋಜನಂ ಯಚ್ಚ ಮೈಥುನಂ ।
ದಂತಾಂತರವಿಲಗ್ನಾನ್ನಂ ಕ್ಷಮಸ್ವ ಪುರುಷೋತ್ತಮ ॥ ೨೯ ॥
ಉಪಾವೃತ್ತಿಸ್ತು ಪಾಪೇಭ್ಯೋ ಯಸ್ತು ವಾಸೋ ಗುಣೈಸ್ಸಹ ।
ಉಪವಾಸಸ್ಸ ವಿಜ್ಞೇಯೋ ನ ಶರೀರಸ್ಯ ಶೋಷಣಂ ॥ ೩೦ ॥
ಪೂರ್ವೋಕ್ತಾನಿ ದಶೈತಾನಿ ಪರಾನ್ನಂ ಚ ತಥಾ ಮಧು ।
ದ್ವಾದಶ್ಯಾಂ ವಿಷ್ಣುಭಕ್ತೋ ವೈ ವರ್ಜಯೇನ್ಮರ್ದನಾದಿಕಂ ॥ ೩೧ ॥
ಅದ್ಯ ಮೇ ದ್ವಾದಶೀ ಪುಣ್ಯಾ ಪವಿತ್ರಾ ಪಾಪನಾಶಿನೀ ।
ಪಾರಣಂ ಚ ಕರಿಷ್ಯಾಮಿ ಪ್ರಸೀದ ಗರುಡಧ್ವಜ ॥ ೩೨ ॥
ವಿಷ್ಣೋಸ್ಸಂತೋಷಣಾರ್ಥಾಯ ಯೋ ಮಯಾ ನಿಯಮಃ ಕೃತಃ ।
ಅದ್ಯಾಹಂ ಭೋಜಯಿಷ್ಯಾಮಿ ತ್ವತ್ಪ್ರಸಾದಾದ್ದ್ವಿಜೋತ್ತಮಂ ॥ ೩೩ ॥
ಅನೇನ ವಿಧಿನಾ ಕಾರ್ಯಾ ಯಾವದ್ವರ್ಷಂ ಸಮಾಪ್ಯತೇ ।
ಸಂಪೂರ್ಣೇ ತು ತತೋ ವರ್ಷೇ ಕುರ್ಯಾದುದ್ಯಾಪನಂ ಬುಧಃ ॥ ೩೪ ॥
ಆದೌ ಮಧ್ಯೇ ತಥಾ ಚಾಂತೇ ವ್ರತಸ್ಯೋದ್ಯಾಪನಂ ಸ್ಮೃತಂ ।
ಉದ್ಯಾಪನಂ ನ ಕುರ್ಯಾದ್ಯಃ ಕುಷ್ಠೀ ಚಾಂಧಶ್ಚ ಜಾಯತೇ ॥ ೩೫ ॥

---

೨೯. ಪುರುಷೋತ್ತಮನೇ! ಸಪ್ತೇಂದ್ರಿಯಗಳ ವ್ಯಾಪಾರವನ್ನೂ, ಭೋಜನವನ್ನೂ, ಸ್ತ್ರೀಸಂಗವನ್ನೂ, ಹಲ್ಲುಗಳಲ್ಲಿ ಸಿಕ್ಕಿಕೊಂಡಿರುವ ಅನ್ನಶೇಷವನ್ನೂ ಕ್ಷಮಿಸು.

೩೦. ಸಕಲಪಾಪಗಳಿಂದಲೂ ಮನಸ್ಸನ್ನೂ ಇಂದ್ರಿಯಗಳನ್ನೂ ವಿಮುಖಗೊಳಿಸಿ, ಗುಣಗಳಲ್ಲಿಯೇ ಅವುಗಳನ್ನು ನಿವಾಸಗೊಳಿಸುವುದೇ ಉಪವಾಸವೆಂದೂ, ಕೇವಲ ದೇಹಶೋಷಣ ಮಾತ್ರವಲ್ಲವೆಂದೂ ತಿಳಿಯಬೇಕು.

೩೧. ಹಿಂದೆ ಹೇಳಿದ ಹತ್ತನ್ನೂ, ಪರಭೋಜನವನ್ನೂ, ಜೇನುತುಪ್ಪವನ್ನೂ, ಅಭ್ಯಂಗನಸ್ನಾನಾದಿಗಳನ್ನೂ ವೈಷ್ಣವನು ದ್ವಾದಶಿಯ ದಿನ ತ್ಯಜಿಸಬೇಕು.

೩೨–೩೩. ಇಂದು ನನಗೆ ಪುಣ್ಯಪ್ರದವೂ ಪವಿತ್ರವೂ ಪಾಪನಾಶಕವೂ ಆದ ದ್ವಾದಶೀತಿಥಿಯು. ಗರುಡವಾಹನನೇ! ನನ್ನಲ್ಲಿ ಪ್ರಸನ್ನನಾಗು. ಇಂದು ಪಾರಣೆಯನ್ನು ನಡೆಸುವೆನು. ವಿಷ್ಣುಪ್ರೀತ್ಯರ್ಥವಾಗಿ ನಾನು ಯಾವ ಏಕಾದಶೀ ವ್ರತವನ್ನಾಚರಿಸಿದೆನೊ, ಅದನ್ನು ಸಾಂಗಗೊಳಿಸಲು ಇಂದು ನಿನ್ನ ಪ್ರಸಾದದಿಂದ ಒಬ್ಬ ಬ್ರಾಹ್ಮಣೋತ್ತಮನಿಗೆ ಭೋಜನವನ್ನು ಮಾಡಿಸುವೆನು.

೩೪. ಈ ಪ್ರಕಾರವಾಗಿ ಒಂದು ವರ್ಷವು ಪೂರ್ತಿಯಾಗುವವರೆವಿಗೂ ಏಕಾದಶೀ ವ್ರತವನ್ನಾಚರಿಸಬೇಕು. ವರ್ಷವು ಪೂರ್ತಿಯಾಗಲು ಪ್ರಾಜ್ಞನಾದವನು ಉದ್ಯಾಪನೆಯನ್ನು ನಡೆಸಬೇಕು.

೩೫. ಈ ಉದ್ಯಾಪನೆಯನ್ನು ವ್ರತಪಾಲನೆಯ ಆದಿಯಲ್ಲಾಗಲಿ, ಮಧ್ಯ

ತಸ್ಮಾದುದ್ಯಾಪನಂ ಕುರ್ಯಾತ್ ಯಥಾ ವಿಭವಸಾರತಃ ।
ಕ್ರಿಯತೇ ಶುಕ್ಲಪಕ್ಷೇ ಚ ಮಾಸೇ ಮಾರ್ಗಶಿರೇ ಶುಭೇ ॥ ೩೬ ॥
ಆಮಂತ್ರ್ಯ ದ್ವಾದಶಮಿತಾನ್ ಬ್ರಾಹ್ಮಣಾನ್ ವಿಧಿಕೋವಿದಾನ್ ।
ತ್ರಯೋದಶಂ ಸಪತ್ನೀಕಮಾಚಾರ್ಯಂ ವಿಧಿಕೋವಿದಂ ॥ ೩೭ ॥
ಯಜಮಾನಃ ಶುಚಿಃ ಸ್ನಾತ್ವಾ ಶ್ರದ್ಧಾಯುಕ್ತೋ ಜಿತೇಂದ್ರಿಯಃ ।
ಪಾದಶೌಚಾರ್ಘವಸ್ತ್ರಾದ್ಯೈರಾಚಾರ್ಯಾದೀಂಸ್ತತೋಽರ್ಚಯೇತ್॥ ೩೮॥
ಆಚಾರ್ಯಸ್ತು ತತಃ ಕೃತ್ವಾ ಮಂಡಲಂ ವರ್ಣಕೈಃ ಶುಭೈಃ ।
ಚಕ್ರಾಬ್ಜಂ ಸರ್ವತೋಭದ್ರಂ ಶ್ವೇತವಸ್ತ್ರೇಣ ವೇಷ್ಟಿತಂ ॥ ೩೯ ॥
ಜಲಪೂರ್ಣಂ ಚ ಕುಂಭಂ ತು ಪಂಚರತ್ನಸಮನ್ವಿತಂ ।
ಪಂಚಪಲ್ಲವಸಂಯುಕ್ತಂ ಕರ್ಪೂರಾಗರುವಾಸಿತಂ ॥ ೪೦ ॥
ವೇಷ್ಟಿತಂ ರಕ್ತವಸ್ತ್ರೇಣ ತಾಮ್ರಪಾತ್ರೇಣ ಸಂಯುತಂ ।
ವೇಷ್ಟಿತಂ ಪುಷ್ಪಮಾಲಾಭಿರ್ಮಂಡಲೋಪರಿ ವಿನ್ಯಸೇತ್ ॥ ೪೧ ॥

---

ದಲ್ಲಾಗಲಿ, ಅಂತ್ಯದಲ್ಲಾಗಲಿ ಮಾಡಬಹುದೆಂದು ಹೇಳಲ್ಪಟ್ಟಿರುವುದು. ಯಾವನು ಉದ್ಯಾಪನೆಯನ್ನು ಮಾಡುವುದಿಲ್ಲವೊ, ಅವನು ಕುಷ್ಠರೋಗವುಳ್ಳವನೂ ಕುರುಡನೂ ಆಗುವನು.

೩೬. ಆದುದರಿಂದ ಪ್ರತಿಯೊಬ್ಬನೂ ತನ್ನ ಅನುಕೂಲಕ್ಕೆ ಅನುಸಾರವಾಗಿ ಉದ್ಯಾಪನೆಯನ್ನು ಮಾಡಬೇಕು. ಈ ಕಾರ್ಯವನ್ನು ಪವಿತ್ರವಾದ ಮಾರ್ಗಶೀರ್ಷ ಶುಕ್ಲಪಕ್ಷದ ದ್ವಾದಶಿಯ ದಿನದಲ್ಲಿ ನೆರವೇರಿಸಬೇಕು.

೩೭–೩೮. ವಿಧಿ ಶಾಸ್ತ್ರಗಳನ್ನು ಬಲ್ಲವರಾದ ಹನ್ನೆರಡು ಬ್ರಾಹ್ಮಣರನ್ನು ಮಾತ್ರ ಆಹ್ವಾನಮಾಡಿ ಪತ್ನೀ ಸಮೇತನಾದ ಹದಿಮೂರನೆಯ ಶಾಸ್ತ್ರಸಂಪನ್ನನಾದ ಮತ್ತೊಬ್ಬ ಆಚಾರ್ಯನನ್ನೂ ಕರೆದು, ಯಜಮಾನನು ಶೌಚ, ಸ್ನಾನಗಳನ್ನು ಮುಗಿಸಿ ಶ್ರದ್ಧೆಯುಳ್ಳವನಾಗಿ ಇಂದ್ರಿಯ ವ್ಯಾಪಾರಗಳನ್ನು ನಿರೋಧಿಸಿ, ಆಚಾರ್ಯನೇ ಮೊದಲಾದ ಸಕಲ ಬ್ರಾಹ್ಮಣರನ್ನೂ ಪಾದ್ಯ, ಆಚಮನೀಯ, ಅರ್ಘ್ಯ, ವಸ್ತ್ರಗಳೇ ಮುಂತಾದುವುಗಳಿಂದ ಪೂಜಿಸಬೇಕು.

೩೯. ಬಳಿಕ ಆಚಾರ್ಯನು ಸರ್ವತೋಭದ್ರವೂ ಬಿಳಿಯ ವಸ್ತ್ರದಿಂದ ವೇಷ್ಟಿತವೂ ಆದ ಚಕ್ರ ಅಥವ ಕಮಲದ ಆಕಾರದ ಮಂಡಲವನ್ನು ನಾನಾ ವರ್ಣಗಳ ಶುಭದ್ರವ್ಯಗಳಿಂದ ರಚಿಸಬೇಕು.

೪೦. ಅದರಲ್ಲಿ ಜಲಪೂರ್ಣವೂ, ಪಂಚರತ್ನಯುಕ್ತವೂ, ಪಂಚಪಲ್ಲವೋಪೇತವೂ, ಕರ್ಪೂರಾಗರುದ್ರವ್ಯ ಸುವಾಸಿತವೂ ಆದ ಕಳಶವೊಂದನ್ನು ಸ್ಥಾಪಿಸಬೇಕು.

೪೧. ಆ ಕಳಶವು ತಾಮ್ರದಿಂದ ಮಾಡಲ್ಪಟ್ಟುದಾಗಿ ಕೆಂಪು ವಸ್ತ್ರದಿಂದ

ತಸ್ಯೋಪರಿ ನ್ಯಸೇದ್ದೇವಂ ಲಕ್ಷ್ಮೀನಾರಾಯಣಂ ನೃಪ ।
ಸೌವರ್ಣೀಂ ಪ್ರತಿಮಾ ಕಾರ್ಯಾ ಏಕಕರ್ಷಪ್ರಮಾಣತಃ ॥ ೪೨ ॥
ವಾಹನಾಽಯುಧಸಂಯುಕ್ತಾ ಪ್ರಮಾಣಂ ಚತುರಂಗುಲಂ ।
ಕಿಂ ವಾ ಶಕ್ತ್ಯಾ ಪ್ರಕುರ್ವೀತ ವಿತ್ತಶಾಠ್ಯಂ ವಿವರ್ಜಯೇತ್ ॥ ೪೩ ॥
ತತಃ ಸಂಸ್ಥಾಪಯೇನ್ಮೂರ್ತಿಂ ಮಂಡಲೇ ದ್ವಾದಶೈವ ಹಿ ।
ಮಾಸಾನಾಮಧಿಪಃ ಪೂಜ್ಯಃ ಚಾಖಂಡವ್ರತಹೇತವೇ ॥ ೪೪ ॥
ಮಂಡಲಾತ್ಪೂರ್ವದಿಗ್ಭಾಗೇ ಶಂಖಂ ಸಂಸ್ಥಾಪಯೇಚ್ಛುಭಂ ।
ತ್ವಂ ಪುರಾ ಸಾಗರೋತ್ಪನ್ನೋ ವಿಷ್ಣುನಾ ವಿಧೃತಃ ಕರೇ ।
ನಿರ್ಮಿತಃ ಸರ್ವದೇವೈಸ್ತ್ವಂ ಪಾಂಚಜನ್ಯ ನಮೋಽಸ್ತು ತೇ ॥ ೪೫ ॥
ತತಸ್ತು ಸ್ಥಂಡಿಲಂ ಕಾರ್ಯಂ ಮಂಡಲಾದುತ್ತರಾಂ ದಿಶಂ ।
ಸಂಕಲ್ಪ್ಯ ಹವನಂ ಕಾರ್ಯಂ ಮಂತ್ರೈರ್ವೇದೋಕ್ತವೈಷ್ಣವೈಃ ॥ ೪೬ ॥

---

ಆಚ್ಛಾದಿತವಾಗಿರಬೇಕು. ಅನೇಕ ಪುಷ್ಪಮಾಲೆಗಳಿಂದಲಂಕೃತವಾದ ಈ ಕಳಶವನ್ನು ಮಂಡಲದ ಮಧ್ಯದಲ್ಲಿಡಬೇಕು.

೪೨. ಮಹಾರಾಜನೆ! ಅದರ ಮೇಲೆ ಲಕ್ಷ್ಮೀನಾರಾಯಣನ ಪ್ರತಿಮೆಯೊಂದನ್ನು ನಿಲ್ಲಿಸಬೇಕು. ಒಂದು ಕರ್ಷದ ಪ್ರಮಾಣದ ಚಿನ್ನದಿಂದ ಆ ವಿಗ್ರಹವನ್ನು ಮಾಡಿಸಿರಬೇಕು.

೪೩. ನಾಲ್ಕಂಗುಲದ ಎತ್ತರವುಳ್ಳ ಆ ಪ್ರತಿಮೆಯು ವಾಹನನಾದ ಗರುಡನಿಂದಲೂ, ಆಯುಧಗಳಾದ ಶಂಖಚಕ್ರಾದಿಗಳಿಂದಲೂ ಕೂಡಿರಬೇಕು. ಸಾಧ್ಯವಿಲ್ಲದಿದ್ದಲ್ಲಿ ತನ್ನ ಶಕ್ತಿಗನುಸಾರವಾಗಿ ಆ ಪ್ರತಿಮೆಯನ್ನು ಮಾಡಿಸಬಹುದು. ಧನಲೋಭವನ್ನು ಮಾತ್ರ ಮಾಡಲಾಗದು.

೪೪. ಅಖಂಡೈಕಾದಶಿಯ ವ್ರತಕ್ಕಾಗಿ ಮಾಸಗಳಿಗೆ ಅಧಿಪತಿಯಾದ ದ್ವಾದಶಾತ್ಮಕನಾದ ಮೂರ್ತಿಯನ್ನು ಆ ಮಂಡಲದಲ್ಲಿ ಸ್ಥಾಪನೆಮಾಡಬೇಕು.

೪೫. ಆ ಮಂಡಲಕ್ಕೆ ಪೂರ್ವದಿಕ್ಕಿನಲ್ಲಿ ಶುಭವಾದ ಶಂಖವನ್ನು ಸ್ಥಾಪನೆ ಮಾಡಿ ಈ ಮಂತ್ರವನ್ನು ಜಪಿಸಬೇಕು. ನೀನು ಮೊದಲು ಸಾಗರದಲ್ಲಿ ಹುಟ್ಟಿದೆ. ಮಹಾವಿಷ್ಣುವಿನ ಕೈಯಲ್ಲಿ ಧರಿಸಲ್ಪಟ್ಟೆ. ಸಕಲ ದೇವತೆಗಳಿಂದಲೂ ನಿರ್ಮಿತವಾದ ಪಾಂಚಜನ್ಯವೆನಿಸಿದ ನಿನಗೆ ನಮಸ್ಕರಿಸುವೆನು.

೪೬. ಬಳಿಕ ಮಂಡಲದ ಉತ್ತರ ದಿಕ್ಕಿಗೆ ಸ್ಥಂಡಿಲೋಲ್ಲೇಖನಾದಿಗಳನ್ನು ಮಾಡಿ ಸಂಕಲ್ಪಪೂರ್ವಕವಾಗಿ ವೇದೋಕ್ತಗಳಾದ ವಿಷ್ಣುದೇವತಾಕಮಂತ್ರಗಳಿಂದ ಹೋಮವನ್ನು ಮಾಡಬೇಕು.

ಸ್ವಸ್ಥಾನೇ ಸ್ಥಾಪಯೇದ್ವಿಷ್ಣುಂ ಸ್ಥಾಪಯೇಚ್ಚ ಹರಿಂ ಪ್ರತಿ ।
ಪೂಜಯೇತ್ಪುರುಷಸೂಕ್ತೇನ ಮಂತ್ರೈಃ ಪೌರಾಣಿಕೈಃ ಶುಭೈಃ ॥ ೪೭ ॥
ನೈವೇದ್ಯಾರ್ಥಂ ಚ ವೈ ಕಾರ್ಯಾ ಮೋದಕಾ ಬಹವೋಽಪಿ ಚ ।
ಧೂಪದೀಪೋಪಹಾರಾಣಿ ಕೃತ್ವಾ ನೀರಾಜನಂ ತತಃ ॥ ೪೮ ॥
ಯಕ್ಷಕರ್ದಮೇನ ಸಂಪೂಜ್ಯ ತತಃ ಕುರ್ಯಾತ್ಪ್ರದಕ್ಷಿಣಾಂ ।
ಸ್ವಸ್ತಿವಾಚನಕೈರ್ವಿಪ್ರೈಃ ನಮಸ್ಕಾರಂ ತತೋ ನೃಪ ॥ ೪೯ ॥
ತತಸ್ತು ಬ್ರಾಹ್ಮಣೈಃ ಕಾರ್ಯ ಆಚಾರ್ಯಕ್ರಮಶೋ ಜಪಃ ।
ಜಪಶ್ಚ ಪಾವಮಾನೀಯೋ ಮಂಡಲಬ್ರಾಹ್ಮಣಂ ಮಧು ॥ ೫೦ ॥
ತೇಜೋಽಸಿ ಶುಕ್ರಜಂ ವಾತಂ ಬ್ರಹ್ಮಸಾಮಾದನಂತರಂ ।
ಪವಿತ್ರವಂತಂ ಸೂರ್ಯಸ್ಯ ವಿಷ್ಣೋರ್ಮಹಸಿ ಸಂಹಿತಾಂ ॥ ೫೧ ॥
ಜಪಾಂತೇ ಕಲಶೇ ವಿಷ್ಣುಂ ಸೋಪಾಂಗಮುಪರಿ ನ್ಯಸೇತ್ ।
ದಿವಸಸ್ಯೋದಯೇ ಚೈವ ಹೋಮಂ ಕುರ್ಯಾದನುಕ್ರಮಂ ॥ ೫೨ ॥

೪೭. ಮಹಾವಿಷ್ಣುವನ್ನು ಸ್ವಸ್ಥಾನದಲ್ಲಿ ಸ್ಥಾಪಿಸಿ ಮತ್ತೊಂದು ಹರಿ ಮೂರ್ತಿಯನ್ನು ಅದಕ್ಕೆದುರಾಗಿ ಸ್ಥಾಪನೆಮಾಡಬೇಕು. ಮತ್ತು ಪುರುಷ ಸೂಕ್ತದಿಂದಲೂ ಮಂಗಳಪ್ರದಗಳಾದ ಪೌರಾಣಿಕ ಸ್ತೋತ್ರಗಳಿಂದಲೂ ಅರ್ಚನೆ ಯನ್ನು ಮಾಡಬೇಕು.

೪೮–೪೯. ನೈವೇದ್ಯಕ್ಕಾಗಿ ಅನೇಕ ವಿಧಗಳಾದ ಮೋದಕಗಳನ್ನು ಪಕ್ವ ಗೊಳಿಸಬೇಕು. ಬಳಿಕ ಧೂಪದೀಪ ನೈವೇದ್ಯಗಳನ್ನು ಅರ್ಪಿಸಿ ನೀರಾಜನವನ್ನು ಬೆಳಗಬೇಕು. ಯಕ್ಷಕರ್ದಮವೆಂಬ ಸುಗಂಧದ್ರವ್ಯದಿಂದ ಲೇಪನವನ್ನುಮಾಡಿ ಪ್ರದಕ್ಷಿಣೆಯನ್ನು ಮಾಡಬೇಕು. ಬ್ರಾಹ್ಮಣರು ಸ್ವಸ್ತಿವಾಕ್ಯಗಳನ್ನುಚ್ಚರಿಸು ತ್ತಿರಲು ನಮಸ್ಕಾರವನ್ನು ಮಾಡಬೇಕು.

೫೦–೫೧. ಬಳಿಕ ಆಚಾರ್ಯನು ಹೇಳಿದ ಕ್ರಮದಿಂದ ಬ್ರಾಹ್ಮಣರು ಜಪವನ್ನು ಮಾಡಬೇಕು. ಪವಮಾನ ಸೂಕ್ತ, ಮಂಡಲಬ್ರಾಹ್ಮಣ, ಮಧು ಸೂಕ್ತ, 'ತೇಜೋಽಸಿ' ಸೂಕ್ತ, 'ಶುಕ್ರಜಂ ವಾತಂ' ಎಂಬ ಸೂಕ್ತ, ಬ್ರಹ್ಮ ವಲ್ಲಿಯ ಪಠನ, 'ಪವಿತ್ರವಂತಂ' ಎಂಬ ಸೂಕ್ತ, 'ಸೂರ್ಯಸ್ಯ' ಎಂಬ ಸೂಕ್ತ, 'ವಿಷ್ಣೋರ್ನುಕಂ' ಎಂಬ ಸೂಕ್ತ, 'ಮಹಸಿ' ಎಂಬ ಸಂಹಿತೆಯು ಇವುಗಳನ್ನು ಜಪಿಸಬೇಕು.

೫೨. ಜಪವು ಮುಗಿದೊಡನೆಯೆ ಕಲಶದ ಮೇಲೆ ಅಲಂಕೃತವಾದ ವಿಷ್ಣು ಮೂರ್ತಿಯನ್ನು ಸ್ಥಾಪಿಸಬೇಕು. ಸೂರ್ಯೋದಯಕಾಲಕ್ಕೆ ಸರಿಯಾಗಿ ಜಪ ಕ್ರಮವನ್ನನುಸರಿಸಿ ಹೋಮವನ್ನು ಮಾಡಬೇಕು.

ಸಂಸ್ಥಾಪ್ಯ ಪ್ರಥಮಂ ಪಾತ್ರಂ ಪೂಜಯಿತ್ವಾ ವಿಧಾನತಃ ।
ಸ್ತವನಂ ಚ ತತೋ ಹೋಮಃ ಕರ್ತವ್ಯಶ್ಚರುಪೂರ್ವಕಃ ॥ ೫೩ ॥
ಸ್ವಗೃಹ್ಯೋಕ್ತವಿಧಾನೇನ ಯಜನಾಗ್ನಿಕ್ರಿಯಾಪರಃ ।
ಚರುದ್ವಯಂ ಚ ಕುರ್ವೀತ ಪಾಯಸಂ ವೈಷ್ಣವಂ ಚರುಂ ॥ ೫೪ ॥
ಜುಹುಯಾತ್ಪುರುಷಸೂಕ್ತೇನ ಚರೋಃ ಷೋಡಶ ಚಾಹುತೀಃ ।
ತಥಾ ಚತುರ್ಗೃಹೀತೇನ ಘೃತಯುಕ್ತಾ ವರಾಹುತಿಂ ॥ ೫೫ ॥
ಪ್ರಾದೇಶಮಾತ್ರಾಃ ಪಾಲಾಶಸಮಿಧಶ್ಚ ಘೃತಪ್ಲುತಾಃ ।
ಇದಂ ವಿಷ್ಣುರಿತಿ ಮಂತ್ರೇಣ ಹೋತವ್ಯಾಃ ಕರ್ಮಸಿದ್ಧಯೇ ॥ ೫೬ ॥
ಶತಮೇಕಂ ತು ಜುಹುಯಾತ್ ದ್ವಿಗುಣಾಶ್ಚ ತಿಲಾಽಽಹುತೀಃ ।
ಕೃತೇ ಚ ವೈಷ್ಣವೇ ಹೋಮೇ ಗ್ರಹಯಜ್ಞಂ ಸಮಾರಭೇತ್ ॥ ೫೭ ॥
ಸಮಿದ್ಭಿಶ್ಚರುಹೋಮಂ ಚ ತಿಲಹೋಮಂ ಕ್ರಮೇಣ ತು ।
ಉಭಯೋಃ ಸ್ವಸ್ತಿಕಂ ವಾಚ್ಯಂ ತತಃ ಪೂಜಾಂ ಸಮಾಚರೇತ್ ॥ ೫೮ ॥

೫೩. ಮೊದಲನೆಯ ಕಲಶವನ್ನು ಸ್ಥಾಪನೆಮಾಡಿ ವಿಧಿಸಹಿತವಾದ ಪೂಜೆಯನ್ನುಮಾಡಿ ಬಳಿಕ ಸ್ತೋತ್ರವೂ, ಚರುದ್ರವ್ಯದಿಂದ ಹೋಮವೂ ಮಾಡಲ್ಪಡಬೇಕು.

೫೪. ಪ್ರತಿಯೊಬ್ಬ ಭಕ್ತನೂ ಎರಡು ಚರುದ್ರವ್ಯಗಳನ್ನು ಸಿದ್ಧಗೊಳಿಸಬೇಕು. ಅವುಗಳಲ್ಲಿ ಪಾಯಸವು ವೈಷ್ಣವ ಚರುವು. ತನ್ನ ಶಾಖೆಯ ಗೃಹ್ಯಸೂಕ್ತಗಳಲ್ಲಿ ಹೇಳಿರುವಂತೆ ಭಕ್ತನು ಯಜ್ಞವನ್ನು ಅಗ್ನಿಯಲ್ಲಿ ಮಾಡಲುದ್ಯುಕ್ತನಾಗಬೇಕು.

೫೫. ಆ ಚರುವಿನ ಹದಿನಾರು ಆಹುತಿಗಳನ್ನು ಪುರುಷಸೂಕ್ತದ ಮಂತ್ರಗಳಿಂದ ಹೋಮಮಾಡಬೇಕು. ಪುನಃ ಚತುರ್ಗೃಹೀತವಾದ ಚರುವಿನಿಂದ ಘೃತಮಿಶ್ರಿತವಾದ ಮತ್ತೊಂದು ಆಹುತಿಯನ್ನು ಕೊಡಬೇಕು.

೫೬. ಈ ಕರ್ಮವು ಸಮಗ್ರವಾಗಲು ಪ್ರಾದೇಶದ ಅಳತೆಯ ಪಲಾಶ ಕಾಷ್ಠಗಳನ್ನು ತುಪ್ಪದಲ್ಲಿ ನೆನೆಸಿ "ಇದಂ ವಿಷ್ಣುರ್ವಿಚಕ್ರಮೇ" ಮುಂತಾದ ಮಂತ್ರದಿಂದ ಹೋಮಮಾಡಬೇಕು.

೫೭. ಈ ಕಾಷ್ಠಗಳ ಒಂದು ನೂರು ಆಹುತಿಗಳನ್ನಿತ್ತಮೇಲೆ ತಿಲಗಳ ಎರಡು ನೂರು ಆಹುತಿಗಳನ್ನು ಕೊಡಬೇಕು. ಇಂತು ವಿಷ್ಣುದೇವತೆಯ ಹೋಮವು ಮುಗಿದಮೇಲೆ ನವಗ್ರಹ ಹೋಮವನ್ನು ಆರಂಭಮಾಡಬೇಕು.

೫೮. ಸಮಿತ್ತುಗಳೊಡನೆ ಮೊದಲು ಚರುಹೋಮವನ್ನೂ ಬಳಿಕ ತಿಲ ಹೋಮವನ್ನೂ ಕ್ರಮವಾಗಿ ಮಾಡಬೇಕು. ಬಳಿಕ ಎರಡು ಹೋಮಗಳಿಗೂ ಸ್ವಸ್ತಿವಾಚನಗಳನ್ನು ಮಾಡಿಸಿ ಪೂಜೆಯನ್ನು ಸಮಾಪ್ತಿಗೊಳಿಸಬೇಕು.

ಋತ್ವಿಜಾಂ ಚ ತತೋ ದದ್ಯಾತ್ ಧೇನ್ವಾದಿಗ್ರಹದಕ್ಷಿಣಾಃ ।
ದೇವಸ್ಯ ತೃಪ್ತ್ಯೈ ದದ್ಯಾಚ್ಚ ಬ್ರಾಹ್ಮಣಾಯ ಯಥಾವಿಧಿ ॥ ೫೯ ॥
ಗಾಂ ವೈ ಪಯಸ್ವಿನೀಂ ದದ್ಯಾತ್ ಋಷಭಂ ಚ ಸುಶೋಭನಂ ।
ಬ್ರಾಹ್ಮಣಾನಾಂ ತತೋ ದದ್ಯಾತ್ ತ್ರಯೋದಶಪದಾನಿ ಚ ॥ ೬೦ ॥
ಆಚಾರ್ಯಂ ತು ಸಪತ್ನೀಕಂ ವಸ್ತ್ರೈಶ್ಚ ಪರಿತೋಷಯೇತ್ ।
ತೋಷಯಿತ್ವಾ ಮಹಾದಾನೈಃ ತಂ ಸಾರ್ಥಂ ಚ ಸಮರ್ಪಯೇತ್॥ ೬೧ ॥
ಪಂಚವಿಂಶತಿಕುಂಭಾಂಶ್ಚ ಸೋದಕಾನ್ ವಸ್ತ್ರವೇಷ್ಟಿತಾನ್ ।
ಬ್ರಾಹ್ಮಣಾಂಶ್ಚ ತತೋ ದದ್ಯಾತ್ ಕೃತೇ ಪಾರಣಕೇ ನಿಶಿ ॥ ೬೨ ॥
ಭೂರಿದಾನಂ ಚ ದಾತವ್ಯಂ ಬಂಧೂನಾಮಿಷ್ಟಭೋಜನಂ ।
ಪೂರ್ಣಪಾತ್ರಂ ತತೋ ದದ್ಯಾದಾಚಾರ್ಯಾಯ ಸದಕ್ಷಿಣಂ ॥ ೬೩ ॥
ಪೂರ್ಣಪಾತ್ರಪ್ರದಾನೇನ ಕಾರ್ಯಂ ಸಂಪೂರಿತಂ ಭವೇತ್ ।
ಉಪವಾಸವ್ರತಂ ಚೈವ ಸ್ನಾನಂ ತೀರ್ಥಫಲಂ ಭವೇತ್ ॥ ೬೪ ॥
ವಿಪ್ರೈಸ್ಸಂಭಾಷಿತಂ ತಸ್ಯ ಸಂಪೂರ್ಣಂ ತದ್ಭವೇತ್ಫಲಂ ।
ವಿತ್ತಶಕ್ತಿರ್ಗೃಹೇ ನಾಸ್ತಿ ಕೃತಂ ಚೈಕಾದಶೀವ್ರತಂ ॥ ೬೫ ॥

---

೫೯–೬೦. ಋತ್ವಿಜರಿಗೆ ಗೋದಾನಾದಿಗಳನ್ನೂ ದಕ್ಷಿಣೆಮೊದಲಾದುವುಗಳನ್ನೂ ಕೊಡಬೇಕು. ಪರಮಾತ್ಮನ ತೃಪ್ತಿಗಾಗಿ ಬ್ರಾಹ್ಮಣನೊಬ್ಬನಿಗೆ ಯಥಾವಿಧಿಯಾಗಿ ಹಾಲುಕರೆಯುತ್ತಿರುವ ಆಕಳನ್ನೂ ಹೃಷ್ಟಪುಷ್ಟವಾಗಿರುವ ಹೋರಿಯನ್ನೂ ದಾನಮಾಡಬೇಕು. ಬಳಿಕ ಆ ಹದಿಮೂರು ಬ್ರಾಹ್ಮಣರಿಗೂ ಯಥೋಚಿತದಾನಗಳನ್ನು ಕೊಡಬೇಕು.

೬೧. ಪತ್ನೀಸಹಿತನಾದ ಆಚಾರ್ಯನನ್ನು ವಸ್ತ್ರಗಳಿಂದ ಸಂತೋಷಪಡಿಸಬೇಕು. ಬಳಿಕ ಮಹಾದಾನಗಳಿಂದ ಆತನನ್ನು ತೃಪ್ತಿಬಡಿಸಿ ತನ್ನ ಸರ್ವಸ್ವವನ್ನೂ ಆತನಿಗೆ ಅರ್ಪಿಸಬೇಕು.

೬೨. ಪಾರಣೆಯ ದಿನದ ರಾತ್ರಿಯಲ್ಲಿ ಬ್ರಾಹ್ಮಣರನ್ನು ಕರೆದು ನೀರಿನಿಂದ ತುಂಬಿ ವಸ್ತ್ರಗಳನ್ನು ಹೊದಿಸಿರುವ ಇಪ್ಪತ್ತೈದು ಕುಂಭಗಳನ್ನು ಅವರಿಗೆ ದಾನ ಮಾಡಬೇಕು.

೬೩. ಹಾಗೆಯೇ ಭೂರಿದಾನವನ್ನೂ ಕೊಟ್ಟು ಬಂಧುಗಳಿಗೆಲ್ಲ ಮೃಷ್ಟಾನ್ನ ಭೋಜನವನ್ನು ಮಾಡಿಸಬೇಕು. ಆಚಾರ್ಯನಿಗೆ ದಕ್ಷಿಣೆಯೊಡನೆ ಕಳಶದ ಪೂರ್ಣಪಾತ್ರೆಯನ್ನು ಸಮರ್ಪಿಸಬೇಕು.

೬೪. ಆ ಪೂರ್ಣಪಾತ್ರೆಯ ದಾನದಿಂದ ಕಾರ್ಯವು ಸಮಾಪ್ತವಾಗುವುದು. ಇಂತು ಉಪವಾಸವ್ರತವೂ ಸ್ನಾನವೂ ತೀರ್ಥಸೇವೆಯ ಫಲವನ್ನು ಕೊಡುವುವು.

೬೫–೬೬. ಬ್ರಾಹ್ಮಣೋತ್ತಮರು ತೃಪ್ತಿಗೊಂಡು ಯಜಮಾನನನ್ನು

**ಸ್ವಶಕ್ತ್ಯಾ ಚೈವ ಕರ್ತವ್ಯಂ ತಥಾ ಚೋದ್ಯಾಪನಾದಿಕಂ ।**
**ಏತತ್ತೇ ಸರ್ವಮಾಖ್ಯಾತಮಖಂಡೈಕಾದಶೀವ್ರತಂ ॥ ೭೭ ॥**

**ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ದ್ವಿತೀಯೇ ವೈಷ್ಣವಖಂಡೇ ಮಾರ್ಗಶೀರ್ಷಮಾಹಾತ್ಮ್ಯೇ ಬ್ರಹ್ಮವಿಷ್ಣುಸಂವಾದೇ "ಅಖಂಡೈಕಾದಶೀ ವ್ರತಕಥನಂ"ನಾಮ ದ್ವಾದಶೋಽಧ್ಯಾಯಃ**

---

ಮಾತನಾಡಿಸಲು ಆತನಿಗೆ ಆ ವ್ರತದ ಸಂಪೂರ್ಣ ಫಲವು ಲಭಿಸುವುದು. ಏಕಾದಶೀವ್ರತವನ್ನು ಮಾಡಿದವನ ಮನೆಯಲ್ಲಿ ಧನದ ಅನುಕೂಲ್ಯವಿಲ್ಲದಿದ್ದರೆ ತನ್ನ ಶಕ್ತಿಗನುಸಾರವಾಗಿಯಾದರೂ ಉದ್ಯಾಪನೆಯೇ ಮೊದಲಾದ ಕ್ರಿಯೆಗಳನ್ನು ಮಾಡಬೇಕು. ಇಂತು ಅಖಂಡೈಕಾದಶೀವ್ರತದಲ್ಲಿ ಮಾಡಬೇಕಾದ ಸರ್ವವನ್ನೂ ನಿನಗೆ ತಿಳಿಸಿರುವೆನು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀಸ್ಕಾಂದಮಹಾಪುರಾಣದ ಎರಡನೆಯ ವೈಷ್ಣವಖಂಡದ ಮಾರ್ಗಶೀರ್ಷಮಾಹಾತ್ಮ್ಯದ ಬ್ರಹ್ಮವಿಷ್ಣು ಸಂವಾದದಲ್ಲಿ "ಅಖಂಡೈಕಾದಶೀವ್ರತ ಕಥನ"ವೆಂಬ ಹನ್ನೆರಡನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥ ತ್ರಯೋದಶೋಽಧ್ಯಾಯಃ

### ಏಕಾದಶೀಜಾಗರಣಫಲಕಥನಂ

ಶ್ರೀ ಭಗವಾನುವಾಚ :—

ಶೃಣು ಪುತ್ರ ಪ್ರವಕ್ಷ್ಯಾಮಿ ಜಾಗರಸ್ಯ ಚ ಲಕ್ಷಣಂ ।
ಯೇನ ವಿಜ್ಞಾತಮಾತ್ರೇಣ ಸುಲಭೋಽಹಂ ಸದಾ ಕಲೌ ॥ ೧ ॥
ಗೀತಂ ವಾದ್ಯಂ ಚ ನೃತ್ಯಂ ಚ ಪುರಾಣಪಠನಂ ತಥಾ ।
ಧೂಪಂ ದೀಪಂ ಚ ನೈವೇದ್ಯಂ ಪುಷ್ಪಂ ಗಂಧಾನುಲೇಪನಂ ॥ ೨ ॥
ಫಲಾರ್ಪಣಂ ಚ ಶ್ರದ್ಧಾ ಚ ದಾನಮಿಂದ್ರಿಯಸಂಯಮಂ ।
ಸತ್ಯಾನ್ವಿತಂ ವಿನಿದ್ರಂ ಚ ಮುದಾ ಮದ್ಯಜನಾನ್ವಿತಂ ॥ ೩ ॥
ಸಾಶ್ಚರ್ಯಂ ಚೈವ ಸೋತ್ಸಾಹಂ ಪಾಪಾಲಸ್ಯಾದಿವರ್ಜನಂ ।
ಪ್ರದಕ್ಷಿಣಾಸಮಾಯುಕ್ತಂ ನಮಸ್ಕಾರಪುರಃಸರಂ ॥ ೪ ॥
ನೀರಾಜನಸಮಾಯುಕ್ತಂ ಅತಿಹೃಷ್ಟೇನ ಚೇತಸಾ ।
ಯಾಮೇ ಯಾಮೇ ಮಹಾಭಾಗ ಕುರ್ಯಾದಾರಾರ್ತಿಕಂ ಮಮ ॥ ೫ ॥
ಷಡ್ವಿಂಶದ್ಗುಣಸಂಯುಕ್ತಮೇಕಾದಶ್ಯಾಂ ಚ ಜಾಗರಂ ।
ಯಃ ಕರೋತಿ ನರೋ ಭಕ್ತ್ಯಾ ನ ಪುನರ್ಜಾಯತೇ ಭುವಿ ॥ ೬ ॥

---

### ಕನ್ನಡದ ಅನುವಾದ

#### ಏಕಾದಶೀವ್ರತಜಾಗರಣಫಲಕಥನವು

೧. ಭಗವಂತನು ಹೇಳುತ್ತಾನೆ:—ಎಲೈ ಪುತ್ರನೆ! ಕೇಳು; ಇನ್ನು ನಿನಗೆ ಏಕಾದಶೀ ಜಾಗರಣದ ಕ್ರಮವನ್ನು ತಿಳಿಸುವೆನು. ಅದನ್ನು ತಿಳಿದ ಮಾತ್ರ ದಿಂದಲೇ ನಾನು ಕಲಿಯುಗದಲ್ಲಿ ಮನುಷ್ಯರಿಗೆ ಯಾವಾಗಲೂ ಸುಲಭವಾಗಿ ಪ್ರಸನ್ನನಾಗುವೆನು.

೨–೫. ಸಂಗೀತ, ವಾದ್ಯಘೋಷ, ನೃತ್ಯ, ಪುರಾಣಪಠನ, ಧೂಪ, ದೀಪ, ನೈವೇದ್ಯ, ಪುಷ್ಪಾರ್ಚನೆ, ಗಂಧಲೇಪನ, ಫಲಸಮರ್ಪಣ, ಶ್ರದ್ಧೆ, ದಾನ, ಇಂದ್ರಿಯ ಸಂಯಮನ, ಸತ್ಯವಾಕ್ಯತೆ, ನಿದ್ರಾರಾಹಿತ್ಯ, ಸಂತೋಷದಿಂದ ನನ್ನ ಪ್ರೀತ್ಯರ್ಥವಾಗಿ ಯಜ್ಞವನ್ನು ಮಾಡುವುದು, ಆಶ್ಚರ್ಯ, ಉತ್ಸಾಹ, ಪಾಪಾಲಸ್ಯಗಳ ತ್ಯಾಗ, ಪ್ರದಕ್ಷಿಣೆ, ಸಾಷ್ಟಾಂಗ ನಮಸ್ಕಾರ, ಕರ್ಪೂರಾದಿಗಳ ನೀರಾಜನ–ಇವುಗಳೊಡನೆ ಭಾಗವತನು ಅತ್ಯಂತ ಸಂತೋಷಗೊಂಡ ಅಂತರಂಗ ವುಳ್ಳವನಾಗಿ ಏಕಾದಶಿಯ ರಾತ್ರಿಯ ಪ್ರತಿ ಯಾಮದಲ್ಲಿಯೂ ಮಂಗಳಾರತಿ ಯನ್ನು ಮಾಡಬೇಕು.

೬. ಮೇಲೆ ಹೇಳಿದ ಇಪ್ಪತ್ತಾರು ಗುಣಗಳಿಂದೊಡಗೂಡಿದ ಏಕಾದಶಿಯ

ಯ ಏವಂ ಕುರುತೇ ಭಕ್ತ್ಯಾ ವಿತ್ತಶಾಠ್ಯವಿವರ್ಜಿತಃ ।
ಜಾಗರಂ ಪರಯಾ ಭಕ್ತ್ಯಾ ಸ ಲೀನೋ ಜಾಯತೇ ಮಯಿ ॥ ೭ ॥
ದಷ್ಟಾಃ ಕಲಿಭುಜಂಗೇನ ಸ್ವಪಂತೇ ಯೇ ದಿನೇ ಮಮ ।
ಕುರ್ವಂತಿ ಜಾಗರಂ ನೈವ ಮಾಯಾಪಾಶವಿಮೋಹಿತಾಃ ॥ ೮ ॥
ಪ್ರಾಪ್ತಾಪ್ಯೇಕಾದಶೀ ಯೇಷಾಂ ಗತಾ ಜಾಗರಣಂ ವಿನಾ ।
ತೇ ವಿನಷ್ಟಾ ನ ಸಂದೇಹೋ ಯಸ್ಮಾಜ್ಜೀವಿತಮಧ್ರುವಂ ॥ ೯ ॥
ಉದ್ಧೃತಂ ನೇತ್ರಯುಗ್ಮಂ ಚ ದತ್ವಾ ವೈ ಹೃದಯೇ ಪದಂ ।
ಕೃತಂ ಯೇ ನೈವ ಪಶ್ಯಂತಿ ಪಾಪಿನೋ ಮಮ ಜಾಗರಂ ॥ ೧೦ ॥
ಅಭಾವೇ ವಾಚಕಸ್ಯಾಥ ಗೀತಂ ನೃತ್ಯಂ ಚ ಕಾರಯೇತ್ ।
ವಾಚಕೇ ಸತಿ ದೇವೇಶ ಪುರಾಣಂ ಪ್ರಥಮಂ ಪಠೇತ್ ॥ ೧೧ ॥
ಅಶ್ವಮೇಧಸಹಸ್ರಸ್ಯ ವಾಜಪೇಯಶತಸ್ಯ ಚ ।
ಪುಣ್ಯಂ ಕೋಟಿಗುಣಂ ಪುತ್ರ ಮಮ ಜಾಗರಣೇ ಕೃತೇ ॥ ೧೨ ॥

---

ರಾತ್ರಿಯಲ್ಲಿ ಯಾವನು ಭಕ್ತಿಯಿಂದ ಜಾಗರಣವನ್ನು ಮಾಡುವನೊ, ಆ ಮಾನವನು ಮತ್ತೆ ಭೂಲೋಕದಲ್ಲಿ ಜನ್ಮವನ್ನೆತ್ತುವುದಿಲ್ಲ.

೭–೮. ಇಂತು ಯಾವನು ಭಕ್ತಿಯಿಂದ ಧನಲೋಭವನ್ನು ತೊರೆದು ಜಾಗರಣೆಯನ್ನು ಮಾಡುವನೊ, ಅವನು ನನ್ನಲ್ಲಿಯೇ ಐಕ್ಯವನ್ನು ಹೊಂದಿ ಸುಖಪಡುವನು. ಕಾಲವೆಂಬ ಕಾಳಸರ್ಪದಿಂದ ಕಚ್ಚಲ್ಪಟ್ಟವರೂ, ಮಾಯಾಪಾಶಗಳಲ್ಲಿ ಸಿಕ್ಕಿಬಿದ್ದವರೂ ಆದ ಮನುಷ್ಯರು ಮಾತ್ರ ಆ ದಿನದಲ್ಲಿ ನಿದ್ರೆ ಮಾಡುವರಲ್ಲದೆ ಜಾಗರಣೆಯನ್ನು ಮಾಡುವುದಿಲ್ಲ.

೯. ಯಾರು ಈ ಕಲಿಯುಗದಲ್ಲಿ ಏಕಾದಶಿಯು ಪ್ರಾಪ್ತವಾದರೂ ಜಾಗರಣೆಯನ್ನು ಮಾಡುವುದಿಲ್ಲವೊ, ಅವರು ನಷ್ಟಜೀವರೆಂದು ನಿಶ್ಚಯವಾಗಿ ತಿಳಿಯಬೇಕು. ಜೀವಿತವೇ ಅಶಾಶ್ವತವಾಗಿರುವುದಲ್ಲವೆ?

೧೦. ಉನ್ಮೀಲಿತ ನೇತ್ರಗಳನ್ನೂ ಹೃದಯದಲ್ಲಿ ನನ್ನ ಪಾದಪದ್ಮಗಳನ್ನೂ ಅನುಗ್ರಹಿಸಿದರೂ ಕೂಡ ನನ್ನ ದಿನದಲ್ಲಿ ಜಾಗರಣೆಯನ್ನು ಯಾರು ಮಾಡುವುದಿಲ್ಲವೊ, ಅವರೇ ಪಾಪಿಗಳು.

೧೧. ಪೌರಾಣಿಕನು ಸಿಕ್ಕದಿದ್ದರೆ ಆ ರಾತ್ರಿಯನ್ನು ಸಂಗೀತ ನೃತ್ಯಗಳಿಂದ ಕಳೆಯಬೇಕು. ಗಮಕಿಯಾದವನು ದೊರೆತರೆ ಮೊದಲು ಪುರಾಣಪಠನವನ್ನು ಮಾಡಿಸಬೇಕು.

೧೨. ಪುತ್ರನಾದ ಎಲೈ ಬ್ರಹ್ಮನೆ! ಒಂದು ಸಾವಿರ ಅಶ್ವಮೇಧಗಳನ್ನೂ ನೂರು ವಾಜಪೇಯಗಳನ್ನೂ ಮಾಡಿದವರ ಕೋಟಿ ಗುಣಿತವಾದ ಫಲವು ಏಕಾದಶಿಯ ಜಾಗರಣದಿಂದ ಲಭಿಸುವುದು.

ಪಿತೃಪಕ್ಷೇ ಮಾತೃಪಕ್ಷೇ ಭಾರ್ಯಾಪಕ್ಷೇ ಚ ಮಾನದ ।
ಕುಲಾನ್ಯುದ್ಧರತೇ ಚೈತನ್ಮಮ ಜಾಗರಣೇ ಕೃತೇ ॥ ೧೩ ॥
ಉಪೋಷಣದಿನೇ ವಿಘ್ನೇ ಪ್ರಾರಬ್ಧೇ ಜಾಗರೇ ಸತಿ ।
ವಿಹಾಯ ಸ್ಥಾನಂ ತತ್ರಾಽಹಂ ಶಾಪಂ ದತ್ವಾ ವ್ರಜಾಮ್ಯಹಂ ॥ ೧೪ ॥
ಅವಿದ್ಧವಾಸರೇ ಯೇ ಮೇ ಪ್ರಕುರ್ವಂತಿ ಹಿ ಜಾಗರಂ ।
ತೇಷಾಂ ಮಧ್ಯೇ ಪ್ರಹೃಷ್ಟಸ್ಸನ್ನೃತ್ಯಂ ವೈ ಪ್ರಕರೋಮ್ಯಹಂ ॥ ೧೫ ॥
ಯಾವದ್ದಿನಾನಿ ಕುರುತೇ ಜಾಗರಂ ಮಮ ಸನ್ನಿಧೌ ।
ಯುಗಾಽಯುತಾನಿ ತಾವಂತಿ ವಸತೇ ಮಮ ವೇಶ್ಮನಿ ॥ ೧೬ ॥
ನ ಗಯಾಪಿಂಡದಾನೇನ ನ ತೀರ್ಥೈರ್ಬಹುಭಿರ್ಮಖೈಃ ।
ಪೂರ್ವಜಾ ಮುಕ್ತಿಮಾಯಾಂತಿ ವಿನೈಕಾದಶಿಜಾಗರಾತ್ ॥ ೧೭ ॥
ಯಃ ಕುರ್ಯಾಜ್ಜಾಗರೇ ಪೂಜಾಂ ಕುಸುಮೈರ್ಮಮ ವಾಸರೇ ।
ಪುಷ್ಪೇ ಪುಷ್ಪೇಽಶ್ವಮೇಧಸ್ಯ ಫಲಮಾಪ್ನೋತಿ ಮಾನವಃ ॥ ೧೮ ॥

---

೧೩. ಪ್ರಿಯ ಸುತನೆ! ಪಿತೃಪಕ್ಷದಲ್ಲಾಗಲಿ, ಮಾತೃಪಕ್ಷದಲ್ಲಾಗಲಿ, ಪತ್ನೀಪಕ್ಷದಲ್ಲಾಗಲಿ, ಮಾಡಿದ ಏಕಾದಶೀ ರಾತ್ರಿಯ ಜಾಗರಣೆಯು ಮಾಡಿದವನ ಕುಲವನ್ನೇ ಉದ್ಧರಿಸುವುದು.

೧೪. ಉಪವಾಸದ ದಿನದಲ್ಲಿ ವಿಘ್ನವೊದಗಿ ಎಲ್ಲಿ ಜಾಗರಣೆಯು ನಡೆಯುವುದಿಲ್ಲವೊ, ಅಲ್ಲಿಗೆ ಶಾಪವನ್ನು ಕೊಟ್ಟು ಆ ಸ್ಥಳದಿಂದ ನಾನು ಹೊರಟು ಹೋಗುವೆನು.

೧೫. ವೇಧಾದಿಗಳಿಲ್ಲದ ಹರಿವಾಸರದಲ್ಲಿ ಯಾರು ಜಾಗರಣೆಯನ್ನಾಚರಿಸುವರೊ, ಅವರ ಮಧ್ಯದಲ್ಲಿ ನಾನು ಸಂತೋಷಗೊಂಡು ನೃತ್ಯವನ್ನು ಮಾಡುತ್ತಿರುವೆನು.

೧೬. ಈ ಭೂಲೋಕದಲ್ಲಿ ಮನುಷ್ಯನು ಎಷ್ಟು ದಿವಸಗಳಲ್ಲಿ ನನ್ನ ಸನ್ನಿಧಿಯಲ್ಲಿ ಜಾಗರಣವನ್ನು ಮಾಡುವನೊ, ಅಷ್ಟು ಅಯುತ (ಹತ್ತುಸಾವಿರ) ಯುಗಗಳವರೆವಿಗೂ ಆತನು ನನ್ನ ನಿಲಯವಾದ ವೈಕುಂಠದಲ್ಲಿ ವಾಸಮಾಡುವನು.

೧೭. ಏಕಾದಶೀ ರಾತ್ರಿಯ ಜಾಗರಣವನ್ನು ಯಾವನು ಮಾಡುವುದಿಲ್ಲವೊ, ಆ ಮನುಷ್ಯನ ಪಿತೃದೇವತೆಗಳು ಗಯಾಪಿಂಡದಾನಗಳಿಂದಾಗಲಿ, ತೀರ್ಥಸೇವೆಗಳಿಂದಾಗಲಿ, ಯಾಗಯಜ್ಞಗಳಿಂದಾಗಲಿ ಮೋಕ್ಷವನ್ನು ಹೊಂದಲಾರರು.

೧೮. ಯಾವ ಮನುಷ್ಯನು ಹರಿವಾಸರದಲ್ಲಿ ಜಾಗರಣೆಯನ್ನು ಮಾಡುತ್ತ ಯಾಮಯಾಮಕ್ಕೂ ಪುಷ್ಪಗಳಿಂದ ನನ್ನ ಪೂಜೆಯನ್ನು ಮಾಡುವನೊ, ಆತನು ಒಂದೊಂದು ಪುಷ್ಪಕ್ಕೂ ಒಂದು ಅಶ್ವಮೇಧಯಜ್ಞವನ್ನು ಮಾಡಿದ ಫಲವನ್ನು ಹೊಂದುವನು.

ಯಃ ಕುರ್ಯಾದ್ದೀಪದಾನಂ ಚ ರಾತ್ರೌ ಜಾಗರಣೇ ಮಮ ।
ನಿಮಿಷೇ ನಿಮಿಷೇ ಪುತ್ರ ಲಭತೇ ಗೋಽಯುತಂ ಫಲಂ ॥ ೧೯ ॥
ಯೋ ದದ್ಯಾಜ್ಜಾಗರೇ ಪುತ್ರ ಹವಿಷ್ಯಾನ್ನಸಮುದ್ಭವಂ ।
ನೈವೇದ್ಯಂ ಲಭತೇ ಪುಣ್ಯಂ ಶಾಲಿಶೈಲಸಮುದ್ಭವಂ ॥ ೨೦ ॥
ಪಕ್ವಾನ್ನಾನಿ ಚ ಯೋ ದದ್ಯಾತ್ ಫಲಾನಿ ವಿವಿಧಾನಿ ಚ ।
ಜಾಗರೇ ಮೇ ಚತುರ್ವಕ್ತ್ರ ಲಭತೇ ಗೋಶತಂ ಫಲಂ ॥ ೨೧ ॥
ಕರ್ಪೂರೇಣ ಚ ತಾಂಬೂಲಂ ದದಾತಿ ಮಮ ಜಾಗರೇ ।
ಮದ್ಭಕ್ತೋ ಮತ್ಪ್ರಸಾದೇನ ಸಪ್ತದ್ವೀಪಾಧಿಪೋ ಭವೇತ್ ॥ ೨೨ ॥
ಜಾಗರೇ ಮಮ ದೇವೇಶ ಯಃ ಕುರ್ಯಾತ್ಪುಷ್ಪಮಂಡಪಂ ।
ಸ ಪುಷ್ಪಕವಿಮಾನೇನ ಕ್ರೀಡತೇ ಮಮ ಸದ್ಮನಿ ॥ ೨೩ ॥
ಜಾಗರೇ ಮೇ ತು ಯೋ ಧೂಪಂ ಸಕರ್ಪೂರಂ ಸಗುಗ್ಗುಲಂ ।
ದದಾತಿ ದಹತೇ ಪಾಪಂ ಜನ್ಮಲಕ್ಷಸಮುದ್ಭವಂ ॥ ೨೪ ॥

---

೧೯. ಪುತ್ರನೇ! ಯಾವನು ಜಾಗರಣೆಯ ರಾತ್ರಿಯಲ್ಲಿ ನನಗೆ ದೀಪವನ್ನು ಅರ್ಪಿಸುವನೋ, ಆತನು ಒಂದೊಂದು ನಿಮಿಷಕ್ಕೂ ಹತ್ತುಸಾವಿರ ಗೋದಾನ ಗಳನ್ನು ಮಾಡಿದ ಪುಣ್ಯವನ್ನು ಪಡೆಯುವನು.

೨೦. ಯಾವನು ಜಾಗರಣದ ಯಾಮ ಪೂಜೆಗಳಲ್ಲಿ ಹವಿಷ್ಯಾನ್ನವನ್ನು ನೈವೇದ್ಯವಾಗಿ ಅರ್ಪಿಸುವನೋ, ಅವನು ಅನ್ನಕೂಟದ ದಾನವನ್ನು ಮಾಡಿದ ಪುಣ್ಯವನ್ನು ಹೊಂದುವನು.

೨೧. ಓ ಚತುರಾನನ! ನನ್ನ ಜಾಗರಣಪೂಜೆಯಲ್ಲಿ ಪಕ್ವಾನ್ನಗಳನ್ನೂ ಬಹು ವಿಧ ಫಲೋಪಹಾರಗಳನ್ನೂ ಯಾವನು ಸಮರ್ಪಿಸುವನೋ, ಅವನಿಗೆ ನೂರು ಗೋದಾನಗಳನ್ನು ಮಾಡಿದ ಫಲವು ಲಭಿಸುವುದು.

೨೨. ಕರ್ಪೂರಾದಿ ವಾಸನಾದ್ರವ್ಯಗಳಿಂದ ಕೂಡಿದ ತಾಂಬೂಲವನ್ನು ಜಾಗರಣೆಯ ಪೂಜೆಯಲ್ಲಿ ನಿವೇದಿಸುವ ಮಾನವನು ನನ್ನ ಭಕ್ತನಾಗಿ ನನ್ನ ಅನುಗ್ರಹದಿಂದ ಸಪ್ತದ್ವೀಪಯುತವಾದ ಭೂಮಿಗೆಲ್ಲ ಚಕ್ರವರ್ತಿಯಾಗಿ ಜನಿಸುವನು.

೨೩. ಎಲೈ ದೇವಮುಖ್ಯನೇ! ಯಾವನು ಜಾಗರಣೆಯ ದಿನದಲ್ಲಿ ನನಗೆ ಪುಷ್ಪಮಂಟಪದ ಸೇವೆಯನ್ನು ಮಾಡಿಸುವನೋ, ಅವನು ಪುಷ್ಪಕವಿಮಾನದಲ್ಲಿ ಕುಳಿತು ನನ್ನ ಲೋಕದಲ್ಲಿ ಭೋಗಗಳನ್ನನುಭವಿಸುತ್ತಿರುವನು.

೨೪. ಏಕಾದಶಿಯ ದಿನದಲ್ಲಿ ಯಾವನು ಕರ್ಪೂರ ಗುಗ್ಗುಲಗಳಿಂದೊಡ ಗೂಡಿದ ಧೂಪವನ್ನು ನನಗೆ ಆಘ್ರಾಣಮಾಡಿಸುವನೋ, ಅವನು ಲಕ್ಷ ಜನ್ಮಗಳಲ್ಲಿ ಮಾಡಿದ ಪಾಪಗಳನ್ನೆಲ್ಲ ಕಳೆದುಕೊಳ್ಳುವನು.

ಸ್ನಾಪಯೇಜ್ಜಾಗರೇ ಯೋ ಮಾಂ ದಧಿಕ್ಷೀರಘೃತಾಂಬುಕೈಃ ।
ಭೋಗಾನಿಹ ಲಭೇದ್ವೈ ಸ ಹ್ಯಂತೇ ಚ ಪರಮಾಂ ಗತಿಂ ॥ ೨೫ ॥
ದಿವ್ಯಾಂಬರಾಣಿ ಯೋ ದದ್ಯಾತ್ ಫಲಾನಿ ವಿವಿಧಾನಿ ಚ ।
ಸ ಚಿರಂ ವಸತೇ ಸ್ವರ್ಗೇ ತಂತುಸಂಖ್ಯಾಸಮಾನಿ ವೈ ॥ ೨೬ ॥
ದದ್ಯಾದಾಭರಣಂ ಯೋ ಮೇ ಹೇಮಜಂ ರತ್ನಸಂಭವಂ ।
ಸಪ್ತಕಲ್ಪಾನಿ ವಸತೇ ಸೋತ್ಸಂಗೇ ಮತ್ಪ್ರಿಯೋ ಮಮ ॥ ೨೭ ॥
ಘೃತೇನ ದೀಪಕಂ ಯೋ ಮೇ ಗವ್ಯೇನ ಚ ವಿಶೇಷತಃ ।
ಜ್ವಾಲಯೇಜ್ಜಾಗರೇ ರಾತ್ರೌ ನಿಮಿಷೇ ಗೋಽಯುತಂ ಫಲಂ ॥ ೨೮ ॥
ಜಾಗರೇ ಮೇ ಚತುರ್ವಕ್ತ್ರ ಕರ್ಪೂರೇಣ ಚ ದೀಪಕಂ ।
ಯೋ ಜ್ವಾಲಯೇತ ನೀರಾಜಂ ಕಪಿಲಾದಾನಜಂ ಫಲಂ ॥ ೨೯ ॥
ಯಃ ಪುನಃ ಕುರುತೇ ದೀಪಂ ಗೀತಂ ನೃತ್ಯಂ ಚ ಪೂಜನಂ ।
ಶತಕ್ರತುಸಮಂ ಪುಣ್ಯಂ ವ್ರತೈರ್ದಾನೈರ್ದಶಕೈರಪಿ ॥ ೩೦ ॥

೨೫. ಯಾವನು ಅಂದು ಮೊಸರು, ಹಾಲು, ತುಪ್ಪ, ಶುದ್ಧೋದಕಗಳಿಂದ ನನಗೆ ಸ್ನಾನವನ್ನು ಮಾಡಿಸುವನೊ, ಅವನು ಇಲ್ಲಿ ಸಕಲ ಭೋಗಗಳನ್ನೂ ಪಡೆದು ಕೊನೆಯಲ್ಲಿ ಉತ್ತಮಗತಿಯನ್ನೂ ಹೊಂದುವನು.

೨೬. ದಿವ್ಯಪೀತಾಂಬರಗಳನ್ನಾಗಲಿ, ವಿವಿಧ ಫಲಗಳನ್ನಾಗಲಿ ಯಾವನು ನನಗೆ ಸಮರ್ಪಿಸುವನೊ, ಅವನು ಆ ವಸ್ತ್ರಗಳ ಅಥವ ಫಲಗಳ ಸಂಖ್ಯೆಗನು ಗುಣವಾದಷ್ಟು ವರ್ಷಗಳವರೆವಿಗೂ ಸ್ವರ್ಗಲೋಕದಲ್ಲಿ ವಾಸಮಾಡುವನು.

೨೭. ಯಾವನು ಚಿನ್ನದ ಅಥವ ನವರತ್ನಗಳ ಆಭರಣಗಳನ್ನು ಸಮರ್ಪಿಸುವನೊ, ಅವನು ಏಳುಕಲ್ಪಗಳವರೆವಿಗೂ ನನ್ನ ಸಮೀಪದಲ್ಲಿಯೇ ನನಗೆ ಅತ್ಯಂತ ಪ್ರಿಯನಾಗಿ ನೆಲಸಿರುವನು.

೨೮. ತುಪ್ಪದ (ವಿಶೇಷವಾಗಿ ಹಸುವಿನ ತುಪ್ಪದ) ದೀಪವನ್ನು ಯಾವ ಭಕ್ತನು ಜಾಗರಣೆಯ ವೇಳೆಯಲ್ಲಿ ರಾತ್ರಿ ಹೊತ್ತಿಸಿಡುವನೊ, ಅವನು ಒಂದೊಂದು ನಿಮಿಷಕ್ಕೂ ಹತ್ತುಸಾವಿರ ಗೋದಾನಗಳನ್ನು ಮಾಡಿದ ಪುಣ್ಯವನ್ನು ಹೊಂದುವನು.

೨೯. ಎಲೈ ಚತುರ್ವಕ್ತ್ರನೆ! ಜಾಗರಣೆಯ ರಾತ್ರಿಯಲ್ಲಿ ಕರ್ಪೂರದ ಉತ್ತರನೀರಾಜನವನ್ನು ಯಾವನು ನನಗೆ ಬೆಳಗುವನೊ, ಅವನು ಕಪಿಲೆಯಾದ ಆಕಳನ್ನು ದಾನಮಾಡಿದ ಫಲಕ್ಕೆ ಭಾಗಿಯಾಗುವನು.

೩೦. ಯಾವನು ದೀಪೋತ್ಸವವನ್ನೂ, ಸಂಗೀತವನ್ನೂ, ನರ್ತನವನ್ನೂ, ಪೂಜೆಯನ್ನೂ ಮಾಡುವನೊ, ಅವನು ಒಂದು ನೂರು ಯಜ್ಞಗಳನ್ನೂ ವ್ರತಗಳನ್ನೂ, ದಾನಗಳನ್ನೂ ಮಾಡಿದ ಪುಣ್ಯವನ್ನು ಹೊಂದುವನು.

ಸ್ವಯಂ ಯಃ ಕುರುತೇ ಗೀತಂ ವಿಲಜ್ಜೋ ನೃತ್ಯತೇ ಯದಿ ।
ಸ ಲಭೇನ್ನಿಮಿಷಾರ್ಧೇನ ಕೋಟಿಯಜ್ಞಕೃತಂ ಫಲಂ ॥ ೩೧ ॥
ನಿವಾರಯತಿ ಯೋ ಗೀತಂ ನೃತ್ಯಂ ಜಾಗರಣೇ ಮಮ ।
ಷಷ್ಟಿರ್ಯುಗಸಹಸ್ರಾಣಿ ಪಚ್ಯತೇ ರೌರವಾದಿಷು ॥ ೩೨ ॥
ನೃತ್ಯಮಾನಸ್ಯ ಮರ್ತ್ಯಸ್ಯ ಯೇ ಕೇಚಿನ್ನಿಕಟೇ ಗತಾಃ ।
ವಿಮುಕ್ತಾ ಧರ್ಮರಾಜೇನ ಮುಕ್ತಾ ಯಾಂತಿ ಚ ಮತ್ಪದಂ ॥ ೩೩ ॥
ನೃತ್ಯಮಾನಸ್ಯ ಮರ್ತ್ಯಸ್ಯ ಉಪಹಾಸಂ ಕರೋತಿ ಯಃ ।
ಜಾಗರೇ ಯಾಂತಿ ನಿರಯಂ ಯಾವದಿಂದ್ರಾಶ್ಚತುರ್ದಶ ॥ ೩೪ ॥
ಜಾಗರೇ ಮಮ ಯಃ ಕುರ್ಯಾತ್ ಭಕ್ತ್ಯಾ ಪುಸ್ತಕವಾಚನಂ ।
ಶ್ಲೋಕಸಂಖ್ಯಾಯುಗಾನ್ಯೇವ ಸ ವಸೇನ್ಮಮ ಸನ್ನಿಧೌ ॥ ೩೫ ॥
ಪ್ರದಕ್ಷಿಣಾಪ್ರದಾನೇನ ಯತ್ಫಲಂ ಕಥಿತಂ ಬುಧೈಃ ।
ನ ತತ್ಕೋಟಿಮುಖೈಃ ಪುಣ್ಯಂ ಯುಗಸಂಖ್ಯೈರವಾಪ್ಯತೇ ॥ ೩೬ ॥

೩೧. ಯಾವನು ತಾನೇ ಸಂಗೀತವನ್ನು ಹಾಡುತ್ತ ನಾಚಿಕೆಯನ್ನು ದೂರ ಮಾಡಿ ನರ್ತನಸೇವೆಯನ್ನನುಸರಿಸುವನೊ, ಅವನು ಅರ್ಧನಿಮಿಷದ ಸೇವೆ ಯಿಂದಲೇ ಕೋಟಿಯಜ್ಞಗಳ ಫಲವನ್ನು ಪಡೆಯುವನು.

೩೨. ಜಾಗರಣೆಯಲ್ಲಿ ನಡೆಯುವ ನೃತ್ಯ ಗೀತಾದಿಗಳನ್ನು ಯಾವನು ತಡೆಯಲು ಪ್ರಯತ್ನಿಸುವನೊ, ಅವನು ಅರುವತ್ತುಸಾವಿರ ವರ್ಷಗಳ ಕಾಲ ರೌರವಾದಿ ನರಕಗಳಲ್ಲಿ ಯಾತನೆಯನ್ನನುಭವಿಸುವನು.

೩೩. ನರ್ತನ ಮಾಡುತ್ತಿರುವವನ ಸಮೀಪದಲ್ಲಿ ಸೇರಿರುವ ಯಾವ ವರ್ಣಾಶ್ರಮದವರಾದರೂ ಯಮಧರ್ಮರಾಜನ ಆಳ್ವಿಕೆಯಿಂದ ಬಿಡುಗಡೆಯನ್ನು ಹೊಂದಿ ನನ್ನ ಲೋಕವನ್ನು ಸೇರುವರು.

೩೪. ಜಾಗರಣ ಕಾಲದಲ್ಲಿ ನೃತ್ಯ ಮಾಡುವ ಭಾಗವತನನ್ನು ಅಪಹಾಸ್ಯ ಮಾಡುವ ಮಾನವನು ಹದಿನಾಲ್ಕು ಇಂದ್ರಕಲ್ಪಗಳವರೆಗೂ ನರಕವನ್ನನು ಭವಿಸುವನು.

೩೫. ಜಾಗರಣದಲ್ಲಿ ಯಾವನು ಪುರಾಣಾದಿ ಪುಸ್ತಕಗಳ ಪಠನವನ್ನು ಮಾಡುವನೊ, ಅವನು ಪಠಿಸಿದ ಶ್ಲೋಕಗಳ ಸಂಖ್ಯೆಗನುಗುಣವಾಗಿ ನನ್ನ ಸನ್ನಿಧಿಯಲ್ಲಿ ವಾಸಮಾಡುವನು.

೩೬. ಮಹಾ ವಿಷ್ಣುವಿಗೆ ಪ್ರದಕ್ಷಿಣೆಯನ್ನು ಮಾಡುವುದರಿಂದ ಲಭಿಸುವ ಪುಣ್ಯವು ಪ್ರಜ್ಞಾವಂತರಿಗೆ ಕೋಟಿ ಯಜ್ಞಗಳಿಂದಲೂ ಅಷ್ಟೇ ಯುಗಗಳಲ್ಲಿಯೂ ಲಭಿಸಲಾರದು.

ದೀಪಮಾಲಾ ಮಮಾಗ್ರೇ ವೈ ಯಃ ಕುರ್ಯಾಜ್ಜಾಗರೇ ಸುತ ।
ವಿಮಾನಕೋಟಿಸಂಯುಕ್ತ ಆಕಲ್ಪಂ ವಸತೇ ದಿವಿ ॥ ೩೭ ॥
ಮಮ ಬಾಲಚರಿತ್ರಾಣಿ ಜಾಗರೇ ಪಠತೇ ಹಿ ಯಃ ।
ಯುಗಕೋಟಿಸಹಸ್ರಾಣಿ ಶ್ವೇತದ್ವೀಪೇ ವಸೇನ್ನರಃ ॥ ೩೮ ॥
ತಸ್ಮಾಜ್ಜಾಗರಣಂ ಕಾರ್ಯಂ ಪಕ್ಷಯೋಃ ಶುಕ್ಲಕೃಷ್ಣಯೋಃ ॥ ೩೯ ॥
ಯೋ ಗೀತಾಂ ಪಠತೇ ರಾತ್ರೌ ಮಮ ನಾಮಸಹಸ್ರಕಂ ।
ವೇದೋಕ್ತಾನಾಂ ಪುರಾಣಾನಾಂ ಜಾಗರಾತ್ಪುಣ್ಯಮಾಪ್ನುಯಾತ್ ॥೪೦॥
ಧೇನುದಾನಂ ತು ಯಃ ಕುರ್ಯಾತ್ ಜಾಗರೇ ಮಮ ಪುತ್ರಕ ।
ಲಭತೇ ನಾತ್ರ ಸಂದೇಹಃ ಸಪ್ತದ್ವೀಪವತೀಫಲಂ ॥ ೪೧ ॥
ಸರ್ವೇಷಾಮೇವ ಪುಣ್ಯಾನಾಂ ಮಹತ್ಪುಣ್ಯಂ ಮಹೀತಲೇ ।
ದ್ವಾದಶೀಜಾಗರಂ ಪುತ್ರ ಪ್ರಸಿದ್ಧಂ ಭುವನತ್ರಯೇ ॥ ೪೨ ॥
ಜಾಗರಂ ಯೇ ಚ ಕುರ್ವಂತಿ ಕರ್ಮಣಾ ಮನಸಾ ಗಿರಾ ।
ನ ತೇಷಾಂ ಪುನರಾವೃತ್ತಿರ್ಮಮ ಲೋಕಾತ್ಕಥಂಚನ ॥ ೪೩ ॥

---

೩೭. ಮಗನೆ! ಯಾವನು ಜಾಗರಣೆಯಲ್ಲಿ ನನ್ನ ಮುಂದೆ ದೀಪಮಾಲೆಯನ್ನು ಹಚ್ಚಿಸುವನೊ, ಅವನು ಕೋಟಿ ವಿಮಾನಗಳಿಂದ ಪರಿವೃತನಾಗಿ ಸ್ವರ್ಗಲೋಕದಲ್ಲಿ ಕಲ್ಪಾಂತದವರೆವಿಗೂ ವಾಸಮಾಡುವನು.

೩೮. ನನ್ನ ಬಾಲಲೀಲೆಗಳ ಚರಿತ್ರೆಗಳನ್ನು ಜಾಗರಣ ಕಾಲದಲ್ಲಿ ಪ್ರವಚನ ಮಾಡುವ ಮನುಷ್ಯನು ಸಾವಿರಕೋಟಿ ಯುಗಗಳವರೆವಿಗೂ ಶ್ವೇತದ್ವೀಪದಲ್ಲಿ ವಾಸಿಸುವನು.

೩೯. ಆದುದರಿಂದ ಪ್ರತಿಮಾಸದ ಶುಕ್ಲಕೃಷ್ಣಪಕ್ಷಗಳ ಏಕಾದಶಿಗಳಲ್ಲಿಯೂ ಜಾಗರಣೆಯನ್ನು ಅವಶ್ಯಕವಾಗಿ ಮಾಡಲೇಬೇಕು.

೪೦. ಜಾಗರಣೆಯ ರಾತ್ರಿಯಲ್ಲಿ ಭಗವದ್ಗೀತೆಯನ್ನಾಗಲಿ, ನನ್ನ ಸಹಸ್ರನಾಮಾವಳಿಯನ್ನಾಗಲಿ ಪಠಿಸಲು ವೇದಶಾಸ್ತ್ರಗಳನ್ನು ಪುರಾಣಗಳನ್ನು ಪಾರಾಯಣ ಮಾಡಿದ ಫಲವನ್ನು ಹೊಂದುವನು.

೪೧. ಪುತ್ರನೆ! ಯಾವನು ನನಗೆ ಪ್ರಿಯವಾದ ಏಕಾದಶೀ ಜಾಗರಣವನ್ನು ಮಾಡುತ್ತಾ ಗೋದಾನವನ್ನು ಮಾಡುವನೊ, ಅವನು ಸಪ್ತದ್ವೀಪಗಳಿಂದೊಡಗೂಡಿದ ಭೂಮಿಯೆಲ್ಲವನ್ನೂ ದಾನಮಾಡಿದ ಪುಣ್ಯವನ್ನು ಸಂಪಾದಿಸುವನು.

೪೨. ಪುತ್ರನೆ! ಸಕಲ ಪುಣ್ಯಗಳಿಗಿಂತಲೂ ಭೂಲೋಕದಲ್ಲಿ ದ್ವಾದಶೀ ಜಾಗರಣೆಯೇ ಮಹಾ ಪುಣ್ಯಪ್ರದವೆನಿಸಿರುವುದು. ಈ ಜಾಗರಣೆಯು ಮೂರು ಲೋಕಗಳಲ್ಲಿಯೂ ಪ್ರಸಿದ್ಧವಾಗಿರುವುದು.

೪೩. ಯಾವ ಮಾನವರು ಶರೀರದಿಂದಲೂ, ಮನಸ್ಸಿನಿಂದಲೂ ಮಾತು

ಪ್ರೋತ್ಸಾಹಯಿತ್ವಾ ಲೋಕಾನ್ಯಃ ಕುರುತೇ ಜಾಗರಂ ನಿಶಿ ।
ಪ್ರಾಪ್ನೋತಿ ಚಕ್ರವರ್ತಿತ್ವಂ ಸತ್ಯಂ ಮೇ ವ್ಯಾಹೃತಂ ಸುತ ॥ ೪೪ ॥
ಸಂಮಾನಿತಾಃ ಕಕುತ್ಸ್ಥೇನ ರಾತ್ರೌ ಜಾಗರಕಾರಿಣಃ ।
ಸ್ವಶಕ್ತ್ಯಾ ಚೈವ ದಾನೇನ ಪ್ರಾಪ್ತಂ ರಾಜ್ಯಂ ಸುದುರ್ಲಭಂ ॥ ೪೫ ॥
ಯೇ ಕೇಚಿದ್ಗಾಯಕಾ ವಿಪ್ರಾ ವಾದಕಾ ನರ್ತಕಾಶ್ಚ ಯೇ ।
ನರ್ತಕೀಸಹಿತಾ ಯಾಂತಿ ಮಮ ಲೋಕೇ ಸನಾತನೇ ॥ ೪೬ ॥
ದುರ್ಯೋನಿಷು ಗತೈಸ್ಸರ್ವೈಃ ಕೃತ್ವಾ ಜಾಗರಣಂ ಮಮ ।
ಸಂಪ್ರಾಪ್ತಂ ಪೃಥಿವೀಶತ್ವಂ ಕಾಮುಕೈರ್ಮುನಿಸತ್ತಮ ॥ ೪೭ ॥
ನಿಷ್ಕಾಮಾ ಮುಕ್ತಿಮಾಪನ್ನಾಃ ಶ್ವಪಚಾದ್ಯಾಶ್ಚ ಜಾಗರಾತ್ ।
ವಿವೇಕೋ ನಾಸ್ತಿ ವರ್ಣಾನಾಂ ಮಮ ಜಾಗರಕಾರಿಣಾಂ ॥ ೪೮ ॥
ನ ತಥಾ ಪಾವನಂ ಧ್ಯಾನಂ ನ ತಥಾ ಜಾಹ್ನವೀಜಲಂ ।
ನ ತಥಾ ಪಾವನಂ ಜಾಪ್ಯಂ ಮುಕ್ತ್ವೈಕಂ ಜಾಗರಂ ಮಮ ॥ ೪೯ ॥

---

ಗಳಿಂದಲೂ ಜಾಗರಣೆಯನ್ನು ಆಚರಿಸುವರೊ, ಅವರಿಗೆ ನನ್ನ ಲೋಕದಿಂದ ಎಂದಿಗೂ ಭೂಮಂಡಲಕ್ಕೆ ಪತನವು ಸಂಭವಿಸುವುದಿಲ್ಲ.

೪೪. ಯಾವನು ಸಕಲಜನರನ್ನೂ ಪ್ರೋತ್ಸಾಹಗೊಳಿಸಿ ರಾತ್ರಿಯಲ್ಲಿ ಜಾಗರಣೆಯನ್ನು ಮಾಡುವನೊ, ಅವನು ಚಕ್ರವರ್ತಿಪದವಿಯನ್ನು ಪಡೆಯು ವನು. ಈ ನನ್ನ ಮಾತು ಸತ್ಯವಾದುದು.

೪೫. ಪೂರ್ವದಲ್ಲಿ ಕಕುತ್ಸ್ಥಮಹಾರಾಜನು ರಾತ್ರಿಯಲ್ಲಿ ಜಾಗರಣೆಯನ್ನು ಮಾಡಿದ ಜನರಿಗೆ ತನ್ನ ಶಕ್ತ್ಯನುಸಾರವಾಗಿ ಅನೇಕ ದಾನಗಳನ್ನು ಕೊಟ್ಟು ಮರ್ಯಾದೆ ಮಾಡಿದನು. ಆದುದರಿಂದ ಆತನಿಗೆ ಅತ್ಯಂತ ದುರ್ಲಭವಾದ ರಾಜ್ಯವೂ ಮತ್ತೆ ಲಭಿಸಿತು.

೪೬. ಜಾಗರಣೆಯಲ್ಲಿ ಸಹಾಯಕರಾದ ಗಾಯಕರೂ, ಬ್ರಾಹ್ಮಣರೂ, ವಾದ್ಯಗಾರರೂ, ನರ್ತಕರೂ, ನರ್ತಕಿಯರೂ ಕೂಡ ಶಾಶ್ವತವಾದ ನನ್ನ ಲೋಕದಲ್ಲಿ ಸ್ಥಾನಗಳನ್ನು ಪಡೆಯುವರು.

೪೭. ನೀಚಯೋನಿಗಳಲ್ಲಿ ಜನಿಸಿದವರೂ ಕೂಡ ನನ್ನ ವಾಸರದಲ್ಲಿ ಜಾಗರಣೆಯನ್ನು ಮಾಡಲು ಅವರಿಗೆ ಅಭಿಲಷಿತಗಳಾದ ಚಕ್ರವರ್ತಿ ಪದವಿಗಳು ಸಂಪ್ರಾಪ್ತವಾದುವು.

೪೮. ನಿಷ್ಕಾಮರಾಗಿ ಜಾಗರಣೆಯನ್ನು ಮಾಡಿದ ಚಂಡಾಲಾದಿ ನೀಚರೂ ಕೂಡ ಮೋಕ್ಷವನ್ನು ಹೊಂದಿದರು. ನನಗಾಗಿ ಜಾಗರಣೆಯನ್ನು ಮಾಡುವ ಜನರಲ್ಲಿ ಯಾವ ವರ್ಣವಿಭೇದಗಳನ್ನೂ ಎಣಿಸಬೇಕಾಗಿಲ್ಲ.

೪೯. ಈ ಜಾಗರಣೆಯೊಂದನ್ನು ಬಿಟ್ಟರೆ ಕಲಿಯುಗದಲ್ಲಿ ಧ್ಯಾನವಾಗಲಿ,

ದ್ವಾದಶೀದಿವಸೇ ಪ್ರಾಪ್ತೇ ಯೇ ಕುರ್ವಂತಿ ಹಿ ಜಾಗರಂ ।
ತೇ ಧನ್ಯಾಸ್ತೇ ಕೃತಾರ್ಥಾ ವೈ ಕಲಿಕಾಲೇ ನ ಸಂಶಯಃ ॥ ೫೦ ॥
ನ ಭೂಯಾನ್ಮಾನುಷೇ ಲೋಕೇ ದ್ವಾದಶೀವಿಮುಖೋ ನರಃ ।
ಅತೀತಾನಾಗತಾನ್ಸಾಪಿ ಪಾತಯೇನ್ನರಕೇ ಹಿ ಸಃ ॥ ೫೧ ॥
ವರಮೇಕೋ ಗುಣ್ಯೈರ್ಯುಕ್ತಃ ಕಿಂ ಜಾತೈರ್ಬಹುಭಿಸ್ಸುತೈಃ ।
ದ್ವಾದಶೀಜಾಗರಾತ್ಸರ್ವಾನ್ ತಾರಯೇದ್ಯೋ ಹಿ ಪೂರ್ವಜಾನ್ ॥ ೫೨ ॥
ಮಾಹಾತ್ಮ್ಯಂ ಪಠತೇ ಭಕ್ತ್ಯಾ ಮಯೋಕ್ತಂ ಜಾಗರೋದ್ಭವಂ ।
ದ್ವಾದಶೀಸಂಭವಃ ಪುತ್ರಃ ಕುಲಾನಾಂ ತಾರಯೇಚ್ಛತಂ ॥ ೫೩ ॥
ಅಗಮ್ಯಾಗಮನೇ ಪಾಪಂ ಅಭಕ್ಷ್ಯಸ್ಯಾಪಿ ಭಕ್ಷಣೇ ।
ಪಾಪಂ ವಿಲಯಮಾಯಾತಿ ಕೃತೇ ಜಾಗರಣೇ ಸುತ ॥ ೫೪ ॥
ಅಜ್ಞಾನಾದ್ಯತ್ಕೃತಂ ಪಾಪಂ ಜ್ಞಾತ್ವಾ ಯತ್ಪಾತಕಂ ಕೃತಂ ।
ಪೂರ್ವಜನ್ಮಾರ್ಜಿತಂ ಪಾಪಂ ಇಹ ಜನ್ಮನಿ ಯತ್ಕೃತಂ ॥ ೫೫ ॥

---

ಗಂಗೋದಕ ಪ್ರಾಶನವಾಗಲಿ, ಜಪತಪಗಳಾಗಲಿ ಮನುಷ್ಯನನ್ನು ಪಾವನ ಗೊಳಿಸಲಾರವು.

೫೦. ದ್ವಾದಶಿಯ ದಿವಸವು ಸಂಪ್ರಾಪ್ತವಾಗಲು ಯಾರು ಜಾಗರಣೆ ಯನ್ನು ಮಾಡುವರೊ, ಈ ಕಲಿಕಾಲದಲ್ಲಿ ಅವರೇ ಧನ್ಯರು. ಅವರೇ ಕೃತಾರ್ಥ ರೆಂಬುದರಲ್ಲಿ ಸಂದೇಹವೇ ಇಲ್ಲ.

೫೧. ಮನುಷ್ಯಲೋಕದಲ್ಲಿ ಯಾವನೂ ಧ್ವಾದಶೀವ್ರತ ವಿಮುಖನಾಗ ಬಾರದು. ಆ ಮಾನವನು ಹಿಂದೆ ಆಗಿಹೋದವರ ಮತ್ತು ಮುಂದೆ ಬರುವವರ ಸಂತತಿಗಳನ್ನೆಲ್ಲ ನರಕದಲ್ಲಿ ತಳ್ಳುವನು.

೫೨. ಮನುಷ್ಯನಿಗೆ ಅನೇಕ ಪುತ್ರರಾಗುವುದರಿಂದ ಪ್ರಯೋಜನವೇನು? ದ್ವಾದಶಿಯ ಜಾಗರಣದಿಂದ ತನ್ನ ಪೂರ್ವಿಕರನ್ನೆಲ್ಲ ಉದ್ಧಾರಮಾಡಲು ಶಕ್ತನಾದ ಸದ್ಗುಣವಂತನಾದ ಒಬ್ಬ ಪುತ್ರನೇ ಇದ್ದರೆ ಸಾಕು.

೫೩. ದ್ವಾದಶಿಯ ದಿನದಲ್ಲಿ ಜನಿಸಿದ ಪುತ್ರನು ನನ್ನಿಂದ ನಿರೂಪಿಸಲ್ಪಟ್ಟ ಈ ಜಾಗರಣೆಯ ಮಾಹಾತ್ಮ್ಯೆಯನ್ನು ಭಕ್ತಿಯುಕ್ತನಾಗಿ ಪಾರಾಯಣಮಾಡಲು ಒಂದು ನೂರು ಕುಲಗಳನ್ನೂ ಉದ್ಧರಿಸುವನು.

೫೪. ಪುತ್ರನೆ! ಅಗಮ್ಯಸ್ತ್ರೀಯ ಸಹವಾಸದ ಪಾಪವೂ, ಅಭಕ್ಷ್ಯಭಕ್ಷಣ ದೋಷವೂ ಜಾಗರಣೆಯನ್ನು ಮಾಡಲು ಶೀಘ್ರದಲ್ಲಿಯೇ ನಾಶವನ್ನು ಹೊಂದುವುವು.

೫೫. ಅಜ್ಞಾನಮೂಲಕವಾಗಿ ಮಾಡಿದ ಪಾಪಗಳಾಗಲಿ, ಬುದ್ಧಿಪೂರ್ವಕ ವಾಗಿ ಮಾಡಿದ ಪಾಪಗಳಾಗಲಿ, ಪೂರ್ವ ಜನ್ಮಗಳಿಂದ ಅನುಗತವಾದ ಪಾಪ

ಸಿಧ್ಯಂತಿ ಸರ್ವಕಾರ್ಯಾಣಿ ಮನಸಾ ಚಿಂತಿತಾನ್ಯಪಿ ।
ದ್ವಾದಶ್ಯಾಂ ವೈ ಚತುರ್ವಕ್ತ್ರ ರಾತ್ರೌ ಜಾಗರಣೇ ಕೃತೇ ॥ ೫೬ ॥
ದ್ವಾದಶೀ ಜಾಗರೇಣೈವ ಮುಕ್ತಿಂ ಗಚ್ಛಂತಿ ಮಾನವಾಃ ॥ ೫೭ ॥
ನ ತತ್ಪುಣ್ಯಂ ಕುರುಕ್ಷೇತ್ರೇ ಪ್ರಯಾಗೇ ವಸತಾಂ ತಥಾ ।
ಮಾಹಾತ್ಮ್ಯಂ ವಸತಾಂ ಪುಂಸಾಂ ಯತ್ಫಲಂ ದ್ವಾದಶೀಷು ಚ ॥ ೫೮ ॥
ನಾಶ್ವಮೇಧಸಹಸ್ರೈಸ್ತು ತೀರ್ಥಕೋಟ್ಯವಗಾಹನಾತ್ ।
ತತ್ಫಲಂ ಪ್ರಾಪ್ಯತೇ ಪುತ್ರ ದ್ವಾದಶೀಜಾಗರೇ ಕೃತೇ ॥ ೫೯ ॥
ಪಠೇದ್ವಾ ಶೃಣುಯಾದ್ವಾಽಪಿ ಮಾಹಾತ್ಮ್ಯಂ ದ್ವಾದಶೀಭವಂ ।
ಸರ್ವಪಾಪವಿಶುದ್ಧಾತ್ಮಾ ಸ ಲಭೇಚ್ಛಾಶ್ವತೀಂ ಗತಿಂ ॥ ೬೦ ॥
ಸರ್ವೇ ದುಷ್ಟಾಃ ಸಮಸ್ತಾಶ್ಚ ಸೌಮ್ಯಾಸ್ತಸ್ಯ ಸದಾ ಗ್ರಹಾಃ ।
ಸಂತತೇರ್ನ ವಿಯೋಗಸ್ತು ದ್ವಾದಶೀ ಯಸ್ಯ ಕಾರಣಂ ॥ ೬೧ ॥

---

ಗಳಾಗಲಿ, ಈ ಜನ್ಮದಲ್ಲಿ ಸಂಪಾದಿಸಿದ ಪಾತಕಗಳಾಗಲಿ, ಎಲ್ಲವೂ ದ್ವಾದಶಿಯ ಜಾಗರಣೆಯಿಂದ ನಾಶವಾಗುವುವು.

೫೬–೫೭. ಎಲೈ ಚತುರಾನನನೇ! ಮನಸ್ಸಿನಲ್ಲಿ ಯೋಚಿಸಿದ ಕಾರ್ಯಗಳೂ ಕೂಡ ದ್ವಾದಶಿಯ ರಾತ್ರಿಯ ಜಾಗರಣೆಯಿಂದ ನಿಷ್ಪ್ರತ್ಯೂಹವಾಗಿ ಸಿದ್ಧಿಯನ್ನು ಹೊಂದುವುವು. ಈ ದ್ವಾದಶಿಯ ರಾತ್ರಿಯ ಜಾಗರಣೆಯನ್ನು ಮಾಡುವುದ ರಿಂದಲೇ ಮನುಷ್ಯರು ಮೋಕ್ಷವನ್ನು ಹೊಂದುವರು.

೫೮. ಈ ಕಲಿಯುಗದಲ್ಲಿ ದ್ವಾದಶಿಯ ಆಚರಣೆಯಿಂದ ಯಾವ ಪುಣ್ಯ ಮಾಹಾತ್ಮ್ಯವು ಲಭಿಸುವುದೊ, ಆ ಪುಣ್ಯವು ಮನುಷ್ಯರಿಗೆ ಕುರುಕ್ಷೇತ್ರ ದಲ್ಲಿಯಾಗಲಿ ಪ್ರಯಾಗದಲ್ಲಿಯಾಗಲಿ ಯಾವಜ್ಜೀವವೂ ವಾಸಮಾಡುವವರಿಗೂ ಲಭಿಸಲಾರದು.

೫೯. ಪುತ್ರನೆ! ದ್ವಾದಶಿಯ ರಾತ್ರಿಯಲ್ಲಿ ಜಾಗರಣೆಯನ್ನು ಮಾಡುವುದ ರಿಂದ ಲಭಿಸುವ ಪುಣ್ಯವು ಒಂದು ಸಾವಿರ ಅಶ್ವಮೇಧಯಜ್ಞಗಳಿಂದಲೂ ಕೋಟಿ ತೀರ್ಥಗಳ ಸ್ನಾನಗಳಿಂದಲೂ ಪ್ರಾಪ್ತವಾಗಲಾರದು.

೬೦. ಯಾವ ಮನುಷ್ಯನು ಈ ದ್ವಾದಶೀ ಮಾಹಾತ್ಮ್ಯವನ್ನು ಓದುವನೊ, ಅಥವಾ ಕೇಳುವನೊ, ಅವನು ಸಕಲ ಪಾಪಗಳನ್ನೂ ಕಳೆದುಕೊಂಡು ಪರಿಶುದ್ಧ ನಾಗಿ ಶಾಶ್ವತವಾದ ಮೋಕ್ಷಪದವಿಯನ್ನು ಹೊಂದುವನು.

೬೧. ಯಾವನ ವಿಭವಕ್ಕೆ ದ್ವಾದಶಿಯು ಕಾರಣವಾಗಿರುವುದೊ, ಅವನಿಗೆ ಸಕಲ ದುರ್ಜನರೂ ಸ್ನೇಹಿತರಾಗುವರು. ಸಕಲಗ್ರಹಗಳೂ ಸರ್ವಕಾಲದಲ್ಲಿಯೂ ಸೌಮ್ಯಗಳಾಗಿರುವುವು. ಅವನ ವಂಶವು ಭೂಮಿಯಲ್ಲಿ ಎಂದಿಗೂ ವಿಯೋಗ ವನ್ನು ಹೊಂದುವುದಿಲ್ಲ.

ಮಮ ಕೀರ್ತಿರುಚಿರ್ನಿತ್ಯಂ ನ ವಿಪದ್ಯೇತ ಕರ್ಹಿಚಿತ್ ।
ರಣೇ ರಾಜಕುಲೇ ಚೈವ ಸರ್ವದಾ ವಿಜಯೀ ಭವೇತ್ ॥ ೬೨ ॥
ಧರ್ಮೋಪರಿ ಮತಿರ್ನಿತ್ಯಂ ಭಕ್ತಿರ್ಮಯಿ ಸುನಿರ್ಮಲಾ ।
ಪಾತಕಂ ನೈವ ಲಿಪ್ಯೇತ ದ್ವಾದಶೀಭಕ್ತಿತೋ ನರಂ ॥ ೬೩ ॥
ಪ್ರೇತತ್ವಂ ನೈವ ತಸ್ಯಾಸ್ತಿ ಕೃತೇ ಜಾಗರಣೇ ಮಮ ।
ಏಕಾದಶ್ಯಾ ವಿಹೀನಸ್ಯ ಪರಲೋಕಗತಿರ್ನ ಹಿ ।
ತಸ್ಮಾತ್ಸರ್ವಪ್ರಯತ್ನೇನ ತಥಾ ಕಾರ್ಯಂ ಹಿ ತದ್ದಿನಂ ॥ ೬೪ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ದ್ವಿತೀಯೇ ವೈಷ್ಣವಖಂಡೇ ಮಾರ್ಗಶೀರ್ಷಮಾಹಾತ್ಮ್ಯೇ ಬ್ರಹ್ಮವಿಷ್ಣುಸಂವಾದೇ "ಏಕಾದಶೀ ಜಾಗರಣ ಫಲಕಥನಂ" ನಾಮ ತ್ರಯೋದಶೋಽಧ್ಯಾಯಃ

---

೬೨. ಪ್ರತಿಮಾನವನೂ ನಿತ್ಯವೂ ನನ್ನ ಕೀರ್ತಿಯ ಕಥನದಲ್ಲಿ ಎಂದಿಗೂ ಜುಗುಪ್ಸೆಯನ್ನು ಹೊಂದಬಾರದು. ಅಂತಹವನು ಯುದ್ಧರಂಗದಲ್ಲಿಯೂ ರಾಜಾಸ್ಥಾನದಲ್ಲಿಯೂ ಯಾವಾಗಲೂ ವಿಜಯವನ್ನು ಪಡೆಯುವನು.

೬೩. ದ್ವಾದಶೀವ್ರತದ ನಿಯಮವಿರುವ ಮನುಷ್ಯನಿಗೆ ಧರ್ಮದಲ್ಲಿ ಶಾಶ್ವತವಾದ ಆಸಕ್ತಿಯಿರುವುದು. ನನ್ನಲ್ಲಿ ಪರಿಶುದ್ಧವಾದ ಅಂತರಂಗ ಭಕ್ತಿಯುಂಟಾಗುವುದು. ಆತನನ್ನು ಪಾಪವು ಎಂದಿಗೂ ಮುಟ್ಟಲಾರದು.

೬೪. ನನಗೆ ಪ್ರಿಯವಾದ ಜಾಗರಣೆಯನ್ನು ಯಾವನು ಮಾಡುವನೊ, ಅವನಿಗೆ ಪ್ರೇತಭಾವವುಂಟಾಗುವುದಿಲ್ಲ. ಏಕಾದಶೀವ್ರತಹೀನನಾದವನಿಗೆ ಪರಲೋಕದಲ್ಲಿ ಸದ್ಗತಿಯು ಸಿಕ್ಕಲಾರದು. ಆದುದರಿಂದ ಸರ್ವಪ್ರಕಾರದಿಂದಲೂ ಕಲಿಯುಗದಲ್ಲಿ ಆ ದಿನದ ಆಚರಣೆಯನ್ನು ನಡೆಸಲೇಬೇಕು.

ಇಲ್ಲಿಗೆ ಎಂಬತ್ತೊಂದು ಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀಸ್ಕಾಂದಮಹಾಪುರಾಣದ ಎರಡನೆಯ ವೈಷ್ಣವಖಂಡದ ಮಾರ್ಗಶೀರ್ಷಮಾಹಾತ್ಮ್ಯದ ಬ್ರಹ್ಮವಿಷ್ಣುಸಂವಾದದಲ್ಲಿ "ಏಕಾದಶೀ ಜಾಗರಣಫಲಕಥನ"ವೆಂಬ ಹದಿಮೂರನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

# ಅಥ ಚತುರ್ದಶೋಽಧ್ಯಾಯಃ

## ಮತ್ಸ್ಯೋತ್ಸವಕಥನಂ

ಶ್ರೀ ಭಗವಾನುವಾಚ:—

ತತಃ ಪ್ರಭಾತೇ ದ್ವಾದಶ್ಯಾಂ ಕಾರ್ಯೋ ಮತ್ಸ್ಯೋತ್ಸವೋ ಬುಧೈಃ ।
ಮಾರ್ಗಶೀರ್ಷೇ ಶುಕ್ಲಪಕ್ಷೇ ಯಥಾವಿಧ್ಯುಪಚಾರತಃ ॥ ೧ ॥
ಅಥ ಮಾರ್ಗಶಿರೇ ಮಾಸೇ ದಶಮ್ಯಾಂ ನಿಯತಾತ್ಮವಾನ್ ।
ಕೃತ್ವಾ ದೇವಾರ್ಚನಂ ಧೀಮಾನಗ್ನಿಕಾರ್ಯಂ ಯಥಾವಿಧಿ ॥ ೨ ॥
ಶುಚಿವಾಸಾಃ ಪ್ರಸನ್ನಾತ್ಮಾ ಹವ್ಯಮನ್ನಂ ಸುಸಂಸ್ಕೃತಂ ।
ಪಕ್ತ್ವಾ ಪಂಚಪದೇ ಗತ್ವಾ ಪುನಶ್ಶೌಚಂ ತು ಪಾದಯೋಃ ॥ ೩ ॥
ಕೃತ್ವಾಷ್ಟಾಂಗುಲಮಾನಂ ತು ಕ್ಷೀರವೃಕ್ಷಸಮುದ್ಭವಂ ।
ಭಕ್ಷಯೇದ್ದಂತಕಾಷ್ಠಂತು ತತಶ್ಚಾಚಮ್ಯ ಯತ್ನತಃ ॥ ೪ ॥
ದೃಷ್ಟ್ವಾಽಽಕಾಶಾನಿ ಸರ್ವಾಣಿ ಧ್ಯಾತ್ವಾ ವೈ ಮಾಂ ಗದಾಧರಂ ।
ಶಂಖಚಕ್ರಗದಾಪಾಣಿಂ ಕಿರೀಟಿಂ ಪೀತವಾಸಸಂ ॥ ೫ ॥

---

## ಕನ್ನಡದ ಅನುವಾದ

### ಮತ್ಸ್ಯೋತ್ಸವಕಥನ

೧. ಭಗವಂತನು ಹೇಳುತ್ತಾನೆ:—ಮಾರ್ಗಶೀರ್ಷಮಾಸದ ಶುಕ್ಲಪಕ್ಷದ ದ್ವಾದಶಿಯ ದಿನ ಪ್ರಾತಃಕಾಲದಲ್ಲಿ ಯಥಾವಿಧಿಯಾದ ಉಪಚಾರಗಳೊಡನೆ ಪ್ರಾಜ್ಞರು ಮತ್ಸ್ಯೋತ್ಸವವನ್ನು ಮಾಡಬೇಕು.

೨. ಮಾರ್ಗಶಿರಮಾಸದ ಶುಕ್ಲದಶಮಿಯ ದಿವಸ ಇಂದ್ರಿಯ ಸಂಯಮ ದಿಂದೊಡಗೂಡಿ ಬುದ್ಧಿಶಾಲಿಯಾದವನು ದೇವಾರ್ಚನೆಯನ್ನುಮಾಡಿ ಬಳಿಕ ಅಗ್ನಿಕಾರ್ಯವನ್ನು ಯಥಾವಿಧಿಯಾಗಿ ಮಾಡಬೇಕು.

೩–೪. ಶುಭ್ರವಾದ ವಸ್ತ್ರವನ್ನುಟ್ಟು, ಪ್ರಸನ್ನವಾದ ಅಂತಃಕರಣವುಳ್ಳವ ನಾಗಿ, ಘೃತಾದಿಗಳಿಂದ ಸಂಸ್ಕಾರವನ್ನು ಹೊಂದಿದ ಹವಿಷ್ಯಾನ್ನವನ್ನು ಪಾಕ ಮಾಡಿ, ಐದು ಹೆಜ್ಜೆಗಳನ್ನು ನಡೆದು, ಮತ್ತೆ ಪಾದಗಳನ್ನು ತೊಳೆದುಕೊಂಡು, ಎಂಟು ಅಂಗುಲ ಪ್ರಮಾಣದ ಅಶ್ವತ್ಥ ಅಥವ ಆಲದ ಕಡ್ಡಿಯನ್ನು ಅಗಿದು ದಂತಗಳನ್ನುಜ್ಜಿಕೊಂಡು, ಮತ್ತೆ ಶುದ್ಧಾಚಮನವನ್ನು ಮಾಡಿಕೊಳ್ಳಬೇಕು.

೫–೭. ಹತ್ತು ದಿಕ್ಕುಗಳನ್ನೂ ನೋಡುತ್ತ ಗದಾಧರನೂ ಶಂಖಚಕ್ರಗದಾ ದ್ಯಾಯುಧಗಳಿಂದಲೂ, ಕಿರೀಟದಿಂದಲೂ ಪೀತಾಂಬರದಿಂದಲೂ ಶೋಭಿಸು ವವನೂ, ಪ್ರಸನ್ನವಾದ ಮುಖಕಮಲವುಳ್ಳವನೂ, ಸಕಲ ಶುಭಲಕ್ಷಣಾನ್ವಿತನೂ

ಪ್ರಸನ್ನವದನಾಂಭೋಜಂ ಸರ್ವಲಕ್ಷಣಲಕ್ಷಿತಂ ।
ಧ್ಯಾತ್ವಾ ಪುನರ್ಜಲಂ ಹಸ್ತೇ ಗೃಹೀತ್ವಾ ಭಾನುಮಧ್ಯಗಂ ॥ ೬ ॥
ಧ್ಯಾತ್ವಾರ್ಘ್ಯಂ ದಾಪಯೇತ್ತತ್ರ ಕರತೋಯೇನ ಮಾನವಃ ।
ಏವಮುಚ್ಚಾರಯೇದ್ವಾಚಂ ತಸ್ಮಿನ್ ಕಾಲೇ ಚತುರ್ಮುಖ ॥ ೭ ॥
ಏಕಾದಶ್ಯಾಂ ನಿರಾಹಾರಃ ಸ್ಥಿತ್ವಾಽಹನಿ ಪರೇ ಹ್ಯಹಂ ।
ಭೋಕ್ಷ್ಯಾಮಿ ಪುಂಡರೀಕಾಕ್ಷ ಶರಣಂ ಮೇ ಭವಾಚ್ಯುತ ॥ ೮ ॥
ಏವಮುಕ್ತ್ವಾ ತತೋ ರಾತ್ರೌ ಮಮ ಮೂರ್ತೇಶ್ಚ ಸನ್ನಿಧೌ ।
ಜಪೇನ್ನಾರಾಯಣಾಯೇತಿ ಸ್ವಯಂ ತತ್ರ ವಿಧಾನತಃ ॥ ೯ ॥
ತತಃ ಪ್ರಭಾತೇ ವಿಮಲಾಂ ನದೀಂ ಗತ್ವಾ ಸಮುದ್ರಗಾಂ ।
ಇತರಾಂ ವಾ ತಡಾಗಂ ವಾ ಗೃಹೇ ವಾ ನಿಯತಾತ್ಮವಾನ್ ॥ ೧೦ ॥
ಆನೀಯ ಮೃತ್ತಿಕಾಂ ಶುದ್ಧಾಂ ಮಂತ್ರೇಣಾನೇನ ಮಾನವಃ ।
ವಂದಯೇದ್ದೇವದೇವೇಶಂ ತದಾ ಶುದ್ಧೋ ಭವೇನ್ನರಃ ॥ ೧೧ ॥
ಧಾರಣಂ ಪೋಷಣಂ ತ್ವತ್ತೋ ಭೂತಾನಾಂ ದೇವಿ ಸರ್ವದಾ ।
ತೇನ ಸತ್ಯೇನ ಮೇ ಪಾಪಂ ಯಾವನ್ಮೋಚಯ ಸುವ್ರತೇ ॥ ೧೨ ॥

---

ಆದ ನನ್ನ ರೂಪವನ್ನು ಧ್ಯಾನಮಾಡುತ್ತ, ಬೊಗಸೆಯಲ್ಲಿ ನೀರನ್ನು ತೆಗೆದು ಕೊಂಡು ಸೂರ್ಯಮಂಡಲಮಧ್ಯವರ್ತಿಯಾದ ನಾರಾಯಣನನ್ನು ಧ್ಯಾನಿಸುತ್ತ ಅರ್ಘ್ಯವನ್ನು ಕೊಡಬೇಕು. ಎಲೈ ಚತುರ್ಮುಖನೆ! ಆ ಕಾಲದಲ್ಲಿ ಮುಂದೆ ಹೇಳುವ ಶ್ಲೋಕವನ್ನು ಹೇಳಿ ಪ್ರಾರ್ಥಿಸಬೇಕು.

೮. "ಎಲೈ ಕಮಲನೇತ್ರನೆ! ನಾಳೆ ಏಕಾದಶಿಯ ದಿವಸದಲ್ಲಿ ಉಪವಾಸ ವನ್ನುಮಾಡಿ ಮಾರನೆಯ ದಿನದ ಹಗಲಿನಲ್ಲಿ ನಾನು ಭೋಜನವನ್ನು ಮಾಡುವೆನು. ಅಚ್ಯುತ! ನನಗೆ ಅಭಯವನ್ನು ಕೊಡು."

೯. ಇಂತು ಪ್ರತಿಜ್ಞೆಯನ್ನುಮಾಡಿ ಅಂದಿನ ರಾತ್ರಿಯಲ್ಲಿ ನನ್ನ ಪ್ರತಿಮೆಯ ಸಮ್ಮುಖದಲ್ಲಿ ಕುಳಿತು ವಿಧ್ಯುಕ್ತರೀತಿಯಿಂದ 'ಓಂ ನಮೋ ನಾರಾಯಣಾಯ' ಎಂಬ ಮಂತ್ರವನ್ನು ಜಪಿಸಬೇಕು.

೧೦. ಪ್ರಾತಃಕಾಲವಾಗಲು ಸಮುದ್ರಗಾಮಿನಿಯಾದ ಅಥವ ಇತರ ನದಿಯನ್ನಾಗಲಿ, ಸರೋವರವನ್ನಾಗಲಿ, ಸೇರಬೇಕು. ಅನಾನುಕೂಲವಾದಲ್ಲಿ ಮನೆಯಲ್ಲಾದರೂ ಸ್ನಾನವನ್ನು ಮಾಡಬೇಕು.

೧೧. ಪರಿಶುದ್ಧವಾದ ಮೃತ್ತಿಕೆಯನ್ನು ತಂದು ಪ್ರತಿಮನುಷ್ಯನೂ ಮುಂದೆ ಹೇಳುವ ಮಂತ್ರದಿಂದ ದೇವದೇವನಾದ ನಾರಾಯಣನಿಗೆ ಪ್ರಣಾಮವನ್ನು ಮಾಡಲು ಶುದ್ಧನಾಗುವನು.

೧೨. "ಸುವ್ರತೆಯಾದ ಭೂದೇವಿಯೆ! ಯಾವಾಗಲೂ ನಿನ್ನಿಂದಲೇ ಸಕಲ

ಬ್ರಹ್ಮಾಂಡೋದರತೀರ್ಥಾನಿ ಕರೈಸ್ಸ್ಪೃಷ್ಟಾನಿ ದೇವತೈಃ ।
ತೇನೇಮಾಂ ಮೃತ್ತಿಕಾಂ ಸ್ಪೃಷ್ಟ್ವಾಮಾಽಲಭಾಮಿ ತ್ವಯೋದ್ಧೃತಾಂ ॥
ತ್ವಯಿ ನಿತ್ಯಂ ರಸಾಸ್ಸರ್ವೇ ಸ್ಥಿತಾ ವರುಣ ಸರ್ವದಾ ।
ತೇನೇಮಾಂ ಮೃತ್ತಿಕಾಂ ಪ್ಲಾವ್ಯ ಪೂತಾಂ ಕುರುಷ್ವ ಮಾ ಚಿರಂ ॥ ೧೪ ॥
ಏವಂ ಮೃದಂ ತಥಾ ತೋಯಂ ಪ್ರಸಾದ್ಯಾತ್ಮಾನಮಾಲಭೇತ್ ।
ತ್ರಿಃ ಕೃತ್ವಾ ಶೇಷಮೃದಯಾ ಪಿಂಡಮಾಲಿಪ್ಯ ವೈ ಜಲೇ ॥ ೧೫ ॥
ತಸ್ಮಿನ್ನರಃ ಸದಾ ಸಮ್ಯಕ್ ನಕ್ರಕಚ್ಛಪದೂರತಃ ।
ಸ್ನಾತ್ವಾ ಚಾವಶ್ಯಕಂ ಕೃತ್ವಾ ಪುನರ್ಮಮ ಗೃಹಂ ವ್ರಜೇತ್ ॥ ೧೬ ॥
ತತ್ರಾರಾಧ್ಯ ಮಹಾಯೋಗಿನ್ ದೇವಂ ನಾರಾಯಣಂ ಹರಿಂ ।
ಕೇಶವಾಯ ನಮಃ ಪಾದೌ ಕಟಿಂ ದಾಮೋದರಾಯ ಚ ॥ ೧೭ ॥
ಜಾನುಯುಗ್ಮಂ ನೃಸಿಂಹಾಯ ಉರಶ್ರೀವತ್ಸಧಾರಿಣೇ ।
ಕಂಠೇ ಕೌಸ್ತುಭನಾಭಾಯ ವಕ್ಷಶ್ರೀಪತಯೇ ತಥಾ ॥ ೧೮ ॥

---

ಭೂತಗಳ ಧಾರಣವೂ ಪೋಷಣವೂ ನಡೆಯುತ್ತಿರುವುವು. ಆ ಸತ್ವದ ಪ್ರಭಾವ ದಿಂದಲೇ ನನ್ನನ್ನು ಸಕಲಪಾತಕಗಳಿಂದ ಬಿಡಿಸು.

೧೩. ಬ್ರಹ್ಮಾಂಡದಲ್ಲಿರುವ ಸಕಲತೀರ್ಥಗಳೂ ದೇವತೆಗಳ ಕೈಗಳಿಂದ ಮುಟ್ಟಲ್ಪಟ್ಟಿರುವುವು. ಆದುದರಿಂದ ಅವರ ಸ್ಪರ್ಶಸಹಿತವಾಗಿ ನಿನ್ನಿಂದ ತೆಗೆಯಲ್ಪಟ್ಟ ಈ ಮೃತ್ತಿಕೆಯನ್ನು ತೆಗೆದುಕೊಳ್ಳುತ್ತೇನೆ.

೧೪. ಎಲೈ ವರುಣದೇವನೆ! ನಿನ್ನಲ್ಲಿ ಯಾವಾಗಲೂ ಸಕಲ ರಸಗಳೂ ಸನ್ನಿಹಿತಗಳಾಗಿರುವುವು. ಅವುಗಳಿಂದ ಈ ಮೃತ್ತಿಕೆಯನ್ನು ನೆನೆಸಿ ಶೀಘ್ರ ವಾಗಿ ಪವಿತ್ರಗೊಳಿಸು.''

೧೫. ಇಂತು ಮೃತ್ತಿಕೆಯನ್ನೂ ಜಲವನ್ನೂ ಪ್ರಸನ್ನೀಕರಿಸಿಕೊಂಡು ಸಕಲ ಮೃತ್ತಿಕೆಯನ್ನು ಮೂರು ಭಾಗವನ್ನಾಗಿಮಾಡಿ ಆ ಪಿಂಡಗಳನ್ನು ನೀರಿನಲ್ಲಿ ಬೆರಸಿ ಮೂರು ಸ್ನಾನಗಳನ್ನು ಮಾಡಬೇಕು.

೧೬. ಆ ನೀರಿನಲ್ಲಿ ಮಾನವನು ಮೊಸಳೆ, ಆಮೆಗಳಿಂದ ದೂರವಾದ ಪ್ರದೇಶದಲ್ಲಿ ಸ್ನಾನವನ್ನು ಮಾಡಿಕೊಂಡು, ನಿತ್ಯಕರ್ಮಗಳನ್ನು ನೆರವೇರಿಸಿ ಕೊಂಡು ಮತ್ತೆ ನನ್ನ ದೇವಾಲಯವನ್ನು ಸೇರಬೇಕು.

೧೭–೨೦. ಎಲೈ ಯೋಗಿವರ್ಯನಾದ ಬ್ರಹ್ಮನೆ! ಅಲ್ಲಿ ದೇವದೇವನೂ, ಭಕ್ತರ ಪಾಪಗಳನ್ನು ನಾಶಮಾಡುವವನೂ, ಸರ್ವೇಶ್ವರನೂ ಆದ ನಾರಾಯಣ ನನ್ನು ಆರಾಧಿಸಬೇಕು. 'ಕೇಶವಾಯ ನಮಃ' ಎಂಬ ಮಂತ್ರದಿಂದ ಪಾದ ಗಳನ್ನೂ, 'ದಾಮೋದರಾಯ ನಮಃ' ಎಂಬುದಾಗಿ ಕಟಿಪ್ರದೇಶವನ್ನೂ, 'ನೃಸಿಂಹಾಯ ನಮಃ' ಎಂಬುದಾಗಿ ಮೊಳಕಾಲುಗಳನ್ನೂ 'ಶ್ರೀವತ್ಸಧಾರಿಣೇ

ತ್ರೈಲೋಕ್ಯವಿಜಯಾಯೇತಿ ಬಾಹುಂ ಸರ್ವಾತ್ಮನೇ ಶಿರಃ ।
ರಥಾಂಗಧಾರಿಣೇ ವಕ್ತ್ರಂ ಶ್ರೀಕರಾಯೇತಿ ವಾರಿಜಂ ॥ ೧೯ ॥
ಗಂಭೀರಾಯೇತಿ ಚ ಗದಾಮಂಭೋಜಂ ಶಾಂತಮೂರ್ತಯೇ ।
ಏವಮಭ್ಯರ್ಚ್ಯ ದೇವೇಶಂ ದೇವಂ ನಾರಾಯಣಂ ಪ್ರಭುಂ ॥ ೨೦ ॥
ಪುನಸ್ತಸ್ಯಾಗ್ರತಃ ಕುಂಭಾನ್ ಚತುರಸ್ಸ್ಥಾಪಯೇದ್ಬುಧಃ ।
ಜಲಪೂರ್ಣಾನ್ ಸಮಾಲ್ಯಾಂಶ್ಚ ಸಿತಚಂದನಲೇಪಿತಾನ್ ॥ ೨೧ ॥
ಚೂತಪಲ್ಲವಸಂಯುಕ್ತಾನ್ ಸಿತವಸ್ತ್ರಾವಗುಂಠಿತಾನ್ ।
ಛಾದಿತಾಂಸ್ತಾಮ್ರಪಾತ್ರೈಶ್ಚ ತಿಲಪೂರ್ಣೈಸ್ಸಕಾಂಚನೈಃ ॥ ೨೨ ॥
ಚತ್ವಾರಸ್ತು ಸಮುದ್ರಾಶ್ಚ ಕಲಶಾಃ ಸಂಪ್ರಕೀರ್ತಿತಾಃ ।
ತೇಷಾಂ ಮಧ್ಯೇ ಶುಭಂ ಪೀಠಂ ಸ್ಥಾಪಯೇದ್ವಸ್ತ್ರಗರ್ಭಿತಂ ॥ ೨೩ ॥
ತಸ್ಮಿನ್ ಸುವರ್ಣಂ ರೌಪ್ಯಂ ವಾ ತಾಮ್ರಂ ವಾ ದಾರವಂ ತಥಾ ।
ಅಲಾಭೇ ಸರ್ವಪಾತ್ರಾಣಾಂ ಪಲಾಶಂ ಪಾತ್ರಮಿಷ್ಯತೇ ॥ ೨೪ ॥

---

ನಮಃ' ಎಂಬುದಾಗಿ ಎದೆಯನ್ನೂ, 'ಕೌಸ್ತುಭನಾಭಾಯ ನಮಃ ಎಂದು ಕಂಠವನ್ನೂ, 'ಶ್ರೀಪತಯೇ ನಮಃ' ಎಂಬುದಾಗಿ ವಕ್ಷಸ್ಥಳವನ್ನೂ, 'ತ್ರೈಲೋಕ್ಯ ವಿಜಯಾಯ ನಮಃ' ಎಂಬುದಾಗಿ ಬಾಹುಗಳನ್ನೂ, 'ಸರ್ವಾತ್ಮನೇ ನಮಃ' ಎಂಬುದಾಗಿ ತಲೆಯನ್ನೂ, 'ರಥಾಂಗಧಾರಿಣೇ ನಮಃ' ಎಂದು ಮುಖವನ್ನೂ, 'ಶ್ರೀಕರಾಯ ನಮಃ' ಎಂಬ ಮಂತ್ರದಿಂದ ಶಂಖವನ್ನೂ, 'ಗಂಭೀರಾಯ ನಮಃ' ಎಂಬುದಾಗಿ ಗದೆಯನ್ನೂ, 'ಶಾಂತಮೂರ್ತಯೇ ನಮಃ' ಎಂಬುದಾಗಿ ಪದ್ಮವನ್ನೂ ಪೂಜೆಮಾಡಬೇಕು.

೨೧–೨೨. ಮತ್ತೆ ಶ್ರೀಮನ್ನಾರಾಯಣನ ಇದಿರಿನಲ್ಲಿ ನೀರಿನಿಂದ ತುಂಬಿದುವುಗಳೂ, ಪುಷ್ಪಾಲಂಕೃತಗಳೂ, ಬಿಳಿಯ ಚಂದನದಿಂದ ಲೇಪಿತಗಳೂ, ಮಾವಿನ ಎಳೆದಳಿರುಗಳಿಂದ ಕೂಡಿದವುಗಳೂ, ಬಿಳಿಯ ವಸ್ತ್ರಗಳಿಂದ ಆಚ್ಛಾದಿತಗಳೂ, ಚಿನ್ನದನಾಣ್ಯಗಳಿಂದಲೂ ಎಳ್ಳಿನಿಂದಲೂ ತುಂಬಲ್ಪಟ್ಟ ತಾಮ್ರ ಪಾತ್ರೆಗಳಿಂದ ಸುತ್ತುವರೆಯಲ್ಪಟ್ಟುವುಗಳೂ, ಆದಂತಹ ನಾಲ್ಕು ಕುಂಭಗಳನ್ನು ಸ್ಥಾಪನೆಮಾಡಬೇಕು.

೨೩. ಈ ನಾಲ್ಕು ಕಲಶಗಳೂ ನಾಲ್ಕು ಸಮುದ್ರಗಳೆಂದು ಹೇಳಲ್ಪಟ್ಟಿರುವುವು. ಅವುಗಳ ಮಧ್ಯದಲ್ಲಿ ವಸ್ತ್ರಾಚ್ಛಾದಿತವಾದ ಪವಿತ್ರವಾದ ಒಂದು ಆಸನವನ್ನು ಕಲ್ಪಿಸಬೇಕು.

೨೪. ಆ ಆಸನದಲ್ಲಿ ಚಿನ್ನ, ಬೆಳ್ಳಿ, ತಾಮ್ರ, ಮರಗಳಿಂದ ಮಾಡಿದ ತಟ್ಟೆಯನ್ನಾಗಲಿ, ಯಾವುವೂ ಅನುಕೂಲವಾಗದಿದ್ದಲ್ಲಿ ಮುತ್ತುಗದ ದೊನ್ನೆಯನ್ನಾಗಲಿ ಸಜ್ಜುಗೊಳಿಸಬೇಕು.

ತೋಯಪೂರ್ಣಂ ಚ ತತ್ಕೃತ್ವಾ ತಸ್ಮಿನ್ ಪಾತ್ರೇ ತತೋ ನ್ಯಸೇತ್ ।
ಸೌವರ್ಣಂ ಮತ್ಸ್ಯರೂಪಂ ಚ ಕೃತ್ವಾ ದೇವಂ ಜನಾರ್ದನಂ ॥ ೨೫ ॥
ದೇವದೇವಾಂಗಸಂಯುಕ್ತಂ ಶ್ರುತಿಸ್ಮೃತಿವಿಭೂಷಿತಂ ।
ತತ್ರಾನೇಕವಿಧೈರ್ಭಕ್ಷ್ಯೈಃ ಫಲೈಃ ಪುಷ್ಪೈಶ್ಚ ಶೋಭಿತಂ ॥ ೨೬ ॥
ಗಂಧೈರ್ಧೂಪೈಶ್ಚ ವಸ್ತ್ರೈಶ್ಚ ಅರ್ಚಯಿತ್ವಾ ಯಥಾವಿಧಿ ।
ರಸಾತಲಗತಾ ವೇದಾ ಯಥಾ ದೇವ ತ್ವಯೋದ್ಧೃತಾಃ ॥ ೨೭ ॥
ಮತ್ಸ್ಯರೂಪೇಣ ತದ್ವನ್ಮಾಂ ಭವಾನುದ್ಧರ ಕೇಶವ ।
ಏವಮುಚ್ಚಾರ್ಯ ತಸ್ಯಾಗ್ರೇ ಜಾಗರಂ ತತ್ರ ಕಾರಯೇತ್ ॥ ೨೮ ॥
ಯಥಾವಿಭವಸಾರೇಣ ಪ್ರಭಾತೇ ವಿಮಲೇ ತಥಾ ।
ಚತುರ್ಣಾಂ ಬ್ರಾಹ್ಮಣಾನಾಂ ಚ ಚತುರೋ ದಾಪಯೇದ್ಘಟಾನ್ ॥೨೯॥
ಪೂರ್ವಂ ಚ ಬಹ್ವೃಚೇ ದದ್ಯಾತ್ ಛಾಂದೋಗ್ಯೇ ದಕ್ಷಿಣಂ ತಥಾ ।
ಯಜುಶ್ಶಾಖಾನ್ವಿತೇ ದದ್ಯಾತ್ ಪಶ್ಚಿಮಂ ಘಟಮುತ್ತಮಂ ॥ ೩೦ ॥

---

೨೫–೨೮. ಆ ಪಾತ್ರೆಯನ್ನು ನೀರಿನಿಂದ ತುಂಬಿ ಅದರಲ್ಲಿ ಚಿನ್ನದಿಂದ ಮಾಡಿದ ಮತ್ಸ್ಯರೂಪಿಯಾದ ಶ್ರೀಮನ್ನಾರಾಯಣನ ಪ್ರತಿಮೆಯೊಂದನ್ನು ಮಾಡಿಸಿಡಬೇಕು. ಆ ವಿಗ್ರಹವನ್ನು ದೇವಾಧಿದೇವತೆಗಳೇ ಅಂಗಗಳೂ, ಶ್ರುತಿ ಸ್ಮೃತಿಗಳೇ ಆಭರಣಗಳೂ ಆಗಿರುವಂತೆ ಅನುಸಂಧಾನಮಾಡಿಕೊಂಡು ಪಾತ್ರೆಯಲ್ಲಿ ಶೋಭಿಸುತ್ತಿರುವ ಮತ್ಸ್ಯವನ್ನು ಅನೇಕ ವಿಧಗಳಾದ ಭಕ್ಷ್ಯಗಳಿಂದಲೂ, ಫಲಗಳಿಂದಲೂ, ಪುಷ್ಪಗಳಿಂದಲೂ, ಗಂಧಲೇಪನೆಗಳಿಂದಲೂ, ಧೂಪಗಳಿಂದಲೂ, ವಸ್ತ್ರಗಳಿಂದಲೂ, ಯಥಾವಿಧಿಯಾಗಿ ಪೂಜಿಸಿ ಸ್ತುತಿಸಬೇಕು. 'ಎಲೈ ದೇವನೆ! ಕೇಶವನೆ! ರಸಾತಲದಲ್ಲಿ ಹುದುಗಿದ್ದ ವೇದಗಳನ್ನು ನೀನು ಮತ್ಸ್ಯರೂಪವನ್ನು ಸ್ವೀಕರಿಸಿ ಹೇಗೆ ಉದ್ಧಾರಮಾಡಿದೆಯೊ, ಹಾಗೆಯೇ ನನ್ನನ್ನೂ ಈ ಸಂಸಾರವೆಂಬ ಸಾಗರದಿಂದ ಉದ್ಧಾರಮಾಡು.' ಈ ಸ್ತೋತ್ರವನ್ನು ಹೇಳುತ್ತ ಆ ಪ್ರತಿಮೆಯ ಮುಂದುಗಡೆಯಲ್ಲಿ ಕುಳಿತು ರಾತ್ರಿಯ ಜಾಗರಣೆಯನ್ನು ಮಾಡಬೇಕು.

೨೯. ಬಳಿಕ ನಿರ್ಮಲವಾದ ಸೂರ್ಯೋದಯವಾದ ಮೇಲೆ ತನ್ನ ಐಶ್ವರ್ಯಕ್ಕೆ ತಕ್ಕ ದಾನಗಳೊಡನೆ ನಾಲ್ಕು ಬ್ರಾಹ್ಮಣರಿಗೆ ಆ ನಾಲ್ಕು ಘಟಗಳನ್ನೂ ದಾನಮಾಡಬೇಕು.

೩೦. ಪೂರ್ವದಿಕ್ಕಿನಲ್ಲಿರುವ ಘಟವನ್ನು ಋಗ್ವೇದಾಧ್ಯಯನಪರನಾದವನಿಗೆ ಕೊಡಬೇಕು. ದಕ್ಷಿಣದಲ್ಲಿರುವ ಕುಂಭವನ್ನು ಸಾಮವೇದಾಧ್ಯಾಯಿಗೆ ಕೊಡಬೇಕು. ಪಶ್ಚಿಮದಲ್ಲಿರುವ ಉತ್ತಮವಾದ ಘಟವನ್ನು ಯಜುಶ್ಶಾಖೆಯನ್ನು ಅಧ್ಯಯನಮಾಡುವವನಿಗೆ ಕೊಡಬೇಕು.

ಉತ್ತರಂ ಕಾಮತೋ ದದ್ಯಾತ್ ಏಷ ಏವ ವಿಧಿಸ್ಮೃತಃ ।
ಋಗ್ವೇದಃ ಪ್ರೀಯತಾಂ ಪೂರ್ವೇ ಸಾಮವೇದಸ್ತು ದಕ್ಷಿಣೇ ॥ ೩೧ ॥
ಯಜುರ್ವೇದಃ ಪಶ್ಚಿಮತೋ ಹ್ಯಥರ್ವಶ್ಚೋತ್ತರೇಣ ತು ।
ಅನೇನ ಕ್ರಮಯೋಗೇನ ಪ್ರೀಯತಾಮಿತಿ ವಾಚಯೇತ್ ॥ ೩೨ ॥
ಮತ್ಸ್ಯರೂಪಂ ತು ಸೌವರ್ಣಂ ಆಚಾರ್ಯಾಯ ನಿವೇದಯೇತ್ ।
ಗಂಧಧೂಪಾದಿವಸ್ತ್ರೈಸ್ತು ಸಂಪೂಜ್ಯ ವಿಧಿವತ್ಕ್ರಮಾತ್ ॥ ೩೩ ॥
ಯಸ್ತ್ವಿಮಂ ಸರಹಸ್ಯಂ ಚ ಮಂತ್ರೈಶ್ಚೈವೋಪಪಾದಯೇತ್ ।
ವಿಧಾನಂ ವಿಧಿವದ್ದತ್ವಾ ದಾತಾ ಕೋಟಿಗುಣೋತ್ತರಂ ॥ ೩೪ ॥
ಪ್ರತಿಪದ್ಯ ಗುರುಂ ಯಸ್ತು ಮೋಹಾದ್ವಿಪ್ರತಿಪದ್ಯತೇ ।
ಸ ಜನ್ಮಕೋಟಿಂ ನರಕೇ ಪಚ್ಯತೇ ಪುರುಷಾಧಮಃ ॥ ೩೫ ॥
ವಿಧಾನಸ್ಯ ಪ್ರದಾತಾ ಯೋ ಗುರುರಿತ್ಯುಚ್ಯತೇ ಬುಧೈಃ ।
ಏವಂ ದತ್ವಾ ವಿಧಾನೇನ ದ್ವಾದಶ್ಯಾಂ ಮಾಂ ಸಮರ್ಚಯೇತ್ ॥ ೩೬ ॥

೩೧-೩೨. ಉತ್ತರದಲ್ಲಿರುವ ಕುಂಭವನ್ನು ಇಚ್ಛಾನುಸಾರವಾಗಿ ದಾನ ಮಾಡಬಹುದು. ಇದೇ ಶಾಸ್ತ್ರಗಳಲ್ಲಿ ಹೇಳಿರುವ ವಿಧಿಯು. 'ಪೂರ್ವದಿಕ್ಕಿನಲ್ಲಿ ಋಗ್ವೇದವು ಸಂತೋಷಗೊಳ್ಳಲಿ. ದಕ್ಷಿಣದಿಕ್ಕಿನಲ್ಲಿ ಸಾಮವೇದವು ಸಂತುಷ್ಟವಾಗಲಿ. ಪಶ್ಚಿಮದಲ್ಲಿ ಯಜುರ್ವೇದವು ಪ್ರೀತಿಗೊಳ್ಳಲಿ. ಅಥರ್ವವೇದವು ಉತ್ತರದಲ್ಲಿ ಸುಪ್ರೀತವಾಗಲಿ. ಈ ಕ್ರಮಯೋಗದಿಂದ ಭಗವಂತನು ಸಂತೋಷವನ್ನು ಹೊಂದಲಿ' ಎಂಬುದಾಗಿ ಮಂತ್ರವನ್ನುಚ್ಚರಿಸಬೇಕು.

೩೩. ಬಳಿಕ ಆಚಾರ್ಯನನ್ನು ಕರೆದು ಗಂಧ, ಧೂಪ, ವಸ್ತ್ರ ಮುಂತಾದುವುಗಳಿಂದ ಕ್ರಮವಾಗಿ ವಿಧಿಪ್ರಕಾರವಾಗಿ ಪೂಜಿಸಿ ಚಿನ್ನದಿಂದ ಮಾಡಿದ ಆ ಮತ್ಸ್ಯದ ವಿಗ್ರಹವನ್ನು ಆತನಿಗೆ ನಿವೇದನೆ ಮಾಡಬೇಕು.

೩೪. ಯಾವನು ರಹಸ್ಯದಿಂದೊಡಗೂಡಿದ ಈ ವಿಧಾನವನ್ನು ತಿಳಿದು ಉಚಿತಮಂತ್ರಗಳಿಂದ ವ್ರತವನ್ನು ನೆರವೇರಿಸಿ ವಿಧಿವತ್ತಾಗಿ ದಾನಮಾಡುವನೊ, ಅವನ ದಾನವು ಕೋಟಿಗುಣಿತವಾದ ಫಲವನ್ನೀಯುವುದು.

೩೫. ಗುರುಸ್ಥಾನಕ್ಕೆ ಸರಿಯಾದ ಮನುಷ್ಯನನ್ನು ಪಡೆದೂ ಯಾವ ಮನುಷ್ಯನು ಮೋಹದಿಂದ ವ್ರತವಿಮುಖನಾಗುವನೊ, ಆ ಮಾನವಾಧಮನು ಕೋಟಿಜನ್ಮಗಳವರೆಗೂ ನರಕದಲ್ಲಿ ಯಾತನೆಗಳನ್ನನುಭವಿಸುವನು.

೩೬. ಯಾವನು ವಿಧಿವಿಧಾನಗಳನ್ನು ಇತರರಿಗೆ ಬೋಧಿಸುವನೊ, ಅವನನ್ನೇ ಬಲ್ಲವರು ಗುರುವೆಂದು ಕರೆಯುವರು. ಇಂತು ಮತ್ಸ್ಯಮೂರ್ತಿಯನ್ನು ದಾನ ಮಾಡಿ ದ್ವಾದಶಿಯ ದಿನದಲ್ಲಿ ನನ್ನ ಪೂಜೆಯನ್ನು ಮಾಡಬೇಕು.

ವಿಪ್ರಾಣಾಂ ಭೋಜನಂ ದದ್ಯಾತ್ ಯಥಾಶಕ್ತ್ಯಾ ಚ ದಕ್ಷಿಣಾಂ ।
ಭೂರಿಣಾ ಪರಮಾನ್ನೇನ ತತಃ ಪಶ್ಚಾತ್ಸ್ವಯಂ ನರಃ ॥ ೩೭ ॥
ಭುಂಜೀತ ಸಹಿತೋ ವಿಪ್ರೈರ್ವಾಗ್ಯತಸ್ಸಂಯತೇಂದ್ರಿಯಃ ।
ಅನೇನ ವಿಧಿನಾ ಯಸ್ತು ಕುರ್ಯಾನ್ಮತ್ಸ್ಯೋತ್ಸವಂ ನರಃ ॥ ೩೮ ॥
ತಸ್ಯ ಪುಣ್ಯಫಲಂ ಚಾಗ್ರೇ ಶೃಣು ಸತ್ಯವತಾಂ ವರ ।
ಯದಿ ವಕ್ತ್ರಸಹಸ್ರಾಣಾಂ ಸಹಸ್ರಾಣಿ ಭವಂತಿ ಹಿ ॥ ೩೯ ॥
ಆಯುಶ್ಚ ಬ್ರಹ್ಮಣಾ ತುಲ್ಯಂ ಲಭೇದ್ಯದಿ ಮಹಾವ್ರತ ।
ತದಾ ವೈ ಹ್ಯಸ್ಯ ಧರ್ಮಸ್ಯ ಫಲಂ ಕಥಯಿತುಂ ಭವೇತ್ ॥ ೪೦ ॥
ಯ ಇಮಂ ಶ್ರಾವಯೇದ್ಭಕ್ತ್ಯಾ ದ್ವಾದಶೀಕಲ್ಪಮುತ್ತಮಂ ।
ಶೃಣೋತಿ ವಾ ಸ ಪಾಪೈಸ್ತು ಸರ್ವೈರೇವ ವಿಮುಚ್ಯತೇ ॥ ೪೧ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ದ್ವಿತೀಯೇ ವೈಷ್ಣವಖಂಡೇ ಮಾರ್ಗಶೀರ್ಷಮಾಹಾತ್ಮ್ಯೇ ಬ್ರಹ್ಮವಿಷ್ಣುಸಂವಾದೇ "ಮತ್ಸ್ಯೋತ್ಸವಕಥನಂ" ನಾಮ ಚತುರ್ದಶೋಽಧ್ಯಾಯಃ

---

೩೭–೪೦. ಬಳಿಕ ಬ್ರಾಹ್ಮಣರಿಗೆ ವಿಶೇಷವಾಗಿ ಪರಮಾನ್ನ ಸಹಿತವಾದ ಭೋಜನವನ್ನು ಮಾಡಿಸಿ ಶಕ್ತ್ಯನುಸಾರವಾಗಿ ದಕ್ಷಿಣೆಯನ್ನು ಕೊಡಬೇಕು. ಬಳಿಕ ಭಾಗವತನು ತಾನೇ ಮೌನವನ್ನು ಧರಿಸಿದವನೂ, ಇಂದ್ರಿಯ ನಿಗ್ರಹಾನ್ವಿತನೂ ಆಗಿ ಇತರ ಬ್ರಾಹ್ಮಣರೊಡನೆ ಭೋಜನವನ್ನು ಮಾಡಬೇಕು. ಸತ್ಯವಂತರಲ್ಲಿ ಶ್ರೇಷ್ಠನೆ! ಈ ವಿಧವಾಗಿ ಯಾವನು ಮತ್ಸ್ಯೋತ್ಸವವನ್ನು ನೆರವೇರಿಸುವನೊ, ಅವನ ಪುಣ್ಯಫಲವನ್ನೂ ಮುಂದೆ ಹೇಳುವೆನು, ಕೇಳುವವನಾಗು. ಮನುಷ್ಯನಿಗೆ ಸಾವಿರ ಸಾವಿರ ಮುಖಗಳುಂಟಾದರೂ, ಬ್ರಹ್ಮನ ಆಯುಷ್ಯಕ್ಕೆ ಸಮಾನವಾದ ಆಯುಸ್ಸನ್ನು ಹೊಂದಿದರೂ, ಆ ಭಾಗವತನ ಧರ್ಮಾಚರಣೆಯ ಫಲವನ್ನು ಸಮಗ್ರವಾಗಿ ನಿರೂಪಿಸಲು ಸಾಧ್ಯವಾಗಬಹುದು.

೪೧. ಯಾವ ಮನುಷ್ಯನು ಭಕ್ತಿಯುಕ್ತನಾಗಿ ಉತ್ತಮವಾದ ಈ ದ್ವಾದಶೀ ವ್ರತಕಲ್ಪವನ್ನು ಇತರರಿಗೆ ಶ್ರವಣಮಾಡಿಸುವನೊ, ಮತ್ತು ಯಾವನು ಶ್ರದ್ಧೆಯಿಂದ ಕೇಳುವನೊ, ಅವನು ಸಕಲಪಾತಕಗಳಿಂದಲೂ ಮೋಕ್ಷವನ್ನು ಹೊಂದುವನು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀಸ್ಕಾಂದಮಹಾಪುರಾಣದ ಎರಡನೆಯ ವೈಷ್ಣವಖಂಡದ ಮಾರ್ಗಶೀರ್ಷಮಾಹಾತ್ಮ್ಯದ ಬ್ರಹ್ಮವಿಷ್ಣುಸಂವಾದದಲ್ಲಿ "ಮತ್ಸ್ಯೋತ್ಸವಕಥನ"ವೆಂಬ ಹದಿನಾಲ್ಕನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

# ಅಥ ಪಂಚದಶೋಽಧ್ಯಾಯಃ

## ಶ್ರೀ ಕೃಷ್ಣನಾಮಮಾಹಾತ್ಮ್ಯವರ್ಣನಂ

ಶ್ರೀ ಭಗವಾನುವಾಚ :—

ಯೇ ತ್ವಯಾ ವೈ ಕೃತಾಃ ಪ್ರಶ್ನಾಃ ಪೂರ್ವಂ ಪ್ರಶ್ನವಿದಾಂ ವರ ।
ತಾನ್ ವರ್ಣಯಿಷ್ಯೇ ಕ್ರಮಶೋ ನಿಶಾಮಯ ಸುನಿಶ್ಚಿತಂ ॥ ೧ ॥
ಸಹೋಮಾಸೇ ಚ ದೇವೋ ವೈ ಕೀರ್ತಿಯುಕ್ತೋ ಹಿ ಕೇಶವಃ ।
ತಸ್ಯ ಪೂಜಾ ಪ್ರಕರ್ತವ್ಯಾ ಯಥಾಪೂರ್ವಂ ಪ್ರಭಾಷಿತಂ ॥ ೨ ॥
ಬ್ರಾಹ್ಮಣಂ ಕೇಶವಂ ಸ್ಮೃತ್ವಾ ತತ್ಪತ್ನೀಂ ಕೀರ್ತಿಮೇವ ಚ ।
ದಂಪತೀ ವಿಧಿವತ್ಪೂಜ್ಯೌ ವಸ್ತ್ರಾಭರಣಧೇನುಭಿಃ ॥ ೩ ॥
ದಂಪತೀ ಪೂಜಿತೌ ವತ್ಸ ಪೂಜಿತೋಽಹಂ ನ ಸಂಶಯಃ ।
ತಸ್ಮಾದವಶ್ಯಂ ಸಂಪೂಜ್ಯೌ ದಂಪತೀ ಮಮ ತುಷ್ಟಿದೌ ॥ ೪ ॥

## ಕನ್ನಡದ ಅನುವಾದ

### ಶ್ರೀ ಕೃಷ್ಣನಾಮಮಾಹಾತ್ಮ್ಯ ವರ್ಣನ

೧. ಭಗವಂತನು ಹೇಳುತ್ತಾನೆ:—ಪೃಚ್ಛಕರಲ್ಲಿ ಉತ್ತಮನಾದ ಬ್ರಹ್ಮನೆ! ಪೂರ್ವದಲ್ಲಿ ನೀನು ಯಾವ ಯಾವ ಪ್ರಶ್ನೆಗಳನ್ನು ಕೇಳಿದ್ದೆಯೊ, ಅವುಗಳಿಗೆಲ್ಲ ಕ್ರಮವಾಗಿ ಉತ್ತರಗಳನ್ನು ಹೇಳುವೆನು. ಶಾಸ್ತ್ರ ನಿಶ್ಚಿತಗಳಾದ ಅವುಗಳನ್ನು ಶ್ರದ್ಧೆಯಿಂದ ಕೇಳು.

೨. ಮಾರ್ಗಶೀರ್ಷಮಾಸದಲ್ಲಿ ದೇವೋತ್ತಮನಾದ ಕೇಶವನು ಕೀರ್ತಿ ದೇವೀ ಸಮೇತನಾಗಿರುವನು. ಆದುದರಿಂದ ಹಿಂದೆ ಹೇಳಿರುವ ಪ್ರಕಾರದಿಂದ ಆತನ ಪೂಜೆಯು ಆ ಕಾಲದಲ್ಲಿಯೇ ಮಾಡಲ್ಪಡಬೇಕು.

೩. ಒಬ್ಬ ಬ್ರಾಹ್ಮಣನನ್ನು ಹೆಂಡತಿಯೊಡನೆ ಆಹ್ವಾನಿಸಿ ಆತನೇ ಕೇಶವನೆಂದೂ ಪತ್ನಿಯೇ ಕೀರ್ತಿಯೆಂದೂ ಅನುಸಂಧಾನಮಾಡಿಕೊಂಡು ಆ ದಂಪತಿಗಳನ್ನು ವಿಧಿವತ್ತಾಗಿ ಭಕ್ತನು ವಸ್ತ್ರ ಭೂಷಣ ಗೋದಾನಾದಿಗಳಿಂದ ಪೂಜಿಸಬೇಕು.

೪. ಪುತ್ರನೆ! ದಂಪತಿಗಳು ಪೂಜಿತರಾದರೆ ಖಂಡಿತವಾಗಿಯೂ ನಾನೇ ಪೂಜಿಸಲ್ಪಟ್ಟೆನೆಂದು ತಿಳಿ. ಆದುದರಿಂದ ನನಗೆ ಸಂತೋಷವನ್ನು ಮಾಡುವ ದಂಪತಿಗಳನ್ನು ಆ ಮಾಸದಲ್ಲಿ ಅವಶ್ಯಕವಾಗಿ ಪೂಜೆಮಾಡಬೇಕು.

ದಾನಂ ಚ ವಿವಿಧಂ ಕಾರ್ಯಂ ಮಮ ತುಷ್ಟಿಕರಂ ಪರಂ ।
ಗೋದಾನಂ ಭೂಮಿದಾನಂ ಚ ಸ್ವರ್ಣದಾನಂ ವಿಶೇಷತಃ ॥ ೫ ॥
ವಸ್ತ್ರದಾನಂ ತಥಾ ಶಯ್ಯಾ ತಥಾಽಲಂಕರಣಾನಿ ಚ ।
ಸದ್ಮದಾನಂ ಪ್ರಕರ್ತವ್ಯಂ ಮಮ ಸಂತೋಷಕಾರಕಂ ॥ ೬ ॥
ಸರ್ವೇಷಾಮೇವ ದಾನಾನಾಂ ವಿಶೇಷಂ ಚ ತ್ರಿಕಂ ಸ್ಮೃತಂ ।
ವಸುಂಧರಾ ತಥಾ ಧೇನುಃ ವಿದ್ಯಾದಾನಂ ತಥೈವ ಚ ॥ ೭ ॥
ದತ್ತೇ ದಾನತ್ರಿಕೇ ವತ್ಸ ಭವೇತ್ಪ್ರೀತಿರ್ಮಮಾಽತುಲಾ ।
ತಸ್ಮಾನ್ನರೈಸ್ತು ಕರ್ತವ್ಯಂ ಸಹೋಮಾಸೇ ತ್ರಿಕಂ ಶುಭಂ ॥ ೮ ॥
ಸ್ನಾನಸ್ಯ ಚ ವಿಧಿಸ್ಸಮ್ಯಕ್ ಪುರೈವೋಕ್ತೋ ಮಯಾಽನಘ ।
ಪೂಜಾ ಸ್ನಾನಂ ಚ ದಾನಂ ಚ ವಿಧಿರೇಷ ನ ಸಂಶಯಃ ॥ ೯ ॥
ಮಾರ್ಗಶೀರ್ಷೇ ಸಮಗ್ರಂ ತು ಏಕಭಕ್ತೇನ ಯಃ ಕ್ಷಪೇತ್ ।
ಭೋಜಯೇದ್ಯೋ ದ್ವಿಜಾನ್ ಭಕ್ತ್ಯಾ ಸ ಮುಚ್ಯೇದ್ವ್ಯಾಧಿಕಿಲ್ಬಿಷೈಃ ॥ ೧೦ ॥

೫-೬. ನನಗೆ ಅತ್ಯಂತ ಪ್ರೀತಿಕರಗಳಾದ ಅನೇಕ ವಿಧಗಳಾದ ದಾನಗಳನ್ನೂ ಮಾಡಬೇಕು. ಗೋದಾನ, ಭೂಮಿದಾನ, ಹಿರಣ್ಯದಾನ, ವಸ್ತ್ರದಾನ, ಶಯ್ಯಾದಾನ, ಭೂಷಣದಾನಗಳನ್ನು ಮಾಡುವುದಲ್ಲದೆ ನನ್ನ ಪರಮಸಂತೋಷಕ್ಕೆ ವಿಶೇಷಕಾರಣವಾದ ಗೃಹದಾನವನ್ನೂ ಮಾಡಬೇಕು.

೭. ಸಕಲ ದಾನಗಳಲ್ಲಿಯೂ ಮೂರುದಾನಗಳು ಮಾತ್ರ ವಿಶೇಷ ಫಲದಾಯಕಗಳೆಂದು ಹೇಳಲ್ಪಟ್ಟಿರುವುವು. ಅವುಗಳೇ ಭೂದಾನ, ಗೋದಾನ ಮತ್ತು ವಿದ್ಯಾದಾನಗಳು.

೮. ಈ ಮೂರು ದಾನಗಳನ್ನು ಮಾಡುವುದರಿಂದ ನನಗೆ ಅಪರಿಮಿತವಾದ ಸಂತೋಷವುಂಟಾಗುವುದು. ಆದುದರಿಂದ ಶುಭವಾದ ಈ ದಾನತ್ರಯವು ಮಾರ್ಗಶೀರ್ಷಮಾಸದಲ್ಲಿ ಪ್ರತಿಯೊಬ್ಬ ಮಾನವನಿಗೂ ಅವಶ್ಯಕರ್ತವ್ಯವಾಗಿರುವುದು.

೯. ಎಲೈ ಪಾಪರಹಿತನೆ! ಸ್ನಾನದ ವಿಧಿಯು ನನ್ನಿಂದ ಮೊದಲೇ ಸಾಂಗವಾಗಿ ಹೇಳಲ್ಪಟ್ಟಿರುವುದು. ಪೂಜೆ, ಸ್ನಾನ ಮತ್ತು ದಾನ–ಇವುಗಳೇ ವಿಧಿವಿಹಿತಗಳೆನ್ನುವುದರಲ್ಲಿ ಸಂದೇಹವಿಲ್ಲ.

೧೦. ಯಾವನು ಮಾರ್ಗಶೀರ್ಷಮಾಸವನ್ನೆಲ್ಲ ಏಕಭುಕ್ತದಿಂದಲೇ ಕಳೆಯುತ್ತ ಭಕ್ತಿಯಿಂದ ನಿತ್ಯವೂ ಬ್ರಾಹ್ಮಣೋತ್ತಮರಿಗೆ ಭೋಜನವನ್ನು ಮಾಡಿಸುತ್ತಿರುವನೊ, ಅವನಿಗೆ ವ್ಯಾಧಿಗಳಾಗಲಿ ಪಾಪಗಳಾಗಲಿ ಸೋಕಲಾರವು.

ಕೃಷಿಭಾಗೀ ಬಹುಧನೋ ಬಹುಧಾನ್ಯಶ್ಚ ಜಾಯತೇ ।
ಕಿಮತ್ರ ಬಹುನೋಕ್ತೇನ ಶೃಣು ಗುಹ್ಯಂ ಪರಂ ಮಮ ॥ ೧೧ ॥
ಹುತಭುಗ್ಬ್ರಾಹ್ಮಣಶ್ಚೈವ ವದನಂ ಮಮ ಮಾನದ ।
ಬ್ರಾಹ್ಮಣಾಖ್ಯಂ ಮುಖಂ ಶ್ರೇಷ್ಠಂ ನ ತಥಾ ಹವ್ಯವಾಹನಃ ॥ ೧೨ ॥
ಬ್ರಾಹ್ಮಣಾಖ್ಯೇ ಮುಖೇ ಪುತ್ರ ಹುತಂ ಕೋಟಿಗುಣಂ ಭವೇತ್ ।
ಅಗ್ನ್ಯಾಖ್ಯಂ ಬ್ರಾಹ್ಮಣಾಧೀನಂ ಸ್ವತಂತ್ರಾ ಬ್ರಾಹ್ಮಣಾಃ ಕಿಲ ॥ ೧೩ ॥
ಸಶರ್ಕರಂ ಘೃತಯುತಂ ಪಾಯಸಂ ಶಶಿಸನ್ನಿಭಂ ।
ಹೋತವ್ಯಂ ಬ್ರಾಹ್ಮಣಮುಖೇ ಮಮತುಷ್ಟಿಕರಂ ಸುತ ॥ ೧೪ ॥
ಶುಭಮಂಡಲಮೋದಕ ಕೋಕರಸಂ
ಸುತ ಫೇನಿಕಯಾ ಘೃತಪೂರಯುತಂ ।
ಯಜ ವಿಪ್ರಮುಖೇ ಮಮ ತುಷ್ಟಿಕರಂ
ಯದಿ ಚೇಚ್ಛಸಿ ದಾರಸುತಾದಿ ಸುಖಂ ॥ ೧೫ ॥

೧೧. ಆತನು ಕೃಷಿಭೂಮಿಗೆ ಒಡೆಯನೂ, ಬಹುಧನವಂತನೂ, ಬಹು ಧಾನ್ಯಸಮನ್ವಿತನೂ ಆಗುವನು. ಈ ವಿಷಯದಲ್ಲಿ ಹೆಚ್ಚು ಹೇಳುವುದರಿಂದೇನು? ನಾನು ಹೇಳುವ ಅತ್ಯಂತ ಗುಹ್ಯವಾದ ವಿಷಯವನ್ನು ಕೇಳು.

೧೨. ಎಲೈ ಪ್ರಿಯಸುತನೆ! ಅಗ್ನಿ ಮತ್ತು ಬ್ರಾಹ್ಮಣರಿಬ್ಬರೂ ನನಗೆ ಮುಖಗಳು. ಬ್ರಾಹ್ಮಣನೆಂಬ ಮುಖವೇ ಶ್ರೇಷ್ಠವೆನಿಸಿರುವಷ್ಟು ಅಗ್ನಿಮುಖವು ಪ್ರಸಿದ್ಧವಲ್ಲವು.

೧೩. ಬ್ರಾಹ್ಮಣನೆಂಬ ಮುಖದಲ್ಲಿ ಹೋಮಮಾಡಿದುದು ಕೋಟಿ ಗುಣಿತ ಫಲವನ್ನು ಕೊಡುವುದು. ಏಕೆಂದರೆ ಅಗ್ನಿಯೆಂಬ ಮುಖವು ಬ್ರಾಹ್ಮಣರ ಅಧೀನವೇ ಆಗಿರುವುದು. ಬ್ರಾಹ್ಮಣರು ಮಾತ್ರ ಯಾವಾಗಲೂ ಸ್ವತಂತ್ರರಾಗಿರುವರೇ ಅಲ್ಲವೆ!

೧೪. ಪುತ್ರನೆ! ಸಕ್ಕರೆಯಿಂದಲೂ, ತುಪ್ಪದಿಂದಲೂ ಕೂಡಿ ಚಂದ್ರ ಮಂಡಲದಂತೆ ಸ್ವಚ್ಛವಾಗಿರುವ ಪಾಯಸವು ಬ್ರಾಹ್ಮಣ ಮುಖದಲ್ಲಿ ಹೋಮ ಮಾಡಲ್ಪಡಬೇಕು. ಅದೇ ನನಗೆ ಸಂತೋಷಕರವಾದುದು.

೧೫. ಬ್ರಹ್ಮದೇವನೆ! ಪತ್ನೀಪುತ್ರಾದಿಗಳ ಸುಖವನ್ನು ಅಪೇಕ್ಷಿಸುವೆಯಾದರೆ ನನಗೆ ಸಂತೋಷವನ್ನುಂಟುಮಾಡುವಂತೆ ಸ್ವಚ್ಛಗಳಾದ ದೋಸೆಗಳು, ಮೋದಕಗಳು, ಕೋಕರಸಗಳು, ಫೇಣಿಗಳು, ಜಿಲೇಬಿಗಳು ಮುಂತಾದ ಭಕ್ಷ್ಯ ಭೋಜ್ಯಗಳಿಂದ ಬ್ರಾಹ್ಮಣನ ಮುಖದಲ್ಲಿ ಹೋಮಮಾಡಬೇಕು.

ಕುಮುದೇನ ಸಮಪ್ರಭಸೌರಭದಂ
ಶುಭಭಕ್ತ್ಯಯುತಂ ತ್ವಥ ಮುದ್ಗಯುತಂ ।
ಸುರಭೀಕೃತಪುಷ್ಕಲಸರ್ಪಿಸಮಂ
ಕುರುವಿಪ್ರಮುಖೇ ಹವನಂ ಸಹೇ ॥ ೧೬ ॥
ಪಯಸಾ ಸಹ ಸರ್ಪಿಷಿ ಚ ಕ್ವಥಿತಂ
ಬಹುಖಾರಿಕ ಚಾರುಫಲೈಸ್ಸಿತಯಾ ।
ಸಹ ಕರ್ಪೂರನಾರಿಫಲೇನ ಸಮಂ
ಯುತಸೀಕರಕಂ ಸುತಶುಭ್ರಕರಂ ॥ ೧೭ ॥
ವ್ಯಂಜನಾನಿ ಚ ಶುಭ್ರಾಣಿ ಮನೋಜ್ಞಾನಿ ಪ್ರಿಯಾಣಿ ಚ ।
ಕರ್ತವ್ಯಾನಿ ಸಹೋಮಾಸೇ ಬ್ರಾಹ್ಮಣಾರ್ಥೇ ಚತುರ್ಮುಖ ॥ ೧೮ ॥
ಪ್ರಿಯಾ ಶಿಖರಿಣೀ ಕಾರ್ಯಾ ಚಾನ್ಯತ್ತೇಷಾಂ ಪ್ರಿಯಂ ಚ ಯತ್ ।
ಕೃತ್ವೈವಂ ಭೋಜಯೇದ್ವಿಪ್ರಾನ್ ಶ್ರದ್ಧಯಾ ಪರಯಾ ಸುತ ॥ ೧೯ ॥
ರಸಾಸ್ವಾದನಪೂರ್ವಂ ಹಿ ಭುಂಜತೇ ವೈ ಯಥಾ ಯಥಾ ।
ತಥಾ ತಥಾ ಮಮ ಪ್ರೀತಿರ್ಜಾಯತೇ ಭುವಿ ದುರ್ಲಭಾ ॥ ೨೦ ॥

---

೧೬. ಕುಮುದಗಳಿಗೆ ಸಮನಾದ ಕಾಂತಿಸೌರಭ್ಯಗಳಿಂದ ಕೂಡಿದ ನಿರ್ಮಲವಾದ ಅನ್ನದಿಂದಲೂ, ಹೆಸರುಬೇಳೆಗಳಿಂದಲೂ, ಹೆಚ್ಚಾಗಿ ಸುವಾಸನೆಯಿಂದ ಕೂಡಿದ ಸಾಸುವೆಯನ್ನು ಒಗ್ಗರಿಸಿದ ಉಪಹಾರಗಳಿಂದಲೂ ಮಾರ್ಗಶೀರ್ಷಮಾಸದಲ್ಲಿ ಬ್ರಾಹ್ಮಣೋತ್ತಮರ ಮುಖವೆಂಬ ಅಗ್ನಿಯಲ್ಲಿ ಹೋಮವನ್ನು ಮಾಡು.

೧೭. ಎಲೈ ಸುತನೆ! ಹಾಲು, ಸಾಸುವೆ, ಖಾರವಾದ ಚಾರುಫಲಗಳು, ಸಕ್ಕರೆ, ಪಚ್ಚಕರ್ಪೂರ, ತೆಂಗಿನಕಾಯಿ ಮುಂತಾದ ಪದಾರ್ಥಗಳಿಂದ ಮಾಡಿದ ಸೀಕರಕವು ಮಂಗಳಪ್ರದವಾದುದು.

೧೮. ಓ ಚತುರ್ಮುಖ! ಪರಿಶುದ್ಧಗಳೂ ಮನೋಹರಗಳೂ, ಅಪೇಕ್ಷಿತಗಳೂ, ಆದ ಅನೇಕ ವ್ಯಂಜನಗಳು ಮಾರ್ಗಶೀರ್ಷಮಾಸದಲ್ಲಿ ಬ್ರಾಹ್ಮಣರಿಗೋಸ್ಕರ ಸಿದ್ಧಗೊಳಿಸಲ್ಪಡಬೇಕು.

೧೯. ನನಗೆ ಪ್ರಿಯತಮವಾದ ಶಿಖರಣೆಯನ್ನು ಮಾಡಬೇಕು. ಮತ್ತು ಬ್ರಾಹ್ಮಣರಿಗೆ ಪ್ರಿಯಗಳಾದ ಇತರ ಪದಾರ್ಥಗಳನ್ನೂ ಮಾಡಿಸಬೇಕು. ಇಂತು ಎಲ್ಲವನ್ನೂ ಸಿದ್ಧಗೊಳಿಸಿ ಅತ್ಯಂತ ಶ್ರದ್ಧೆಯಿಂದ ಬ್ರಾಹ್ಮಣರಿಗೆ ಭೋಜನವನ್ನು ಮಾಡಿಸಬೇಕು.

೨೦. ಆ ಬ್ರಾಹ್ಮಣೋತ್ತಮರು ಷಡ್ರಸಗಳನ್ನು ಸವಿಯುತ್ತ ಎಷ್ಟೆಷ್ಟು ಸಂತೋಷಗೊಳ್ಳುವರೊ, ಅಷ್ಟೂ ಭೂಲೋಕದಲ್ಲಿ ದುರ್ಲಭವಾದ ಸಂತೋಷವು ನನಗೆ ಭಕ್ತನಲ್ಲಿ ಉಂಟಾಗುವುದು.

ತಸ್ಮಾತ್ತತ್ತತ್ತಥಾ ಕಾರ್ಯಂ ಯಥಾ ತುಷ್ಯಂತಿ ಬ್ರಾಹ್ಮಣಾಃ ।
ತುಷ್ಟೈಸ್ತೈಶ್ಚಾಪ್ಯಹಂ ತುಷ್ಟೋ ಭವಾಮೀಹ ನ ಸಂಶಯಃ ॥ ೨೧ ॥
ಶ್ರದ್ಧತ್ಸ್ವ ತ್ವಂ ಚತುರ್ವಕ್ತ್ರ ನ ತೇ ಮಿಥ್ಯಾ ಬ್ರವೀಮ್ಯಹಂ ।
ಏತದ್ಗುಹ್ಯಂ ಮಯಾ ಪ್ರೋಕ್ತಂ ಶ್ರೇಯೋರ್ಥಂ ತವ ಮಾನದ ॥ ೨೨ ॥
ಆಕ್ರೋಶಯಂತಿ ಯದಿ ತೇ ಹ್ಯಥವಾ ಪ್ರಹರಂತಿ ಚೇತ್ ।
ತಥಾಪಿ ತೇ ನಮಸ್ಕಾರ್ಯಾ ಮಮ ಪ್ರೀತ್ಯಾಹಿ ಮಾನದ ॥ ೨೩ ॥
ಏವಂ ಕಾರ್ಯಂ ಸದಾ ಪುತ್ರ ಮಾರ್ಗಶೀರ್ಷೇ ವಿಶೇಷತಃ ।
ಯದುಕ್ತಂ ಭವತಾ ಬ್ರಹ್ಮನ್ ಭೋಕ್ತವ್ಯಂ ಕಿಂ ಶೃಣುಷ್ವ ತತ್ ॥ ೨೪ ॥
ಭೋಕ್ತವ್ಯಂ ಮಮ ಚೋಚ್ಛಿಷ್ಟಂ ಮಮ ಭಕ್ತಿಪರಾಯಣೈಃ ।
ಪವಿತ್ರಕರಣಂ ಪುತ್ರ ಪಾಪಿನಾಮಪಿ ಮುಕ್ತಿದಂ ॥ ೨೫ ॥
ಮಮಾಸನಸ್ಯ ಶೇಷಂ ಚ ಯೋ ಭುನಕ್ತಿ ದಿನೇ ದಿನೇ ।
ಸಿಕ್ಥೇ ಸಿಕ್ಥೇ ಭವೇತ್ಪುಣ್ಯಂ ಚಾಂದ್ರಾಯಣಶತೋದ್ಭವಂ ॥ ೨೬ ॥

---

೨೧. ಆದುದರಿಂದ ಪ್ರತಿಯೊಂದನ್ನೂ ಬ್ರಾಹ್ಮಣರು ಹೇಗೆ ತೃಪ್ತಿಗೊಳ್ಳುವರೊ, ಹಾಗೆಯೇ ಮಾಡಬೇಕು. ಅವರು ಸಂತುಷ್ಟರಾದರೆ ನಾನೂ ಸಂತೋಷಪಡುವೆನೆಂಬುದರಲ್ಲಿ ಸಂಶಯವಿಲ್ಲ.

೨೨. ಎಲೈ ಚತುರಾನನನೆ! ನನ್ನ ಮಾತುಗಳಲ್ಲಿ ನಂಬಿಕೆಯುಳ್ಳವನಾಗು, ನಾನು ನಿನಗೆ ಸುಳ್ಳನ್ನು ಹೇಳುವುದಿಲ್ಲ. ನಿನ್ನ ಶ್ರೇಯಸ್ಸಿಗಾಗಿಯೇ ನಾನು ಅತ್ಯಂತ ಗೂಢತರವಾದ ಈ ವಿಷಯವನ್ನು ಹೇಳಿರುವೆನು.

೨೩. ಆ ಬ್ರಾಹ್ಮಣರು ಕೋಪಗೊಂಡರೂ, ಭಾಗವತನನ್ನು ಹೊಡೆದರೂ, ನನ್ನ ಪ್ರೀತಿಯನ್ನು ಸಂಪಾದಿಸಲೆಳಸುವವನು ಅವರಿಗೆ ಕೂಡ ನಮಸ್ಕಾರವನ್ನು ಮಾಡಲೇಬೇಕು.

೨೪. ಎಲೈ ಪುತ್ರನೆ! ಇಂತು ಬ್ರಾಹ್ಮಣಭೋಜನಾದಿಗಳನ್ನು ಯಾವಾಗಲೂ ಮಾಡಬೇಕು. ಮಾರ್ಗಶೀರ್ಷಮಾಸದಲ್ಲಿ ವಿಶೇಷವಾಗಿ ಈ ನಿಯಮವನ್ನು ಪಾಲಿಸಬೇಕು. ಆಗ ಏನನ್ನು ಭೋಜನಮಾಡಬೇಕೆಂದು ನೀನು ಮೊದಲು ಕೇಳಿದ ಪ್ರಶ್ನೆಗೆ ಉತ್ತರವನ್ನು ಕೇಳು.

೨೫. ನನ್ನಲ್ಲಿ ಭಕ್ತಿಯನ್ನಿಟ್ಟಿರುವವರು ನನಗಿತ್ತ ನೈವೇದ್ಯದ ಶೇಷವನ್ನು ಮಾತ್ರ ಊಟಮಾಡಬೇಕು. ಪುತ್ರನೆ! ನನ್ನ ನೈವೇದ್ಯವು ಶುದ್ಧಿಯನ್ನುಂಟುಮಾಡುವುದೂ, ಪಾಪಿಗಳಿಗೂ ಮೋಕ್ಷದಾಯಕವಾದುದೂ ಆಗಿರುವುದು.

೨೬. ನನ್ನ ನೈವೇದ್ಯಾನ್ನವನ್ನು ಯಾವನು ಪ್ರತಿದಿನದಲ್ಲಿಯೂ ಸ್ವೀಕರಿಸುತ್ತಿರುವನೊ, ಅವನಿಗೆ ಪ್ರತಿಯೊಂದು ತುತ್ತಿಗೂ ನೂರು ಚಾಂದ್ರಾಯಣಗಳನ್ನಾಚರಿಸಿದ ಪುಣ್ಯವು ಲಭಿಸುವುದು.

ಅವಶಿಷ್ಟಂ ತಥೋಚ್ಛಿಷ್ಟಂ ಭಕ್ತಾನಾಂ ಭೋಜನದ್ವಯಂ ।
ನಾನ್ಯದ್ವೈ ಭೋಜನಂ ತೇಷಾಂ ಭುಕ್ತ್ವಾ ಚಾಂದ್ರಾಯಣಂ ಚರೇತ್ ॥
ಅನರ್ಪಯಿತ್ವಾ ಯೋ ಭುಂಕ್ತೇ ಅನ್ನಪಾನಾದಿಕಂ ಚ ಯತ್ ।
ಶ್ವಾನವಿಷ್ಠಾಸಮಂ ಚಾನ್ನಂ ಪಾನಂ ಚ ಮದಿರಾಸಮಂ ॥ ೨೮ ॥
ತಸ್ಮಾನ್ಮಾಮರ್ಪಯೇತ್ಪುತ್ರ ಅನ್ನಪಾನಾದಿ ಚೌಷಧಂ ।
ಭಕ್ಷಯೇತ್ಪರಯಾ ಭಕ್ತ್ಯಾ ಅಶುಚೇಶ್ಶುಚಿಕಾರಕಂ ॥ ೨೯ ॥
ತೀರ್ಥಯಜ್ಞಾದಿಕಫಲಂ ಕಲಿದೋಷವಿನಾಶನಂ ।
ಮಮೋಚ್ಛಿಷ್ಟಂ ಸುಗತಿದಂ ಅಪಿ ದುಷ್ಕೃತಕರ್ಮಣಾಂ ॥ ೩೦ ॥
ಅನ್ಯೇಷಾಂ ದೇವತಾನಾಂ ಚ ನಗೃಹ್ಣೀಯಾಚ್ಚ ಭಕ್ಷಿತಂ ।
ಅಭಕ್ತಾನಾಂ ಚ ಪಕ್ವಾನ್ನಂ ಭುಕ್ತ್ವಾ ಚ ನರಕಂ ವ್ರಜೇತ್ ॥ ೩೧ ॥
ವಕ್ತವ್ಯಮೇವ ಯತ್ಪೃಷ್ಟಂ ತಚ್ಛೃಣುಷ್ವ ಸಮಾಹಿತಃ ।
ಕಥಯಿಷ್ಯೇ ತವ ಪ್ರೀತ್ಯಾ ಅಪಿಗುಹ್ಯತರಂ ಮಮ ॥ ೩೨ ॥

---

೨೭. ನನ್ನ ಯಜ್ಞಾವಶೇಷ ಮತ್ತು ನೈವೇದ್ಯಶೇಷ ಇವೆರಡೇ ನನ್ನ ಭಕ್ತರಿಗೆ ಭೋಜನಪದಾರ್ಥಗಳು. ಅವರಿಗೆ ಮತ್ತೆಯಾವುದೂ ಆಹಾರವಾಗ ಲಾರದು. ಇತರ ಪದಾರ್ಥಗಳನ್ನು ಸೇವಿಸಿದರೆ, ಆ ಅಪರಾಧವನ್ನು ಚಾಂದ್ರಾಯಣ ವ್ರತಾಚರಣೆಯಿಂದ ಕಳೆದುಕೊಳ್ಳಬೇಕು.

೨೮. ಯಾವನು ಅನ್ನಪಾನಾದಿಗಳನ್ನು ನನಗೆ ಅರ್ಪಿಸದೆ ಭೋಜನ ಮಾಡುವನೊ, ಅವನು ತಿನ್ನುವ ಅನ್ನವು ನಾಯಿಯ ಅಮೇಧ್ಯಕ್ಕೆ ಸಮಾನ ವಾದುದು. ಮತ್ತು ಪಾನವು ಹೆಂಡಕ್ಕೆ ಸಮವಾದುದು.

೨೯. ಎಲೈ ಪುತ್ರನೆ! ಆದುದರಿಂದ ಅನ್ನಪಾನಗಳೇ ಮೊದಲಾದ ಸಕಲ ಪದಾರ್ಥಗಳನ್ನೂ ಮೊದಲು ನನಗೆ ಅರ್ಪಿಸಬೇಕು. ಬಳಿಕ ಅವುಗಳನ್ನು ಅತ್ಯಂತ ಭಕ್ತಿಯಿಂದ ಭೋಜನಮಾಡುವುದರಿಂದ ಅಶುಚಿಯಾದವನೂ ಕೂಡ ಪರಿಶುದ್ಧನಾಗುವನು.

೩೦. ನನ್ನ ನೈವೇದ್ಯವು ದುಷ್ಕೃತ್ಯನಿರತರಿಗೂ ಕೂಡ ಸಕಲತೀರ್ಥಗಳ ಮತ್ತು ಯಜ್ಞಗಳ ಫಲವನ್ನು ಕೊಡುವುದು. ಕಲಿಕೃತ ಸಕಲದೋಷಗಳನ್ನೂ ಹೋಗಲಾಡಿಸುವುದು. ಮತ್ತು ಸದ್ಗತಿಯನ್ನು ಕೊಡುವುದು.

೩೧. ನನ್ನ ಭಕ್ತನು ಇತರ ದೇವತೆಗಳಿಗೆ ಮಾಡಿದ ನೈವೇದ್ಯವನ್ನು ಸೇವಿಸ ಬಾರದು. ವಿಷ್ಣುಭಕ್ತರಲ್ಲದವರ ಮನೆಗಳಲ್ಲಿ ಮಾಡಿದ ಪಕ್ವಾನ್ನಗಳನ್ನು ತಿನ್ನು ವುದರಿಂದ ಭಾಗವತನಾದವನು ನರಕವನ್ನು ಹೊಂದುವನು.

೩೨. ಇನ್ನು ಹರಿದಿನಗಳಲ್ಲಿ ಏನನ್ನು ಹೇಳಬೇಕೆಂಬುದನ್ನು ಕೇಳಿದೆ ಯಲ್ಲವೆ. ಅದರ ಉತ್ತರವನ್ನು ಶಾಂತಮನಸ್ಕನಾಗಿ ಕೇಳು. ಈ ವಿಷಯವು

ಮಮ ನಾಮ ಪ್ರವಕ್ತವ್ಯಂ ಸಹೇ ಚೈವ ವಿಶೇಷತಃ ।
ಕೃಷ್ಣಕೃಷ್ಣೇತಿ ವಕ್ತವ್ಯಂ ಮಮ ಪ್ರೀತಿಕರಂ ಪರಂ ॥ ೩೩ ॥
ಪ್ರತಿಜ್ಞೈಷಾ ಚ ಮೇ ಪುತ್ರ ನ ಜಾನಂತಿ ಸುರಾಸುರಾಃ ।
ಮನಸಾ ಕರ್ಮಣಾ ವಾಚಾ ಯೋ ಮೇ ಶರಣಮಾಗತಃ ॥ ೩೪ ॥
ಸಹಿ ಸರ್ವಾನವಾಪ್ನೋತಿ ಕಾಮನಾಮಿಹ ಲೌಕಿಕೀಂ ।
ಸರ್ವೋತ್ಕೃಷ್ಟಂ ಚ ವೈಕುಂಠಂ ಮತ್ಪ್ರಿಯಾಂ ಕಮಲಾಮಪಿ ॥ ೩೫ ॥
ಕೃಷ್ಣ ಕೃಷ್ಣೇತಿ ಕೃಷ್ಣೇತಿ ಯೋ ಮಾಂ ಸ್ಮರತಿ ನಿತ್ಯಶಃ ।
ಜಲಂ ಭಿತ್ವಾ ಯಥಾ ಪದ್ಮಂ ನರಕಾದುದ್ಧರಾಮ್ಯಹಂ ॥ ೩೬ ॥
ವಿನೋದೇನಾಪಿ ದಂಭೇನ ಮೌಢ್ಯಾಲ್ಲೋಭಾಚ್ಛಲಾದಪಿ ।
ಯೋ ಮಾಂ ಭಜತ್ಯಸೌ ವತ್ಸ ಮದ್ಭಕ್ತೋ ನಾವಸೀದತಿ ॥ ೩೭ ॥
ಯೇ ವೈ ಪಠಂತಿ ಕೃಷ್ಣೇತಿ ಮರಣೇ ಪರ್ಯುಪಸ್ಥಿತೇ ।
ಯದಿ ಪಾಪಯುತಾಃ ಪುತ್ರ ನ ಪಶ್ಯಂತಿ ಯಮಂ ಕ್ವಚಿತ್ ॥ ೩೮ ॥

---

ಅತ್ಯಂತ ಗುಹ್ಯತಮವಾದರೂ ನಿನ್ನಲ್ಲಿರುವ ಪ್ರೀತಿಯಿಂದ ವಿಸ್ತಾರವಾಗಿ ತಿಳಿಸುವೆನು.

೩೩. ಮಾರ್ಗಶೀರ್ಷಮಾಸದಲ್ಲಿ ವಿಶೇಷವಾಗಿ "ಕೃಷ್ಣ, ಕೃಷ್ಣ" ಎಂಬ ನನ್ನ ನಾಮವನ್ನೇ ಯಾವಾಗಲೂ ನುಡಿಯುತ್ತಿರಬೇಕು. ಆ ನಾಮವೇ ನನಗೆ ವಿಶೇಷ ಸಂತೋಷವನ್ನುಂಟುಮಾಡುವುದು.

೩೪–೩೫. ಪುತ್ರನೆ! ನನ್ನದೊಂದು ಪ್ರತಿಜ್ಞೆಯಿರುವುದು. ಅದನ್ನು ಯಾವ ದೇವತೆಗಳೂ ದಾನವರೂ ತಿಳಿದಿಲ್ಲ. ಯಾವನು ಮನಸ್ಸಿನಿಂದಲೂ, ವಾಕ್ಕಿನಿಂದಲೂ, ಶರೀರದಿಂದಲೂ ನನ್ನನ್ನೇ ಶರಣುಹೊಂದಿರುವನೊ, ಅವನು ಈ ಲೋಕದಲ್ಲಿ ಸಕಲ ಭೋಗಭಾಗ್ಯಗಳನ್ನೂ ಹೊಂದುವನು. ನನಗೆ ಪ್ರಿಯೆಯಾದ ಲಕ್ಷ್ಮಿಯನ್ನೂ ಸರ್ವೋತ್ಕೃಷ್ಟವಾದ ವೈಕುಂಠವನ್ನೂ ಪಡೆಯುವನು.

೩೬. 'ಕೃಷ್ಣ, ಕೃಷ್ಣ' ಎಂಬುದಾಗಿ ಸರ್ವಕಾಲಗಳಲ್ಲಿಯೂ ಯಾವನು ನನ್ನನ್ನೇ ಸ್ಮರಿಸುತ್ತಿರುವನೊ, ಜಲವನ್ನು ಭೇದಿಸಿ ಮೇಲಕ್ಕೆದ್ದ ಪದ್ಮದಂತಿರುವ ಅವನನ್ನು ನಾನು ನರಕದಿಂದ ಉದ್ಧರಿಸುವೆನು.

೩೭–೩೮. ಎಲೈ ವತ್ಸನೆ! ಹಾಸ್ಯಕ್ಕಾಗಲಿ, ಗರ್ವದಿಂದಾಗಲಿ, ಮೌಢ್ಯದಿಂದಾಗಲಿ, ಲೋಭದಿಂದಾಗಲಿ, ಹಟದಿಂದಾಗಲಿ ಯಾವನು ನನ್ನ ನಾಮವನ್ನು ಜಪಿಸುವನೊ, ಅವನೇ ನನ್ನ ಭಕ್ತನು. ಅವನು ಎಂದಿಗೂ ಕ್ಲೇಶಗಳಿಗೊಳಗಾಗುವುದಿಲ್ಲ. ಯಾವ ಜನರು ಮೃತ್ಯುವು ಸನ್ನಿಹಿತವಾದಾಗಲಾದರೂ ನನ್ನ ನಾಮವನ್ನು ಪಠಿಸುವರೊ, ಅವರು ಜನ್ಮಾರಭ್ಯ ಪಾಪಗಳನ್ನು ಮಾಡಿದ್ದರೂ ನನ್ನ ಆ ನಾಮದ ಬಲದಿಂದ ಯಮನನ್ನೆಂದಿಗೂ ನೋಡಲಾರರು.

ಪೂರ್ವೇ ವಯಸಿ ಪಾಪಾನಿ ಕೃತಾನ್ಯಪಿ ಚ ಕೃತ್ಸ್ನಶಃ ।
ಅಂತಕಾಲೇ ಚ ಕೃಷ್ಣೇತಿ ಸ್ಮೃತ್ವಾ ಮಾಮೇತ್ಯಸಂಶಯಂ ॥ ೩೯ ॥
ನಮಃ ಕೃಷ್ಣಾಯ ಮಹತೇ ವಿವಶೋಽಪಿ ವದೇದ್ಯದಿ ।
ಧ್ರುವಂ ಪದಮವಾಪ್ನೋತಿ ಮರಣೇ ಪರ್ಯುಪಸ್ಥಿತೇ ॥ ೪೦ ॥
ಶ್ರೀಕೃಷ್ಣೇತಿ ಕೃತೋಚ್ಚಾರೈಃ ಪ್ರಾಣೈರ್ಯದಿ ವಿಯುಜ್ಯತೇ ।
ದೂರಸ್ಥಃ ಪಶ್ಯತಿ ಚ ತಂ ಸ್ವರ್ಗತಂ ಪ್ರೇತನಾಯಕಃ ॥ ೪೧ ॥
ಸ್ಮಶಾನೇ ಯದಿ ರಥ್ಯಾಯಾಂ ಕೃಷ್ಣಕೃಷ್ಣೇತಿ ಜಲ್ಪತಿ ।
ಮ್ರಿಯತೇ ಯದಿ ಚೇತ್ಪುತ್ರ ಮಾಮೇನ್ಯೈತಿ ನ ಸಂಶಯಃ ॥ ೪೨ ॥
ದರ್ಶನಾನ್ಮಮಭಕ್ತಾನಾಂ ಮೃತ್ಯುಮಾಪ್ನೋತಿ ಯಃ ಕ್ವಚಿತ್ ।
ವಿನಾ ಮತ್ಸ್ಮರಣಾತ್ಪುತ್ರ ಮುಕ್ತಿಮೇತಿ ಸ ಮಾನವಃ ॥ ೪೩ ॥
ಪಾಪಾನಲಸ್ಯ ದೀಪ್ತಸ್ಯ ಭಯಂ ಮಾ ಕುರು ಪುತ್ರಕ ।
ಶ್ರೀಕೃಷ್ಣನಾಮಮೇಘೋತ್ಥೈಃ ಸಿಚ್ಯತೇ ನೀರಬಿಂದುಭಿಃ ॥ ೪೪ ॥

---

೩೯. ಪೂರ್ವವಯಸ್ಸಿನಲ್ಲಿ ಅನೇಕ ಪಾತಕಗಳನ್ನು ಅನೇಕವೇಳೆ ಮಾಡಿದ್ದರೂ, ಅಂತ್ಯಕಾಲದಲ್ಲಿ ಶ್ರೀಕೃಷ್ಣನೆಂಬ ನನ್ನ ನಾಮವನ್ನು ಸ್ಮರಿಸುವುದರಿಂದ ಮಾನವನು ನಿಸ್ಸಂಶಯವಾಗಿಯೂ ನನ್ನನ್ನೇ ಸೇರುವನು.

೪೦. ಮರಣವು ಸನ್ನಿಹಿತವಾಗಿರಲು, 'ಮಹಾತ್ಮನಾದ ಕೃಷ್ಣನಿಗೆ ನಮಸ್ಕಾರವು' ಎಂಬುದಾಗಿ ಅಜ್ಞಾನದಲ್ಲಿ ನುಡಿದರೂ ಕೂಡ ಆ ಮನುಷ್ಯನು ಶಾಶ್ವತವಾದ ವೈಕುಂಠಪದವಿಯನ್ನು ಪಡೆಯುವನು.

೪೧. ಶ್ರೀಕೃಷ್ಣನ ನಾಮವನ್ನುಚ್ಚರಿಸುತ್ತಲೇ ಯಾವನು ಪ್ರಾಣಗಳನ್ನು ತ್ಯಜಿಸುವನೋ, ಅವನು ಸ್ವರ್ಗಕ್ಕೆ ಪ್ರಯಾಣಮಾಡುತ್ತಿರುವುದನ್ನು ಯಮನು ದೂರದಲ್ಲಿಯೇ ನಿಂತು ನೋಡುತ್ತಿರುವನು.

೪೨. ಮಗನೆ! ಸ್ಮಶಾನದಲ್ಲಿಯಾಗಲಿ, ಬೀದಿಯಲ್ಲಾಗಲಿ 'ಕೃಷ್ಣ, ಕೃಷ್ಣ' ಎಂಬುದಾಗಿ ನನ್ನ ನಾಮವನ್ನು ಉಚ್ಚರಿಸುತ್ತ ಯಾವನು ಸಾಯುವನೊ, ಅವನು ನನ್ನನ್ನೇ ಪಡೆಯುವುದರಲ್ಲಿ ಸಂದೇಹವಿಲ್ಲ.

೪೩. ಯಾವ ಮಾನವನು ನನ್ನ ಭಕ್ತರ ದರ್ಶನವನ್ನು ಮಾಡುತ್ತ ಮರಣವನ್ನು ಹೊಂದುವನೊ, ಅವನು ಎಲ್ಲಿದ್ದರೂ ನನ್ನ ಸ್ಮರಣೆಯಿಲ್ಲದೆಯೂ ಕೂಡ ಮೋಕ್ಷವನ್ನು ಪಡೆಯುವನು.

೪೪. ಪುತ್ರನೆ! ಭಯಂಕರವಾಗಿ ಪ್ರಜ್ವಲಿಸುತ್ತಿರುವ ಪಾಪಗಳೆಂಬ ಬೆಂಕಿಯ ದೆಸೆಯಿಂದ ನೀನು ಭಯಪಡಬೇಡ. ಶ್ರೀಕೃಷ್ಣನ ನಾಮವೆಂಬ ಮೇಘದಿಂದ ಬೀಳುತ್ತಿರುವ ನೀರಿನ ಹನಿಗಳಿಂದ ಆ ದಾವಾನಲವು ನಿಶ್ಶೇಷವಾಗಿ ಆರಿಹೋಗುವುದು.

ಕಲಿಕಾಲಭುಜಂಗಸ್ಯ ತೀಕ್ಷ್ಣದಂಷ್ಟ್ರಸ್ಯ ಕಿಂ ಭಯಂ ।
ಶ್ರೀಕೃಷ್ಣ ನಾಮದಾರೋತ್ಥ ವಹ್ನಿದಗ್ಧಃ ಸ ನಶ್ಯತಿ ॥ ೪೫ ॥
ಪಾಪಪಾವಕದಗ್ಧಾನಾಂ ಕರ್ಮಚೇಷ್ಟಾವಿಯೋಗಿನಾಂ ।
ಭೇಷಜಂ ನಾಸ್ತಿ ಮರ್ತ್ಯಾನಾಂ ಶ್ರೀಕೃಷ್ಣಸ್ಮರಣಂ ವಿನಾ ॥ ೪೬ ॥
ಪ್ರಯಾಗೇ ವೈ ಯಥಾ ಗಂಗಾ ಶುಕ್ಲತೀರ್ಥೇ ಚ ನರ್ಮದಾ ।
ಸರಸ್ವತೀ ಕುರುಕ್ಷೇತ್ರೇ ತದ್ವಚ್ಛ್ರೀಕೃಷ್ಣಕೀರ್ತನಂ ॥ ೪೭ ॥
ಭವಾಂಬೋಧಿನಿಮಗ್ನಾನಾಂ ಮಹಾಪಾಪೋರ್ಮಿಪಾತಿನಾಂ ।
ನ ಗತಿರ್ಮಾನವಾನಾಂಚ ಶ್ರೀಕೃಷ್ಣಸ್ಮರಣಂ ವಿನಾ ॥ ೪೮ ॥
ಮೃತ್ಯುಕಾಲೇಽಪಿ ಮರ್ತ್ಯಾನಾಂ ಪಾಪಿನಾಂ ತದನಿಚ್ಛತಾಂ ।
ಗಚ್ಛತಾಂ ನಾಸ್ತಿ ಪಾಥೇಯಂ ಶ್ರೀಕೃಷ್ಣಸ್ಮರಣಂ ವಿನಾ ॥ ೪೯ ॥
ತತ್ರ ಪುತ್ರ ಗಯಾ ಕಾಶೀ ಪುಷ್ಕರಂ ಕುರುಜಾಂಗಲಂ ।
ಪ್ರತ್ಯಹಂ ಮಂದಿರೇ ಯಸ್ಯ ಕೃಷ್ಣಕೃಷ್ಣೇತಿ ಕೀರ್ತನಂ ॥ ೫೦ ॥

---

೪೫. ಕಲಿಯುಗವೆಂಬ ತೀಕ್ಷ್ಣದಂಷ್ಟ್ರಾಯುಧಗಳುಳ್ಳ ಕಾಲಸರ್ಪಕ್ಕೆ ಮಾನವರು ಏಕೆ ಹೆದರಬೇಕು? ಶ್ರೀ ಕೃಷ್ಣನಾಮವೆಂಬ ಕಾಷ್ಠದಲ್ಲಿ ಹುಟ್ಟಿದ ಬೆಂಕಿಯು ಅದನ್ನು ಸುಟ್ಟು ನಾಶಮಾಡುವುದು.

೪೬. ಪಾಪವೆಂಬ ಅಗ್ನಿಯಲ್ಲಿ ಸುಡಲ್ಪಟ್ಟು ಸತ್ಕರ್ಮವ್ಯಾಪಾರವರ್ಜಿತರಾದವರಿಗೆ ಶ್ರೀ ಕೃಷ್ಣಸ್ಮರಣೆಯೊಂದಲ್ಲದೆ ಮತ್ತೆ ಬೇರೆ ಯಾವ ಔಷಧವೂ ದೊರೆಯಲಾರದು.

೪೭. ಪ್ರಯಾಗದಲ್ಲಿ ಗಂಗಾಪ್ರವಾಹದಂತೆಯೂ, ಶುಕ್ಲತೀರ್ಥದಲ್ಲಿ ನರ್ಮದಾನದಿಯಂತೆಯೂ, ಕುರುಕ್ಷೇತ್ರದಲ್ಲಿ ಸರಸ್ವತಿಯಂತೆಯೂ ಶ್ರೀ ಕೃಷ್ಣನಾಮಸ್ಮರಣೆಯು ಮೋಕ್ಷದಾಯಕವಾದುದು.

೪೮. ಸಂಸಾರವೆಂಬ ಸಮುದ್ರದಲ್ಲಿ ಬಿದ್ದು ಮಹಾಪಾತಕಗಳೆಂಬ ಅಲೆಗಳ ಹೊಡೆತಕ್ಕೆ ಸಿಕ್ಕಿ ನರಳುತ್ತಿರುವ ಮನುಷ್ಯರಿಗೆ ಶ್ರೀ ಕೃಷ್ಣಸ್ಮರಣೆಯಲ್ಲದೆ ಬೇರೆ ಉದ್ಧಾರೋಪಾಯವಿಲ್ಲ.

೪೯. ಪಾಪಿಗಳಾದ ಮಾನವರು ಅಪೇಕ್ಷಿಸದಿದ್ದರೂ ಮೃತ್ಯುವು ಖಂಡಿತವಾಗಿಯೂ ಸಂಭವಿಸುವುದು. ಮರಣಕಾಲದಲ್ಲಿ ಪರಲೋಕಕ್ಕೆ ಪ್ರಯಾಣ ಮಾಡುವವರಿಗೆ ಶ್ರೀ ಕೃಷ್ಣಸ್ಮರಣೆಯಲ್ಲದೆ ಮತ್ತೆ ಯಾವ ಪಾಥೇಯವೂ ಸಂಗಡ ಬರುವುದಿಲ್ಲ.

೫೦. ಎಲೈ ಪುತ್ರನೆ! ಯಾವನ ಮನೆಯಲ್ಲಿ ಸರ್ವಕಾಲದಲ್ಲಿಯೂ ಕೃಷ್ಣನಾಮ ಸಂಕೀರ್ತನವು ನಡೆಯುತ್ತಿರುವುದೊ, ಅಲ್ಲಿಯೇ ಗಯೆ, ಕಾಶಿ, ಪುಷ್ಕರ, ಕುರುಜಾಂಗಲ ಮುಂತಾದ ಸಕಲ ಕ್ಷೇತ್ರಗಳೂ ಸನ್ನಿಹಿತಗಳಾಗಿರುವುವು.

ಜೀವಿತಂ ಜನ್ಮಸಾಫಲ್ಯಂ ಸುಖಂ ತಸ್ಯೈವ ಸಾರ್ಥಕಂ ।
ಸತತಂ ರಸನಾ ಯಸ್ಯ ಕೃಷ್ಣಕೃಷ್ಣೇತಿ ಜಲ್ಪತಿ ॥ ೫೧ ॥
ಸಕೃದುಚ್ಚರಿತಂ ಯೇನ ಹರಿರಿತ್ಯಕ್ಷರದ್ವಯಂ ।
ಬದ್ಧಃ ಪರಿಕರಸ್ತೇನ ಮೋಕ್ಷಾಯ ಗಮನಂ ಪ್ರತಿ ॥ ೫೨ ॥
ನಾಮ್ನೋಽಸ್ಯ ಯಾವತೀ ಶಕ್ತಿಃ ಪಾಪನಿರ್ದಹನೇ ಮಮ ।
ತಾವತ್ಕರ್ತುಂ ನಶಕ್ನೋತಿ ಪಾತಕಂ ಪಾತಕೀ ಜನಃ ॥ ೫೩ ॥
ನಾಪವಿದ್ಧಂ ಭವೇತ್ತಸ್ಯ ಶರೀರಂ ನೈವ ಮಾನಸಂ ।
ನ ಪಾಪಂ ನ ಚ ವೈಕ್ಲವ್ಯಂ ಕೃಷ್ಣಕೃಷ್ಣೇತಿ ಕೀರ್ತನಾತ್ ॥ ೫೪ ॥
ಶ್ರೀಕೃಷ್ಣೇತಿ ವಚಃ ಪಥ್ಯಂ ನತ್ಯಜೇದ್ಯಃ ಕಲೌ ನರಃ ।
ಪಾಪಾಮಯೋ ವೈ ನ ಭವೇತ್ ಕಲೌ ತಸ್ಯೈವ ಮಾನಸೇ ॥ ೫೫ ॥
ಶ್ರೀಕೃಷ್ಣೇತಿ ಪ್ರಜಲ್ಪಂತಂ ದಕ್ಷಿಣಾಶಾಪತಿರ್ನರಂ ।
ಶೃತ್ವಾ ಮಾರ್ಜಯತೇ ಪಾಪಂ ತಸ್ಯ ಜನ್ಮಶತಾರ್ಜಿತಂ ॥ ೫೬ ॥
ಚಾಂದ್ರಾಯಣಶತೈಃ ಪಾಪಂ ಪರಾಕಾಣಾಂ ಸಹಸ್ರಕೈಃ ।
ಯನ್ನಾಪಯಾತಿ ತದ್ಯಾತಿ ಕೃಷ್ಣಕೃಷ್ಣೇತಿ ಕೀರ್ತನಾತ್ ॥ ೫೭ ॥

---

೫೧. ಯಾವನ ನಾಲಿಗೆಯು ಸಂತತವಾಗಿ ಶ್ರೀಕೃಷ್ಣನಾಮ ಸ್ಮರಣೆಯನ್ನೇ ಮಾಡುತ್ತಿರುವುದೊ, ಅವನ ಜೀವನ, ಜನ್ಮಗಳೇ ಸಫಲಗಳು. ಅವನ ಸುಖವೇ ಸಾರ್ಥಕವು.

೫೨. ಯಾವನು ಒಮ್ಮೆ ಹರಿಯೆಂಬ ಎರಡು ಅಕ್ಷರಗಳನ್ನು ಬಾಯಿಯಿಂದ ಉಚ್ಚಾರಮಾಡುವನೊ, ಅವನು ಮೋಕ್ಷಮಾರ್ಗಕ್ಕೆ ಅಷ್ಟು ಪಾಥೇಯವನ್ನು ಕಟ್ಟಿಕೊಂಡು ಹೋಗುವನೆಂದು ತಿಳಿಯಬೇಕು.

೫೩. ಈ ನನ್ನ ನಾಮದಲ್ಲಿ ಎಷ್ಟು ಪಾಪಗಳನ್ನು ನಾಶಮಾಡುವ ಶಕ್ತಿಯಿರುವುದೊ, ಅಷ್ಟು ಪಾಪಗಳನ್ನು ಯಾವ ಪಾತಕಿಯೂ ಮಾಡಲಾರನು.

೫೪. ಯಾವನು ಶ್ರೀ ಕೃಷ್ಣನಾಮ ಸಂಕೀರ್ತನೆಯನ್ನು ಮಾಡುವನೊ, ಅವನಿಗೆ ದೇಹವ್ಯಾಧಿಗಳಾಗಲಿ, ಮಾನಸಿಕ ವ್ಯಥೆಗಳಾಗಲಿ, ಪಾಪಲೇಪವಾಗಲಿ, ಚಿತ್ತವಿಕ್ಷೇಪವಾಗಲಿ ಎಂದಿಗೂ ಉಂಟಾಗಲಾರವು.

೫೫–೫೬. ಕಲಿಯುಗದಲ್ಲಿ ಶ್ರೀ ಕೃಷ್ಣನಾಮಸ್ಮರಣೆಯೆಂಬ ಪಥ್ಯವಾಕ್ಯವನ್ನು ಯಾವ ಮನುಷ್ಯನು ತ್ಯಜಿಸುವುದಿಲ್ಲವೊ, ಅವನ ಮನಸ್ಸಿನಲ್ಲಿ ಪಾಪವೆಂಬ ರೋಗವು ಎಂದಿಗೂ ಸಂಭವಿಸುವುದಿಲ್ಲ. ಶ್ರೀಕೃಷ್ಣನ ಹೆಸರನ್ನು ಜಪಿಸುತ್ತಿರುವ ಮನುಜನನ್ನು ಕಂಡರೆ ಯಮರಾಜನು ಅದನ್ನು ಕೇಳಿ ಆತನು ಹಿಂದಿನ ನೂರು ಜನ್ಮಗಳಲ್ಲಿ ಮಾಡಿದ ಪಾಪಗಳನ್ನೆಲ್ಲ ತೊಡೆದುಹಾಕುವನು.

೫೭. ಒಂದು ನೂರು ಚಂದ್ರಾಯಣವ್ರತಗಳಿಂದಲೂ, ಸಾವಿರ ಪರಾಕ

ನಾನ್ಯಾಭಿರ್ನಾಮಕೋಟೀಭಿಸ್ತೋಷೋ ಮಮ ಭವೇತ್ಕ್ವಚಿತ್ ।
ಶ್ರೀಕೃಷ್ಣೇತಿ ಕೃತೋಚ್ಚಾರೇ ಪ್ರೀತಿರೇವಾಧಿಕಾಧಿಕಾ ॥ ೫೮ ॥
ಚಂದ್ರಸೂರ್ಯೋಪರಾಗೈಸ್ತು ಕೋಟಿಭಿರ್ಯತ್ಫಲಂ ಸ್ಮೃತಂ ।
ತತ್ಫಲಂ ಸಮವಾಪ್ನೋತಿ ಕೃಷ್ಣಕೃಷ್ಣೇತಿ ಕೀರ್ತನಾತ್ ॥ ೫೯ ॥
ಗುರುದಾರಾಭಿಗಮನಂ ಹೇಮಸ್ತೇಯಾದಿ ಪಾತಕಂ ।
ಶ್ರೀಕೃಷ್ಣಕೀರ್ತನಾದ್ಯಾತಿ ಘರ್ಮತಪ್ತಂ ಹಿಮಂ ಯಥಾ ॥ ೬೦ ॥
ಯುಕ್ತೋ ಯದಿ ಮಹಾಪಾಪೈರಗಮ್ಯಾಗಮನಾದಿಭಿಃ ।
ಮುಚ್ಯತೇ ಚಾಂತಕಾಲೇಽಪಿ ಸಕೃಚ್ಛ್ರೀಕೃಷ್ಣಕೀರ್ತನಾತ್ ॥ ೬೧ ॥
ಅವಿಶುದ್ಧಮನಾ ಯಸ್ತು ವಿನಾಪ್ಯಾಚಾರವರ್ತನಾತ್ ।
ಪ್ರೇತತ್ವಂ ಸೋಽಪಿ ನಾಪ್ನೋತಿ ಅಂತೇ ಶ್ರೀಕೃಷ್ಣಕೀರ್ತನಾತ್ ॥ ೬೨ ॥
ಮುಖೇ ಭವತು ಮಾ ಜಿಹ್ವಾಽಸತೀ ಯಾತು ರಸಾತಲಂ ।
ನ ಸಾ ಚೇತ್ಕಲಿಕಾಲೀಯಾ ಶ್ರೀಕೃಷ್ಣಗುಣವಾದಿನೀ ॥ ೬೩ ॥

---

ಪ್ರಾಯಶ್ಚಿತ್ತಗಳಿಂದಲೂ ಯಾವ ಪಾಪವು ಕಳೆಯಲಾರದೊ, ಅದೂ ಸಹ ಕೃಷ್ಣ ನಾಮ ಸಂಕೀರ್ತನದಿಂದ ನಾಶವನ್ನು ಹೊಂದುವುದು.

೫೮. ಇತರ ಕೋಟಿನಾಮಗಳ ಉಚ್ಚಾರಣೆಯಿಂದ ನನಗೆ ಅಷ್ಟು ಹೆಚ್ಚಿನ ಸಂತೋಷವುಂಟಾಗಲಾರದು. ಶ್ರೀ ಕೃಷ್ಣನೆಂಬ ನಾಮವನ್ನು ಸಂಕೀರ್ತನೆ ಮಾಡಿದಂತೆಲ್ಲ ನನಗೆ ಹೆಚ್ಚು ಹೆಚ್ಚಿನ ಆನಂದವುಂಟಾಗಿ ಭಕ್ತನಲ್ಲಿ ಪ್ರೀತಿಯೂ ಅಧಿಕವಾಗುವುದು.

೫೯. ಕೋಟಿ ಸೂರ್ಯಗ್ರಹಣಗಳಿಂದಲೂ, ಚಂದ್ರಗ್ರಹಣಗಳಿಂದಲೂ ಯಾವ ಫಲವು ಲಭಿಸುವುದೆಂದು ಹೇಳಲ್ಪಟ್ಟಿರುವುದೊ, ಆ ಫಲವನ್ನೇ ಭಕ್ತನು ಶ್ರೀಕೃಷ್ಣನಾಮ ಸಂಕೀರ್ತನೆಯಿಂದ ಸಂಪಾದಿಸುವನು.

೬೦. ಗುರುಪತ್ನೀಸಂಸರ್ಗ, ಪರಸ್ವರ್ಣಾಪಹರಣ ಮುಂತಾದ ಮಹಾ ಪಾತಕಗಳೆಲ್ಲವೂ ಶ್ರೀಕೃಷ್ಣನಾಮಸಂಸ್ಮರಣೆಯ ಮಹಿಮೆಯಿಂದ ಬೇಸಿಗೆ ಯಲ್ಲಿ ಮಾಯವಾಗುವ ಹಿಮದಂತೆ ಮಾಯವಾಗುವುವು.

೬೧–೬೨. ಮನುಷ್ಯನು ಜನ್ಮದ ಮೊದಲಿನಿಂದಲೂ ಅಗಮ್ಯಸ್ತ್ರೀಸಹವಾಸ ಮುಂತಾದ ಮಹಾಪಾಪಗಳನ್ನು ಮಾಡಿದ್ದರೂ ಕೂಡ ಮರಣಕಾಲದಲ್ಲಿ ಒಮ್ಮೆ ಯಾದರೂ ಶ್ರೀ ಕೃಷ್ಣನಾಮವನ್ನು ಉಚ್ಚರಿಸುವುದರಿಂದ ಮೋಕ್ಷವನ್ನು ಹೊಂದುವನು. ಶುದ್ಧಿಯಿಲ್ಲದ ಮನಸ್ಸುಳ್ಳವನಾಗಲಿ ಆಚಾರವ್ಯವಹಾರವಿಲ್ಲದವ ನಾಗಲಿ, ಅವನಿಗೂ ಕೂಡ ಅಂತ್ಯದಲ್ಲಿ ಶ್ರೀ ಕೃಷ್ಣನ ನಾಮವನ್ನು ಸ್ಮರಿಸು ವುದರಿಂದ ಪ್ರೇತತ್ವವು ಸಂಭವಿಸುವುದಿಲ್ಲ.

೬೩. ಈ ಕಲಿಕಾಲದಲ್ಲಿ ಶ್ರೀ ಕೃಷ್ಣನ ಗುಣಗಳನ್ನು ಯಾವ ನಾಲಿಗೆಯು

ಸ್ವವಕ್ತ್ರೇ ಪರವಕ್ತ್ರೇ ಚ ವಂಧ್ಯಾ ಜಿಹ್ವಾ ಪ್ರಯತ್ನತಃ ।
ಕುರುತೇ ಯಾ ಕಲೌ ಪುತ್ರ ಶ್ರೀಕೃಷ್ಣಗುಣಕೀರ್ತನಾತ್ ॥ ೭೪ ॥
ಪಾಪವಲ್ಲೀ ಮುಖೇ ತಸ್ಯ ಜಿಹ್ವಾರೂಪೇಣ ಕೀರ್ತ್ಯತೇ ।
ಯಾ ನ ವಕ್ತಿ ದಿವಾರಾತ್ರೌ ಶ್ರೀಕೃಷ್ಣಗುಣಕೀರ್ತನಾತ್ ॥ ೭೫ ॥
ಪತತಾಂ ಶತಖಂಡಾತು ಸಾ ಜಿಹ್ವಾ ರೋಗರೂಪಿಣೀ ।
ಶ್ರೀಕೃಷ್ಣ ಕೃಷ್ಣ ಕೃಷ್ಣೇತಿ ಶ್ರೀಕೃಷ್ಣೇತಿ ನ ಜಲ್ಪತಿ ॥ ೭೬ ॥
ಶ್ರೀಕೃಷ್ಣ ನಾಮಮಾಹಾತ್ಮ್ಯಂ ಪ್ರಾತರುತ್ಥಾಯ ಯಃ ಪಠೇತ್ ।
ತಸ್ಯಾಽಹಂ ಶ್ರೇಯಸಾಂ ದಾತಾ ಭವಾಮ್ಯೇವ ನ ಸಂಶಯಃ ॥ ೭೭ ॥
ಶ್ರೀಕೃಷ್ಣನಾಮಮಾಹಾತ್ಮ್ಯಂ ತ್ರಿಸಂಧ್ಯಂ ಹಿ ಪಠೇತ್ತು ಯಃ ।
ಸರ್ವಾನ್ಕಾಮಾನವಾಪ್ನೋತಿ ಸ ಮೃತಃ ಪರಮಾಂ ಗತಿಂ ॥ ೭೮ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ದ್ವಿತೀಯೇ ವೈಷ್ಣವಖಂಡೇ ಮಾರ್ಗಶೀರ್ಷಮಾಹಾತ್ಮ್ಯೇ ಬ್ರಹ್ಮವಿಷ್ಣುಸಂವಾದೇ
"ಶ್ರೀಕೃಷ್ಣನಾಮಮಾಹಾತ್ಮ್ಯವರ್ಣನಂ" ನಾಮ ಪಂಚದಶೋಽಧ್ಯಾಯಃ

---

ಗಾನಮಾಡುವುದಿಲ್ಲವೊ, ಆ ನಾಲಿಗೆಯು ಇದ್ದರೂ ಇಲ್ಲದಂತೆಯೇ ಸರಿ. ಅಂತಹ ನಾಲಿಗೆಯು ಯಾರ ಮುಖದಲ್ಲಿಯೂ ಇಲ್ಲದಿರಲಿ.

೭೪-೭೬. ತನ್ನ ಮುಖದಲ್ಲಾಗಲಿ ಮತ್ತೊಬ್ಬನ ಮುಖದಲ್ಲಾಗಲಿ, ಯಾವ ನಾಲಿಗೆಯು ಶ್ರೀಕೃಷ್ಣಗುಣಗಳ ಕೀರ್ತನೆಯನ್ನು ಮಾಡುವುದೊ, ಅದು ಪ್ರತಿಯೊಬ್ಬನ ವಿಶೇಷವಂದನೆಗೆ ಅರ್ಹವಾಗಿರುವುದು. ಯಾವನ ಮುಖದಲ್ಲಿ ಹಗಲು ರಾತ್ರಿಗಳೆನ್ನದೆ ಶ್ರೀಕೃಷ್ಣನ ಗುಣಗಳು ಕೀರ್ತಿಸಲ್ಪಡುವುದಿಲ್ಲವೊ, ಅವನ ಮುಖದಲ್ಲಿರುವುದು ಜಿಹ್ವೆಯ ರೂಪದಿಂದಿರುವ ಪಾಪದ ಬಳ್ಳಿಯೆಂದೇ ತಿಳಿಯಬೇಕು. ಯಾವನ ಮುಖವು ನಿರಂತರವೂ ಕೃಷ್ಣನಾಮದ ಜಪವನ್ನು ಮಾಡುವುದಿಲ್ಲವೊ, ಅವನ ನಾಲಿಗೆಯು ಅನೇಕ ರೋಗಗಳಿಗೆ ತುತ್ತಾಗಿ ನೂರು ಖಂಡಗಳಾಗಿ ಕತ್ತರಿಸಿ ನೆಲಕ್ಕೆ ಬೀಳಲಿ.

೭೭. ಶ್ರೀಕೃಷ್ಣನಾಮದ ಈ ಮಾಹಾತ್ಮ್ಯೆಯನ್ನು ಹಾಸಿಗೆಯಿಂದೆದ್ದು ಪ್ರಾತಃಕಾಲದಲ್ಲಿ ಯಾವನು ಪಠಿಸುವನೊ, ಅವನಿಗೆ ನಾನು ಸಕಲ ಶ್ರೇಯಸ್ಸುಗಳನ್ನೂ ಕೊಡುವೆನೆಂಬುದರಲ್ಲಿ ಸಂದೇಹವಿಲ್ಲ.

೭೮. ಶ್ರೀಕೃಷ್ಣನಾಮಮಾಹಾತ್ಮ್ಯೆಯುಳ್ಳ ಈ ಅಧ್ಯಾಯವನ್ನು ಪ್ರತಿದಿನದ ಪ್ರಾತಃಕಾಲ, ಮಧ್ಯಾಹ್ನ, ಸಾಯಂಕಾಲ ಸಮಯಗಳಲ್ಲಿ ಯಾವನು ಪಠನಮಾಡುವನೊ, ಅವನು ಈ ಲೋಕದಲ್ಲಿ ಸಕಲ ಇಷ್ಟಾರ್ಥಗಳನ್ನೂ ಅನುಭವಿಸಿ ದೇಹವನ್ನು ಬಿಟ್ಟಮೇಲೆ ಉತ್ತಮಗತಿಯನ್ನು ಹೊಂದುವನು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀಸ್ಕಾಂದಮಹಾಪುರಾಣದ ಎರಡನೆಯ ವೈಷ್ಣವಖಂಡದ ಮಾರ್ಗಶೀರ್ಷಮಾಹಾತ್ಮ್ಯದ
ಬ್ರಹ್ಮವಿಷ್ಣು ಸಂವಾದದಲ್ಲಿ "ಶ್ರೀ ಕೃಷ್ಣನಾಮ ಮಾಹಾತ್ಮ್ಯವರ್ಣನ"ವೆಂಬ
ಹದಿನೈದನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥ ಷೋಡಶೋಽಧ್ಯಾಯಃ

### ಭಾಗವತಶ್ರೀಕೃಷ್ಣ ವರ್ಣನಂ

ಶ್ರೀ ಭಗವಾನುವಾಚ :—

ಶೃಣು ಧ್ಯಾನಂ ಚತುರ್ವಕ್ತ್ರ ವಕ್ಷ್ಯಾಮಿ ಪ್ರೀತಮಾನಸಃ ।
ಶೃತೇಽನ್ಯೈವ ಚ ಸೌಭಾಗ್ಯಂ ಲಭತೇ ಮಾನವೋ ಭುವಿ ॥ ೧ ॥

ಅಥ ಶ್ರೀಮದುದ್ಯಾನ ಸಂವೀತ ಹೈಮ
ಸ್ಥಲೋದ್ಭಾಸಿ ರತ್ನಸ್ಫುರನ್ಮಂಡಪಾಂತಃ ।
ಲಸತ್ಕಲ್ಪವೃಕ್ಷೋದಿತೋ ದೀಪ್ತರತ್ನ
ಸ್ಥಲಾಧಿಷ್ಠಿತಾಂಭೋಜಪೀಠಾಧಿರೂಢಂ ॥ ೨ ॥

ಮಹಾನೀಲನೀಲಾಭಮತ್ಯಂತಬಾಲಂ
ಗುಡಸ್ನಿಗ್ಧವಕ್ತ್ರಾಂತ ವಿಸ್ರಸ್ತಕೇಶಂ ।
ಅಲಿವ್ರಾತ ಪರ್ಯಾಕುಲೋತ್ಫುಲ್ಲಪದ್ಮ
ಪ್ರಮುಗ್ಧಾನನಂ ಶ್ರೀಮದಿಂದೀವರಾಕ್ಷಂ ॥ ೩ ॥

---

## ಕನ್ನಡದ ಅನುವಾದ

### ಭಾಗವತಶ್ರೀಕೃಷ್ಣ ವರ್ಣನ

೧. ಭಗವಂತನು ಹೇಳುತ್ತಾನೆ :—ಚತುರ್ಮುಖನೇ! ಇನ್ನು ಧ್ಯಾನದ ಕ್ರಮವನ್ನು ಕೇಳು. ಸಂತೋಷಗೊಂಡ ಮನಸ್ಸಿನಿಂದ ಹೇಳುವೆನು. ಇದನ್ನು ಕೇಳಿದ ಮಾತ್ರದಿಂದಲೇ ಮನುಷ್ಯನು ಸಮಸ್ತ ಸೌಭಾಗ್ಯಗಳನ್ನೂ ಪಡೆಯುವನು.

೨. ಸಕಲೈಶ್ವರ್ಯಗಳಿಂದೊಡಗೂಡಿದ ಉದ್ಯಾನವನದಿಂದ ಸುತ್ತುವರೆಯಲ್ಪಟ್ಟ ಚಿನ್ನದ ದೇವಾಲಯದಲ್ಲಿ ಹೊಳೆಯುತ್ತಿರುವ ನವರತ್ನಮಯವಾದ ಮಂಟಪದಲ್ಲಿ ಉತ್ತಮವಾದ ಕಲ್ಪವೃಕ್ಷದ ಮೂಲದಲ್ಲಿರುವ ರತ್ನವೇದಿಕೆಯ ಮಧ್ಯದಲ್ಲಿ ಕಮಲಾಸನದಲ್ಲಿ ಪರಮಾತ್ಮನು ಸುಖಾಸೀನವಾಗಿರುವಂತೆ ಕಲ್ಪಿಸಿಕೊಳ್ಳಬೇಕು.

೩. ಆ ಸ್ವಾಮಿಯು ಇಂದ್ರನೀಲದಂತೆ ನೀಲವರ್ಣವಿಶಿಷ್ಟನೂ, ಕೇವಲ ಬಾಲಕನೂ, ಗುಡಸ್ನಿಗ್ಧವಾದ ಮುಖದ ಸುತ್ತಲೂ ಕೆದರಿರುವ ಮುಂಗುರುಳುಗಳುಳ್ಳವನೂ, ಆ ಮುಖದಿಂದಲೇ ತುಂಬಿವಿಂಡಿನಿಂದ ಸುತ್ತುವರೆಯಲ್ಪಟ್ಟ ಕಮಲವನ್ನು ಧಿಕ್ಕರಿಸುವವನೂ, ಸರ್ವಲಕ್ಷಣಯುತಗಳಾದ ಕನ್ನೈದಿಲೆಗಳಂತೆ ವಿಶಾಲನೇತ್ರಗಳುಳ್ಳವನೂ ಆಗಿರುವನು.

ಚಲತ್ಕುಂಡಲೋಲ್ಲಾಸಿತೋತ್ಫುಲ್ಲಗಲ್ಲಂ
ಸುಘೋಣಂ ಸುಶೋಣಾಧರಂ ಸುಸ್ಮಿತಾಸ್ಯಂ ।
ಅನೇಕೋಲ್ಲಸತ್ಕಂಠಭೂಷಾಲಸಂತಂ
ವಹಂತಂ ನಖಂ ಪೌಂಡರೀಕಂ ಸುನೇತ್ರಂ ॥ ೪ ॥
ಸಮುದ್ಧೂಸರೋರಃಸ್ಥಲಂ ಧೇನುಧೂಳ್ಯಾ
ಸುಪುಷ್ಟಾಂಗಮಷ್ಟಾಪದಾಕಲ್ಪದೀಪ್ತಂ ।
ಕಟೀರಸ್ಥಲೇ ಚಾರುಜಂಘೋರುಯುಗ್ಮೇ
ಪಿನದ್ಧಂ ಕ್ವಣತ್ಕಿಂಕಿಣೀ ಜಾಲದಾಮ್ನಾ ॥ ೫ ॥
ಹಸಂತಂ ಲಸದ್ಬಂಧುಜೀವಪ್ರಸೂನ
ಪ್ರಭಾಪಾಣಿಪಾದಾಂಬುಜೋದಾರಕಾಂತ್ಯಾ ।
ಕರೇ ದಕ್ಷಿಣೇ ಪಾಯಸಂ ವಾಮಹಸ್ತೇ
ದಧಾನಂ ನವಂ ಶುದ್ಧ ಹೈಯಂಗವೀನಂ ॥ ೬ ॥
ಮಹೀಭಾರಭೂತಾಮರಾರಾತಿಯೂಥಾ-
ನಲಂ ಪೂತನಾದೀನ್ನಿಹಂತುಂ ಪ್ರವೃತ್ತಂ ।
ಪ್ರಭುಂ ಗೋಪಿಕಾಗೋಪವೃಂದೇನ ವೀತಂ
ಸುರೇಂದ್ರಾದಿಭಿರ್ವಂದಿತಂ ದೇವ ದೇವಂ ॥ ೭ ॥

---

೪. ಚಲಿಸುತ್ತಿರುವ ಕುಂಡಲಗಳಿಂದ ಶೋಭಿಸುತ್ತಿರುವ ಕಪೋಲಗಳಿಂದಲೂ, ಸುಂದರನಾಸಿಕದಿಂದಲೂ, ಸೊಂಪಾದ ಕೆಂದುಟಿಗಳಿಂದಲೂ ಮಂದಹಾಸದಿಂದ ಕೂಡಿದ ಮುಖದಿಂದಲೂ, ಅನೇಕ ಕಂಠಭೂಷಣಗಳಿಂದಲೂ ಒಪ್ಪಿ ಕಮಲದಳಗಳಂತೆ ತೋರುವ ನೇತ್ರಗಳುಳ್ಳವನೂ ಆಗಿರುವನು.

೫. ಗೋವುಗಳ ಪಾದಧೂಳಿಗಳಿಂದ ಲೇಪಿತವಾದ ವಕ್ಷಸ್ಥಳವುಳ್ಳವನೂ, ದುಂಡಾದ ಅವಯವಗಳುಳ್ಳವನೂ, ಚಿನ್ನದ ಆಭರಣಗಳುಳ್ಳವನೂ, ನಡುವಿನಲ್ಲಿಯೂ, ಮೊಳಕಾಲುಗಳಲ್ಲಿಯೂ, ತೊಡೆಗಳಲ್ಲಿಯೂ ಶಬ್ದ ಮಾಡುತ್ತಿರುವ ಕಿರುಗೆಜ್ಜೆಗಳ ಹಾರಗಳಿಂದ ಕಟ್ಟಲ್ಪಟ್ಟವನೂ ಆಗಿರುವನು.

೬. ಮುಗುಳ್ನಗೆಯಿಂದೊಡಗೂಡಿ ಉತ್ತಮವಾದ ಬಂಧೂಕಪುಷ್ಪಗಳಂತೆ ಕೆಂಪಾದ ಅಂಗೈ ಅಂಗಾಲುಗಳುಳ್ಳವನೂ, ಕಮಲದಂತೆ ಕಾಂತಿಯುಕ್ತನೂ, ಬಲಗೈಯಲ್ಲಿ ಪಾಯಸದ ಪಾತ್ರೆಯನ್ನೂ ಎಡಗೈಯಲ್ಲಿ ಹಿಂದಿನ ದಿನದ ಪರಿಶುದ್ಧವಾದ ಬೆಣ್ಣೆಯನ್ನು ಹಿಡಿದಿರುವನೂ ಆಗಿರುವನು.

೭–೮. ಭೂಮಿಗೆ ಭಾರಪ್ರಾಯರಾದ ರಾಕ್ಷಸ ಸಮೂಹವೆಂಬ ಬೆಂಕಿಯನ್ನೂ ಪೂತನಾದಿ ರಾಕ್ಷಸ ಸ್ತ್ರೀಯರನ್ನೂ ನಿಗ್ರಹಿಸಲು ಉದ್ಯುಕ್ತನಾದವನೂ, ಲೋಕೇಶ್ವರನೂ, ಗೋಪಗೋಪಸ್ತ್ರೀಯರಿಂದ ಸುತ್ತುವರಿಯಲ್ಪಟ್ಟವನೂ,

ಪ್ರಗೇ ಪೂಜಯಿತ್ವಾ ತ್ವನುಸ್ಮೃತ್ಯ ಕೃಷ್ಣಂ
ಭುಜಂಗೇಂದ್ರ ವಜ್ರಾದಿಭಿರ್ಭಕ್ತಿನಮ್ರಃ ।
ಸಿತಾಂಭೋಜ ಹೈಯಂಗವೀನೈಶ್ಚ ದಧ್ನಾ
ವಿಮಿಶ್ರೇಣ ದುಗ್ಧೇನ ಸಂಪ್ರೀಣಯೇತ್ತಂ ॥ ೮ ॥
ಇತಿ ಪ್ರಾತರೇವಾರ್ಚಯೇದಚ್ಯುತಂ ಯೋ
ನರಃ ಪ್ರತ್ಯಹಂ ಶಶ್ವದಾಸ್ತಿಕ್ಯಯುಕ್ತಃ ।
ಲಭೇತ್ಸೋಽಚಿರೇಣೈವ ಲಕ್ಷ್ಮೀಂ ಸಮಗ್ರಾ
ಮಿಹ ಪ್ರೇತ್ಯ ಶುದ್ಧಂ ಪರಂಧಾಮ ಭೂಯಾತ್ ॥ ೯ ॥
ಮಂತ್ರಶ್ಚೋಕ್ತಃ ಪುರಾಪುತ್ರ ಆದೌ ಲೋಕಮನೋಹರಃ ।
ಶ್ರೀಮದ್ದಾಮೋದರಾಖ್ಯೋಹಿ ಶೃಣು ತಸ್ಯಾಧಿಕಾರಿಣಃ ॥ ೧೦ ॥
ಅಯೋಗ್ಯಾಯ ನ ದಾತವ್ಯೋ ಮಂತ್ರರಾಜಸ್ತ್ವಯಾ ಸುತ ।
ಯತ್ನೇನ ಗೋಪನೀಯಂ ಚ ರಹಸ್ಯಂ ಶೀಘ್ರಸಿದ್ಧಿದಂ ॥ ೧೧ ॥
ಅಲಸಂ ಮಲಿನಂ ಕ್ಲಿಷ್ಟಂ ದಂಭಮೋಹಸಮನ್ವಿತಂ ।
ದರಿದ್ರಂ ರೋಗಿಣಂ ಕ್ರುದ್ಧಂ ರಾಗಿಣಂ ಭೋಗಲಾಲಸಂ ॥ ೧೨ ॥

---

ಮಹೇಂದ್ರನೇ ಮೊದಲಾದವರಿಂದ ಸಂಪೂಜ್ಯನೂ ದೇವತೆಗಳಿಗೆ ಮಹಾದೇವನೂ ಆಗಿರುವನು. ಇಂತಹ ಪರಮಾತ್ಮನನ್ನು ಪ್ರಾತಃಕಾಲದಲ್ಲಿ ಪೂಜಿಸಿ ಆತನ ಕೃಷ್ಣ ರೂಪವನ್ನು ಸ್ಮರಿಸುತ್ತ ಆದಿಶೇಷ ವಜ್ರಾದಿಗಳಿಂದ ಸೇವಿತನಾದ ಆತನಲ್ಲಿ ನಮ್ರನಾಗಿ ಭಕ್ತಿಯನ್ನುಮಾಡಿ, ಬಿಳಿದಾವರೆ, ಹಿಂದಿನ ದಿನದ ಹಾಲಿನಿಂದ ಕಡೆದ ಬೆಣ್ಣೆ, ಮೊಸರು, ಹಾಲು ಮುಂತಾದ ಅನೇಕ ಪದಾರ್ಥಗಳಿಂದ ಆತನನ್ನು ಸಂತೋಷಗೊಳಿಸಬೇಕು.

೯. ಇಂತು ಯಾವ ಮಾನವನು ನಿರಂತರವಾದ ಅಸ್ತಿಕ್ಯಬುದ್ಧಿಯಿಂದ ಪ್ರತಿದಿವಸವೂ ಅಚ್ಯುತನನ್ನು ಪೂಜೆಮಾಡುವನೊ, ಅವನು ಶೀಘ್ರದಲ್ಲಿಯೇ ಈ ಲೋಕದಲ್ಲಿ ಸಕಲೈಶ್ವರ್ಯಗಳನ್ನೂ ಹೊಂದುವುದಲ್ಲದೆ ದೇಹಾವಸಾನದಲ್ಲಿ ದುಃಖರಹಿತವಾದ ಪರಮಪದವನ್ನು ಪಡೆಯುವನು.

೧೦. ಪುತ್ರನೆ! ಹಿಂದೆಯೇ ನಿನಗೆ 'ಶ್ರೀ ದಾಮೋದರಾಯ ನಮಃ' ಎಂಬ ಲೋಕಮನೋಹರವಾದ ಮಂತ್ರವನ್ನು ತಿಳಿಸಿರುವೆನಲ್ಲವೆ. ಅ ದಿವ್ಯ ಮಂತ್ರಕ್ಕೆ ತಕ್ಕ ಅಧಿಕಾರಿಗಳಾರೆಂಬುದನ್ನು ತಿಳಿಸುವೆನು.

೧೧. ಈ ಮಂತ್ರವು ರಹಸ್ಯವೂ ಕ್ಷಿಪ್ರಫಲಾದಾಯಕವೂ ಆಗಿರುವುದರಿಂದ ಈ ಉತ್ತಮ ಮಂತ್ರವನ್ನು ನೀನು ಅಯೋಗ್ಯನಿಗೆ ಕೊಡಬಾರದು. ಅಂತಹವರ ದೆಸೆಯಿಂದ ಅದನ್ನು ಪ್ರಯಾಸದಿಂದಾದರೂ ರಹಸ್ಯವಾಗಿಟ್ಟಿರಬೇಕು.

೧೨-೧೬. ಆಲಸ್ಯವಂತನು, ಅಂತರ್ಬಾಹ್ಯಶುದ್ಧಿಹೀನನು, ಕಷ್ಟಜೀವಿಯು

ಅಸೂಯಾಮತ್ಸರಗ್ರಸ್ತಂ ಶಠಂ ಪರುಷವಾದಿನಂ ।
ಅನ್ಯಾಯೇನಾರ್ಜಿತಧನಂ ಪರದಾರರತಂ ಸದಾ ॥ ೧೩ ॥
ವಿದುಷಾಂ ವೈರಿಣಂ ನಿತ್ಯಮಜ್ಞಂ ಪಂಡಿತಮಾನಿನಂ ।
ಭ್ರಷ್ಟವ್ರತಂ ಕ್ಲಿಷ್ಟವೃತ್ತಿಂ ಪಿಶುನಂ ದುಷ್ಟಮಾನಸಂ ॥ ೧೪ ॥
ಬಹ್ವಾಶಿನಂ ಕ್ರೂರಚೇಷ್ಟಮಗ್ರಗಣ್ಯಂ ದುರಾತ್ಮನಾಂ ।
ಕೃಪಣಾಂ ಪಾಪಿನಂ ರೌದ್ರಮಾಶ್ರಿತಾನಾಂ ಭಯಂಕರಂ ॥ ೧೫ ॥
ಏವಮಾದಿಗುಣೈರ್ಯುಕ್ತಂ ಶಿಷ್ಯಂ ನೈವ ಪರಿಗ್ರಹೇತ್ ।
ಗೃಹ್ಣೀಯಾದ್ಯದಿ ತದ್ದೋಷಃ ಪ್ರಾಯೋ ಗುರುಮುಪಸ್ಪೃಶೇತ್ ॥ ೧೬ ॥
ಅಮಾತ್ಯದೋಷೋ ರಾಜಾನಂ ಜಾಯಾದೋಷಃ ಪತಿಂ ಯಥಾ ।
ತಥಾ ಶಿಷ್ಯಕೃತೋ ದೋಷೋ ಗುರುಂ ಪ್ರಾಪ್ನೋತ್ಯಸಂಶಯಂ ॥ ೧೭ ॥
ತಸ್ಮಾಚ್ಛಿಷ್ಯಂ ಗುರುರ್ನಿತ್ಯಂ ಪರೀಕ್ಷ್ಯೈವ ಪರಿಗ್ರಹೇತ್ ।
ಕಾಯೇನ ಮನಸಾ ವಾಚಾ ಗುರುಶುಶ್ರೂಷಣೇ ರತಂ ॥ ೧೮ ॥
ಅಸ್ತೇಯವೃತ್ತಿಮಾಸ್ತಿಕ್ಯಯುಕ್ತಂ ಮೋಕ್ಷಕೃತೋದ್ಯಮಂ ।
ಬ್ರಹ್ಮಚರ್ಯಾರತಂ ನಿತ್ಯಂ ದೃಢವ್ರತಮಕಲ್ಮಷಂ ॥ ೧೯ ॥

ಅಹಂಕಾರಮೋಹಸಹಿತನು, ದರಿದ್ರನು, ರೋಗಾವಿಷ್ಟನು, ಕೋಪಸ್ವಭಾವದವನು, ವಿಷಯಾಭಿಲಾಷೆಯುಳ್ಳವನು, ಭೋಗಗಳಲ್ಲಿಯೇ ಆಸಕ್ತನಾದವನು, ಅಸೂಯೆ ಮಾತ್ಸರ್ಯಗಳಿಂದೊಡಗೂಡಿದವನು, ಮೊಂಡುಸ್ವಭಾವದವನು, ಕೂರ್ರಭಾಷಿಯಾದವನು, ಅನ್ಯಾಯದಿಂದ ಧನವನ್ನು ಸಂಪಾದಿಸಿದವನು, ಯಾವಾಗಲೂ ಪರಸ್ತ್ರೀಯರಲ್ಲಿಯೇ ನಿರತನಾಗಿರುವವನು, ವಿದ್ವಾಂಸರನ್ನು ದ್ವೇಷಿಸುವವನು, ಮೂಢನು, ತಾನೇ ಪಂಡಿತನೆಂದು ಹೆಮ್ಮೆಗೊಳ್ಳುವವನು, ವ್ರತನಿಯಮಗಳನ್ನು ತ್ಯಜಿಸಿದವನು, ಕಷ್ಟಜೀವಿಯಾದವನು, ಲೋಭಿಯು, ಕೆಟ್ಟಮನಸ್ಸಿನವನು, ಅಮಿತಾಹಾರಿಯು, ಕ್ರೂರವ್ಯಾಪಾರವುಳ್ಳವನು, ದುಷ್ಟರಿಗೆ ಮುಖಂಡನಾದವನು, ಕೃಪಣನು, ಪಾಪಿಯು, ರೌದ್ರಾಕಾರವನ್ನು ತಾಳಿದವನು, ತನ್ನನ್ನಾಶ್ರಯಿಸುವವರಿಗೆ ಭಯಂಕರನು—ಇಂತಹ ದುರ್ಗುಣಗಳಿಂದ ಕೂಡಿದ ಮನುಷ್ಯನನ್ನು ಶಿಷ್ಯನನ್ನಾಗಿ ಪರಿಗ್ರಹಿಸಬಾರದು. ಹಾಗೆ ಸ್ವೀಕರಿಸಿದಲ್ಲಿ ಆ ದೋಷವು ಗುರುವಿಗೇ ಅಂಟಿಕೊಳ್ಳುವುದು.

೧೭. ಮಂತ್ರಿಯ ದೋಷವು ರಾಜನನ್ನೂ, ಹೆಂಡತಿಯ ದೋಷವು ಗಂಡನನ್ನೂ ಹೇಗೆ ಆಶ್ರಯಿಸುವುದೊ, ಹಾಗೆಯೇ ಶಿಷ್ಯನ ದೋಷಗಳು ಗುರುವನ್ನು ಆಶ್ರಯಿಸುವುದರಲ್ಲಿ ಸಂಶಯವಿಲ್ಲ.

೧೮–೨೧. ಆದುದರಿಂದ ಪುನಃಪುನಃ ಪರೀಕ್ಷೆಮಾಡಿ ಗುರುವು ಶಿಷ್ಯನನ್ನು ಸ್ವೀಕರಿಸಬೇಕು. ಶರೀರ ಮನಸ್ಸು ಮಾತುಗಳಿಂದ ಗುರು ಶುಶ್ರೂಷೆಯಲ್ಲಿ

ಅಭ್ಯಸ್ಯಂತಿ ಪರಂ ಯೋಗಂ ಯುಕ್ತಪ್ರಾಣಾ ಜಿತೇಂದ್ರಿಯಾಃ ।
ನಾನಾವೃಕ್ಷಸಮಾಕೀರ್ಣೇ ನಾನಾವಿಹಗವಾಸಿನಿ ॥ ೮೫ ॥
ಕಮಲೋತ್ಪಲಶೋಭಾಢ್ಯೇ ಸರೋಭಿಃ ಸಮಲಂಕೃತೇ ।
ಅಪ್ಸರೋಗಣಸಂಕೀರ್ಣೇ ಸರ್ವದಾ ಸೇವಿತೇ ಶುಭೇ ॥ ೮೬ ॥
ರೋಚತೇ ಹಿ ಸದಾ ವಾಸಃ ಕ್ಷೇತ್ರೇ ನಿತ್ಯಂ ಹರೇರಿಹ ।
ಮನ್ಯಮಾನಾ ವಿಷ್ಣುಭಕ್ತಾ ವಿಷ್ಣೌ ಸರ್ವೇಽರ್ಪಿತಕ್ರಿಯಾಃ ॥ ೮೭ ॥
ಯಥಾ ಮೋಕ್ಷಮಿಹಾಯಾಂತಿ ನಾನ್ಯತ್ರ ಹಿ ತಥಾ ಕ್ವಚಿತ್ ।
ಅತಃ ಶ್ರೇಷ್ಠತಮಂ ಕ್ಷೇತ್ರಂ ಯಸ್ಮಾಚ್ಚ ವಸತಿರ್ಹರೇಃ ।
ಮಹಾಕ್ಷೇತ್ರಮಿದಂ ಯಸ್ಮಾದಯೋಧ್ಯಾಭಿಧಮುತ್ತಮಂ ॥ ೮೮ ॥
ನೈಮಿಷೇ ಚ ಕುರುಕ್ಷೇತ್ರೇ ಗಂಗಾದ್ವಾರೇ ಚ ಪುಷ್ಕರೇ ।
ಸ್ನಾನಾತ್ಸಂಸೇವನಾದ್ವಾಪಿ ನ ಮೋಕ್ಷಃ ಪ್ರಾಪ್ಯತೇ ತಥಾ ॥ ೮೯ ॥
ಇಹ ಸಂಪ್ರಾಪ್ಯತೇ ಯದ್ವತ್ತತ ಏವ ವಿಶಿಷ್ಯತೇ ।
ಪ್ರಯಾಗೇ ವಾ ಭವೇನ್ಮೋಕ್ಷ ಇಹ ವಾ ಹರಿಸಂಶ್ರಯಾತ್ ।
ಸರ್ವಸ್ಮಾದಪಿ ತೀರ್ಥಾಗ್ರ್ಯಾದಿದಮೇವ ಮಹತ್ ಸ್ಮೃತಂ ॥ ೯೦ ॥

೮೫-೮೮. ಇಲ್ಲಿ ಅವರೆಲ್ಲರೂ ಜಿತೇಂದ್ರಿಯರಾಗಿ ಪ್ರಾಣಾಯಾಮವನ್ನು ಮಾಡುತ್ತ ಶ್ರೇಷ್ಠವಾದ ಯೋಗವನ್ನು ಅಭ್ಯಾಸಮಾಡುತ್ತಿರುತ್ತಾರೆ. ನಾನಾ ಬಗೆಯ ವೃಕ್ಷಗಳಿಂದ ತುಂಬಿ, ಬಗೆಬಗೆಯ ಪಕ್ಷಿಗಳು ವಾಸಮಾಡುತ್ತ, ಕಮಲಕನ್ನೈದಿಲೆಗಳ ಸೌಂದರ್ಯದಿಂದ ತುಂಬಿ ತುಳುಕುವ ಸರೋವರಗಳಿಂದಲಂಕೃತವಾಗಿ, ಅಪ್ಸರೆಯರ ಗಣಗಳಿಂದ ಕಂಗೊಳಿಸುತ್ತ, ಸರ್ವದಾ ಆ ಅಪ್ಸರಾಂಗನೆಯರಿಂದ ಸೇವಿತವಾಗಿ, ಎಲ್ಲ ಕಾಲಗಳಲ್ಲಿಯೂ ಶುಭಕರವಾದ ಈ ಕ್ಷೇತ್ರದಲ್ಲಿ ಶ್ರೀಹರಿಗೆ ವಾಸವೆಂದರೆ ಬಹು ಇಷ್ಟವಾಗಿರುವುದು. ತಾವು ವಿಷ್ಣುಭಕ್ತರೆಂದು ಭಾವಿಸಿ ವಿಷ್ಣುವಿನಲ್ಲಿ ತಮ್ಮ ಕ್ರಿಯೆಗಳೆಲ್ಲವನ್ನೂ ಅರ್ಪಿಸಿದವರೆಲ್ಲರೂ ಇಲ್ಲಿ ಮೋಕ್ಷವನ್ನು ಹೊಂದುವಹಾಗೆ ಬೇರೆಲ್ಲಿಯೂ ಹೊಂದಲಾರರು. ಆದುದರಿಂದ ಈ ಕ್ಷೇತ್ರವು ಶ್ರೇಷ್ಠತಮವೆನಿಸಿರುವುದು. ಅಯೋಧ್ಯೆಯೆಂದು ಹೆಸರುಹೊಂದಿರುವ ಈ ಕ್ಷೇತ್ರವು ಶ್ರೀಹರಿಗೆ ವಸತಿಯಾಗಿರುವುದರಿಂದ ಇದು ಮಹಾಕ್ಷೇತ್ರವೆನಿಸಿರುವುದು.

೮೯. ನೈಮಿಷ, ಕುರುಕ್ಷೇತ್ರ, ಗಂಗಾದ್ವಾರ, ಪುಷ್ಕರ ಮುಂತಾದ ಕ್ಷೇತ್ರಗಳಲ್ಲೆಲ್ಲ ಸ್ನಾನಮಾಡುವುದರಿಂದಲೂ, ತೀರ್ಥಸೇವೆಮಾಡುವುದರಿಂದಲೂ, ಈ ಅಯೋಧ್ಯಾಕ್ಷೇತ್ರದಲ್ಲಿ ದೊರಕುವಂತಹ ಮೋಕ್ಷವು ದೊರೆಯುವುದಿಲ್ಲ.

೯೦. ಇಲ್ಲಿ ಈ ರೀತಿ ಮೋಕ್ಷವು ದೊರಕುವುದರಿಂದಲೇ ಇದು ಎಲ್ಲ ಕ್ಷೇತ್ರಗಳಿಗಿಂತಲೂ ಮೇಲಾಗಿರುವುದು. ಪ್ರಯಾಗವಲ್ಲಾಗಲಿ, ಶ್ರೀಹರಿಯು

ಕೃಪಾಸಿಂಧುಃ ಸುಪೂರ್ಣಾರ್ಥಃ ಸರ್ವಸತ್ತ್ವೋಪಕಾರಕಃ ।
ನಿಃಸ್ಪೃಹಸ್ಸರ್ವತಸ್ಸಿದ್ಧಃ ಸರ್ವವಿದ್ಯಾವಿಶಾರದಃ ॥ ೨೬ ॥
ಸರ್ವಸಂಶಯಸಂಛೇತ್ತಾಽನಲಸೋ ಗುರುರಾದೃತಃ ।
ಬ್ರಾಹ್ಮಣಸ್ಸರ್ವಕಾಲಜ್ಞಃ ಕುರ್ಯಾತ್ಸರ್ವೇಷ್ವನುಗ್ರಹಂ ॥ ೨೭ ॥
ಪೂರ್ವೋಕ್ತಲಕ್ಷಣೈರ್ಯುಕ್ತಃ ಶಿಷ್ಯ ಈದೃಗ್ವಿಧಾದ್ಗುರೋಃ ।
ಗೃಹ್ಣೀಯಾತ್ಪುತ್ರ ತನ್ಮಂತ್ರಂ ಮಾರ್ಗಶೀರ್ಷೇ ಮದಾಯನೇ ॥ ೨೮ ॥
ವೈಷ್ಣವಾನಾಂ ವ್ರತಾನಾಂ ಚ ಕುರ್ಯಾತ್ಸ್ವೀಕರಣಂ ಬುಧಃ ।
ಮತ್ಪ್ರಿಯಂ ಶೃಣುಯಾಚ್ಚಶ್ವಚ್ಛ್ರೀಮದ್ಭಾಗವತಂ ಪರಂ ॥ ೨೯ ॥
ಶ್ರೀಮದ್ಭಾಗವತಂ ನಾಮ ಪುರಾಣಂ ಲೋಕ ವಿಶ್ರುತಂ ।
ಶೃಣುಯಾಚ್ಛ್ರದ್ಧಯಾ ಯುಕ್ತೋ ಮಮ ಸಂತೋಷಕಾರಣಂ ॥೩೦॥
ನಿತ್ಯಂ ಭಾಗವತಂ ಯಸ್ತು ಪುರಾಣಂ ಪಠತೇ ನರಃ ।
ಪ್ರತ್ಯಕ್ಷರಂ ಭವೇತ್ತಸ್ಯ ಕಪಿಲಾದಾನಜಂ ಫಲಂ ॥ ೩೧ ॥

---

ನನ್ನ ಪೂಜೋತ್ಸವಗಳಲ್ಲಿಯೇ ಯಾವಾಗಲೂ ನಿರತನಾದವನು, ಕೃಪಾ ಸಮುದ್ರನು, ಆಪ್ತಮನೋರಥನು, ಸಕಲ ಪ್ರಾಣಿಗಳಿಗೂ ಉಪಕಾರವನ್ನೆಣಿಸು ವವನು, ಆಶಾರಹಿತನು, ಸಿದ್ಧನು, ಸಕಲವಿದ್ಯಾಪಾರಂಗತನು, ಶಿಷ್ಯನ ಸಕಲ ಸಂಶಯಗಳನ್ನೂ ನಿರ್ಮೂಲಗೊಳಿಸಲು ಶಕ್ತನಾದವನು, ಆಲಸ್ಯರಹಿತನು, ಆದರವುಳ್ಳವನು, ಬ್ರಹ್ಮಜ್ಞಾನಿಯು, ತ್ರಿಕಾಲಗಳನ್ನು ತಿಳಿದವನು, ಸಕಲ ರಲ್ಲಿಯೂ ಅನುಗ್ರಹಬುದ್ಧಿಯುಳ್ಳವನು—ಈ ಗುಣಗಳುಳ್ಳವನೇ ಗುರುವೆನಿ ಸುವನು.

೨೮. ಎಲೈ ಪುತ್ರನೆ! ಹಿಂದೆ ಹೇಳಿದ ಸಾಧನಸಂಪತ್ತಿಗಳಿಂದ ಕೂಡಿದ ಶಿಷ್ಯನು ಈ ವಿಧವಾದ ಗುರುವನ್ನು ಸಮೀಪಿಸಿ ಉತ್ತರಾಯಣದ ಮಾರ್ಗಶೀರ್ಷ ಮಾಸದಲ್ಲಿ ಆತನಿಂದ ಮಂತ್ರೋಪದೇಶವನ್ನು ಪಡೆಯಬೇಕು.

೨೯. ವಿದ್ವಾಂಸನಾದವನು ಸಮಸ್ತ ವೈಷ್ಣವ ನಿಯಮಗಳನ್ನು ಸ್ವೀಕರಿಸಿ ನಿತ್ಯವೂ ನನಗೆ ಅತ್ಯಂತ ಪ್ರಿಯವೂ, ಉತ್ತಮೋತ್ತಮವೂ ಆದ ಶ್ರೀಮದ್ಭಾಗ ವತವನ್ನು ಶ್ರವಣಮಾಡಬೇಕು.

೩೦. ಲೋಕವಿಖ್ಯಾತವಾದುದಾಗಿ ನನಗೆ ಸಂತೋಷವನ್ನುಂಟುಮಾಡುವ ಶ್ರೀಮದ್ಭಾಗವತ ಪುರಾಣವನ್ನು ನನ್ನ ಭಕ್ತನು ಶ್ರದ್ಧೆಯಿಂದೊಡಗೂಡಿದವನಾಗಿ ನಿತ್ಯವೂ ಕೇಳಬೇಕು.

೩೧. ಪ್ರತಿದಿವಸವೂ ಭಾಗವತವನ್ನು ಯಾವ ಮನುಷ್ಯನು ಪುರಾಣ ರೂಪವಾಗಿ ಪಠನಮಾಡುವನೊ, ಅವನು ಪಠಿಸಿದ ಒಂದೊಂದು ಅಕ್ಷರಕ್ಕೂ ಕಪಿಲೆಯಾದ ಗೋವನ್ನು ದಾನಮಾಡಿದ ಫಲವು ಲಭಿಸುವುದು.

ಶ್ಲೋಕಾರ್ಧಂ ಶ್ಲೋಕಪಾದಂ ವಾ ನಿತ್ಯಂ ಭಾಗವತೋದ್ಭವಂ ।
ಪಠತೇ ಶೃಣುಯಾದ್ಯಸ್ತು ಗೋಸಹಸ್ರಫಲಂ ಲಭೇತ್ ॥ ೩೨ ॥
ಯಃ ಪಠೇತ್ಪ್ರಯತೋ ನಿತ್ಯಂ ಶ್ಲೋಕಂ ಭಾಗವತಂ ಸುತ ।
ಅಷ್ಟಾದಶಪುರಾಣಾನಾಂ ಫಲಮಾಪ್ನೋತಿ ಮಾನವಃ ॥ ೩೩ ॥
ನಿತ್ಯಂ ಮಮ ಕಥಾ ಯತ್ರ ತತ್ರ ತಿಷ್ಠಂತಿ ವೈಷ್ಣವಾಃ ।
ಕಲಿಬಾಹ್ಯಾ ನರಾಸ್ತೇವೈ ಯೇಽರ್ಚಯಂತಿ ಸದಾ ಮಮ ॥ ೩೪ ॥
ವೈಷ್ಣವಾನಾಂ ತು ಶಾಸ್ತ್ರಾಣಿ ಯೇಽರ್ಚಯಂತಿ ಗೃಹೇ ನರಾಃ ।
ಸರ್ವಪಾಪವಿನಿರ್ಮುಕ್ತಾ ಭವಂತಿ ಸುರವಂದಿತಾಃ ॥ ೩೫ ॥
ಯೇಽರ್ಚಯಂತಿ ಗೃಹೇ ನಿತ್ಯಂ ಶಾಸ್ತ್ರಂ ಭಾಗವತಂ ಕಲೌ ।
ಆಸ್ಫೋಟಯಂತಿ ವಲ್ಗಂತಿ ತೇಷಾಂ ಪ್ರೀತೋ ಭವಾಮ್ಯಹಂ ॥ ೩೬ ॥
ಯಾವದ್ದಿನಾನಿ ಹೇ ಪುತ್ರ ಶಾಸ್ತ್ರಂ ಭಾಗವತಂ ಗೃಹೇ ।
ತಾವತ್ಪಿಬಂತಿ ಪಿತರಃ ಕ್ಷೀರಂ ಸರ್ಪಿರ್ಮಧೂದಕಂ ॥ ೩೭ ॥

---

೩೨. ಒಂದು ಶ್ಲೋಕದ ಅರ್ಧವನ್ನಾಗಲಿ ಪಾದಮಾತ್ರವನ್ನಾಗಲಿ ಭಾಗವತಮಹಾಪುರಾಣದಿಂದ ನಿತ್ಯದಲ್ಲಿಯೂ ಯಾವನು ಓದುವನೊ, ಯಾವನು ಕೇಳುವನೊ, ಅವನಿಗೆ ಸಾವಿರ ಗೋದಾನಗಳ ಫಲವು ಪ್ರಾಪ್ತವಾಗುವುದು.

೩೩-೩೪. ಪುತ್ರನೆ! ಯಾವನು ಪ್ರಯತ್ನಪೂರ್ವಕವಾಗಿ ಪ್ರತಿನಿತ್ಯವೂ ಭಾಗವತದ ಒಂದು ಶ್ಲೋಕವನ್ನಾದರೂ ಪಾರಾಯಣ ಮಾಡುವನೊ, ಆ ಮಾನವನು ಹದಿನೆಂಟು ಪುರಾಣಗಳನ್ನೂ ಪಠನ ಮಾಡಿದ ಫಲವನ್ನು ಹೊಂದುವನು. ನಿತ್ಯವೂ ನನ್ನ ಸತ್ಕಥೆಯೆಲ್ಲಿ ನೆಡೆಯುತ್ತಿರುವುದೊ, ಅಲ್ಲಿಯೇ ವಿಷ್ಣುಭಕ್ತರು ನೆರೆದಿರುವರು. ಯಾರು ನನ್ನನ್ನು ನಿತ್ಯವೂ ಪೂಜೆಮಾಡುವರೊ, ಆ ಮನುಷ್ಯರು ಕಲಿಕಲ್ಮಷಗಳಿಂದ ದೂರರಾಗಿರುವರು.

೩೫. ವಿಷ್ಣು ಪ್ರತಿಪಾದಕಗಳಾದ ಶಾಸ್ತ್ರಗಳು ಯಾವ ಮಾನವರ ಮನೆಗಳಲ್ಲಿ ಪೂಜಿಸಲ್ಪಡುವುವೊ, ಅವರು ಸಕಲ ಪಾತಕಗಳಿಂದಲೂ ಮುಕ್ತರಾಗಿ ದೇವತೆಗಳಿಗೂ ಪೂಜ್ಯರಾಗಿರುವರು.

೩೬. ಯಾರು ನಿತ್ಯವೂ ಕಲಿಯುಗದಲ್ಲಿ ಭಾಗವತ ಗ್ರಂಥವನ್ನು ತಮ್ಮ ಮನೆಗಳಲ್ಲಿ ಪೂಜಿಸುವರೊ, ಯಾರು ಅರ್ಥ ವಿವರಣವನ್ನು ಮಾಡುವರೊ, ಯಾರು ಸ್ತೋತ್ರಮಾಡುವರೊ, ಅವರಲ್ಲಿ ನಾನು ಅತ್ಯಂತ ಪ್ರೀತಿಯುಳ್ಳವನಾಗುವೆನು.

೩೭. ಎಲೈ ಸುತನೆ! ಯಾವ ಮನುಷ್ಯನ ಮನೆಯಲ್ಲಿ ಎಷ್ಟು ದಿನಗಳವರೆಗೂ ಭಾಗವತವೆಂಬ ಶಾಸ್ತ್ರದ ಅಭ್ಯಾಸವು ನಡೆಯುತ್ತಿರುವುದೊ, ಅಲ್ಲಿಯ

ಯಚ್ಛಂತಿ ವೈಷ್ಣವೇ ಭಕ್ತ್ಯಾ ಶಾಸ್ತ್ರಂ ಭಾಗವತಂ ಹಿ ಯೇ ।
ಕಲ್ಪಕೋಟಿ ಸಹಸ್ರಾಣಿ ಮಮ ಲೋಕೇ ವಸಂತಿ ತೇ ॥ ೩೮ ॥
ಯೇಽರ್ಚಯಂತಿ ಸದಾ ಗೇಹೇ ಶಾಸ್ತ್ರಂ ಭಾಗವತಂ ನರಾಃ ।
ಪ್ರೀಣಿತಾಸ್ತೈಶ್ಚ ವಿಬುಧಾ ಯಾವದಾಽಽಭೂತಸಂಪ್ಲವಂ ॥ ೩೯ ॥
ಶ್ಲೋಕಾರ್ಧಂ ಶ್ಲೋಕಪಾದಂ ವಾ ವರಂ ಭಾಗವತಂ ಗೃಹೇ ।
ಶತಶೋಽಥ ಸಹಸ್ರೈಶ್ಚ ಕಿಮನ್ಯೈಃ ಶಾಸ್ತ್ರಸಂಗ್ರಹೈಃ ॥ ೪೦ ॥
ನ ಯಸ್ಯ ತಿಷ್ಠತೇ ಶಾಸ್ತ್ರಂ ಗೃಹೇ ಭಾಗವತಂ ಕಲೌ ।
ನ ತಸ್ಯ ಪುನರಾವೃತ್ತಿರ್ಯಾಮ್ಯಪಾಶಾತ್ಕದಾಚನ ॥ ೪೧ ॥
ಕಥಂ ಸ ವೈಷ್ಣವೋ ಜ್ಞೇಯಃ ಶಾಸ್ತ್ರಂ ಭಾಗವತಂ ಕಲೌ ।
ಗೃಹೇ ನ ತಿಷ್ಠತೇ ಯಸ್ಯ ಶ್ವಪಚಾದಧಿಕೋಹಿ ಸಃ ॥ ೪೨ ॥
ಸರ್ವಸ್ವೇನಾಪಿ ಲೋಕೇಶ ಕರ್ತವ್ಯಃ ಶಾಸ್ತ್ರಸಂಗ್ರಹಃ ।
ವೈಷ್ಣವಸ್ತು ಸದಾ ಭಕ್ತ್ಯಾ ತುಷ್ಟ್ಯರ್ಥಂ ಮಮ ಪುತ್ರಕ ॥ ೪೩ ॥

ವರೆಗೂ ಯಜಮಾನನ ಪಿತೃದೇವತೆಗಳು ಸಾಸುವೆ ಜೇನುತುಪ್ಪಗಳಿಂದ ಕೂಡಿದ ಕ್ಷೀರವನ್ನು ಪಾನಮಾಡುತ್ತಿರುವರು.

೩೮. ವಿಷ್ಣುಭಕ್ತನಾದವನಿಗೆ ಯಾರು ಭಕ್ತಿಪೂರ್ವಕವಾಗಿ ಶ್ರೀಮದ್ಭಾಗವತ ಗ್ರಂಥವನ್ನು ದಾನಮಾಡುವರೋ, ಅವರು ಸಹಸ್ರಕೋಟಿ ಕಲ್ಪಗಳ ವರೆಗೂ ನನ್ನ ಲೋಕದಲ್ಲಿ ವಾಸಮಾಡುವರು.

೩೯–೪೦. ಯಾರು ನಿತ್ಯವೂ ತಮ್ಮ ಮನೆಗಳಲ್ಲಿ ಭಾಗವತ ಶಾಸ್ತ್ರವನ್ನು ಪೂಜೆ ಮಾಡುವರೋ, ಅವರು ಮಹಾ ಪ್ರಳಯಪರ್ಯಂತವೂ ದೇವತೆಗಳನ್ನು ತೃಪ್ತಿಪಡಿಸಿದವರಾಗುವರು. ಮನೆಯಲ್ಲಿ ಉತ್ತಮವಾದ ಭಾಗವತದ ಅರ್ಧ ಶ್ಲೋಕವನ್ನಾಗಲಿ ಶ್ಲೋಕಪಾದವನ್ನಾಗಲಿ ಪಠನಮಾಡಿದರೆ ಸಾಕು. ಇತರ ನೂರಾರು ಸಾವಿರಾರು ಶಾಸ್ತ್ರಗಳಿಂದ ಲಭಿಸುವುದೇನು?

೪೧. ಈ ಕಲಿಯುಗದಲ್ಲಿ ಯಾವನ ಮನೆಯಲ್ಲಿ ಪವಿತ್ರವಾದ ಭಾಗವತ ಗ್ರಂಥವಿರುವುದಿಲ್ಲವೋ, ಅವನಿಗೆ ಯಮನ ಪಾಶಗಳಿಂದ ಎಂದೆಂದಿಗೂ ಬಿಡುಗಡೆ ಯೆಂಬುದುಂಟಾಗಲಾರದು.

೪೨. ಯಾವನ ಮನೆಯಲ್ಲಿ ಶ್ರೀಮದ್ಭಾಗವತಗ್ರಂಥವು ದೊರಕುವ್ರದಿಲ್ಲವೋ, ಕಲಿಯುಗದಲ್ಲಿ ಅವನನ್ನು ವೈಷ್ಣವನೆಂದು ಹೇಗೆತಾನೆ ತಿಳಿಯಲು ಸಾಧ್ಯವಾಗುವುದು. ಆ ಮಾನವನು ಚಂಡಾಲನಿಗಿಂತಲೂ ನೀಚನಾದವನೇ ಸರಿ.

೪೩. ಪುತ್ರನೆ! ನನಗೆ ಸಂತೋಷವನ್ನುಂಟುಮಾಡುವುದಕ್ಕಾಗಿ ವೈಷ್ಣವರು ಭಕ್ತಿಯಿಂದ ತಮ್ಮ ಸರ್ವಸ್ವವನ್ನಾದರೂ ಕೊಟ್ಟು ಶಾಸ್ತ್ರಗ್ರಂಥಗಳನ್ನು ಸಂಪಾದಿಸಬೇಕು.

ಯತ್ರ ಯತ್ರ ಭವೇತ್ಪುಣ್ಯಂ ಶಾಸ್ತ್ರಂಭಾಗವತಂ ಕಲೌ ।
ತತ್ರ ತತ್ರ ಸದೈವಾऽಹಂ ಭವಾಮಿ ತ್ರಿದಶೈಃ ಸಹ ॥ ೪೪ ॥
ತತ್ರ ಸರ್ವಾಣಿ ತೀರ್ಥಾನಿ ನದೀನದಸರಾಂಸಿಚ ।
ಯಜ್ಞಾಃ ಸಪ್ತಪುರೀ ನಿತ್ಯಂ ಪುಣ್ಯಾಃ ಸರ್ವೇ ಶಿಲೋಚ್ಚಯಾಃ ॥ ೪೫ ॥
ಶ್ರೋತವ್ಯಂ ಮಮ ಶಾಸ್ತ್ರಂ ಹಿ ಯಶೋಧರ್ಮಜಯಾರ್ಥಿನಾ ।
ಪಾಪಕ್ಷಯಾರ್ಥಂ ಲೋಕೇಶ ಮೋಕ್ಷಾರ್ಥಂ ಧರ್ಮಬುದ್ಧಿನಾ ॥ ೪೬ ॥
ಶ್ರೀಮದ್ಭಾಗವತಂ ಪುಣ್ಯಮಾಯುರಾರೋಗ್ಯಪುಷ್ಟಿದಂ ।
ಪಠನಾಚ್ಛ್ರವಣಾದ್ವಾಪಿ ಸರ್ವಪಾಪೈಃ ಪ್ರಮುಚ್ಯತೇ ॥ ೪೭ ॥
ನ ಶೃಣ್ವಂತಿ ನ ಹೃಷ್ಯಂತಿ ಶ್ರೀಮದ್ಭಾಗವತಂ ಪರಂ ।
ಸತ್ಯಂ ಸತ್ಯಂ ಹಿ ಲೋಕೇಶ ತೇಷಾಂ ಸ್ವಾಮೀ ಸದಾ ಯಮಃ ॥ ೪೮ ॥
ನ ಯಚ್ಛತಿ ಯದಾ ಮರ್ತ್ಯಃ ಶ್ರೋತುಂ ಭಾಗವತಂ ಸುತ ।
ಏಕಾದಶ್ಯಾಂ ವಿಶೇಷೇಣ ನಾಸ್ತಿ ಪಾಪರತಸ್ತತಃ ॥ ೪೯ ॥

---

೪೪. ಎಲ್ಲಿ ಎಲ್ಲಿ ಪವಿತ್ರವಾದ ಭಾಗವತಶಾಸ್ತ್ರವು ಕಲಿಯುಗದಲ್ಲಿ ನೆಲಸಿರುವುದೊ, ಅಲ್ಲಿಯೇ ನಾನು ಮುವತ್ತುಮೂರುಕೋಟಿ ದೇವತೆಗಳೊಡನೆ ವಾಸಮಾಡುತ್ತಿರುವೆನು.

೪೫. ಅಲ್ಲಿಯೇ ಸಕಲ ತೀರ್ಥಗಳೂ, ನದಿಗಳೂ, ನದಗಳೂ, ಸರೋವರಗಳೂ, ಅಯೋಧ್ಯಾದಿ ಸಪ್ತಪುರಿಗಳೂ, ಪುಣ್ಯತಮಗಳಾದ ಸಮಸ್ತ ಪರ್ವತಗಳೂ ಸನ್ನಿಹಿತವಾಗಿರುವುವು.

೪೬. ಧರ್ಮದಲ್ಲಿ ಆಸಕ್ತಿಯುಳ್ಳವನು ಕೀರ್ತಿಧರ್ಮಗಳ ಲಾಭಕ್ಕಾಗಿಯೂ ಪಾಪನಿವಾರಣೆಗಾಗಿಯೂ, ಮೋಕ್ಷಕ್ಕಾಗಿಯೂ ನನ್ನ ಶಾಸ್ತ್ರವನ್ನು ಕೇಳುತ್ತಿರಬೇಕು.

೪೭. ಶ್ರೀಮದ್ಭಾಗವತವೆಂಬ ಗ್ರಂಥವು ಮನುಷ್ಯನಿಗೆ ಪುಣ್ಯವನ್ನೂ, ಆಯುಸ್ಸಿನ ಅಭಿವೃದ್ಧಿಯನ್ನೂ, ದೇಹಾರೋಗ್ಯವನ್ನೂ, ಸೌಭಾಗ್ಯಗಳನ್ನೂ ಒದಗಿಸಿಕೊಡುವುದು. ಅದನ್ನು ಪಠನಮಾಡುವುದರಿಂದಲೂ, ಕೇಳುವುದರಿಂದಲೂ ಸಕಲ ಪಾಪಗಳೂ ನಾಶವನ್ನು ಹೊಂದುವುವು.

೪೮. ಅತ್ಯುತ್ತಮವಾದ ಶ್ರೀಭಾಗವತಮಹಾಪುರಾಣವನ್ನು ಯಾರು ಕೇಳುವುದಿಲ್ಲವೊ, ಮತ್ತು ಕೇಳಿ ಸಂತೋಷಡುವುದಿಲ್ಲವೊ, ಅವರಿಗೆ ಯಮಧರ್ಮರಾಯನೇ ಸ್ವಾಮಿಯೆಂಬುದು ಸತ್ಯವು.

೪೯. ಎಲೈ ಬ್ರಹ್ಮನೆ! ಯಾವನು ಭಾಗವತದ ಅನುವಾದವು ನಡೆಯುತ್ತಿರುವಲ್ಲಿಗೆ ಹೋಗುವುದಿಲ್ಲವೊ, ವಿಶೇಷವಾಗಿ ಏಕಾದಶಿಯಲ್ಲಿ ಪುರಾಣಶ್ರವಣವನ್ನು ಮಾಡುವುದಿಲ್ಲವೊ, ಅವನಿಗಿಂತಲೂ ಪಾಪಿಷ್ಠನಾದ ಮನುಷ್ಯನು ಮತ್ತೊಬ್ಬನಿಲ್ಲ.

ಶ್ಲೋಕಂ ಭಾಗವತಂ ಚಾಪಿ ಶ್ಲೋಕಾರ್ಧಂ ಪಾದಮೇವ ಚ ।
ಲಿಖಿತಂ ತಿಷ್ಠತೇ ಯಸ್ಯ ಗೃಹೇ ತಸ್ಯ ವಸಾಮ್ಯಹಂ ॥ ೫೦ ॥
ಸರ್ವಾಶ್ರಮಾಭಿಗಮನಂ ಸರ್ವತೀರ್ಥಾವಗಾಹನಂ ।
ನ ತಥಾ ಪಾವನಂ ನೄಣಾಂ ಶ್ರೀಮದ್ಭಾಗವತಂ ಯಥಾ ॥ ೫೧ ॥
ಯತ್ರ ಯತ್ರ ಚತುರ್ವಕ್ತ್ರ ಶ್ರೀಮದ್ಭಾಗವತಂ ಭವೇತ್ ।
ಗಚ್ಛಾಮಿ ತತ್ರ ತತ್ರಾಹಂ ಗೌರ್ಯಥಾ ಸುತವತ್ಸಲಾ ॥ ೫೨ ॥
ಮತ್ಕಥಾವಾಚಕಂ ನಿತ್ಯಂ ಮತ್ಕಥಾಶ್ರವಣೇರತಂ ।
ಮತ್ಕಥಾಪ್ರೀತಮನಸಂ ನಾಽಹಂ ತ್ಯಕ್ಷ್ಯಾಮಿ ತಂ ನರಂ ॥ ೫೩ ॥
ಶ್ರೀಮದ್ಭಾಗವತಂ ಪುಣ್ಯಂ ದೃಷ್ಟ್ವಾ ನೋತ್ತಿಷ್ಠತೇ ಹಿ ಯಃ ।
ಸಾಂವತ್ಸರಂ ತಸ್ಯ ಪುಣ್ಯಂ ವಿಲಯಂ ಯಾತಿ ಪುತ್ರಕ ॥ ೫೪ ॥
ಶ್ರೀಮದ್ಭಾಗವತಂ ದೃಷ್ಟ್ವಾ ಪ್ರತ್ಯುತ್ಥಾನಾಭಿವಾದನೈಃ ।
ಸಂಮಾನಯೇತ ತಂ ದೃಷ್ಟ್ವಾ ಭವೇತ್ಪ್ರೀತಿರ್ಮಮಾತುಲಾ ॥ ೫೫ ॥
ದೃಷ್ಟ್ವಾ ಭಾಗವತಂ ದೂರಾತ್ ಪ್ರಕ್ರಮೇತ್ಸಂಮುಖಂ ಹಿ ಯಃ ।
ಪದೇಪದೇಽಶ್ವಮೇಧಸ್ಯ ಫಲಂ ಪ್ರಾಪ್ನೋತ್ಯಸಂಶಯಂ ॥ ೫೬ ॥

---

೫೦. ಭಾಗವತದ ಪೂರ್ಣ ಗ್ರಂಥವಾಗಲಿ, ಒಂದು ಶ್ಲೋಕವಾಗಲಿ, ಅರ್ಧಶ್ಲೋಕವಾಗಲಿ, ಪಾದವಾದರೂ ಆಗಲಿ, ಬರೆಯಲ್ಪಟ್ಟಿರುವ ಮನೆಯಲ್ಲಿ ನಾನೇ ವಾಸಮಾಡಿಕೊಂಡಿರುವೆನು.

೫೧. ಸಕಲ ಆಶ್ರಮ ಧರ್ಮಗಳ ಅನುಸರಣೆಯೂ, ಸಮಸ್ತ ತೀರ್ಥಗಳ ಸೇವೆಯೂ ಮನುಷ್ಯರಿಗೆ ಶ್ರೀಭಾಗವತದಂತೆ ಪವಿತ್ರಗೊಳಿಸಲಾರವು.

೫೨. ಎಲೈ ಚತುರಾನನನೆ! ಎಲ್ಲಿ ಎಲ್ಲಿ ಶ್ರೀಮದ್ಭಾಗವತ ಪುರಾಣದ ಅನುವಾದವು ನಡೆಯುತ್ತಿರುವುದೊ, ಅಲ್ಲಿಗೆ ನಾನು ಕರುವಿನ ವಾತ್ಸಲ್ಯದಿಂದ ಹಿಂಬಾಲಿಸುವ ಆಕಳಿನಂತೆ ಬಂದು ಸೇರುವೆನು.

೫೩. ನನ್ನ ಕಥೆಗಳನ್ನು ಓದುವವನನ್ನೂ, ನನ್ನ ಚರಿತ್ರೆಯ ಶ್ರವಣದಲ್ಲಿಯೇ ನಿರತನಾಗಿರುವವನನ್ನೂ, ನನ್ನ ಲೀಲೆಗಳಿಂದ ಆನಂದಗೊಳ್ಳುವ ಮನಸ್ಸುಳ್ಳವನನ್ನೂ ನಾನು ಎಂದಿಗೂ ಕೈಬಿಡುವುದಿಲ್ಲ.

೫೪. ಪುತ್ರನೆ! ಪವಿತ್ರವಾದ ಶ್ರೀಭಾಗವತ ಗ್ರಂಥವನ್ನು ಕಂಡು ಯಾವನು ಎದ್ದು ನಿಂತು ಮರ್ಯಾದೆ ಮಾಡುವುದಿಲ್ಲವೊ, ಅವನು ಒಂದು ವರ್ಷದಲ್ಲಿ ಮಾಡಿದ ಕಾರ್ಯಗಳ ಪುಣ್ಯವೆಲ್ಲವೂ ನಾಶವಾಗುವುದು.

೫೫. ಆದುದರಿಂದ ಪ್ರತಿ ಮನುಷ್ಯನೂ ಶ್ರೀಭಾಗವತವನ್ನು ಕಂಡೊಡನೆ ಎದ್ದು ನಿಂತು ಅದಕ್ಕೆ ನಮಸ್ಕಾರ ಮಾಡಿ ಮರ್ಯಾದೆಯನ್ನು ಮಾಡಬೇಕು. ಅವನಲ್ಲಿ ನನಗೆ ಅಧಿಕವಾದ ಪ್ರೀತಿಯುಂಟಾಗುವುದು.

೫೬. ಭಾಗವತವನ್ನು ಕಂಡು ಅಭಿಲಾಷೆಯಿಂದ ಯಾವನು ಹತ್ತಿರಕ್ಕೆ

ಉತ್ಥಾಯ ಪ್ರಣಮೇದ್ಯೋ ವೈ ಶ್ರೀಮದ್ಭಾಗವತಂ ನರಃ ।
ಧನಂ ಪುತ್ರಾಂಸ್ತಥಾ ದಾರಾನ್ ಭಕ್ತಿಂ ಚ ಪ್ರದದಾಮ್ಯಹಂ ॥ ೫೭ ॥
ಮಹಾರಾಜೋಪಚಾರೈಸ್ತು ಶ್ರೀಮದ್ಭಾಗವತಂ ಸುತ ।
ಶೃಣ್ವಂತಿ ಯೇ ನರಾ ಭಕ್ತ್ಯಾ ತೇಷಾಂ ವಶ್ಯೋ ಭವಾಮ್ಯಹಂ ॥ ೫೮ ॥
ಮಮೋತ್ಸವೇಷು ಸರ್ವೇಷು ಶ್ರೀಮದ್ಭಾಗವತಂ ಪರಂ ।
ಶೃಣ್ವಂತಿ ಯೇ ನರಾ ಭಕ್ತ್ಯಾ ಮಮ ಪ್ರೀತ್ಯೈಚ ಸುವ್ರತ ॥ ೫೯ ॥
ವಸ್ತ್ರಾಲಂಕರಣೈಃ ಪುಷ್ಪೈಃ ಧೂಪದೀಪೋಪಹಾರಕೈಃ ।
ವಶೀಕೃತೋ ಹ್ಯಹಂ ತೈಶ್ಚ ಸತ್‌ಸ್ತ್ರಿಯಾ ಸತ್ಪತಿರ್ಯಥಾ ॥ ೬೦ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ದ್ವಿತೀಯೇ ವೈಷ್ಣವಖಂಡೇ ಮಾರ್ಗಶೀರ್ಷಮಾಹಾತ್ಮ್ಯೇ ಬ್ರಹ್ಮವಿಷ್ಣುಸಂವಾದೇ "ಭಾಗವತಶ್ರೈಷ್ಠ್ಯ ವರ್ಣನಂ" ನಾಮ ಷೋಡಶೋಽಧ್ಯಾಯಃ

---

ಓಡಿಬರುವನೊ, ಅವನಿಗೆ ಅಡಿಗಡಿಗೂ ಅಶ್ವಮೇಧದ ಫಲವು ಲಭಿಸುವುದರಲ್ಲಿ ಸಂದೇಹವಿಲ್ಲ.

೫೭. ಯಾವ ಮನುಷ್ಯನು ಎದ್ದು ಭಾಗವತ ಗ್ರಂಥಕ್ಕೆ ನಮಸ್ಕಾರವನ್ನು ಮಾಡುವನೊ, ಅವನಿಗೆ ನಾನು ಧನವನ್ನೂ, ಮಕ್ಕಳನ್ನೂ, ಹೆಂಡಂದಿರನ್ನೂ, ಭಕ್ತಿಭಾಗ್ಯವನ್ನೂ ಕೊಡುತ್ತೇನೆ.

೫೮. ಪ್ರಿಯನೆ! ವಿಶೇಷಗಳಾದ ರಾಜೋಪಚಾರಗಳಿಂದ ಭಾಗವತ ಪುರಾಣವನ್ನು ಯಾವ ಮಾನವನು ಭಕ್ತಿಯಿಂದ ಕೇಳುವರೊ, ಅವರಿಗೆ ನಾನು ವಶವರ್ತಿಯಾಗಿರುವೆನು.

೫೯–೬೦. ಎಲೈ ಪುತ್ರನೆ! ನನ್ನ ಸಂಬಂಧವಾದ ಉತ್ಸವಗಳಲ್ಲಿ ವಸ್ತ್ರಗಳು, ಆಭರಣಗಳು, ಪುಷ್ಪಗಳು, ಧೂಪ, ದೀಪ, ನೈವೇದ್ಯಾದಿಗಳಿಂದ ಭಾಗವತ ಗ್ರಂಥವನ್ನು ಪೂಜೆಮಾಡಿ ನನ್ನ ಪ್ರೀತಿಗಾಗಿ ಯಾವ ಮನುಷ್ಯರು ಭಕ್ತಿಯಿಂದ ಪುರಾಣಶ್ರವಣವನ್ನು ಮಾಡುವರೊ, ಅವರಿಗೆ ನಾನು ಪತಿವ್ರತೆಯಾದ ಸ್ತ್ರೀಯಳ ವಶದಲ್ಲಿರುವ ಸತ್ಪುರುಷನಂತೆ ವಶೀಕೃತನಾಗಿರುವೆನು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀ ಸ್ಕಾಂದಮಹಾಪುರಾಣದ ಎರಡನೆಯ ವೈಷ್ಣವಖಂಡದ ಮಾರ್ಗಶೀರ್ಷಮಾಹಾತ್ಮ್ಯದ ಬ್ರಹ್ಮವಿಷ್ಣುಸಂವಾದದಲ್ಲಿ "ಭಾಗವತಶ್ರೈಷ್ಠ್ಯ ವರ್ಣನ"ವೆಂಬ ಹದಿನಾರನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥ ಸಪ್ತದಶೋಽಧ್ಯಾಯಃ

### ಮಥುರಾಮಾಹಾತ್ಮ್ಯವರ್ಣನಂ

ಬ್ರಹ್ಮೋವಾಚ :—

ಕಸ್ಮಿನ್ ಕ್ಷೇತ್ರೇ ಹಿ ದೇವೇಶ ಮಾರ್ಗಶೀರ್ಷೋಽಧಿಕಸ್ಮೃತಃ ।
ಕಿಂ ಫಲಂ ಚ ಭವೇತ್ತಸ್ಮಿನ್ನೇತತ್ಸರ್ವಂ ವದ ಪ್ರಭೋ ॥ ೧ ॥

ಶ್ರೀ ಭಗವಾನುವಾಚ :—

ಮಧುರೇತಿ ಸುವಿಖ್ಯಾತಂ ಅಸ್ತಿ ಕ್ಷೇತ್ರಂ ಪರಂ ಮಮ ।
ಸುರಮ್ಯಾ ಚ ಪ್ರಶಸ್ತಾ ಚ ಜನ್ಮಭೂಮಿಃ ಪ್ರಿಯಾ ಮಮ ॥ ೨ ॥
ಪದೇ ಪದೇ ತೀರ್ಥಫಲಂ ಮಧುರಾಯಾಂ ಚತುರ್ಮುಖ ।
ಯತ್ರಯತ್ರ ನರಸ್ನಾತೋ ಮುಚ್ಯತೇ ಘೋರಕಿಲ್ಬಿಷಾತ್ ॥ ೩ ॥
ಸರ್ವಧರ್ಮವಿಹೀನಾನಾಂ ಪುರುಷಾಣಾಂ ದುರಾತ್ಮನಾಂ ।
ನರಕಾರ್ತಿಹರಾ ಪುತ್ರ ಮಧುರಾ ಪಾಪನಾಶಿನೀ ॥ ೪ ॥

---

## ಕನ್ನಡದ ಅನುವಾದ

### ಮಥುರಾಮಾಹಾತ್ಮ್ಯವರ್ಣನ

೧. ಬ್ರಹ್ಮದೇವನು ಕೇಳುತ್ತಾನೆ:—ಎಲೈ ದೇವೋತ್ತಮನೆ! ಯಾವ ಕ್ಷೇತ್ರದಲ್ಲಿ ಮಾರ್ಗಶೀರ್ಷ ವ್ರತವನ್ನು ಮಾಡಲು ಅಧಿಕಫಲದಾಯಕವಾಗಿರುವುದು? ಮತ್ತು ಅದರಿಂದ ಮನುಷ್ಯನಿಗೆ ಲಾಭವೇನಾಗುವುದೆಂಬುದನ್ನೆಲ್ಲ ನನಗೆ ಹೇಳುವವನಾಗು.

೨. ಭಗವಂತನು ಹೇಳುತ್ತಾನೆ:—ನನಗೆ ಪರಮಪ್ರಿಯವಾದ ಮಧುರಾ ನಗರಿಯೆಂಬ ಪುಣ್ಯಕ್ಷೇತ್ರವೊಂದಿರುವುದು. ಆ ಪ್ರದೇಶವು ಮನೋಹರವೂ ಪ್ರಶಸ್ತವೂ ಆಗಿರುವುದು. ಅದು ನನಗೆ ಜನ್ಮಸ್ಥಾನವೂ ಆಗಿರುವುದು.

೩. ಚತುರ್ಮುಖನೆ! ಮಧುರಾನಗರಿಯಲ್ಲಿ ಹೆಜ್ಜೆಹೆಜ್ಜೆಗೂ ತೀರ್ಥಫಲವುಂಟು. ಅಲ್ಲಿಯ ಯಾವ ಯಾವ ತೀರ್ಥಗಳಲ್ಲಿ ಮನುಷ್ಯನು ಸ್ನಾನಮಾಡಿದರೂ, ಘೋರಪಾತಕಗಳಿಂದ ಬಿಡುಗಡೆಯನ್ನು ಹೊಂದುವನು.

೪. ಪುತ್ರನೆ! ಸಕಲ ವರ್ಣಾಶ್ರಮಧರ್ಮಹೀನರೂ, ದುರಾತ್ಮರೂ ಆದ ಮನುಷ್ಯರಿಗೂ ಕೂಡ ಪಾಪನಾಶಕವಾದ ಮಧುರಾನಗರಿಯು ನರಕಗಳ ಭಯವನ್ನು ತಪ್ಪಿಸುವುದು.

ಕೃತಘ್ನಶ್ಚ ಸುರಾಪಶ್ಚ ಚೋರೋ ಭಗ್ನವ್ರತಸ್ತಥಾ ।
ಮಥುರಾಂ ಪ್ರಾಪ್ಯ ಮನುಜೋ ಮುಚ್ಯತೇ ಘೋರಪಾತಕಾತ್ ॥ ೫ ॥
ಸೂರ್ಯೋದಯೇ ತಮೋನಶ್ಯೇತ್ ಯಥಾ ವಜ್ರಭಯಾನ್ನಗಾಃ ।
ತಾರ್ಕ್ಷ್ಯಂ ದೃಷ್ಟ್ವಾ ಯಥಾಸರ್ಪಾ ಮೇಘಾ ವಾತಹತಾಯಥಾ ॥ ೬ ॥
ತತ್ವಜ್ಞಾನಾದ್ಯಥಾ ದುಃಖಂ ಹರಿಂ ದೃಷ್ಟ್ವಾ ಯಥಾ ಗಜಾಃ ।
ತಥಾ ಪಾಪಾನಿ ನಶ್ಯಂತಿ ಮಥುರಾದರ್ಶನಾತ್ಸುತ ॥ ೭ ॥
ಶ್ರದ್ಧಯಾ ಭಕ್ತಿಯುಕ್ತಸ್ತು ದೃಷ್ಟ್ವಾ ಮಧುಪುರೀಂ ನರಃ ।
ಬ್ರಹ್ಮಹಾಪಿ ವಿಶುಧ್ಯೇತ ಕಿಂ ಪುನಸ್ತ್ವನ್ಯಪಾತಕೀ ॥ ೮ ॥
ಮಥುರಾಂ ಸ್ನಾತುಕಾಮಸ್ಯ ಗಚ್ಛತಸ್ತು ಪದೇ ಪದೇ ।
ನಿರಾಶಾನಿ ವ್ರಜಂತ್ಯೇವ ಪಾಪಾನಿ ಚ ಶರೀರತಃ ॥ ೯ ॥
ಅನುಷಂಗೇಣ ಗಚ್ಛಂತಿ ವಾಣಿಜ್ಯೇನಾಪಿ ಸೇವಯಾ ।
ಮಥುರಾಸ್ನಾನಮಾತ್ರೇಣ ದಿವಂ ಯಾಂತಿ ಗತಾಂಹಸಃ ॥ ೧೦ ॥

---

೫. ಕೃತಘ್ನನಾಗಲಿ, ಸುರಾಪಾನಮಾಡಿದವನಾಗಲಿ, ಚೋರನಾಗಲಿ, ವ್ರತನಿಯಮಗಳಲ್ಲಿ ಭಂಗವನ್ನು ಹೊಂದಿದವನಾಗಲಿ, ಮಥುರೆಯನ್ನು ಸೇರಿದ ಮನುಜನು ಸಕಲ ಪಾತಕಗಳಿಂದಲೂ ಬಿಡುಗಡೆಯನ್ನು ಹೊಂದುವನು.

೬–೮. ಸೂರ್ಯೋದಯವಾದ ಕೂಡಲೆ ಕತ್ತಲೆಯೂ, ಮಹೇಂದ್ರನ ವಜ್ರಾಯುಧವೆದುರಿನಲ್ಲಿ ಪರ್ವತಗಳೂ, ಗರುಡನ ಸಮ್ಮುಖದಲ್ಲಿ ಸರ್ಪಗಳೂ, ಬಿರುಗಾಳಿಗೆ ಸಿಕ್ಕಿದ ಮೇಘಗಳೂ, ತತ್ತ್ವಜ್ಞಾನದಿಂದ ಸಂಸಾರ ದುಃಖವೂ, ಸಿಂಹದ ಎದುರಿನಲ್ಲಿ ಆನೆಗಳೂ, ಹೇಗೆ ಓಡಿಹೋಗುವುವೊ, ಹಾಗೆಯೇ ಮಥುರಾ ಕ್ಷೇತ್ರದ ದರ್ಶನಮಾತ್ರದಿಂದಲೇ ಮನುಷ್ಯನ ಸಕಲ ಪಾಪಗಳೂ ನಾಶ ವಾಗುವುವು. ಶ್ರದ್ಧಾಭಕ್ತಿಗಳಿಂದ ಕೂಡಿ ಮಥುರಾಕ್ಷೇತ್ರದ ದರ್ಶನವನ್ನು ಮಾಡುವವನು ಬ್ರಹ್ಮಹತ್ಯೆಯೆಂಬ ಮಹಾ ಪಾತಕದಿಂದಲೂ ಮೋಕ್ಷವನ್ನು ಪಡೆಯುವನೆಂದಮೇಲೆ ಮಿಕ್ಕ ಪಾತಕಗಳನ್ನು ಮಾಡಿದವರ ವಿಷಯವನ್ನು ಹೇಳಲೇಕೆ?

೯. ಮಥುರಾಕ್ಷೇತ್ರದಲ್ಲಿ ತೀರ್ಥಸ್ನಾನವನ್ನು ಮಾಡುವುದಕ್ಕಾಗಿ ನಡೆದು ಹೋಗುತ್ತಿರುವ ಮನುಷ್ಯನ ಹೆಜ್ಜೆಹೆಜ್ಜೆಗೂ ಅವನು ಮಾಡಿದ ಪಾಪಗಳೆಲ್ಲವೂ ನಿರಾಶೆಯಿಂದ ಬಿಟ್ಟುಹೋಗುವುವು.

೧೦. ಭಕ್ತಿಯುಕ್ತರಾಗಿಯಾಗಲಿ, ವ್ಯಾಪಾರಕ್ಕಾಗಿಯಾಗಲಿ, ಸೇವೆ ಮಾಡುವುದಕ್ಕಾಗಲಿ ಹೋಗಿ ಮಥುರೆಯಲ್ಲಿ ತೀರ್ಥಸ್ನಾನ ಮಾಡಿದ ಮಾತ್ರ ದಿಂದಲೇ ಮನುಜರು ಪಾಪಗಳನ್ನು ಕಳೆದುಕೊಂಡು ಸ್ವರ್ಗಲೋಕವನ್ನು ಹೊಂದುವರು.

ನಾಮಾಪಿ ಗೃಹ್ಣತಾಮಸ್ಯಾಃ ಸದಾಮುಕ್ತಿರ್ನಸಂಶಯಃ ।
ಸದಾ ಕೃತಯುಗಂ ತತ್ರ ಸದಾಚೈವೋತ್ತರಾಯಣಂ ॥ ೧೧ ॥
ಯಃ ಶೃಣೋತಿ ಚತುರ್ವಕ್ತ್ರ ಮಾಥುರಂ ಮಮ ಮಂದಿರಂ ।
ಅನ್ಯೇನೋಚ್ಚಾರಿತೇ ಸದ್ಯಃ ಸೋಽಪಿ ಪಾಪಾತ್ಪ್ರಮುಚ್ಯತೇ ॥ ೧೨ ॥
ತ್ರಿರಾತ್ರಮಪಿ ಯೇ ತತ್ರ ವಸಂತಿ ಮನುಜಾ ಸುತ ।
ತೇಷಾಂ ಪುನಂತಿ ಸಂದೃಷ್ಟಾಃ ಸ್ಪೃಷ್ಟಾಶ್ಚರಣರೇಣವಃ ॥ ೧೩ ॥
ಯಥಾ ತೃಣಸಮೂಹಂ ತು ಜ್ವಲಯಂತಿ ಸ್ಫುಲಿಂಗಕಾಃ ।
ತಥಾ ಮಹಾಂತಿ ಪಾಪಾನಿ ದಹತೇ ಮಧುರಾಪುರೀ ॥ ೧೪ ॥
ಸ್ನಾನೇನ ಸರ್ವತೀರ್ಥಾನಾಂ ಯಸ್ಸ್ಯಾತ್ ಸುಕೃತಸಂಚಯಃ ।
ತತೋಽಧಿಕತರಂ ಪ್ರೋಕ್ತಾ ಮಥುರಾ ಸರ್ವಮಂಡಲೇ ॥ ೧೫ ॥
ಚತುರ್ಣಾಮಪಿ ವೇದಾನಾಂ ಪುಣ್ಯಮಧ್ಯಯನಾಚ್ಚ ಯತ್ ।
ತತ್ಪುಣ್ಯಂ ಜಾಯತೇ ತತ್ರ ಮಧುರಾಂ ಸ್ಮರತಾಂ ನೃಣಾಂ ॥ ೧೬ ॥

---

೧೧. ಯಾವ ಸ್ಥಳದಲ್ಲಿ ಮಧುರಾಕ್ಷೇತ್ರದ ನಾಮವು ಕೀರ್ತಿಸಲ್ಪಡುತ್ತಿರುವುದೊ, ಅಲ್ಲಿರುವವರಿಗೆಲ್ಲ ಮೋಕ್ಷವು ಲಭಿಸುವುದರಲ್ಲಿ ಸಂಶಯವಿಲ್ಲ. ಅಲ್ಲಿಯೇ ಯಾವಾಗಲೂ ಕೃತಯುಗವೂ ಉತ್ತರಾಯಣ ಕಾಲವೂ ಸನ್ನಿಹಿತಗಳಾಗಿರುವುವು.

೧೨. ಚತುರಾನನನೆ! ಇತರರು ಮಾಡುವ ಮಧುರಾನಗರಿಯ ಕೀರ್ತನೆಯನ್ನು ಯಾವನು ಶ್ರದ್ಧೆಯಿಂದ ಕೇಳುವನೊ, ಅವನೂ ಸಹ ತತ್‌ಕ್ಷಣದಲ್ಲಿಯೇ ತನ್ನ ಪಾಪಗಳೆಲ್ಲವನ್ನೂ ಕಳೆದುಕೊಳ್ಳುವನು.

೧೩. ಪುತ್ರನೆ! ಆ ಕ್ಷೇತ್ರದಲ್ಲಿ ಮೂರು ರಾತ್ರಿಗಳವರೆಗಾದರೂ ಯಾರು ವಾಸಮಾಡುವರೊ, ಅವರ ಚರಣ ಧೂಳಿಯ ದರ್ಶನಸ್ಪರ್ಶನಗಳಿಂದಲೇ ಇತರ ಮನುಷ್ಯರು ಪುನೀತರಾಗುವರು.

೧೪. ಬೆಟ್ಟದಂತಿರುವ ಹುಲ್ಲಿನ ರಾಶಿಯನ್ನು ಬೆಂಕಿಯ ಕಿಡಿಯು ಹೇಗೆ ಸುಟ್ಟು ಭಸ್ಮಮಾಡುವುದೊ, ಹಾಗೆಯೇ ಮಧುರಾಪುರಿಯೂ ಭಕ್ತರ ಮಹಾಪಾತಕಗಳನ್ನು ಸುಟ್ಟುಬಿಡುವುದು.

೧೫. ಈ ಭೂಲೋಕದಲ್ಲಿರುವ ಸಕಲ ತೀರ್ಥಗಲ್ಲಿಯೂ ಸ್ನಾನಮಾಡುವುದರಿಂದ ಯಾವ ಪುಣ್ಯವು ಲಭಿಸುವುದೊ, ಅದಕ್ಕಿಂತಲೂ ಹೆಚ್ಚಿನ ಫಲವನ್ನು ಮಧುರಾನಗರಿಯು ಕೊಡುವುದೆಂದು ಹೇಳಲ್ಪಟ್ಟಿರುವುದು.

೧೬. ಪುತ್ರನೆ! ನಾಲ್ಕು ವೇದಗಳನ್ನೂ ಸಾಂಗವಾಗಿ ಅಧ್ಯಾಯನ ಮಾಡಿದವನಿಗೆ ಯಾವ ಪುಣ್ಯವುಂಟಾಗುವುದೊ, ಮಧುರಾನಗರಿಯನ್ನು ಸ್ಮರಿಸುವ ಮಾನವರಿಗೂ ಅದೇ ಪುಣ್ಯವು ಲಭಿಸುವುದು.

ಅನ್ಯತ್ರ ಹಿ ಕೃತಂ ಪಾಪಂ ತೀರ್ಥಮಾಸಾದ್ಯ ನಶ್ಯತಿ ।
ತೀರ್ಥೇಷು ಯತ್ಕೃತಂ ಪಾಪಂ ವಜ್ರಲೇಪೋ ಭವಿಷ್ಯತಿ ॥ ೧೭ ॥
ಮಥುರಾಯಾಂ ಕೃತಂ ಪಾಪಂ ಮಥುರಾಯಾಂ ಪ್ರಣಶ್ಯತಿ ।
ಧರ್ಮಾರ್ಥಕಾಮಮೋಕ್ಷಾಖ್ಯಂ ಸ್ಥಿತ್ವಾ ತತ್ರ ಲಭೇನ್ನರಃ ॥ ೧೮ ॥
ಅನ್ಯತ್ರ ದಶಭಿರ್ವರ್ಷೈಃ ಪ್ರಾರಬ್ಧಂ ಭುಜ್ಯತೇ ಹಿ ಯತ್ ।
ಕಿಲ್ಬಿಷಂ ಚ ಚತುರ್ವಕ್ತ್ರ ಮಾಥುರೇ ದಶಭಿರ್ದಿನೈಃ ॥ ೧೯ ॥
ದಿವಿ ನೈವ ನ ಪಾತಾಲೇ ನಾಂತರಿಕ್ಷೇ ನ ಮಾನುಷೇ ।
ಸಮಂತು ಮಥುರಾಯಾಂ ಹಿ ಪ್ರಿಯಂ ಮಮ ಸದೈವ ಹಿ ॥ ೨೦ ॥
ಸರ್ವೇಷಾಮೇವ ತೀರ್ಥಾನಾಂ ಮಾಥುರಂ ಪರಮಂ ಮಹತ್ ।
ಬಾಲಕ್ರೀಡನರೂಪಾಣಿ ಕೃತಾನಿ ಸಹಗೋಪಕೈಃ ॥ ೨೧ ॥
ತ್ರಿಂಶದ್ವರ್ಷಸಹಸ್ರಾಣಿ ತ್ರಿಂಶದ್ವರ್ಷಶತಾನಿ ಚ ।
ಯತ್ಫಲಂ ಭಾರತೇ ವರ್ಷೇ ತತ್ಫಲಂ ಮಥುರಾಂ ಸ್ಮರನ್ ॥ ೨೨ ॥

---

೧೭. ಇತರ ಸ್ಥಳಗಳಲ್ಲಿ ಮಾಡಿದ ಪಾಪವು ತೀರ್ಥಗಳ ಸೇವನೆಯಿಂದ ನಾಶವಾಗುವುದು. ಆದರೆ ಆ ತೀರ್ಥಗಳಲ್ಲಿ ಮಾಡಿದ ಪಾಪಗಳು ಮನುಷ್ಯನಿಗೆ ವಜ್ರಲೇಪದಂತೆ ಅಂಟಿಕೊಂಡಿರುವುವು.

೧೮. ಆದರೆ ಮಥುರೆಯಲ್ಲಿ ಮಾಡಿದ ಪಾಪಗಳೆಲ್ಲವೂ ಅಲ್ಲಿಯೇ ನಾಶವಾಗುವುವು. ಅಲ್ಲಿ ವಾಸಮಾಡುವುದರಿಂದ ಮನುಷ್ಯನು ಧರ್ಮ, ಅರ್ಥ, ಕಾಮ, ಮೋಕ್ಷಗಳೆಂಬ ಚತುರ್ವಿಧಪುರುಷಾರ್ಥಗಳನ್ನೂ ಸುಲಭವಾಗಿ ಸಾಧಿಸಿಕೊಳ್ಳುವನು.

೧೯. ಚತುರ್ಮುಖನೆ! ಇತರ ಸ್ಥಳಗಳಲ್ಲಿ ಹತ್ತು ವರ್ಷಗಳವರೆಗೂ ಕಷ್ಟದಿಂದ ಅನುಭವಿಸುವ ಪ್ರಾರಬ್ಧಕರ್ಮದ ಫಲಗಳನ್ನು ಮಥುರೆಯಲ್ಲಿ ಹತ್ತು ದಿನಗಳಿಂದಲೇ ಕಳೆದುಕೊಳ್ಳಬಹುದು.

೨೦–೨೧. ಸ್ವರ್ಗದಲ್ಲಾಗಲಿ, ಪಾತಾಲದಲ್ಲಾಗಲಿ, ಅಂತರಿಕ್ಷದಲ್ಲಾಗಲಿ, ಭೂಲೋಕದಲ್ಲಾಗಲಿ ಮಥುರಾಪಟ್ಟಣಕ್ಕೆ ಸಮಾನವಾದ ಕ್ಷೇತ್ರವು ಮತ್ತೊಂದಿಲ್ಲವು. ಆದುದರಿಂದ ಅದೇ ನನಗೆ ಯಾವಾಗಲೂ ಪ್ರಿಯವಾಗಿರುವುದು. ಸಕಲ ತೀರ್ಥಗಳಲ್ಲಿಯೂ ಮಥುರೆಯೇ ಸರ್ವೋತ್ತಮವು. ಅಲ್ಲಿಯೇ ನಾನು ಬಾಲಲೀಲೆಗಳ ವ್ಯಾಜದಿಂದ ಗೋಪಬಾಲಕರೊಡನೆ ವಾಸಮಾಡುತ್ತಿದ್ದೆನು.

೨೨. ಪವಿತ್ರವಾದ ಈ ಭರತವರ್ಷದಲ್ಲಿ ಮುವತ್ತುಸಾವಿರದ ಮುವತ್ತುನೂರು ವರ್ಷಗಳಿಂದ ಯಾವ ಫಲವು ಲಭಿಸುವುದೊ, ಆ ಫಲವೇ ಮಥುರಾಕ್ಷೇತ್ರದ ಸ್ಮರಣೆಯ ಮಾತ್ರದಿಂದ ಲಭಿಸುವುದು.

ಪ್ರಸನ್ನವದನಾಂಭೋಜಂ ಸರ್ವಲಕ್ಷಣಲಕ್ಷಿತಂ ।
ಧ್ಯಾತ್ವಾ ಪುನರ್ಜಲಂ ಹಸ್ತೇ ಗೃಹೀತ್ವಾ ಭಾನುಮಧ್ಯಗಂ ॥ ೬ ॥
ಧ್ಯಾತ್ವಾರ್ಘ್ಯಂ ದಾಪಯೇತ್ತತ್ರ ಕರತೋಯೇನ ಮಾನವಃ ।
ಏವಮುಚ್ಚಾರಯೇದ್ವಾಚಂ ತಸ್ಮಿನ್ ಕಾಲೇ ಚತುರ್ಮುಖ ॥ ೭ ॥
ಏಕಾದಶ್ಯಾಂ ನಿರಾಹಾರಃ ಸ್ಥಿತ್ವಾಽಹನಿ ಪರೇ ಹ್ಯಹಂ ।
ಭೋಕ್ಷ್ಯಾಮಿ ಪುಂಡರೀಕಾಕ್ಷ ಶರಣಂ ಮೇ ಭವಾಚ್ಯುತ ॥ ೮ ॥
ಏವಮುಕ್ತ್ವಾ ತತೋ ರಾತ್ರೌ ಮಮ ಮೂರ್ತೇಶ್ಚ ಸನ್ನಿಧೌ ।
ಜಪೇನ್ನಾರಾಯಣಾಯೇತಿ ಸ್ವಯಂ ತತ್ರ ವಿಧಾನತಃ ॥ ೯ ॥
ತತಃ ಪ್ರಭಾತೇ ವಿಮಲಾಂ ನದೀಂ ಗತ್ವಾ ಸಮುದ್ರಗಾಂ ।
ಇತರಾಂ ವಾ ತಡಾಗಂ ವಾ ಗೃಹೇ ವಾ ನಿಯತಾತ್ಮವಾನ್ ॥ ೧೦ ॥
ಆನೀಯ ಮೃತ್ತಿಕಾಂ ಶುದ್ಧಾಂ ಮಂತ್ರೇಣಾನೇನ ಮಾನವಃ ।
ವಂದಯೇದ್ದೇವದೇವೇಶಂ ತದಾ ಶುದ್ಧೋ ಭವೇನ್ನರಃ ॥ ೧೧ ॥
ಧಾರಣಂ ಪೋಷಣಂ ತ್ವತ್ತೋ ಭೂತಾನಾಂ ದೇವಿ ಸರ್ವದಾ ।
ತೇನ ಸತ್ಯೇನ ಮೇ ಪಾಪಂ ಯಾವನ್ಮೋಚಯ ಸುವ್ರತೇ ॥ ೧೨ ॥

---

ಆದ ನನ್ನ ರೂಪವನ್ನು ಧ್ಯಾನಮಾಡುತ್ತ, ಬೊಗಸೆಯಲ್ಲಿ ನೀರನ್ನು ತೆಗೆದು ಕೊಂಡು ಸೂರ್ಯಮಂಡಲಮಧ್ಯವರ್ತಿಯಾದ ನಾರಾಯಣನನ್ನು ಧ್ಯಾನಿಸುತ್ತ ಅರ್ಘ್ಯವನ್ನು ಕೊಡಬೇಕು. ಎಲೈ ಚತುರ್ಮುಖನೆ! ಆ ಕಾಲದಲ್ಲಿ ಮುಂದೆ ಹೇಳುವ ಶ್ಲೋಕವನ್ನು ಹೇಳಿ ಪ್ರಾರ್ಥಿಸಬೇಕು.

೮. "ಎಲೈ ಕಮಲನೇತ್ರನೆ! ನಾಳೆ ಏಕಾದಶಿಯ ದಿವಸದಲ್ಲಿ ಉಪವಾಸ ವನ್ನುಮಾಡಿ ಮಾರನೆಯ ದಿನದ ಹಗಲಿನಲ್ಲಿ ನಾನು ಭೋಜನವನ್ನು ಮಾಡುವೆನು. ಅಚ್ಯುತ! ನನಗೆ ಅಭಯವನ್ನು ಕೊಡು."

೯. ಇಂತು ಪ್ರತಿಜ್ಞೆಯನ್ನುಮಾಡಿ ಅಂದಿನ ರಾತ್ರಿಯಲ್ಲಿ ನನ್ನ ಪ್ರತಿಮೆಯ ಸಮ್ಮುಖದಲ್ಲಿ ಕುಳಿತು ವಿಧ್ಯುಕ್ತರೀತಿಯಿಂದ 'ಓಂ ನಮೋ ನಾರಾಯಣಾಯ' ಎಂಬ ಮಂತ್ರವನ್ನು ಜಪಿಸಬೇಕು.

೧೦. ಪ್ರಾತಃಕಾಲವಾಗಲು ಸಮುದ್ರಗಾಮಿನಿಯಾದ ಅಥವ ಇತರ ನದಿಯನ್ನಾಗಲಿ, ಸರೋವರವನ್ನಾಗಲಿ, ಸೇರಬೇಕು. ಅನಾನುಕೂಲವಾದಲ್ಲಿ ಮನೆಯಲ್ಲಾದರೂ ಸ್ನಾನವನ್ನು ಮಾಡಬೇಕು.

೧೧. ಪರಿಶುದ್ಧವಾದ ಮೃತ್ತಿಕೆಯನ್ನು ತಂದು ಪ್ರತಿಮನುಷ್ಯನೂ ಮುಂದೆ ಹೇಳುವ ಮಂತ್ರದಿಂದ ದೇವದೇವನಾದ ನಾರಾಯಣನಿಗೆ ಪ್ರಣಾಮವನ್ನು ಮಾಡಲು ಶುದ್ಧನಾಗುವನು.

೧೨. "ಸುವ್ರತೆಯಾದ ಭೂದೇವಿಯೆ! ಯಾವಾಗಲೂ ನಿನ್ನಿಂದಲೇ ಸಕಲ

ಬ್ರಹ್ಮಾಂಡೋದರತೀರ್ಥಾನಿ ಕರೈಸ್ಸ್ಪೃಷ್ಟಾನಿ ದೇವತೈಃ ।
ತೇನೇಮಾಂ ಮೃತ್ತಿಕಾಂ ಸ್ಪೃಷ್ಟ್ವಾಮಾಽಲಭಾಮಿ ತ್ವಯೋದ್ಧೃತಾಂ ॥
ತ್ವಯಿ ನಿತ್ಯಂ ರಸಾಸ್ಸರ್ವೇ ಸ್ಥಿತಾ ವರುಣ ಸರ್ವದಾ ।
ತೇನೇಮಾಂ ಮೃತ್ತಿಕಾಂ ಪ್ಲಾವ್ಯ ಪೂತಾಂ ಕುರುಷ್ವ ಮಾ ಚಿರಂ ॥ ೧೪ ॥
ಏವಂ ಮೃದಂ ತಥಾ ತೋಯಂ ಪ್ರಸಾದ್ಯಾತ್ಮಾನಮಾಲಭೇತ್ ।
ತ್ರಿಃ ಕೃತ್ವಾ ಶೇಷಮೃದಯಾ ಪಿಂಡಮಾಲಿಪ್ಯ ವೈ ಜಲೇ ॥ ೧೫ ॥
ತಸ್ಮಿನ್ನರಃ ಸದಾ ಸಮ್ಯಕ್ ನಕ್ರಕಚ್ಛಪದೂರತಃ ।
ಸ್ನಾತ್ವಾ ಚಾವಶ್ಯಕಂ ಕೃತ್ವಾ ಪುನರ್ಮಮ ಗೃಹಂ ವ್ರಜೇತ್ ॥ ೧೬ ॥
ತತ್ರಾರಾಧ್ಯ ಮಹಾಯೋಗಿನ್ ದೇವಂ ನಾರಾಯಣಂ ಹರಿಂ ।
ಕೇಶವಾಯ ನಮಃ ಪಾದೌ ಕಟಿಂ ದಾಮೋದರಾಯ ಚ ॥ ೧೭ ॥
ಜಾನುಯುಗ್ಮಂ ನೃಸಿಂಹಾಯ ಉರಶ್ಶ್ರೀವತ್ಸಧಾರಿಣೇ ।
ಕಂಠೇ ಕೌಸ್ತುಭನಾಭಾಯ ವಕ್ಷಶ್ಶ್ರೀಪತಯೇ ತಥಾ ॥ ೧೮ ॥

---

ಭೂತಗಳ ಧಾರಣವೂ ಪೋಷಣವೂ ನಡೆಯುತ್ತಿರುವುವು. ಆ ಸತ್ಯದ ಪ್ರಭಾವದಿಂದಲೇ ನನ್ನನ್ನು ಸಕಲಪಾತಕಗಳಿಂದ ಬಿಡಿಸು.

೧೩. ಬ್ರಹ್ಮಾಂಡದಲ್ಲಿರುವ ಸಕಲತೀರ್ಥಗಳೂ ದೇವತೆಗಳ ಕೈಗಳಿಂದ ಮುಟ್ಟಲ್ಪಟ್ಟಿರುವುವು. ಆದುದರಿಂದ ಅವರ ಸ್ಪರ್ಶಸಹಿತವಾಗಿ ನಿನ್ನಿಂದ ತೆಗೆಯಲ್ಪಟ್ಟ ಈ ಮೃತ್ತಿಕೆಯನ್ನು ತೆಗೆದುಕೊಳ್ಳುತ್ತೇನೆ.

೧೪. ಎಲೈ ವರುಣದೇವನೆ! ನಿನ್ನಲ್ಲಿ ಯಾವಾಗಲೂ ಸಕಲ ರಸಗಳೂ ಸನ್ನಿಹಿತಗಳಾಗಿರುವುವು. ಅವುಗಳಿಂದ ಈ ಮೃತ್ತಿಕೆಯನ್ನು ನೆನೆಸಿ ಶೀಘ್ರವಾಗಿ ಪವಿತ್ರಗೊಳಿಸು.''

೧೫. ಇಂತು ಮೃತ್ತಿಕೆಯನ್ನೂ ಜಲವನ್ನೂ ಪ್ರಸನ್ನೀಕರಿಸಿಕೊಂಡು ಸಕಲ ಮೃತ್ತಿಕೆಯನ್ನು ಮೂರು ಭಾಗವನ್ನಾಗಿಮಾಡಿ ಆ ಪಿಂಡಗಳನ್ನು ನೀರಿನಲ್ಲಿ ಬೆರಸಿ ಮೂರು ಸ್ನಾನಗಳನ್ನು ಮಾಡಬೇಕು.

೧೬. ಆ ನೀರಿನಲ್ಲಿ ಮಾನವನು ಮೊಸಳೆ, ಆಮೆಗಳಿಂದ ದೂರವಾದ ಪ್ರದೇಶದಲ್ಲಿ ಸ್ನಾನವನ್ನು ಮಾಡಿಕೊಂಡು, ನಿತ್ಯಕರ್ಮಗಳನ್ನು ನೆರವೇರಿಸಿಕೊಂಡು ಮತ್ತೆ ನನ್ನ ದೇವಾಲಯವನ್ನು ಸೇರಬೇಕು.

೧೭–೨೦. ಎಲೈ ಯೋಗಿವರ್ಯನಾದ ಬ್ರಹ್ಮನೆ! ಅಲ್ಲಿ ದೇವದೇವನೂ, ಭಕ್ತರ ಪಾಪಗಳನ್ನು ನಾಶಮಾಡುವವನೂ, ಸರ್ವೇಶ್ವರನೂ ಆದ ನಾರಾಯಣನನ್ನು ಆರಾಧಿಸಬೇಕು. 'ಕೇಶವಾಯ ನಮಃ' ಎಂಬ ಮಂತ್ರದಿಂದ ಪಾದಗಳನ್ನೂ, 'ದಾಮೋದರಾಯ ನಮಃ' ಎಂಬುದಾಗಿ ಕಟಿಪ್ರದೇಶವನ್ನೂ, 'ನೃಸಿಂಹಾಯ ನಮಃ' ಎಂಬುದಾಗಿ ಮೊಳಕಾಲುಗಳನ್ನೂ 'ಶ್ರೀವತ್ಸಧಾರಿಣೇ

ತ್ರೈಲೋಕ್ಯವಿಜಯಾಯೇತಿ ಬಾಹುಂ ಸರ್ವಾತ್ಮನೇ ಶಿರಃ ।
ರಥಾಂಗಧಾರಿಣೇ ವಕ್ತ್ರಂ ಶ್ರೀಕರಾಯೇತಿ ವಾರಿಜಂ ॥ ೧೯ ॥
ಗಂಭೀರಾಯೇತಿ ಚ ಗದಾಮಂಭೋಜಂ ಶಾಂತಮೂರ್ತಯೇ ।
ಏವಮಭ್ಯರ್ಚ್ಯ ದೇವೇಶಂ ದೇವಂ ನಾರಾಯಣಂ ಪ್ರಭುಂ ॥ ೨೦ ॥
ಪುನಸ್ತಸ್ಯಾಗ್ರತಃ ಕುಂಭಾನ್ ಚತುರಸ್ಸ್ಥಾಪಯೇದ್ಬುಧಃ ।
ಜಲಪೂರ್ಣಾನ್ ಸಮಾಲ್ಯಾಂಶ್ಚ ಸಿತಚಂದನಲೇಪಿತಾನ್ ॥ ೨೧ ॥
ಚೂತಪಲ್ಲವಸಂಯುಕ್ತಾನ್ ಸಿತವಸ್ತ್ರಾವಗುಂಠಿತಾನ್ ।
ಛಾದಿತಾಂಸ್ತಾಮ್ರಪಾತ್ರೈಶ್ಚ ತಿಲಪೂರ್ಣೈಸ್ಸಕಾಂಚನೈಃ ॥ ೨೨ ॥
ಚತ್ವಾರಸ್ತು ಸಮುದ್ರಾಶ್ಚ ಕಲಶಾಃ ಸಂಪ್ರಕೀರ್ತಿತಾಃ ।
ತೇಷಾಂ ಮಧ್ಯೇ ಶುಭಂ ಪೀಠಂ ಸ್ಥಾಪಯೇದ್ವಸ್ತ್ರಗರ್ಭಿತಂ ॥ ೨೩ ॥
ತಸ್ಮಿನ್ ಸುವರ್ಣಂ ರೌಪ್ಯಂ ವಾ ತಾಮ್ರಂ ವಾ ದಾರವಂ ತಥಾ ।
ಅಲಾಭೇ ಸರ್ವಪಾತ್ರಾಣಾಂ ಪಲಾಶಂ ಪಾತ್ರಮಿಷ್ಯತೇ ॥ ೨೪ ॥

---

ನಮಃ' ಎಂಬುದಾಗಿ ಎದೆಯನ್ನೂ, 'ಕೌಸ್ತುಭನಾಭಾಯ ನಮಃ ಎಂದು ಕಂಠವನ್ನೂ, 'ಶ್ರೀಪತಯೇ ನಮಃ' ಎಂಬುದಾಗಿ ವಕ್ಷಸ್ಥಳವನ್ನೂ, 'ತ್ರೈಲೋಕ್ಯವಿಜಯಾಯ ನಮಃ' ಎಂಬುದಾಗಿ ಬಾಹುಗಳನ್ನೂ, 'ಸರ್ವಾತ್ಮನೇ ನಮಃ' ಎಂಬುದಾಗಿ ತಲೆಯನ್ನೂ, 'ರಥಾಂಗಧಾರಿಣೇ ನಮಃ' ಎಂದು ಮುಖವನ್ನೂ, 'ಶ್ರೀಕರಾಯ ನಮಃ' ಎಂಬ ಮಂತ್ರದಿಂದ ಶಂಖವನ್ನೂ, 'ಗಂಭೀರಾಯ ನಮಃ' ಎಂಬುದಾಗಿ ಗದೆಯನ್ನೂ, 'ಶಾಂತಮೂರ್ತಯೇ ನಮಃ' ಎಂಬುದಾಗಿ ಪದ್ಮವನ್ನೂ ಪೂಜೆಮಾಡಬೇಕು.

೨೧–೨೨. ಮತ್ತೆ ಶ್ರೀಮನ್ನಾರಾಯಣನ ಇದಿರಿನಲ್ಲಿ ನೀರಿನಿಂದ ತುಂಬಿದುವುಗಳೂ, ಪುಷ್ಪಾಲಂಕೃತಗಳೂ, ಬಿಳಿಯ ಚಂದನದಿಂದ ಲೇಪಿತಗಳೂ, ಮಾವಿನ ಎಳೆದಳಿರುಗಳಿಂದ ಕೂಡಿದವುಗಳೂ, ಬಿಳಿಯ ವಸ್ತ್ರಗಳಿಂದ ಆಚ್ಛಾದಿತಗಳೂ, ಚಿನ್ನದನಾಣ್ಯಗಳಿಂದಲೂ ಎಳ್ಳಿನಿಂದಲೂ ತುಂಬಲ್ಪಟ್ಟ ತಾಮ್ರ ಪಾತ್ರೆಗಳಿಂದ ಸುತ್ತುವರೆಯಲ್ಪಟ್ಟುವುಗಳೂ, ಆದಂತಹ ನಾಲ್ಕು ಕುಂಭಗಳನ್ನು ಸ್ಥಾಪನೆಮಾಡಬೇಕು.

೨೩. ಈ ನಾಲ್ಕು ಕಲಶಗಳೂ ನಾಲ್ಕು ಸಮುದ್ರಗಳೆಂದು ಹೇಳಲ್ಪಟ್ಟಿರುವುವು. ಅವುಗಳ ಮಧ್ಯದಲ್ಲಿ ವಸ್ತ್ರಾಚ್ಛಾದಿತವಾದ ಪವಿತ್ರವಾದ ಒಂದು ಆಸನವನ್ನು ಕಲ್ಪಿಸಬೇಕು.

೨೪. ಆ ಆಸನದಲ್ಲಿ ಚಿನ್ನ, ಬೆಳ್ಳಿ, ತಾಮ್ರ, ಮರಗಳಿಂದ ಮಾಡಿದ ತಟ್ಟೆಯನ್ನಾಗಲಿ, ಯಾವುವೂ ಅನುಕೂಲವಾಗದಿದ್ದಲ್ಲಿ ಮುತ್ತುಗದ ದೊನ್ನೆಯನ್ನಾಗಲಿ ಸಜ್ಜುಗೊಳಿಸಬೇಕು.

ತೋಯಪೂರ್ಣಂ ಚ ತತ್ಕೃತ್ವಾ ತಸ್ಮಿನ್ ಪಾತ್ರೇ ತತೋ ನ್ಯಸೇತ್ ।
ಸೌವರ್ಣಂ ಮತ್ಸ್ಯರೂಪಂ ಚ ಕೃತ್ವಾ ದೇವಂ ಜನಾರ್ದನಂ ॥ ೨೫ ॥
ದೇವದೇವಾಂಗಸಂಯುಕ್ತಂ ಶ್ರುತಿಸ್ಮೃತಿವಿಭೂಷಿತಂ ।
ತತ್ರಾನೇಕವಿಧೈರ್ಭಕ್ಷ್ಯೈಃ ಫಲೈಃ ಪುಷ್ಪೈಶ್ಚ ಶೋಭಿತಂ ॥ ೨೬ ॥
ಗಂಧೈರ್ಧೂಪೈಶ್ಚ ವಸ್ತ್ರೈಶ್ಚ ಅರ್ಚಯಿತ್ವಾ ಯಥಾವಿಧಿ ।
ರಸಾತಲಗತಾ ವೇದಾ ಯಥಾ ದೇವ ತ್ವಯೋದ್ಧೃತಾಃ ॥ ೨೭ ॥
ಮತ್ಸ್ಯರೂಪೇಣ ತದ್ವನ್ಮಾಂ ಭವಾನುದ್ಧರ ಕೇಶವ ।
ಏವಮುಚ್ಚಾರ್ಯ ತಸ್ಯಾಗ್ರೇ ಜಾಗರಂ ತತ್ರ ಕಾರಯೇತ್ ॥ ೨೮ ॥
ಯಥಾವಿಭವಸಾರೇಣ ಪ್ರಭಾತೇ ವಿಮಲೇ ತಥಾ ।
ಚತುರ್ಣಾಂ ಬ್ರಾಹ್ಮಣಾನಾಂ ಚ ಚತುರೋ ದಾಪಯೇದ್ಘಟಾನ್ ॥೨೯॥
ಪೂರ್ವಂ ಚ ಬಹ್ವೃಚೇ ದದ್ಯಾತ್ ಛಾಂದೋಗ್ಯೇ ದಕ್ಷಿಣಂ ತಥಾ ।
ಯಜುಶ್ಶಾಖಾನ್ವಿತೇ ದದ್ಯಾತ್ ಪಶ್ಚಿಮಂ ಘಟಮುತ್ತಮಂ ॥ ೩೦ ॥

---

೨೫–೨೮. ಆ ಪಾತ್ರೆಯನ್ನು ನೀರಿನಿಂದ ತುಂಬಿ ಅದರಲ್ಲಿ ಚಿನ್ನದಿಂದ ಮಾಡಿದ ಮತ್ಸ್ಯರೂಪಿಯಾದ ಶ್ರೀಮನ್ನಾರಾಯಣನ ಪ್ರತಿಮೆಯೊಂದನ್ನು ಮಾಡಿಸಿಡಬೇಕು. ಆ ವಿಗ್ರಹವನ್ನು ದೇವಾಧಿದೇವತೆಗಳೇ ಅಂಗಗಳೂ, ಶ್ರುತಿಸ್ಮೃತಿಗಳೇ ಆಭರಣಗಳೂ ಆಗಿರುವಂತೆ ಅನುಸಂಧಾನಮಾಡಿಕೊಂಡು ಪಾತ್ರೆಯಲ್ಲಿ ಶೋಭಿಸುತ್ತಿರುವ ಮತ್ಸ್ಯವನ್ನು ಅನೇಕ ವಿಧಗಳಾದ ಭಕ್ಷ್ಯಗಳಿಂದಲೂ, ಫಲಗಳಿಂದಲೂ, ಪುಷ್ಪಗಳಿಂದಲೂ, ಗಂಧಲೇಪನೆಗಳಿಂದಲೂ, ಧೂಪಗಳಿಂದಲೂ, ವಸ್ತ್ರಗಳಿಂದಲೂ, ಯಥಾವಿಧಿಯಾಗಿ ಪೂಜಿಸಿ ಸ್ತುತಿಸಬೇಕು. 'ಎಲೈ ದೇವನೆ! ಕೇಶವನೆ! ರಸಾತಲದಲ್ಲಿ ಹುದುಗಿದ್ದ ವೇದಗಳನ್ನು ನೀನು ಮತ್ಸ್ಯರೂಪವನ್ನು ಸ್ವೀಕರಿಸಿ ಹೇಗೆ ಉದ್ಧಾರಮಾಡಿದೆಯೊ, ಹಾಗೆಯೇ ನನ್ನನ್ನೂ ಈ ಸಂಸಾರವೆಂಬ ಸಾಗರದದೆಸೆಯಿಂದ ಉದ್ಧಾರಮಾಡು.' ಈ ಸ್ತೋತ್ರವನ್ನು ಹೇಳುತ್ತ ಆ ಪ್ರತಿಮೆಯ ಮುಂದುಗಡೆಯಲ್ಲಿ ಕುಳಿತು ರಾತ್ರಿಯ ಜಾಗರಣೆಯನ್ನು ಮಾಡಬೇಕು.

೨೯. ಬಳಿಕ ನಿರ್ಮಲವಾದ ಸೂರ್ಯೋದಯವಾದ ಮೇಲೆ ತನ್ನ ಐಶ್ವರ್ಯಕ್ಕೆ ತಕ್ಕ ದಾನಗಳೊಡನೆ ನಾಲ್ಕು ಬ್ರಾಹ್ಮಣರಿಗೆ ಆ ನಾಲ್ಕು ಘಟಗಳನ್ನೂ ದಾನಮಾಡಬೇಕು.

೩೦. ಪೂರ್ವದಿಕ್ಕಿನಲ್ಲಿರುವ ಘಟವನ್ನು ಋಗ್ವೇದಾಧ್ಯಯನಪರನಾದವನಿಗೆ ಕೊಡಬೇಕು. ದಕ್ಷಿಣದಲ್ಲಿರುವ ಕುಂಭವನ್ನು ಸಾಮವೇದಾಧ್ಯಾಯಿಗೆ ಕೊಡಬೇಕು. ಪಶ್ಚಿಮದಲ್ಲಿರುವ ಉತ್ತಮವಾದ ಘಟವನ್ನು ಯಜುಶ್ಶಾಖೆಯನ್ನು ಅಧ್ಯಯನಮಾಡುವವನಿಗೆ ಕೊಡಬೇಕು.

ಉತ್ತರಂ ಕಾಮತೋ ದದ್ಯಾತ್ ಏಷ ಏವ ವಿಧಿಸ್ಮೃತಃ ।
ಋಗ್ವೇದಃ ಪ್ರೀಯತಾಂ ಪೂರ್ವೇ ಸಾಮವೇದಸ್ತು ದಕ್ಷಿಣೇ ॥ ೩೧ ॥
ಯಜುರ್ವೇದಃ ಪಶ್ಚಿಮತೋ ಹ್ಯಥರ್ವಶ್ಚೋತ್ತರೇಣ ತು ।
ಅನೇನ ಕ್ರಮಯೋಗೇನ ಪ್ರೀಯತಾಮಿತಿ ವಾಚಯೇತ್ ॥ ೩೨ ॥
ಮತ್ಸ್ಯರೂಪಂ ತು ಸೌವರ್ಣಂ ಆಚಾರ್ಯಾಯ ನಿವೇದಯೇತ್ ।
ಗಂಧಧೂಪಾದಿವಸ್ತ್ರೈಸ್ತು ಸಂಪೂಜ್ಯ ವಿಧಿವತ್ಕ್ರಮಾತ್ ॥ ೩೩ ॥
ಯಸ್ತ್ವಿಮಂ ಸರಹಸ್ಯಂ ಚ ಮಂತ್ರೈಣ್ಯೈವೋಪಪಾದಯೇತ್ ।
ವಿಧಾನಂ ವಿಧಿವದ್ದತ್ವಾ ದಾತಾ ಕೋಟಿಗುಣೋತ್ತರಂ ॥ ೩೪ ॥
ಪ್ರತಿಪದ್ಯ ಗುರುಂ ಯಸ್ತು ಮೋಹಾದ್ವಿಪ್ರತಿಪದ್ಯತೇ ।
ಸ ಜನ್ಮಕೋಟಿಂ ನರಕೇ ಪಚ್ಯತೇ ಪುರುಷಾಧಮಃ ॥ ೩೫ ॥
ವಿಧಾನಸ್ಯ ಪ್ರದಾತಾ ಯೋ ಗುರುರಿತ್ಯುಚ್ಯತೇ ಬುಧೈಃ ।
ಏವಂ ದತ್ವಾ ವಿಧಾನೇನ ದ್ವಾದಶ್ಯಾಂ ಮಾಂ ಸಮರ್ಚಯೇತ್ ॥ ೩೬ ॥

೩೧–೩೨. ಉತ್ತರದಲ್ಲಿರುವ ಕುಂಭವನ್ನು ಇಚ್ಛಾನುಸಾರವಾಗಿ ದಾನ ಮಾಡಬಹುದು. ಇದೇ ಶಾಸ್ತ್ರಗಳಲ್ಲಿ ಹೇಳಿರುವ ವಿಧಿಯು. 'ಪೂರ್ವದಿಕ್ಕಿನಲ್ಲಿ ಋಗ್ವೇದವು ಸಂತೋಷಗೊಳ್ಳಲಿ. ದಕ್ಷಿಣದಿಕ್ಕಿನಲ್ಲಿ ಸಾಮವೇದವು ಸಂತುಷ್ಟವಾಗಲಿ. ಪಶ್ಚಿಮದಲ್ಲಿ ಯಜುರ್ವೇದವು ಪ್ರೀತಿಗೊಳ್ಳಲಿ. ಅಥರ್ವವೇದವು ಉತ್ತರದಲ್ಲಿ ಸುಪ್ರೀತವಾಗಲಿ. ಈ ಕ್ರಮಯೋಗದಿಂದ ಭಗವಂತನು ಸಂತೋಷವನ್ನು ಹೊಂದಲಿ' ಎಂಬುದಾಗಿ ಮಂತ್ರವನ್ನುಚ್ಚರಿಸಬೇಕು.

೩೩. ಬಳಿಕ ಆಚಾರ್ಯನನ್ನು ಕರೆದು ಗಂಧ, ಧೂಪ, ವಸ್ತ್ರ ಮುಂತಾದುವುಗಳಿಂದ ಕ್ರಮವಾಗಿ ವಿಧಿಪ್ರಕಾರವಾಗಿ ಪೂಜಿಸಿ ಚಿನ್ನದಿಂದ ಮಾಡಿದ ಆ ಮತ್ಸ್ಯದ ವಿಗ್ರಹವನ್ನು ಆತನಿಗೆ ನಿವೇದನೆ ಮಾಡಬೇಕು.

೩೪. ಯಾವನು ರಹಸ್ಯದಿಂದೊಡಗೂಡಿದ ಈ ವಿಧಾನವನ್ನು ತಿಳಿದು ಉಚಿತಮಂತ್ರಗಳಿಂದ ವ್ರತವನ್ನು ನೆರವೇರಿಸಿ ವಿಧಿವತ್ತಾಗಿ ದಾನಮಾಡುವನೊ, ಅವನ ದಾನವು ಕೋಟಿಗುಣಿತವಾದ ಫಲವನ್ನೀಯುವುದು.

೩೫. ಗುರುಸ್ಥಾನಕ್ಕೆ ಸರಿಯಾದ ಮನುಷ್ಯನನ್ನು ಪಡೆದೂ ಯಾವ ಮನುಷ್ಯನು ಮೋಹದಿಂದ ವ್ರತವಿಮುಖನಾಗುವನೊ, ಆ ಮಾನವಾಧಮನು ಕೋಟಿಜನ್ಮಗಳವರೆಗೂ ನರಕದಲ್ಲಿ ಯಾತನೆಗಳನ್ನನುಭವಿಸುವನು.

೩೬. ಯಾವನು ವಿಧಿವಿಧಾನಗಳನ್ನು ಇತರರಿಗೆ ಬೋಧಿಸುವನೊ, ಅವನನ್ನೇ ಬಲ್ಲವರು ಗುರುವೆಂದು ಕರೆಯುವರು. ಇಂತು ಮತ್ಸ್ಯಮೂರ್ತಿಯನ್ನು ದಾನ ಮಾಡಿ ದ್ವಾದಶಿಯ ದಿನದಲ್ಲಿ ನನ್ನ ಪೂಜೆಯನ್ನು ಮಾಡಬೇಕು.

ವಿಪ್ರಾಣಾಂ ಭೋಜನಂ ದದ್ಯಾತ್ ಯಥಾಶಕ್ತ್ಯಾ ಚ ದಕ್ಷಿಣಾಂ ।
ಭೂರಿಣಾ ಪರಮಾನ್ನೇನ ತತಃ ಪಶ್ಚಾತ್ಸ್ವಯಂ ನರಃ ॥ ೩೭ ॥
ಭುಂಜೀತ ಸಹಿತೋ ವಿಪ್ರೈರ್ವಾಗ್ಯತಸ್ಸಂಯತೇಂದ್ರಿಯಃ ।
ಅನೇನ ವಿಧಿನಾ ಯಸ್ತು ಕುರ್ಯಾನ್ಮತ್ಸ್ಯೋತ್ಸವಂ ನರಃ ॥ ೩೮ ॥
ತಸ್ಯ ಪುಣ್ಯಫಲಂ ಚಾಗ್ರೇ ಶೃಣು ಸತ್ಯವತಾಂ ವರ ।
ಯದಿ ವಕ್ತ್ರಸಹಸ್ರಾಣಾಂ ಸಹಸ್ರಾಣಿ ಭವಂತಿ ಹಿ ॥ ೩೯ ॥
ಆಯುಶ್ಚ ಬ್ರಹ್ಮಣಾ ತುಲ್ಯಂ ಲಭೇದ್ಯದಿ ಮಹಾವ್ರತ ।
ತದಾ ವೈ ಹ್ಯಸ್ಯ ಧರ್ಮಸ್ಯ ಫಲಂ ಕಥಯಿತುಂ ಭವೇತ್ ॥ ೪೦ ॥
ಯ ಇಮಂ ಶ್ರಾವಯೇದ್ಭಕ್ತ್ಯಾ ದ್ವಾದಶೀಕಲ್ಪಮುತ್ತಮಂ ।
ಶೃಣೋತಿ ವಾ ಸ ಪಾಪೈಸ್ತು ಸರ್ವೈರೇವ ವಿಮುಚ್ಯತೇ ॥ ೪೧ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ದ್ವಿತೀಯೇ ವೈಷ್ಣವಖಂಡೇ ಮಾರ್ಗಶೀರ್ಷಮಾಹಾತ್ಮ್ಯೇ ಬ್ರಹ್ಮವಿಷ್ಣುಸಂವಾದೇ "ಮತ್ಸ್ಯೋತ್ಸವಕಥನಂ" ನಾಮ ಚತುರ್ದಶೋಽಧ್ಯಾಯಃ

---

೩೭–೪೦. ಬಳಿಕ ಬ್ರಾಹ್ಮಣರಿಗೆ ವಿಶೇಷವಾಗಿ ಪರಮಾನ್ನ ಸಹಿತವಾದ ಭೋಜನವನ್ನು ಮಾಡಿಸಿ ಶಕ್ತ್ಯನುಸಾರವಾಗಿ ದಕ್ಷಿಣೆಯನ್ನು ಕೊಡಬೇಕು. ಬಳಿಕ ಭಾಗವತನು ತಾನೇ ಮೌನವನ್ನು ಧರಿಸಿದವನೂ, ಇಂದ್ರಿಯ ನಿಗ್ರಹಾನ್ವಿತನೂ ಆಗಿ ಇತರ ಬ್ರಾಹ್ಮಣರೊಡನೆ ಭೋಜನವನ್ನು ಮಾಡಬೇಕು. ಸತ್ಯವಂತರಲ್ಲಿ ಶ್ರೇಷ್ಠನೆ! ಈ ವಿಧವಾಗಿ ಯಾವನು ಮತ್ಸ್ಯೋತ್ಸವವನ್ನು ನೆರವೇರಿಸುವನೊ, ಅವನ ಪುಣ್ಯಫಲವನ್ನೂ ಮುಂದೆ ಹೇಳುವೆನು, ಕೇಳುವವನಾಗು. ಮನುಷ್ಯನಿಗೆ ಸಾವಿರ ಸಾವಿರ ಮುಖಗಳುಂಟಾದರೂ, ಬ್ರಹ್ಮನ ಆಯುಷ್ಯಕ್ಕೆ ಸಮಾನವಾದ ಆಯುಸ್ಸನ್ನು ಹೊಂದಿದರೂ, ಆ ಭಾಗವತನ ಧರ್ಮಾಚರಣೆಯ ಫಲವನ್ನು ಸಮಗ್ರವಾಗಿ ನಿರೂಪಿಸಲು ಸಾಧ್ಯವಾಗಬಹುದು.

೪೧. ಯಾವ ಮನುಷ್ಯನು ಭಕ್ತಿಯುಕ್ತನಾಗಿ ಉತ್ತಮವಾದ ಈ ದ್ವಾದಶೀ ವ್ರತಕಲ್ಪವನ್ನು ಇತರರಿಗೆ ಶ್ರವಣಮಾಡಿಸುವನೊ, ಮತ್ತು ಯಾವನು ಶ್ರದ್ಧೆಯಿಂದ ಕೇಳುವನೊ, ಅವನು ಸಕಲಪಾತಕಗಳಿಂದಲೂ ಮೋಕ್ಷವನ್ನು ಹೊಂದುವನು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀಸ್ಕಾಂದಮಹಾಪುರಾಣದ ಎರಡನೆಯ ವೈಷ್ಣವಖಂಡದ ಮಾರ್ಗಶೀರ್ಷಮಾಹಾತ್ಮ್ಯದ ಬ್ರಹ್ಮವಿಷ್ಣುಸಂವಾದದಲ್ಲಿ "ಮತ್ಸ್ಯೋತ್ಸವಕಥನ"ವೆಂಬ ಹದಿನಾಲ್ಕನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥ ಪಂಚದಶೋಽಧ್ಯಾಯಃ

### ಶ್ರೀ ಕೃಷ್ಣನಾಮಮಾಹಾತ್ಮ್ಯವರ್ಣನಂ

ಶ್ರೀ ಭಗವಾನುವಾಚ :—

ಯೇ ತ್ವಯಾ ವೈ ಕೃತಾಃ ಪ್ರಶ್ನಾಃ ಪೂರ್ವಂ ಪ್ರಶ್ನವಿದಾಂ ವರ ।
ತಾನ್ ವರ್ಣಯಿಷ್ಯೇ ಕ್ರಮಶೋ ನಿಶಾಮಯ ಸುನಿಶ್ಚಿತಂ ॥ ೧ ॥
ಸಹೋಮಾಸೇ ಚ ದೇವೋ ವೈ ಕೀರ್ತಿಯುಕ್ತೋ ಹಿ ಕೇಶವಃ ।
ತಸ್ಯ ಪೂಜಾ ಪ್ರಕರ್ತವ್ಯಾ ಯಥಾಪೂರ್ವಂ ಪ್ರಭಾಷಿತಂ ॥ ೨ ॥
ಬ್ರಾಹ್ಮಣಂ ಕೇಶವಂ ಸ್ಮೃತ್ವಾ ತತ್ಪತ್ನೀಂ ಕೀರ್ತಿಮೇವ ಚ ।
ದಂಪತೀ ವಿಧಿವತ್ಪೂಜ್ಯೌ ವಸ್ತ್ರಾಭರಣಧೇನುಭಿಃ ॥ ೩ ॥
ದಂಪತೀ ಪೂಜಿತೌ ವತ್ಸ ಪೂಜಿತೋಽಹಂ ನ ಸಂಶಯಃ ।
ತಸ್ಮಾದವಶ್ಯಂ ಸಂಪೂಜ್ಯೌ ದಂಪತೀ ಮಮ ತುಷ್ಟಿದೌ ॥ ೪ ॥

## ಕನ್ನಡದ ಅನುವಾದ

### ಶ್ರೀ ಕೃಷ್ಣನಾಮಮಾಹಾತ್ಮ್ಯ ವರ್ಣನ

೧. ಭಗವಂತನು ಹೇಳುತ್ತಾನೆ :—ಪೃಚ್ಛಕರಲ್ಲಿ ಉತ್ತಮನಾದ ಬ್ರಹ್ಮನೆ! ಪೂರ್ವದಲ್ಲಿ ನೀನು ಯಾವ ಯಾವ ಪ್ರಶ್ನೆಗಳನ್ನು ಕೇಳಿದ್ದೆಯೊ, ಅವುಗಳಿಗೆಲ್ಲ ಕ್ರಮವಾಗಿ ಉತ್ತರಗಳನ್ನು ಹೇಳುವೆನು. ಶಾಸ್ತ್ರ ನಿಶ್ಚಿತಗಳಾದ ಅವುಗಳನ್ನು ಶ್ರದ್ಧೆಯಿಂದ ಕೇಳು.

೨. ಮಾರ್ಗಶೀರ್ಷಮಾಸದಲ್ಲಿ ದೇವೋತ್ತಮನಾದ ಕೇಶವನು ಕೀರ್ತಿ ದೇವೀ ಸಮೇತನಾಗಿರುವನು. ಆದುದರಿಂದ ಹಿಂದೆ ಹೇಳಿರುವ ಪ್ರಕಾರದಿಂದ ಆತನ ಪೂಜೆಯು ಆ ಕಾಲದಲ್ಲಿಯೇ ಮಾಡಲ್ಪಡಬೇಕು.

೩. ಒಬ್ಬ ಬ್ರಾಹ್ಮಣನನ್ನು ಹೆಂಡತಿಯೊಡನೆ ಆಹ್ವಾನಿಸಿ ಆತನೇ ಕೇಶವ ನೆಂದೂ ಪತ್ನಿಯೇ ಕೀರ್ತಿಯೆಂದೂ ಅನುಸಂಧಾನಮಾಡಿಕೊಂಡು ಆ ದಂಪತಿ ಗಳನ್ನು ವಿಧಿವತ್ತಾಗಿ ಭಕ್ತನು ವಸ್ತ್ರ ಭೂಷಣ ಗೋದಾನಾದಿಗಳಿಂದ ಪೂಜಿಸ ಬೇಕು.

೪. ಪುತ್ರನೆ! ದಂಪತಿಗಳು ಪೂಜಿತರಾದರೆ ಖಂಡಿತವಾಗಿಯೂ ನಾನೇ ಪೂಜಿಸಲ್ಪಟ್ಟೆನೆಂದು ತಿಳಿ. ಆದುದರಿಂದ ನನಗೆ ಸಂತೋಷವನ್ನು ಮಾಡುವ ದಂಪತಿಗಳನ್ನು ಆ ಮಾಸದಲ್ಲಿ ಅವಶ್ಯಕವಾಗಿ ಪೂಜೆಮಾಡಬೇಕು.

ದಾನಂ ಚ ವಿವಿಧಂ ಕಾರ್ಯಂ ಮಮ ತುಷ್ಟಿಕರಂ ಪರಂ ।
ಗೋದಾನಂ ಭೂಮಿದಾನಂ ಚ ಸ್ವರ್ಣದಾನಂ ವಿಶೇಷತಃ ॥ ೫ ॥
ವಸ್ತ್ರದಾನಂ ತಥಾ ಶಯ್ಯಾ ತಥಾಽಲಂಕರಣಾನಿ ಚ ।
ಸದ್ಮದಾನಂ ಪ್ರಕರ್ತವ್ಯಂ ಮಮ ಸಂತೋಷಕಾರಕಂ ॥ ೬ ॥
ಸರ್ವೇಷಾಮೇವ ದಾನಾನಾಂ ವಿಶೇಷಂ ಚ ತ್ರಿಕಂ ಸ್ಮೃತಂ ।
ವಸುಂಧರಾ ತಥಾ ಧೇನುಃ ವಿದ್ಯಾದಾನಂ ತಥೈವ ಚ ॥ ೭ ॥
ದತ್ತೇ ದಾನತ್ರಿಕೇ ವತ್ಸ ಭವೇತ್ಪ್ರೀತಿರ್ಮಮಾಽತುಲಾ ।
ತಸ್ಮಾನ್ನರೈಸ್ತು ಕರ್ತವ್ಯಂ ಸಹೋಮಾಸೇ ತ್ರಿಕಂ ಶುಭಂ ॥ ೮ ॥
ಸ್ನಾನಸ್ಯ ಚ ವಿಧಿಸ್ಸಮ್ಯಕ್ ಪುರೈವೋಕ್ತೋ ಮಯಾಽನಘ ।
ಪೂಜಾ ಸ್ನಾನಂ ಚ ದಾನಂ ಚ ವಿಧಿರೇಷ ನ ಸಂಶಯಃ ॥ ೯ ॥
ಮಾರ್ಗಶೀರ್ಷೇ ಸಮಗ್ರಂ ತು ಏಕಭಕ್ತೇನ ಯಃ ಕ್ಷಿಪೇತ್ ।
ಭೋಜಯೇದ್ಯೋ ದ್ವಿಜಾನ್ ಭಕ್ತ್ಯಾ ಸ ಮುಚ್ಯೇದ್ವ್ಯಾಧಿಕಿಲ್ಬಿಷೈಃ॥ ೧೦ ॥

೫-೬. ನನಗೆ ಅತ್ಯಂತ ಪ್ರೀತಿಕರಗಳಾದ ಅನೇಕ ವಿಧಗಳಾದ ದಾನಗಳನ್ನೂ ಮಾಡಬೇಕು. ಗೋದಾನ, ಭೂಮಿದಾನ, ಹಿರಣ್ಯದಾನ, ವಸ್ತ್ರದಾನ, ಶಯ್ಯಾದಾನ, ಭೂಷಣದಾನಗಳನ್ನು ಮಾಡುವುದಲ್ಲದೆ ನನ್ನ ಪರಮಸಂತೋಷಕ್ಕೆ ವಿಶೇಷಕಾರಣವಾದ ಗೃಹದಾನವನ್ನೂ ಮಾಡಬೇಕು.

೭. ಸಕಲ ದಾನಗಳಲ್ಲಿಯೂ ಮೂರುದಾನಗಳು ಮಾತ್ರ ವಿಶೇಷ ಫಲದಾಯಕಗಳೆಂದು ಹೇಳಲ್ಪಟ್ಟಿರುವುವು. ಅವುಗಳೇ ಭೂದಾನ, ಗೋದಾನ ಮತ್ತು ವಿದ್ಯಾದಾನಗಳು.

೮. ಈ ಮೂರು ದಾನಗಳನ್ನು ಮಾಡುವುದರಿಂದ ನನಗೆ ಅಪರಿಮಿತವಾದ ಸಂತೋಷವುಂಟಾಗುವುದು. ಆದುದರಿಂದ ಶುಭವಾದ ಈ ದಾನತ್ರಯವು ಮಾರ್ಗಶೀರ್ಷಮಾಸದಲ್ಲಿ ಪ್ರತಿಯೊಬ್ಬ ಮಾನವನಿಗೂ ಅವಶ್ಯಕರ್ತವ್ಯವಾಗಿರುವುದು.

೯. ಎಲೈ ಪಾಪರಹಿತನೆ! ಸ್ನಾನದ ವಿಧಿಯು ನನ್ನಿಂದ ಮೊದಲೇ ಸಾಂಗವಾಗಿ ಹೇಳಲ್ಪಟ್ಟಿರುವುದು. ಪೂಜೆ, ಸ್ನಾನ ಮತ್ತು ದಾನ–ಇವುಗಳೇ ವಿಧಿವಿಹಿತಗಳೆನ್ನುವುದರಲ್ಲಿ ಸಂದೇಹವಿಲ್ಲ.

೧೦. ಯಾವನು ಮಾರ್ಗಶೀರ್ಷಮಾಸವನ್ನೆಲ್ಲ ಏಕಭುಕ್ತದಿಂದಲೇ ಕಳೆಯುತ್ತ ಭಕ್ತಿಯಿಂದ ನಿತ್ಯವೂ ಬ್ರಾಹ್ಮಣೋತ್ತಮರಿಗೆ ಭೋಜನವನ್ನು ಮಾಡಿಸುತ್ತಿರುವನೊ, ಅವನಿಗೆ ವ್ಯಾಧಿಗಳಾಗಲಿ ಪಾಪಗಳಾಗಲಿ ಸೋಕಲಾರವು.

ಕೃಷಿಭಾಗೀ ಬಹುಧನೋ ಬಹುಧಾನ್ಯಶ್ಚ ಜಾಯತೇ ।
ಕಿಮತ್ರ ಬಹುನೋಕ್ತೇನ ಶೃಣು ಗುಹ್ಯಂ ಪರಂ ಮಮ ॥ ೧೧ ॥
ಹುತಭುಗ್ಬ್ರಾಹ್ಮಣಶ್ಚೈವ ವದನಂ ಮಮ ಮಾನದ ।
ಬ್ರಾಹ್ಮಣಾಖ್ಯಂ ಮುಖಂ ಶ್ರೇಷ್ಠಂ ನ ತಥಾ ಹವ್ಯವಾಹನಃ ॥ ೧೨ ॥
ಬ್ರಾಹ್ಮಣಾಖ್ಯೇ ಮುಖೇ ಪುತ್ರ ಹುತಂ ಕೋಟಿಗುಣಂ ಭವೇತ್ ।
ಅಗ್ನ್ಯಾಖ್ಯಂ ಬ್ರಾಹ್ಮಣಾಧೀನಂ ಸ್ವತಂತ್ರಾ ಬ್ರಾಹ್ಮಣಾಃ ಕಿಲ ॥ ೧೩ ॥
ಸಶರ್ಕರಂ ಘೃತಯುತಂ ಪಾಯಸಂ ಶಶಿಸನ್ನಿಭಂ ।
ಹೋತವ್ಯಂ ಬ್ರಾಹ್ಮಣಮುಖೇ ಮಮತುಷ್ಟಿಕರಂ ಸುತ ॥ ೧೪ ॥

ಶುಭಮಂಡಲಮೋದಕ ಕೋಕರಸಂ
ಸುತ ಫೇನಿಕಯಾ ಘೃತಪೂರಯುತಂ ।
ಯಜ ವಿಪ್ರಮುಖೇ ಮಮ ತುಷ್ಟಿಕರಂ
ಯದಿ ಚೇಚ್ಛಸಿ ದಾರಸುತಾದಿ ಸುಖಂ ॥ ೧೫ ॥

೧೧. ಆತನು ಕೃಷಿಭೂಮಿಗೆ ಒಡೆಯನೂ, ಬಹುಧನವಂತನೂ, ಬಹುಧಾನ್ಯಸಮನ್ವಿತನೂ ಆಗುವನು. ಈ ವಿಷಯದಲ್ಲಿ ಹೆಚ್ಚು ಹೇಳುವುದರಿಂದೇನು? ನಾನು ಹೇಳುವ ಅತ್ಯಂತ ಗುಹ್ಯವಾದ ವಿಷಯವನ್ನು ಕೇಳು.

೧೨. ಎಲೈ ಪ್ರಿಯಸುತನೆ! ಅಗ್ನಿ ಮತ್ತು ಬ್ರಾಹ್ಮಣರಿಬ್ಬರೂ ನನಗೆ ಮುಖಗಳು. ಬ್ರಾಹ್ಮಣನೆಂಬ ಮುಖವೇ ಶ್ರೇಷ್ಠವೆನಿಸಿರುವಷ್ಟು ಅಗ್ನಿಮುಖವು ಪ್ರಸಿದ್ಧವಲ್ಲವು.

೧೩. ಬ್ರಾಹ್ಮಣನೆಂಬ ಮುಖದಲ್ಲಿ ಹೋಮಮಾಡಿದುದು ಕೋಟಿ ಗುಣಿತ ಫಲವನ್ನು ಕೊಡುವುದು. ಏಕೆಂದರೆ ಅಗ್ನಿಯೆಂಬ ಮುಖವು ಬ್ರಾಹ್ಮಣರ ಅಧೀನವೇ ಆಗಿರುವುದು. ಬ್ರಾಹ್ಮಣರು ಮಾತ್ರ ಯಾವಾಗಲೂ ಸ್ವತಂತ್ರರಾಗಿರುವರೇ ಅಲ್ಲವೆ!

೧೪. ಪುತ್ರನೆ! ಸಕ್ಕರೆಯಿಂದಲೂ, ತುಪ್ಪದಿಂದಲೂ ಕೂಡಿ ಚಂದ್ರಮಂಡಲದಂತೆ ಸ್ವಚ್ಛವಾಗಿರುವ ಪಾಯಸವು ಬ್ರಾಹ್ಮಣ ಮುಖದಲ್ಲಿ ಹೋಮ ಮಾಡಲ್ಪಡಬೇಕು. ಅದೇ ನನಗೆ ಸಂತೋಷಕರವಾದುದು.

೧೫. ಬ್ರಹ್ಮದೇವನೆ! ಪತ್ನೀಪುತ್ರಾದಿಗಳ ಸುಖವನ್ನು ಅಪೇಕ್ಷಿಸುವೆಯಾದರೆ ನನಗೆ ಸಂತೋಷವನ್ನುಂಟುಮಾಡುವಂತೆ ಸ್ವಚ್ಛಗಳಾದ ದೋಸೆಗಳು, ಮೋದಕಗಳು, ಕೋಕರಸಗಳು, ಫೇಣಿಗಳು, ಜಿಲೇಬಿಗಳು ಮುಂತಾದ ಭಕ್ಷ್ಯಭೋಜ್ಯಗಳಿಂದ ಬ್ರಾಹ್ಮಣನ ಮುಖದಲ್ಲಿ ಹೋಮಮಾಡಬೇಕು.

ಕುಮುದೇನ ಸಮಪ್ರಭಸೌರಭದಂ
ಶುಭಭಕ್ತಯುತಂ ತ್ವಥ ಮುದ್ಗಯುತಂ ।
ಸುರಭೀಕೃತಪುಷ್ಕಲಸರ್ಪಿಸಮಂ
ಕುರುವಿಪ್ರಮುಖೇ ಹವನಂ ಸಹೇ ॥ ೧೬ ॥
ಪಯಸಾ ಸಹ ಸರ್ಪಿಷಿ ಚ ಕ್ವಥಿತಂ
ಬಹುಖಾರಿಕ ಚಾರುಫಲೈಸ್ಸಿತಯಾ ।
ಸಹ ಕರ್ಪೂರನಾರಿಫಲೇನ ಸಮಂ
ಯುತಸೀಕರಕಂ ಸುತಶುಭ್ರಕರಂ ॥ ೧೭ ॥
ವ್ಯಂಜನಾನಿ ಚ ಶುಭ್ರಾಣಿ ಮನೋಜ್ಞಾನಿ ಪ್ರಿಯಾಣಿ ಚ ।
ಕರ್ತವ್ಯಾನಿ ಸಹೋಮಾಸೇ ಬ್ರಾಹ್ಮಣಾರ್ಥೇ ಚತುರ್ಮುಖ ॥ ೧೮ ॥
ಪ್ರಿಯಾ ಶಿಖರಿಣೀ ಕಾರ್ಯಾ ಚಾನ್ಯತ್ತೇಷಾಂ ಪ್ರಿಯಂ ಚ ಯತ್ ।
ಕೃತ್ವೈವಂ ಭೋಜಯೇದ್ವಿಪ್ರಾನ್ ಶ್ರದ್ಧಯಾ ಪರಯಾ ಸುತ ॥ ೧೯ ॥
ರಸಾಸ್ವಾದನಪೂರ್ವಂ ಹಿ ಭುಂಜತೇ ವೈ ಯಥಾ ಯಥಾ ।
ತಥಾ ತಥಾ ಮಮ ಪ್ರೀತಿರ್ಜಾಯತೇ ಭುವಿ ದುರ್ಲಭಾ ॥ ೨೦ ॥

---

೧೬. ಕುಮುದಗಳಿಗೆ ಸಮನಾದ ಕಾಂತಿಸೌರಭ್ಯಗಳಿಂದ ಕೂಡಿದ ನಿರ್ಮಲವಾದ ಅನ್ನದಿಂದಲೂ, ಹೆಸರುಬೇಳೆಗಳಿಂದಲೂ, ಹೆಚ್ಚಾಗಿ ಸುವಾಸನೆಯಿಂದ ಕೂಡಿದ ಸಾಸುವೆಯನ್ನು ಒಗ್ಗರಿಸಿದ ಉಪಹಾರಗಳಿಂದಲೂ ಮಾರ್ಗಶೀರ್ಷಮಾಸದಲ್ಲಿ ಬ್ರಾಹ್ಮಣೋತ್ತಮರ ಮುಖವೆಂಬ ಅಗ್ನಿಯಲ್ಲಿ ಹೋಮವನ್ನು ಮಾಡು.

೧೭. ಎಲೈ ಸುತನೆ! ಹಾಲು, ಸಾಸುವೆ, ಖಾರವಾದ ಚಾರುಫಲಗಳು, ಸಕ್ಕರೆ, ಪಚ್ಚಕರ್ಪೂರ, ತೆಂಗಿನಕಾಯಿ ಮುಂತಾದ ಪದಾರ್ಥಗಳಿಂದ ಮಾಡಿದ ಸೀಕರಕವು ಮಂಗಳಪ್ರದವಾದುದು.

೧೮. ಓ ಚತುರ್ಮುಖ! ಪರಿಶುದ್ಧಗಳೂ ಮನೋಹರಗಳೂ, ಅಪೇಕ್ಷಿತಗಳೂ, ಆದ ಅನೇಕ ವ್ಯಂಜನಗಳು ಮಾರ್ಗಶೀರ್ಷಮಾಸದಲ್ಲಿ ಬ್ರಾಹ್ಮಣರಿಗೋಸ್ಕರ ಸಿದ್ಧಗೊಳಿಸಲ್ಪಡಬೇಕು.

೧೯. ನನಗೆ ಪ್ರಿಯತಮವಾದ ಶಿಖರಣೆಯನ್ನು ಮಾಡಬೇಕು. ಮತ್ತು ಬ್ರಾಹ್ಮಣರಿಗೆ ಪ್ರಿಯಗಳಾದ ಇತರ ಪದಾರ್ಥಗಳನ್ನೂ ಮಾಡಿಸಬೇಕು. ಇಂತು ಎಲ್ಲವನ್ನೂ ಸಿದ್ಧಗೊಳಿಸಿ ಅತ್ಯಂತ ಶ್ರದ್ಧೆಯಿಂದ ಬ್ರಾಹ್ಮಣರಿಗೆ ಭೋಜನವನ್ನು ಮಾಡಿಸಬೇಕು.

೨೦. ಆ ಬ್ರಾಹ್ಮಣೋತ್ತಮರು ಷಡ್ರಸಗಳನ್ನು ಸವಿಯುತ್ತ ಎಷ್ಟೆಷ್ಟು ಸಂತೋಷಗೊಳ್ಳುವರೊ, ಅಷ್ಟೂ ಭೂಲೋಕದಲ್ಲಿ ದುರ್ಲಭವಾದ ಸಂತೋಷವು ನನಗೆ ಭಕ್ತನಲ್ಲಿ ಉಂಟಾಗುವುದು.

ತಸ್ಮಾತ್ತತ್ತತ್ತಥಾ ಕಾರ್ಯಂ ಯಥಾ ತುಷ್ಯಂತಿ ಬ್ರಾಹ್ಮಣಾಃ ।
ತುಷ್ಟೈಸ್ತೈಶ್ಚಾಪ್ಯಹಂ ತುಷ್ಟೋ ಭವಾಮೀಹ ನ ಸಂಶಯಃ ॥ ೨೧ ॥
ಶ್ರದ್ಧತ್ಸ್ವ ತ್ವಂ ಚತುರ್ವಕ್ತ್ರ ನ ತೇ ಮಿಥ್ಯಾ ಬ್ರವೀಮ್ಯಹಂ ।
ಏತದ್ಗುಹ್ಯಂ ಮಯಾ ಪ್ರೋಕ್ತಂ ಶ್ರೇಯೋರ್ಥಂ ತವ ಮಾನದ ॥ ೨೨ ॥
ಆಕ್ರೋಶಯಂತಿ ಯದಿ ತೇ ಹ್ಯಥವಾ ಪ್ರಹರಂತಿ ಚೇತ್ ।
ತಥಾಪಿ ತೇ ನಮಸ್ಕಾರ್ಯಾ ಮಮ ಪ್ರೀತ್ಯಾಹಿ ಮಾನದ ॥ ೨೩ ॥
ಏವಂ ಕಾರ್ಯಂ ಸದಾ ಪುತ್ರ ಮಾರ್ಗಶೀರ್ಷೇ ವಿಶೇಷತಃ ।
ಯದುಕ್ತಂ ಭವತಾ ಬ್ರಹ್ಮನ್ ಭೋಕ್ತವ್ಯಂ ಕಿಂ ಶೃಣುಷ್ವ ತತ್ ॥ ೨೪ ॥
ಭೋಕ್ತವ್ಯಂ ಮಮ ಚೋಚ್ಛಿಷ್ಟಂ ಮಮ ಭಕ್ತಿಪರಾಯಣೈಃ ।
ಪವಿತ್ರಕರಣಂ ಪುತ್ರ ಪಾಪಿನಾಮಪಿ ಮುಕ್ತಿದಂ ॥ ೨೫ ॥
ಮಮಾಸನಸ್ಯ ಶೇಷಂ ಚ ಯೋ ಭುನಕ್ತಿ ದಿನೇ ದಿನೇ ।
ಸಿಕ್ಥೇ ಸಿಕ್ಥೇ ಭವೇತ್ಪುಣ್ಯಂ ಚಾಂದ್ರಾಯಣಶತೋದ್ಭವಂ ॥ ೨೬ ॥

---

೨೧. ಆದುದರಿಂದ ಪ್ರತಿಯೊಂದನ್ನೂ ಬ್ರಾಹ್ಮಣರು ಹೇಗೆ ತೃಪ್ತಿಗೊಳ್ಳುವರೊ, ಹಾಗೆಯೇ ಮಾಡಬೇಕು. ಅವರು ಸಂತುಷ್ಟರಾದರೆ ನಾನೂ ಸಂತೋಷಪಡುವೆನೆಂಬುದರಲ್ಲಿ ಸಂಶಯವಿಲ್ಲ.

೨೨. ಎಲೈ ಚತುರಾನನನೆ! ನನ್ನ ಮಾತುಗಳಲ್ಲಿ ನಂಬಿಕೆಯುಳ್ಳವನಾಗು, ನಾನು ನಿನಗೆ ಸುಳ್ಳನ್ನು ಹೇಳುವುದಿಲ್ಲ. ನಿನ್ನ ಶ್ರೇಯಸ್ಸಿಗಾಗಿಯೇ ನಾನು ಅತ್ಯಂತ ಗೂಢತರವಾದ ಈ ವಿಷಯವನ್ನು ಹೇಳಿರುವೆನು.

೨೩. ಆ ಬ್ರಾಹ್ಮಣರು ಕೋಪಗೊಂಡರೂ, ಭಾಗವತನನ್ನು ಹೊಡೆದರೂ, ನನ್ನ ಪ್ರೀತಿಯನ್ನು ಸಂಪಾದಿಸಲೆಳಸುವವನು ಅವರಿಗೆ ಕೂಡ ನಮಸ್ಕಾರವನ್ನು ಮಾಡಲೇಬೇಕು.

೨೪. ಎಲೈ ಪುತ್ರನೆ! ಇಂತು ಬ್ರಾಹ್ಮಣಭೋಜನಾದಿಗಳನ್ನು ಯಾವಾಗಲೂ ಮಾಡಬೇಕು. ಮಾರ್ಗಶೀರ್ಷಮಾಸದಲ್ಲಿ ವಿಶೇಷವಾಗಿ ಈ ನಿಯಮವನ್ನು ಪಾಲಿಸಬೇಕು. ಆಗ ಏನನ್ನು ಭೋಜನಮಾಡಬೇಕೆಂದು ನೀನು ಮೊದಲು ಕೇಳಿದ ಪ್ರಶ್ನೆಗೆ ಉತ್ತರವನ್ನು ಕೇಳು.

೨೫. ನನ್ನಲ್ಲಿ ಭಕ್ತಿಯನ್ನಿಟ್ಟಿರುವವರು ನನಗಿತ್ತ ನೈವೇದ್ಯದ ಶೇಷವನ್ನು ಮಾತ್ರ ಊಟಮಾಡಬೇಕು. ಪುತ್ರನೆ! ನನ್ನ ನೈವೇದ್ಯವು ಶುದ್ಧಿಯನ್ನುಂಟುಮಾಡುವುದೂ, ಪಾಪಿಗಳಿಗೂ ಮೋಕ್ಷದಾಯಕವಾದುದೂ ಆಗಿರುವುದು.

೨೬. ನನ್ನ ನೈವೇದ್ಯಾನ್ನವನ್ನು ಯಾವನು ಪ್ರತಿದಿನದಲ್ಲಿಯೂ ಸ್ವೀಕರಿಸುತ್ತಿರುವನೊ, ಅವನಿಗೆ ಪ್ರತಿಯೊಂದು ತುತ್ತಿಗೂ ನೂರು ಚಾಂದ್ರಾಯಣಗಳನ್ನಾಚರಿಸಿದ ಪುಣ್ಯವು ಲಭಿಸುವುದು.

ಅವಶಿಷ್ಟಂ ತಥೋಚ್ಛಿಷ್ಟಂ ಭಕ್ತಾನಾಂ ಭೋಜನದ್ವಯಂ ।
ನಾನ್ಯದ್ವೈ ಭೋಜನಂ ತೇಷಾಂ ಭುಕ್ತ್ವಾ ಚಾಂದ್ರಾಯಣಂ ಚರೇತ್ ॥
ಅನರ್ಪಯಿತ್ವಾ ಯೋ ಭುಂಕ್ತೇ ಅನ್ನಪಾನಾದಿಕಂ ಚ ಯತ್ ।
ಶ್ವಾನವಿಷ್ಠಾಸಮಂ ಚಾನ್ನಂ ಪಾನಂ ಚ ಮದಿರಾಸಮಂ ॥ ೨೮ ॥
ತಸ್ಮಾನ್ಮಾಮರ್ಪಯೇತ್ಪುತ್ರ ಅನ್ನಪಾನಾದಿ ಚೌಷಧಂ ।
ಭಕ್ಷಯೇತ್ಪರಯಾ ಭಕ್ತ್ಯಾ ಅಶುಚೇಶ್ಶುಚಿಕಾರಕಂ ॥ ೨೯ ॥
ತೀರ್ಥಯಜ್ಞಾದಿಕಫಲಂ ಕಲಿದೋಷವಿನಾಶನಂ ।
ಮಮೋಚ್ಛಿಷ್ಟಂ ಸುಗತಿದಂ ಅಪಿ ದುಷ್ಕೃತಕರ್ಮಣಾಂ ॥ ೩೦ ॥
ಅನ್ಯೇಷಾಂ ದೇವತಾನಾಂ ಚ ನಗೃಹ್ಣೀಯಾಚ್ಚ ಭಕ್ಷಿತಂ ।
ಅಭಕ್ತಾನಾಂ ಚ ಪಕ್ವಾನ್ನಂ ಭುಕ್ತ್ವಾ ಚ ನರಕಂ ವ್ರಜೇತ್ ॥ ೩೧ ॥
ವಕ್ತವ್ಯಮೇವ ಯತ್ಪ್ರೋಕ್ತಂ ತಚ್ಛೃಣುಷ್ವ ಸಮಾಹಿತಃ ।
ಕಥಯಿಷ್ಯೇ ತವ ಪ್ರೀತ್ಯಾ ಅಪಿಗುಹ್ಯತರಂ ಮಮ ॥ ೩೨ ॥

---

೨೭. ನನ್ನ ಯಜ್ಞಾವಶೇಷ ಮತ್ತು ನೈವೇದ್ಯಶೇಷ ಇವೆರಡೇ ನನ್ನ ಭಕ್ತರಿಗೆ ಭೋಜನಪದಾರ್ಥಗಳು. ಅವರಿಗೆ ಮತ್ತೆಯಾವುದೂ ಆಹಾರವಾಗಲಾರದು. ಇತರ ಪದಾರ್ಥಗಳನ್ನು ಸೇವಿಸಿದರೆ, ಆ ಅಪರಾಧವನ್ನು ಚಾಂದ್ರಾಯಣ ವ್ರತಾಚರಣೆಯಿಂದ ಕಳೆದುಕೊಳ್ಳಬೇಕು.

೨೮. ಯಾವನು ಅನ್ನಪಾನಾದಿಗಳನ್ನು ನನಗೆ ಅರ್ಪಿಸದೆ ಭೋಜನ ಮಾಡುವನೊ, ಅವನು ತಿನ್ನುವ ಅನ್ನವು ನಾಯಿಯ ಅಮೇಧ್ಯಕ್ಕೆ ಸಮಾನವಾದುದು. ಮತ್ತು ಪಾನವು ಹೆಂಡಕ್ಕೆ ಸಮವಾದುದು.

೨೯. ಎಲೈ ಪುತ್ರನೆ! ಆದುದರಿಂದ ಅನ್ನಪಾನಗಳೇ ಮೊದಲಾದ ಸಕಲ ಪದಾರ್ಥಗಳನ್ನೂ ಮೊದಲು ನನಗೆ ಅರ್ಪಿಸಬೇಕು. ಬಳಿಕ ಅವುಗಳನ್ನು ಅತ್ಯಂತ ಭಕ್ತಿಯಿಂದ ಭೋಜನಮಾಡುವುದರಿಂದ ಅಶುಚಿಯಾದವನೂ ಕೂಡ ಪರಿಶುದ್ಧನಾಗುವನು.

೩೦. ನನ್ನ ನೈವೇದ್ಯವು ದುಷ್ಕೃತ್ಯನಿರತರಿಗೂ ಕೂಡ ಸಕಲತೀರ್ಥಗಳ ಮತ್ತು ಯಜ್ಞಗಳ ಫಲವನ್ನು ಕೊಡುವುದು. ಕಲಿಕೃತ ಸಕಲದೋಷಗಳನ್ನೂ ಹೋಗಲಾಡಿಸುವುದು. ಮತ್ತು ಸದ್ಗತಿಯನ್ನು ಕೊಡುವುದು.

೩೧. ನನ್ನ ಭಕ್ತನು ಇತರ ದೇವತೆಗಳಿಗೆ ಮಾಡಿದ ನೈವೇದ್ಯವನ್ನು ಸೇವಿಸಬಾರದು. ವಿಷ್ಣುಭಕ್ತರಲ್ಲದವರ ಮನೆಗಳಲ್ಲಿ ಮಾಡಿದ ಪಕ್ವಾನ್ನಗಳನ್ನು ತಿನ್ನುವುದರಿಂದ ಭಾಗವತನಾದವನು ನರಕವನ್ನು ಹೊಂದುವನು.

೩೨. ಇನ್ನು ಹರಿದಿನಗಳಲ್ಲಿ ಏನನ್ನು ಹೇಳಬೇಕೆಂಬುದನ್ನು ಕೇಳಿದೆಯಲ್ಲವೆ. ಅದರ ಉತ್ತರವನ್ನು ಶಾಂತಮನಸ್ಕನಾಗಿ ಕೇಳು. ಈ ವಿಷಯವು

ಮಮ ನಾಮ ಪ್ರವಕ್ತವ್ಯಂ ಸಹೇ ಚೈವ ವಿಶೇಷತಃ ।
ಕೃಷ್ಣಕೃಷ್ಣೇತಿ ವಕ್ತವ್ಯಂ ಮಮ ಪ್ರೀತಿಕರಂ ಪರಂ ॥ ೩೩ ॥
ಪ್ರತಿಜ್ಞೈಷಾ ಚ ಮೇ ಪುತ್ರ ನ ಜಾನಂತಿ ಸುರಾಸುರಾಃ ।
ಮನಸಾ ಕರ್ಮಣಾ ವಾಚಾ ಯೋ ಮೇ ಶರಣಮಾಗತಃ ॥ ೩೪ ॥
ಸಹಿ ಸರ್ವಾಮವಾಪ್ನೋತಿ ಕಾಮನಾಮಿಹ ಲೌಕಿಕೀಂ ।
ಸರ್ವೋತ್ಕೃಷ್ಟಂ ಚ ವೈಕುಂಠಂ ಮತ್ಪ್ರಿಯಾಂ ಕಮಲಾಮಪಿ ॥ ೩೫ ॥
ಕೃಷ್ಣ ಕೃಷ್ಣೇತಿ ಕೃಷ್ಣೇತಿ ಯೋ ಮಾಂ ಸ್ಮರತಿ ನಿತ್ಯಶಃ ।
ಜಲಂ ಭಿತ್ವಾ ಯಥಾ ಪದ್ಮಂ ನರಕಾದುದ್ಧರಾಮ್ಯಹಂ ॥ ೩೬ ॥
ವಿನೋದೇನಾಪಿ ದಂಭೇನ ಮೌಢ್ಯಾಲ್ಲೋಭಾಚ್ಛಲಾದಪಿ ।
ಯೋ ಮಾಂ ಭಜತ್ಯಸೌ ವತ್ಸ ಮದ್ಭಕ್ತೋ ನಾವಸೀದತಿ ॥ ೩೭ ॥
ಯೇ ವೈ ಪಠಂತಿ ಕೃಷ್ಣೇತಿ ಮರಣೇ ಪರ್ಯುಪಸ್ಥಿತೇ ।
ಯದಿ ಪಾಪಯುತಾಃ ಪುತ್ರ ನ ಪಶ್ಯಂತಿ ಯಮಂ ಕ್ವಚಿ ॥ ೩೮

---

ಅತ್ಯಂತ ಗುಹ್ಯತಮವಾದರೂ ನಿನ್ನಲ್ಲಿರುವ ಪ್ರೀತಿಯಿಂದ ವಿಸ್ತಾರವಾಗಿ ತಿಳಿಸುವೆನು.

೩೩. ಮಾರ್ಗಶೀರ್ಷಮಾಸದಲ್ಲಿ ವಿಶೇಷವಾಗಿ "ಕೃಷ್ಣ, ಕೃಷ್ಣ" ಎಂಬ ನನ್ನ ನಾಮವನ್ನೇ ಯಾವಾಗಲೂ ನುಡಿಯುತ್ತಿರಬೇಕು. ಆ ನಾಮವೇ ನನಗೆ ವಿಶೇಷ ಸಂತೋಷವನ್ನುಂಟುಮಾಡುವುದು.

೩೪–೩೫. ಪುತ್ರನೆ! ನನ್ನದೊಂದು ಪ್ರತಿಜ್ಞೆಯಿರುವುದು. ಅದನ್ನು ಯಾವ ದೇವತೆಗಳೂ ದಾನವರೂ ತಿಳಿದಿಲ್ಲ. ಯಾವನು ಮನಸ್ಸಿನಿಂದಲೂ, ವಾಕ್ಕಿನಿಂದಲೂ, ಶರೀರದಿಂದಲೂ ನನ್ನನ್ನೇ ಶರಣುಹೊಂದಿರುವನೊ, ಅವನು ಈ ಲೋಕದಲ್ಲಿ ಸಕಲ ಭೋಗಭಾಗ್ಯಗಳನ್ನೂ ಹೊಂದುವನು. ನನಗೆ ಪ್ರಿಯೆಯಾದ ಲಕ್ಷ್ಮಿಯನ್ನೂ ಸರ್ವೋತ್ಕೃಷ್ಟವಾದ ವೈಕುಂಠವನ್ನೂ ಪಡೆಯುವನು.

೩೬. 'ಕೃಷ್ಣ, ಕೃಷ್ಣ' ಎಂಬುದಾಗಿ ಸರ್ವಕಾಲಗಳಲ್ಲಿಯೂ ಯಾವನು ನನ್ನನ್ನೇ ಸ್ಮರಿಸುತ್ತಿರುವನೊ, ಜಲವನ್ನು ಭೇದಿಸಿ ಮೇಲಕ್ಕೆದ್ದ ಪದ್ಮದಂತಿರುವ ಅವನನ್ನು ನಾನು ನರಕದಿಂದ ಉದ್ಧರಿಸುವೆನು.

೩೭–೩೮. ಎಲೈ ವತ್ಸನೆ! ಹಾಸ್ಯಕ್ಕಾಗಲಿ, ಗರ್ವದಿಂದಾಗಲಿ, ಮೌಢ್ಯದಿಂದಾಗಲಿ, ಲೋಭದಿಂದಾಗಲಿ, ಹಟದಿಂದಾಗಲಿ ಯಾವನು ನನ್ನ ನಾಮವನ್ನು ಜಪಿಸುವನೊ, ಅವನೇ ನನ್ನ ಭಕ್ತನು. ಅವನು ಎಂದಿಗೂ ಕ್ಲೇಶಗಳಿಗೊಳಗಾಗುವುದಿಲ್ಲ. ಯಾವ ಜನರು ಮೃತ್ಯುವು ಸನ್ನಿಹಿತವಾದಾಗಲಾದರೂ ನನ್ನ ನಾಮವನ್ನು ಪಠಿಸುವರೊ, ಅವರು ಜನ್ಮಾರಭ್ಯ ಪಾಪಗಳನ್ನು ಮಾಡಿದ್ದರೂ ನನ್ನ ಆ ನಾಮದ ಬಲದಿಂದ ಯಮನನ್ನೆಂದಿಗೂ ನೋಡಲಾರರು.

ಪೂರ್ವೇ ವಯಸಿ ಪಾಪಾನಿ ಕೃತಾನ್ಯಪಿ ಚ ಕೃತ್ಸ್ನಶಃ ।
ಅಂತಕಾಲೇ ಚ ಕೃಷ್ಣೇತಿ ಸ್ಮೃತ್ವಾ ಮಾಮೇತ್ಯಸಂಶಯಂ ॥ ೩೯ ॥
ನಮಃ ಕೃಷ್ಣಾಯ ಮಹತೇ ವಿವಶೋಽಪಿ ವದೇದ್ಯದಿ ।
ಧ್ರುವಂ ಪದಮವಾಪ್ನೋತಿ ಮರಣೇ ಪರ್ಯುಪಸ್ಥಿತೇ ॥ ೪೦ ॥
ಶ್ರೀಕೃಷ್ಣೇತಿ ಕೃತೋಚ್ಚಾರೈಃ ಪ್ರಾಣೈರ್ಯದಿ ವಿಯುಜ್ಯತೇ ।
ದೂರಸ್ಥಃ ಪಶ್ಯತಿ ಚ ತಂ ಸ್ವರ್ಗತಂ ಪ್ರೇತನಾಯಕಃ ॥ ೪೧ ॥
ಸ್ಮಶಾನೇ ಯದಿ ರಥ್ಯಾಯಾಂ ಕೃಷ್ಣಕೃಷ್ಣೇತಿ ಜಲ್ಪತಿ ।
ಮ್ರಿಯತೇ ಯದಿ ಚೇತ್ಪುತ್ರ ಮಾಮೇವೈತಿ ನ ಸಂಶಯಃ ॥ ೪೨ ॥
ದರ್ಶನಾನ್ಮಮಭಕ್ತಾನಾಂ ಮೃತ್ಯುಮಾಪ್ನೋತಿ ಯಃ ಕ್ವಚಿತ್ ।
ವಿನಾ ಮತ್ಸ್ಮರಣಾತ್ಪುತ್ರ ಮುಕ್ತಿಮೇತಿ ಸ ಮಾನವಃ ॥ ೪೩ ॥
ಪಾಪಾನಲಸ್ಯ ದೀಪ್ತಸ್ಯ ಭಯಂ ಮಾ ಕುರು ಪುತ್ರಕ ।
ಶ್ರೀಕೃಷ್ಣನಾಮಮೇಘೋತ್ಥೈಃ ಸಿಚ್ಯತೇ ನೀರಬಿಂದುಭಿಃ ॥ ೪೪ ॥

---

೩೯. ಪೂರ್ವವಯಸ್ಸಿನಲ್ಲಿ ಅನೇಕ ಪಾತಕಗಳನ್ನು ಅನೇಕವೇಳೆ ಮಾಡಿದ್ದರೂ, ಅಂತ್ಯಕಾಲದಲ್ಲಿ ಶ್ರೀಕೃಷ್ಣನೆಂಬ ನನ್ನ ನಾಮವನ್ನು ಸ್ಮರಿಸುವುದರಿಂದ ಮಾನವನು ನಿಸ್ಸಂಶಯವಾಗಿಯೂ ನನ್ನನ್ನೇ ಸೇರುವನು.

೪೦. ಮರಣವು ಸನ್ನಿಹಿತವಾಗಿರಲು, 'ಮಹಾತ್ಮನಾದ ಕೃಷ್ಣನಿಗೆ ನಮಸ್ಕಾರವು' ಎಂಬುದಾಗಿ ಅಜ್ಞಾನದಲ್ಲಿ ನುಡಿದರೂ ಕೂಡ ಆ ಮನುಷ್ಯನು ಶಾಶ್ವತವಾದ ವೈಕುಂಠಪದವಿಯನ್ನು ಪಡೆಯುವನು.

೪೧. ಶ್ರೀ ಕೃಷ್ಣನ ನಾಮವನ್ನುಚ್ಚರಿಸುತ್ತಲೇ ಯಾವನು ಪ್ರಾಣಗಳನ್ನು ತ್ಯಜಿಸುವನೊ, ಅವನು ಸ್ವರ್ಗಕ್ಕೆ ಪ್ರಯಾಣಮಾಡುತ್ತಿರುವುದನ್ನು ಯಮನು ದೂರದಲ್ಲಿಯೇ ನಿಂತು ನೋಡುತ್ತಿರುವನು.

೪೨. ಮಗನೆ! ಸ್ಮಶಾನದಲ್ಲಿಯಾಗಲಿ, ಬೀದಿಯಲ್ಲಾಗಲಿ 'ಕೃಷ್ಣ, ಕೃಷ್ಣ' ಎಂಬುದಾಗಿ ನನ್ನ ನಾಮವನ್ನು ಉಚ್ಚರಿಸುತ್ತ ಯಾವನು ಸಾಯುವನೊ, ಅವನು ನನ್ನನ್ನೇ ಪಡೆಯುವುದರಲ್ಲಿ ಸಂದೇಹವಿಲ್ಲ.

೪೩. ಯಾವ ಮಾನವನು ನನ್ನ ಭಕ್ತರ ದರ್ಶನವನ್ನು ಮಾಡುತ್ತ ಮರಣವನ್ನು ಹೊಂದುವನೊ, ಅವನು ಎಲ್ಲಿದ್ದರೂ ನನ್ನ ಸ್ಮರಣೆಯಿಲ್ಲದೆಯೂ ಕೂಡ ಮೋಕ್ಷವನ್ನು ಪಡೆಯುವನು.

೪೪. ಪುತ್ರನೆ! ಭಯಂಕರವಾಗಿ ಪ್ರಜ್ವಲಿಸುತ್ತಿರುವ ಪಾಪಗಳೆಂಬ ಬೆಂಕಿಯ ದೆಸೆಯಿಂದ ನೀನು ಭಯಪಡಬೇಡ. ಶ್ರೀಕೃಷ್ಣನ ನಾಮವೆಂಬ ಮೇಘದಿಂದ ಬೀಳುತ್ತಿರುವ ನೀರಿನ ಹನಿಗಳಿಂದ ಆ ದಾವಾನಲವು ನಿಶ್ಶೇಷವಾಗಿ ಆರಿಹೋಗುವುದು.

ಕಲಿಕಾಲಭುಜಂಗಸ್ಯ ತೀಕ್ಷ್ಣದಂಷ್ಟ್ರಸ್ಯ ಕಿಂ ಭಯಂ ।
ಶ್ರೀಕೃಷ್ಣ ನಾಮದಾರೋತ್ಥ ವಹ್ನಿದಗ್ಧಃ ಸ ನಶ್ಯತಿ ॥ ೪೫ ॥
ಪಾಪಪಾವಕದಗ್ಧಾನಾಂ ಕರ್ಮಚೇಷ್ಟಾವಿಯೋಗಿನಾಂ ।
ಭೇಷಜಂ ನಾಸ್ತಿ ಮರ್ತ್ಯಾನಾಂ ಶ್ರೀಕೃಷ್ಣಸ್ಮರಣಂ ವಿನಾ ॥ ೪೬ ॥
ಪ್ರಯಾಗೇ ವೈ ಯಥಾ ಗಂಗಾ ಶುಕ್ಲತೀರ್ಥೇ ಚ ನರ್ಮದಾ ।
ಸರಸ್ವತೀ ಕುರುಕ್ಷೇತ್ರೇ ತದ್ವಚ್ಛ್ರೀಕೃಷ್ಣಕೀರ್ತನಂ ॥ ೪೭ ॥
ಭವಾಂಬೋಧಿನಿಮಗ್ನಾನಾಂ ಮಹಾಪಾಪೋರ್ಮಿಪಾತಿನಾಂ ।
ನ ಗತಿರ್ಮಾನವಾನಾಂಚ ಶ್ರೀಕೃಷ್ಣಸ್ಮರಣಂ ವಿನಾ ॥ ೪೮ ॥
ಮೃತ್ಯುಕಾಲೇಽಪಿ ಮರ್ತ್ಯಾನಾಂ ಪಾಪಿನಾಂ ತದನಿಚ್ಛತಾಂ ।
ಗಚ್ಛತಾಂ ನಾಸ್ತಿ ಪಾಥೇಯಂ ಶ್ರೀಕೃಷ್ಣಸ್ಮರಣಂ ವಿನಾ ॥ ೪೯ ॥
ತತ್ರ ಪುತ್ರ ಗಯಾ ಕಾಶೀ ಪುಷ್ಕರಂ ಕುರುಜಾಂಗಲಂ ।
ಪ್ರತ್ಯಹಂ ಮಂದಿರೇ ಯಸ್ಯ ಕೃಷ್ಣಕೃಷ್ಣೇತಿ ಕೀರ್ತನಂ ॥ ೫೦ ॥

---

೪೫. ಕಲಿಯುಗವೆಂಬ ತೀಕ್ಷ್ಣದಂಷ್ಟ್ರಾಯುಧಗಳುಳ್ಳ ಕಾಲಸರ್ಪಕ್ಕೆ ಮಾನವರು ಏಕೆ ಹೆದರಬೇಕು? ಶ್ರೀ ಕೃಷ್ಣನಾಮವೆಂಬ ಕಾಷ್ಠದಲ್ಲಿ ಹುಟ್ಟಿದ ಬೆಂಕಿಯು ಅದನ್ನು ಸುಟ್ಟು ನಾಶಮಾಡುವುದು.

೪೬. ಪಾಪವೆಂಬ ಅಗ್ನಿಯಲ್ಲಿ ಸುಡಲ್ಪಟ್ಟು ಸತ್ಕರ್ಮವ್ಯಾಪಾರವರ್ಜಿತರಾದವರಿಗೆ ಶ್ರೀ ಕೃಷ್ಣಸ್ಮರಣೆಯೊಂದಲ್ಲದೆ ಮತ್ತೆ ಬೇರೆ ಯಾವ ಔಷಧವೂ ದೊರೆಯಲಾರದು.

೪೭. ಪ್ರಯಾಗದಲ್ಲಿ ಗಂಗಾಪ್ರವಾಹದಂತೆಯೂ, ಶುಕ್ಲತೀರ್ಥದಲ್ಲಿ ನರ್ಮದಾನದಿಯಂತೆಯೂ, ಕುರುಕ್ಷೇತ್ರದಲ್ಲಿ ಸರಸ್ವತಿಯಂತೆಯೂ ಶ್ರೀ ಕೃಷ್ಣ ನಾಮಸ್ಮರಣೆಯು ಮೋಕ್ಷದಾಯಕವಾದುದು.

೪೮. ಸಂಸಾರವೆಂಬ ಸಮುದ್ರದಲ್ಲಿ ಬಿದ್ದು ಮಹಾಪಾತಕಗಳೆಂಬ ಅಲೆಗಳ ಹೊಡೆತಕ್ಕೆ ಸಿಕ್ಕಿ ನರಳುತ್ತಿರುವ ಮನುಷ್ಯರಿಗೆ ಶ್ರೀ ಕೃಷ್ಣಸ್ಮರಣೆಯಲ್ಲದೆ ಬೇರೆ ಉದ್ಧಾರೋಪಾಯವಿಲ್ಲ.

೪೯. ಪಾಪಿಗಳಾದ ಮಾನವರು ಅಪೇಕ್ಷಿಸದಿದ್ದರೂ ಮೃತ್ಯುವು ಖಂಡಿತವಾಗಿಯೂ ಸಂಭವಿಸುವುದು. ಮರಣಕಾಲದಲ್ಲಿ ಪರಲೋಕಕ್ಕೆ ಪ್ರಯಾಣ ಮಾಡುವವರಿಗೆ ಶ್ರೀ ಕೃಷ್ಣಸ್ಮರಣೆಯಲ್ಲದೆ ಮತ್ತೆ ಯಾವ ಪಾಥೇಯವೂ ಸಂಗಡ ಬರುವುದಿಲ್ಲ.

೫೦. ಎಲೈ ಪುತ್ರನೆ! ಯಾವನ ಮನೆಯಲ್ಲಿ ಸರ್ವಕಾಲದಲ್ಲಿಯೂ ಕೃಷ್ಣ ನಾಮ ಸಂಕೀರ್ತನವು ನಡೆಯುತ್ತಿರುವುದೊ, ಅಲ್ಲಿಯೇ ಗಯೆ, ಕಾಶಿ, ಪುಷ್ಕರ, ಕುರುಜಾಂಗಲ ಮುಂತಾದ ಸಕಲ ಕ್ಷೇತ್ರಗಳೂ ಸನ್ನಿಹಿತಗಳಾಗಿರುವುವು.

ಜೀವಿತಂ ಜನ್ಮಸಾಫಲ್ಯಂ ಸುಖಂ ತಸ್ಯೈವ ಸಾರ್ಥಕಂ ।
ಸತತಂ ರಸನಾ ಯಸ್ಯ ಕೃಷ್ಣಕೃಷ್ಣೇತಿ ಜಲ್ಪತಿ ॥ ೫೧ ॥
ಸಕೃದುಚ್ಚರಿತಂ ಯೇನ ಹರಿರಿತ್ಯಕ್ಷರದ್ವಯಂ ।
ಬದ್ಧಃ ಪರಿಕರಸ್ತೇನ ಮೋಕ್ಷಾಯ ಗಮನಂ ಪ್ರತಿ ॥ ೫೨ ॥
ನಾಮ್ನೋಽಸ್ಯ ಯಾವತೀ ಶಕ್ತಿಃ ಪಾಪನಿರ್ದಹನೇ ಮಮ ।
ತಾವತ್ಕರ್ತುಂ ನಶಕ್ನೋತಿ ಪಾತಕಂ ಪಾತಕೀ ಜನಃ ॥ ೫೩ ॥
ನಾಪವಿದ್ಧಂ ಭವೇತ್ತಸ್ಯ ಶರೀರಂ ನೈವ ಮಾನಸಂ ।
ನ ಪಾಪಂ ನ ಚ ವೈಕ್ಲವ್ಯಂ ಕೃಷ್ಣಕೃಷ್ಣೇತಿ ಕೀರ್ತನಾತ್ ॥ ೫೪ ॥
ಶ್ರೀ ಕೃಷ್ಣೇತಿ ವಚಃ ಪಥ್ಯಂ ನತ್ಯಜೇದ್ಯಃ ಕಲೌ ನರಃ ।
ಪಾಪಾಮಯೋ ನೈ ನ ಭವೇತ್ ಕಲೌ ತಸ್ಯೈವ ಮಾನಸೇ ॥ ೫೫ ॥
ಶ್ರೀಕೃಷ್ಣೇತಿ ಪ್ರಜಲ್ಪಂತಂ ದಕ್ಷಿಣಾಶಾಪತಿರ್ನರಂ ।
ಶ್ರುತ್ವಾ ಮಾರ್ಜಯತೇ ಪಾಪಂ ತಸ್ಯ ಜನ್ಮಶತಾರ್ಜಿತಂ ॥ ೫೬ ॥
ಚಾಂದ್ರಾಯಣಶತೈಃ ಪಾಪಂ ಪರಾಕಾಣಾಂ ಸಹಸ್ರಕೈಃ ।
ಯನ್ನಾಪಯಾತಿ ತದ್ಯಾತಿ ಕೃಷ್ಣಕೃಷ್ಣೇತಿ ಕೀರ್ತನಾತ್ ॥ ೫೭ ॥

---

೫೧. ಯಾವನ ನಾಲಿಗೆಯು ಸಂತತವಾಗಿ ಶ್ರೀಕೃಷ್ಣನಾಮ ಸ್ಮರಣೆಯನ್ನೇ ಮಾಡುತ್ತಿರುವುದೊ, ಅವನ ಜೀವನ, ಜನ್ಮಗಳೇ ಸಫಲಗಳು. ಅವನ ಸುಖವೇ ಸಾರ್ಥಕವು.

೫೨. ಯಾವನು ಒಮ್ಮೆ ಹರಿಯೆಂಬ ಎರಡು ಅಕ್ಷರಗಳನ್ನು ಬಾಯಿ ಯಿಂದ ಉಚ್ಚಾರಮಾಡುವನೊ, ಅವನು ಮೋಕ್ಷಮಾರ್ಗಕ್ಕೆ ಅಷ್ಟು ಪಾಥೇಯ ವನ್ನು ಕಟ್ಟಿಕೊಂಡು ಹೋಗುವನೆಂದು ತಿಳಿಯಬೇಕು.

೫೩. ಈ ನನ್ನ ನಾಮದಲ್ಲಿ ಎಷ್ಟು ಪಾಪಗಳನ್ನು ನಾಶಮಾಡುವ ಶಕ್ತಿ ಯಿರುವುದೊ, ಅಷ್ಟು ಪಾಪಗಳನ್ನು ಯಾವ ಪಾತಕಿಯೂ ಮಾಡಲಾರನು.

೫೪. ಯಾವನು ಶ್ರೀ ಕೃಷ್ಣನಾಮ ಸಂಕೀರ್ತನೆಯನ್ನು ಮಾಡುವನೊ, ಅವನಿಗೆ ದೇಹವ್ಯಾಧಿಗಳಾಗಲಿ, ಮಾನಸಿಕ ವ್ಯಥೆಗಳಾಗಲಿ, ಪಾಪಲೇಪವಾಗಲಿ, ಚಿತ್ತವಿಕ್ಷೇಪವಾಗಲಿ ಎಂದಿಗೂ ಉಂಟಾಗಲಾರವು.

೫೫–೫೬. ಕಲಿಯುಗದಲ್ಲಿ ಶ್ರೀ ಕೃಷ್ಣನಾಮಸ್ಮರಣೆಯೆಂಬ ಪಥ್ಯವಾಕ್ಯ ವನ್ನು ಯಾವ ಮನುಷ್ಯನು ತ್ಯಜಿಸುವುದಿಲ್ಲವೊ, ಅವನ ಮನಸ್ಸಿನಲ್ಲಿ ಪಾಪವೆಂಬ ರೋಗವು ಎಂದಿಗೂ ಸಂಭವಿಸುವುದಿಲ್ಲ. ಶ್ರೀಕೃಷ್ಣನ ಹೆಸರನ್ನು ಜಪಿಸುತ್ತಿರುವ ಮನುಜನನ್ನು ಕಂಡರೆ ಯಮರಾಜನು ಅದನ್ನು ಕೇಳಿ ಆತನು ಹಿಂದಿನ ನೂರು ಜನ್ಮಗಳಲ್ಲಿ ಮಾಡಿದ ಪಾಪಗಳನ್ನೆಲ್ಲ ತೊಡೆದುಹಾಕುವನು.

೫೭. ಒಂದು ನೂರು ಚಂದ್ರಾಯಣವ್ರತಗಳಿಂದಲೂ, ಸಾವಿರ ಪರಾಕ

ಕಲಿಕಾಲಭುಜಂಗಸ್ಯ ತೀಕ್ಷ್ಣದಂಷ್ಟ್ರಸ್ಯ ಕಿಂ ಭಯಂ ।
ಶ್ರೀಕೃಷ್ಣ ನಾಮದಾರೋತ್ಥ ವಹ್ನಿದಗ್ಧಃ ಸ ನಶ್ಯತಿ ॥ ೪೫ ॥
ಪಾಪಪಾವಕದಗ್ಧಾನಾಂ ಕರ್ಮಚೇಷ್ಟಾವಿಯೋಗಿನಾಂ ।
ಭೇಷಜಂ ನಾಸ್ತಿ ಮರ್ತ್ಯಾನಾಂ ಶ್ರೀಕೃಷ್ಣಸ್ಮರಣಂ ವಿನಾ ॥ ೪೬ ॥
ಪ್ರಯಾಗೇ ವೈ ಯಥಾ ಗಂಗಾ ಶುಕ್ಲತೀರ್ಥೇ ಚ ನರ್ಮದಾ ।
ಸರಸ್ವತೀ ಕುರುಕ್ಷೇತ್ರೇ ತದ್ವಚ್ಛ್ರೀಕೃಷ್ಣಕೀರ್ತನಂ ॥ ೪೭ ॥
ಭವಾಂಬೋಧಿನಿಮಗ್ನಾನಾಂ ಮಹಾಪಾಪೋರ್ಮಿಪಾತಿನಾಂ ।
ನ ಗತಿರ್ಮಾನವಾನಾಂಚ ಶ್ರೀಕೃಷ್ಣಸ್ಮರಣಂ ವಿನಾ ॥ ೪೮ ॥
ಮೃತ್ಯುಕಾಲೇಽಪಿ ಮರ್ತ್ಯಾನಾಂ ಪಾಪಿನಾಂ ತದನಿಚ್ಛತಾಂ ।
ಗಚ್ಛತಾಂ ನಾಸ್ತಿ ಪಾಥೇಯಂ ಶ್ರೀಕೃಷ್ಣಸ್ಮರಣಂ ವಿನಾ ॥ ೪೯ ॥
ತತ್ರ ಪುತ್ರ ಗಯಾ ಕಾಶೀ ಪುಷ್ಕರಂ ಕುರುಜಾಂಗಲಂ ।
ಪ್ರತ್ಯಹಂ ಮಂದಿರೇ ಯಸ್ಯ ಕೃಷ್ಣಕೃಷ್ಣೇತಿ ಕೀರ್ತನಂ ॥ ೫೦ ॥

---

೪೫. ಕಲಿಯುಗವೆಂಬ ತೀಕ್ಷ್ಣದಂಷ್ಟ್ರಾಯುಧಗಳುಳ್ಳ ಕಾಲಸರ್ಪಕ್ಕೆ ಮಾನವರು ಏಕೆ ಹೆದರಬೇಕು? ಶ್ರೀ ಕೃಷ್ಣನಾಮವೆಂಬ ಕಾಷ್ಠದಲ್ಲಿ ಹುಟ್ಟಿದ ಬೆಂಕಿಯು ಅದನ್ನು ಸುಟ್ಟು ನಾಶಮಾಡುವುದು.

೪೬. ಪಾಪವೆಂಬ ಅಗ್ನಿಯಲ್ಲಿ ಸುಡಲ್ಪಟ್ಟು ಸತ್ಕರ್ಮವ್ಯಾಪಾರವರ್ಜಿತರಾದವರಿಗೆ ಶ್ರೀ ಕೃಷ್ಣಸ್ಮರಣೆಯೊಂದಲ್ಲದೆ ಮತ್ತೆ ಬೇರೆ ಯಾವ ಔಷಧವೂ ದೊರೆಯಲಾರದು.

೪೭. ಪ್ರಯಾಗದಲ್ಲಿ ಗಂಗಾಪ್ರವಾಹದಂತೆಯೂ, ಶುಕ್ಲತೀರ್ಥದಲ್ಲಿ ನರ್ಮದಾನದಿಯಂತೆಯೂ, ಕುರುಕ್ಷೇತ್ರದಲ್ಲಿ ಸರಸ್ವತಿಯಂತೆಯೂ ಶ್ರೀ ಕೃಷ್ಣ ನಾಮಸ್ಮರಣೆಯು ಮೋಕ್ಷದಾಯಕವಾದುದು.

೪೮. ಸಂಸಾರವೆಂಬ ಸಮುದ್ರದಲ್ಲಿ ಬಿದ್ದು ಮಹಾಪಾತಕಗಳೆಂಬ ಅಲೆಗಳ ಹೊಡೆತಕ್ಕೆ ಸಿಕ್ಕಿ ನರಳುತ್ತಿರುವ ಮನುಷ್ಯರಿಗೆ ಶ್ರೀ ಕೃಷ್ಣಸ್ಮರಣೆಯಲ್ಲದೆ ಬೇರೆ ಉದ್ಧಾರೋಪಾಯವಿಲ್ಲ.

೪೯. ಪಾಪಿಗಳಾದ ಮಾನವರು ಅಪೇಕ್ಷಿಸದಿದ್ದರೂ ಮೃತ್ಯುವು ಖಂಡಿತವಾಗಿಯೂ ಸಂಭವಿಸುವುದು. ಮರಣಕಾಲದಲ್ಲಿ ಪರಲೋಕಕ್ಕೆ ಪ್ರಯಾಣ ಮಾಡುವವರಿಗೆ ಶ್ರೀ ಕೃಷ್ಣಸ್ಮರಣೆಯಲ್ಲದೆ ಮತ್ತೆ ಯಾವ ಪಾಥೇಯವೂ ಸಂಗಡ ಬರುವುದಿಲ್ಲ.

೫೦. ಎಲೈ ಪುತ್ರನೆ! ಯಾವನ ಮನೆಯಲ್ಲಿ ಸರ್ವಕಾಲದಲ್ಲಿಯೂ ಕೃಷ್ಣ ನಾಮ ಸಂಕೀರ್ತನವು ನಡೆಯುತ್ತಿರುವುದೊ, ಅಲ್ಲಿಯೇ ಗಯೆ, ಕಾಶಿ, ಪುಷ್ಕರ, ಕುರುಜಾಂಗಲ ಮುಂತಾದ ಸಕಲ ಕ್ಷೇತ್ರಗಳೂ ಸನ್ನಿಹಿತಗಳಾಗಿರುವುವು.

ಜೀವಿತಂ ಜನ್ಮಸಾಫಲ್ಯಂ ಸುಖಂ ತಸ್ಯೈವ ಸಾರ್ಥಕಂ ।
ಸತತಂ ರಸನಾ ಯಸ್ಯ ಕೃಷ್ಣಕೃಷ್ಣೇತಿ ಜಲ್ಪತಿ ॥ ೫೧ ॥
ಸಕೃದುಚ್ಚರಿತಂ ಯೇನ ಹರಿರಿತ್ಯಕ್ಷರದ್ವಯಂ ।
ಬದ್ಧಃ ಪರಿಕರಸ್ತೇನ ಮೋಕ್ಷಾಯ ಗಮನಂ ಪ್ರತಿ ॥ ೫೨ ॥
ನಾಮ್ನೋಽಸ್ಯ ಯಾವತೀ ಶಕ್ತಿಃ ಪಾಪನಿರ್ದಹನೇ ಮಮ ।
ತಾವತ್ಕರ್ತುಂ ನಶಕ್ನೋತಿ ಪಾತಕಂ ಪಾತಕೀ ಜನಃ ॥ ೫೩ ॥
ನಾಪವಿದ್ಧಂ ಭವೇತ್ತಸ್ಯ ಶರೀರಂ ನೈವ ಮಾನಸಂ ।
ನ ಪಾಪಂ ನ ಚ ವೈಕ್ಲವ್ಯಂ ಕೃಷ್ಣಕೃಷ್ಣೇತಿ ಕೀರ್ತನಾತ್ ॥ ೫೪ ॥
ಶ್ರೀ ಕೃಷ್ಣೇತಿ ವಚಃ ಪಥ್ಯಂ ನತ್ಯಜೇದ್ಯಃ ಕಲೌ ನರಃ ।
ಪಾಪಾಮಯೋ ನೈ ನ ಭವೇತ್ ಕಲೌ ತಸ್ಯೈವ ಮಾನಸೇ ॥ ೫೫ ॥
ಶ್ರೀಕೃಷ್ಣೇತಿ ಪ್ರಜಲ್ಪಂತಂ ದಕ್ಷಿಣಾಶಾಪತಿರ್ನರಂ ।
ಶ್ರುತ್ವಾ ಮಾರ್ಜಯತೇ ಪಾಪಂ ತಸ್ಯ ಜನ್ಮಶತಾರ್ಜಿತಂ ॥ ೫೬ ॥
ಚಾಂದ್ರಾಯಣಶತೈಃ ಪಾಪಂ ಪರಾಕಾಣಾಂ ಸಹಸ್ರಕೈಃ ।
ಯನ್ನಾಪಯಾತಿ ತದ್ಯಾತಿ ಕೃಷ್ಣಕೃಷ್ಣೇತಿ ಕೀರ್ತನಾತ್ ॥ ೫೭ ॥

---

೫೧. ಯಾವನ ನಾಲಿಗೆಯು ಸಂತತವಾಗಿ ಶ್ರೀಕೃಷ್ಣನಾಮ ಸ್ಮರಣೆಯನ್ನೇ ಮಾಡುತ್ತಿರುವುದೊ, ಅವನ ಜೀವನ, ಜನ್ಮಗಳೇ ಸಫಲಗಳು. ಅವನ ಸುಖವೇ ಸಾರ್ಥಕವು.

೫೨. ಯಾವನು ಒಮ್ಮೆ ಹರಿಯೆಂಬ ಎರಡು ಅಕ್ಷರಗಳನ್ನು ಬಾಯಿಯಿಂದ ಉಚ್ಚಾರಮಾಡುವನೊ, ಅವನು ಮೋಕ್ಷಮಾರ್ಗಕ್ಕೆ ಅಷ್ಟು ಪಾಥೇಯವನ್ನು ಕಟ್ಟಿಕೊಂಡು ಹೋಗುವನೆಂದು ತಿಳಿಯಬೇಕು.

೫೩. ಈ ನನ್ನ ನಾಮದಲ್ಲಿ ಎಷ್ಟು ಪಾಪಗಳನ್ನು ನಾಶಮಾಡುವ ಶಕ್ತಿಯಿರುವುದೊ, ಅಷ್ಟು ಪಾಪಗಳನ್ನು ಯಾವ ಪಾತಕಿಯೂ ಮಾಡಲಾರನು.

೫೪. ಯಾವನು ಶ್ರೀ ಕೃಷ್ಣನಾಮ ಸಂಕೀರ್ತನೆಯನ್ನು ಮಾಡುವನೊ, ಅವನಿಗೆ ದೇಹವ್ಯಾಧಿಗಳಾಗಲಿ, ಮಾನಸಿಕ ವ್ಯಥೆಗಳಾಗಲಿ, ಪಾಪಲೇಪವಾಗಲಿ, ಚಿತ್ತವಿಕ್ಷೇಪವಾಗಲಿ ಎಂದಿಗೂ ಉಂಟಾಗಲಾರವು.

೫೫–೫೬. ಕಲಿಯುಗದಲ್ಲಿ ಶ್ರೀ ಕೃಷ್ಣನಾಮಸ್ಮರಣೆಯೆಂಬ ಪಥ್ಯವಾಕ್ಯವನ್ನು ಯಾವ ಮನುಷ್ಯನು ತ್ಯಜಿಸುವುದಿಲ್ಲವೊ, ಅವನ ಮನಸ್ಸಿನಲ್ಲಿ ಪಾಪವೆಂಬ ರೋಗವು ಎಂದಿಗೂ ಸಂಭವಿಸುವುದಿಲ್ಲ. ಶ್ರೀಕೃಷ್ಣನ ಹೆಸರನ್ನು ಜಪಿಸುತ್ತಿರುವ ಮನುಜನನ್ನು ಕಂಡರೆ ಯಮರಾಜನು ಅದನ್ನು ಕೇಳಿ ಆತನು ಹಿಂದಿನ ನೂರು ಜನ್ಮಗಳಲ್ಲಿ ಮಾಡಿದ ಪಾಪಗಳನ್ನೆಲ್ಲ ತೊಡೆದುಹಾಕುವನು.

೫೭. ಒಂದು ನೂರು ಚಂದ್ರಾಯಣವ್ರತಗಳಿಂದಲೂ, ಸಾವಿರ ಪರಾಕ

ನಾನ್ಯಾಭಿರ್ನಾಮಕೋಟೀಭಿಸ್ತೋಷೋ ಮಮ ಭವೇತ್ಕ್ವಚಿತ್ ।
ಶ್ರೀಕೃಷ್ಣೇತಿ ಕೃತೋಚ್ಚಾರೇ ಪ್ರೀತಿರೇವಾಧಿಕಾಧಿಕಾ ॥ ೫೮ ॥
ಚಂದ್ರಸೂರ್ಯೋಪರಾಗೈಸ್ತು ಕೋಟಿಭಿರ್ಯತ್ಫಲಂ ಸ್ಮೃತಂ ।
ತತ್ಫಲಂ ಸಮವಾಪ್ನೋತಿ ಕೃಷ್ಣಕೃಷ್ಣೇತಿ ಕೀರ್ತನಾತ್ ॥ ೫೯ ॥
ಗುರುದಾರಾಭಿಗಮನಂ ಹೇಮಸ್ತೇಯಾದಿ ಪಾತಕಂ ।
ಶ್ರೀಕೃಷ್ಣಕೀರ್ತನಾದ್ಯಾತಿ ಘರ್ಮತಪ್ತಂ ಹಿಮಂ ಯಥಾ ॥ ೬೦ ॥
ಯುಕ್ತೋ ಯದಿ ಮಹಾಪಾಪೈರಗಮ್ಯಾಗಮನಾದಿಭಿಃ ।
ಮುಚ್ಯತೇ ಚಾಂತಕಾಲೇಽಪಿ ಸಕೃಚ್ಛ್ರೀಕೃಷ್ಣಕೀರ್ತನಾತ್ ॥ ೬೧ ॥
ಅವಿಶುದ್ಧಮನಾ ಯಸ್ತು ವಿನಾಪ್ಯಾಚಾರವರ್ತನಾತ್ ।
ಪ್ರೇತತ್ವಂ ಸೋಽಪಿ ನಾಪ್ನೋತಿ ಅಂತೇ ಶ್ರೀಕೃಷ್ಣಕೀರ್ತನಾತ್ ॥ ೬೨ ॥
ಮುಖೇ ಭವತು ಮಾ ಜಿಹ್ವಾಽಸತೀ ಯಾತು ರಸಾತಲಂ ।
ನ ಸಾ ಚೇತ್ಕಲಿಕಾಲೀಯಾ ಶ್ರೀಕೃಷ್ಣಗುಣವಾದಿನೀ ॥ ೬೩ ॥

---

ಪ್ರಾಯಶ್ಚಿತ್ತಗಳಿಂದಲೂ ಯಾವ ಪಾಪವು ಕಳೆಯಲಾರದೊ, ಅದೂ ಸಹ ಕೃಷ್ಣ ನಾಮ ಸಂಕೀರ್ತನದಿಂದ ನಾಶವನ್ನು ಹೊಂದುವುದು.

೫೮. ಇತರ ಕೋಟಿನಾಮಗಳ ಉಚ್ಚಾರಣೆಯಿಂದ ನನಗೆ ಅಷ್ಟು ಹೆಚ್ಚಿನ ಸಂತೋಷವುಂಟಾಗಲಾರದು. ಶ್ರೀ ಕೃಷ್ಣನೆಂಬ ನಾಮವನ್ನು ಸಂಕೀರ್ತನೆ ಮಾಡಿದಂತೆಲ್ಲ ನನಗೆ ಹೆಚ್ಚು ಹೆಚ್ಚಿನ ಆನಂದವುಂಟಾಗಿ ಭಕ್ತನಲ್ಲಿ ಪ್ರೀತಿಯೂ ಅಧಿಕವಾಗುವುದು.

೫೯. ಕೋಟಿ ಸೂರ್ಯಗ್ರಹಣಗಳಿಂದಲೂ, ಚಂದ್ರಗ್ರಹಣಗಳಿಂದಲೂ ಯಾವ ಫಲವು ಲಭಿಸುವುದೆಂದು ಹೇಳಲ್ಪಟ್ಟಿರುವುದೊ, ಆ ಫಲವನ್ನೇ ಭಕ್ತನು ಶ್ರೀಕೃಷ್ಣನಾಮ ಸಂಕೀರ್ತನೆಯಿಂದ ಸಂಪಾದಿಸುವನು.

೬೦. ಗುರುಪತ್ನೀಸಂಸರ್ಗ, ಪರಸ್ವರ್ಣಾಪಹರಣ ಮುಂತಾದ ಮಹಾ ಪಾತಕಗಳೆಲ್ಲವೂ ಶ್ರೀಕೃಷ್ಣನಾಮಸಂಸ್ಮರಣೆಯ ಮಹಿಮೆಯಿಂದ ಬೇಸಿಗೆ ಯಲ್ಲಿ ಮಾಯವಾಗುವ ಹಿಮದಂತೆ ಮಾಯವಾಗುವುವು.

೬೧-೬೨. ಮನುಷ್ಯನು ಜನ್ಮದ ಮೊದಲಿನಿಂದಲೂ ಅಗಮ್ಯಸ್ತ್ರೀಸಹವಾಸ ಮುಂತಾದ ಮಹಾಪಾಪಗಳನ್ನು ಮಾಡಿದ್ದರೂ ಕೂಡ ಮರಣಕಾಲದಲ್ಲಿ ಒಮ್ಮೆ ಯಾದರೂ ಶ್ರೀ ಕೃಷ್ಣನಾಮವನ್ನು ಉಚ್ಚರಿಸುವುದರಿಂದ ಮೋಕ್ಷವನ್ನು ಹೊಂದುವನು. ಶುದ್ಧಿಯಿಲ್ಲದ ಮನಸ್ಸುಳ್ಳವನಾಗಲಿ ಆಚಾರವ್ಯವಹಾರವಿಲ್ಲದವ ನಾಗಲಿ, ಅವನಿಗೂ ಕೂಡ ಅಂತ್ಯದಲ್ಲಿ ಶ್ರೀ ಕೃಷ್ಣನ ನಾಮವನ್ನು ಸ್ಮರಿಸು ವುದರಿಂದ ಪ್ರೇತತ್ವವು ಸಂಭವಿಸುವುದಿಲ್ಲ.

೬೩. ಈ ಕಲಿಕಾಲದಲ್ಲಿ ಶ್ರೀ ಕೃಷ್ಣನ ಗುಣಗಳನ್ನು ಯಾವ ನಾಲಿಗೆಯು

**ಸ್ವವಕ್ತ್ರೇ ಪರವಕ್ತ್ರೇ ಚ ವಂಧ್ಯಾ ಜಿಹ್ವಾ ಪ್ರಯತ್ನತಃ ।**
**ಕುರುತೇ ಯಾ ಕಲೌ ಪುತ್ರ ಶ್ರೀಕೃಷ್ಣಗುಣಕೀರ್ತನಾತ್ ॥ ೬೪ ॥**
**ಪಾಪವಲ್ಲೀ ಮುಖೇ ತಸ್ಯ ಜಿಹ್ವಾರೂಪೇಣ ಕೀರ್ತ್ಯತೇ ।**
**ಯಾ ನ ವಕ್ತಿ ದಿವಾರಾತ್ರೌ ಶ್ರೀಕೃಷ್ಣಗುಣಕೀರ್ತನಾತ್ ॥ ೬೫ ॥**
**ಪತತಾಂ ಶತಖಂಡಾತು ಸಾ ಜಿಹ್ವಾ ರೋಗರೂಪಿಣೀ ।**
**ಶ್ರೀಕೃಷ್ಣ ಕೃಷ್ಣ ಕೃಷ್ಣೇತಿ ಶ್ರೀಕೃಷ್ಣೇತಿ ನ ಜಲ್ಪತಿ ॥ ೬೬ ॥**
**ಶ್ರೀಕೃಷ್ಣ ನಾಮಮಾಹಾತ್ಮ್ಯಂ ಪ್ರಾತರುತ್ಥಾಯ ಯಃಪಠೇತ್ ।**
**ತಸ್ಯಾಽಹಂ ಶ್ರೇಯಸಾಂ ದಾತಾ ಭವಾಮ್ಯೇವ ನ ಸಂಶಯಃ ॥ ೬೭ ॥**
**ಶ್ರೀಕೃಷ್ಣನಾಮಮಾಹಾತ್ಮ್ಯಂ ತ್ರಿಸಂಧ್ಯಂ ಹಿ ಪಠೇತ್ತು ಯಃ ।**
**ಸರ್ವಾನ್ಕಾಮಾನವಾಪ್ನೋತಿ ಸ ಮೃತಃ ಪರಮಾಂ ಗತಿಂ ॥ ೬೮ ॥**

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ದ್ವಿತೀಯೇ ವೈಷ್ಣವಖಂಡೇ ಮಾರ್ಗಶೀರ್ಷಮಾಹಾತ್ಮ್ಯೇ ಬ್ರಹ್ಮವಿಷ್ಣುಸಂವಾದೇ, "ಶ್ರೀಕೃಷ್ಣನಾಮಮಾಹಾತ್ಮ್ಯವರ್ಣನಂ" ನಾಮ ಪಂಚದಶೋಽಧ್ಯಾಯಃ

---

ಗಾನಮಾಡುವುದಿಲ್ಲವೊ, ಆ ನಾಲಿಗೆಯು ಇದ್ದರೂ ಇಲ್ಲದಂತೆಯೇ ಸರಿ. ಅಂತಹ ನಾಲಿಗೆಯು ಯಾರ ಮುಖದಲ್ಲಿಯೂ ಇಲ್ಲದಿರಲಿ.

೬೪-೬೬. ತನ್ನ ಮುಖದಲ್ಲಾಗಲಿ ಮತ್ತೊಬ್ಬನ ಮುಖದಲ್ಲಾಗಲಿ, ಯಾವ ನಾಲಿಗೆಯು ಶ್ರೀಕೃಷ್ಣಗುಣಗಳ ಕೀರ್ತನೆಯನ್ನು ಮಾಡುವುದೊ, ಅದು ಪ್ರತಿಯೊಬ್ಬನ ವಿಶೇಷವಂದನೆಗೆ ಅರ್ಹವಾಗಿರುವುದು. ಯಾವನ ಮುಖದಲ್ಲಿ ಹಗಲು ರಾತ್ರಿಗಳೆನ್ನದೆ ಶ್ರೀಕೃಷ್ಣನ ಗುಣಗಳು ಕೀರ್ತಿಸಲ್ಪಡುವುದಿಲ್ಲವೊ, ಅವನ ಮುಖದಲ್ಲಿರುವುದು ಜಿಹ್ವೆಯ ರೂಪದಿಂದಕಾಣುವ ಪಾಪದ ಬಳ್ಳಿಯೆಂದೇ ತಿಳಿಯಬೇಕು. , ಯಾವನ ಮುಖವು ನಿರಂತರವೂ ಕೃಷ್ಣನಾಮದ ಜಪವನ್ನು ಮಾಡುವುದಿಲ್ಲವೊ, ಅವನ ನಾಲಿಗೆಯು ಅನೇಕ ರೋಗಗಳಿಗೆ ತುತ್ತಾಗಿ ನೂರು ಖಂಡಗಳಾಗಿ ಕತ್ತರಿಸಿ ನೆಲಕ್ಕೆ ಬೀಳಲಿ.

೬೭. ಶ್ರೀಕೃಷ್ಣನಾಮದ ಈ ಮಾಹಾತ್ಮ್ಯೆಯನ್ನು ಹಾಸಿಗೆಯಿಂದೆದ್ದು ಪ್ರಾತಃಕಾಲದಲ್ಲಿ ಯಾವನು ಪಠಿಸುವನೊ, ಅವನಿಗೆ ನಾನು ಸಕಲ ಶ್ರೇಯಸ್ಸುಗಳನ್ನೂ ಕೊಡುವೆನೆಂಬುದರಲ್ಲಿ ಸಂದೇಹವಿಲ್ಲ.

೬೮. ಶ್ರೀಕೃಷ್ಣನಾಮಮಾಹಾತ್ಮ್ಯೆಯುಳ್ಳ ಈ ಅಧ್ಯಾಯವನ್ನು ಪ್ರತಿದಿನದ ಪ್ರಾತಃಕಾಲ, ಮಧ್ಯಾಹ್ನ, ಸಾಯಂಕಾಲ ಸಮಯಗಳಲ್ಲಿ ಯಾವನು ಪಠನಮಾಡುವನೊ, ಅವನು ಈ ಲೋಕದಲ್ಲಿ ಸಕಲ ಇಷ್ಟಾರ್ಥಗಳನ್ನೂ ಅನುಭವಿಸಿ ದೇಹವನ್ನು ಬಿಟ್ಟಮೇಲೆ ಉತ್ತಮಗತಿಯನ್ನು ಹೊಂದುವನು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀಸ್ಕಾಂದಮಹಾಪುರಾಣದ ಎರಡನೆಯ ವೈಷ್ಣವಖಂಡದ ಮಾರ್ಗಶೀರ್ಷಮಾಹಾತ್ಮ್ಯದ ಬ್ರಹ್ಮವಿಷ್ಣು ಸಂವಾದದಲ್ಲಿ "ಶ್ರೀ ಕೃಷ್ಣನಾಮ ಮಾಹಾತ್ಮ್ಯವರ್ಣನ"ವೆಂಬ ಹದಿನೈದನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥ ಷೋಡಶೋಽಧ್ಯಾಯಃ

### ಭಾಗವತಶ್ರೀಕೃಷ್ಣ ವರ್ಣನಂ

ಶ್ರೀ ಭಗವಾನುವಾಚ :—

ಶೃಣು ಧ್ಯಾನಂ ಚತುರ್ವಕ್ತ್ರ ವಕ್ಷ್ಯಾಮಿ ಪ್ರೀತಮಾನಸಃ ।
ಶೃತೇನೈವ ಚ ಸೌಭಾಗ್ಯಂ ಲಭತೇ ಮಾನವೋ ಭುವಿ ॥ ೧ ॥

ಅಥ ಶ್ರೀಮದುದ್ಯಾನ ಸಂವೀತ ಹೈಮ
ಸ್ಥಲೋದ್ಭಾಸಿ ರತ್ನಸ್ಫುರನ್ಮಂಡಪಾಂತಃ ।
ಲಸತ್ಕಲ್ಪವೃಕ್ಷೋದಿತೋ ದೀಪ್ತರತ್ನ
ಸ್ಥಲಾಧಿಷ್ಠಿತಾಂಭೋಜಪೀಠಾಧಿರೂಢಂ ॥ ೨ ॥

ಮಹಾನೀಲನೀಲಾಭಮತ್ಯಂತಬಾಲಂ
ಗುಡಸ್ನಿಗ್ಧವಕ್ರಾಂತ ವಿಶ್ರಸ್ತಕೇಶಂ ।
ಅಲಿವ್ರಾತ ಪರ್ಯಾಕುಲೋತ್ಫುಲ್ಲಪದ್ಮ
ಪ್ರಮುಗ್ಧಾನನಂ ಶ್ರೀಮದಿಂದೀವರಾಕ್ಷಂ ॥ ೩ ॥

---

### ಕನ್ನಡದ ಅನುವಾದ

#### ಭಾಗವತಶ್ರೀಕೃಷ್ಣ ವರ್ಣನ

೧. ಭಗವಂತನು ಹೇಳುತ್ತಾನೆ :—ಚತುರ್ಮುಖನೆ! ಇನ್ನು ಧ್ಯಾನದ ಕ್ರಮವನ್ನು ಕೇಳು. ಸಂತೋಷಗೊಂಡ ಮನಸ್ಸಿನಿಂದ ಹೇಳುವೆನು. ಇದನ್ನು ಕೇಳಿದ ಮಾತ್ರದಿಂದಲೇ ಮನುಷ್ಯನು ಸಮಸ್ತ ಸೌಭಾಗ್ಯಗಳನ್ನೂ ಪಡೆಯುವನು.

೨. ಸಕಲೈಶ್ವರ್ಯಗಳಿಂದೊಡಗೂಡಿದ ಉದ್ಯಾನವನದಿಂದ ಸುತ್ತುವರೆಯಲ್ಪಟ್ಟ ಚಿನ್ನದ ದೇವಾಲಯದಲ್ಲಿ ಹೊಳೆಯುತ್ತಿರುವ ನವರತ್ನಮಯವಾದ ಮಂಟಪದಲ್ಲಿ ಉತ್ತಮವಾದ ಕಲ್ಪವೃಕ್ಷದ ಮೂಲದಲ್ಲಿರುವ ರತ್ನವೇದಿಕೆಯ ಮಧ್ಯದಲ್ಲಿ ಕಮಲಾಸನದಲ್ಲಿ ಪರಮಾತ್ಮನು ಸುಖಾಸೀನನಾಗಿರುವಂತೆ ಕಲ್ಪಿಸಿಕೊಳ್ಳಬೇಕು.

೩. ಆ ಸ್ವಾಮಿಯು ಇಂದ್ರನೀಲದಂತೆ ನೀಲವರ್ಣವಿಶಿಷ್ಟನೂ, ಕೇವಲ ಬಾಲಕನೂ, ಗುಡಸ್ನಿಗ್ಧವಾದ ಮುಖದ ಸುತ್ತಲೂ ಕೆದರಿರುವ ಮುಂಗುರುಳುಗಳುಳ್ಳವನೂ, ಆ ಮುಖದಿಂದಲೇ ತುಂಬಿವಿಂಡಿನಿಂದ ಸುತ್ತುವರೆಯಲ್ಪಟ್ಟ ಕಮಲವನ್ನು ಧಿಕ್ಕರಿಸುವವನೂ, ಸರ್ವಲಕ್ಷಣಯುತಗಳಾದ ಕನ್ನೈದಿಲೆಗಳಂತೆ ವಿಶಾಲನೇತ್ರಗಳುಳ್ಳವನೂ ಆಗಿರುವನು.

ಚಲತ್ಕುಂಡಲೋಲ್ಲಾಸಿತೋತ್ಫುಲ್ಲಗಲ್ಲಂ
ಸುಘೋಣಂ ಸುಶೋಣಾಧರಂ ಸುಸ್ಮಿತಾಸ್ಯಂ ।
ಅನೇಕೋಲ್ಲಸತ್ಕಂಠಭೂಷಾಲಸಂತಂ
ವಹಂತಂ ನಖಂ ಪೌಂಡರೀಕಂ ಸುನೇತ್ರಂ ॥ ೪ ॥

ಸಮುದ್ಧೂಸರೋರಃಸ್ಥಲಂ ಧೇನುಧೂಲ್ಯಾ
ಸುಪುಷ್ಟಾಂಗಮಷ್ಟಾಪದಾಕಲ್ಪದೀಪ್ತಂ ।
ಕಟೀರಸ್ಥಲೇ ಚಾರುಜಂಘೋರುಯುಗ್ಮೇ
ಪಿನದ್ಧಂ ಕ್ವಣತ್ಕಿಂಕಿಣೀ ಜಾಲದಾಮ್ನಾ ॥ ೫ ॥

ಹಸಂತಂ ಲಸದ್ಬಂಧುಜೀವಪ್ರಸೂನ
ಪ್ರಭಾಪಾಣಿಪಾದಾಂಬುಜೋದಾರಕಾಂತ್ಯಾ ।
ಕರೇ ದಕ್ಷಿಣೇ ಪಾಯಸಂ ವಾಮಹಸ್ತೇ
ದಧಾನಂ ನವಂ ಶುದ್ಧ ಹೈಯಂಗವೀನಂ ॥ ೬ ॥

ಮಹೀಭಾರಭೂತಾಽಮರಾರಾತಿಯೂಥಾಽ-
ನಲಂ ಪೂತನಾದೀನ್ನಿಹಂತುಂ ಪ್ರವೃತ್ತಂ ।
ಪ್ರಭುಂ ಗೋಪಿಕಾಗೋಪವೃಂದೇನ ವೀತಂ
ಸುರೇಂದ್ರಾದಿಭಿರ್ವಂದಿತಂ ದೇವದೇವಂ ॥ ೭ ॥

---

೪. ಚಲಿಸುತ್ತಿರುವ ಕುಂಡಲಗಳಿಂದ ಶೋಭಿಸುತ್ತಿರುವ ಕಪೋಲಗಳಿಂದಲೂ, ಸುಂದರನಾಸಿಕದಿಂದಲೂ, ಸೊಂಪಾದ ಕೆಂದುಟಿಗಳಿಂದಲೂ ಮಂದಹಾಸದಿಂದ ಕೂಡಿದ ಮುಖದಿಂದಲೂ, ಅನೇಕ ಕಂಠಭೂಷಣಗಳಿಂದಲೂ ಒಪ್ಪಿ ಕಮಲದಳಗಳಂತೆ ತೋರುವ ನೇತ್ರಗಳುಳ್ಳವನೂ ಆಗಿರುವನು.

೫. ಗೋವುಗಳ ಪಾದಧೂಳಿಗಳಿಂದ ಲೇಪಿತವಾದ ವಕ್ಷಸ್ಥಳವುಳ್ಳವನೂ, ದುಂಡಾದ ಅವಯವಗಳುಳ್ಳವನೂ, ಚಿನ್ನದ ಆಭರಣಗಳುಳ್ಳವನೂ, ನಡುವಿನಲ್ಲಿಯೂ, ಮೊಳಕಾಲುಗಳಲ್ಲಿಯೂ, ತೊಡೆಗಳಲ್ಲಿಯೂ ಶಬ್ದಮಾಡುತ್ತಿರುವ ಕಿರುಗೆಜ್ಜೆಗಳ ದಾರಗಳಿಂದ ಕಟ್ಟಲ್ಪಟ್ಟವನೂ ಆಗಿರುವನು.

೬. ಮುಗುಳ್ನಗೆಯಿಂದೊಡಗೂಡಿ ಉತ್ತಮವಾದ ಬಂಧೂಕಪುಷ್ಪಗಳಂತೆ ಕೆಂಪಾದ ಅಂಗೈ ಅಂಗಾಲುಗಳುಳ್ಳವನೂ, ಕಮಲದಂತೆ ಕಾಂತಿಯುಕ್ತನೂ, ಬಲಗೈಯಲ್ಲಿ ಪಾಯಸದ ಪಾತ್ರೆಯನ್ನೂ ಎಡಗೈಯಲ್ಲಿ ಹಿಂದಿನ ದಿನದ ಪರಿಶುದ್ಧವಾದ ಬೆಣ್ಣೆಯನ್ನು ಹಿಡಿದಿರುವನೂ ಆಗಿರುವನು.

೭–೮. ಭೂಮಿಗೆ ಭಾರಪ್ರಾಯರಾದ ರಾಕ್ಷಸ ಸಮೂಹವೆಂಬ ಬೆಂಕಿಯನ್ನೂ ಪೂತನಾದಿ ರಾಕ್ಷಸ ಸ್ತ್ರೀಯರನ್ನೂ ನಿಗ್ರಹಿಸಲು ಉದ್ಯುಕ್ತನಾದವನೂ, ಲೋಕೇಶ್ವರನೂ, ಗೋಪಗೋಪಸ್ತ್ರೀಯರಿಂದ ಸುತ್ತುವರೆಯಲ್ಪಟ್ಟವನೂ,

ಪ್ರಗೇ ಪೂಜಯಿತ್ವಾ ತ್ವನುಸ್ಮೃತ್ಯ ಕೃಷ್ಣಂ
ಭುಜಂಗೇಂದ್ರ ವಜ್ರಾದಿಭಿರ್ಭಕ್ತಿನಮ್ರಃ ।
ಸಿತಾಂಭೋಜ ಹೈಯಂಗವೀನೈಶ್ಚ ದಧ್ನಾ
ವಿಮಿಶ್ರೇಣ ದುಗ್ಧೇನ ಸಂಪ್ರೀಣಯೇತ್ತಂ ॥ ೮ ॥
ಇತಿ ಪ್ರಾತರೇವಾರ್ಚಯೇದಚ್ಯುತಂ ಯೋ
ನರಃ ಪ್ರತ್ಯಹಂ ಶಶ್ವದಾಸ್ತಿಕ್ಯಯುಕ್ತಃ ।
ಲಭೇತ್ಸೋಽಚಿರೇಣೈವ ಲಕ್ಷ್ಮೀಂ ಸಮಗ್ರಾ
ಮಿಹ ಪ್ರೇತ್ಯ ಶುದ್ಧಂ ಪರಂಧಾಮ ಭೂಯಾತ್ ॥ ೯ ॥
ಮಂತ್ರಶ್ಲೋಕ್ತಃ ಪುರಾಪುತ್ರ ಆದೌ ಲೋಕಮನೋಹರಃ ।
ಶ್ರೀಮದ್ದಾಮೋದರಾಖ್ಯೋಹಿ ಶೃಣು ತಸ್ಯಾಧಿಕಾರಿಣಃ ॥ ೧೦ ॥
ಅಯೋಗ್ಯಾಯ ನ ದಾತವ್ಯೋ ಮಂತ್ರರಾಜಸ್ತ್ವಯಾ ಸುತ ।
ಯತ್ನೇನ ಗೋಪನೀಯಂ ಚ ರಹಸ್ಯಂ ಶೀಘ್ರಸಿದ್ಧಿದಂ ॥ ೧೧ ॥
ಅಲಸಂ ಮಲಿನಂ ಕ್ಲಿಷ್ಟಂ ದಂಭಮೋಹಸಮನ್ವಿತಂ ।
ದರಿದ್ರಂ ರೋಗಿಣಂ ಕೃದ್ಧಂ ರಾಗಿಣಂ ಭೋಗಲಾಲಸಂ ॥ ೧೨ ॥

---

ಮಹೇಂದ್ರನೇ ಮೊದಲಾದವರಿಂದ ಸಂಪೂಜ್ಯನೂ ದೇವತೆಗಳಿಗೆ ಮಹಾದೇವನೂ ಆಗಿರುವನು. ಇಂತಹ ಪರಮಾತ್ಮನನ್ನು ಪ್ರಾತಃಕಾಲದಲ್ಲಿ ಪೂಜಿಸಿ ಆತನ ಕೃಷ್ಣ ರೂಪವನ್ನು ಸ್ಮರಿಸುತ್ತ ಆದಿಶೇಷ ವ್ರಜಾದಿಗಳಿಂದ ಸೇವಿತನಾದ ಆತನಲ್ಲಿ ನಮ್ರನಾಗಿ ಭಕ್ತಿಯನ್ನುಮಾಡಿ, ಬಿಳಿದಾವರೆ, ಹಿಂದಿನ ದಿನದ ಹಾಲಿನಿಂದ ಕಡೆದ ಬೆಣ್ಣೆ, ಮೊಸರು, ಹಾಲು ಮುಂತಾದ ಅನೇಕ ಪದಾರ್ಥಗಳಿಂದ ಆತನನ್ನು ಸಂತೋಷಗೊಳಿಸಬೇಕು.

೯. ಇಂತು ಯಾವ ಮಾನವನು ನಿರಂತರವಾದ ಆಸ್ತಿಕ್ಯಬುದ್ಧಿಯಿಂದ ಪ್ರತಿದಿವಸವೂ ಅಚ್ಯುತನನ್ನು ಪೂಜೆಮಾಡುವನೊ, ಅವನು ಶೀಘ್ರದಲ್ಲಿಯೇ ಈ ಲೋಕದಲ್ಲಿ ಸಕಲೈಶ್ವರ್ಯಗಳನ್ನೂ ಹೊಂದುವುದಲ್ಲದೆ ದೇಹಾವಸಾನದಲ್ಲಿ ದುಃಖರಹಿತವಾದ ಪರಮಪದವನ್ನು ಪಡೆಯುವನು.

೧೦. ಪುತ್ರನೆ! ಹಿಂದೆಯೇ ನಿನಗೆ 'ಶ್ರೀ ದಾಮೋದರಾಯ ನಮಃ' ಎಂಬ ಲೋಕಮನೋಹರವಾದ ಮಂತ್ರವನ್ನು ತಿಳಿಸಿರುವೆನಲ್ಲವೆ. ಆ ದಿವ್ಯ ಮಂತ್ರಕ್ಕೆ ತಕ್ಕ ಅಧಿಕಾರಿಗಳಾರೆಂಬುದನ್ನು ತಿಳಿಸುವೆನು.

೧೧. ಈ ಮಂತ್ರವು ರಹಸ್ಯವೂ ಕ್ಷಿಪ್ರಫಲಾದಾಯಕವೂ ಆಗಿರುವುದರಿಂದ ಈ ಉತ್ತಮ ಮಂತ್ರವನ್ನು ನೀನು ಅಯೋಗ್ಯನಿಗೆ ಕೊಡಬಾರದು. ಅಂತಹವರ ದೆಸೆಯಿಂದ ಅದನ್ನು ಪ್ರಯಾಸದಿಂದಾದರೂ ರಹಸ್ಯವಾಗಿಟ್ಟಿರಬೇಕು.

೧೨-೧೬. ಆಲಸ್ಯವಂತನು, ಅಂತರ್ಬಾಹ್ಯಶುದ್ಧಿಹೀನನು, ಕಷ್ಟಜೀವಿಯು

ಅಸೂಯಾಮತ್ಸರಗ್ರಸ್ತಂ ಶಠಂ ಪರುಷವಾದಿನಂ ।
ಅನ್ಯಾಯೇನಾರ್ಜಿತಧನಂ ಪರದಾರರತಂ ಸದಾ ॥ ೧೩ ॥
ವಿದುಷಾಂ ವೈರಿಣಂ ನಿತ್ಯಮಜ್ಞಂ ಪಂಡಿತಮಾನಿನಂ ।
ಭ್ರಷ್ಟವ್ರತಂ ಕ್ಲಿಷ್ಟವೃತ್ತಿಂ ಪಿಶುನಂ ದುಷ್ಟಮಾನಸಂ ॥ ೧೪ ॥
ಬಹ್ವಾಶಿನಂ ಕ್ರೂರಚೇಷ್ಟಮುಗ್ರಗಣ್ಯಂ ದುರಾತ್ಮನಾಂ ।
ಕೃಪಣಾಂ ಪಾಪಿನಂ ರೌದ್ರಮಾಶ್ರಿತಾನಾಂ ಭಯಂಕರಂ ॥ ೧೫ ॥
ಏವಮಾದಿಗುಣೈರ್ಯುಕ್ತಂ ಶಿಷ್ಯಂ ನೈವ ಪರಿಗ್ರಹೇತ್ ।
ಗೃಹ್ಣೀಯಾದ್ಯದಿ ತದ್ದೋಷಃ ಪ್ರಾಯೋ ಗುರುಮುಪಸ್ಪೃಶೇತ್ ॥ ೧೬ ॥
ಅಮಾತ್ಯದೋಷೋ ರಾಜಾನಂ ಜಾಯಾದೋಷಃ ಪತಿಂ ಯಥಾ ।
ತಥಾ ಶಿಷ್ಯಕೃತೋ ದೋಷೋ ಗುರುಂ ಪ್ರಾಪ್ನೋತ್ಯಸಂಶಯಂ ॥ ೧೭ ॥
ತಸ್ಮಾಚ್ಛಿಷ್ಯಂ ಗುರುರ್ನಿತ್ಯಂ ಪರೀಕ್ಷ್ಯೈವ ಪರಿಗ್ರಹೇತ್ ।
ಕಾಯೇನ ಮನಸಾ ವಾಚಾ ಗುರುಶುಶ್ರೂಷಣೇ ರತಂ ॥ ೧೮ ॥
ಅಸ್ತೇಯವೃತ್ತಿಮಾಸ್ತಿಕ್ಯಯುಕ್ತಂ ಮೋಕ್ಷಕೃತೋದ್ಯಮಂ ।
ಬ್ರಹ್ಮಚರ್ಯಾರತಂ ನಿತ್ಯಂ ದೃಢವ್ರತಮಕಲ್ಮಷಂ ॥ ೧೯ ॥

---

ಅಹಂಕಾರಮೋಹಸಹಿತನು, ದರಿದ್ರನು, ರೋಗಾವಿಷ್ಟನು, ಕೋಪಸ್ವಭಾವದವನು, ವಿಷಯಾಭಿಲಾಷೆಯುಳ್ಳವನು, ಭೋಗಗಳಲ್ಲಿಯೇ ಆಸಕ್ತನಾದವನು, ಅಸೂಯೆ ಮಾತ್ಸರ್ಯಗಳಿಂದೊಡಗೂಡಿದವನು, ಮೊಂಡುಸ್ವಭಾವದವನು, ಕ್ರೂರಭಾಷಿಯಾದವನು, ಅನ್ಯಾಯದಿಂದ ಧನವನ್ನು ಸಂಪಾದಿಸಿದವನು, ಯಾವಾಗಲೂ ಪರಸ್ತ್ರೀಯರಲ್ಲಿಯೇ ನಿರತನಾಗಿರುವವನು, ವಿದ್ವಾಂಸರನ್ನು ದ್ವೇಷಿಸುವವನು, ಮೂಢನು, ತಾನೇ ಪಂಡಿತನೆಂದು ಹೆಮ್ಮೆಗೊಳ್ಳುವವನು, ವ್ರತನಿಯಮಗಳನ್ನು ತ್ಯಜಿಸಿದವನು, ಕಷ್ಟಜೀವಿಯಾದವನು, ಲೋಭಿಯು, ಕೆಟ್ಟಮನಸ್ಸಿನವನು, ಅಮಿತಾಹಾರಿಯು, ಕ್ರೂರವ್ಯಾಪಾರವುಳ್ಳವನು, ದುಷ್ಟರಿಗೆ ಮುಖಂಡನಾದವನು, ಕೃಪಣನು, ಪಾಪಿಯು, ರೌದ್ರಾಕಾರವನ್ನು ತಾಳಿದವನು, ತನ್ನನ್ನಾಶ್ರಯಿಸುವವರಿಗೆ ಭಯಂಕರನು—ಇಂತಹ ದುರ್ಗುಣಗಳಿಂದ ಕೂಡಿದ ಮನುಷ್ಯನನ್ನು ಶಿಷ್ಯನನ್ನಾಗಿ ಪರಿಗ್ರಹಿಸಬಾರದು. ಹಾಗೆ ಸ್ವೀಕರಿಸಿದಲ್ಲಿ ಆ ದೋಷವು ಗುರುವಿಗೇ ಅಂಟಿಕೊಳ್ಳುವುದು.

೧೭. ಮಂತ್ರಿಯ ದೋಷವು ರಾಜನನ್ನೂ, ಹೆಂಡತಿಯ ದೋಷವು ಗಂಡನನ್ನೂ ಹೇಗೆ ಆಶ್ರಯಿಸುವುದೊ, ಹಾಗೆಯೇ ಶಿಷ್ಯನ ದೋಷಗಳು ಗುರುವನ್ನು ಆಶ್ರಯಿಸುವುದರಲ್ಲಿ ಸಂಶಯವಿಲ್ಲ.

೧೮–೨೧. ಆದುದರಿಂದ ಪುನಃಪುನಃ ಪರೀಕ್ಷೆಮಾಡಿ ಗುರುವು ಶಿಷ್ಯನನ್ನು ಸ್ವೀಕರಿಸಬೇಕು. ಶರೀರ ಮನಸ್ಸು ಮಾತುಗಳಿಂದ ಗುರು ಶುಶ್ರೂಷೆಯಲ್ಲಿ

ಪ್ರಸನ್ನಹೃದಯಂ ಶುದ್ಧಮಶಠಂ ವಿಮಲಾಶಯಂ ।
ಪರೋಪಕಾರನಿರತಂ ಸ್ವಾರ್ಥೇ ಚ ವಿಗತಸ್ಪೃಹಂ ॥ ೨೦ ॥
ಸ್ವಚಿತ್ತವಿತ್ತ ದೇಹೈಸ್ತು ಪರಿತೋಷಕರಂ ಗುರೋಃ ।
ಆಶ್ರಿತಾನಾಂ ತಥಾ ಪುತ್ರ ಪರಿತೋಷಕರಂ ಶುಚಿಂ ॥ ೨೧ ॥
ಈದೃಗ್ವಿಧಾಯ ಶಿಷ್ಯಾಯ ಮಂತ್ರಂ ದದ್ಯಾತ್ತು ನಾನ್ಯಥಾ ।
ಯದ್ಯನ್ಯಥಾ ವದೇತ್ತಸ್ಮಿನ್ ದೇವತಾಶಾಪ ಆಪತೇತ್ ॥ ೨೨ ॥
ಶೃಣು ಪುತ್ರ ಪ್ರವಕ್ಷ್ಯಾಮಿ ಗುರೋರಪಿ ಚ ಲಕ್ಷಣಂ ।
ಏಭಿಸ್ತು ಲಕ್ಷಣೈರ್ಯುಕ್ತೋ ಗುರುರೇವ ಭವೇನ್ನೃಣಾಂ ॥ ೨೩ ॥
ಸಮಚೇತಾಃ ಪ್ರಶಾಂತಾತ್ಮಾ ವಿಮನ್ಯುಶ್ಚ ಸುಹೃನ್ನೃಣಾಂ ।
ಸಾಧುರ್ಮಹಾನ್ ಸಮೋ ಲೋಕೇ ಸ ಗುರುಃ ಪರಿಕೀರ್ತಿತಃ ॥ ೨೪ ॥
ಮಮ ವ್ರತಧರೋ ನಿತ್ಯಂ ವೈಷ್ಣವಾನಾಂ ಸುಸಂಮತಃ ।
ಮದಾಶ್ರಯಕಥಾಸಕ್ತೋ ಮಮೋತ್ಸವರತಸ್ಸದಾ ॥ ೨೫ ॥

---

ನಿರತನಾದವನೂ, ಪರದ್ರವ್ಯಾಪೇಕ್ಷೆಯಿಲ್ಲದವನೂ, ಪರಲೋಕ ಪರಮಾತ್ಮರಿರುವರೆಂದು ನಂಬಿರುವವನೂ, ಮೋಕ್ಷಲಾಭಕ್ಕಾಗಿ ಪ್ರಯತ್ನಪಡುವವನೂ, ಬ್ರಹ್ಮಚರ್ಯ ವ್ರತವನ್ನು ಪಾಲಿಸುವವನೂ, ನಿತ್ಯವೂ ದೃಢಸಂಕಲ್ಪವುಳ್ಳವನೂ, ಪರೋಪಕಾರದಲ್ಲಿ ನಿರತನೂ, ಸ್ವಾರ್ಥದಲ್ಲಿ ಅಪೇಕ್ಷೆಯಿಲ್ಲದವನೂ, ತನ್ನ ಮನಸ್ಸು, ಧನ, ದೇಹಗಳಿಂದ ಗುರುವಿಗೆ ಸಂತೋಷವನ್ನುಂಟುಮಾಡುವವನೂ, ತನ್ನನ್ನು ಆಶ್ರಯಿಸಿದವರಿಗೆ ಸಂತೋಷವನ್ನುಂಟುಮಾಡುವವನೂ, ಶುಚಿರ್ಭೂತನೂ ಆದವನು ಸಚ್ಛಿಷ್ಯನೆನಿಸುವನು.

೨೨. ಈ ವಿಧವಾದ ಸದ್ಗುಣಗಳುಳ್ಳವನಿಗೆ ಈ ಉತ್ತಮಮಂತ್ರವನ್ನು ಉಪದೇಶಮಾಡಬೇಕೇ ಹೊರತು ಇತರರಿಗೆ ಹೇಳಿಕೊಡಬಾರದು. ಹಾಗೆ ಅಯೋಗ್ಯನಿಗೆ ಮಂತ್ರೋಪದೇಶವಾದಲ್ಲಿ ಗುರುವಾದವನೂ ಶಿಷ್ಯನೂ ಸಹ ದೇವತೆಗಳ ಶಾಪಕ್ಕೆ ಗುರಿಯಾಗುವರು.

೨೩. ಪುತ್ರನೆ! ಇನ್ನು ಗುರುವಿನ ಲಕ್ಷಣಗಳನ್ನು ವಿವರಿಸುವೆನು. ಮುಂದೆ ಹೇಳುವ ಲಕ್ಷಣಗಳಿಂದೊಡಗೂಡಿದವನೇ ಜನರಿಗೆ ಗುರುವಾಗಲು ಯೋಗ್ಯನೆಂದು ತಿಳಿಯಬೇಕು.

೨೪. ಸಮಚಿತ್ತನು, ಪ್ರಶಾಂತವಾದ ಮನಸ್ಸುಳ್ಳವನು, ಕೋಪರಹಿತನು, ಸಕಲ ಜನರಿಗೂ ಸ್ನೇಹಿತನು, ಸಾಧುಸ್ವಭಾವದವನು, ಲೋಕದಲ್ಲಿ ಸಮದೃಷ್ಟಿಯುಳ್ಳವನು–ಇವನೇ ಗುರುವೆಂದು ಹೇಳಲ್ಪಟ್ಟಿರುವುದು.

೨೫–೨೭. ನನ್ನ ವ್ರತಗಳನ್ನು ಪಾಲಿಸುವವನು, ವೈಷ್ಣವರಿಗೆ ಅಭಿವಂದ್ಯಮಾನನಾದವನು, ನನ್ನ ಲೀಲಾ ವಿನೋದಗಳ ಕಥೆಗಳಲ್ಲಿ ಆಸಕ್ತನಾದವನು,

ಕೃಪಾಸಿಂಧುಃ ಸುಪೂರ್ಣಾರ್ಥಃ ಸರ್ವಸತ್ತ್ವೋಪಕಾರಕಃ ।
ನಿಃಸ್ಪೃಹಸ್ಸರ್ವತಸ್ಸಿದ್ಧಃ ಸರ್ವವಿದ್ಯಾವಿಶಾರದಃ ॥ ೨೬ ॥
ಸರ್ವಸಂಶಯಸಂಛೇತ್ತಾಽನಲಸೋ ಗುರುರಾದೃತಃ ।
ಬ್ರಾಹ್ಮಣಸ್ಸರ್ವಕಾಲಜ್ಞಃ ಕುರ್ಯಾತ್ಸರ್ವೇಷ್ವನುಗ್ರಹಂ ॥ ೨೭ ॥
ಪೂರ್ವೋಕ್ತಲಕ್ಷಣೈರ್ಯುಕ್ತಃ ಶಿಷ್ಯ ಈದೃಗ್ವಿಧಾದ್ಗುರೋಃ ।
ಗೃಹ್ಣೀಯಾತ್ಪುತ್ರ ತನ್ಮಂತ್ರಂ ಮಾರ್ಗಶೀರ್ಷೇ ಮುದಾಯನೇ ॥ ೨೮ ॥
ವೈಷ್ಣವಾನಾಂ ವ್ರತಾನಾಂ ಚ ಕುರ್ಯಾತ್ಸ್ವೀಕರಣಂ ಬುಧಃ ।
ಮತ್ಪ್ರಿಯಂ ಶೃಣುಯಾಚ್ಚಶ್ವಚ್ಛ್ರೀಮದ್ಭಾಗವತಂ ಪರಂ ॥ ೨೯ ॥
ಶ್ರೀಮದ್ಭಾಗವತಂ ನಾಮ ಪುರಾಣಂ ಲೋಕ ವಿಶ್ರುತಂ ।
ಶೃಣುಯಾಚ್ಛ್ರದ್ಧಯಾ ಯುಕ್ತೋ ಮಮ ಸಂತೋಷಕಾರಣಂ ॥೩೦॥
ನಿತ್ಯಂ ಭಾಗವತಂ ಯಸ್ತು ಪುರಾಣಂ ಪಠತೇ ನರಃ ।
ಪ್ರತ್ಯಕ್ಷರಂ ಭವೇತ್ತಸ್ಯ ಕಪಿಲಾದಾನಜಂ ಫಲಂ ॥ ೩೧ ॥

---

ನನ್ನ ಪೂಜೋತ್ಸವಗಳಲ್ಲಿಯೇ ಯಾವಾಗಲೂ ನಿರತನಾದವನು, ಕೃಪಾ ಸಮುದ್ರನು, ಆಪ್ತಮನೋರಥನು, ಸಕಲ ಪ್ರಾಣಿಗಳಿಗೂ ಉಪಕಾರವನ್ನೆಣಿಸು ವವನು, ಆಶಾರಹಿತನು, ಸಿದ್ಧನು, ಸಕಲವಿದ್ಯಾಪಾರಂಗತನು, ಶಿಷ್ಯನ ಸಕಲ ಸಂಶಯಗಳನ್ನೂ ನಿರ್ಮೂಲಗೊಳಿಸಲು ಶಕ್ತನಾದವನು, ಆಲಸ್ಯರಹಿತನು, ಆದರವುಳ್ಳವನು, ಬ್ರಹ್ಮಜ್ಞಾನಿಯು, ತ್ರಿಕಾಲಗಳನ್ನು ತಿಳಿದವನು, ಸಕಲ ರಲ್ಲಿಯೂ ಅನುಗ್ರಹಬುದ್ಧಿಯುಳ್ಳವನು—ಈ ಗುಣಗಳುಳ್ಳವನೇ ಗುರುವೆನಿ ಸುವನು.

೨೮. ಎಲೈ ಪುತ್ರನೆ! ಹಿಂದೆ ಹೇಳಿದ ಸಾಧನಸಂಪತ್ತಿಗಳಿಂದ ಕೂಡಿದ ಶಿಷ್ಯನು ಈ ವಿಧವಾದ ಗುರುವನ್ನು ಸಮೀಪಿಸಿ ಉತ್ತರಾಯಣದ ಮಾರ್ಗಶೀರ್ಷ ಮಾಸದಲ್ಲಿ ಆತನಿಂದ ಮಂತ್ರೋಪದೇಶವನ್ನು ಪಡೆಯಬೇಕು.

೨೯. ವಿದ್ವಾಂಸನಾದವನು ಸಮಸ್ತ ವೈಷ್ಣವ ನಿಯಮಗಳನ್ನು ಸ್ವೀಕರಿಸಿ ನಿತ್ಯವೂ ನನಗೆ ಅತ್ಯಂತ ಪ್ರಿಯವೂ, ಉತ್ತಮೋತ್ತಮವೂ ಆದ ಶ್ರೀಮದ್ಭಾಗ ವತವನ್ನು ಶ್ರವಣಮಾಡಬೇಕು.

೩೦. ಲೋಕವಿಖ್ಯಾತವಾದುದಾಗಿ ನನಗೆ ಸಂತೋಷವನ್ನುಂಟುಮಾಡುವ ಶ್ರೀಮದ್ಭಾಗವತ ಪುರಾಣವನ್ನು ನನ್ನ ಭಕ್ತನು ಶ್ರದ್ಧೆಯಿಂದೊಡಗೂಡಿದವನಾಗಿ ನಿತ್ಯವೂ ಕೇಳಬೇಕು.

೩೧. ಪ್ರತಿದಿವಸವೂ ಭಾಗವತವನ್ನು ಯಾವ ಮನುಷ್ಯನು ಪುರಾಣ ರೂಪವಾಗಿ ಪಠನಮಾಡುವನೊ, ಅವನು ಪಠಿಸಿದ ಒಂದೊಂದು ಅಕ್ಷರಕ್ಕೂ ಕಪಿಲೆಯಾದ ಗೋವನ್ನು ದಾನಮಾಡಿದ ಫಲವು ಲಭಿಸುವುದು.

ಶ್ಲೋಕಾರ್ಧಂ ಶ್ಲೋಕಪಾದಂ ವಾ ನಿತ್ಯಂ ಭಾಗವತೋದ್ಭವಂ ।
ಪಠತೇ ಶೃಣುಯಾದ್ಯಸ್ತು ಗೋಸಹಸ್ರಫಲಂ ಲಭೇತ್ ॥ ೩೨ ॥
ಯಃ ಪಠೇತ್ಪ್ರಯತೋ ನಿತ್ಯಂ ಶ್ಲೋಕಂ ಭಾಗವತಂ ಸುತ ।
ಅಷ್ಟಾದಶಪುರಾಣಾನಾಂ ಫಲಮಾಪ್ನೋತಿ ಮಾನವಃ ॥ ೩೩ ॥
ನಿತ್ಯಂ ಮಮ ಕಥಾ ಯತ್ರ ತತ್ರ ತಿಷ್ಠಂತಿ ವೈಷ್ಣವಾಃ ।
ಕಲಿಬಾಹ್ಯಾ ನರಾಸ್ತೇವೈ ಯೇಽರ್ಚಯಂತಿ ಸದಾ ಮಮ ॥ ೩೪ ॥
ವೈಷ್ಣವಾನಾಂ ತು ಶಾಸ್ತ್ರಾಣಿ ಯೇಽರ್ಚಯಂತಿ ಗೃಹೇ ನರಾಃ ।
ಸರ್ವಪಾಪವಿನಿರ್ಮುಕ್ತಾ ಭವಂತಿ ಸುರವಂದಿತಾಃ ॥ ೩೫ ॥
ಯೇಽರ್ಚಯಂತಿ ಗೃಹೇ ನಿತ್ಯಂ ಶಾಸ್ತ್ರಂ ಭಾಗವತಂ ಕಲೌ ।
ಆಸ್ಫೋಟಯಂತಿ ವಲ್ಗಂತಿ ತೇಷಾಂ ಪ್ರೀತೋ ಭವಾಮ್ಯಹಂ ॥ ೩೬ ॥
ಯಾವದ್ದಿನಾನಿ ಹೇ ಪುತ್ರ ಶಾಸ್ತ್ರಂ ಭಾಗವತಂ ಗೃಹೇ ।
ತಾವತ್ಪಿಬಂತಿ ಪಿತರಃ ಕ್ಷೀರಂ ಸರ್ಪಿರ್ಮಧೂದಕಂ ॥ ೩೭ ॥

---

೩೨. ಒಂದು ಶ್ಲೋಕದ ಅರ್ಧವನ್ನಾಗಲಿ ಪಾದಮಾತ್ರವನ್ನಾಗಲಿ ಭಾಗವತಮಹಾಪುರಾಣದಿಂದ ನಿತ್ಯದಲ್ಲಿಯೂ ಯಾವನು ಓದುವನೊ, ಯಾವನು ಕೇಳುವನೊ, ಅವನಿಗೆ ಸಾವಿರ ಗೋದಾನಗಳ ಫಲವು ಪ್ರಾಪ್ತವಾಗುವುದು.

೩೩-೩೪. ಪುತ್ರನೆ! ಯಾವನು ಪ್ರಯತ್ನಪೂರ್ವಕವಾಗಿ ಪ್ರತಿನಿತ್ಯವೂ ಭಾಗವತದ ಒಂದು ಶ್ಲೋಕವನ್ನಾದರೂ ಪಾರಾಯಣ ಮಾಡುವನೊ, ಆ ಮಾನವನು ಹದಿನೆಂಟು ಪುರಾಣಗಳನ್ನೂ ಪಠನ ಮಾಡಿದ ಫಲವನ್ನು ಹೊಂದುವನು. ನಿತ್ಯವೂ ನನ್ನ ಸತ್ಕಥೆಯೆಲ್ಲಿ ನಡೆಯುತ್ತಿರುವುದೊ, ಅಲ್ಲಿಯೇ ವಿಷ್ಣುಭಕ್ತರು ನೆರೆದಿರುವರು. ಯಾರು ನನ್ನನ್ನು ನಿತ್ಯವೂ ಪೂಜೆಮಾಡುವರೊ, ಆ ಮನುಷ್ಯರು ಕಲಿಕಲ್ಮಷಗಳಿಂದ ದೂರರಾಗಿರುವರು.

೩೫. ವಿಷ್ಣು ಪ್ರತಿಪಾದಕಗಳಾದ ಶಾಸ್ತ್ರಗಳು ಯಾವ ಮಾನವರ ಮನೆಗಳಲ್ಲಿ ಪೂಜಿಸಲ್ಪಡುವುವೊ, ಅವರು ಸಕಲ ಪಾತಕಗಳಿಂದಲೂ ಮುಕ್ತರಾಗಿ ದೇವತೆಗಳಿಗೂ ಪೂಜ್ಯರಾಗಿರುವರು.

೩೬. ಯಾರು ನಿತ್ಯವೂ ಕಲಿಯುಗದಲ್ಲಿ ಭಾಗವತ ಗ್ರಂಥವನ್ನು ತಮ್ಮ ಮನೆಗಳಲ್ಲಿ ಪೂಜಿಸುವರೊ, ಯಾರು ಅರ್ಥ ವಿವರಣವನ್ನು ಮಾಡುವರೊ, ಯಾರು ಸ್ತೋತ್ರಮಾಡುವರೊ, ಅವರಲ್ಲಿ ನಾನು ಅತ್ಯಂತ ಪ್ರೀತಿಯುಳ್ಳವನಾಗುವೆನು.

೩೭. ಎಲೈ ಸುತನೆ! ಯಾವ ಮನುಷ್ಯನ ಮನೆಯಲ್ಲಿ ಎಷ್ಟು ದಿನಗಳವರೆಗೂ ಭಾಗವತವೆಂಬ ಶಾಸ್ತ್ರದ ಅಭ್ಯಾಸವು ನಡೆಯುತ್ತಿರುವುದೊ, ಅಲ್ಲಿಯ

ಯಚ್ಛಂತಿ ವೈಷ್ಣವೇ ಭಕ್ತ್ಯಾ ಶಾಸ್ತ್ರಂ ಭಾಗವತಂ ಹಿ ಯೇ ।
ಕಲ್ಪಕೋಟಿ ಸಹಸ್ರಾಣಿ ಮಮ ಲೋಕೇ ವಸಂತಿ ತೇ ॥ ೩೮ ॥
ಯೇಽರ್ಚಯಂತಿ ಸದಾ ಗೇಹೇ ಶಾಸ್ತ್ರಂ ಭಾಗವತಂ ನರಾಃ ।
ಪ್ರೀಣಿತಾಸ್ತೈಶ್ಚ ವಿಬುಧಾ ಯಾವದಾಽಽಭೂತಸಂಪ್ಲವಂ ॥ ೩೯ ॥
ಶ್ಲೋಕಾರ್ಧಂ ಶ್ಲೋಕಪಾದಂ ವಾ ವರಂ ಭಾಗವತಂ ಗೃಹೇ ।
ಶತಶೋಽಥ ಸಹಸ್ರೈಶ್ಚ ಕಿಮನ್ಯೈಃ ಶಾಸ್ತ್ರಸಂಗ್ರಹೈಃ ॥ ೪೦ ॥
ನ ಯಸ್ಯ ತಿಷ್ಠತೇ ಶಾಸ್ತ್ರಂ ಗೃಹೇ ಭಾಗವತಂ ಕಲೌ ।
ನ ತಸ್ಯ ಪುನರಾವೃತ್ತಿರ್ಯಾಮ್ಯಪಾಶಾತ್ಕದಾಚನ ॥ ೪೧ ॥
ಕಥಂ ಸ ವೈಷ್ಣವೋ ಜ್ಞೇಯಃ ಶಾಸ್ತ್ರಂ ಭಾಗವತಂ ಕಲೌ ।
ಗೃಹೇ ನ ತಿಷ್ಠತೇ ಯಸ್ಯ ಶ್ವಪಚಾದಧಿಕೋಽಹಿ ಸಃ ॥ ೪೨ ॥
ಸರ್ವಸ್ವೇನಾಪಿ ಲೋಕೇಶ ಕರ್ತವ್ಯಃ ಶಾಸ್ತ್ರಸಂಗ್ರಹಃ ।
ವೈಷ್ಣವಸ್ತು ಸದಾ ಭಕ್ತ್ಯಾ ತುಷ್ಟ್ಯರ್ಥಂ ಮಮ ಪುತ್ರಕ ॥ ೪೩ ॥

---

ವರೆಗೂ ಯಜಮಾನನ ಪಿತೃದೇವತೆಗಳು ಸಾಸುವೆ ಜೇನುತುಪ್ಪಗಳಿಂದ ಕೂಡಿದ ಕ್ಷೀರವನ್ನು ಪಾನಮಾಡುತ್ತಿರುವರು.

೩೮. ವಿಷ್ಣುಭಕ್ತನಾದವನಿಗೆ ಯಾರು ಭಕ್ತಿಪೂರ್ವಕವಾಗಿ ಶ್ರೀಮದ್ಭಾಗವತ ಗ್ರಂಥವನ್ನು ದಾನಮಾಡುವರೊ, ಅವರು ಸಹಸ್ರಕೋಟಿ ಕಲ್ಪಗಳ ವರೆಗೂ ನನ್ನ ಲೋಕದಲ್ಲಿ ವಾಸಮಾಡುವರು.

೩೯–೪೦. ಯಾರು ನಿತ್ಯವೂ ತಮ್ಮ ಮನೆಗಳಲ್ಲಿ ಭಾಗವತ ಶಾಸ್ತ್ರವನ್ನು ಪೂಜೆ ಮಾಡುವರೊ, ಅವರು ಮಹಾ ಪ್ರಳಯಪರ್ಯಂತವೂ ದೇವತೆಗಳನ್ನು ತೃಪ್ತಿಪಡಿಸಿದವರಾಗುವರು. ಮನೆಯಲ್ಲಿ ಉತ್ತಮವಾದ ಭಾಗವತದ ಅರ್ಧ ಶ್ಲೋಕವನ್ನಾಗಲಿ ಶ್ಲೋಕಪಾದವನ್ನಾಗಲಿ ಪಠನಮಾಡಿದರೆ ಸಾಕು. ಇತರ ನೂರಾರು ಸಾವಿರಾರು ಶಾಸ್ತ್ರಗಳಿಂದ ಲಭಿಸುವುದೇನು?

೪೧. ಈ ಕಲಿಯುಗದಲ್ಲಿ ಯಾವನ ಮನೆಯಲ್ಲಿ ಪವಿತ್ರವಾದ ಭಾಗವತ ಗ್ರಂಥವಿರುವುದಿಲ್ಲವೊ, ಅವನಿಗೆ ಯಮನ ಪಾಶಗಳಿಂದ ಎಂದೆಂದಿಗೂ ಬಿಡುಗಡೆ ಯೆಂಬುದುಂಟಾಗಲಾರದು.

೪೨. ಯಾವನ ಮನೆಯಲ್ಲಿ ಶ್ರೀಮದ್ಭಾಗವತಗ್ರಂಥವು ದೊರಕುವುದಿಲ್ಲವೊ, ಕಲಿಯುಗದಲ್ಲಿ ಅವನನ್ನು ವೈಷ್ಣವನೆಂದು ಹೇಗೆತಾನೆ ತಿಳಿಯಲು ಸಾಧ್ಯವಾಗುವುದು. ಆ ಮಾನವನು ಚಂಡಾಲನಿಗಿಂತಲೂ ನೀಚನಾದವನೇ ಸರಿ.

೪೩. ಪುತ್ರನೆ! ನನಗೆ ಸಂತೋಷವನ್ನುಂಟುಮಾಡುವುದಕ್ಕಾಗಿ ವೈಷ್ಣವರು ಭಕ್ತಿಯಿಂದ ತಮ್ಮ ಸರ್ವಸ್ವವನ್ನಾದರೂ ಕೊಟ್ಟು ಶಾಸ್ತ್ರಗ್ರಂಥಗಳನ್ನು ಸಂಪಾದಿಸಬೇಕು.

**ಯತ್ರ ಯತ್ರ ಭವೇತ್ಪುಣ್ಯಂ ಶಾಸ್ತ್ರಂಭಾಗವತಂ ಕಲೌ ।**
**ತತ್ರ ತತ್ರ ಸದೈವಾಽಹಂ ಭವಾಮಿ ತ್ರಿದಶೈಃ ಸಹ ॥ ೪೪ ॥**
**ತತ್ರ ಸರ್ವಾಣಿ ತೀರ್ಥಾನಿ ನದೀನದಸರಾಂಸಿಚ ।**
**ಯಜ್ಞಾಃ ಸಪ್ತಪುರೀ ನಿತ್ಯಂ ಪುಣ್ಯಾಃ ಸರ್ವೇ ಶಿಲೋಚ್ಚಯಾಃ ॥ ೪೫ ॥**
**ಶ್ರೋತವ್ಯಂ ಮಮ ಶಾಸ್ತ್ರಂ ಹಿ ಯಶೋಧರ್ಮಜಯಾರ್ಥಿನಾ ।**
**ಪಾಪಕ್ಷಯಾರ್ಥಂ ಲೋಕೇಶ ಮೋಕ್ಷಾರ್ಥಂ ಧರ್ಮಬುದ್ಧಿನಾ ॥ ೪೬ ॥**
**ಶ್ರೀಮದ್ಭಾಗವತಂ ಪುಣ್ಯಮಾಯುರಾರೋಗ್ಯಪುಷ್ಟಿದಂ ।**
**ಪಠನಾಚ್ಛ್ರವಣಾದ್ವಾಪಿ ಸರ್ವಪಾಪೈಃ ಪ್ರಮುಚ್ಯತೇ ॥ ೪೭ ॥**
**ನ ಶೃಣ್ವಂತಿ ನ ಹೃಷ್ಯಂತಿ ಶ್ರೀಮದ್ಭಾಗವತಂ ಪರಂ ।**
**ಸತ್ಯಂ ಸತ್ಯಂ ಹಿ ಲೋಕೇಶ ತೇಷಾಂ ಸ್ವಾಮೀ ಸದಾ ಯಮಃ ॥ ೪೮ ॥**
**ನ ಯಚ್ಛತಿ ಯದಾ ಮರ್ತ್ಯಃ ಶ್ರೋತುಂ ಭಾಗವತಂ ಸುತ ।**
**ಏಕಾದಶ್ಯಾಂ ವಿಶೇಷೇಣ ನಾಸ್ತಿ ಪಾಪರತಸ್ತತಃ ॥ ೪೯ ॥**

---

೪೪. ಎಲ್ಲಿ ಎಲ್ಲಿ ಪವಿತ್ರವಾದ ಭಾಗವತಶಾಸ್ತ್ರವು ಕಲಿಯುಗದಲ್ಲಿ ನೆಲಸಿರುವುದೊ, ಅಲ್ಲಿಯೇ ನಾನು ಮುವತ್ತುಮೂರುಕೋಟಿ ದೇವತೆಗಳೊಡನೆ ವಾಸಮಾಡುತ್ತಿರುವೆನು.

೪೫. ಅಲ್ಲಿಯೇ ಸಕಲ ತೀರ್ಥಗಳೂ, ನದಿಗಳೂ, ನದಗಳೂ, ಸರೋವರ ಗಳೂ, ಅಯೋಧ್ಯಾದಿ ಸಪ್ತಪುರಿಗಳೂ, ಪುಣ್ಯತಮಗಳಾದ ಸಮಸ್ತ ಪರ್ವತಗಳೂ ಸನ್ನಿಹಿತವಾಗಿರುವುವು.

೪೬. ಧರ್ಮದಲ್ಲಿ ಆಸಕ್ತಿಯುಳ್ಳವನು ಕೀರ್ತಿಧರ್ಮಗಳ ಲಾಭಕ್ಕಾಗಿಯೂ ಪಾಪನಿವಾರಣೆಗಾಗಿಯೂ, ಮೋಕ್ಷಕ್ಕಾಗಿಯೂ ನನ್ನ ಶಾಸ್ತ್ರವನ್ನು ಕೇಳು ತ್ತಿರಬೇಕು.

೪೭. ಶ್ರೀಮದ್ಭಾಗವತವೆಂಬ ಗ್ರಂಥವು ಮನುಷ್ಯನಿಗೆ ಪುಣ್ಯವನ್ನೂ, ಆಯುಸ್ಸಿನ ಅಭಿವೃದ್ಧಿಯನ್ನೂ, ದೇಹಾರೋಗ್ಯವನ್ನೂ, ಸೌಭಾಗ್ಯಗಳನ್ನೂ ಒದಗಿಸಿಕೊಡುವುದು. ಅದನ್ನು ಪಠನಮಾಡುವುದರಿಂದಲೂ, ಕೇಳುವುದ ರಿಂದಲೂ ಸಕಲ ಪಾಪಗಳೂ ನಾಶವನ್ನು ಹೊಂದುವುವು.

೪೮. ಅತ್ಯುತ್ತಮವಾದ ಶ್ರೀಭಾಗವತಮಹಾಪುರಾಣವನ್ನು ಯಾರು ಕೇಳುವುದಿಲ್ಲವೊ, ಮತ್ತು ಕೇಳಿ ಸಂತೋಷಪಡುವುದಿಲ್ಲವೊ, ಅವರಿಗೆ ಯಮಧರ್ಮ ರಾಯನೇ ಸ್ವಾಮಿಯೆಂಬುದು ಸತ್ಯವು.

೪೯. ಎಲೈ ಬ್ರಹ್ಮನೆ! ಯಾವನು ಭಾಗವತದ ಅನುವಾದವು ನಡೆಯುತ್ತಿರು ವಲ್ಲಿಗೆ ಹೋಗುವುದಿಲ್ಲವೊ, ವಿಶೇಷವಾಗಿ ಏಕಾದಶಿಯಲ್ಲಿ ಪುರಾಣಶ್ರವಣವನ್ನು ಮಾಡುವುದಿಲ್ಲವೊ, ಅವನಿಗಿಂತಲೂ ಪಾಪಿಷ್ಠನಾದ ಮನುಷ್ಯನು ಮತ್ತೊಬ್ಬನಿಲ್ಲ.

ಶ್ಲೋಕಂ ಭಾಗವತಂ ಚಾಪಿ ಶ್ಲೋಕಾರ್ಧಂ ಪಾದಮೇವ ಚ ।
ಲಿಖಿತಂ ತಿಷ್ಠತೇ ಯಸ್ಯ ಗೃಹೇ ತಸ್ಯ ವಸಾಮ್ಯಹಂ ॥ ೫೦ ॥
ಸರ್ವಾಶ್ರಮಾಭಿಗಮನಂ ಸರ್ವತೀರ್ಥಾವಗಾಹನಂ ।
ನ ತಥಾ ಪಾವನಂ ನೄಣಾಂ ಶ್ರೀಮದ್ಭಾಗವತಂ ಯಥಾ ॥ ೫೧ ॥
ಯತ್ರ ಯತ್ರ ಚತುರ್ವಕ್ತ್ರ ಶ್ರೀಮದ್ಭಾಗವತಂ ಭವೇತ್ ।
ಗಚ್ಛಾಮಿ ತತ್ರ ತತ್ರಾಽಹಂ ಗೌರ್ಯಥಾ ಸುತವತ್ಸಲಾ ॥ ೫೨ ॥
ಮತ್ಕಥಾವಾಚಕಂ ನಿತ್ಯಂ ಮತ್ಕಥಾಶ್ರವಣೇರತಂ ।
ಮತ್ಕಥಾಪ್ರೀತಮನಸಂ ನಾಽಹಂ ತ್ಯಕ್ಷ್ಯಾಮಿ ತಂ ನರಂ ॥ ೫೩ ॥
ಶ್ರೀಮದ್ಭಾಗವತಂ ಪುಣ್ಯಂ ದೃಷ್ಟ್ವಾ ನೋತ್ತಿಷ್ಠತೇ ಹಿ ಯಃ ।
ಸಾಂವತ್ಸರಂ ತಸ್ಯ ಪುಣ್ಯಂ ವಿಲಯಂ ಯಾತಿ ಪುತ್ರಕ ॥ ೫೪ ॥
ಶ್ರೀಮದ್ಭಾಗವತಂ ದೃಷ್ಟ್ವಾ ಪ್ರತ್ಯುತ್ಥಾನಾಭಿವಾದನೈಃ ।
ಸಂಮಾನಯೇತ ತಂ ದೃಷ್ಟ್ವಾ ಭವೇತ್ಪ್ರೀತಿರ್ಮಮಾತುಲಾ ॥ ೫೫ ॥
ದೃಷ್ಟ್ವಾ ಭಾಗವತಂ ದೂರಾತ್ ಪ್ರಕ್ರಮೇತ್ಸಂಮುಖಂ ಹಿ ಯಃ ।
ಪದೇಪದೇಽಶ್ವಮೇಧಸ್ಯ ಫಲಂ ಪ್ರಾಪ್ನೋತ್ಯಸಂಶಯಂ ॥ ೫೬ ॥

---

೫೦. ಭಾಗವತದ ಪೂರ್ಣ ಗ್ರಂಥವಾಗಲಿ, ಒಂದು ಶ್ಲೋಕವಾಗಲಿ, ಅರ್ಧಶ್ಲೋಕವಾಗಲಿ, ಪಾದವಾದರೂ ಆಗಲಿ, ಬರೆಯಲ್ಪಟ್ಟಿರುವ ಮನೆಯಲ್ಲಿ ನಾನೇ ವಾಸಮಾಡಿಕೊಂಡಿರುವೆನು.

೫೧. ಸಕಲ ಆಶ್ರಮ ಧರ್ಮಗಳ ಅನುಸರಣೆಯೂ, ಸಮಸ್ತ ತೀರ್ಥಗಳ ಸೇವೆಯೂ ಮನುಷ್ಯರಿಗೆ ಶ್ರೀಭಾಗಗವತದಂತೆ ಪವಿತ್ರಗೊಳಿಸಲಾರವು.

೫೨. ಎಲೈ ಚತುರಾನನೆ! ಎಲ್ಲಿ ಎಲ್ಲಿ ಶ್ರೀಮದ್ಭಾಗವತ ಪುರಾಣದ ಅನುವಾದವು ನಡೆಯುತ್ತಿರುವುದೊ, ಅಲ್ಲಿಗೆ ನಾನು ಕರುವಿನ ವಾತ್ಸಲ್ಯದಿಂದ ಹಿಂಬಾಲಿಸುವ ಆಕಳಿನಂತೆ ಬಂದು ಸೇರುವೆನು.

೫೩. ನನ್ನ ಕಥೆಗಳನ್ನು ಓದುವವನನ್ನೂ, ನನ್ನ ಚರಿತ್ರೆಯ ಶ್ರವಣ ದಲ್ಲಿಯೇ ನಿರತನಾಗಿರುವವನನ್ನೂ, ನನ್ನ ಲೀಲೆಗಳಿಂದ ಆನಂದಗೊಳ್ಳುವ ಮನಸ್ಸುಳ್ಳವನನ್ನೂ ನಾನು ಎಂದಿಗೂ ಕೈಬಿಡುವುದಿಲ್ಲ.

೫೪. ಪುತ್ರನೆ! ಪವಿತ್ರವಾದ ಶ್ರೀಭಾಗವತ ಗ್ರಂಥವನ್ನು ಕಂಡು ಯಾವನು ಎದ್ದು ನಿಂತು ಮರ್ಯಾದೆ ಮಾಡುವುದಿಲ್ಲವೊ, ಅವನು ಒಂದು ವರ್ಷದಲ್ಲಿ ಮಾಡಿದ ಕಾರ್ಯಗಳ ಪುಣ್ಯವೆಲ್ಲವೂ ನಾಶವಾಗುವುದು.

೫೫. ಆದುದರಿಂದ ಪ್ರತಿ ಮನುಷ್ಯನೂ ಶ್ರೀಭಾಗವತನನ್ನು ಕಂಡೊಡನೆ ಎದ್ದು ನಿಂತು ಅದಕ್ಕೆ ನಮಸ್ಕಾರ ಮಾಡಿ ಮರ್ಯಾದೆಯನ್ನು ಮಾಡಬೇಕು. ಅವನಲ್ಲಿ ನನಗೆ ಅಧಿಕವಾದ ಪ್ರೀತಿಯುಂಟಾಗುವುದು.

೫೬. ಭಾಗವತವನ್ನು ಕಂಡು ಅಭಿಲಾಷೆಯಿಂದ ಯಾವನು ಹತ್ತಿರಕ್ಕೆ

ಉತ್ಥಾಯ ಪ್ರಣಮೇದ್ಯೋ ವೈ ಶ್ರೀಮದ್ಭಾಗವತಂ ನರಃ ।
ಧನಂ ಪುತ್ರಾಂಸ್ತಥಾ ದಾರಾನ್ ಭಕ್ತಿಂ ಚ ಪ್ರದದಾಮ್ಯಹಂ ॥ ೫೭ ॥
ಮಹಾರಾಜೋಪಚಾರೈಸ್ತು ಶ್ರೀಮದ್ಭಾಗವತಂ ಸುತ ।
ಶೃಣ್ವಂತಿ ಯೇ ನರಾ ಭಕ್ತ್ಯಾ ತೇಷಾಂ ವಶ್ಯೋ ಭವಾಮ್ಯಹಂ ॥ ೫೮ ॥
ಮಹೋತ್ಸವೇಷು ಸರ್ವೇಷು ಶ್ರೀಮದ್ಭಾಗವತಂ ಪರಂ ।
ಶೃಣ್ವಂತಿ ಯೇ ನರಾ ಭಕ್ತ್ಯಾ ಮಮ ಪ್ರೀತ್ಯೈ ಚ ಸುವ್ರತ ॥ ೫೯ ॥
ವಸ್ತ್ರಾಲಂಕರಣೈಃ ಪುಷ್ಪೈಃ ಧೂಪದೀಪೋಪಹಾರಕೈಃ ।
ವಶೀಕೃತೋ ಹ್ಯಹಂ ತೈಶ್ಚ ಸತ್‌ಸ್ತ್ರಿಯಾ ಸತ್ಪತಿರ್ಯಥಾ ॥ ೬೦ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ದ್ವಿತೀಯೇ ವೈಷ್ಣವಖಂಡೇ ಮಾರ್ಗಶೀರ್ಷಮಾಹಾತ್ಮ್ಯೇ ಬ್ರಹ್ಮವಿಷ್ಣುಸಂವಾದೇ "ಭಾಗವತಶ್ರೈಷ್ಠ್ಯ ವರ್ಣನಂ" ನಾಮ ಷೋಡಶೋಽಧ್ಯಾಯಃ

---

ಓಡಿಬರುವನೊ, ಅವನಿಗೆ ಅಡಿಗಡಿಗೂ ಅಶ್ವಮೇಧದ ಫಲವು ಲಭಿಸುವುದರಲ್ಲಿ ಸಂದೇಹವಿಲ್ಲ.

೫೭. ಯಾವ ಮನುಷ್ಯನು ಎದ್ದು ಭಾಗವತ ಗ್ರಂಥಕ್ಕೆ ನಮಸ್ಕಾರವನ್ನು ಮಾಡುವನೊ, ಅವನಿಗೆ ನಾನು ಧನವನ್ನೂ, ಮಕ್ಕಳನ್ನೂ, ಹೆಂಡಂದಿರನ್ನೂ, ಭಕ್ತಿಭಾಗ್ಯವನ್ನೂ ಕೊಡುತ್ತೇನೆ.

೫೮. ಪ್ರಿಯನೆ! ವಿಶೇಷಗಳಾದ ರಾಜೋಪಚಾರಗಳಿಂದ ಭಾಗವತ ಪುರಾಣವನ್ನು ಯಾವ ಮಾನವನು ಭಕ್ತಿಯಿಂದ ಕೇಳುವರೊ, ಅವರಿಗೆ ನಾನು ವಶವರ್ತಿಯಾಗಿರುವೆನು.

೫೯-೬೦. ಎಲೈ ಪುತ್ರನೆ! ನನ್ನ ಸಂಬಂಧವಾದ ಉತ್ಸವಗಳಲ್ಲಿ ವಸ್ತ್ರಗಳು, ಆಭರಣಗಳು, ಪುಷ್ಪಗಳು, ಧೂಪ, ದೀಪ, ನೈವೇದ್ಯಾದಿಗಳಿಂದ ಭಾಗವತ ಗ್ರಂಥವನ್ನು ಪೂಜೆಮಾಡಿ ನನ್ನ ಪ್ರೀತಿಗಾಗಿ ಯಾವ ಮನುಷ್ಯರು ಭಕ್ತಿಯಿಂದ ಪುರಾಣಶ್ರವಣವನ್ನು ಮಾಡುವರೊ, ಅವರಿಗೆ ನಾನು ಪತಿವ್ರತೆಯಾದ ಸ್ತ್ರೀಯಳ ವಶದಲ್ಲಿರುವ ಸತ್ಪುರುಷನಂತೆ ವಶೀಕೃತನಾಗಿರುವೆನು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀ ಸ್ಕಾಂದಮಹಾಪುರಾಣದ ಎರಡನೆಯ ವೈಷ್ಣವಖಂಡದ ಮಾರ್ಗಶೀರ್ಷಮಾಹಾತ್ಮ್ಯದ ಬ್ರಹ್ಮವಿಷ್ಣುಸಂವಾದದಲ್ಲಿ "ಭಾಗವತಶ್ರೈಷ್ಠ್ಯ ವರ್ಣನ"ವೆಂಬ ಹದಿನಾರನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥ ಸಪ್ತದಶೋಽಧ್ಯಾಯಃ

### ಮಧುರಾಮಾಹಾತ್ಮ್ಯವರ್ಣನಂ

ಬ್ರಹ್ಮೋವಾಚ :—

**ಕಸ್ಮಿನ್‌ಕ್ಷೇತ್ರೇ ಹಿ ದೇವೇಶ ಮಾರ್ಗಶೀರ್ಷೋಽಧಿಕಸ್ಮೃತಃ ।**
**ಕಿಂ ಫಲಂ ಚ ಭವೇತ್ತಸ್ಮಿನ್ನೇತತ್ಸರ್ವಂ ವದ ಪ್ರಭೋ ॥ ೧ ॥**

ಶ್ರೀ ಭಗವಾನುವಾಚ :—

**ಮಧುರೇತಿ ಸುವಿಖ್ಯಾತಂ ಅಸ್ತಿ ಕ್ಷೇತ್ರಂ ಪರಂ ಮಮ ।**
**ಸುರಮ್ಯಾ ಚ ಪ್ರಶಸ್ತಾ ಚ ಜನ್ಮಭೂಮಿಃ ಪ್ರಿಯಾ ಮಮ ॥ ೨ ॥**
**ಪದೇ ಪದೇ ತೀರ್ಥಫಲಂ ಮಧುರಾಯಾಂ ಚತುರ್ಮುಖ ।**
**ಯತ್ರಯತ್ರ ನರಸ್ನಾತೋ ಮುಚ್ಯತೇ ಘೋರಕಿಲ್ಬಿಷಾತ್ ॥ ೩ ॥**
**ಸರ್ವಧರ್ಮವಿಹೀನಾನಾಂ ಪುರುಷಾಣಾಂ ದುರಾತ್ಮನಾಂ ।**
**ನರಕಾರ್ತಿಹರಾ ಪುತ್ರ ಮಧುರಾ ಪಾಪನಾಶಿನೀ ॥ ೪ ॥**

## ಕನ್ನಡದ ಅನುವಾದ

### ಮಧುರಾಮಾಹಾತ್ಮ್ಯವರ್ಣನ

೧. ಬ್ರಹ್ಮದೇವನು ಕೇಳುತ್ತಾನೆ:—ಎಲೈ ದೇವೋತ್ತಮನೆ! ಯಾವ ಕ್ಷೇತ್ರದಲ್ಲಿ ಮಾರ್ಗಶೀರ್ಷ ವ್ರತವನ್ನು ಮಾಡಲು ಅಧಿಕಫಲದಾಯಕವಾಗಿರುವುದು? ಮತ್ತು ಅದರಿಂದ ಮನುಷ್ಯನಿಗೆ ಲಾಭವೇನಾಗುವುದೆಂಬುದನ್ನೆಲ್ಲ ನನಗೆ ಹೇಳುವವನಾಗು.

೨. ಭಗವಂತನು ಹೇಳುತ್ತಾನೆ:—ನನಗೆ ಪರಮಪ್ರಿಯವಾದ ಮಧುರಾ ನಗರಿಯೆಂಬ ಪುಣ್ಯಕ್ಷೇತ್ರವೊಂದಿರುವುದು. ಆ ಪ್ರದೇಶವು ಮನೋಹರವೂ ಪ್ರಶಸ್ತವೂ ಆಗಿರುವುದು. ಅದು ನನಗೆ ಜನ್ಮಸ್ಥಾನವೂ ಆಗಿರುವುದು.

೩. ಚತುರ್ಮುಖನೆ! ಮಧುರಾನಗರಿಯಲ್ಲಿ ಹೆಜ್ಜೆಹೆಜ್ಜೆಗೂ ತೀರ್ಥಫಲವುಂಟು. ಅಲ್ಲಿಯ ಯಾವ ಯಾವ ತೀರ್ಥಗಳಲ್ಲಿ ಮನುಷ್ಯನು ಸ್ನಾನಮಾಡಿದರೂ, ಘೋರಪಾತಕಗಳಿಂದ ಬಿಡುಗಡೆಯನ್ನು ಹೊಂದುವನು.

೪. ಪುತ್ರನೆ! ಸಕಲ ವರ್ಣಾಶ್ರಮಧರ್ಮಹೀನರೂ, ದುರಾತ್ಮರೂ ಆದ ಮನುಷ್ಯರಿಗೂ ಕೂಡ ಪಾಪನಾಶಕವಾದ ಮಧುರಾನಗರಿಯು ನರಕಗಳ ಭಯವನ್ನು ತಪ್ಪಿಸುವುದು.

ಕೃತಘ್ನಶ್ಚ ಸುರಾಪಶ್ಚ ಚೋರೋ ಭಗ್ನವ್ರತಸ್ತಥಾ ।
ಮಧುರಾಂ ಪ್ರಾಪ್ಯ ಮನುಜೋ ಮುಚ್ಯತೇ ಘೋರಪಾತಕಾತ್ ॥ ೫ ॥
ಸೂರ್ಯೋದಯೇ ತಮೋನಶ್ಯೇತ್ ಯಥಾ ವಜ್ರಭಯಾನ್ನಗಾಃ ।
ತಾರ್ಕ್ಷ್ಯಂ ದೃಷ್ಟ್ವಾ ಯಥಾಸರ್ಪಾ ಮೇಘಾ ವಾತಹತಾಯಥಾ ॥ ೬ ॥
ತತ್ವಜ್ಞಾನಾದ್ಯಥಾ ದುಃಖಂ ಹರಿಂ ದೃಷ್ಟ್ವಾ ಯಥಾ ಗಜಾಃ ।
ತಥಾ ಪಾಪಾನಿ ನಶ್ಯಂತಿ ಮಧುರಾದರ್ಶನಾತ್ಸುತ ॥ ೭ ॥
ಶ್ರದ್ಧಯಾ ಭಕ್ತಿಯುಕ್ತಸ್ತು ದೃಷ್ಟ್ವಾ ಮಧುಪುರೀಂ ನರಃ ।
ಬ್ರಹ್ಮಹಾಪಿ ವಿಶುಧ್ಯೇತ ಕಿಂ ಪುನಸ್ತ್ವನ್ಯಪಾತಕೀ ॥ ೮ ॥
ಮಧುರಾಂ ಸ್ನಾತುಕಾಮಸ್ಯ ಗಚ್ಛತಸ್ತು ಪದೇ ಪದೇ ।
ನಿರಾಶಾನಿ ವ್ರಜಂತ್ಯೇವ ಪಾಪಾನಿ ಚ ಶರೀರತಃ ॥ ೯ ॥
ಅನುಷಂಗೇಣ ಗಚ್ಛಂತಿ ವಾಣಿಜ್ಯೇನಾಪಿ ಸೇವಯಾ ।
ಮಧುರಾಸ್ನಾನಮಾತ್ರೇಣ ದಿವಂ ಯಾಂತಿ ಗತಾಂಹಸಃ ॥ ೧೦ ॥

---

೫. ಕೃತಘ್ನನಾಗಲಿ, ಸುರಾಪಾನಮಾಡಿದವನಾಗಲಿ, ಚೋರನಾಗಲಿ, ವ್ರತನಿಯಮಗಳಲ್ಲಿ ಭಂಗವನ್ನು ಹೊಂದಿದವನಾಗಲಿ, ಮಧುರೆಯನ್ನು ಸೇರಿದ ಮನುಜನು ಸಕಲ ಪಾತಕಗಳಿಂದಲೂ ಬಿಡುಗಡೆಯನ್ನು ಹೊಂದುವನು.

೬–೮. ಸೂರ್ಯೋದಯವಾದ ಕೂಡಲೆ ಕತ್ತಲೆಯೂ, ಮಹೇಂದ್ರನ ವಜ್ರಾಯುಧವೆದುರಿನಲ್ಲಿ ಪರ್ವತಗಳೂ, ಗರುಡನ ಸಮ್ಮುಖದಲ್ಲಿ ಸರ್ಪಗಳೂ, ಬಿರುಗಾಳಿಗೆ ಸಿಕ್ಕಿದ ಮೇಘಗಳೂ, ತತ್ತ್ವಜ್ಞಾನದಿಂದ ಸಂಸಾರ ದುಃಖವೂ, ಸಿಂಹದ ಎದುರಿನಲ್ಲಿ ಆನೆಗಳೂ, ಹೇಗೆ ಓಡಿಹೋಗುವುವೊ, ಹಾಗೆಯೇ ಮಧುರಾ ಕ್ಷೇತ್ರದ ದರ್ಶನಮಾತ್ರದಿಂದಲೇ ಮನುಷ್ಯನ ಸಕಲ ಪಾಪಗಳೂ ನಾಶ ವಾಗುವುವು. ಶ್ರದ್ಧಾಭಕ್ತಿಗಳಿಂದ ಕೂಡಿ ಮಧುರಾಕ್ಷೇತ್ರದ ದರ್ಶನವನ್ನು ಮಾಡುವವನು ಬ್ರಹ್ಮಹತ್ಯೆಯೆಂಬ ಮಹಾ ಪಾತಕದಿಂದಲೂ ಮೋಕ್ಷವನ್ನು ಪಡೆಯುವನೆಂದಮೇಲೆ ಮಿಕ್ಕ ಪಾತಕಗಳನ್ನು ಮಾಡಿದವರ ವಿಷಯವನ್ನು ಹೇಳಲೇಕೆ?

೯. ಮಧುರಾಕ್ಷೇತ್ರದಲ್ಲಿ ತೀರ್ಥಸ್ನಾನವನ್ನು ಮಾಡುವುದಕ್ಕಾಗಿ ನಡೆದು ಹೋಗುತ್ತಿರುವ ಮನುಷ್ಯನ ಹೆಜ್ಜೆ ಹೆಜ್ಜೆಗೂ ಅವನು ಮಾಡಿದ ಪಾಪಗಳೆಲ್ಲವೂ ನಿರಾಶೆಯಿಂದ ಬಿಟ್ಟುಹೋಗುವುವು.

೧೦. ಭಕ್ತಿಯುಕ್ತರಾಗಿಯಾಗಲಿ, ವ್ಯಾಪಾರಕ್ಕಾಗಿಯಾಗಲಿ, ಸೇವೆ ಮಾಡುವುದಕ್ಕಾಗಲಿ ಹೋಗಿ ಮಧುರೆಯಲ್ಲಿ ತೀರ್ಥಸ್ನಾನ ಮಾಡಿದ ಮಾತ್ರ ದಿಂದಲೇ ಮನುಜರು ಪಾಪಗಳನ್ನು ಕಳೆದುಕೊಂಡು ಸ್ವರ್ಗಲೋಕವನ್ನು ಹೊಂದುವರು.

ನಾಮಾಪಿ ಗೃಹ್ಣತಾಮಸ್ಯಾಃ ಸದಾಮುಕ್ತಿರ್ನಸಂಶಯಃ ।
ಸದಾ ಕೃತಯುಗಂ ತತ್ರ ಸದಾಚೈವೋತ್ತರಾಯಣಂ ॥ ೧೧ ॥
ಯಃ ಶೃಣೋತಿ ಚತುರ್ವಕ್ತ್ರ ಮಾಥುರಂ ಮಮ ಮಂದಿರಂ ।
ಅನ್ಯೇನೋಚ್ಚಾರಿತೇ ಸದ್ಯಃ ಸೋಽಪಿ ಪಾಪಾತ್ಪ್ರಮುಚ್ಯತೇ ॥ ೧೨ ॥
ತ್ರಿರಾತ್ರಮಪಿ ಯೇ ತತ್ರ ವಸಂತಿ ಮನುಜಾ ಸುತ ।
ತೇಷಾಂ ಪುನಂತಿ ಸಂದೃಷ್ಟಾಃ ಸ್ಪೃಷ್ಟಾಶ್ಚರಣರೇಣವಃ ॥ ೧೩ ॥
ಯಥಾ ತೃಣಸಮೂಹಂ ತು ಜ್ವಲಯಂತಿ ಸ್ಫುಲಿಂಗಕಾಃ ।
ತಥಾ ಮಹಾಂತಿ ಪಾಪಾನಿ ದಹತೇ ಮಧುರಾಪುರೀ ॥ ೧೪ ॥
ಸ್ನಾನೇನ ಸರ್ವತೀರ್ಥಾನಾಂ ಯಸ್ಸ್ಯಾತ್ ಸುಕೃತಸಂಚಯಃ ।
ತತೋಽಧಿಕತರಂ ಪ್ರೋಕ್ತಾ ಮಧುರಾ ಸರ್ವಮಂಡಲೇ ॥ ೧೫ ॥
ಚತುರ್ಣಾಮಪಿ ವೇದಾನಾಂ ಪುಣ್ಯಮಧ್ಯಯನಾಚ್ಚ ಯತ್ ।
ತತ್ಪುಣ್ಯಂ ಜಾಯತೇ ತತ್ರ ಮಧುರಾಂ ಸ್ಮರತಾಂ ನೃಣಾಂ ॥ ೧೬ ॥

---

೧೧. ಯಾವ ಸ್ಥಳದಲ್ಲಿ ಮಧುರಾಕ್ಷೇತ್ರದ ನಾಮವು ಕೀರ್ತಿಸಲ್ಪಡುತ್ತಿರುವುದೊ, ಅಲ್ಲಿರುವವರಿಗೆಲ್ಲ ಮೋಕ್ಷವು ಲಭಿಸುವುದರಲ್ಲಿ ಸಂಶಯವಿಲ್ಲ. ಅಲ್ಲಿಯೇ ಯಾವಾಗಲೂ ಕೃತಯುಗವೂ ಉತ್ತರಾಯಣ ಕಾಲವೂ ಸನ್ನಿಹಿತಗಳಾಗಿರುವುವು.

೧೨. ಚತುರಾನನನೆ! ಇತರರು ಮಾಡುವ ಮಧುರಾನಗರಿಯ ಕೀರ್ತನೆಯನ್ನು ಯಾವನು ಶ್ರದ್ಧೆಯಿಂದ ಕೇಳುವನೊ, ಅವನೂ ಸಹ ತತ್‌ಕ್ಷಣದಲ್ಲಿಯೇ ತನ್ನ ಪಾಪಗಳೆಲ್ಲವನ್ನೂ ಕಳೆದುಕೊಳ್ಳುವನು.

೧೩. ಪುತ್ರನೆ! ಆ ಕ್ಷೇತ್ರದಲ್ಲಿ ಮೂರು ರಾತ್ರಿಗಳವರೆಗಾದರೂ ಯಾರು ವಾಸಮಾಡುವರೊ, ಅವರ ಚರಣ ಧೂಳಿಯ ದರ್ಶನಸ್ಪರ್ಶನಗಳಿಂದಲೇ ಇತರ ಮನುಷ್ಯರು ಪುನೀತರಾಗುವರು.

೧೪. ಬೆಟ್ಟದಂತಿರುವ ಹುಲ್ಲಿನ ರಾಶಿಯನ್ನು ಬೆಂಕಿಯ ಕಿಡಿಯು ಹೇಗೆ ಸುಟ್ಟು ಭಸ್ಮಮಾಡುವುದೊ, ಹಾಗೆಯೇ ಮಧುರಾಪುರಿಯೂ ಭಕ್ತರ ಮಹಾ ಪಾತಕಗಳನ್ನು ಸುಟ್ಟುಬಿಡುವುದು.

೧೫. ಈ ಭೂಲೋಕದಲ್ಲಿರುವ ಸಕಲ ತೀರ್ಥಗಲ್ಲಿಯೂ ಸ್ನಾನಮಾಡುವುದರಿಂದ ಯಾವ ಪುಣ್ಯವು ಲಭಿಸುವುದೊ, ಅದಕ್ಕಿಂತಲೂ ಹೆಚ್ಚಿನ ಫಲವನ್ನು ಮಧುರಾನಗರಿಯು ಕೊಡುವುದೆಂದು ಹೇಳಲ್ಪಟ್ಟಿರುವುದು.

೧೬. ಪುತ್ರನೆ! ನಾಲ್ಕು ವೇದಗಳನ್ನೂ ಸಾಂಗವಾಗಿ ಅಧ್ಯಾಯನ ಮಾಡಿದವನಿಗೆ ಯಾವ ಪುಣ್ಯವುಂಟಾಗುವುದೊ, ಮಧುರಾನಗರಿಯನ್ನು ಸ್ಮರಿಸುವ ಮಾನವರಿಗೂ ಅದೇ ಪುಣ್ಯವು ಲಭಿಸುವುದು.

ಅನ್ಯತ್ರ ಹಿ ಕೃತಂ ಪಾಪಂ ತೀರ್ಥಮಾಸಾದ್ಯ ನಶ್ಯತಿ ।
ತೀರ್ಥೇಷು ಯತ್ಕೃತಂ ಪಾಪಂ ವಜ್ರಲೇಪೋ ಭವಿಷ್ಯತಿ ॥ ೧೭
ಮಥುರಾಯಾಂ ಕೃತಂ ಪಾಪಂ ಮಥುರಾಯಾಂ ಪ್ರಣಶ್ಯತಿ ।
ಧರ್ಮಾರ್ಥಕಾಮಮೋಕ್ಷಾಖ್ಯಂ ಸ್ಥಿತ್ವಾ ತತ್ರ ಲಭೇನ್ನರಃ ॥ ೧೮ ॥
ಅನ್ಯತ್ರ ದಶಭಿರ್ವರ್ಷೈಃ ಪ್ರಾರಬ್ಧಂ ಭುಜ್ಯತೇ ಹಿ ಯತ್ ।
ಕಿಲ್ಬಿಷಂ ಚ ಚತುರ್ವಕ್ತ್ರ ಮಾಥುರೇ ದಶಭಿರ್ದಿನೈಃ ॥ ೧೯ ॥
ದಿವಿ ನೈವ ನ ಪಾತಾಲೇ ನಾಂತರಿಕ್ಷೇ ನ ಮಾನುಷೇ ।
ಸಮಂತು ಮಥುರಾಯಾಂ ಹಿ ಪ್ರಿಯಂ ಮಮ ಸದೈವ ಹಿ ॥ ೨೦ ॥
ಸರ್ವೇಷಾಮೇವ ತೀರ್ಥಾನಾಂ ಮಾಥುರಂ ಪರಮಂ ಮಹತ್ ।
ಬಾಲಕ್ರೀಡನರೂಪಾಣಿ ಕೃತಾನಿ ಸಹಗೋಪಕೈಃ ॥ ೨೧ ॥
ತ್ರಿಂಶದ್ವರ್ಷಸಹಸ್ರಾಣಿ ತ್ರಿಂಶದ್ವರ್ಷಶತಾನಿ ಚ ।
ಯತ್ಫಲಂ ಭಾರತೇ ವರ್ಷೇ ತತ್ಫಲಂ ಮಥುರಾಂ ಸ್ಮರನ್ ॥ ೨೨ ॥

---

೧೭. ಇತರ ಸ್ಥಳಗಳಲ್ಲಿ ಮಾಡಿದ ಪಾಪವು ತೀರ್ಥಗಳ ಸೇವನೆಯಿಂದ ನಾಶವಾಗುವುದು. ಆದರೆ ಆ ತೀರ್ಥಗಳಲ್ಲಿ ಮಾಡಿದ ಪಾಪಗಳು ಮನುಷ್ಯನಿಗೆ ವಜ್ರಲೇಪದಂತೆ ಅಂಟಿಕೊಂಡಿರುವುವು.

೧೮. ಆದರೆ ಮಥುರೆಯಲ್ಲಿ ಮಾಡಿದ ಪಾಪಗಳೆಲ್ಲವೂ ಅಲ್ಲಿಯೇ ನಾಶವಾಗುವುವು. ಅಲ್ಲಿ ವಾಸಮಾಡುವುದರಿಂದ ಮನುಷ್ಯನು ಧರ್ಮ, ಅರ್ಥ, ಕಾಮ, ಮೋಕ್ಷಗಳೆಂಬ ಚತುರ್ವಿಧಪುರುಷಾರ್ಥಗಳನ್ನೂ ಸುಲಭವಾಗಿ ಸಾಧಿಸಿಕೊಳ್ಳುವನು.

೧೯. ಚತುರ್ಮುಖನೆ! ಇತರ ಸ್ಥಳಗಳಲ್ಲಿ ಹತ್ತು ವರ್ಷಗಳವರೆಗೂ ಕಷ್ಟದಿಂದ ಅನುಭವಿಸುವ ಪ್ರಾರಬ್ಧಕರ್ಮದ ಫಲಗಳನ್ನು ಮಥುರೆಯಲ್ಲಿ ಹತ್ತು ದಿನಗಳಿಂದಲೇ ಕಳೆದುಕೊಳ್ಳಬಹುದು.

೨೦–೨೧. ಸ್ವರ್ಗದಲ್ಲಾಗಲಿ, ಪಾತಾಲದಲ್ಲಾಗಲಿ, ಅಂತರಿಕ್ಷದಲ್ಲಾಗಲಿ, ಭೂಲೋಕದಲ್ಲಾಗಲಿ ಮಥುರಾಪಟ್ಟಣಕ್ಕೆ ಸಮಾನವಾದ ಕ್ಷೇತ್ರವು ಮತ್ತೊಂದಿಲ್ಲವು. ಆದುದರಿಂದ ಅದೇ ನನಗೆ ಯಾವಾಗಲೂ ಪ್ರಿಯವಾಗಿರುವುದು. ಸಕಲ ತೀರ್ಥಗಳಲ್ಲಿಯೂ ಮಥುರೆಯೇ ಸರ್ವೋತ್ತಮವು. ಅಲ್ಲಿಯೇ ನಾನು ಬಾಲಲೀಲೆಗಳ ವ್ಯಾಜದಿಂದ ಗೋಪಬಾಲಕರೊಡನೆ ವಾಸಮಾಡುತ್ತಿದ್ದೆನು.

೨೨. ಪವಿತ್ರವಾದ ಈ ಭರತವರ್ಷದಲ್ಲಿ ಮುವತ್ತುಸಾವಿರದ ಮುವತ್ತು ನೂರು ವರ್ಷಗಳಿಂದ ಯಾವ ಫಲವು ಲಭಿಸುವುದೊ, ಆ ಫಲವೇ ಮಥುರಾ ಕ್ಷೇತ್ರದ ಸ್ಮರಣೆಯ ಮಾತ್ರದಿಂದ ಲಭಿಸುವುದು.

ಸನ್ನಿಹತ್ಯಾಂ ತು ಯತ್ಪುಣ್ಯಂ ರಾಹುಗ್ರಸ್ತೇ ದಿವಾಕರೇ ।
ತತೋಽಧಿಕಂ ಲಭೇತ್ ಪುತ್ರ ಮಧುರಾಯಾಂ ದಿನೇ ದಿನೇ ॥ ೨೩ ॥
ಪೂರ್ಣೇ ವರ್ಷಸಹಸ್ರೇ ತು ತೀರ್ಥರಾಜೇ ತು ಯತ್ಫಲಂ ।
ತತ್ಫಲಂ ಲಭತೇ ಪುತ್ರ ಸಹೋಮಾಸೇ ಮಧೋಃಪುರೇ ॥ ೨೪ ॥
ಪೂರ್ಣೇ ವರ್ಷ ಸಹಸ್ರೇ ತು ವಾರಾಣಸ್ಯಾಂ ಚ ಯತ್ಫಲಂ ।
ತತ್ಫಲಂ ಲಭತೇ ಪುತ್ರ ಮಧುರಾಯಾಂ ಸಹೋದಿನೇ ॥ ೨೫ ॥

ಗೋದಾವರೀ ದ್ವಾರಕಯೋ ನರೋ ಯಃ
ಕ್ಷೇತ್ರೇ ಕರುಣಾಂ ಕ್ಷಿತಿದಾಯಕೋ ಯಃ ।
ಷಾಣ್ಮಾಸಕಾತ್ ಸಾಧಯತೇ ಗಯಾಯಾಂ
ಸಮಂ ಭವೇನ್ನೋ ದಿನಮೇಕ ಮಾಧುರಂ ॥ ೨೬ ॥
ನ ದ್ವಾರಕಾ ಕಾಶೀ ಕಾಂಚೀ ನ ಮಾಯಾ
ಗದಾಧರೋ ಯಸ್ಯ ಸಮಂ ನ ತೀರ್ಥಂ ।
ಸಂತರ್ಪಿತಾ ಯದ್ಯಮುನಾಜಲೇನ
ವಾಞ್ಛಂತಿ ನೋ ವೈ ಪಿತರಃ ಪಿಂಡದಾನಂ ॥ ೨೭ ॥

---

೨೩. ಸೂರ್ಯನು ರಾಹುಗ್ರಸ್ತನಾಗಿರುವಾಗ ಮಾಡುವ ಕರ್ಮದಿಂದ ಯಾವ ಫಲವೊದಗುವುದೊ, ಅದಕ್ಕಿಂತಲೂ ಅಧಿಕವಾದ ಪುಣ್ಯವು ಪ್ರತಿದಿನದಲ್ಲಿಯೂ ಮಧುರಾಪಟ್ಟಣದಲ್ಲಿ ಮನುಷ್ಯರಿಗೆ ಲಭಿಸುವುದು.

೨೪. ಪುತ್ರನೆ! ತೀರ್ಥರಾಜವೆಂಬ ಪ್ರಯಾಗಕ್ಷೇತ್ರದಲ್ಲಿ ಸಂವತ್ಸರದ ಪೂರ್ತಿಯಾಗಿ ಸೇವೆಯನ್ನು ಮಾಡುವುದರಿಂದ ಯಾವ ಫಲವು ಲಭಿಸುವುದೊ, ಆ ಫಲವನ್ನು ಮಾನವನು ಮಧುರಾಪುರಿಯಲ್ಲಿ ಒಂದೇ ಮಾರ್ಗಶೀರ್ಷಮಾಸದ ಸೇವೆಯಿಂದ ಹೊಂದುವನು.

೨೫. ವಾರಾಣಸೀಕ್ಷೇತ್ರದಲ್ಲಿ ಪೂರ್ತಿಯಾಗಿ ಒಂದುಸಾವಿರ ವರ್ಷಗಳಿಂದ ಯಾವ ಫಲವು ಲಭಿಸುವುದೊ, ಅದನ್ನು ಮಧುರಾನಗರಿಯಲ್ಲಿ ಮಾರ್ಗಶೀರ್ಷ ಮಾಸದ ಒಂದು ದಿನದಲ್ಲಿಯೇ ಪಡೆಯಲನುವಾಗುವುದು.

೨೬–೨೭. ಗೋದಾವರಿ, ದ್ವಾರಕೆ, ಕುರುಕ್ಷೇತ್ರಗಳಲ್ಲಿ ಭೂದಾನಗಳನ್ನು ಯಾವನು ಮಾಡುವನೊ, ಗಯಾಕ್ಷೇತ್ರದಲ್ಲಿ ಆರು ತಿಂಗಳು ಸಾಧನೆಯನ್ನು ಮಾಡುವನೊ, ಅವನ ಪುಣ್ಯವೆಲ್ಲವೂ ಮಧುರೆಯ ಒಂದು ದಿನದ ಸೇವೆಗೆ ಸಮಾನವಾಗುವುದಿಲ್ಲವು. ದ್ವಾರಕೆ, ಕಾಶಿ, ಕಂಚಿ, ಮಾಯಾನಗರಿ, ಗಯಾ ಕ್ಷೇತ್ರದ ಗದಾಧರನ ಸನ್ನಿಧಿ—ಇವುಗಳಾವುವೂ ಈ ಮಧುರೆಗೆ ಸಮಾನಗಳಲ್ಲವು. ಇಲ್ಲಿಯ ಯಮುನೆಯ ಜಲದಿಂದ ತರ್ಪಣಗಳನ್ನು ಹೊಂದಿದ ಪಿತೃಗಳು ಮತ್ತೆ ಪಿಂಡದಾನಾದಿಗಳನ್ನು ಅಪೇಕ್ಷಿಸುವುದಿಲ್ಲ.

ಮಧುರಾಯಾಂ ಪ್ರಕುರ್ವಂತಿ ಪುರೀಸಾಧಾರಣೇದೃಶಂ ।
ಯೇ ನರಾಸ್ತೇಽಪಿ ವಿಜ್ಞೇಯಾ ಪಾಪರಾಶಿಭಿರನ್ವಿತಾಃ ॥ ೨೮ ॥
ನ ದೃಷ್ಟಾ ಮಧುರಾ ಯೇನ ದಿದೃಕ್ಷಾ ಯಸ್ಯ ಜಾಯತೇ ।
ಯತ್ರ ತತ್ರ ಮೃತಸ್ಯಾಪಿ ಮಾಥುರೇ ಜನ್ಮ ಜಾಯತೇ ॥ ೨೯ ॥
ಭೂಮೇ ರಜಾಂಸಿ ಗಣಯೇತ್ ಕಾಲೇನಾಪಿ ಚತುರ್ಮುಖ ।
ಮಾಥುರೇ ಯಾನಿ ತೀರ್ಥಾನಿ ತೇಷಾಂ ಸಂಖ್ಯಾ ನ ವಿದ್ಯತೇ ॥ ೩೦ ॥
ಕುರು ಭೋಃ ಕುರು ಭೋ ವಾಸಂ ಮಧುರಾಖ್ಯಾಂ ಪುರೀಂ ಪ್ರತಿ ।
ವಸಾಮಿ ಸತತಂ ತಸ್ಯಾಂ ಗೋಪಕನ್ಯಾಭಿರಾವೃತಃ ॥ ೩೧ ॥
ರೇ ರೇ ಸಂಸಾರಮಗ್ನಾಶ್ಚ ಶಿಷ್ಯಾ ಮೇ ಶೃಣುತಾಽಪರೇ ।
ಯದೀಚ್ಛತ ಸುಖಂ ಸಾಂದ್ರಂ ವಾಸಂ ಕುರುತ ಮತ್ಪುರೀ ॥ ೩೨ ॥
ಅಹೋ ಲೋಕೋ ಮಹಾನಂದೋ ನೇತ್ರಯುಕ್ತೋ ನ ಪಶ್ಯತಿ ।
ಮಾಥುರೇ ವಿದ್ಯಮಾನೋಽಪಿ ಸಂಸೃತಿಂ ಭಜತೇ ಸದಾ ॥ ೩೩ ॥

---

೨೮. ಮಧುರಾನಗರಿಯು ಸಾಧಾರಣ ಸ್ಥಳವೆಂದು ಯಾರ ದೃಷ್ಟಿಯಲ್ಲಿರುವುದೊ, ಆ ಮನುಷ್ಯರೇ ಪಾಪರಾಶಿಗಳಿಂದ ಅಭಿಭೂತರಾದವರೆಂದು ತಿಳಿಯಬೇಕು.

೨೯. ಯಾವನು ಜನ್ಮದಲ್ಲಿ ಮಧುರೆಯನ್ನು ನೋಡದೆ ಅದನ್ನು ನಿರೀಕ್ಷಿಸುವ ಆಶೆಯಲ್ಲಿಯೇ ಸಾಯುವನೊ, ಆವನು ಮುಂದಿನ ಜನ್ಮದಲ್ಲಿ ಆ ಕ್ಷೇತ್ರದಲ್ಲಿಯೇ ಜನ್ಮವನ್ನೆತ್ತುವನು.

೩೦. ಚತುರ್ಮುಖನೆ! ದೀರ್ಘಕಾಲದ ಪ್ರಯತ್ನದಿಂದ ಭೂಮಂಡಲದೊಳಗಿನ ಧೂಳಿನ ಕಣಗಳನ್ನಾದರೂ ಎಣಿಸಬಹುದು. ಆದರೆ ಮಧುರಾ ಕ್ಷೇತ್ರದಲ್ಲಿ ನೆಲೆಗೊಂಡಿರುವ ತೀರ್ಥಗಳ ಸಂಖ್ಯೆಯು ಗಣನೆಗೆ ಮೀರಿರುವುದು.

೩೧. ಎಲೈ ಜನರಿರಾ! ಮಧುರೆಯೆಂಬ ಪಟ್ಟಣದಲ್ಲಿಯೇ ಸಕಲರೂ ವಾಸಮಾಡುವರಾಗಿರಿ. ಅಲ್ಲಿಯೇ ನಾನು ಗೋಪಕನ್ಯೆಯರ ಪರಿವಾರಸಹಿತನಾಗಿ ಯಾವಾಗಲೂ ವಾಸಮಾಡುತ್ತಿರುವೆನು.

೩೨. ಸಂಸಾರ ಸಮುದ್ರದಲ್ಲಿ ಮಗ್ನರಾಗಿರುವ ಭಕ್ತೋತ್ತಮರುಗಳಿರಾ! ನಿಮಗೆ ಅವಿಚ್ಛಿನ್ನವಾದ ಸುಖದಲ್ಲಿ ಅಭಿಲಾಷೆಯಿದ್ದರೆ ನನ್ನ ಪಟ್ಟಣವಾದ ಮಧುರೆಯಲ್ಲಿ ವಾಸಮಾಡಿರಿ.

೩೩. ಮಹಾನಂದಾಭಿಲಾಷೆಯಾಗಿರುವ ಲೋಕವು ಕಣ್ಣುಗಳಿದ್ದರೂ ಕಾಣದಿರುವುದು ಆಶ್ಚರ್ಯವೇ ಸರಿ. ಮಾನವನು ಮಧುರಾಪುರಿಯೆಂಬ ಕ್ಷೇತ್ರವು ಭೂಮಂಡಲದಲ್ಲಿರುವಾಗಲೂ ಯಾವಾಗಲೂ ಸಂಸಾರದ ಕ್ಲೇಶದಲ್ಲಿಯೇ ಬಿದ್ದು ಒದ್ದಾಡುತ್ತಿರುವುದು ಆಶ್ಚರ್ಯವಲ್ಲವೆ?

ಮಾನುಷೀಂ ಯೋನಿಮತುಲಾಂ ಲಬ್ಧ್ವಾ ಭಾಗ್ಯಸ್ಯ ಯೋಗತಃ ।
ವೃಥೈವಾಯುರ್ಗತಂ ತೇಷಾಂ ನ ದೃಷ್ಟಾ ಮಧುರಾಪುರೀ ॥ ೩೪ ॥
ಅಹೋ ಮತೇಸ್ಸುದೌರ್ಬಲ್ಯಂ ಅಹೋ ಭಾಗ್ಯಸ್ಯ ದುರ್ವಿಧಿಃ ।
ಅಹೋ ಮೋಹಸ್ಯ ಮಹಿಮಾ ಮಧುರಾ ನೈವ ಸೇವ್ಯತೇ ॥ ೩೫ ॥
ಮಧುರಾಂ ತು ಪರಿತ್ಯಜ್ಯ ಯೋಽನ್ಯತ್ರ ಕುರುತೇ ಮತಿಂ ।
ಮೂಢೋ ಭ್ರಮತಿ ಸಂಸಾರೇ ಮೋಹಿತೋ ಮಮ ಮಾಯಯಾ ॥
ಮಧುರಾಮಪಿ ಸಂಪ್ರಾಪ್ಯ ಯೋಽನ್ಯತ್ರ ಕುರುತೇ ಶ್ರಮಂ ।
ದುರ್ಬುದ್ಧೇಸ್ತಸ್ಯ ಕಿಂ ಜ್ಞಾನಂ ಸೋಽಜ್ಞಾನೇನ ವಿಜೃಂಭಿತಃ ॥ ೩೭ ॥
ಮಾತ್ರಾ ಪಿತ್ರಾ ಪರಿತ್ಯಕ್ತಾ ಯೇ ತ್ಯಕ್ತಾ ನಿಜಬಂಧುಭಿಃ ।
ಯೇಷಾಂ ಕ್ವಾಪಿ ಗತಿರ್ನಾಸ್ತಿ ತೇಷಾಂ ಮಮ ಪುರೀ ಗತಿಃ ॥ ೩೮ ॥
ಪಾಪರಾಶಿಭಿರಾಕ್ರಾಂತಾ ಯೇ ದಾರಿದ್ರ್ಯಪರಾಜಿತಾಃ ।
ಯೇಷಾಂ ಕ್ವಾಪಿ ಗತಿರ್ನಾಸ್ತಿ ತೇಷಾಂ ಮಮ ಪುರೀ ಗತಿಃ ॥ ೩೯ ॥

೩೪. ಅತ್ಯಂತ ದುರ್ಲಭವೆನಿಸಿಕೊಳ್ಳುವ ಮನುಷ್ಯಜನ್ಮವನ್ನು ಪೂರ್ವ ಪುಣ್ಯದ ಬಲದಿಂದ ಹೊಂದಿದ್ದರೂ ಸಹ ಯಾರು ಮಧುರಾಪುರಿಯನ್ನು ಒಮ್ಮೆ ಯಾದರೂ ನೋಡುವುದಿಲ್ಲವೊ, ಅವರ ಜೀವಿತವು ವ್ಯರ್ಥವೆಂದೇ ತಿಳಿಯಬೇಕು.

೩೫. ಯಾರು ಮಧುರಾಕ್ಷೇತ್ರದ ಸೇವೆಯನ್ನು ಮಾಡುವುದಿಲ್ಲವೊ, ಅವರ ಚಿತ್ತದ ದೌರ್ಬಲ್ಯವನ್ನೂ, ಪುಣ್ಯದ ಸ್ವಲ್ಪತ್ವವನ್ನೂ, ಮೋಹದ ಬಲುಮೆ ಯನ್ನೂ ಎಷ್ಟೆಂದು ಹೇಳಬೇಕು ?

೩೬. ಯಾವನು ಮಧುರಾಪುರಿಯನ್ನು ಬಿಟ್ಟು ಇತರ ಕ್ಷೇತ್ರಗಳಲ್ಲಿ ಅಭಿಲಾಷೆಯನ್ನು ಮಾಡುವನೊ, ಆ ಮೂಢನು ನನ್ನ ಮಾಯೆಯಿಂದ ಮೋಹಿತನಾಗಿ ಸಂಸಾರ ಸಮುದ್ರದಲ್ಲಿಯೇ ಒದ್ದಾಡುತ್ತಿರುವನು.

೩೭. ಮಧುರಾಕ್ಷೇತ್ರವನ್ನು ಸೇರಿದರೂ ಯಾವನು ಇತರ ಕ್ಷೇತ್ರಗಳಲ್ಲಿ ಮನಸ್ಸಿನ್ನಿಡುವನೊ, ಆ ದುರ್ಬುದ್ಧಿಗೆ ಜ್ಞಾನವೆಲ್ಲಿಯದು ? ಅವನಲ್ಲಿ ಅಜ್ಞಾನವೇ ತುಂಬಿ ಮೆರೆಯುತ್ತಿರುವುದು.

೩೮. ತಾಯಿ ತಂದೆಗಳಿಂದ ವಿಸರ್ಜಿಸಲ್ಪಟ್ಟವರೂ, ಬಂಧುಬಳಗಗಳಿಂದ ಪರಿತ್ಯಕ್ತರಾದವರೂ, ಎಲ್ಲೆಲ್ಲಿಯೂ ನಿಲ್ಲಲು ಮನೆಯಿಲ್ಲದವರೂ ಯಾರಿರುವರೊ ಅವರಿಗೆಲ್ಲ ನನ್ನ ನಗರವೇ ವಾಸಸ್ಥಾನವಾಗಿರುವುದು.

೩೯. ಅನೇಕ ಪಾಪಗಳ ರಾಶಿಯಿಂದ ಆಕ್ರಾಂತರಾದವರಿಗೂ, ದಾರಿದ್ರ್ಯ ದಿಂದ ನಿರ್ಗತಿಕರಾಗಿರುವವರಿಗೂ, ಎಲ್ಲಿಯೂ ಗತಿಗಾಣದವರಿಗೂ ನನ್ನ ಮಧುರಾಪುರಿಯೇ ಗತಿದಾಯಕವಾಗಿರುವುದು.

ಸಾರಾತ್ಸಾರತರಂ ಸ್ಥಾನಂ ಗುಹ್ಯಾದ್ಗುಹ್ಯತರಂ ಪರಂ ।
ಗತಿಮನ್ವೇಷಮಾಣಾನಾಂ ಮಥುರಾ ಪರಮಾಗತಿಃ ॥ ೪೦ ॥
ನ ತತ್ಪುಣ್ಯೈರ್ನತದ್ದಾನೈಃ ನ ತಪೋಭಿರ್ನತು ಸ್ತವೈಃ ।
ನ ಲಭ್ಯಂ ವಿವಿಧೈರ್ಯೋಗೈರ್ಲಭ್ಯಂ ಮದನುಭಾವತಃ ॥ ೪೧ ॥
ಮಯಿ ಯೇಷಾಂ ಸ್ಥಿರಾ ಭಕ್ತಿರ್ಭೂಯಸೀ ಯೇಷು ಮತ್ಕೃಪಾ ।
ತೇಷಾಮೇವ ಹಿ ಧನ್ಯಾನಾಂ ಮಥುರಾಯಾಂ ಭವೇದ್ಗತಿಃ ॥ ೪೨ ॥
ಯಾ ಗತಿರ್ಯೋಗಯುಕ್ತಸ್ಯ ಬ್ರಹ್ಮಜ್ಞಸ್ಯ ಮನೀಷಿಣಃ ।
ಸಾ ಗತಿಸ್ತ್ಯಜತಃ ಪ್ರಾಣಾನ್ ಮಥುರಾಯಾಂ ನರಸ್ಯಚ ॥ ೪೩ ॥
ಕಾಶ್ಯಾದಿಪುರ್ಯೋ ಯದಿ ಸಂತಿ ಲೋಕೇ
ತಾಸಾಂ ತು ಮಧ್ಯೇ ಮಥುರೈವ ಧನ್ಯಾ ।
ಯಾ ಜನ್ಮಮೌಂಜೀವ್ರತಮುಕ್ತಿದಾನೈಃ
ನೃಣಾಂ ಚತುರ್ಧಾ ವಿದಧಾತಿ ಮುಕ್ತಿಂ ॥ ೪೪ ॥

೪೦. ಈ ಕ್ಷೇತ್ರವೇ ಸಾರತರಕ್ಷೇತ್ರಗಳಲ್ಲಿ ಉತ್ತಮೋತ್ತಮವೆನಿಸಿರುವುದು. ಗುಪ್ತಕ್ಷೇತ್ರಗಳಲ್ಲಿ ಗುಪ್ತಕ್ಷೇತ್ರವಾಗಿರುವುದು. ಸದ್ಗತಿಯನ್ನು ಹುಡುಕುತ್ತಿರುವವರಿಗೆ ಈ ಕ್ಷೇತ್ರವೇ ಸದ್ಗತಿದಾಯಕವಾಗಿರುವುದು.

೪೧. ಈ ಕ್ಷೇತ್ರದ ವಾಸವು ಮಾನವರಿಗೆ ಕೇವಲ ನನ್ನ ಅನುಗ್ರಹವೊಂದರಿಂದಲೇ ದೊರಕುವುದಲ್ಲದೆ ಯಾವ ವಿಧಗಳಾದ ಪುಣ್ಯಕರ್ಮಗಳಿಂದಾಗಲಿ, ದಾನಗಳಿಂದಾಗಲಿ, ತಪಸ್ಸುಗಳಿಂದಾಗಲಿ, ಸ್ತೋತ್ರಗಳಿಂದಾಗಲಿ ಅನೇಕ ವಿಧಗಳಾದ ಯೋಗಾಭ್ಯಾಸಗಳಿಂದಾಗಲಿ ಸಿಕ್ಕಲಾರದು.

೪೨. ಯಾರಿಗೆ ನನ್ನಲ್ಲಿ ನಿಶ್ಚಲವಾದ ಭಕ್ತಿಯಿರುವುದೊ, ಯಾರಲ್ಲಿ ನನ್ನ ವಿಶೇಷವಾದ ಕೃಪಾದೃಷ್ಟಿಯಿರುವುದೊ, ಆ ಧನ್ಯಪುರುಷರಿಗೆ ಮಾತ್ರವೇ ಮಥುರಾಪುರಿಯಲ್ಲಿ ಸದ್ಗತಿಯು ದೊರೆಯುವುದು.

೪೩. ಯೋಗಾಭ್ಯಾಸತತ್ಪರನೂ, ಬ್ರಹ್ಮಜ್ಞಾನಿಯೂ, ಬುದ್ಧಿಶಾಲಿಯೂ ಆದ ಮನುಷ್ಯನಿಗೆ ಯಾವ ಸದ್ಗತಿಯು ಪ್ರಾಪ್ತವಾಗುವುದೊ, ಆ ಗತಿಯು ಯಾವ ಸಾಧನೆಯ ಕಷ್ಟವಿಲ್ಲದೆಯೇ ಮಥುರೆಯಲ್ಲಿ ಪ್ರಾಣವನ್ನು ತ್ಯಜಿಸುವವರಿಗೆ ಲಭಿಸುವುದು.

೪೪. ಕಾಶಿಯೇ ಮೊದಲಾದ ಅನೇಕ ಕ್ಷೇತ್ರಗಳು ಭೂಲೋಕದಲ್ಲಿದ್ದರೂ ಅವುಗಳಲ್ಲೆಲ್ಲ ಮಥುರಾನಗರಿಯೇ ಧನ್ಯತಮವಾದುದು. ಆ ಕ್ಷೇತ್ರವೇ ಜನನ, ಉಪನಯನ, ವ್ರತೋಪವಾಸ, ಮೋಕ್ಷದಾನಗಳೆಂಬ ನಾಲ್ಕು ಸಂಸ್ಕಾರಗಳಿಂದಲೂ ಮಾನವರಿಗೆ ವೈಕುಂಠವನ್ನು ಸಂಪಾದಿಸಿಕೊಡುವುದು.

ನ ಯೋಗೈರ್ಯಾಗತಿರ್ಲಭ್ಯಾ ಮನ್ವಂತರಶತೈರಪಿ ।
ಅನ್ಯತ್ರ ಹೇಲಯಾ ಸಾಽತ್ರ ಲಭ್ಯತೇ ಮತ್ಪ್ರಸಾದತಃ ॥ ೪೫ ॥
ನಾ ಪಾಪೇಭ್ಯೋ ಭಯಂ ಯತ್ರ ನ ಭಯಂ ಯತ್ರ ವೈ ಯಮಾತ್ ।
ನ ಗರ್ಭವಾಸಭೀರ್ಯತ್ರ ತತ್ಕ್ಷೇತ್ರಂ ಕೋ ನ ಸಂಶಯೇತ್ ॥ ೪೬ ॥
ಮಧುರಾಯಾಂ ಚ ಯತ್ಪುಣ್ಯಂ ತತ್ಪುಣ್ಯಸ್ಯ ಫಲಂ ಶೃಣು ।
ಮಧುರಾಯಾಂ ಸಮಾಸಾದ್ಯ ಮಧುರಾಯಾಂ ಮೃತಾ ಹಿ ಯೇ ॥ ೪೭ ॥
ಅಪಿ ಕೋಟಪತಂಗಾದ್ಯಾ ಜಾಯಂತೇ ತೇ ಚತುರ್ಭುಜಾಃ ।
ಕೂಲಾತ್ಪತಂತಿ ಯೇ ವೃಕ್ಷಾಃ ತೇಽಪಿ ಯಾಂತಿ ಪರಾಂ ಗತಿಂ ॥ ೪೮ ॥
ಮೂಕಾ ಜಡಾಂಧಬಧಿರಾಸ್ತಪೋನಿಯಮವರ್ಜಿತಾಃ ।
ಕಾಲೇನೈವ ಮೃತಾ ಯೇ ಚ ಮಮ ಲೋಕಂ ವ್ರಜಂತಿ ತೇ ॥ ೪೯ ॥
ಸರ್ಪದಷ್ಟಾಃ ಪಶುಹತಾಃ ಪಾವಕಾಂಬುವಿನಾಶಿತಾಃ ।
ಲಬ್ಧಾಪಮೃತ್ಯವೋ ಯೇ ಚ ಮಾಧುರೇ ಮಮ ಲೋಕಗಾಃ ॥ ೫೦ ॥

೪೫. ಇತರ ಸ್ಥಳಗಳಲ್ಲಿ ನೂರಾರು ಮನ್ವಂತರಗಳವರೆಗೂ ಯೋಗಾಭ್ಯಾಸವನ್ನು ಮಾಡಿದರೂ ಯಾವ ಸದ್ಗತಿಯು ದುರ್ಲಭವಾಗಿರುವುದೊ, ಆ ಗತಿಯು ಇಲ್ಲಿ ನನ್ನ ಅನುಗ್ರಹದ ಬಲದಿಂದ ಅನಾಯಾಸವಾಗಿಯೇ ಮಾನವರಿಗೆ ದೊರೆಯುವುದು.

೪೬. ಎಲ್ಲಿ ಪಾಪಗಳಿಂದ ಭಯವೆಂಬುದಿಲ್ಲವೊ, ಎಲ್ಲಿ ಯಮನಿಂದ ಭಯವುಂಟಾಗಲಾರದೊ, ಎಲ್ಲಿ ಪುನಃ ಗರ್ಭವಾಸದ ಭಯವಿಲ್ಲವೊ, ಅಂತಹ ಕ್ಷೇತ್ರವನ್ನು ಯಾವನು ತಾನೆ ಆಶ್ರಯಿಸುವುದಿಲ್ಲ ?

೪೭–೪೮. ಮಧುರೆಯಲ್ಲಿ ಜನರಿಗೆ ಯಾವ ಪುಣ್ಯವು ಲಭಿಸುವುದೊ, ಅದರ ಫಲವನ್ನು ಕೇಳು. ಮಧುರೆಯನ್ನು ಸೇರಿ ಅಲ್ಲಿಯೇ ದೇಹವನ್ನು ತ್ಯಾಗಮಾಡುವ ಜೀವರು ಕೀಟ, ಪತಂಗಗಳೇ ಮೊದಲಾದ ನೀಚ ಜನ್ಮಗಳನ್ನು ಹೊಂದಿದ್ದರೂ ಚತುರ್ಭುಜಗಳಿಂದ ಶೋಭಿಸುವ ವಿಷ್ಣು ಕಿಂಕರರಾಗುವರು. ಯಮುನಾ ನದಿಯ ದಡದಿಂದ ನದಿಯಲ್ಲಿ ಬೀಳುವ ವೃಕ್ಷಗಳೂ ಉತ್ತಮಗತಿಯನ್ನು ಹೊಂದುವುವು.

೪೯. ಮೂಗರೂ, ರೋಗಿಗಳೂ, ಕುರುಡರೂ, ಕಿವುಡರೂ, ತಪಸ್ಸು ನಿಯಮಗಳನ್ನು ಮಾಡಲಾರದವರೂ ಯಥಾಕಾಲದಲ್ಲಿ ಮಧುರೆಯಲ್ಲಿ ಸಾಯುವುದರಿಂದ ನನ್ನ ಲೋಕವನ್ನು ಸೇರುವರು.

೫೦. ಸರ್ಪದಂಶನದಿಂದಾಗಲಿ, ಪಶುಹಿಂಸೆಯಿಂದಾಗಲಿ, ಬೆಂಕಿನೀರುಗಳಿಂದಾಗಲಿ, ಇತರ ಅಪಮೃತ್ಯುಗಳಿಂದಾಗಲಿ ದೇಹತ್ಯಾಗವನ್ನು ಮಾಡಿದವರೂ ಸಹ ಮಧುರಾನಗರಿಯಿಂದ ನನ್ನ ಲೋಕಕ್ಕೆ ಹೊರಡುವರು.

ಸತ್ಯಂ ಸತ್ಯಂ ಮುನಿಶ್ರೇಷ್ಠ ಬ್ರುವೇ ಶಪಥಪೂರ್ವಕಂ ।
ಸರ್ವಾಭೀಷ್ಟಪ್ರದಂ ನಾನ್ಯತ್ ಮಧುರಾಯಾಸ್ಸಮಂ ಕ್ವಚಿತ್ ॥ ೫೧ ॥
ತ್ರಿವರ್ಗದಾ ಕಾಮಿನಾಂ ಯಾ ಮುಮುಕ್ಷೂಣಾಂ ಚ ಮುಕ್ತಿದಾ ।
ಭಕ್ತೀಚ್ಛೋರ್ಭಕ್ತಿದಾ ಕಸ್ತಾಂ ಮಧುರಾಂ ನಾಽಽಶ್ರಯೇದ್ಬುಧಃ ॥
ಏತಾದೃಶೀ ಮಧುಪುರೀ ಕರ್ತವ್ಯಾ ಮಾರ್ಗಶೀರ್ಷಕೇ ।
ತದಭಾವೇ ಪುಷ್ಕರಂ ಹಿ ಕರ್ತವ್ಯಂ ವಿಧಿಪೂರ್ವಕಂ ॥ ೫೩ ॥
ಜ್ಯೇಷ್ಠಂ ಹಿ ಬ್ರಹ್ಮಣಃಕುಂಡಂ ಮಧ್ಯಂ ಕುಂಡಂ ಚ ವೈಷ್ಣವಂ ।
ಕನಿಷ್ಠಂ ರುದ್ರದೈವತ್ಯಮಿತಿ ಜಾನೀಹಿ ಬುದ್ಧಿಮನ್ ॥ ೫೪ ॥
ಏಷು ಸ್ನಾನಂ ಚ ದಾನಂ ಚ ಶ್ರಾದ್ಧಂ ಚ ವಿಧಿಪೂರ್ವಕಂ ।
ಪೂಜಾ ಚ ಮಹತೀ ಕಾರ್ಯಾ ಮಮ ಪ್ರೀತಿಕರಾ ಸುತ ॥ ೫೫ ॥
ಪೂರ್ಣಾ ಯಾ ತು ಭವೇತ್ಪುತ್ರ ಸಹೋಮಾಸೇ ಮಮ ಪ್ರಿಯಾ ।
ತಸ್ಯಾಂ ಯತ್ಕ್ರಿಯತೇ ಪುಣ್ಯಂ ಮಮ ಪ್ರೀತಿಕರಂ ಭವೇತ್ ॥ ೫೬ ॥

೫೧. ಎಲೈ ಬ್ರಹ್ಮದೇವನೆ! ನಾನು ಶಪಥಪೂರ್ವಕವಾಗಿ ಹೇಳುವ ಈ ಮಾತುಗಳನ್ನು ಸತ್ಯವೆಂದೇ ನಂಬುವವನಾಗು. ಭಕ್ತರಿಗೆ ಸಕಲಾಭೀಷ್ಟಗಳನ್ನೂ ಕೊಡುವುದರಲ್ಲಿ ಮಧುರಾಪುರಿಗೆ ಸಮಾನವಾದ ಕ್ಷೇತ್ರವು ಎಲ್ಲಿಯೂ ಇಲ್ಲವು.

೫೨. ಫಲಾಭಿಸಂಧಿಗಳಿಗೆ ಧರ್ಮ, ಅರ್ಥ, ಕಾಮಗಳನ್ನು ಕೈಗೂಡಿಸುವುದೂ, ಮೋಕ್ಷವನ್ನು ಬಯಸುವವರಿಗೆ ಮುಕ್ತಿದಾಯಕವೂ, ಭಕ್ತಿಯನ್ನಪೇಕ್ಷಿಸುವವರಿಗೆ ಭಕ್ತಿಪ್ರದವೂ ಆದ ಮಧುರಾನಗರಿಯನ್ನು ಯಾವ ಜ್ಞಾನಿಯು ತಾನೆ ಆಶ್ರಯಿಸದಿರುವನು ?

೫೩. ಮಾರ್ಗಶೀರ್ಷಮಾಸದಲ್ಲಿ ಈ ವಿಧವಾದ ಮಹಿಮೆಯುಳ್ಳ ಮಧುರಾಪುರಿಯನ್ನು ಸೇವಿಸಬೇಕು. ಸಾಧ್ಯವಾಗದಿದ್ದಲ್ಲಿ ಪುಷ್ಕರಕ್ಷೇತ್ರವನ್ನಾದರೂ ವಿಧ್ಯುಕ್ತ ವಿಶೇಷಗಳಿಂದ ಸೇವಿಸಬೇಕು.

೫೪. ಎಲೈ ಬುದ್ಧಿಶಾಲಿಯೆ! ಆ ತೀರ್ಥದಲ್ಲಿರುವ ಬ್ರಹ್ಮಕುಂಡವೇ ಜ್ಯೇಷ್ಠವೆಂದೂ, ವಿಷ್ಣುಕುಂಡವು ಮಧ್ಯಮವೆಂದೂ ರುದ್ರಕುಂಡವು ಕನಿಷ್ಠವೆಂದೂ ತಿಳಿ.

೫೫. ಈ ತೀರ್ಥಗಳಲ್ಲಿ ಸ್ನಾನವೂ, ದಾನವೂ, ವಿಧಿವಿಹಿತವಾದ ಶ್ರಾದ್ಧವೂ, ನನಗೆ ಅತ್ಯಂತ ಪ್ರಿಯವಾದ ಮಹತ್ಪೂಜೆಯೂ ಮಾಡಲ್ಪಡಬೇಕು.

೫೬. ಎಲೈ ಸುತನೆ! ಮಾರ್ಗಶಿರಮಾಸದಲ್ಲಿ ನನಗೆ ಪ್ರಿಯತಮವಾದ ಯಾವ ಪೌರ್ಣಿಮೆಯು ಬರುವುದೊ, ಆ ದಿವಸ ಮಾಡಿದ ಸತ್ಕರ್ಮವೆಲ್ಲವೂ ನನಗೆ ಪ್ರೀತಿಯನ್ನುಂಟುಮಾಡುವುದು.

ಗೋದಾನಮನ್ನದಾನಂ ಚ ಹೇಮದಾನಂ ಚ ಪುತ್ರಕ ।
ಧರಾದಾನಂ ಚ ಕರ್ತವ್ಯಂ ಪೂರ್ಣಾಯಾಂ ವಿಧಿಪೂರ್ವಕಂ ॥ ೫೭ ॥
ಸಹೋಮಾಸೇ ಹಿ ಪೂರ್ಣಾಯಾಂ ಸದ್ಮದಾನಂ ಚ ಕಾರಯೇತ್ ।
ಯತ್ಕಿಂಚಿತ್ಕ್ರಿಯತೇ ಪೂರ್ಣಂ ತದಕ್ಷಯ್ಯಫಲಂ ಭವೇತ್ ॥ ೫೮ ॥
ಬ್ರಹ್ಮಭೋಜ್ಯಂ ಹಿ ಕರ್ತವ್ಯಂ ಯಥಾವಿಭವಸಾರತಃ ।
ಪೂರ್ಣಾಯಾಮೇವ ಕರ್ತವ್ಯ ಉತ್ಸವೋ ವ್ರತಪೂರ್ತಯೇ ॥ ೫೯ ॥
ಯಾದೃಶೀ ಮಧುರಾ ಪುತ್ರ ಸಹೋಮಾಸೇ ಮಮ ಪ್ರಿಯಾ ।
ನ ತಥಾ ತೀರ್ಥರಾಜಾದ್ಯಾಃ ತದಭಾವೇ ಚ ಪುಷ್ಕರಂ ॥ ೬೦ ॥
ಪುಷ್ಕರೇ ಮಧುರಾಯಾಂ ವೈ ಪೂರ್ಣಾ ಕಾರ್ಯಾ ವಿಚಕ್ಷಣೈಃ ।
ಯತ್ರ ಕುತ್ರಾಽಪಿ ವಾ ಕಾರ್ಯಾ ವಿಧಿಯುಕ್ತಾ ಚ ಪೂರ್ಣಿಮಾ ॥೬೧॥
ಸ್ನಾನಂ ದಾನಂ ತಥಾ ಪೂಜಾಂ ಪೂರ್ಣಾಯಾಂ ನ ಕರೋತಿ ಯಃ ।
ಷಷ್ಟಿವರ್ಷ ಸಹಸ್ರಾಣಿ ಪಚ್ಯತೇ ರೌರವಾದಿಷು ॥ ೬೨ ॥

---

೫೭. ಆ ಪೌರ್ಣಿಮಾತಿಥಿಯಲ್ಲಿ ವಿಧಿಪೂರ್ವಕವಾಗಿ ಗೋದಾನ, ಅನ್ನ ದಾನ, ಹಿರಣ್ಯದಾನ, ಭೂದಾನಗಳನ್ನು ಪ್ರತಿಯೊಬ್ಬನೂ ಮಾಡಬೇಕು.

೫೮. ಮಾರ್ಗಶಿರಮಾಸದ ಪೂರ್ಣಿಮೆಯಲ್ಲಿಯೇ ಗೃಹದಾನವನ್ನು ಮಾಡಬೇಕು. ಅಂದು ಮಾಡಿದ ಅತ್ಯಲ್ಪಸತ್ಕರ್ಮವೂ ಪರಿಪೂರ್ಣವಾದುದೆನಿಸಿ ಅಕ್ಷಯವಾದ ಫಲವನ್ನು ಕೊಡುವುದು.

೫೯. ಪ್ರತಿಯೊಬ್ಬನೂ ತನ್ನ ಅನುಕೂಲಕ್ಕೆ ತಕ್ಕಂತೆ ಬ್ರಾಹ್ಮಣಭೋಜನವನ್ನು ಮಾಡಿಸಬೇಕು. ಈ ಮಾರ್ಗಶೀರ್ಷವ್ರತದ ಪರಿಸಮಾಪ್ತಿಗಾಗಿ ಪೂರ್ಣಿಮೆಯ ದಿನದಲ್ಲಿಯೇ ನನ್ನ ಮಹೋತ್ಸವವನ್ನು ನೆರವೇರಿಸಬೇಕು.

೬೦. ಪುತ್ರನೆ! ಮಾರ್ಗಶಿರಮಾಸದಲ್ಲಿ ಮಧುರಾನಗರಿಯು ನನಗೆ ಹೇಗೆ ಪ್ರಿಯವೊ, ಅಥವಾ ಕಡಿಮೆಯಾದ ಪುಷ್ಕರಕ್ಷೇತ್ರವೆಂತು ಪ್ರೀತಿಕರವೊ, ಹಾಗೆ ಪ್ರಯಾಗವೇ ಮೊದಲಾದ ಇತರ ಕ್ಷೇತ್ರಗಳೂ ನನಗೆ ಸಂತೋಷವನ್ನುಂಟುಮಾಡಲಾರವು.

೬೧. ಈ ಪೂರ್ಣಿಮಾ ಪೂಜೆಯನ್ನು ವಿಚಕ್ಷಣರಾದವರು ಪುಷ್ಕರಕ್ಷೇತ್ರದಲ್ಲಿಯಾಗಲಿ, ಮಧುರಾನಗರಿಯಲ್ಲಾಗಲಿ ಮಾಡಬೇಕು. ಸಾಧ್ಯವಾಗದಿದ್ದರೆ ಯಾವ ಸ್ಥಳದಲ್ಲಿದ್ದರೂ ಅಂದಿನ ದಿವಸದಲ್ಲಿ ವಿಧಿಯನ್ನು ಅನುಸರಿಸಿ ಪೂಜೆಯನ್ನು ನಡೆಸಬೇಕು.

೬೨. ಮಾರ್ಗಶಿರಮಾಸದ ಪೌರ್ಣಿಮಾತಿಥಿಯಲ್ಲಿ ಸ್ನಾನ, ದಾನ, ಪೂಜೆಗಳನ್ನು ಯಾವ ಮನುಷ್ಯನು ಮಾಡುವುದಿಲ್ಲವೊ, ಅವನು ಅರುವತ್ತು ಸಾವಿರ ವರ್ಷಗಳವರೆಗೂ ರೌರವಾದಿ ನರಕಗಳಲ್ಲಿ ಯಾತನೆಗಳನ್ನನುಭವಿಸುವನು.

**ತಸ್ಮಾತ್ಸರ್ವಪ್ರಯತ್ನೇನ ಮಾನ್ಯಾ ಪೂರ್ಣಾ ವಿಚಕ್ಷಣೈಃ ।**
**ಮಾರ್ಗಶೀರ್ಷೇಣ ಸಂಯುಕ್ತಾ ಅನಂತ ಫಲದಾಯಿನೀ ॥ ೬೩ ॥**
**ಯಥಾ ಮೇ ಕಥಿತಂ ವತ್ಸ ಮಾರ್ಗಶೀರ್ಷಂ ಮಮ ಪ್ರಿಯಂ ।**
**ಕರೋತಿ ಯೋ ನರೋ ಭಕ್ತ್ಯಾ ತಸ್ಯ ಪುಣ್ಯಫಲಂ ಶೃಣು ॥ ೬೪ ॥**
**ತೀರ್ಥಾಯುತೇಷು ಯತ್ಪುಣ್ಯಂ ಯತ್ಪುಣ್ಯಂ ವ್ರತಕೋಟಿಭಿಃ ।**
**ಸರ್ವಯಜ್ಞೇಷು ಯತ್ಪುಣ್ಯಂ ತತ್ಪುಣ್ಯಂ ಸಮವಾಪ್ನುಯಾತ್ ॥ ೬೫ ॥**
**ಅಪುತ್ರೋ ಲಭತೇ ಪುತ್ರಂ ನಿರ್ಧನೋ ಧನಮೇವ ಚ ।**
**ವಿದ್ಯಾರ್ಥೀ ಚ ತಥಾ ವಿದ್ಯಾಂ ರೂಪಾರ್ಥೀ ರೂಪಮಾಪ್ನುಯಾತ್ ॥ ೬೬ ॥**
**ಬ್ರಾಹ್ಮಣೋ ಬ್ರಹ್ಮವರ್ಚಸ್ವೀ ಕ್ಷತ್ರಿಯೋ ವಿಜಯೀ ಭವೇತ್ ।**
**ವೈಶ್ಯೋ ನಿಧಿಪತಿತ್ವಂ ಚ ಶೂದ್ರಶ್ಶುಧ್ಯೇತ ಪಾತಕಾತ್ ॥ ೬೭ ॥**
**ಯದ್ದುರ್ಲಭಂಚ ದುಷ್ಪ್ರಾಪ್ಯಂ ತ್ರಿಷು ಲೋಕೇಷು ಮಾನದ ।**
**ತತ್ಸರ್ವಂ ಪ್ರಾಪ್ನುಯಾನ್ಮರ್ತ್ಯಃ ಸಹೋಮಾಸೇ ನ ಸಂಶಯಃ ॥ ೬೮ ॥**

---

೬೩. ಆದುದರಿಂದ ಮಾರ್ಗಶೀರ್ಷ ಪೌರ್ಣಿಮಾಪೂಜೆಯು ಸಕಲ ವಿದ್ವಜ್ಜನರಿಗೂ ಸರ್ವಪ್ರಕಾರದಿಂದಲೂ ಅವಶ್ಯಕರ್ತವ್ಯವಾದುದು. ಆ ಪೂಜೆಯು ಅಪರಿಮಿತವಾದ ಫಲವನ್ನು ಕೊಡುವುದು.

೬೪. ಪ್ರಿಯಪುತ್ರನೆ! ನಾನು ಹಿಂದೆ ಹೇಳಿದ ಪ್ರಕಾರದಿಂದ ಮಾರ್ಗಶೀರ್ಷಮಾಸದ ವ್ರತವನ್ನು ನನಗೆ ಸಂತೋಷವಾಗುವಂತೆ ಯಾವ ಮನುಷ್ಯನು ನೆರವೇರಿಸುವನೊ, ಅವನಿಗೆ ಲಭಿಸುವ ಪುಣ್ಯದ ಫಲವನ್ನು ಹೇಳುವೆನು, ಕೇಳು.

೬೫–೬೬. ಹತ್ತುಸಾವಿರ ತೀರ್ಥಗಳ ಸೇವೆಯಿಂದಲೂ, ಒಂದುಕೋಟಿ ವ್ರತಗಳಿಂದಲೂ, ಸಮಸ್ತ ಯಜ್ಞಗಳನ್ನು ಮಾಡುವುದರಿಂದಲೂ ಯಾವ ಪುಣ್ಯಗಳು ಲಭಿಸುವುವೊ, ಈ ವ್ರತವನ್ನಾಚರಿಸಿದ ಮನುಜನು ಅವುಗಳೆಲ್ಲವನ್ನೂ ಒಮ್ಮೆಯೇ ಸಂಪಾದಿಸುವನು. ಸಂತತಿಯಿಲ್ಲದವನು ಪುತ್ರಸಂತಾನವನ್ನೂ, ದರಿದ್ರನು ಧನವನ್ನೂ, ವಿದ್ಯಾಭಿಲಾಷಿಯು ವಿದ್ಯೆಯನ್ನೂ, ದೇಹಾಭಿಮಾನಿಯು ಸುಂದರರೂಪವನ್ನೂ ಹೊಂದುವರು.

೬೭. ಬ್ರಾಹ್ಮಣನು ಬ್ರಹ್ಮತೇಜಸ್ಸನ್ನು ಹೊಂದುವನು. ಕ್ಷತ್ರಿಯನು ದಿಗ್ವಿಜಯವನ್ನು ಪಡೆಯುವನು. ವೈಶ್ಯನು ಧನದ ಅಧಿಪತಿಯಾಗುವನು. ಶೂದ್ರನು ಸಕಲ ಪಾಪಗಳಿಂದಲೂ ಬಿಡುಗಡೆಯನ್ನುಹೊಂದಿ ಸುಖಿಸುವನು.

೬೮. ಪ್ರೀತಿಪಾತ್ರನೆ! ಮೂರು ಲೋಕಗಳಲ್ಲಿಯೂ ಮನುಷ್ಯನಿಗೆ ದುರ್ಲಭವೂ, ದುಷ್ಪ್ರಾಪ್ಯವೂ ಆದ ಯಾವ ಪದಾರ್ಥಗಳಿರುವುವೊ, ಅವುಗಳೆಲ್ಲವನ್ನೂ ಮಾರ್ಗಶೀರ್ಷವ್ರತದ ಮಹಿಮೆಯಿಂದ ಪಡೆಯುವುದರಲ್ಲಿ ಸಂದೇಹವಿರಲಾರದು.

ಯದ್ಯಪ್ಯೇತೇಷು ಕಾಮೇಷು ಸಕ್ತಾ ಯೇ ಮಾನವಾಸ್ಸುತ ।
ತುಷ್ಟಾ ಹ್ಯಂತೇ ಚತುರ್ವಕ್ತ್ರ ನ ಕಾಮಾರ್ಹಾ ಮಹಾಭುಜ ॥ ೬೯ ॥
ಸುದುರ್ಲಭಾ ಹಿ ಸದ್ಭಕ್ತಿಃ ಮಮ ವಶ್ಯಕರೀ ಶುಭಾ ।
ಸಾ ವೈ ಸಂಪ್ರಾಪ್ಯತೇ ಪುತ್ರ ಸಹೋಮಾಸೇ ಶ್ರುತೇ ತಥಾ ॥ ೭೦ ॥
ಮಮ ಪ್ರೀತಿಕರಂ ಮಾಸಂ ಸರ್ವದಾ ಮಮ ವಲ್ಲಭಂ ।
ಸರ್ವಂ ಸಂಪ್ರಾಪ್ಯತೇಽಮುಷ್ಮಾನ್ಮತ್ಪ್ರಸಾದಾಚ್ಚತುರ್ಮುಖ ॥ ೭೧ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ದ್ವಿತೀಯೇ ವೈಷ್ಣವಖಂಡೇ ಮಾರ್ಗಶೀರ್ಷಮಾಹಾತ್ಮ್ಯೇ ಬ್ರಹ್ಮವಿಷ್ಣುಸಂವಾದೇ "ಮಥುರಾಮಾಹಾತ್ಮ್ಯವರ್ಣನಂ"ನಾಮ ಸಪ್ತದಶೋಽಧ್ಯಾಯಃ

## ಮಾರ್ಗಶೀರ್ಷಮಾಸಮಾಹಾತ್ಮ್ಯಂ ಸಂಪೂರ್ಣಂ

---

೬೯. ಮಹಾಭುಜನಾದ ಚತುರಾನನನೆ! ಈ ಮಾನವರು ಲೌಕಿಕ ತುಚ್ಛ ಕಾಮಗಳಲ್ಲಿ ಆಸಕ್ತರಾಗಿದ್ದರೂ ಸಹ, ಕೊನೆಯಲ್ಲಿ ನನ್ನ ಅನುಗ್ರಹಕ್ಕೆ ಪಾತ್ರ ರಾದರೆ ಈ ಕಾಮಭೋಗಗಳಿಗೆಂದಿಗೂ ವಶರಾಗಲಾರರು.

೭೦. ನನ್ನನ್ನು ವಶಗೊಳಿಸುವಂತಹ ಪವಿತ್ರವಾದ ಸದ್ಭಕ್ತಿಯು ಅತ್ಯಂತ ದುರ್ಲಭವು. ಈ ಮಾರ್ಗಶಿರಮಾಸಮಾಹಾತ್ಮ್ಯದ ಶ್ರವಣದಿಂದ ಅದೂ ಜನರಿಗೆ ಉಂಟಾಗುವುದು.

೭೧. ಚತುರ್ಮುಖನೆ! ಈ ಮಾರ್ಗಶಿರಮಾಸವು ನನಗೆ ಪ್ರೀತಿಯನ್ನುಂಟುಮಾಡುವುದಾಗಿ ನನ್ನ ಅಧೀನದಲ್ಲಿಯೇ ಇರುವುದು. ನನ್ನ ಅನುಗ್ರಹದಿಂದ ಈ ಮಾಸದಲ್ಲಿ ವ್ರತನಿಯಮಗಳ ಪಾಲನೆಯಿಂದ ಸಕಲವೂ ಸಿದ್ಧಿಸುವುದು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀಸ್ಕಾಂದಮಹಾಪುರಾಣದ ಎರಡನೆಯ ವೈಷ್ಣವಖಂಡದ ಮಾರ್ಗಶೀರ್ಷಮಾಹಾತ್ಮ್ಯದ ಬ್ರಹ್ಮವಿಷ್ಣುಸಂವಾದದಲ್ಲಿ "ಮಥುರಾಮಾಹಾತ್ಮ್ಯವರ್ಣನ"ವೆಂಬ ಹದಿನೇಳನೆಯ ಅಧ್ಯಾಯವು ಮುಗಿದುದು

## ಮಾರ್ಗಶೀರ್ಷಮಾಸಮಾಹಾತ್ಮ್ಯವು ಸಂಪೂರ್ಣವಾದುದು

॥ ಶ್ರೀಃ ॥

॥ ಶ್ರೀಶಂಕರಃ ಶಂಕರಃ ॥

# ಶ್ರೀ ಸ್ಕಾಂದಮಹಾಪುರಾಣಂ

## ಅಥ ಶ್ರೀಮದ್ಭಾಗವತಮಾಹಾತ್ಮ್ಯಂ ಪ್ರಾರಭ್ಯತೇ

ಓಂ ಶ್ರೀ ಗಣೇಶಾಯ ನಮಃ । ಓಂ ನಮೋ ಬೃಹಸ್ಪತಯೇ ।
ನಮಸ್ತಸ್ಮೈ ಬ್ರಹ್ಮಣೇ । ವಿಷ್ಣವೇ ನಮಃ ॥

ಶ್ರೀಮತ್ಸುಂದರಮೀಶಾನಂ ಶ್ರೀಮತ್ಸಿದ್ಧಿವಿನಾಯಕಂ ।
ಷಣ್ಮುಖಂ ಸ್ಕಂದಮಾನಂದಂ ಬ್ರಹ್ಮಾಣಂ ವಿಷ್ಣುಮಾಶ್ರಯೇ ॥
ಯಸ್ಯಾಜ್ಞಯಾ ಜಗತ್ಸ್ರಷ್ಟಾ ವಿರಿಂಚಿಃ ಪಾಲಕೋ ಹರಿಃ ।
ಸಂಹರ್ತಾ ಕಾಲರುದ್ರಾಖ್ಯೋ ನಮಸ್ತಸ್ಮೈ ಪಿನಾಕಿನೇ ॥

## ಅಥ ಪ್ರಥಮೋಽಧ್ಯಾಯಃ

### ಶಾಂಡಿಲ್ಯೋಪದಿಷ್ಟವ್ರಜಭೂಮಿಮಾಹಾತ್ಮ್ಯವರ್ಣನಂ

**ವ್ಯಾಸ ಉವಾಚ :—**

**ಶ್ರೀಸಚ್ಚಿದಾನಂದಘನಸ್ವರೂಪಿಣೇ**
**ಕೃಷ್ಣಾಯ ಚಾನಂತಸುಖಾಭಿವರ್ಷಿಣೇ ।**
**ವಿಶ್ವೋದ್ಭವಸ್ಥಾನನಿರೋಧಹೇತವೇ**
**ನುಮೋ ವಯಂ ಭಕ್ತಿರಸಾಪ್ತಯೇಽನಿಶಂ ॥ ೧ ॥**
**ನೈಮಿಷೇ ಸೂತಮಾಸೀನಮಭಿವಾದ್ಯ ಮಹಾಮತಿಂ ।**
**ಕಥಾಮೃತರಸಾಸ್ವಾದಕುಶಲಾ ಋಷಯೋಽಬ್ರುವನ್ ॥ ೨ ॥**

---

### ಕನ್ನಡದ ಅನುವಾದ

#### ವ್ರಜಭೂಮಿ ಮಾಹಾತ್ಮ್ಯ ವರ್ಣನ

೧. ವ್ಯಾಸನು ಹೇಳುತ್ತಾನೆ:—ಸತ್ಯಜ್ಞಾನಾನಂದಾತ್ಮಕವಾದ ದೇಹವುಳ್ಳವನೂ, ಭಕ್ತರಿಗೆ ಅಪಾರ ಸುಖಗಳನ್ನುಂಟುಮಾಡುವವನೂ, ಸಕಲ ಬ್ರಹ್ಮಾಂಡಗಳ ಸೃಷ್ಟಿ ಸ್ಥಿತಿ ಲಯಗಳಿಗೆ ಕಾರಣನಾದವನೂ ಎನಿಸಿದ ಶ್ರೀಕೃಷ್ಣನನ್ನು ಭಕ್ತಿ ಭಾಗ್ಯದ ಲಾಭಕ್ಕಾಗಿ ನಿತ್ಯವೂ ನಮಸ್ಕರಿಸುವೆವು.

೨. ಉಚಿತಾಸನದಲ್ಲಿ ಸುಖಾಸೀನನಾಗಿದ್ದ ಮಹಾಜ್ಞಾನಿಯಾದ ಸೂತನನ್ನು

ಋಷಯ ಊಚುಃ :–

ವಜ್ರಂ ಶ್ರೀಮಾಥುರೇ ದೇಶೇ ಸ್ವಪೌತ್ರಂ ಹಸ್ತಿನಾಪುರೇ ।
ಅಭಿಷಿಚ್ಯ ಗತೇ ರಾಜ್ಞಿ ತೌ ಕಥಂ ಕಿಂ ಚ ಚಕ್ರತುಃ ॥ ೩ ॥

ಸೂತ ಉವಾಚ :–

ನಾರಾಯಣಂ ನಮಸ್ಕೃತ್ಯ ನರಂ ಚೈವ ನರೋತ್ತಮಂ ।
ದೇವೀಂ ಸರಸ್ವತೀಂ ವ್ಯಾಸಂ ತತೋ ಜಯಮುದೀರಯೇತ್ ॥ ೪ ॥
ಮಹಾಪಥಂ ಗತೇ ರಾಜ್ಞಿ ಪರೀಕ್ಷಿತ್ಪೃಥಿವೀಪತಿಃ ।
ಜಗಾಮ ಮಥುರಾಂ ವಿಪ್ರಾ ವಜ್ರನಾಭದಿದೃಕ್ಷಯಾ ॥ ೫ ॥
ಪಿತೃವ್ಯಮಾಗತಂ ಜ್ಞಾತ್ವಾ ವಜ್ರಃ ಪ್ರೇಮಪರಿಪ್ಲುತಃ ।
ಅಭಿಗಮ್ಯಾಭಿವಾದ್ಯಾಥ ನಿನಾಯ ನಿಜಮಂದಿರಂ ॥ ೬ ॥
ಪರಿಷ್ವಜ್ಯ ಸ ತಂ ವೀರಃ ಕೃಷ್ಣೈಕಗತಮಾನಸಃ ।
ರೋಹಿಣ್ಯಾದ್ಯಾ ಹರೇಃ ಪತ್ನೀರ್ವವಂದಾಯತನಾಗತಃ ॥ ೭ ॥

---

ಕಂಡು ನಮಸ್ಕರಿಸಿ, ನೈಮಿಷಾರಣ್ಯವಾಸಿಗಳಾದ ಮಹರ್ಷಿಗಳೆಲ್ಲರೂ ಹರಿಕಥಾಮೃತಪಾನದಲ್ಲಿ ಆಸಕ್ತರಾಗಿ ಇಂತೆಂದು ಪ್ರಶ್ನೆಮಾಡಿದರು.

೩. ಋಷಿಗಳು ಕೇಳುತ್ತಾರೆ :–ವಜ್ರನಾಭನನ್ನು ಮಧುರಾನಗರಿಯಲ್ಲಿಯೂ ಮೊಮ್ಮಗನಾದ ಪರೀಕ್ಷಿದ್ರಾಜನನ್ನು ಹಸ್ತಿನಾವತಿಯಲ್ಲಿಯೂ ರಾಜ್ಯಾಭಿಷಿಕ್ತರನ್ನಾಗಿ ಮಾಡಿ ಧರ್ಮರಾಯನು ಮಹಾಪ್ರಸ್ಥಾನವನ್ನು ಮಾಡಲು ಅವರಿಬ್ಬರೂ ಯಾವ ಕಾರ್ಯಗಳನ್ನು ಹೇಗೆ ಮಾಡಿದರು ?

೪. ಸೂತನು ಹೇಳುತ್ತಾನೆ :–ನಾರಾಯಣನನ್ನೂ ಪುರುಷೋತ್ತಮನಾದ ನರನನ್ನೂ, ವಾಗಭಿಮಾನಿದೇವತೆಯಾದ ಸರಸ್ವತಿಯನ್ನೂ, ವ್ಯಾಸಮಹಾಮುನಿಯನ್ನೂ ನಮಸ್ಕರಿಸಿ ಬಳಿಕ ಪೌರಾಣಿಕನು ವಿಷಯನಿರೂಪಣೆಯನ್ನು ಮಾಡಬೇಕು.

೫. ಎಲೈ ಬ್ರಾಹ್ಮಣರಿರಾ! ಯುಧಿಷ್ಠಿರನು ಮಹಾಪ್ರಸ್ಥಾನವನ್ನು ಮಾಡಲು ಒಮ್ಮೆ ಚಕ್ರವರ್ತಿಯಾದ ಪರೀಕ್ಷಿತನು ವಜ್ರನಾಭನನ್ನು ನೋಡುವ ಅಭಿಲಾಷೆಯಿಂದ ಮಧುರಾಪುರಿಗೆ ಹೊರಟನು.

೬. ಚಿಕ್ಕಪ್ಪನು ಬಂದುದನ್ನು ತಿಳಿದು ವಜ್ರನು ಪ್ರೇಮದಿಂದ ಆನಂದ ಬಾಷ್ಪಗಳನ್ನು ಸುರಿಸುತ್ತ ಆತನ ಇದಿರಿನಲ್ಲಿ ಹೋಗಿ ನಮಸ್ಕರಿಸಿ ತನ್ನ ಅರಮನೆಗೆ ಕರೆದುಕೊಂಡು ಬಂದನು.

೭. ಪರೀಕ್ಷಿತನೂ ಶ್ರೀಕೃಷ್ಣನಲ್ಲಿಯೇ ಲೀನವಾದ ಮನಸ್ಸುಳ್ಳವನಾಗಿ ಆತನನ್ನು ಆಲಿಂಗನೆಮಾಡಿಕೊಂಡು ಆತನ ಗೃಹಕ್ಕೆ ಬಂದೊಡನೆಯೆ ರೋಹಿಣಿಯೇ ಮೊದಲಾದ ಕೃಷ್ಣಮಹಿಷಿಯರಿಗೆ ನಮಸ್ಕರಿಸಿದನು.

ತಾಭಿಃ ಸಂಮಾನಿತೋಽತ್ಯರ್ಥಂ ಪರೀಕ್ಷಿತ್ಪೃಥಿವೀಪತಿಃ ।
ವಿಶ್ರಾಂತಃ ಸುಖಮಾಸೀನೊ ವಜ್ರನಾಭಮುವಾಚ ಹ ॥ ೮ ॥
ಶ್ರೀ ಪರೀಕ್ಷಿದುವಾಚ:
ತಾತ ತ್ವತ್ಪಿತೃಭಿರ್ನೂನಂ ಅಸ್ಮತ್ಪಿತೃಪಿತಾಮಹಾಃ ।
ಉದ್ಧೃತಾ ಭೂರಿದುಃಖೌಘಾದಹಂ ಚ ಪರಿರಕ್ಷಿತಃ ॥ ೯ ॥
ನ ಪಾರಯಾಮ್ಯಹಂ ತಾತ ಸಾಧು ಕೃತ್ವೋಪಕಾರತಃ ।
ತ್ವಾಮತಃ ಪ್ರಾರ್ಥಯಾಮ್ಯಂಗ ಸುಖಂ ರಾಜ್ಯೇಽನುಯುಜ್ಯತಾಂ ॥೧೦॥
ಕೋಶಸೈನ್ಯಾದಿಜಾ ಚಿಂತಾ ತಥಾರಿದಮನಾದಿಜಾ ।
ಮನಾಗಪಿ ನ ಕಾರ್ಯಾ ತೇ ಸುಸೇವ್ಯಾಃ ಕಿಂತು ಮಾತರಃ ॥ ೧೧ ॥
ನಿವೇದ್ಯ ಮಯಿ ಕರ್ತವ್ಯಂ ಸರ್ವಾಧಿಪರಿವರ್ಜನಂ ।
ಶ್ರುತ್ವೈತತ್ಪರಮಪ್ರೀತೋ ವಜ್ರಸ್ತಂ ಪ್ರತ್ಯುವಾಚ ಹ ॥ ೧೨ ॥

೮. ಅವರಿಂದ ಉಚಿತರೀತಿಯ ಸತ್ಕಾರವನ್ನು ಪಡೆದು ಪರೀಕ್ಷಿನ್ಮಹಾರಾಜನು ಮಾರ್ಗಾಯಾಸವನ್ನು ಕಳೆದುಕೊಂಡು ಸುಖಾಸನದಲ್ಲಿ ಕುಳಿತು ವಜ್ರನಾಭನನ್ನು ಮಾತನಾಡಿಸತೊಡಗಿದನು.

೯. ಪರೀಕ್ಷಿತನು ಹೇಳುತ್ತಾನೆ:—ಅಪ್ಪಾ! ನಿನ್ನ ತಂದೆಯಾದ ಶ್ರೀಕೃಷ್ಣನಿಂದ ನನ್ನ ತಂದೆ ತಾತಂದಿರೂ ಮಹತ್ತರವಾದ ದುಃಖಸಮುದ್ರದಿಂದ ಉದ್ಧರಿಸಲ್ಪಟ್ಟರು. ನಾನೂ ತಾಯಿಯ ಗರ್ಭದಲ್ಲಿರುವಾಗಲೇ ಆತನಿಂದ ರಕ್ಷಿಸಲ್ಪಟ್ಟೆನು.

೧೦. ಎಷ್ಟೇ ನಿಷ್ಕೃತಿಯನ್ನು ಮಾಡಿದರೂ ಆತನ ಮಹದುಪಕಾರಕ್ಕೆ ಪ್ರತಿ ಕರ್ಮವನ್ನು ಮಾಡಲಾಗದು. ಎಲೈ ಪ್ರಿಯನೆ! ಆದುದರಿಂದ ನಿನ್ನನ್ನು ಪ್ರಾರ್ಥಿಸುತ್ತಿರುವೆನು. ನೀನು ಈ ರಾಜ್ಯವನ್ನು ಸುಖದಿಂದ ಅನುಭವಿಸಿಕೊಂಡಿರು.

೧೧. ಭಂಡಾರ ಅಥವ ಸೈನ್ಯಗಳ ವಿಷಯವಾಗಿಯಾಗಲಿ, ಶತ್ರುಗಳನ್ನು ನಿಗ್ರಹಿಸುವ ವಿಷಯದಲ್ಲಿಯಾಗಲಿ ನೀನು ಸ್ವಲ್ಪವೂ ಚಿಂತೆಯನ್ನು ಮಾಡಬೇಡ.

೧೨. ನಿನಗೆ ಯಾವ ವಿಧವಾದ ಕಷ್ಟವು ಪ್ರಾಪ್ತವಾದರೂ ನನಗೆ ನಿವೇದಿಸುವುದು ನಿನ್ನ ಕರ್ತವ್ಯವು. ಅದರ ನಿವಾರಣೋಪಾಯವು ನನಗೆ ಸೇರಿರುವುದು. ಇಂತೆಂದ ಪರೀಕ್ಷಿತನ ಮಾತುಗಳನ್ನು ಕೇಳಿ ವಜ್ರನಾಭನು ಅತ್ಯಂತ ಸಂತೋಷಗೊಂಡು ಮಾತನಾಡತೊಡಗಿದನು.

ಶ್ರೀ ವಜ್ರನಾಭ ಉವಾಚ :—

ರಾಜನ್ನುಚಿತಮೇತತ್ತೇ ಯದಸ್ಮಾಸು ಪ್ರಭಾಷತೇ ।
ತ್ವತ್ಪಿತ್ರೋಪಕೃತಶ್ಚಾಹಂ ಧನುರ್ವಿದ್ಯಾಪ್ರದಾನತಃ ॥ ೧೩ ॥
ತಸ್ಮಾನ್ನಾಲ್ಪಾಪಿ ಮೇ ಚಿಂತಾ ಕ್ಷಾತ್ರಂ ದೃಢಮುಪೇಯುಷಃ ।
ಕಿಂ ತ್ವೇಕಾ ಪರಮಾ ಚಿಂತಾ ತತ್ರ ಕಿಂಚಿದ್ವಿಚಾರ್ಯತಾಂ ॥ ೧೪ ॥
ಮಾಥುರೇ ತ್ವಭಿಷಿಕ್ತೋಽಪಿ ಸ್ಥಿತೋಽಹಂ ನಿರ್ಜನೇ ವನೇ ।
ಕ್ವ ಗತಾ ವೈ ಪ್ರಜಾಽತ್ರತ್ಯಾ ಯತ್ರ ರಾಜ್ಯಂ ಪ್ರರೋಚತೇ ॥ ೧೫ ॥
ಇತ್ಯುಕ್ತೋ ವಿಷ್ಣುರಾತಸ್ತು ನಂದಾದೀನಾಂ ಪುರೋಹಿತಂ ।
ಶಾಂಡಿಲ್ಯಮಾಜುಹಾವಾಶು ವಜ್ರಸಂದೇಹನುತ್ತಯೇ ॥ ೧೬ ॥
ಅಥೋಟಜಂ ವಿಹಾಯಾಶು ಶಾಂಡಿಲ್ಯಃ ಸಮುಪಾಗತಃ ।
ಪೂಜಿತೋ ವಜ್ರನಾಭೇನ ನಿಷಸಾದಾಸನೋತ್ತಮೇ ॥ ೧೭ ॥

೧೩. ವಜ್ರನಾಭನು ಹೇಳುತ್ತಾನೆ:—ಮಹಾರಾಜನೆ! ನೀನು ನಮ್ಮಲ್ಲಿ ಆಡಿದ ಮಾತುಗಳೆಲ್ಲವೂ ತಕ್ಕವುಗಳೇ ಆಗಿರುವುವು. ನಿನ್ನ ತಂದೆಯಲ್ಲಿಯೇ ನಾನು ಧನುರ್ವಿದ್ಯೆಯನ್ನು ಅಭ್ಯಾಸಮಾಡಿ ಆತನಿಂದ ಮಹೋಪಕಾರವನ್ನು ಪಡೆದಿರುವೆನು.

೧೪. ಆದುದರಿಂದ ಬಲಿಷ್ಠವಾದ ಕ್ಷಾತ್ರಧರ್ಮವನ್ನು ಆಶ್ರಯಿಸಿರುವ ನನಗೆ ಸ್ವಲ್ಪವೂ ಇತರ ಚಿಂತೆಯಿಲ್ಲವಾದರೂ, ಮಹತ್ತರವಾದ ಮತ್ತೊಂದು ವಿಷಯವು ಕೇವಲ ಚಿಂತಾಜನಕವಾಗಿರುವುದು. ಅದನ್ನು ಕುರಿತು ಸ್ವಲ್ಪ ವಿಚಾರವನ್ನು ಮಾಡೋಣ.

೧೫. ಮಥುರಾನಗರಿಯಲ್ಲಿ ನನಗೆ ಪಟ್ಟಾಭಿಷೇಕವಾದರೂ ಈ ಪ್ರದೇಶವು ಜನಶೂನ್ಯವಾದ ಅರಣ್ಯದಂತಿರುವುದು. ಅಲ್ಲಿಯೇ ನಾನು ವಾಸಿಸುತ್ತಿರುವೆನು. ಯಾವ ರಾಜ್ಯವು ನನ್ನ ಆಳ್ವಿಕೆಗೆ ಒಳಪಟ್ಟಿರುವುದೊ, ಅದರಲ್ಲಿದ್ದ ಪ್ರಜೆಗಳೆಲ್ಲರೂ ಎಲ್ಲಿಗೆ ಹೊರಟುಹೋದರು ?

೧೬. ಇಂತೆಂದ ವಜ್ರನಾಭನನ್ನು ಕಂಡು ಪರೀಕ್ಷಿದ್ರಾಜನು ಆತನ ಸಂದೇಹವನ್ನು ನಿವೃತ್ತಿಮಾಡುವುದಕ್ಕಾಗಿ ನಂದಾದಿ ಗೋಪಾಲಕರ ಕುಲ ಗುರುಗಳಾದ ಶಾಂಡಿಲ್ಯರನ್ನು ಬೇಗ ಕರೆಸಿದನು.

೧೭. ಆಗ ಶಾಂಡಿಲ್ಯಮುನಿಯು ತನ್ನ ಆಶ್ರಮವನ್ನು ಬಿಟ್ಟು ಮಥುರೆಗೆ ಬಂದನು. ಮತ್ತು ವಜ್ರನಾಭನಿಂದ ಉಚಿತ ಪೂಜೆಯನ್ನು ಸ್ವೀಕರಿಸಿ ಉತ್ತಮವಾದ ಆಸನದಲ್ಲಿ ಕುಳಿತುಕೊಂಡನು.

ಉಪೋದ್ಘಾತಂ ವಿಷ್ಣುರಾತಶ್ಚಕಾರಾಶು ತತಸ್ತ್ವಸೌ ।
ಉವಾಚ ಪರಮಪ್ರೀತಸ್ತಾವುಭೌ ಪರಿಸಾಂತ್ವಯನ್ ॥ ೧೮ ॥

ಶ್ರೀ ಶಾಂಡಿಲ್ಯ ಉವಾಚ:—

ಶೃಣುತಂ ದತ್ತಚಿತ್ತೌ ಮೇ ರಹಸ್ಯಂ ವ್ರಜಭೂಮಿಜಂ ।
ವ್ರಜನಂ ವ್ಯಾಪ್ತಿರಿತ್ಯುಕ್ತ್ಯಾ ವ್ಯಾಪನಾದ್ವ್ರಜ ಉಚ್ಯತೇ ॥ ೧೯ ॥
ಗುಣಾತೀತಂ ಪರಂ ಬ್ರಹ್ಮ ವ್ಯಾಪಕಂ ವ್ರಜ ಉಚ್ಯತೇ ।
ಸದಾನಂದಂ ಪರಂ ಜ್ಯೋತಿರ್ಮುಕ್ತಾನಾಂ ಪದಮವ್ಯಯಂ ॥ ೨೦ ॥
ತಸ್ಮಿನ್ನಂದಾತ್ಮಜಃ ಕೃಷ್ಣಃ ಸದಾನಂದಾಂಗವಿಗ್ರಹಃ ।
ಆತ್ಮಾರಾಮಶ್ಚಾಪ್ತಕಾಮಃ ಪ್ರೇಮಾಕ್ತೈರನುಭೂಯತೇ ॥ ೨೧ ॥
ಆತ್ಮಾ ತು ರಾಧಿಕಾ ತಸ್ಯ ತಯೈವ ರಮಣಾದಸೌ ।
ಆತ್ಮಾರಾಮತಯಾ ಪ್ರಾಜ್ಞೈಃ ಪ್ರೋಚ್ಯತೇ ಗೂಢವೇದಿಭಿಃ ॥ ೨೨ ॥
ಕಾಮಾಸ್ತು ವಾಂಛಿತಾಸ್ತಸ್ಯ ಗಾವೋ ಗೋಪಾಶ್ಚ ಗೋಪಿಕಾಃ ।
ನಿತ್ಯಾಃ ಸರ್ವೇ ವಿಹಾರಾದ್ಯಾ ಆಪ್ತಕಾಮಸ್ತತಸ್ತ್ವಯಂ ॥ ೨೩ ॥

---

೧೮. ಬಳಿಕ ಪರೀಕ್ಷಿತನು ಆತನನ್ನು ಕುರಿತು ತಮ್ಮ ಸಂದೇಹವನ್ನು ಬೇಗ ಆತನಿಗೆ ನಿವೇದಿಸಿದನು. ಆತನೂ ಪ್ರೀತಿಯುಳ್ಳವನಾಗಿ ಅವರಿಬ್ಬರನ್ನೂ ಸಂತೈಸುತ್ತ ಹೇಳತೊಡಗಿದನು.

೧೯. ಶಾಂಡಿಲ್ಯನು ಹೇಳುತ್ತಾನೆ:—ನೀವಿಬ್ಬರೂ ಏಕಾಗ್ರಚಿತ್ತದಿಂದ ವ್ರಜಭೂಮಿಗೆ ಸಂಬಂಧಿಸಿದ ರಹಸ್ಯವೊಂದನ್ನು ಕೇಳಿರಿ. ವ್ರಜನವೆಂದರೆ ವ್ಯಾಪ್ತಿಯು. ಈ ಶಬ್ದವ್ಯುತ್ಪತ್ತಿಯಿಂದ ಸರ್ವವ್ಯಾಪಕವಾದ ಈ ಪ್ರದೇಶವು ವ್ರಜವೆಂದು ಕರೆಯಲ್ಪಡುವುದು.

೨೦. ಸತ್ತ್ವ, ರಜ, ತಮಗಳೆಂಬ ಮೂರು ಗುಣಗಳನ್ನೂ ಅತಿಕ್ರಮಿಸಿ, ಪರಾತ್ಪರವಾಗಿ, ಸರ್ವವ್ಯಾಪಕವೂ, ಆನಂದಮಯವೂ, ಪರಂಜ್ಯೋತಿ ಸ್ವರೂಪವೂ, ಮುಕ್ತಾತ್ಮರಿಗೆ ಲಭಿಸುವ ಶಾಶ್ವತಪದವೂ ಎನಿಸಿದ ಬ್ರಹ್ಮವಸ್ತುವೇ ವ್ರಜಶಬ್ದದ ಲಕ್ಷ್ಯಾರ್ಥವು.

೨೧. ಅಲ್ಲಿ ನಂದಗೋಪನ ಮಗನೂ, ಸದಾನಂದ ಶರೀರನೂ, ಸ್ವಾತ್ಮಾ ರಾಮನೂ, ಸಂಪೂರ್ಣಕಾಮನೂ ಆದ ಶ್ರೀಕೃಷ್ಣನು ಪ್ರೇಮಾರ್ದ್ರಹೃದಯ ರಾದ ಭಕ್ತರ ಅನುಭವಕ್ಕೆ ವಿಷಯನಾಗುವನು.

೨೨. ಆತನ ಆತ್ಮವೇ ರಾಧಿಕೆಯು. ಆಕೆಯೊಡನೆ ರಮಿಸುವವನಾದುದ ರಿಂದ ಕೃಷ್ಣನು ಆತ್ಮಾರಾಮನೆಂದು ಪ್ರಾಜ್ಞರೂ ರಹಸ್ಯಗಳನ್ನು ತಿಳಿದವರೂ ಹೇಳುವರು.

೨೩. ಕಾಮಗಳೆಂದರೆ ಆತನಿಗೆ ಪ್ರಿಯಗಳಾಗಿರುವ ಗೋವುಗಳು,

ರಹಸ್ಯಂ ತ್ವಿದಮೇತಸ್ಯ ಪ್ರಕೃತೇಃ ಪರಮುಚ್ಯತೇ ।
ಪ್ರಕೃತ್ಯಾ ಖೇಲತಸ್ತಸ್ಯ ಲೀಲಾನ್ಯೈರನುಭೂಯತೇ ॥ ೨೪ ॥
ಸರ್ಗಸ್ಥಿತ್ಯಪ್ಯಯಾ ಯತ್ರ ರಜಃಸತ್ವತಮೋಗುಣೈಃ ।
ಲೀಲೈವಂ ದ್ವಿವಿಧಾ ತಸ್ಯ ವಾಸ್ತವೀ ವ್ಯವಹಾರಿಕೀ ॥ ೨೫ ॥
ವಾಸ್ತವೀ ತತ್ಸ್ವಸಂವೇದ್ಯಾ ಜೀವಾನಾಂ ವ್ಯಾವಹಾರಿಕೀ ।
ಆದ್ಯಾಂ ವಿನಾ ದ್ವಿತೀಯಾ ನ ದ್ವಿತೀಯಾ ನಾದ್ಯಗಾ ಕ್ವಚಿತ್ ॥ ೨೬ ॥
ಅನಯೋರ್ಗೋಚರೇಯಂ ತು ತಲ್ಲೀಲಾ ವ್ಯಾವಹಾರಿಕೀ ।
ಯತ್ರ ಭೂರಾದಯೋ ಲೋಕಾ ಭುವಿ ಮಾಥುರಮಂಡಲಂ ॥ ೨೭ ॥
ಅತ್ರೈವ ವ್ರಜಭೂಮಿಃ ಸಾ ಯತ್ರ ತತ್ತ್ವಂ ಸುಗೋಪಿತಂ ।
ಭಾಸತೇ ಪ್ರೇಮಪೂರ್ಣಾನಾಂ ಕದಾಚಿದಪಿ ಸರ್ವತಃ ॥ ೨೮ ॥
ಕದಾಚಿದ್ದ್ವಾಪರಸ್ಯಾಂತೇ ರಹೋಲೀಲಾಧಿಕಾರಿಣಃ ।
ಸಮವೇತಾ ಯದಾಽತ್ರಸ್ಯುಃ ಯಥೇದಾನೀಂ ತದಾ ಹರಿಃ ॥ ೨೯ ॥

---

ಗೋಪಾಲಕರು, ಗೋಪಸ್ತ್ರೀಯರು. ಆವರೊಡನೆ ನಿತ್ಯವೂ ವಿಹಾರಾದಿಗಳು ನಡೆಯುತ್ತಿರುವುದರಿಂದ ಆತನಿಗೆ ಆಪ್ತಕಾಮನೆಂದು ಹೆಸರು ಬಂದಿರುವುದು.

೨೪. ಈ ವಿಷಯದಲ್ಲಿ ರಹಸ್ಯವು ಹೀಗಿರುವುದು. ಪರಮಾತ್ಮನು ಪ್ರಕೃತಿಗಿಂತಲೂ ಪರಾತ್ಪರನು. ಪ್ರಕೃತಿಯೊಡನೆ ಕ್ರೀಡಿಸುತ್ತಿರುವ ಆತನ ಲೀಲೆಯೇ ಸಕಲರಿಂದಲೂ ಅನುಭವಿಸಲ್ಪಡುತ್ತಿರುವುದು.

೨೫. ಆ ಪ್ರಕೃತಿಯಲ್ಲಿರುವ ಸತ್ತ್ವ, ರಜಸ್ಸು, ತಮಸ್ಸುಗಳೆಂಬ ತ್ರಿಗುಣಗಳಿಂದ ಸೃಷ್ಟಿ, ಸ್ಥಿತಿ, ಲಯಗಳು ಬ್ರಹ್ಮಾಂಡಕ್ಕೆ ನಡೆಯುವುವು. ಪರಮಾತ್ಮನ ಈ ಲೀಲೆಯು ವಾಸ್ತವವೆಂದೂ ವ್ಯಾವಹಾರಿಕವೆಂದೂ ಎರಡು ವಿಧವಾಗಿರುವುದು.

೨೬. ವಾಸ್ತವಲೀಲೆಯು ಪರಮಾತ್ಮನಿಗೊಬ್ಬನಿಗೆ ಮಾತ್ರ ಗೋಚರವಾಗುವುದು. ವ್ಯಾವಹಾರಿಕ ಲೀಲೆಗಳು ಸಕಲ ಜೀವರ ಜ್ಞಾನದೃಷ್ಟಿಗೂ ವಿಷಯಗಳಾಗಿರುವುವು. ಮೊದಲನೆಯದು ಇಲ್ಲದೆ ಎರಡನೆಯದಾಗಲಾರದು. ಎರಡನೆಯದು ಮೊದಲನೆಯದನ್ನೆಂದಿಗೂ ಸರಿ ಹೋಲಲಾರದು.

೨೭. ನಮಗೆ ಕಾಣಿಸುತ್ತಿರುವ ಬ್ರಹ್ಮಾಂಡದ ಹದಿನಾಲ್ಕು ಲೋಕಗಳೂ, ಭೂಲೋಕದಲ್ಲಿರುವ ಮಧುರಾನಗರಿಯೂ ಶ್ರೀಕೃಷ್ಣನ ವ್ಯಾವಹಾರಿಕ ಲೀಲೆಗೆ ಸಂಬಂಧಪಟ್ಟವುಗಳು.

೨೮. ಇಲ್ಲಿಯೇ ಆ ವ್ರಜಭೂಮಿಯಿರುವುದು. ಈ ತತ್ತ್ವವು ಬಹಳ ರಹಸ್ಯವುಳ್ಳದ್ದಾಗಿರುವುದು. ಆದರೂ ಆತನಲ್ಲಿ ಪ್ರೇಮಪೂರ್ಣವಾದ ಮನಸ್ಸನ್ನು ನಿಲ್ಲಿಸಿದವರಿಗೆ ಒಮ್ಮೆ ಸರ್ವತ್ರದಲ್ಲಿಯೂ ಈ ಲೀಲೆಯು ಕಾಣುತ್ತಿರುವುದು.

೨೯–೩೦. ಒಮ್ಮೆ ದ್ವಾಪರಯುಗದ ಅಂತ್ಯದಲ್ಲಿ ಈ ರಹಸ್ಯ ಲೀಲೆಗಳನ್ನು

ಸ್ವೈಃ ಸಹಾವತರೇತ್ಸ್ವೇಷು ಸಮಾವೇಶಾರ್ಥಮಿಪ್ಸಿತಾಃ
ತದಾ ದೇವಾದಯೋಽಪ್ಯನ್ಯೇಽವತರಂತಿ ಸಮಂತತಃ ॥ ೩೦ ॥
ಸರ್ವೇಷಾಂ ವಾಂಛಿತಂ ಕೃತ್ವಾ ಹರಿರಂತರ್ಹಿತೋಽಭವತ್ ।
ತೇನಾತ್ರ ತ್ರಿವಿಧಾ ಲೋಕಾಃ ಸ್ಥಿತಾಃ ಪೂರ್ವಂ ನ ಸಂಶಯಃ ॥ ೩೧ ॥
ನಿತ್ಯಾಸ್ತಲ್ಲಿಪ್ಸವಶ್ಚೈವ ದೇವಾದ್ಯಾಶ್ಚೇತಿ ಭೇದತಃ ।
ದೇವಾದ್ಯಾಸ್ತೇಷು ಕೃಷ್ಣೇನ ದ್ವಾರಿಕಾಂ ಪ್ರಾಪಿತಾಃ ಪುರಾ ॥ ೩೨ ॥
ಪುನರ್ಮೌಶಲಮಾರ್ಗೇಣ ಸ್ವಾಧಿಕಾರೇಷು ಚಾಪಿತಾಃ ।
ತಲ್ಲಿಪ್ಸೂಂಶ್ಚ ಸದಾ ಕೃಷ್ಣಃ ಪ್ರೇಮಾನಂದೈಕರೂಪಿಣಃ ॥ ೩೩ ॥
ವಿಧಾಯ ಸ್ವೀಯನಿತ್ಯೇಷು ಸಮಾವೇಶಿತವಾಂಸ್ತದಾ ।
ನಿತ್ಯಾಃ ಸರ್ವೇಽಪ್ಯಯೋಗ್ಯೇಷು ದರ್ಶನಾಭಾವತಾಂ ಗತಾಃ ॥ ೩೪ ॥
ವ್ಯಾವಹಾರಿಕಲೀಲಾಸ್ಥಾಸ್ತತ್ರ ಯನ್ನಾಧಿಕಾರಿಣಃ ।
ಪಶ್ಯಂತ್ಯತ್ರಾಗತಾಸ್ತಸ್ಮಾತ್ ನಿರ್ಜನತ್ವಂ ಸಮಂತತಃ ॥ ೩೫ ॥

ತಿಳಿಯಲು ಅಧಿಕಾರಿಗಳಾದ ಭಕ್ತರನೇಕರು ಈಗಿನಂತೆಯೇ ಇಲ್ಲಿ ಒಟ್ಟುಗೂಡಿದರು. ಆಗ ಶ್ರೀಹರಿಯು ತನ್ನ ಭಕ್ತರ ಅಭೀಷ್ಟವನ್ನು ನೆರವೇರಿಸುವುದಕ್ಕಾಗಿ ಸಕಲ ಪರಿವಾರದೊಡನೆ ಇಲ್ಲಿ ಅವತಾರವನ್ನು ಎತ್ತಿದ್ದನು. ಆತನೊಡನೆ ದೇವತೆಗಳೇ ಮೊದಲಾದ ಸಮಸ್ತರೂ ಅಸಂಖ್ಯಾಕರಾಗಿ ಜನ್ಮಗಳನ್ನು ಪಡೆದರು.

೩೧. ಶ್ರೀಹರಿಯು ಸಕಲರ ಅಭೀಷ್ಟಗಳನ್ನು ನಡೆಸಿಕೊಟ್ಟು ಅಂತರ್ಧಾನವನ್ನು ಹೊಂದಿದನು. ಆದುದರಿಂದ ಪೂರ್ವದಲ್ಲಿ ಇಲ್ಲಿ ಮೂರು ವಿಧರಾದ ಜೀವರು ನೆಲಸಿದ್ದರೆಂಬ ವಿಷಯದಲ್ಲಿ ಸಂದೇಹವಿಲ್ಲ.

೩೨. ಅವರೇ ನಿತ್ಯರು, ಲಿಪ್ಸುಗಳು ಮತ್ತು ದೇವಾದಿಗಳೆಂಬ ಭೇದದಿಂದ ಮೂರು ವಿಧವಾಗಿರುವರು. ಅವರಲ್ಲಿ ದೇವತೆಗಳೇ ಮುಂತಾದವರು ಹಿಂದೆಯೇ ಕೃಷ್ಣನೊಡನೆ ದ್ವಾರಕೆಯನ್ನು ಸೇರುವವರಾದರು.

೩೩–೩೪. ಮತ್ತು ಮುಸಲ ಯುದ್ಧದ ವ್ಯಾಜದಿಂದ ಭೂಲೋಕವನ್ನು ಬಿಟ್ಟು ತಮ್ಮ ತಮ್ಮ ಅಧಿಕಾರಗಳಲ್ಲಿ ಪುನಃ ನೆಲೆಗೊಳಿಸಲ್ಪಟ್ಟರು. ಯಾವಾಗಲೂ ಪ್ರೇಮಾನಂದಗಳೇ ಮೂರ್ತಿಗೊಂಡಂತಿದ್ದ ಲಿಪ್ಸುಗಳಾದ ಜೀವರನ್ನು ಕೃಷ್ಣನು ಒಟ್ಟುಗೂಡಿಸಿ ತನ್ನ ನಿತ್ಯಭಕ್ತರಲ್ಲಿಯೇ ಸೇರಿಸಿಬಿಟ್ಟನು. ಈ ನಿತ್ಯರೆಲ್ಲರೂ ಅಯೋಗ್ಯರಾದವರ ನೇತ್ರಗಳಿಗೆ ಅದೃಶ್ಯರಾಗಿ ನಿಂತರು.

೩೫. ಆದುದರಿಂದ ವ್ಯಾವಹಾರಿಕ ಲೀಲೆಗಳಲ್ಲಿಯೇ ಅಧಿಕಾರಿಗಳಾದ ಜೀವರು ಇಲ್ಲಿಗೆ ಬಂದರೆ ಆ ನಿತ್ಯಭಕ್ತರನ್ನು ನೋಡಲಾರರು. ಆದಕಾರಣ ಈ ಪ್ರದೇಶವು ಸರ್ವತ್ರದಲ್ಲಿಯೂ ಜನಶೂನ್ಯವಾದಂತೆ ತೋರುತ್ತಿರುವುದು.

**ತಸ್ಮಾಚ್ಚಿಂತಾ ನ ತೇ ಕಾರ್ಯಾ ವಜ್ರನಾಭ ಮದಾಜ್ಞಯಾ ।**
**ವಾಸಯಾತ್ರ ಬಹೂನ್ ಗ್ರಾಮಾನ್ ಸಂಸಿದ್ಧಿಸ್ತೇ ಭವಿಷ್ಯತಿ ॥ ೩೬ ॥**
**ಕೃಷ್ಣಲೀಲಾನುಸಾರೇಣ ಕೃತ್ವಾ ನಾಮಾನಿ ಸರ್ವತಃ ।**
**ತ್ವಯಾ ವಾಸಯತಾ ಗ್ರಾಮಾನ್ ಸಂಸೇವ್ಯಾ ಭೂರಿಯಂ ಪರಾ ॥ ೩೭ ॥**
**ಗೋವರ್ಧನೇ ದೀರ್ಘಪುರೇ ಮಥುರಾಯಾಂ ಮಹಾವನೇ ।**
**ನಂದಿಗ್ರಾಮೇ ಬೃಹತ್ಸಾನೌ ಕಾರ್ಯಾ ರಾಜ್ಯಸ್ಥಿತಿಸ್ತ್ವಯಾ ॥ ೩೮ ॥**
**ನದ್ಯದ್ರಿದ್ರೋಣಿಕುಂಡಾದಿಕುಂಜಾನ್ ಸಂಸೇವತಸ್ತವ ।**
**ರಾಜ್ಯೇ ಪ್ರಜಾಃ ಸುಸಂಪನ್ನಾಸ್ತ್ವಂ ಚ ಪ್ರೀತೋ ಭವಿಷ್ಯಸಿ ॥ ೩೯ ॥**
**ಸಚ್ಚಿದಾನಂದಭೂರೇಷಾ ತ್ವಯಾ ಸೇವ್ಯಾ ಪ್ರಯತ್ನತಃ ।**
**ತವ ಕೃಷ್ಣಸ್ಥಲಾನ್ಯತ್ರ ಸ್ಫುರಂತು ಮದನುಗ್ರಹಾತ್ ॥ ೪೦ ॥**
**ವಜ್ರ ಸಂಸೇವನಾದಸ್ಯಾ ಉದ್ಧವಸ್ತ್ವಾಂ ಮಿಲಿಷ್ಯತಿ ।**
**ತತೋ ರಹಸ್ಯಮೇತಸ್ಮಾತ್ ಪ್ರಾಪ್ಸ್ಯಸಿ ತ್ವಂ ಸಮಾತೃಕಃ ॥ ೪೧ ॥**

---

೩೬. ಎಲೈ ವಜ್ರನಾಭನೆ! ಇದಕ್ಕಾಗಿ ನೀನು ಚಿಂತಿಮಾಡಬೇಕಾಗಿಲ್ಲ. ನನ್ನ ಆಜ್ಞೆಯನ್ನನುಸರಿಸಿ ನೀನು ಇಲ್ಲಿ ಅನೇಕ ಗ್ರಾಮಗಳನ್ನು ನಿರ್ಮಾಣ ಮಾಡು. ಖಂಡಿತವಾಗಿಯೂ ಕಾರ್ಯಸಿದ್ಧಿಯಾಗುವುದು.

೩೭. ಕೃಷ್ಣನ ಲೀಲೆಗಳನ್ನು ಸ್ಮರಣೆಗೆ ತರುವಂತೆ ಈ ಗ್ರಾಮಗಳಿಗೆ ಹೆಸರುಗಳನ್ನಿಟ್ಟು ಈ ಪ್ರದೇಶದಲ್ಲಿ ವಾಸಮಾಡುತ್ತಿರುವ ನಿನ್ನಿಂದ ಸರ್ವೋತ್ಕೃಷ್ಟವಾದ ಈ ಕ್ಷೇತ್ರವು ಸೇವಿಸಲ್ಪಡಬೇಕು.

೩೮. ಗೋವರ್ಧನ, ದೀರ್ಘಪುರ, ಮಥುರೆ ಮತ್ತು ಮಹಾವನಗಳು, ನಂದಿಗ್ರಾಮ, ಬೃಹತ್ಸಾನುಗಳೆಂಬ ಪಟ್ಟಣಗಳಲ್ಲಿ ನೀನು ರಾಜ್ಯಭಾರವನ್ನು ಮಾಡಿಕೊಂಡಿರು.

೩೯. ನದಿಗಳು, ಪರ್ವತಗಳು, ಕಣಿವೆಗಳು, ಕುಂಡಗಳು, ಪುಷ್ಪವನಗಳು ಮುಂತಾದುವನ್ನು ನೀನು ಸೇವಿಸುತ್ತಿರಲು ಈ ರಾಜ್ಯದಲ್ಲಿ ಕ್ರಮವಾಗಿ ಪ್ರಜೆಗಳೂ ಬಂದು ಸೇರುವರು. ನೀನೂ ಸಂತುಷ್ಟನಾಗುವೆ.

೪೦. ಈ ಭೂಮಿಯು ಸತ್ಯಜ್ಞಾನಾನಂದಾತ್ಮಕವಾಗಿರುವುದು. ಆದುದರಿಂದ ನೀನು ಪ್ರಯತ್ನಪೂರ್ವಕವಾಗಿ ಈ ಕ್ಷೇತ್ರವನ್ನು ಸೇವಿಸಬೇಕು. ನನ್ನ ಅನುಗ್ರಹದಿಂದ ನಿನಗೆ ಇಲ್ಲಿ ಕೃಷ್ಣಲೀಲೆಗಳು ನಡೆದ ಸ್ಥಳಗಳೆಲ್ಲವೂ ಜ್ಞಾನಗೋಚರಗಳಾಗಲಿ.

೪೧. ಎಲೈ ವಜ್ರನಾಭ ಮಹಾರಾಜನೆ! ಈ ತೀರ್ಥಸೇವನೆಯ ಫಲವಾಗಿ ಉದ್ಧವನು ನಿನ್ನನ್ನು ಬಂದು ಸೇರುವನು. ಆತನಿಂದ ತಾಯಿಯರೊಡನೆ ನೀನು ಈ ಸ್ಥಳದ ರಹಸ್ಯವೆಲ್ಲವನ್ನೂ ತಿಳಿಯುವೆ.

**ಏವಮುಕ್ತ್ವಾ ತು ಶಾಂಡಿಲ್ಯೋ ಗತಃ ಕೃಷ್ಣಮನುಸ್ಮರನ್ ।**
**ವಿಷ್ಣುರಾತೋಽಥ ವಜ್ರಶ್ಚ ಪರಾಂ ಪ್ರೀತಿಮವಾಪತುಃ ॥ ೪೨ ॥**

**ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ದ್ವಿತೀಯೇ ವೈಷ್ಣವಖಂಡೇ ಶ್ರೀಮದ್ಭಾಗವತಮಾಹಾತ್ಮ್ಯೇ "ವ್ರಜಭೂಮಿಮಾಹಾತ್ಮ್ಯವರ್ಣನಂ" ನಾಮ ಪ್ರಥಮೋಽಧ್ಯಾಯಃ**

---

೪೨. ಇಂತೆಂದು ಶಾಂಡಿಲ್ಯಮುನಿಯು ಶ್ರೀಕೃಷ್ಣನನ್ನು ಸ್ಮರಿಸುತ್ತ ತನ್ನ ಆಶ್ರಮಕ್ಕೆ ಹೊರಟುಹೋದನು. ಪರೀಕ್ಷಿತನೂ, ವಜ್ರನಾಭನೂ ಅಪಾರವಾದ ಆನಂದವನ್ನು ಹೊಂದಿದರು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀಸ್ಕಾಂದಮಹಾಪುರಾಣದ ಎರಡನೆಯ ವೈಷ್ಣವಖಂಡದ ಶ್ರೀ ಭಾಗವತಮಾಹಾತ್ಮ್ಯದಲ್ಲಿ "ವ್ರಜಭೂಮಿ ಮಾಹಾತ್ಮ್ಯವರ್ಣನ"ವೆಂಬ ಮೊದಲನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥ ದ್ವಿತೀಯೋಽಧ್ಯಾಯಃ

**ಗೋವರ್ಧನಪರ್ವತಸಮೀಪೇ ಪರೀಕ್ಷಿದಾದೀನಾಂ ಉದ್ಧವದರ್ಶನವರ್ಣನಂ**

ಶ್ರೀ ಋಷಯ ಊಚುಃ :—

ಶಾಂಡಿಲ್ಯೇ ತೌ ಸಮಾದಿಶ್ಯ ಪರಾವೃತ್ತೇ ಸ್ವಮಾಶ್ರಮಂ ।
ಕಥಂ ಕಿಂ ಚಕ್ರತುಸ್ತೌ ತು ರಾಜಾನೌ ಸೂತ ತದ್ವದ ॥ ೧ ॥

ಶ್ರೀ ಸೂತ ಉವಾಚ :—

ತತಸ್ತು ವಿಷ್ಣುರಾತೇನ ಶ್ರೇಣೀಮುಖ್ಯಾಃ ಸಹಸ್ರಶಃ ।
ಇಂದ್ರಪ್ರಸ್ಥಾತ್ಸಮಾನಾಯ್ಯ ಮಥುರಾಸ್ಥಾನಮಾಪಿತಾಃ ॥ ೨ ॥
ಮಾಥುರಾನ್ ಬ್ರಾಹ್ಮಣಾಂಸ್ತತ್ರ ವಾನರಾಂಶ್ಚ ಪುರಾತನಾನ್ ।
ವಿಜ್ಞಾಯ ಮಾನನೀಯತ್ವಂ ತೇಷು ಸ್ಥಾಪಿತವಾನ್ ಸ್ವರಾಟ್ ॥ ೩ ॥
ವಜ್ರಸ್ತು ತತ್ಸಹಾಯೇನ ಶಾಂಡಿಲ್ಯಸ್ಯಾಪ್ಯನುಗ್ರಹಾತ್ ।
ಗೋವಿಂದಗೋಪಗೋಪೀನಾಂ ಲೀಲಾಸ್ಥಾನಾನ್ಯನುಕ್ರಮಾತ್ ॥ ೪ ॥
ವಿಜ್ಞಾಯಾಭಿಧಯಾಽಽಸ್ಥಾಪ್ಯ ಗ್ರಾಮಾನಾವಾಸಯದ್ಬಹೂನ್ ।
ಕುಂಡಕೂಪಾದಿಪೂರ್ತೇನ ಶಿವಾದಿಸ್ಥಾಪನೇನ ಚ ॥ ೫ ॥

---

### ಕನ್ನಡದ ಅನುವಾದ

**ಗೋವರ್ಧನಪರ್ವತಸಮೀಪದಲ್ಲಿ ಪರೀಕ್ಷಿದಾದಿಗಳಿಗೆ ಉದ್ಧವನ ದರ್ಶನವಾದುದು**

೧. ಋಷಿಗಳು ಹೇಳುತ್ತಾರೆ:—ಎಲೈ ಸೂತನೇ! ಇಂತು ಶಾಂಡಿಲ್ಯ ಮಹಾಮುನಿಯು ಅವರಿಬ್ಬರಿಗೂ ಅಪ್ಪಣೆಯನ್ನು ಮಾಡಿ ತನ್ನ ಆಶ್ರಮವನ್ನು ಕುರಿತು ಹೊರಟುಹೋಗಲು ಆ ರಾಜರು ಏನನ್ನು ಯಾವ ವಿಧವಾಗಿ ಮಾಡಿದರೆಂಬ ವಿಷಯವನ್ನು ನಮಗೆ ತಿಳಿಸು.

೨. ಸೂತನು ಹೇಳುತ್ತಾನೆ:—ಎಲೈ ಮುನಿಗಳಿರಾ! ಬಳಿಕ ಪರೀಕ್ಷಿನ್ಮಹಾರಾಜನಿಂದ ಇಂದ್ರಪ್ರಸ್ಥದಲ್ಲಿದ್ದ ಸಹಸ್ರಾರು ಚಾತುರ್ವರ್ಣ್ಯಪ್ರಮುಖರು ಕರೆತರಲ್ಪಟ್ಟು ಮಥುರೆಯಲ್ಲಿ ನೆಲೆಗೊಳಿಸಲ್ಪಟ್ಟರು.

೩. ಮಥುರಾನಗರಿಯ ಬ್ರಾಹ್ಮಣರನ್ನೂ ಪುರಾತನಗಳಾದ ಕಪಿಗಳನ್ನೂ ಕಂಡು ಬ್ರಹ್ಮದೇವನು ಅವರಲ್ಲಿ ಯೋಗ್ಯತೆಯೇ ಮೊದಲಾದ ಸದ್ಗುಣಗಳನ್ನಿಡುವವನಾದನು.

೪–೫. ವಜ್ರನಾಭನಾದರೊ, ಅವರ ಸಹಾಯದಿಂದಲೂ, ಶಾಂಡಿಲ್ಯ ಮುನಿಯ ಅನುಗ್ರಹದ ಬಲದಿಂದಲೂ ಶ್ರೀ ಕೃಷ್ಣ ಗೋಪಾಲಕ ಗೋಪಸ್ತ್ರೀಯರ ಲೀಲೆಗಳು ನಡೆದ ಸ್ಥಳಗಳನ್ನೆಲ್ಲ ಕ್ರಮವಾಗಿ ಕಂಡುಕೊಂಡು, ಅಲ್ಲಿ ಅನೇಕ ಗ್ರಾಮಗಳನ್ನು ನಿರ್ಮಾಣಮಾಡಿ ಬಹುಜನರು ವಾಸಿಸುವಂತೆ

ಗೋವಿಂದಹರಿದೇವಾದಿ ಸ್ವರೂಪಾಽಽರೋಪಣೇನ ಚ ।
ಕೃಷ್ಣೈಕಭಕ್ತಿಂ ಸ್ವೇ ರಾಜ್ಯೇ ತತಾನ ಚ ಮುಮೋದ ಹ ॥ ೬ ॥
ಪ್ರಜಾಸ್ತು ಮುದಿತಾಸ್ತಸ್ಯ ಕೃಷ್ಣಕೀರ್ತನತತ್ಪರಾಃ ।
ಪರಮಾನಂದಸಂಪನ್ನಾ ರಾಜ್ಯಂ ತಸ್ಯೈವ ತುಷ್ಟುವುಃ ॥ ೭ ॥
ಏಕದಾ ಕೃಷ್ಣಪತ್ನ್ಯಸ್ತು ಶ್ರೀಕೃಷ್ಣವಿರಹಾತುರಾಃ ।
ಕಾಲಿಂದೀಂ ಮುದಿತಾಂ ವೀಕ್ಷ್ಯ ಪಪ್ರಚ್ಛುರ್ಗತಮತ್ಸರಾಃ ॥ ೮ ॥

ಶ್ರೀಕೃಷ್ಣಪತ್ನ್ಯ ಊಚುಃ :—

ಯಥಾ ವಯಂ ಕೃಷ್ಣಪತ್ನ್ಯಃ ತಥಾ ತ್ವಮಪಿ ಶೋಭನೇ ।
ವಯಂ ವಿರಹದುಃಖಾರ್ತಾಃ ತ್ವಂ ನ ಕಾಲಿಂದಿ ತದ್ವದ ॥ ೯ ॥
ತಚ್ಛ್ರುತ್ವಾ ಸ್ಮಯಮಾನಾ ಸಾ ಕಾಲಿಂದೀ ವಾಕ್ಯಮಬ್ರವೀತ್ ।
ಸಾಪತ್ನ್ಯಂ ವೀಕ್ಷ್ಯ ತತ್ರಾಸಾಂ ಕರುಣಾಪರಮಾನಸಾ ॥ ೧೦ ॥

ಸ್ನಾನಕುಂಡಗಳು, ಕೂಪಗಳು, ಮುಂತಾದ ಪೂರ್ತಗಳಿಂದಲೂ ಶಿವಲಿಂಗ ಸ್ಥಾಪನೆ ಮೊದಲಾದುವುಗಳಿಂದಲೂ ಅನುಕೂಲಗೊಳಿಸಿದನು.

೬. ಅಲ್ಲಲ್ಲಿ ಗೋಪಾಲಕೃಷ್ಣ, ಶ್ರೀಹರಿ, ದೇವತೆಗಳ ವಿಗ್ರಹಗಳ ಸ್ಥಾಪನೆಯಿಂದ ತನ್ನ ರಾಜ್ಯದಲ್ಲಿ ಕೃಷ್ಣನಲ್ಲಿ ಏಕಾಂತಭಕ್ತಿಯೊಂದನ್ನೇ ವಿಸ್ತರಿಸಿ ಸಂತೋಷಗೊಳ್ಳುತ್ತಿದ್ದನು.

೭. ಆತನ ಪ್ರಜೆಗಳೂ ಸಂತುಷ್ಟರಾಗಿ ಕೃಷ್ಣನ ಗುಣಗಳನ್ನೇ ಗಾನ ಮಾಡುತ್ತ ಪರಮಾನಂದಭರಿತರಾಗಿ ಆತನ ರಾಜ್ಯಭಾರಕ್ರಮವನ್ನೇ ಹೊಗಳುತ್ತಿದ್ದರು.

೮. ಒಮ್ಮೆ ಕೃಷ್ಣಪತ್ನಿಯರು ಆತನ ಅಗಲಿಕೆಯಿಂದ ಕಾತುರರಾಗಿದ್ದರೂ ಕಾಲಿಂದಿಯು ಮಾತ್ರ ಮೊದಲಿನಂತೆಯೇ ಸಂತುಷ್ಟಚಿತ್ತಳಾಗಿರುವುದನ್ನು ಕಂಡು ಸಪತ್ನೀಮಾತ್ಸರ್ಯವನ್ನು ದೂರಮಾಡಿ ಆಕೆಯನ್ನು ಕೇಳತೊಡಗಿದರು.

೯. ಕೃಷ್ಣಪತ್ನಿಯರು ಪ್ರಶ್ನೆಮಾಡುತ್ತಾರೆ:—"ಎಲೌ ಮಂಗಳಾಂಗಿಯೇ! ನಾವು ಹೇಗೆಯೋ ಹಾಗೆಯೇ ನೀನೂ ಶ್ರೀಕೃಷ್ಣನಿಗೆ ಪತ್ನಿಯಾಗಿರುವೆ. ನಾವು ವಿರಹಾತುರರಾಗಿದ್ದರೂ ನೀನು ಮಾತ್ರ ಸಂತೋಷಪಡುತ್ತಲೇ ಇರುವೆಯಲ್ಲ. ಅದಕ್ಕೆ ಕಾರಣವನ್ನು ನಮಗೆ ತಿಳಿಸು."

೧೦. ಇಂತೆಂದ ಅವರ ಮಾತುಗಳನ್ನು ಕೇಳಿ ತನ್ನ ಸಂತೋಷಭಾವದಲ್ಲಿ ಅವರಿಗಿರುವ ಅಸೂಯೆಯನ್ನು ಕಂಡು ನಗುತ್ತಲೇ ಕರುಣೆಯಿಂದ ತುಂಬಿದ ಅಂತಃಕರಣವುಳ್ಳವಳಾಗಿ ಕಾಳಿಂದಿಯು ಅವರನ್ನು ಕುರಿತು ಇಂತೆಂದಳು.

ಶ್ರೀ ಕಾಲಿಂದ್ಯುವಾಚ :—

ಆತ್ಮಾರಾಮಸ್ಯ ಕೃಷ್ಣಸ್ಯ ಧ್ರುವಮಾತ್ಮಾಸ್ತಿ ರಾಧಿಕಾ ।
ತಸ್ಯಾ ದಾಸ್ಯಪ್ರಭಾವೇಣ ವಿರಹೋಽಸ್ಮಾನ್ನ ಸಂಸ್ಪೃಶೇತ್ ॥ ೧೧ ॥
ತಸ್ಯಾ ಏವಾಂಶವಿಸ್ತಾರಾಃ ಸರ್ವಾಃ ಶ್ರೀಕೃಷ್ಣನಾಯಿಕಾಃ ।
ನಿತ್ಯಸಂಯೋಗ ಏವಾಸ್ತಿ ತಸ್ಯಾ ಸಾಂಮುಖ್ಯಯೋಗತಃ ॥ ೧೨ ॥
ಸ ಏವ ಸಾ ಸ ಸೈವಾಸ್ತಿ ವಂಶೀ ತತ್ಪ್ರೇಮರೂಪಿಕಾ ।
ಶ್ರೀಕೃಷ್ಣನಖಚಂದ್ರಾಲಿಸಂಗಾಚ್ಚಂದ್ರಾವಲೀ ಸ್ಮೃತಾ ॥ ೧೩ ॥
ರೂಪಾಂತರಂ ಚ ಗೃಹ್ಣಾನಾ ತಯೋಃ ಸೇವಾತಿಲಾಲಸಾ ।
ರುಕ್ಮಿಣ್ಯಾದಿಸಮಾವೇಶೋ ಮಯಾಽತ್ರೈವ ವಿಲೋಕಿತಃ ॥ ೧೪ ॥
ಯುಷ್ಮಾಕಮಪಿ ಕೃಷ್ಣೇನ ವಿರಹೋ ನೈವ ಸರ್ವತಃ ।
ಕಿಂತು ಏವಂ ನ ಜಾನೀಥ ತಸ್ಮಾದ್ವ್ಯಾಕುಲತಾಮಿತಾಃ ॥ ೧೫ ॥
ಏವಮೇವಾತ್ರ ಗೋಪೀನಾಮಕ್ರೂರಾವಸರೇ ಪುರಾ ।
ವಿರಹಾಭಾಸ ಏವಾಸೀದುದ್ಧವೇನ ಸಮಾಹಿತಃ ॥ ೧೬ ॥

---

೧೧. ಕಾಳಿಂದಿಯು ಹೇಳುತ್ತಾಳೆ:—"ಆತ್ಮಾರಾಮನಾದ ಶ್ರೀ ಕೃಷ್ಣನಿಗೆ ರಾಧಿಕೆಯೇ ನಿತ್ಯಳಾಗಿ ಆತ್ಮಸ್ವರೂಪಳಾಗಿರುವಳು. ಆಕೆಯ ದಾಸ್ಯದ ಮಾಹಾತ್ಮ್ಯೆಯಿಂದಲೇ ವಿರಹದುಃಖವು ನಮ್ಮನ್ನು ಬಾಧಿಸುವುದಿಲ್ಲ.

೧೨. ಶ್ರೀ ಕೃಷ್ಣನ ಸಮಸ್ತ ಸ್ತ್ರೀಯರೂ ಆಕೆಯ ಅಂಶಗಳ ಭಿನ್ನರೂಪಗಳೇ ಆಗಿರುವರು. ಆಕೆಯು ಸರ್ವಕಾಲಗಳಲ್ಲಿಯೂ ಶ್ರೀ ಕೃಷ್ಣನ ಸಮ್ಮುಖದಲ್ಲಿಯೇ ಇರುವುದರಿಂದ ಅವರೆಲ್ಲರಿಗೂ ಶಾಶ್ವತವಾದ ಸಂಯೋಗವಿರುವುದು.

೧೩. ಕೃಷ್ಣನೇ ರಾಧೆಯು. ರಾಧೆಯೇ ಕೃಷ್ಣನು. ಅವರಿಬ್ಬರಲ್ಲಿಯೂ ಪ್ರೇಮವೆಂಬ ಬಂಧನವು ನಿತ್ಯವಾಗಿರುವುದು. ಶ್ರೀ ಕೃಷ್ಣನ ಪಾದಗಳ ನಖಚಂದ್ರಗಳ ಸಾಲಿನಲ್ಲಿ ನಟ್ಟ ದೃಷ್ಟಿಯುಳ್ಳವಳಾದುದರಿಂದ ಆಕೆಗೆ ಚಂದ್ರಾವಳಿಯೆಂಬ ಹೆಸರೂ ಇರುವುದು.

೧೪. ಅವರಿಬ್ಬರ ಸೇವೆಯನ್ನು ಮಾಡುವುದಕ್ಕಾಗಿಯೇ ನಾನು ಬೇರೆ ರೂಪವನ್ನು ಸ್ವೀಕರಿಸಿದೆನು. ರುಕ್ಮಿಣಿಯೇ ಮೊದಲಾದ ಮಹಿಷಿಯರೊಡನೆ ಶ್ರೀ ಕೃಷ್ಣನ ಸಮಾಗಮವಾದುದನ್ನು ನಾನು ಇಲ್ಲಿಯೇ ನೋಡಿ ಸಂತೋಷಗೊಂಡೆನು.

೧೫. ನಿಮಗೂ ಕೃಷ್ಣನ ದೆಸೆಯಿಂದ ವಿರಹವು ಯಾವಾಗಲೂ ಉಂಟಾಗಿರುವುದಿಲ್ಲ. ಆದರೆ ಆತನು ನಿಮ್ಮ ಹೃದಯಗಳಲ್ಲಿ ನಿತ್ಯವೂ ಸನ್ನಿಹಿತನಾಗಿರುವನೆಂಬ ತತ್ತ್ವವನ್ನು ನೀವು ತಿಳಿದಿಲ್ಲವಾದುದರಿಂದ ಮನಸ್ಸಿನ ವ್ಯಾಕುಲತೆಯನ್ನು ಹೊಂದಿರುವಿರಿ.

೧೬. ಈ ವಿಧವಾಗಿಯೇ ಪೂರ್ವದಲ್ಲಿ ಅಕ್ರೂರನು ಶ್ರೀಕೃಷ್ಣನನ್ನು

ತೇನೈವ ಭವತೀನಾಂ ಚೇದ್ಭವೇದತ್ರ ಸಮಾಗಮಃ ।
ತರ್ಹಿ ನಿತ್ಯಂ ಸ್ವಕಾಂತೇನ ವಿಹಾರಮಪಿ ಲಪ್ಸ್ಯಥ ॥ ೧೭ ॥

ಶ್ರೀ ಸೂತ ಉವಾಚ :—

ಏವಮುಕ್ತಾಸ್ತು ತಾಃ ಪತ್ನ್ಯಃ ಪ್ರಸನ್ನಾಂ ಪುನರಬ್ರುವನ್ ।
ಉದ್ಧವಾಲೋಕನೇನಾತ್ಮಪ್ರೇಷ್ಠಸಂಗಮಲಾಲಸಾಃ ॥ ೧೮ ॥

ಶ್ರೀ ಕೃಷ್ಣಪತ್ನ್ಯ ಊಚುಃ :—

ಧನ್ಯಾಸಿ ಸಖಿ ಕಾಂತೇನ ಯಸ್ಯಾ ನೈವಾಸ್ತಿ ವಿಚ್ಯುತಿಃ ।
ಯತಸ್ತೇ ಸ್ವಾರ್ಥಸಂಸಿದ್ಧಿಸ್ತಸ್ಯಾ ದಾಸ್ಯೋ ಬಭೂವಿಮ ॥ ೧೯ ॥
ಪರಂ ತೂದ್ಧವಲಾಭೇ ಸ್ಯಾದಸ್ಮತ್ಸರ್ವಾರ್ಥಸಾಧನಂ ।
ತಥಾ ವದಸ್ವ ಕಾಲಿಂದಿ ತಲ್ಲಾಭೋಽಪಿ ಯಥಾ ಭವೇತ್ ॥ ೨೦ ॥

ಶ್ರೀ ಸೂತ ಉವಾಚ :—

ಏವಮುಕ್ತಾ ತು ಕಾಲಿಂದೀ ಪ್ರತ್ಯುವಾಚಾಥ ತಾಸ್ತಥಾ ।
ಸ್ಮರಂತೀ ಕೃಷ್ಣಚಂದ್ರಸ್ಯ ಕಲಾಷೋಡಶರೂಪಿಣೀ ॥ ೨೧ ॥

ಮಧುರಾಪುರಿಗೆ ಕರೆದುಕೊಂಡು ಹೋದಾಗ ಗೋಪಸ್ತ್ರೀಯರಿಗೆ ವಿರಹದುಃಖದ ಆಭಾಸವು ಮನಸ್ಸಿನಲ್ಲಿ ಉಂಟಾಯಿತು. ಅದು ಉದ್ಧವನಿಂದ ಪರಿಹರಿಸಲ್ಪಟ್ಟಿತು.

೧೭. ಆ ಮಹಾತ್ಮನ ಸಮಾಗಮ ಸಂದರ್ಶನಗಳೇ ನಿಮಗೂ ಸಂಭವಿಸುವುದಾದರೆ ನೀವೂ ನಿಮ್ಮ ಕಾಂತನೊಡನೆ ವಿಹಾರಸೌಖ್ಯವನ್ನು ನಿತ್ಯವೂ ಪಡೆಯುವಿರಿ''.

೧೮. ಸೂತನು ಹೇಳುತ್ತಾನೆ:—ಈ ಮಾತುಗಳನ್ನು ಕೇಳಿದೊಡನೆಯೆ ಉದ್ಧವನ ಸಂದರ್ಶನದ ಮೂಲಕ ತಮ್ಮ ಪ್ರಿಯತಮನನ್ನು ನೋಡುವುದರಲ್ಲಿ ಅತ್ಯಾಸಕ್ತಿಯನ್ನು ಪಡೆದ ಆ ಸ್ತ್ರೀಯರು ಕಾಲಿಂದಿಯನ್ನು ಪ್ರಸನ್ನೀಕರಿಸಿಕೊಂಡು ಆಕೆಗೆ ಮತ್ತೆ ಹೇಳತೊಡಗಿದರು.

೧೯. ಕೃಷ್ಣಪತ್ನಿಯರು ಹೇಳುತ್ತಾರೆ:—''ಸಖಿಯೆ! ಕಾಂತನ ಸಹವಾಸದಿಂದ ಬಿಡುಗಡೆಯೆಂಬುದನ್ನೆಂದಿಗೂ ಅರಿಯದಿರುವ ನೀನೇ ಧನ್ಯಳು. ಇಂತಹ ಪರಮ ಪ್ರಯೋಜನವು ನಿನಗುಂಟಾಗಿರುವುದರಿಂದಲೇ ನಾವುಗಳೆಲ್ಲರೂ ನಿನಗೆ ದಾಸಿಯರಾಗಿರುವೆವು.

೨೦. ಆದರೆ ಉದ್ಧವನ ದರ್ಶನದಿಂದಲೇ ನಮಗೆ ಸರ್ವಾರ್ಥಸಾಧನವು ಆಗುವುದೆಂದು ಹೇಳಿದೆಯಲ್ಲವೆ. ಎಲೌ ಕಾಳಿಂದಿಯೆ! ಆ ಮಹಾತ್ಮನ ದರ್ಶನದ ಲಾಭವು ನಮಗೆ ಹೇಗೆ ಉಂಟಾಗುವುದೆಂಬ ಉಪಾಯವನ್ನೂ ನಮಗೆ ತೋರಿಸಿಕೊಡುವವಳಾಗು.''

೨೧. ಸೂತನು ಹೇಳುತ್ತಾನೆ:—ಇಂತು ಕೇಳಲ್ಪಟ್ಟವಳಾಗಿ ಕಾಳಿಂದಿಯು

**ಸಾಧನಭೂಮಿರ್ಬದರೀ ವ್ರಜತಾ ಕೃಷ್ಣೇನ ಮಂತ್ರಿಣೇ ಪ್ರೋಕ್ತಾ ।**
**ತತ್ರಾಸ್ತೇ ಸ ತು ಸಾಕ್ಷಾತ್ತದ್ವಯುನಂ ಗ್ರಾಹಯನ್ ಲೋಕಾನ್ ॥೨೨॥**
**ಫಲಭೂಮಿರ್ವ್ರಜಭೂಮಿರ್ದತ್ತಾ ತಸ್ಮೈ ಪುರೈವ ಸರಹಸ್ಯಂ ।**
**ಫಲಮಿಹ ತಿರೋಹಿತಂ ಸತ್ತದಿಹೇದಾನೀಂ ಸ ಉದ್ಧವೋಽಲಕ್ಷ್ಯಃ ॥೨೩॥**
**ಗೋವರ್ಧನಗಿರಿನಿಕಟೇ ಸಖೀಸ್ಥಲೇ ತದ್ರಜಃಕಾಮಃ ।**
**ತತ್ರತ್ಯಾಙ್ಕುರವಲ್ಲೀರೂಪೇಣಾಸ್ತೇ ಸ ಉದ್ಧವೋ ನೂನಂ ॥ ೨೪ ॥**
**ಆತ್ಮೋತ್ಸವರೂಪತ್ವಂ ಹರಿಣಾ ತಸ್ಮೈ ಸಮರ್ಪಿತಂ ನಿಯತಂ ।**
**ತಸ್ಮಾತ್ತತ್ರ ಸ್ಥಿತ್ವಾ ಕುಸುಮಸರಃಪರಿಸರೇ ಸವಜ್ರಾಭಿಃ ॥ ೨೫ ॥**
**ವೀಣಾವೇಣುಮೃದಂಗೈಃ ಕೀರ್ತನಕಾವ್ಯಾದಿಸರಸಸಂಗೀತೈಃ ।**
**ಉತ್ಸವ ಆರಬ್ಧವ್ಯೋ ಹರಿರತಲೋಕಾನ್ ಸಮಾನಾಯ್ಯ ॥ ೨೬ ॥**

---

ಶ್ರೀ ಕೃಷ್ಣನೆಂಬ ಚಂದ್ರನ ಹದಿನಾರನೆಯ ಕಳೆಯ ರೂಪಳಾದುದರಿಂದ ಹಿಂದಿನ ವೃತ್ತಾಂತವನ್ನೆಲ್ಲ ಸ್ಮರಣೆಮಾಡಿಕೊಂಡು ಅವರಿಗೆ ಉತ್ತರವನ್ನು ಹೇಳ ತೊಡಗಿದಳು.

೨೨. ಶ್ರೀಕೃಷ್ಣನು ದೇಹವನ್ನು ಬಿಡುವ ವೇಳೆಯಲ್ಲಿ ಉದ್ಧವನನ್ನು ಕುರಿತು ಬದರೀಕ್ಷೇತ್ರವೇ ಉತ್ತಮವಾದ ಸಾಧನಭೂಮಿಯೆಂದು ನಿರೂಪಿಸಿದ್ದನು. ಆ ಮಹಾತ್ಮನು ಲೋಕಗಳಿಗೆಲ್ಲ ಪರಮಾತ್ಮನ ಅನುಗ್ರಹವನ್ನು ಪಡೆಯುವ ಮಾರ್ಗವನ್ನುಪದೇಶಿಸುತ್ತ ಅಲ್ಲಿಯೇ ನೆಲಸಿರುವನು.

೨೩. ವ್ರಜಭೂಮಿಯೇ ಫಲಪ್ರದವಾದ ಪ್ರದೇಶವೆಂದು ತಿಳಿದೇ ಈ ಪ್ರದೇಶವನ್ನು ರಹಸ್ಯಸಹಿತವಾಗಿ ಶ್ರೀ ಕೃಷ್ಣನು ಉದ್ಧವನಿಗೆ ಒಪ್ಪಿಸಿದನು. ಕ್ಷೇತ್ರಫಲವು ಇಲ್ಲಿ ತಿರೋಧಾನವನ್ನು ಹೊಂದಿದುದರಿಂದ ಉದ್ಧವನೂ ಕೂಡ ಈಗ ಅದೃಶ್ಯನಾಗಿರುವನು.

೨೪. ತನ್ನ ಪ್ರಿಯಸಖನಾದ ಶ್ರೀಕೃಷ್ಣನಿಗೆ ಪ್ರಿಯವಾದ ಸ್ಥಳವೆನಿಸಿದ ಗೋವರ್ಧನಗಿರಿಯ ಸಮೀಪದಲ್ಲಿ ಆ ಪಾದಧೂಳಿಯನ್ನೇ ಅಪೇಕ್ಷಿಸುತ್ತಿರುವವನಾಗಿ ಉದ್ಧವನು ಇಂದಿಗೂ ಅಲ್ಲಿ ಚಿಗುರಿನ ಬಳ್ಳಿಯ ರೂಪದಿಂದ ವಾಸಮಾಡುತ್ತಿರುವನು.

೨೫-೨೬. ಆತ್ಮೋತ್ಸವವನ್ನು ನೋಡುವ ಭಾಗ್ಯವು ಶ್ರೀ ಕೃಷ್ಣನಿಂದ ಆತನಿಗೊಬ್ಬನಿಗೆ ಮಾತ್ರ ಲಭ್ಯವಾಯಿತು. ಆದುದರಿಂದ ನೀವುಗಳೆಲ್ಲರೂ ವಜ್ರನಾಭನೊಡನೆ ಕುಸುಮಸರೋವರದ ಸಮೀಪದಲ್ಲಿ ನಿಂತು ಶ್ರೀ ಹರಿಯಲ್ಲಿಯೇ ಭಕ್ತಿಯನ್ನಿಟ್ಟಿರುವ ಜನರನ್ನೆಲ್ಲ ಕರೆದುಕೊಂಡು ವೀಣಾ, ವೇಣು, ಮೃದಂಗಾದಿ ವಾದ್ಯಗಳಿಂದಲೂ, ಹರಿಕೀರ್ತನ, ಕಾವ್ಯವಾಚನ, ಮುಂತಾದ ಮನೋಹರ ಸಂಗೀತಗಳಿಂದಲೂ ಮಹೋತ್ಸವವೊಂದನ್ನು ಪ್ರಾರಂಭಿಸಬೇಕು.

ತತ್ರೋದ್ಧವಾವಲೋಕೋ ಭವಿತಾ ನಿಯತಂ ಮಹೋತ್ಸವೇ ವಿತತೇ ।
ಯೌಷ್ಮಾಕೀಣಾಮಭಿಮತಸಿದ್ಧಿಂ ಸವಿತಾ ಸ ಏವ ಸವಿತಾನಾಂ ॥ ೨೭ ॥

ಶ್ರೀ ಸೂತ ಉವಾಚ:—

ಇತಿ ಶ್ರುತ್ವಾ ಪ್ರಸನ್ನಾಸ್ತಾಃ ಕಾಲಿಂದೀಮಭಿವಂದ್ಯ ತತ್ ।
ಕಥಯಾಮಾಸುರಾಗತ್ಯ ವಜ್ರಂ ಪ್ರತಿ ಪರೀಕ್ಷಿತಂ ॥ ೨೮ ॥
ವಿಷ್ಣುರಾತಸ್ತು ತಚ್ಛ್ರುತ್ವಾ ಪ್ರಸನ್ನಸ್ತದ್ಯುತಸ್ತದಾ ।
ತತ್ರೈವಾಗತ್ಯ ತತ್ಸರ್ವಂ ಕಾರಯಾಮಾಸ ಸತ್ವರಂ ॥ ೨೯ ॥
ಗೋವರ್ಧನಾದದೂರೇಣ ವೃಂದಾರಣ್ಯೇ ಸಖೀಸ್ಥಲೇ ।
ಪ್ರವೃತ್ತಃ ಕುಸುಮಾಂಬೋಧೌ ಕೃಷ್ಣಸಂಕೀರ್ತನೋತ್ಸವಃ ॥ ೩೦ ॥
ವೃಷಭಾನುಸುತಾಕಾಂತವಿಹಾರೇ ಕೀರ್ತನಶ್ರಿಯಾ ।
ಸಾಕ್ಷಾದ್ದಿವಸಮಾವೃತ್ತೇ ಸರ್ವೇಽನನ್ಯದೃಶೋಽಭವನ್ ॥ ೩೧ ॥
ತತಃ ಪಶ್ಯತ್ಸು ಸರ್ವೇಷು ತೃಣಗುಲ್ಮಲತಾಚಯಾತ್ ।
ಆಜಗಾಮೋದ್ಧವಃ ಸ್ರಗ್ವೀ ಶ್ಯಾಮಃ ಪೀತಾಂಬರಾವೃತಃ ॥ ೩೨ ॥

---

೨೭. ಇಂತು ನೀವು ಮಹೋತ್ಸವವನ್ನು ನೆರವೇರಿಸುತ್ತಿರಲು ಖಂಡಿತವಾಗಿಯೂ ನಿಮಗೆ ಉದ್ಧವನ ದರ್ಶನವು ಲಭಿಸುವುದು. ಕೃಷ್ಣದರ್ಶನ ಲಾಲಸರಾಗಿರುವ ನಿಮ್ಮ ಇಷ್ಟಾರ್ಥವನ್ನು ನೆರವೇರಿಸಿಕೊಡಲು ಆತನೊಬ್ಬನೇ ಸಮರ್ಥನಾಗಿರುವನು.

೨೮. ಸೂತನು ಹೇಳುತ್ತಾನೆ:—ಈ ಮಾತುಗಳನ್ನು ಕೇಳಿ ಅವರೆಲ್ಲರೂ ಪ್ರಸನ್ನಮನಸ್ಕರಾಗಿ ಕಾಲಿಂದಿಗೆ ನಮಸ್ಕರಿಸಿ ವಜ್ರನಾಭನೂ, ಪರೀಕ್ಷಿತನೂ ಇದ್ದಲ್ಲಿಗೆ ಬಂದು ಅವರಿಗೆ ನಡೆದುದನ್ನೆಲ್ಲ ಹೇಳಿದರು.

೨೯. ಪರೀಕ್ಷಿತನಾದರೊ, ಅದನ್ನೆಲ್ಲ ಕೇಳಿ ಸಂತುಷ್ಟಾಂತರಂಗನಾಗಿ ಅಲ್ಲಿಗೆ ಬಂದು ಶೀಘ್ರವಾಗಿ ಅವರ ಮಾತಿನಂತೆಯೇ ಎಲ್ಲವನ್ನೂ ಮಾಡಿಸಿದನು.

೩೦. ಗೋವರ್ಧನಪರ್ವತಕ್ಕೆ ಸಮೀಪದಲ್ಲಿರುವ ಸಖೀಸ್ಥಳವೆನಿಸಿದ ಬೃಂದಾವನದಲ್ಲಿ ಕುಸುಮ ಸರೋವರದಲ್ಲಿ ಶ್ರೀಕೃಷ್ಣ ಮಹಿಮಾನುಕೀರ್ತನೆಯ ಮಹೋತ್ಸವವು ಪ್ರಾರಂಭವಾಯಿತು.

೩೧. ಆ ಕೀರ್ತನೆಯ ವೈಭವದಿಂದ ಶ್ರೀಕೃಷ್ಣನ ವನವಿಹಾರವು ಪುನಃ ಸಾಕ್ಷಾತ್ತಾಗಿ ನಡೆಯುತ್ತಿರುವಂತೆ ಕಾಣುತ್ತಿರಲು ಸಕಲರೂ ತದೇಕದೃಷ್ಟಿಯುಳ್ಳವರಾದರು.

೩೨. ಇಂತು ಅವರೆಲ್ಲರೂ ನೋಡುತ್ತಿರುವಂತೆಯೇ ಹುಲ್ಲು, ಪೊದೆ, ಬಳ್ಳಿಗಳಿಂದ ಕೂಡಿದ ಒಂದು ಕುಂಜದಿಂದ ಪುಷ್ಪಮಾಲೆಯನ್ನು ಧರಿಸಿ ಶ್ಯಾಮವರ್ಣಾನ್ವಿತನೂ, ಪೀತಾಂಬರಧಾರಿಯೂ ಆದ ಉದ್ಧವನು ಹೊರಟು ಬಂದನು.

**ಗುಂಜಾಮಾಲಾಧರೋ ಗಾಯನ್ ವಲ್ಲವೀವಲ್ಲಭಂ ಮುಹುಃ ।**
**ತದಾಗಮನತೋ ರೇಜೇ ಭೃಶಂ ಸಂಕೀರ್ತನೋತ್ಸವಃ ॥ ೩೩ ॥**
**ಚಂದ್ರಿಕಾಗಮನೋ ಯದ್ವತ್ ಸ್ಫಾಟಿಕಾಟ್ಟಾಲಭೂಮಿಷು ।**
**ಅಥ ಸರ್ವೇ ಸುಖಾಂಬೋಧೌ ಮಗ್ನಾಃ ಸರ್ವಂ ವಿಸಸ್ಮರುಃ ॥ ೩೪ ॥**
**ಕ್ಷಣೇನಾಗತವಿಜ್ಞಾನಾ ದೃಷ್ಟ್ವಾ ಶ್ರೀಕೃಷ್ಣರೂಪಿಣಂ ।**
**ಉದ್ಧವಂ ಪೂಜಯಾಂಚಕ್ರುಃ ಪ್ರತಿಲಬ್ಧಮನೋರಥಾಃ ॥ ೩೫ ॥**

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ದ್ವಿತೀಯೇ ವೈಷ್ಣವಖಂಡೇ ಶ್ರೀಮದ್ಭಾಗವತಮಾಹಾತ್ಮ್ಯೇ "ಗೋವರ್ಧನ ಪರ್ವತಸಮೀಪೇ ಪರೀಕ್ಷಿದಾದೀನಾಂ ಉದ್ಧವದರ್ಶನವರ್ಣನಂ" ನಾಮ ದ್ವಿತೀಯೋಽಧ್ಯಾಯಃ

---

೩೩–೩೪. ಆತನು ಗುಲಗಂಜಿಗಳ ಮಾಲೆಯನ್ನು ಧರಿಸಿ ಉತ್ತಮವಾದ ಕೊಳಲೊಂದನ್ನು ಬಾಜಿಸುತ್ತ ಪ್ರಾಪ್ತನಾಗಲು ಬೆಳದಿಂಗಳಿನಿಂದ ಅಮೃತ ಶಿಲೆಯು ಕಟ್ಟಿದ ಭೂಮಿಯು ಶೋಭಿಸುವಂತೆ ಶ್ರೀಕೃಷ್ಣನಾಮ ಸಂಕೀರ್ತನೆಯು ಉತ್ಸವವು ಮತ್ತೂ ಹೆಚ್ಚಾಗಿ ಶೋಭಿಸತೊಡಗಿತು. ಆಗ ಸಮಸ್ತರೂ ಆನಂದದ ಸಮುದ್ರದಲ್ಲಿ ಮುಳುಗಿದವರಾಗಿ ಬಾಹ್ಯಪ್ರಪಂಚವನ್ನೇ ಮರೆತು ಬಿಟ್ಟಿದ್ದರು.

೩೫. ಒಂದು ಕ್ಷಣದ ಅನಂತರ ಪುನಃ ಜ್ಞಾನವು ಬಂದಂತಾಗಲು ಶ್ರೀ ಕೃಷ್ಣನ ರೂಪವನ್ನು ಧರಿಸಿ ನಿಂತಿದ್ದ ಉದ್ಧವನನ್ನು ಕಂಡು ತಮ್ಮ ಮನೋ ರಥವು ಈಡೇರುವುದೆಂಬ ಅಭಿಲಾಷೆಯಿಂದ ಆತನಿಗೆ ಉಚಿತ ಪೂಜೆಯನ್ನು ಮಾಡಿದರು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀ ಸ್ಕಾಂದಮಹಾಪುರಾಣದ ಎರಡನೆಯ ವೈಷ್ಣವಖಂಡದ ಶ್ರೀ ಭಾಗವತಮಾಹಾತ್ಮ್ಯದಲ್ಲಿ "ಗೋವರ್ಧನಪರ್ವತಸಮೀಪದಲ್ಲಿ ಪರೀಕ್ಷಿದಾದಿಗಳಿಗೆ ಉದ್ಧವನ ದರ್ಶನವಾದುದು" ಎಂಬ ಮೂರನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥ ತೃತೀಯೋಽಧ್ಯಾಯಃ

### ಶ್ರೀ ಭಾಗವತ ಮಾಹಾತ್ಮ್ಯವರ್ಣನಂ

ಶ್ರೀ ಸೂತ ಉವಾಚ :—

**ಅಥೋದ್ಧವಸ್ತು ತಾನ್ ದೃಷ್ಟ್ವಾ ಕೃಷ್ಣಕೀರ್ತನತತ್ಪರಾನ್ ।**
**ಸತ್ಕೃತ್ಯಾಥ ಪರಿಷ್ವಜ್ಯ ಪರೀಕ್ಷಿತಮುವಾಚ ಹ ॥ ೧ ॥**

ಉದ್ಧವ ಉವಾಚ :—

**ಧನ್ಯೋಽಸಿ ರಾಜನ್ ಕೃಷ್ಣೈಕಭಕ್ತ್ಯಾ ಪೂರ್ಣೋಽಸಿ ನಿತ್ಯದಾ ।**
**ಯಸ್ತ್ವಂ ನಿಮಗ್ನಚಿತ್ತೋಽಸಿ ಕೃಷ್ಣಸಂಕೀರ್ತನೋತ್ಸವೇ ॥ ೨ ॥**
**ಕೃಷ್ಣಪತ್ನೀಷು ವಜ್ರೇ ಚ ದಿಷ್ಟ್ಯಾ ಪ್ರೀತಿಃ ಪ್ರವರ್ತಿತಾ ।**
**ತವೋಚಿತಮಿದಂ ತಾತ ಕೃಷ್ಣದತ್ತಾಂಗವೈಭವ ॥ ೩ ॥**
**ದ್ವಾರಕಾಸ್ಥೇಷು ಸರ್ವೇಷು ಧನ್ಯಾ ಏತೇ ನ ಸಂಶಯಃ ।**
**ಯೇಷಾಂ ವ್ರಜನಿವಾಸಾಯ ಪಾರ್ಥಮಾದಿಷ್ಟವಾನ್ ಪ್ರಭುಃ ॥ ೪ ॥**
**ಶ್ರೀಕೃಷ್ಣಸ್ಯ ಮನಶ್ಚಂದ್ರೋ ರಾಧಾಸ್ಯಪ್ರಭಯಾನ್ವಿತಃ ।**
**ತದ್ವಿಹಾರವನಂ ಗೋಭಿರ್ಮಂಡಯನ್ರೋಚತೇ ಸದಾ ॥ ೫ ॥**

---

## ಕನ್ನಡದ ಅನುವಾದ

### ಶ್ರೀ ಭಾಗವತ ಮಾಹಾತ್ಮ್ಯವರ್ಣನ

೧. ಸೂತನು ಹೇಳುತ್ತಾನೆ:—ಆಗ ಶ್ರೀಕೃಷ್ಣಸಂಕೀರ್ತನದಲ್ಲಿಯೇ ಮಗ್ನರಾಗಿದ್ದ ಅವರನ್ನು ಕಂಡು ಉದ್ಧವನು ಅವರಿಗೆ ಉಚಿತಸತ್ಕಾರವನ್ನು ಮಾಡಿ ಪರೀಕ್ಷಿನ್ಮಹಾರಾಜನನ್ನು ಆಲಿಂಗಿಸಿಕೊಂಡು ಹೇಳಲಾರಂಭಿಸಿದನು.

೨. ಉದ್ಧವನು ಹೇಳುತ್ತಾನೆ:—ಎಲೈ ಮಹಾರಾಜನೆ! ಶ್ರೀಕೃಷ್ಣನಾಮ ಸಂಕೀರ್ತನದ ಈ ಮಹೋತ್ಸವದಲ್ಲಿ ಅನನ್ಯವಿಷಯಕವಾಗಿ ಮುಳುಗಿದ ಮನಸ್ಸುಳ್ಳ ನೀನೇ ಧನ್ಯನು. ಯಾವಾಗಲೂ ಶ್ರೀ ಕೃಷ್ಣನ ಏಕಾಂತ ಭಕ್ತಿಯಿಂದ ನೀನೇ ಪರಿಪೂರ್ಣನಾದವನು.

೩. ದೈವೇಚ್ಛೆಯಿಂದ ನಿನಗೆ ಕೃಷ್ಣಪತ್ನಿಯರಲ್ಲಿಯೂ, ವಜ್ರನಾಭನಲ್ಲಿಯೂ ಪ್ರೀತಿಯುಂಟಾಗಿರುವುದು. ಶ್ರೀ ಕೃಷ್ಣನ ಅನುಗ್ರಹದಿಂದ ಉಂಟಾದ ಶರೀರ ಸೌಷ್ಠವವುಳ್ಳ ನಿನಗೆ ಈ ಪ್ರೇಮವು ಉಚಿತವಾದುದೇ ಸರಿ.

೪. ಸ್ವಾಮಿಯು ಪಾರ್ಥನ ಮೂಲಕವಾಗಿ ಇವರನ್ನೆಲ್ಲ ವ್ರಜಭೂಮಿಯಲ್ಲಿ ನಿವಾಸಮಾಡುವಂತೆ ಅಪ್ಪಣೆಯನ್ನು ಮಾಡಿದುದರಿಂದ ದ್ವಾರಕಾನಿವಾಸಿಗಳಾದವರಲ್ಲಿ ಇವರೇ ಅತ್ಯಂತ ಧನ್ಯತಮರೆಂಬುದರಲ್ಲಿ ಸಂದೇಹವಿಲ್ಲ.

೫. ಈ ಪ್ರದೇಶದಲ್ಲಿ ಶ್ರೀಕೃಷ್ಣನ ಮನಸ್ಸೆಂಬ ಚಂದ್ರನು ರಾಧೆಯ

ಕೃಷ್ಣಚಂದ್ರಃ ಸದಾಪೂರ್ಣಸ್ತಸ್ಯ ಷೋಡಶ ಯಾಃ ಕಲಾಃ ।
ಚಿತ್ಸಹಸ್ರಪ್ರಭಾಭಿನ್ನಾ ಅತ್ರಾಸ್ತೇ ತತ್ಸ್ವರೂಪತಾ ॥ ೬ ॥
ಏವಂ ವಜ್ರಸ್ತು ರಾಜೇಂದ್ರ ಪ್ರಪನ್ನಭಯಭಂಜಕಃ ।
ಶ್ರೀಕೃಷ್ಣದಕ್ಷಿಣೇ ಪಾದೇ ಸ್ಥಾನಮೇತಸ್ಯ ವರ್ತತೇ ॥ ೭ ॥
ಅವತಾರೇಽತ್ರ ಕೃಷ್ಣೇನ ಯೋಗಮಾಯಾತಿಭಾವಿತಾ ।
ತದ್ಬಲೇನಾತ್ಮವಿಸ್ಮೃತ್ಯಾ ಸೀದಂತ್ಯೇತೇ ನ ಸಂಶಯಃ ॥ ೮ ॥
ಋತೇ ಕೃಷ್ಣ ಪ್ರಕಾಶಂ ತು ಸ್ವಾತ್ಮಬೋಧೋ ನ ಕಸ್ಯಚಿತ್ ।
ತತ್ಪ್ರಕಾಶಸ್ತು ಜೀವಾನಾಂ ಮಾಯಯಾ ಪಿಹಿತಃ ಸದಾ ॥ ೯ ॥
ಅಷ್ಟಾವಿಂಶೇ ದ್ವಾಪರಾಂತೇ ಸ್ವಯಮೇವ ಯದಾ ಹರಿಃ ।
ಉತ್ಸಾರಯೇನ್ನಿಜಾಂ ಮಾಯಾಂ ತತ್ಪ್ರಕಾಶೋ ಭವೇತ್ತದಾ ॥ ೧೦ ॥
ಸ ತು ಕಾಲೋ ವ್ಯತಿಕ್ರಾಂತಸ್ತೇನೇದಮುಪರಂ ಶೃಣು ।
ಅನ್ಯದಾ ತತ್ಪ್ರಕಾಶಸ್ತು ಶ್ರೀಮದ್ಭಾಗವತಾದ್ಭವೇತ್ ॥ ೧೧ ॥

---

ಮುಖವೆಂಬ ಕಾಂತಿಯಿಂದ ಕೂಡಿದವನಾಗಿ, ವಿಹಾರಯೋಗ್ಯವಾದ ಈ ಉದ್ಯಾನ ವನವನ್ನು ತನ್ನ ಕಿರಣಗಳಿಂದ ಬೆಳಗಿಸುತ್ತ ನಿತ್ಯವೂ ವಿರಾಜಿಸುತ್ತಿರುವನು.

೬. ಶ್ರೀಕೃಷ್ಣನೆಂಬ ಚಂದ್ರನು ಸರ್ವಕಾಲಗಳಲ್ಲಿಯೂ ಪರಿಪೂರ್ಣ ನಾಗಿರುವನು. ಅವನ ಹದಿನಾರು ಕಲೆಗಳೂ ಇಲ್ಲಿರುವ ಸಾವಿರಾರು ಚೈತನ್ಯ ಗಳಿಗಿಂತ ಬೇರೆಯಾದುವಲ್ಲ. ಅವುಗಳ ರೂಪಗಳ ದರ್ಶನವು ಇಲ್ಲಿ ಉಂಟಾಗು ತ್ತಿರುವುದು.

೭. ಎಲೈ ಮಹಾರಾಜನೆ! ಇಂತು ವಜ್ರನಾಭನೂ ಶರಣಾಗತರ ಭಯ ವನ್ನು ನಿರ್ಮೂಲಗೊಳಿಸುವನು. ಈತನಿಗೆ ಶ್ರೀ ಕೃಷ್ಣನ ಬಲಗಾಲಿನಲ್ಲಿ ಉತ್ತಮಸ್ಥಾನವೇರ್ಪಟ್ಟಿರುವುದು.

೮. ಈ ಅವತಾರದಲ್ಲಿ ಶ್ರೀ ಕೃಷ್ಣನಿಂದ ಸ್ವಕಾರ್ಯಸಿದ್ಧಿಗಾಗಿ ಯೋಗ ಮಾಯೆಯು ಬಹುವಾಗಿ ಸ್ವೀಕರಿಸಲ್ಪಟ್ಟಿತು. ಅದರ ಬಲದಿಂದಲೇ ಈ ಗೋಪ ಸ್ತ್ರೀಯರೆಲ್ಲರೂ ವಿರಹಾತುರರಾಗಿರುವುದರಲ್ಲಿ ಸಂಶಯವಿಲ್ಲ.

೯. ಶ್ರೀಕೃಷ್ಣನ ದರ್ಶನವು ಲಭಿಸಿದ ಹೊರತು ಯಾವ ಮನುಷ್ಯನಿಗೂ ಆತ್ಮಜ್ಞಾನವುಂಟಾಗುವುದಿಲ್ಲ. ಸಾಧಾರಣ ಜೀವರಲ್ಲಿ ಆ ಆತ್ಮಜ್ಯೋತಿಯು ಯಾವಾಗಲೂ ಮಾಯೆಯಿಂದ ತಿರೋಹಿತವಾಗಿರುವುದು.

೧೦. ಇಪ್ಪತ್ತೆಂಟನೆಯ ಮಹಾಯುಗದ ದ್ವಾಪರಯುಗದ ಅಂತ್ಯಭಾಗ ದಲ್ಲಿ ಯಾವಾಗ ಶ್ರೀಮನ್ನಾರಾಯಣನು ತಾನೇ ತನ್ನ ಮಾಯೆಯನ್ನು ದೂರ ಗೊಳಿಸುವನೊ, ಆಗ ಎಲ್ಲರಿಗೂ ಆತ್ಮಪ್ರಕಾಶವು ಅನುಭವಕ್ಕೆ ಬರುವುದು.

೧೧. ಈಗ ಆ ಕಾಲವೂ ಕಳೆದು ಹೋಗಿರುವುದು. ಆದುದರಿಂದ

ಶ್ರೀಮದ್ಭಾಗವತಂ ಶಾಸ್ತ್ರಂ ಯತ್ರ ಭಾಗವತೈರ್ಯದಾ ।
ಕೀರ್ತ್ಯತೇ ಶ್ರೂಯತೇ ಚಾಪಿ ಶ್ರೀಕೃಷ್ಣಸ್ತತ್ರ ನಿಶ್ಚಿತಂ ॥ ೧೨ ॥
ಶ್ರೀಮದ್ಭಾಗವತಂ ಯತ್ರ ಶ್ಲೋಕಂ ಶ್ಲೋಕಾರ್ಧಮೇವ ಚ ।
ತತ್ರಾಪಿ ಭಗವಾನ್ ಕೃಷ್ಣೋ ವಲ್ಲವೀಭಿರ್ವಿರಾಜತೇ ॥ ೧೩ ॥
ಭಾರತೇ ಮಾನವಂ ಜನ್ಮ ಪ್ರಾಪ್ಯ ಭಾಗವತಂ ನ ಯೈಃ ।
ಶ್ರುತಂ ಪಾಪಪರಾಧೀನೈರಾತ್ಮಘಾತಸ್ತು ತೈಃ ಕೃತಃ ॥ ೧೪ ॥
ಶ್ರೀಮದ್ಭಾಗವತಂ ಶಾಸ್ತ್ರಂ ನಿತ್ಯಂ ಯೈಃ ಪರಿಸೇವಿತಂ ।
ಪಿತುರ್ಮಾತುಶ್ಚ ಭಾರ್ಯಾಯಾಃ ಕುಲಪಂಕ್ತಿಃ ಸುತಾರಿತಾ ॥ ೧೫ ॥
ವಿದ್ಯಾಪ್ರಕಾಶೋ ವಿಪ್ರಾಣಾಂ ರಾಜ್ಞಾಂ ಶತ್ರುಜಯೋ ವಿಶಾಂ ।
ಧನಂ ಸ್ವಾಸ್ಥ್ಯಂ ಚ ಶೂದ್ರಾಣಾಂ ಶ್ರೀಮದ್ಭಾಗವತಾದ್ಭವೇತ್ ॥ ೧೬ ॥
ಯೋಷಿತಾಮಪರೇಷಾಂ ಚ ಸರ್ವವಾಂಛಿತಪೂರಣಂ ।
ಅತೋ ಭಾಗವತಂ ನಿತ್ಯಂ ಕೋ ನ ಸೇವೇತ ಭಾಗ್ಯವಾನ್ ॥ ೧೭ ॥

---

ಮತ್ತೊಂದು ಉಪಾಯವನ್ನು ಹೇಳುವೆನು, ಕೇಳು. ಇತರ ವೇಳೆಗಳಲ್ಲಿ ಆತ್ಮಜ್ಞಾನವು ಶ್ರೀಮದ್ಭಾಗವತದ ಶ್ರವಣದಿಂದುಂಟಾಗುವುದು.

೧೨. ಯಾವ ಸ್ಥಳದಲ್ಲಿ ಶ್ರೀಭಾಗವತವೆಂಬ ಆತ್ಮಜ್ಞಾನ ಶಾಸ್ತ್ರವು ಯಾವ ಕಾಲದಲ್ಲಿ ಪಠಿಸಲ್ಪಡುತ್ತದೆಯೊ ಮತ್ತು ಕೇಳಲ್ಪಡುತ್ತದೆಯೊ, ಅಲ್ಲಿಯೇ ಶ್ರೀಕೃಷ್ಣನು ಸನ್ನಿಹಿತನಾಗಿರುವನೆಂಬುದು ನಿಶ್ಚಯವಾದ ವಿಷಯವು.

೧೩. ಎಲ್ಲಿ ಶ್ರೀ ಭಾಗವತವಾಗಲಿ ಅದರ ಶ್ಲೋಕವೊಂದಾಗಲಿ ಶ್ಲೋಕಾರ್ಧವಾದರೂ ಆಗಲಿ ಅನುವಾದ ಮಾಡಲ್ಪಡುತ್ತಿರುವುದೊ, ಅಲ್ಲಿಯೂ ಕೂಡ ಶ್ರೀ ಕೃಷ್ಣನು ತನ್ನ ನಾಯಕಿಯರೊಡನೆ ವಿರಾಜಿಸುತ್ತಿರುವನು.

೧೪–೧೫. ಈ ಭರತಖಂಡದಲ್ಲಿ ಮನುಷ್ಯಜನ್ಮವನ್ನು ಪಡೆದೂ ಪಾಪಗಳಿಗೆ ಪರಾಧೀನರಾಗಿ ಯಾರು ಶ್ರೀಮದ್ಭಾಗವತವನ್ನು ಕೇಳುವುದಿಲ್ಲವೊ, ಅವರನ್ನು ಆತ್ಮಹತ್ಯೆಮಾಡಿಕೊಂಡವರೆಂದು ತಿಳಿಯಬೇಕು. ಯಾರಿಂದ ಶ್ರೀಭಾಗವತ ರೂಪವಾದ ಆತ್ಮಜ್ಞಾನಶಾಸ್ತ್ರವು ನಿತ್ಯವೂ ಸೇವಿಸಲ್ಪಡುವುದೊ, ಅವರ ತಂದೆ ತಾಯಿ ಹೆಂಡತಿಯರ ಕುಲಗಳೆಲ್ಲವೂ ಉದ್ಧಾರವಾಗುವುವು.

೧೬. ಶ್ರೀಭಾಗವತದ ಪಠನ ಮತ್ತು ಶ್ರವಣಗಳಿಂದ ಬ್ರಾಹ್ಮಣರಿಗೆ ವಿದ್ಯಾಬಲ ಮತ್ತು ಪ್ರಕಾಶವೂ, ಕ್ಷತ್ರಿಯರಿಗೆ ಶತ್ರುವಿಜಯವೂ, ವೈಶ್ಯರಿಗೆ ಧನಲಾಭವೂ, ಶೂದ್ರರಿಗೆ ದೇಹಾರೋಗ್ಯವೂ ಲಭಿಸುವುವು.

೧೭. ಸ್ತ್ರೀಯರಿಗೂ ಇತರ ಮಾನವರಿಗೂ ತಮ್ಮ ತಮ್ಮ ಅಭೀಷ್ಟಗಳೆಲ್ಲವೂ ಸಿದ್ಧಿಸುವುವು. ಆದುದರಿಂದ ಭಾಗ್ಯವಂತನಾದ ಯಾವ ಪುರುಷನು ತಾನೆ ಶ್ರೀ ಭಾಗವತವನ್ನು ಸೇವಿಸುವುದಿಲ್ಲ ?

ಅನೇಕ ಜನ್ಮಸಂಸಿದ್ಧೇಃ ಶ್ರೀಮದ್ಭಾಗವತಂ ಲಭೇತ್ ।
ಪ್ರಕಾಶೋ ಭಗವದ್ಭಕ್ತೇರುದ್ಭವಸ್ತತ್ರ ಜಾಯತೇ ॥ ೧೮ ॥
ಸಾಂಖ್ಯಾಯನಪ್ರಸಾದಾತ್ತಂ ಶ್ರೀಮದ್ಭಾಗವತಂ ಪುರಾ ।
ಬೃಹಸ್ಪತಿರ್ದತ್ತವಾನ್ಮೇ ತೇನಾಹಂ ಕೃಷ್ಣವಲ್ಲಭಃ ॥ ೧೯ ॥
ಆಖ್ಯಾಯಿಕಾಂ ಚ ತೇನೋಕ್ತಾಂ ವಿಷ್ಣುರಾತ ನಿಬೋಧ ತಾಂ ।
ಜ್ಞಾಯತೇ ಸಂಪ್ರದಾಯೋಽಪಿ ಯತ್ರ ಭಾಗವತಶೃತೇಃ ॥ ೨೦ ॥

ಬೃಹಸ್ಪತಿರುವಾಚ :—

ಈಕ್ಷಾಂಚಕ್ರೇ ಯದಾ ಕೃಷ್ಣೋ ಮಯಾ ಪುರುಷರೂಪಧೃಕ್ ।
ಬ್ರಹ್ಮಾ ವಿಷ್ಣುಃ ಶಿವಶ್ಚಾಪಿ ರಜಃಸತ್ವತಮೋಗುಣೈಃ ॥ ೨೧ ॥
ಪುರುಷಾಸ್ತ್ರಯ ಉತ್ತಸ್ಥುರಧಿಕಾರಾಂಸ್ತದಾದಿಶತ್ ।
ಉತ್ಪತ್ತೌ ಪಾಲನೇ ಚೈವ ಸಂಹಾರೇ ಪ್ರಕ್ರಮೇಣ ತಾನ್ ॥ ೨೨ ॥

೧೮. ಅನೇಕ ಜನ್ಮಗಳಲ್ಲಿ ಸಂಪಾದಿಸಿದ ಪುಣ್ಯದ ಪ್ರಭಾವದಿಂದ ಮನುಷ್ಯರಿಗೆ ಭಾಗವತವು ಲಭಿಸುವುದು. ಅದರಿಂದ ಆತ್ಮಜ್ಞಾನವೂ, ಭಗವದ್ಭಕ್ತಿಯ ಉದ್ಭವವೂ ಉಂಟಾಗುವುವು.

೧೯. ಈ ಶ್ರೀಭಾಗವತವು ಪೂರ್ವದಲ್ಲಿ ಸಾಂಖ್ಯಾಯನ ಮಹರ್ಷಿಯ ಅನುಗ್ರಹದಿಂದ ಬೃಹಸ್ಪತಿಗೆ ಪ್ರಾಪ್ತವಾಯಿತು. ಆ ಬೃಹಸ್ಪತಿಯು ಅದನ್ನು ನನಗೆ ಅನುಗ್ರಹಿಸಿದನು. ಅದರಿಂದಲೇ ನಾನು ಶ್ರೀಕೃಷ್ಣನಲ್ಲಿ ಅನುರಾಗವುಳ್ಳವನಾಗಿರುವೆನು.

೨೦. ಪರೀಕ್ಷಿನ್ಮಹಾರಾಜನೆ! ಆ ಬೃಹಸ್ಪತ್ಯಾಚಾರ್ಯನು ನನಗೆ ಹೇಳಿದ ಚರಿತ್ರೆಯೊಂದನ್ನು ಈ ಸಂಬಂಧದಲ್ಲಿ ನಿನಗೆ ತಿಳಿಸುವೆನು, ಕೇಳು. ಇದರಿಂದ ನಿನಗೆ ಭಾಗವತ ಪುರಾಣಶ್ರವಣದ ಸಂಪ್ರದಾಯವೂ ಚೆನ್ನಾಗಿ ಮನೋಗತವಾಗುವುದು.

೨೧. ಬೃಹಸ್ಪತಿಯು ಹೇಳುತ್ತಾನೆ:—ಯಾವಾಗ ಶ್ರೀಮನ್ನಾರಾಯಣನು ಮಾಯಾಮಾನುಷರೂಪವನ್ನು ಧರಿಸಿದವನಾಗಿ ಬ್ರಹ್ಮಾಂಡದ ಸೃಷ್ಟಿಯನ್ನು ಮಾಡಬೇಕೆಂದು ಅಪೇಕ್ಷಿಸಿದನೊ, ಆಗ ರಜಸ್ಸತ್ತ್ವತಮೋಗುಣಗಳ ಪ್ರಾಚುರ್ಯದಿಂದ ಕೂಡಿದವರಾದ ಬ್ರಹ್ಮ ವಿಷ್ಣು ಮಹೇಶ್ವರರನ್ನು ಸೃಷ್ಟಿ ಮಾಡಿದನು.

೨೨. ಇಂತು ತ್ರಿಮೂರ್ತಿಗಳನ್ನು ನಿರ್ಮಾಣಮಾಡಿದ ಬಳಿಕ ಅವರಿಗೆ ಕ್ರಮವಾಗಿ ಬ್ರಹ್ಮಾಂಡದ ಸೃಷ್ಟಿ, ಪಾಲನ ಮತ್ತು ಸಂಹಾರಗಳನ್ನು ಮಾಡುವ ಅಧಿಕಾರಗಳನ್ನು ವಹಿಸಿಕೊಟ್ಟನು.

ಬ್ರಹ್ಮಾ ತು ನಾಭಿಕಮಲಾದುತ್ಪನ್ನಸ್ತಂ ವ್ಯಜಿಜ್ಞಪತ್ ।
ಶ್ರೀ ಬ್ರಹ್ಮೋವಾಚ :—
ನಾರಾಯಣಾದಿಪುರುಷ ಪರಮಾತ್ಮನ್ನಮೋಽಸ್ತು ತೇ ॥ ೨೩ ॥
ತ್ವಯಾ ಸರ್ಗೇ ನಿಯುಕ್ತೋಽಸ್ಮಿ ಪಾಪೀಯಾನ್ ಮಾಂ ರಜೋಗುಣಃ ।
ತ್ವತ್ಸ್ಮೃತೌ ನೈವ ಬಾಧೇತ ತಥೈವ ಕೃಪಯಾ ಪ್ರಭೋ ॥ ೨೪ ॥
ಶ್ರೀ ಬೃಹಸ್ಪತಿರುವಾಚ :—
ಯದಾ ತು ಭಗವಾಂಸ್ತಸ್ಮೈ ಶ್ರೀಮದ್ಭಾಗವತಂ ಪುರಾ ।
ಉಪದಿಶ್ಯಾಬ್ರವೀದ್ಬ್ರಹ್ಮನ್ ಸೇವಸ್ವೈನಂ ಸ್ವಸಿದ್ಧಯೇ ॥ ೨೫ ॥
ಬ್ರಹ್ಮಾ ತು ಪರಮಪ್ರೀತಸ್ತೇನ ಕೃಷ್ಣಾಪ್ತಯೇಽನಿಶಂ ।
ಸಪ್ತಾವರಣಭಂಗಾಯ ಸಪ್ತಾಹಂ ಸಮವರ್ತಯತ್ ॥ ೨೬ ॥
ಶ್ರೀ ಭಾಗವತ ಸಪ್ತಾಹಸೇವನಾಪ್ತಮನೋರಥಃ ।
ಸೃಷ್ಟಿಂ ವಿತನುತೇ ನಿತ್ಯಂ ಸಸಪ್ತಾಹಃ ಪುನಃ ಪುನಃ ॥ ೨೭ ॥

೨೩. ಪರಮಾತ್ಮನ ನಾಭೀಕಮಲದಿಂದ ಉದ್ಭವಿಸಿದ ಬ್ರಹ್ಮನು ಆಗ ಇಂತೆಂದು ವಿಜ್ಞಾಪನೆಯನ್ನು ಮಾಡಿಕೊಂಡನು. ಬ್ರಹ್ಮದೇವನು ಕೇಳುತ್ತಾನೆ:—ಆದಿಪುರುಷನೂ, ಪರಾತ್ಪರನೂ, ಅಂತರಾತ್ಮನೂ ಆದ ನಾರಾಯಣನೆ! ನಿನಗೆ ನಮುಸ್ಕರಿಸುವೆನು.

೨೪. ಲೋಕದ ಸೃಷ್ಟಿಕಾರ್ಯದಲ್ಲಿ ನಿನ್ನ ಅಪ್ಪಣೆಯಂತೆ ನಾನು ನಿಯೋಜಿತನಾಗಿರುವೆನು. ಆದರೆ ಈ ಕಾರ್ಯದಲ್ಲಿ ನಿರತನಾಗಿರುವ ನನ್ನನ್ನು ಪಾಪಲೇಪದಿಂದ ಕೂಡಿದ ರಜೋಗುಣವು ಆವರಿಸಿ ನಿನ್ನ ವಿಸ್ಮರಣೆಯನ್ನುಂಟುಮಾಡದಂತೆ ಕೃಪೆಯಿಟ್ಟು ಉದ್ಧರಿಸು.

೨೫. ಬೃಹಸ್ಪತಿಯು ಹೇಳುತ್ತಾನೆ:—ಆ ಕಾಲದಲ್ಲಿ ಭಗವಂತನೇ ಬ್ರಹ್ಮದೇವನಿಗೆ ಶ್ರೀ ಭಾಗವತವನ್ನು ಉಪದೇಶಮಾಡಿ, 'ಎಲೈ ಬ್ರಹ್ಮನೆ! ನಿನ್ನ ಅಭೀಷ್ಟಸಿದ್ಧಿಗಾಗಿ ಇದನ್ನು ಯಾವಾಗಲೂ ಪಾರಾಯಣಾದಿಗಳ ಕ್ರಮದಿಂದ ಸೇವಿಸುತ್ತಿರು' ಎಂಬುದಾಗಿ ಅಪ್ಪಣೆಯನ್ನು ಮಾಡಿದನು.

೨೬. ಆದರಿಂದ ಬ್ರಹ್ಮದೇವನು ಅತ್ಯಂತ ಸಂತುಷ್ಟನಾಗಿ ತ್ವಕ್ಚರ್ಮಾದಿ ಸಪ್ತ ದೇಹಾವರಣಗಳ ನಾಶಕ್ಕಾಗಿ ಏಳು ದಿವಸಗಳು ನಿರಂತರವೂ ಶ್ರೀ ಕೃಷ್ಣನ ಪ್ರೀತ್ಯರ್ಥವಾಗಿ ಭಾಗವತವನ್ನು ಸಪ್ತಾಹಕ್ರಮದಿಂದ ಪಠನಮಾಡಿದನು.

೨೭. ಇಂತು ಶ್ರೀಮದ್ಭಾಗವತದ ಸೇವನೆಯಿಂದ ಸಕಲ ಇಷ್ಟಾರ್ಥಗಳನ್ನೂ ಪಡೆದವನಾಗಿ ಪುನಃ ಪುನಃ ಆ ಸಪ್ತಾಹದ ಪುಣ್ಯಪ್ರಭಾವದಿಂದಲೇ ಬ್ರಹ್ಮಾಂಡಸೃಷ್ಟಿಯನ್ನು ಮಾಡುತ್ತಿರುವನು.

ವಿಷ್ಣುರಪ್ಯರ್ಥಯಾಮಾಸ ಪುಮಾಂಸಂ ಸ್ವಾರ್ಥಸಿದ್ಧಯೇ ।
ಪ್ರಜಾನಾಂ ಪಾಲನೇ ಪುಂಸಾ ಯದನೇನಾಪಿ ಕಲ್ಪಿತಃ ॥ ೨೮ ॥

ಶ್ರೀ ವಿಷ್ಣುರುವಾಚ :—

ಪ್ರಜಾನಾಂ ಪಾಲನಂ ದೇವ ಕರಿಷ್ಯಾಮಿ ಯಥೋಚಿತಂ ।
ಪ್ರವೃತ್ತ್ಯಾ ಚ ನಿವೃತ್ತ್ಯಾ ಚ ಕರ್ಮಜ್ಞಾನಪ್ರಯೋಜನಾತ್ ॥ ೨೯ ॥
ಯದಾ ಯದೈವ ಕಾಲೇನ ಧರ್ಮಗ್ಲಾನಿರ್ಭವಿಷ್ಯತಿ ।
ಧರ್ಮಂ ಸಂಸ್ಥಾಪಯಿಷ್ಯಾಮಿ ಹ್ಯವತಾರೈಸ್ತದಾ ತದಾ ॥ ೩೦ ॥
ಭೋಗಾರ್ಥಿಭ್ಯಸ್ತು ಯಜ್ಞಾದಿ ಫಲಂ ದಾಸ್ಯಾಮಿ ನಿಶ್ಚಿತಂ ।
ಮೋಕ್ಷಾರ್ಥಿಭ್ಯೋ ವಿರಕ್ತೇಭ್ಯೋ ಮುಕ್ತಿಂ ಪಂಚವಿಧಾಂ ತಥಾ ॥೩೧॥
ಯೇಽಪಿ ಮೋಕ್ಷಂ ನ ವಾಂಛಂತಿ ತಾನ್ ಕಥಂ ಪಾಲಯಾಮ್ಯಹಂ ।
ಆತ್ಮಾನಂ ಚ ಶ್ರಿಯಂ ಚಾಪಿ ಪಾಲಯಾಮಿ ಕಥಂ ವದ ॥ ೩೨ ॥
ತಸ್ಮಾ ಅಪಿ ಪುಮಾನಾದ್ಯಃ ಶ್ರೀಭಾಗವತಮಾದಿಶತ್ ।
ಉವಾಚ ಚ ಪಠಸ್ವೈನತ್ತ್ವವ ಸರ್ವಾರ್ಥಸಿದ್ಧಯೇ ॥ ೩೩ ॥

---

೨೮. ಮಹಾವಿಷ್ಣುವೂ ಕೂಡ ಪ್ರಜೆಗಳ ಪಾಲನೆಯ ಕಾರ್ಯದಲ್ಲಿ ನಿಯೋಜಿತನಾಗಿದ್ದುದರಿಂದ ಆದಿಪುರುಷನಾದ ಆತನನ್ನು ಕುರಿತು ತನ್ನ ಅಭೀಷ್ಟಸಿದ್ಧಿಗಾಗಿ ಪ್ರಾರ್ಥನೆಮಾಡಿಕೊಂಡನು.

೨೯. ಶ್ರೀವಿಷ್ಣುವು ಹೇಳುತ್ತಾನೆ:—ಕರ್ಮ ಮತ್ತು ಜ್ಞಾನಗಳೇ ಮುಖ್ಯ ಪ್ರಯೋಜನಗಳಾಗಿರುವ ಪ್ರವೃತ್ತಿ ಮತ್ತು ನಿವೃತ್ತಿ ಮಾರ್ಗಗಳನ್ನನುಸರಿಸಿ ಉಚಿತ ರೀತಿಯಿಂದ ಪ್ರಜೆಗಳ ಪಾಲನೆಯನ್ನು ಮಾಡಲು ಸಿದ್ಧನಾಗಿರುವೆನು.

೩೦. ಯಾವ ಯಾವ ಕಾಲಗಳಲ್ಲಿ ದುಷ್ಟರಿಂದ ಧರ್ಮಕ್ಕೆ ಗ್ಲಾನಿಯುಂಟಾಗುವುದೊ, ಆಯಾ ಕಾಲಗಳಲ್ಲಿ ನಾನು ಅವತಾರಗಳನ್ನೆತ್ತಿ ದುಷ್ಟನಿಗ್ರಹಮೂಲಕವಾಗಿ ಧರ್ಮವನ್ನು ಲೋಕದಲ್ಲಿ ಸ್ಥಾಪನೆ ಮಾಡುವೆನು.

೩೧–೩೨. ಸ್ವರ್ಗಾದಿಭೋಗಗಳನ್ನಪೇಕ್ಷಿಸುವವರಿಗೆ ವೇದವಚನಾನುಸಾರವಾಗಿ ಯಜ್ಞಾದಿ ಸತ್ಕರ್ಮಗಳ ಫಲಗಳನ್ನು ಕೊಡುವೆನು. ಕರ್ಮದಿಂದ ವಿರಕ್ತರಾಗಿ ಮೋಕ್ಷವನ್ನೇ ಅಪೇಕ್ಷಿಸುವ ಮನುಜರಿಗೆ ಐದು ವಿಧವಾದ ಮುಕ್ತಿಯನ್ನೂ ಕೊಡುವೆನು. ಯಾವ ಮನುಷ್ಯರು ಮೋಕ್ಷವನ್ನೂ ಅಪೇಕ್ಷಿಸುವುದಿಲ್ಲವೊ, ಅವರನ್ನು ಹೇಗೆ ಪಾಲಿಸಬೇಕು? ನನ್ನನ್ನೂ ನನ್ನ ಐಶ್ವರ್ಯವನ್ನೂ ಹೇಗೆ ಕಾಪಾಡಿಕೊಳ್ಳಬೇಕೆಂಬುದನ್ನೂ ತಿಳಿಸು.

೩೩. ಆತನಿಗೂ ಕೂಡ ಶ್ರೀಮನ್ನಾರಾಯಣನು ಭಾಗವತ ಗ್ರಂಥವನ್ನು ಉಪದೇಶಮಾಡಿ, 'ನಿನ್ನ ಸಕಲ ಇಷ್ಟಾರ್ಥಗಳ ಸಿದ್ಧಿಗಾಗಿ ಇದನ್ನು ಪಠನ ಮಾಡುತ್ತಿರು' ಎಂಬುದಾಗಿ ಹೇಳಿದನು.

ತತೋ ವಿಷ್ಣುಃ ಪ್ರಸನ್ನಾತ್ಮಾ ಪರಮಾರ್ಥಕಪಾಲನೇ ।
ಸಮರ್ಥೋಽಭೂತ್ ಶ್ರಿಯಾ ಮಾಸಿ ಮಾಸಿ ಭಾಗವತಂ ಸ್ಮರನ್ ॥ ೩೪ ॥
ಯದಾ ವಿಷ್ಣುಃ ಸ್ವಯಂ ವಕ್ತಾ ಲಕ್ಷ್ಮೀಶ್ಚ ಶ್ರವಣೇ ರತಾ ।
ತದಾ ಭಾಗವತಶ್ರಾವೋ ಮಾಸೇನೈವ ಪುನಃ ಪುನಃ ॥ ೩೫ ॥
ಯದಾ ಲಕ್ಷ್ಮೀಃ ಸ್ವಯಂ ವಕ್ತ್ರೀ ವಿಷ್ಣುಶ್ಚ ಶ್ರವಣೇ ರತಃ ।
ಮಾಸದ್ವಯಂ ರಸಾಸ್ವಾದಸ್ತದಾತೀವ ಸುಶೋಭತೇ ॥ ೩೬ ॥
ಅಧಿಕಾರೇ ಸ್ಥಿತೋ ವಿಷ್ಣುರ್ಲಕ್ಷ್ಮೀರ್ನಿಶ್ಚಿಂತಮಾನಸಾ ।
ತೇನ ಭಾಗವತಾಸ್ವಾದಸ್ತಸ್ಯಾ ಭೂರಿ ಪ್ರಕಾಶತೇ ॥ ೩೭ ॥
ಅಥ ರುದ್ರೋಽಪಿ ತಂ ದೇವಂ ಸಂಹಾರಾಧಿಕೃತಃ ಪುರಾ ।
ಪುಮಾಂಸಂ ಪ್ರಾರ್ಥಯಾಮಾಸ ಸ್ವಸಾಮರ್ಥ್ಯವಿವೃದ್ಧಯೇ ॥ ೩೮ ॥

ಶ್ರೀ ರುದ್ರ ಉವಾಚ :—

ನಿತ್ಯೇ ನೈಮಿತ್ತಿಕೇ ಚೈವ ಸಂಹಾರೇ ಪ್ರಾಕೃತೇ ತಥಾ ।
ಶಕ್ತಯೋ ಮಮ ವಿದ್ಯಂತೇ ದೇವದೇವ ಮಮ ಪ್ರಭೋ ॥ ೩೯ ॥

---

೩೪. ಆಗ ಮಹಾವಿಷ್ಣುವು ಲಕ್ಷ್ಮೀಸಮೇತನಾಗಿ ತಿಂಗಳಿಗೊಂದು ಸಲದಂತೆ ಭಾಗವತದ ಪಾರಾಯಣವನ್ನು ಮಾಡುತ್ತ ಪ್ರಶಾಂತವಾದ ಮನಸ್ಸುಳ್ಳವನಾಗಿ ಸಕಲ ಬ್ರಹ್ಮಾಂಡದ ಪಾಲನಾಕಾರ್ಯದಲ್ಲಿ ಸಮರ್ಥನಾದನು.

೩೫. ಯಾವಾಗ ವಿಷ್ಣುವು ತಾನೇ ಪಾರಾಯಣವನ್ನು ಮಾಡುವನೊ ಮತ್ತು ಲಕ್ಷ್ಮಿಯು ಅದನ್ನು ಶ್ರವಣಮಾಡುವಳೊ, ಆಗ ಪುನಃ ಪುನಃ ಭಾಗವತ ಶ್ರವಣವು ಒಂದೊಂದು ತಿಂಗಳಿನಲ್ಲಿಯೇ ನಡೆಯುವುದು.

೩೬. ಯಾವಾಗ ಲಕ್ಷ್ಮಿಯು ತಾನೇ ಪುರಾಣವನ್ನು ಹೇಳುವವಳಾಗಿ ವಿಷ್ಣುವು ಶ್ರವಣದಲ್ಲಿ ನಿರತನಾಗುವನೊ, ಆಗ ಭಾಗವತದ ಅಮೃತಪಾನದಲ್ಲಿ ಎರಡು ತಿಂಗಳಿಗೊಮ್ಮೆ ಆನಂದಮಯವಾದ ಕಾಲವು ಕಳೆಯುವುದು.

೩೭–೩೮. ಶ್ರೀವಿಷ್ಣುವು ಅಧಿಕಾರದಲ್ಲಿ ನಿಯೋಜಿತನಾಗಿರುವನು. ಲಕ್ಷ್ಮಿಯಾದರೊ ಸರ್ವಕಾಲದಲ್ಲಿಯೂ ನಿಶ್ಚಿಂತೆಯಾದ ಮನಸ್ಸುಳ್ಳವಳಾಗಿರುವಳು. ಆದುದರಿಂದ ಭಾಗವತಾಮೃತದ ಸೇವನೆಯ ಫಲವು ಆಕೆಯಲ್ಲಿಯೇ ಹೆಚ್ಚಾಗಿ ಪ್ರಕಾಶಿಸುತ್ತಿರುವುದು. ಮತ್ತು ಜಗತ್ಸಂಹಾರಕಾರ್ಯದಲ್ಲಿ ನಿಯುಕ್ತನಾದ ರುದ್ರನೂ ಕೂಡ ದೇವದೇವನಾದ ಆದಿಪುರುಷನನ್ನು ಸ್ವಸಾಮರ್ಥ್ಯದ ಸಿದ್ಧಿಗಾಗಿ ಪ್ರಾರ್ಥಿಸಿದನು.

೩೯. ರುದ್ರನು ಹೇಳುತ್ತಾನೆ:—ಎಲೈ ದೇವೇಶ್ವರನೆ! ಸ್ವಾಮಿಯೆ! ನಿತ್ಯ ನೈಮಿತ್ತಿಕ ಸಂಹಾರಗಳಲ್ಲಿಯೂ, ಪ್ರಕೃತಿಯ ವಿಕಾರಗಳ ಸಂಹಾರದಲ್ಲಿಯೂ ನನಗೆ ಅಧಿಕಾರವಿರುವುದನ್ನು ಬಲ್ಲೆನು.

ಆತ್ಯಂತಿಕೇ ತು ಸಂಹಾರೇ ಮಮ ಶಕ್ತಿರ್ನ ವಿದ್ಯತೇ ।
ಮಹದ್ದುಃಖಂ ಮಮೈತತ್ತು ತೇನ ತ್ವಾಂ ಪ್ರಾರ್ಥಯಾಮ್ಯಹಂ ॥ ೪೦ ॥

ಬೃಹಸ್ಪತಿರುವಾಚ :—

ಶ್ರೀಮದ್ಭಾಗವತಂ ತಸ್ಮಾದಪಿ ನಾರಾಯಣೋ ದದೌ ।
ಸ ತು ಸಂಸೇವನಾದಸ್ಯ ಜಿಗ್ಯೇ ಚಾಪಿ ತಮೋಗುಣಂ ॥ ೪೧ ॥
ಕಥಾ ಭಾಗವತೀ ತೇನ ಸೇವಿತಾ ವರ್ಷಮಾತ್ರತಃ ।
ಲಯೇ ತ್ವತ್ಯಂತಿಕೇ ತೇನಾವಾಪ ಶಕ್ತಿಂ ಸದಾಶಿವಃ ॥ ೪೨ ॥

ಉದ್ಧವ ಉವಾಚ :—

ಶ್ರೀ ಭಾಗವತಮಾಹಾತ್ಮ್ಯಮಿಮಾಮಾಖ್ಯಾಯಿಕಾಂ ಗುರೋಃ ।
ಶ್ರುತ್ವಾ ಭಾಗವತಂ ಲಬ್ಧ್ವಾ ಮುಮುದೇಽಹಂ ಪ್ರಣಮ್ಯ ತಂ ॥ ೪೩ ॥
ತತಸ್ತು ವೈಷ್ಣವೀಂ ರೀತಿಂ ಗೃಹೀತ್ವಾ ಮಾಸಮಾತ್ರತಃ ।
ಶ್ರೀಮದ್ಭಾಗವತಾಸ್ವಾದೋ ಮಯಾ ಸಮ್ಯಙ್ನಿಷೇವಿತಃ ॥ ೪೪ ॥
ತಾವತೈವ ಬಭೂವಾಹಂ ಕೃಷ್ಣಸ್ಯ ದಯಿತಃ ಸಖಾ ।
ಕೃಷ್ಣೇನಾಥ ನಿಯುಕ್ತೋಽಹಂ ವ್ರಜೇ ಸ್ವಪ್ರೇಯಸೀಗಣೇ ॥ ೪೫ ॥

---

೪೦. ಆದರೆ ಆತ್ಯಂತಿಕವಾದ ಜಗತ್ಪ್ರಲಯವನ್ನುಂಟುಮಾಡುವುದರಲ್ಲಿ ನನಗೆ ಎಷ್ಟುಮಾತ್ರವೂ ಸಾಮರ್ಥ್ಯವಿರುವುದಿಲ್ಲ. ಈ ವಿಷಯವು ನನಗೆ ಮಹತ್ತರವಾದ ದುಃಖವನ್ನುಂಟುಮಾಡುತ್ತಿರುವುದರಿಂದ ನಾನು ನಿನ್ನನ್ನು ಪ್ರಾರ್ಥಿಸುತ್ತಿರುವೆನು.

೪೧. ಬೃಹಸ್ಪತಿಯು ಹೇಳುತ್ತಾನೆ:—ಶ್ರೀಮನ್ನಾರಾಯಣನು ಆತನಿಗೂ ಸಹ ಶ್ರೀ ಭಾಗವತವನ್ನು ಕೊಟ್ಟನು. ಆತನೂ ಆದರ ಸೇವನೆಯ ಫಲವಾಗಿ ತನ್ನ ತಮೋಗುಣವನ್ನು ಜಯಿಸಿದನು.

೪೨. ಆತನಿಂದ ಭಾಗವತೇತಿಹಾಸವು ಒಂದು ವರ್ಷದವರೆವಿಗೂ ಸೇವಿಸಲ್ಪಟ್ಟಿತು. ಆದುದರಿಂದ ಸದಾಶಿವನು ಆತ್ಯಂತಿಕ ಪ್ರಳಯವನ್ನುಂಟುಮಾಡುವ ಶಕ್ತಿಯನ್ನೂ ಸಂಪಾದಿಸಿಕೊಂಡನು.

೪೩. ಉದ್ಧವನು ಹೇಳುತ್ತಾನೆ:—ಶ್ರೀಮದ್ಭಾಗವತದ ಮಾಹಾತ್ಮ್ಯೆಯ ವಿಷಯದಲ್ಲಿ ಈ ಆಖ್ಯಾನವನ್ನು ಗುರು ಮುಖದಿಂದ ಕೇಳಿದವನಾಗಿ ನಾನು ಅತ್ಯಂತ ಸಂತೋಷವನ್ನು ಹೊಂದಿ ಆತನಿಗೆ ನಮಸ್ಕರಿಸಿದೆನು.

೪೪. ಬಳಿಕ ವೈಷ್ಣವೋಚಿತವಾದ ವ್ರತವನ್ನು ಕೈಕೊಂಡು ನಾನು ಒಂದು ತಿಂಗಳ ಅವಧಿಯಲ್ಲಿ ಸಮಗ್ರ ಭಾಗವತದ ಅಮೃತವನ್ನು ಚೆನ್ನಾಗಿ ಪಾನ ಮಾಡಿದೆನು.

೪೫. ಅಷ್ಟುಮಾತ್ರದಿಂದಲೇ ನಾನು ಶ್ರೀಕೃಷ್ಣನಿಗೆ ಪ್ರಿಯತಮನಾದ

ವಿರಹಾರ್ತಾಸು ಗೋಪೀಷು ಸ್ವಯಂ ನಿತ್ಯವಿಹಾರಿಣಾ ।
ಶ್ರೀಭಾಗವತಸಂದೇಶೋ ಮನ್ಮುಖೇನ ಪ್ರಯೋಜಿತಃ ॥ ೪೬ ॥
ತಂ ಯಥಾಮತಿ ಲಬ್ಧ್ವಾ ತಾ ಆಸನ್ನಿರಹವರ್ಜಿತಾಃ ।
ನಾಜ್ಞಾಸಿಷಂ ರಹಸ್ಯಂ ತಚ್ಚಮತ್ಕಾರಸ್ತು ಲೋಕಿತಃ ॥ ೪೭ ॥
ಸ್ವರ್ವಾಸಂ ಪ್ರಾರ್ಥ್ಯ ಕೃಷ್ಣಂ ಚ ಬ್ರಹ್ಮಾದ್ಯೇಷು ಗತೇಷು ಮೇ ।
ಶ್ರೀಮದ್ಭಾಗವತೇ ಕೃಷ್ಣಸ್ತದ್ರಹಸ್ಯಂ ಸ್ವಯಂ ದದೌ ॥ ೪೮ ॥
ಪುರತೋಽಶ್ವತ್ಥಮೂಲಸ್ಯ ಚಕಾರ ಮಯಿ ತದ್ದೃಢಂ ।
ತೇನಾತ್ರ ವ್ರಜವಲ್ಲೀಷು ವಸಾಮಿ ಬದರೀಂ ಗತಃ ॥ ೪೯ ॥
ತಸ್ಮಾನ್ನಾರದಕುಂಡೇಽತ್ರ ತಿಷ್ಠಾಮಿ ಸ್ವೇಚ್ಛಯಾ ಸದಾ ।
ಕೃಷ್ಣಪ್ರಕಾಶೋ ಭಕ್ತಾನಾಂ ಶ್ರೀಮದ್ಭಾಗವತಾದ್ಭವೇತ್ ॥ ೫೦ ॥

ಸ್ನೇಹಿತನಾದೆನು. ಮತ್ತು ಆತನಿಂದ ಗೋಕುಲದಲ್ಲಿ ವಿರಹಾತುರರಾಗಿದ್ದ ಪ್ರೀತಿಪಾತ್ರರಾದ ಗೋಪಸ್ತ್ರೀಯರಿಗೆ ಆತನ ಸಂದೇಶವನ್ನು ತೆಗೆದುಕೊಂಡು ಹೋಗುವವನಾದೆನು.

೪೬. ಶ್ರೀಕೃಷ್ಣನ ವಿರಹದಿಂದ ಆರ್ತರಾಗಿದ್ದ ಗೋಪಕನ್ಯೆಯರಿಗೆ ನಿತ್ಯ ಲೀಲಾವಿನೋದಿಯಾದ ಆತನೇ ನನ್ನ ಮುಖದಿಂದ ಶ್ರೀಮದ್ಭಾಗವತದ ಸಾರಭೂತವಾದ ಸಂದೇಶವನ್ನು ಉಪದೇಶ ಮಾಡಿಸಿದನು.

೪೭. ಆ ಸ್ತ್ರೀಯರೂ ಆ ಸಂದೇಶವನ್ನು ತಮ್ಮ ತಮ್ಮ ಬುದ್ಧ್ಯನುಸಾರ ವಾಗಿ ತಿಳಿದುಕೊಂಡು ವಿರಹದುಃಖದಿಂದ ಬಿಡುಗಡೆಯನ್ನು ಹೊಂದಿದರು. ನಾನು ಅದರ ರಹಸ್ಯವನ್ನು ತಿಳಿಯಲಾರದವನಾದರೂ ಅವರ ಮನೋಧರ್ಮ ಗಳಲ್ಲಾದ ಚಮತ್ಕಾರವನ್ನು ಮಾತ್ರ ಕಂಡೆನು.

೪೮. ಕೃಷ್ಣಾವಸಾನಕಾಲದಲ್ಲಿ ಬ್ರಹ್ಮಾದಿ ದೇವತೆಗಳು ಸ್ವರ್ಗವಾಸವನ್ನು ಪ್ರಾರ್ಥಿಸಿ ಹೊರಟುಹೋಗಲು ಶ್ರೀಕೃಷ್ಣನು ನನ್ನನ್ನು ಕರೆದು ತಾನೇ ಭಾಗವತ ಗ್ರಂಥದಲ್ಲಿರುವ ರಹಸ್ಯವನ್ನು ಉಪದೇಶ ಮಾಡಿದನು.

೪೯. ಮತ್ತು ಒಂದು ಅಶ್ವತ್ಥವೃಕ್ಷದ ಮೂಲದಲ್ಲಿ ಕುಳಿತು ಅದನ್ನು ನನಗೆ ಚೆನ್ನಾಗಿ ಮನಸ್ಸಿನಲ್ಲಿ ದೃಢವಾಗುವಂತೆ ಅನುಗ್ರಹಿಸಿದನು. ಆದುದರಿಂದಲೇ ನಾನು ಬದರೀಕ್ಷೇತ್ರಕ್ಕೆ ಹೊರಟೆನಾದರೂ, ಈ ಬೃಂದಾವನದ ಗುಲ್ಮಲತೆ ಗಳಲ್ಲಿಯೇ ಸಂಚರಿಸುತ್ತಿರುವೆನು.

೫೦. ಆದುದರಿಂದ ನಾನು ನನ್ನ ಇಚ್ಛೆಯಿಂದಲೇ ಬೃಂದಾವನದ ಈ ನಾರದ ಕುಂಡದಲ್ಲಿ ವಾಸಮಾಡುತ್ತಿರುವೆನು. ಭಗವದ್ಭಕ್ತರಿಗೆ ಶ್ರೀಮದ್ಭಾಗ ವತಶ್ರವಣದಿಂದ ಶ್ರೀ ಕೃಷ್ಣನ ಸಂದರ್ಶನವು ಲಭಿಸುವುದು.

ತದೇಷಾಮಪಿ ಕಾರ್ಯಾರ್ಥಂ ಶ್ರೀಮದ್ಭಾಗವತಂ ತ್ವಹಂ ।
ಪ್ರವಕ್ಷ್ಯಾಮಿ ಸಹಾಯೋಽತ್ರ ತ್ವಯೈವಾನುಷ್ಠಿತೋ ಭವೇತ್ ॥ ೫೧ ॥
ಶ್ರೀ ಸೂತ ಉವಾಚ :—
ವಿಷ್ಣುರಾತಸ್ತು ಶ್ರುತ್ವಾ ತದುದ್ಧವಂ ಪ್ರಣತೋಽಬ್ರವೀತ್ ।
ಶ್ರೀ ಪರೀಕ್ಷಿದುವಾಚ :—
ಹರಿದಾಸ ತ್ವಯಾ ಕಾರ್ಯಂ ಶ್ರೀಭಾಗವತಕೀರ್ತನಂ ॥ ೫೨ ॥
ಆಜ್ಞಾಪ್ಯೋಽಹಂ ಯಥಾ ಕಾರ್ಯಂ ಸಹಾಯೋಽತ್ರ ಮಯಾ ತಥಾ ।
ಶ್ರೀ ಸೂತ ಉವಾಚ :—
ಶ್ರುತ್ವೈತದುದ್ಧವೋ ವಾಕ್ಯಮುವಾಚ ಪ್ರೀತಮಾನಸಃ ॥ ೫೩ ॥
ಉದ್ಧವ ಉವಾಚ :—
ಶ್ರೀಕೃಷ್ಣೇನ ಪರಿತ್ಯಕ್ತೇ ಭೂತಲೇ ಬಲವಾನ್ ಕಲಿಃ ।
ಕರಿಷ್ಯತಿ ಪರಂ ವಿಘ್ನಂ ಸತ್ಕಾರ್ಯೇ ಸಮುಪಸ್ಥಿತೇ ॥ ೫೪ ॥
ತಸ್ಮಾದ್ದಿಗ್ವಿಜಯಂ ಯಾಹಿ ಕಲಿನಿಗ್ರಹಮಾಚರ ।
ಅಹಂ ತು ಮಾಸಮಾತ್ರೇಣ ವೈಷ್ಣವೀಂ ರೀತಿಮಾಸ್ಥಿತಃ ॥ ೫೫ ॥
ಶ್ರೀಮದ್ಭಾಗವತಾಸ್ವಾದಂ ಪ್ರಚಾರ್ಯ ತ್ವತ್ಸಹಾಯತಃ ।
ಏತಾನ್ ಸಂಪ್ರಾಪಯಿಷ್ಯಾಮಿ ನಿತ್ಯಧಾಮ್ನಿ ಮಧುದ್ವಿಷಃ ॥ ೫೬ ॥

---

೫೧. ಆದುದರಿಂದ ಈ ಶ್ರೀಕೃಷ್ಣಪತ್ನಿಯರಾದ ಇವರ ಕಾರ್ಯಸಿದ್ಧಿಗಾಗಿ ನಾನು ಶ್ರೀಭಾಗವತವನ್ನು ಅನುವಾದ ಮಾಡಿ ಹೇಳುವೆನು. ಅದಕ್ಕೆ ನಿನ್ನ ಸಹಾಯವೂ ಅವಶ್ಯಕವಾಗಿರುವುದು. ಅದನ್ನುಮಾಡಲು ನೀನು ಸಿದ್ಧನಾಗಬೇಕು.

೫೨. ಸೂತನು ಹೇಳುತ್ತಾನೆ:—ಈ ಮಾತುಗಳನ್ನು ಕೇಳಿ ಪರೀಕ್ಷಿತನು ಉದ್ಧವನಿಗೆ ನಮಸ್ಕರಿಸಿ ಇಂತೆಂದನು. ಪರೀಕ್ಷಿತನು ಹೇಳುತ್ತಾನೆ:—ಎಲೈ ವಿಷ್ಣುಭಕ್ತಾಗ್ರೇಸರನೆ! ನಿನ್ನಿಂದ ಶ್ರೀಮದ್ಭಾಗವತದ ಕೀರ್ತನವು ಖಂಡಿತವಾಗಿಯೂ ನಡೆಯಬೇಕು.

೫೩. ಈ ಕಾರ್ಯದಲ್ಲಿ ನನ್ನಿಂದ ಹೇಗೆ ಸಹಾಯವಾಗಬೇಕೆಂಬುದನ್ನು ಆಜ್ಞೆಮಾಡಿದರೆ ನೆರವೇರಿಸಲು ಸಿದ್ಧನಾಗಿರುವೆನು. ಸೂತನು ಹೇಳುತ್ತಾನೆ:—ಈ ಮಾತನ್ನು ಕೇಳಿ ಉದ್ಧವನು ಸಂತುಷ್ಟಾಂತರಂಗನಾಗಿ ಹೇಳತೊಡಗಿದನು.

೫೪. ಉದ್ಧವನು ಹೇಳುತ್ತಾನೆ:—ಶ್ರೀಕೃಷ್ಣನು ಭೂಲೋಕವನ್ನು ಬಿಟ್ಟು ಹೊರಟುಹೋಗಲು ಬಲಿಷ್ಠನಾದ ಕಲಿಪುರುಷನು ಸತ್ಕೃತ್ಯಗಳನ್ನು ಮಾಡುವಾಗಲೆಲ್ಲ ಅನೇಕ ವಿಘ್ನಗಳನ್ನುಂಟುಮಾಡುತ್ತಿರುವನು.

೫೫–೫೬. ಆದುದರಿಂದ ನೀನು ದಿಗ್ವಿಜಯಕ್ಕಾಗಿ ಹೊರಟು ಕಲಿಯನ್ನು ನಿಗ್ರಹಿಸುವುದರಲ್ಲಿ ಪ್ರವೃತ್ತನಾಗು. ನಾನು ವೈಷ್ಣವದೀಕ್ಷೆಯನ್ನು ಸ್ವೀಕರಿಸಿ

ಶ್ರೀ ಸೂತ ಉವಾಚ:—

ಶ್ರುತ್ವೈವಂ ತದ್ವಚೋ ರಾಜಾ ಮುದಿತಶ್ಚಿಂತಯಾತುರಃ ।
ತದಾ ವಿಜ್ಞಾಪಯಾಮಾಸ ಸ್ವಾಭಿಪ್ರಾಯಂ ತಮುದ್ಧವಂ ॥ ೫೭ ॥

ಶ್ರೀ ಪರೀಕ್ಷಿದುವಾಚ:—

ಕಲಿಂ ತು ನಿಗ್ರಹಿಷ್ಯಾಮಿ ತಾತ ತೇ ವಚಸಿ ಸ್ಥಿತಃ ।
ಶ್ರೀಭಾಗವತಸಂಪ್ರಾಪ್ತಿಃ ಕಥಂ ಮಮ ಭವಿಷ್ಯತಿ ॥ ೫೮ ॥
ಅಹಂ ತು ಸಮನುಗ್ರಾಹ್ಯಸ್ತವಪಾದತಲೇ ಶ್ರಿತಃ ।

ಶ್ರೀ ಸೂತ ಉವಾಚ:—

ಶ್ರುತ್ವೈತದ್ವಚನಂ ಭೂಯೋಽಪ್ಯುದ್ಧವಸ್ತಮುವಾಚ ಹ ॥ ೫೯ ॥

ಉದ್ಧವ ಉವಾಚ:—

ರಾಜಂಶ್ಚಿಂತಾ ತು ತೇ ಕಾಽಪಿ ನೈವ ಕಾರ್ಯಾ ಕಥಂಚನ ।
ತವೈವ ಭಗವಚ್ಛಾಸ್ತ್ರೇ ಯತೋ ಮುಖ್ಯಾಧಿಕಾರಿತಾ ॥ ೬೦ ॥
ಏತಾವತ್ಕಾಲಪರ್ಯಂತಂ ಪ್ರಾಯೋ ಭಾಗವತಶ್ರುತೇಃ ।
ವಾರ್ತಾಮಪಿ ನ ಜಾನಂತಿ ಮನುಷ್ಯಾಃ ಕರ್ಮತತ್ಪರಾಃ ॥ ೬೧ ॥

---

ನಿನ್ನ ಸಹಾಯದಿಂದ ಒಂದು ತಿಂಗಳ ಅವಧಿಯಲ್ಲಿ ಶ್ರೀಮದ್ಭಾಗವತದ ಅಮೃತವನ್ನು ಪ್ರಚಾರಮಾಡಿ ಇವರೆಲ್ಲರನ್ನೂ ಶ್ರೀಮನ್ನಾರಾಯಣನ ಶಾಶ್ವತ ನಿವಾಸವಾದ ವೈಕುಂಠಕ್ಕೆ ಸೇರಿಸುವ ಪ್ರಯತ್ನವನ್ನು ಮಾಡುವೆನು.

೫೭. ಸೂತನು ಹೇಳುತ್ತಾನೆ:—ಈ ಮಾತುಗಳನ್ನು ಕೇಳಿ ಪರೀಕ್ಷಿನ್ಮಹಾರಾಜನು ಸಂತೋಷಗೊಂಡರೂ ಉತ್ತರಕ್ಷಣದಲ್ಲಿಯೇ ದೀರ್ಘಚಿಂತೆಗೊಳಗಾಗಿ ಉದ್ಧವನಿಗೆ ತನ್ನ ಮನಸ್ಸಿನ ದುಗುಡವನ್ನು ವಿಜ್ಞಾಪನೆ ಮಾಡಿಕೊಂಡನು.

೫೮. ಎಲೈ ಉದ್ಧವನೆ! ನಿನ್ನ ವಚನವನ್ನನುಸರಿಸಿ ಕಲಿಪುರುಷನನ್ನು ಖಂಡಿತವಾಗಿಯೂ ನಿಗ್ರಹಿಸುವೆನು. ಆದರೆ ಈ ಅವಸರದಲ್ಲಿ ನನಗೆ ಭಾಗವತ ಶ್ರವಣವು ತಪ್ಪಿಹೋಗುವುದು. ಮತ್ತೆ ನನಗೆ ಈ ಭಾಗವತ ಶ್ರವಣದ ಪುಣ್ಯವು ಯಾವಾಗ ಲಭಿಸುವುದು ?

೫೯. ನಿನ್ನ ಪಾದತಲದಲ್ಲಿ ಆಶ್ರಿತನಾಗಿರುವ ನಾನು ನಿನ್ನ ಅನುಗ್ರಹಕ್ಕೆ ಪಾತ್ರನಾದವನು. ಸೂತನು ಹೇಳುತ್ತಾನೆ:—ಈ ಮಾತನ್ನು ಕೇಳಿ ಉದ್ಧವನು ಮತ್ತೆ ಆತನನ್ನು ಕುರಿತು ಹೇಳತೊಡಗಿದನು.

೬೦. ಉದ್ಧವನು ಹೇಳುತ್ತಾನೆ:—ಮಹಾರಾಜನೆ! ಈ ವಿಷಯದಲ್ಲಿ ನೀನು ಯಾವ ವಿಧವಾದ ಚಿಂತೆಯನ್ನೂ ಮಾಡಬೇಕಾದುದಿಲ್ಲ. ಏಕೆಂದರೆ ಶ್ರೀಭಾಗವತ ಶಾಸ್ತ್ರದಲ್ಲಿ ನಿನಗೇ ಮುಖ್ಯವಾದ ಅಧಿಕಾರವಿರುವುದು.

೬೧. ಈ ಸಮಯದವರೆವಿಗೂ ಲೋಕದ ಜನರು ಪ್ರಾಯಶಃ ಕೇವಲ

ತ್ವತ್ಪ್ರಸಾದೇನ ಬಹವೋ ಮನುಷ್ಯಾ ಭಾರತಾಜಿರೇ ।
ಶ್ರೀಮದ್ಭಾಗವತಪ್ರಾಪ್ತ್ಯಾ ಸುಖಂ ಪ್ರಾಪ್ಸ್ಯಂತಿ ಶಾಶ್ವತಂ ॥ ೬೨ ॥
ನಂದನಂದನರೂಪಸ್ತು ಶ್ರೀಶುಕೋ ಭಗವಾನ್ ಋಷಿಃ ।
ಶ್ರೀಮದ್ಭಾಗವತಂ ತುಭ್ಯಂ ಶ್ರಾವಯಿಷ್ಯತ್ಯಸಂಶಯಃ ॥ ೬೩ ॥
ತೇನ ಪ್ರಾಪ್ಸ್ಯಸಿ ರಾಜಂಸ್ತ್ವಂ ನಿತ್ಯಂ ಧಾಮ ವ್ರಜೇಶಿತುಃ ।
ಶ್ರೀಭಾಗವತಸಂಚಾರಸ್ತತೋ ಭುವಿ ಭವಿಷ್ಯತಿ ॥ ೬೪ ॥
ತಸ್ಮಾತ್ತ್ವಂ ಗಚ್ಛ ರಾಜೇಂದ್ರ ಕಲಿನಿಗ್ರಹಮಾಚರ ।

ಶ್ರೀ ಸೂತ ಉವಾಚ :—

ಇತ್ಯುಕ್ತಸ್ತಂ ಪರಿಕ್ರಮ್ಯ ಗತೋ ರಾಜಾ ದಿಶಾಂ ಜಯೇ ॥ ೬೫ ॥
ವಜ್ರಸ್ತು ನಿಜರಾಜ್ಯೇಶಂ ಪ್ರತಿಬಾಹುಂ ವಿಧಾಯ ಚ ।
ತತ್ರೈವ ಮಾತೃಭಿಸ್ಸಾಕಂ ತಸ್ಥೌ ಭಾಗವತಾಶಯಾ ॥ ೬೬ ॥
ಅಥ ವೃಂದಾವನೇ ಮಾಸಂ ಗೋವರ್ಧನಸಮೀಪತಃ ।
ಶ್ರೀಮದ್ಭಾಗವತಾಸ್ವಾದಸ್ತೂದ್ಧವೇನ ಪ್ರವರ್ತಿತಃ ॥ ೬೭ ॥

---

ಕರ್ಮಗಳಲ್ಲಿಯೇ ತತ್ಪರರಾಗಿ ಶ್ರೀ ಭಾಗವತಶಾಸ್ತ್ರದ ಶ್ರವಣದ ವಾರ್ತೆಯನ್ನೇ ಕೇಳದವರಾಗಿರುವರು.

೬೨. ನಿನ್ನ ಮೂಲಕವಾಗಿ ಈ ಭರತಖಂಡದಲ್ಲಿ ಅನೇಕ ಜನರು ಈ ಭಾಗವತಗ್ರಂಥವನ್ನು ಹೊಂದಿ ಶಾಶ್ವತವಾದ ಸೌಖ್ಯವನ್ನು ಹೊಂದುವರು.

೬೩. ಶ್ರೀಕೃಷ್ಣನ ರೂಪವನ್ನು ತಳೆದ ಮಹಾತ್ಮನಾದ ಶ್ರೀ ಶುಕ ಮಹರ್ಷಿಯೇ ನಿನಗೆ ಭಾಗವತವನ್ನು ನಿಸ್ಸಂದೇಹವಾಗಿಯೂ ಶ್ರವಣ ಮಾಡಿಸುವನು.

೬೪. ಆ ಕಾರಣವಾಗಿ ನೀನು ಶ್ರೀಮನ್ನಾರಾಯಣನ ಶಾಶ್ವತಲೋಕವನ್ನು ಪಡೆಯುವೆ. ಎಲೈ ರಾಜನೆ! ಅಂದಿನಿಂದ ಈ ಭಾಗವತ ಗ್ರಂಥವು ಭೂಲೋಕದಲ್ಲಿ ವಿಸ್ತಾರವಾಗಿ ಪ್ರಚಾರಕ್ಕೆ ಬರುವುದು.

೬೫. ಆದುದರಿಂದ ನೀನು ಹೊರಟು ಕಲಿನಿಗ್ರಹಕಾರ್ಯದಲ್ಲಿ ನಿರತನಾಗಿರು. ಸೂತನು ಹೇಳುತ್ತಾನೆ:—ಇಂತು ಹೇಳಲ್ಪಟ್ಟ ಪರೀಕ್ಷಿನ್ಮಹಾರಾಜನು ದಿಗ್ವಿಜಯಕ್ಕಾಗಿ ಆತನಿಗೆ ನಮಸ್ಕರಿಸಿ ಹೊರಟನು.

೬೬. ವಜ್ರನಾಭನಾದರೊ ಪ್ರತಿಬಾಹುವನ್ನು ತನ್ನ ರಾಜ್ಯಕ್ಕೆ ಉತ್ತರಾಧಿಕಾರಿಯನ್ನಾಗಿ ಪಟ್ಟಾಭಿಷೇಕವನ್ನು ಮಾಡಿ ಭಾಗವತದ ಶ್ರವಣವನ್ನು ಮಾಡಬೇಕೆಂಬ ಕುತೂಹಲದಿಂದ ಬೃಂದಾವನದಲ್ಲಿಯೇ ತಾಯಿಯರೊಡನೆ ನಿಂತನು.

೬೭. ಬಳಿಕ ಗೋವರ್ಧನ ಗಿರಿಯ ಸಮೀಪದಲ್ಲಿರುವ ಬೃಂದಾವನದಲ್ಲಿ

ತಸ್ಮಿನ್ನಾಸ್ವಾದ್ಯಮಾನೇ ತು ಸಚ್ಚಿದಾನಂದರೂಪಿಣಿ ।
ಪ್ರಚಕಾಶೇ ಹರೇರ್ಲೀಲಾ ಸರ್ವತಃ ಕೃಷ್ಣ ಏವ ಚ ॥ ೬೮ ॥
ಆತ್ಮಾನಂ ಚ ತದಂತಸ್ಥಂ ಸರ್ವೇಽಪಿ ದದೃಶುಸ್ತದಾ ।
ವಜ್ರಸ್ತು ದಕ್ಷಿಣೇ ದೃಷ್ಟ್ವಾ ಕೃಷ್ಣಪಾದಸರೋರುಹೇ ॥ ೬೯ ॥
ಆತ್ಮಾನಂ ಕೃಷ್ಣವೈಧುರ್ಯಾನ್ಮುಕ್ತಸ್ತದ್ಭುವ್ಯಶೋಭತ ।
ತಾಶ್ಚ ತನ್ಮಾತರಃ ಕೃಷ್ಣೇ ರಾಸರಾತ್ರಿಪ್ರಕಾಶಿನೀ ॥ ೭೦ ॥
ಚಂದ್ರೇ ಕಲಾಪ್ರಭಾರೂಪಾಮಾತ್ಮಾನಂ ವೀಕ್ಷ್ಯ ವಿಸ್ಮಿತಾಃ ।
ಸ್ವಪ್ರೇಷ್ಠವಿರಹವ್ಯಾಧಿವಿಮುಕ್ತಾಸ್ಸ್ವಪದಂ ಯಯುಃ ॥ ೭೧ ॥
ಯೇಽನ್ಯೇ ಚ ತತ್ರ ತೇ ಸರ್ವೇ ನಿತ್ಯಲೀಲಾಂತರಂ ಗತಾಃ ।
ವ್ಯಾವಹಾರಿಕಲೋಕೇಭ್ಯಃ ಸದ್ಯೋಽದರ್ಶನಮಾಗತಾಃ ॥ ೭೨ ॥
ಗೋವರ್ಧನನಿಕುಂಜೇಷು ಗೋಷು ವೃಂದಾವನಾದಿಷು ।
ನಿತ್ಯಂ ಕೃಷ್ಣೇನ ಮೋದಂತೇ ದೃಶ್ಯಂತೇ ಪ್ರೇಮತತ್ಪರೈಃ ॥ ೭೩ ॥

---

ಒಂದು ತಿಂಗಳವರೆಗೂ ಭಾಗವತಾಮೃತದ ಪಾನದ ಉತ್ಸವವು ಉದ್ಧವನಿಂದ ನಡೆಸಲ್ಪಟ್ಟಿತು.

೬೮. ಅವರೆಲ್ಲರೂ ಆ ಅಮೃತಾಸ್ವಾದನವನ್ನು ಮಾಡುತ್ತಿರಲು ಸಚ್ಚಿದಾನಂದರೂಪಿಯಾದ ಶ್ರೀ ಹರಿಯ ಲೀಲೆಯು ಅವರ ಮನಸ್ಸುಗಳಲ್ಲಿ ಸ್ಫುರಿಸಿ ಎಲ್ಲೆಲ್ಲಿಯೂ ಶ್ರೀ ಕೃಷ್ಣನೇ ಕಾಣುತ್ತಿದ್ದನು.

೬೯–೭೧. ಮತ್ತು ತಮ್ಮ ತಮ್ಮಲ್ಲಿಯೇ ಪರಮಾತ್ಮನು ಅಂತರ್ಯಾಮಿಯಾಗಿರುವುದನ್ನು ಎಲ್ಲರೂ ಕಂಡರು. (ಅಥವಾ ಸಕಲರೂ ತಮ್ಮ ತಮ್ಮ ಆತ್ಮಗಳು ಶ್ರೀಕೃಷ್ಣನ ವಿಗ್ರಹದಲ್ಲಿ ಅಂತಃಸ್ಥವಾಗಿರುವುದನ್ನು ಕಂಡರು.) ವಜ್ರನಾಭನು ತನ್ನ ರೂಪವಾದ ಶ್ರೀಕೃಷ್ಣನ ಬಲಗಾಲಿನಲ್ಲಿ ತನ್ನ ಆತ್ಮನನ್ನು ಕಂಡು ಕೃಷ್ಣನ ವಿರಹವನ್ನು ತ್ಯಜಿಸಿ ಬೃಂದಾವನದಲ್ಲಿ ಶೋಭಿಸುತ್ತಿದ್ದನು. ಆತನ ತಾಯಿಯರೂ ರಾಸಕ್ರೀಡೆಯ ರಾತ್ರಿಯ ಚಂದ್ರನಲ್ಲಿ ಕಾಣುತ್ತಿದ್ದ ಷೋಡಶಕಳೆಗಳ ಪ್ರಭೆಯಂತೆ ತೋರುತ್ತಿರುವ ತಮ್ಮ ಆತ್ಮಗಳನ್ನು ಶ್ರೀ ಕೃಷ್ಣನಲ್ಲಿ ಕಂಡು ವಿಸ್ಮಯಾವಿಷ್ಟರಾದರು. ಅವರೆಲ್ಲರೂ ತಮ್ಮ ಪ್ರಿಯನ ವಿರಹದಿಂದುಂಟಾದ ವ್ಯಥೆಯನ್ನು ಕಳೆದುಕೊಂಡು ಆತನ ಲೋಕವನ್ನೇ ಸೇರಿದರು.

೭೨. ಅಲ್ಲಿ ನೆರೆದಿದ್ದ ಇತರ ಜನರೆಲ್ಲರೂ ಈ ನಿತ್ಯಲೀಲೆಯ ರಹಸ್ಯವನ್ನು ಅರಿತವರಾಗಿ ತತ್ಕ್ಷಣದಲ್ಲಿಯೇ ವ್ಯವಹಾರದಶೆಯಲ್ಲಿ ಮುಳುಗಿದ ಜನರಿಗೆ ಅದೃಶ್ಯರಾದರು.

೭೩. ಗೋವರ್ಧನಪರ್ವತದ ಪುಷ್ಪವಾಟಿಕೆಗಳಲ್ಲಿಯೂ, ಗೋವುಗಳಲ್ಲಿಯೂ, ಬೃಂದಾವನಾದಿ ಸ್ಥಳಗಳಲ್ಲಿಯೂ ಅವರು ಇಂದಿಗೂ ಶ್ರೀ ಕೃಷ್ಣ

ಶ್ರೀ ಸೂತ ಉವಾಚ :—

ಯ ಏತಾಂ ಭಗವತ್ ಪ್ರಾಪ್ತಿಂ ಶೃಣುಯಾಚ್ಚಾಪಿ ಕೀರ್ತಯೇತ್ ।
ತಸ್ಯ ವೈ ಭಗವತ್ ಪ್ರಾಪ್ತಿರ್ದುಃಖಹಾನಿಶ್ಚ ಜಾಯತೇ ॥ ೭೪ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ದ್ವಿತೀಯೇ ವೈಷ್ಣವಖಂಡೇ ಶ್ರೀಮದ್ಭಾಗವತಮಾಹಾತ್ಮ್ಯೇ
"ಶ್ರೀಭಾಗವತಮಾಹಾತ್ಮ್ಯವರ್ಣನಂ" ನಾಮ ತೃತೀಯೋಽಧ್ಯಾಯಃ

---

ನೊಡನೆ ನಿರಂತರವಾದ ಆನಂದವನ್ನು ಹೊಂದುತ್ತಿರುವರು. ಅವರು ಕೃಷ್ಣ ಪ್ರೇಮದಲ್ಲಿಯೇ ಲೀನರಾದವರಿಗೆ ಮಾತ್ರ ಕಾಣುತ್ತಿರುವರು.

೭೪. ಸೂತನು ಹೇಳುತ್ತಾನೆ:—ಈ ವಿಧವಾಗಿ ಶ್ರೀಕೃಷ್ಣಪತ್ನಿಯರು ಭಗವಂತನ ಸಾನ್ನಿಧ್ಯದ ಲಾಭವನ್ನು ಪಡೆದುದನ್ನು ಯಾವನು ಕೇಳುವನೊ, ಯಾವನು ಕೀರ್ತನೆ ಮಾಡುವನೊ ಅವನಿಗೆ ಭಗವತ್ಪ್ರಾಪ್ತಿಯೂ ಸಂಸಾರ ದುಃಖ ನಿವೃತ್ತಿಯೂ ಉಂಟಾಗುವುವು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀಸ್ಕಾಂದಮಹಾಪುರಾಣದ ಎರಡನೆಯ ವೈಷ್ಣವಖಂಡದ ಶ್ರೀ ಭಾಗವತಮಾಹಾತ್ಮ್ಯದಲ್ಲಿ "ಶ್ರೀಭಾಗವತಮಾಹಾತ್ಮ್ಯವರ್ಣನ"ವೆಂಬ ಮೂರನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥ ಚತುರ್ಥೋಽಧ್ಯಾಯಃ

### ಶ್ರೀಭಾಗವತ ಸ್ವರೂಪ–ಪ್ರಮಾಣ–ಪುರಾಣಶ್ರವಣ–ಶ್ರೋತೃವರ್ಣನಂ

ಋಷಯ ಊಚುಃ:—

ಸಾಧು ಸೂತ ಚಿರಂ ಜೀವ ಚಿರಮೇವಂ ಪ್ರಶಾಧಿ ನಃ ।
ಶ್ರೀಭಾಗವತಮಾಹಾತ್ಮ್ಯಮಪೂರ್ವಂ ತ್ವನ್ಮುಖಾಚ್ಛ್ರುತಂ ॥ ೧ ॥
ತತ್ಸ್ವರೂಪಪ್ರಮಾಣಂ ಚ ವಿಧಿಂ ಚ ಶ್ರವಣೇ ವದ ।
ತದ್ವಕ್ತುರ್ಲಕ್ಷಣಂ ಸೂತ ಶ್ರೋತುಶ್ಚಾಪಿ ವದಾಧುನಾ ॥ ೨ ॥

ಶ್ರೀ ಸೂತ ಉವಾಚ:—

ಶ್ರೀಮದ್ಭಾಗವತಸ್ಯಾಥ ಶ್ರೀಮದ್ಭಗವತಃ ಸದಾ ।
ಸ್ವರೂಪಮೇಕಮೇವಾಸ್ತಿ ಸಚ್ಚಿದಾನಂದಲಕ್ಷಣಂ ॥ ೩ ॥
ಶ್ರೀಕೃಷ್ಣಾಸಕ್ತಭಕ್ತಾನಾಂ ತನ್ಮಾಧುರ್ಯಪ್ರಕಾಶಕಂ ।
ಸಮುಜ್ಜೃಂಭತಿ ಯದ್ವಾಕ್ಯಂ ವಿದ್ಧಿ ಭಾಗವತಂ ಹಿ ತತ್ ॥ ೪ ॥

## ಕನ್ನಡದ ಅನುವಾದ

### ಶ್ರೀಭಾಗವತ ಸ್ವರೂಪ–ಪ್ರಮಾಣ–ಪುರಾಣಶ್ರವಣ–ಶ್ರೋತೃವರ್ಣನ

೧. ಋಷಿಗಳು ಕೇಳುತ್ತಾರೆ:—ಸೂತನೆ! ನಿನ್ನ ನಿರೂಪಣೆಯು ಬಹಳ ಉತ್ತಮವಾಗಿರುವುದು. ನೀನು ಚಿರಂಜೀವಿಯಾಗಿರು. ಬಹಳ ಕಾಲದವರೆಗೂ ಹೀಗೆಯೇ ನಮಗೆ ಶಾಸ್ತ್ರಶ್ರವಣವನ್ನು ಮಾಡಿಸುತ್ತಿರು. ಅಪೂರ್ವವಾದ ಶ್ರೀಮದ್ಭಾಗವತದ ಮಾಹಾತ್ಮ್ಯವು ನಿನ್ನ ಮುಖದಿಂದ ನಮಗೆ ಶ್ರುತವಾಯಿತು.

೨. ಅದರ ಸ್ವರೂಪವನ್ನೂ, ಪ್ರಮಾಣವನ್ನೂ, ಅದನ್ನು ಕೇಳುವುದಕ್ಕೆ ಅನುಸರಿಸಬೇಕಾದ ವಿಧಿಯನ್ನೂ ನಮಗೆ ಹೇಳು. ಎಲೈ ಸೂತನೆ! ಹಾಗೆಯೇ ಅದನ್ನು ಅನುವಾದ ಮಾಡುವವನ ಮತ್ತು ಕೇಳುವವನ ಲಕ್ಷಣಗಳನ್ನೂ ಸಹ ಈಗ ನಿರೂಪಿಸು.

೩. ಸೂತನು ಹೇಳುತ್ತಾನೆ:—ಶ್ರೀ ಭಾಗವತಕ್ಕೂ, ಶ್ರೀ ಭಗವಂತನಿಗೂ ಕೂಡ ಸತ್ಯಜ್ಞಾನಾನಂದಮಯವಾದ ಒಂದೇ ಸ್ವರೂಪವು ಯಾವಾಗಲೂ ಇರುವುದು.

೪. ಶ್ರೀ ಕೃಷ್ಣನಲ್ಲಿಯೇ ಲೀನವಾದ ಮನಸ್ಸುಳ್ಳವರಿಗೆ ಆತನ ಮಧುರ ಭಾವವನ್ನು ಪ್ರಕಾಶಗೊಳಿಸುವ ಯಾವ ವಾಕ್ಯಸರಣಿಯಿರುವುದೊ, ಅದನ್ನೇ ಭಾಗವತವೆಂದು ತಿಳಿಯಬೇಕು.

ಜ್ಞಾನವಿಜ್ಞಾನಭಕ್ತ್ಯಂಗಚತುಷ್ಟಯಪರಂ ವಚಃ ।
ಮಾಯಾಮರ್ದನದಕ್ಷಂಚ ವಿದ್ಧಿ ಭಾಗವತಂ ಚ ತತ್ ॥ ೫ ॥
ಪ್ರಮಾಣಂ ತಸ್ಯ ಕೋ ವೇದ ಹ್ಯನಂತಸ್ಯಾಕ್ಷರಾತ್ಮನಃ ।
ಬ್ರಹ್ಮಣಾ ಹರಿಣಾ ತದ್ದಿಕ್ ಚತುಃಶ್ಲೋಕ್ಯಾ ಪ್ರದರ್ಶಿತಾ ॥ ೬ ॥
ತದಾನಂತ್ಯಾವಗಾಹೇನ ಸ್ವೇಪ್ಸಿತಾವಹನಕ್ಷಮಾಃ ।
ತ ಏವ ಸಂತಿ ಭೋ ವಿಪ್ರಾ ಬ್ರಹ್ಮವಿಷ್ಣುಶಿವಾದಯಃ ॥ ೭ ॥
ಮಿತಬುದ್ಧ್ಯಾದಿವೃತ್ತೀನಾಂ ಮನುಷ್ಯಾಣಾಂ ಹಿತಾಯ ಚ ।
ಪರೀಕ್ಷಿಚ್ಛುಕಸಂವಾದೋ ಯೋಽಸೌ ವ್ಯಾಸೇನ ಕೀರ್ತಿತಃ ॥ ೮ ॥
ಗ್ರಂಥೋಽಷ್ಟಾದಶಸಾಹಸ್ರೋ ಯೋಽಸೌ ಭಾಗವತಾಭಿಧಃ ।
ಕಲಿಗ್ರಾಹಗೃಹೀತಾನಾಂ ಸ ಏವ ಪರಮಾಶ್ರಯಃ ॥ ೯ ॥
ಶ್ರೋತಾರೋಽಥ ನಿರೂಪ್ಯಂತೇ ಶ್ರೀಮದ್ವಿಷ್ಣುಕಥಾಶ್ರಯಾಃ ।
ಪ್ರವರಾ ಅವರಾಶ್ಚೇತಿ ಶ್ರೋತಾರೋ ದ್ವಿವಿಧಾ ಮತಾಃ ॥ ೧೦ ॥

೫. ಪ್ರತ್ಯಕ್ಷಜ್ಞಾನ, ಪರೋಕ್ಷಜ್ಞಾನ, ವಿಜ್ಞಾನ, ಭಕ್ತಿಗಳೆಂಬ ನಾಲ್ಕು ಅಂಶಗಳನ್ನೂ ಕೂಡಿ ಸಂಸಾರದ ಮಾಯೆಯನ್ನು ನಾಶಗೊಳಿಸಲು ಸಮರ್ಥವಾದ ಯಾವ ವಾಕ್ಯವಿರುವುದೊ, ಅದನ್ನೇ ಭಾಗವತವೆಂದು ಕರೆಯಬೇಕು.

೬. ಅನಂತವೂ, ಅಕ್ಷರಾತ್ಮಕವೂ ಆದ ಆ ಗ್ರಂಥದ ಪ್ರಮಾಣವನ್ನು ಯಾವನು ತಾನೆ ತಿಳಿದಿರುವನು? ಶ್ರೀಹರಿಯು ಹಿಂದೆ ಬ್ರಹ್ಮದೇವನಿಗೆ ನಾಲ್ಕು ಶ್ಲೋಕಗಳ ರೂಪದಿಂದ ಅದರ ಪ್ರಮಾಣವನ್ನು ಸೂಕ್ಷ್ಮವಾಗಿ ಸೂಚಿಸಿದನು.

೭. ಎಲೈ ಬ್ರಾಹ್ಮಣೋತ್ತಮರಿರಾ! ಅದರ ಅಪಾರತೆಯನ್ನು ತಿಳಿದುದರಿಂದಲೇ ಬ್ರಹ್ಮವಿಷ್ಣುಶಿವಾದಿ ದೇವತೆಗಳು ತಮ್ಮ ಅಭಿಲಾಷೆಗಳನ್ನು ಪಡೆಯಲು ಸಮರ್ಥರಾದವರು.

೮. ಅಲ್ಪಬುದ್ಧಿಯವರಾದ ಮನುಷ್ಯರ ಹಿತಕ್ಕಾಗಿಯೇ ಶುಕಪರೀಕ್ಷಿತ್ಸಂವಾದರೂಪವಾದ ಗ್ರಂಥವು ವ್ಯಾಸರಿಂದ ರಚಿಸಲ್ಪಟ್ಟು ಲೋಕದಲ್ಲಿ ಪ್ರಚಾರವಾಗುತ್ತಿರುವುದು.

೯. ಶ್ರೀಮದ್ಭಾಗವತವೆಂಬ ಹೆಸರಿನ ಈ ಗ್ರಂಥವು ಹದಿನೆಂಟುಸಾವಿರ ಶ್ಲೋಕಗಳಿಂದ ಕೂಡಿದುದು. ಕಲಿಕಾಲದ ದೋಷಗಳಿಂದ ಆವೃತರಾದ ಮಾನವರಿಗೆ ಅದೇ ಉತ್ತಮಾಶ್ರಯವಾಗಿರುವುದು.

೧೦. ಇನ್ನು ಶ್ರೀವಿಷ್ಣು ಚರಿತ್ರೆಯಲ್ಲಿಯೇ ಅಭಿಲಾಷೆಯುಳ್ಳ ಶ್ರೋತೃಗಳು ಯಾರೆಂಬುದನ್ನು ನಿರೂಪಿಸುವೆನು. ಶ್ರೋತೃಗಳಲ್ಲಿ ಉತ್ತಮರೆಂದೂ ಅಧಮರೆಂದೂ ಎರಡು ಪ್ರಕಾರದವರಿರುವರು.

ಪ್ರವರಾಶ್ಚಾತಕೋ ಹಂಸಃ ಶುಕೋ ಮೀನಾದಯಸ್ತಥಾ ।
ಅವರಾ ವೃಕಭೂರುಂಡವೃಷೋಷ್ಟ್ರಾದ್ಯಾಃ ಪ್ರಕೀರ್ತಿತಾಃ ॥ ೧೧ ॥
ಅಖಿಲೋಪೇಕ್ಷಯಾ ಯಸ್ತು ಕೃಷ್ಣಶಾಸ್ತ್ರಶ್ರುತೌ ವ್ರತೀ ।
ಸ ಚಾತಕೋ ಯಥಾಂಭೋದಮುಕ್ತೇ ಪಾಥಸಿ ಚಾತಕಃ ॥ ೧೨ ॥
ಹಂಸಃ ಸ್ವಾತ್ತಸಾರಮಾದತ್ತೇ ಯಃ ಶ್ರೋತಾ ವಿವಿಧಾಚ್ಛ್ರುತಾತ್ ।
ದುಗ್ಧೇನೈಕ್ಯಂ ಗತಾತ್ತೋಯಾದ್ಯಥಾ ಹಂಸೋಽಮಲಂ ಪಯಃ ॥ ೧೩ ॥
ಶುಕಃ ಸುಷ್ಠು ಮಿತಂ ವಕ್ತಿ ವ್ಯಾಸಂ ಶ್ರೋತೄಂಶ್ಚ ಹರ್ಷಯನ್ ।
ಸುಪಾಠಿತಃ ಶುಕೋ ಯದ್ವಚ್ಛಿಕ್ಷಕಂ ಪಾರ್ಶ್ವಗಾನಪಿ ॥ ೧೪ ॥
ಶಬ್ದಂ ನಾನಿಮಿಷೋ ಜಾತು ಕರೋತ್ಯಾಸ್ವಾದಯನ್ರಸಂ ।
ಶ್ರೋತಾ ಸ್ನಿಗ್ಧೋ ಭವೇನ್ಮೀನೋ ಮೀನಃ ಕ್ಷೀರನಿಧೌ ಯಥಾ ॥ ೧೫ ॥
ಯಸ್ತ್ವವನ್ರಸಿಕಾಂ ಛ್ರೋತೄನ್ನಿರೌತ್ಯಜ್ಞೋ ವೃಕೋ ಹಿಸಃ ।
ವೇಣುಸ್ವನರಸಾಸಕ್ತಾನ್ ವೃಕೋಽರಣ್ಯೇ ಮೃಗಾನ್ಯಥಾ ॥ ೧೬ ॥

---

೧೧. ಉತ್ತಮರು ಚಾತಕಪಕ್ಷಿ, ಹಂಸ, ಶುಕ, ಮೀನುಗಳನ್ನು ಹೋಲುವವರು. ಅಧಮರು ತೋಳ, ಭೂರುಂಡಪಕ್ಷಿ, ಎತ್ತು ಮತ್ತು ಉಷ್ಟ್ರ (ಒಂಟೆ)ಗಳನ್ನು ಹೋಲುವವರೆಂದು ಹೇಳಲ್ಪಟ್ಟಿರುವರು.

೧೨. ಚಾತಕಪಕ್ಷಿಯು ಎಲ್ಲ ಜಲವನ್ನೂ ದೂರಮಾಡಿ ಮೇಘದಿಂದ ಬೀಳುವ ಹನಿಗಳನ್ನೇ ಹೇಗೆ ಸ್ವೀಕರಿಸುವುದೊ, ಹಾಗೆಯೇ ಉತ್ತಮ ಭಕ್ತನು ಸಕಲ ವ್ಯಾಪಾರಗಳನ್ನೂ ವರ್ಜಿಸಿ ಭಾಗವತ ಶಾಸ್ತ್ರದ ಶ್ರವಣದಲ್ಲಿಯೇ ತತ್ಪರನಾಗಿರುವನು.

೧೩. ಹಾಲಿನಿಂದ ಬೆರಸಿದ ನೀರನ್ನು ಮುಂದಿಟ್ಟರೆ ಹಂಸಪಕ್ಷಿಯು ಹೇಗೆ ಪರಿಶುದ್ಧವಾದ ಕ್ಷೀರವನ್ನು ಮಾತ್ರ ಗ್ರಹಣಮಾಡುವುದೊ, ಹಾಗೆಯೇ ಆತನು ಕೇಳಿದ ವಿಷಯಗಳಲ್ಲೆಲ್ಲ ಸಾರತರವಾದ ವಿಷಯುಗಳನ್ನೇ ಸ್ವೀಕರಿಸುವನು.

೧೪. ಚೆನ್ನಾಗಿ ಶಿಕ್ಷೆಯನ್ನು ಹೊಂದಿದ ಗಿಳಿಯು ತನ್ನ ಮೃದುವಾದ ಮಿತಭಾಷಣದಿಂದ ಶಿಕ್ಷಕನನ್ನೂ, ಶ್ರೋತೃಗಳನ್ನೂ ಹೇಗೆ ಆನಂದಗೊಳಿಸುವುದೊ, ಹಾಗೆಯೇ ಶುಕನು ವ್ಯಾಸರನ್ನೂ ಶ್ರೋತೃಗಳನ್ನೂ ತನ್ನ ಮಾತುಗಳಿಂದ ಸಂತೋಷಪಡಿಸುವನು.

೧೫. ಮೀನು ಸಮುದ್ರದಲ್ಲಿರುವ ರಸಾಸ್ವಾದವನ್ನು ಮಾಡುತ್ತಿದ್ದರೂ ನಿಶ್ಶಬ್ದವಾಗಿ ಹೇಗೆ ಸುಖಪಡುವುದೊ, ಹಾಗೆಯೇ ಶ್ರೋತೃವು ಸ್ನೇಹಪೂರಿತನಾಗಿ ಭಾಗವತ ರಸಾಸ್ವಾದವನ್ನು ಮಾಡುವಾಗ ಎಂದಿಗೂ ಮಾತನಾಡಲಾರನು.

೧೬. ಕೊಳಲಿನ ಧ್ವನಿಯ ರಸದಲ್ಲಿಯೇ ಆಸಕ್ತವಾಗಿರುವ ಮನಸ್ಸಿನ ಜಿಂಕೆಗಳನ್ನು ತೋಳವು ತನ್ನ ಕೂಗಿನಿಂದ ಹೇಗೆ ಹಿಂಸೆಗೊಳಿಸುವುದೊ,

ಭೂರುಂಡಃ ಶಿಕ್ಷಯೇದನ್ಯಾನ್ ಶೃತ್ವಾ ನ ಸ್ವಯಮಾಚರೇತ್ ।
ಯಥಾ ಹಿಮವತಃ ಶೃಂಗೇ ಭೂರುಂಡಾಖ್ಯೋ ವಿಹಂಗಮಃ ॥ ೧೭ ॥
ಸರ್ವಂ ಶೃತಮುಪಾದತ್ತೇ ಸಾರಾಸಾರಾಂಧಧೀರ್ವೃಷಃ ।
ಸ್ವಾದು ದ್ರಾಕ್ಷಾಂ ಖಲಿಂ ಚಾಪಿ ನಿರ್ವಿಶೇಷಂ ಯಥಾ ವೃಷಃ ॥ ೧೮ ॥
ಸವುಷ್ಟ್ರೋ ಮಧುರಂ ಮುಂಚನ್ವಿಪರೀತೇ ರಮೇತ ಯಃ ।
ಯಥಾ ನಿಂಬಂ ಚರತ್ಯುಷ್ಟ್ರೋ ಹಿತ್ವಾಽಽಮ್ರಮಪಿ ತದ್ಯುತಂ ॥ ೧೯ ॥
ಅನ್ಯೇಽಪಿ ಬಹವೋ ಭೇದಾ ದ್ವಯೋರ್ಭೃಂಗಖರಾದಯಃ ।
ವಿಜ್ಞೇಯಾಸ್ತತ್ತದಾಚಾರೈಸ್ತತ್ತತ್ಪ್ರಕೃತಿಸಂಭವೈಃ ॥ ೨೦ ॥
ಯಃ ಸ್ಥಿತ್ವಾಽಭಿಮುಖಂ ಪ್ರಣಮ್ಯ ವಿಧಿವತ್ತ್ಯಕ್ತಾನ್ಯವಾದೋಹರೇ
ರ್ಲೀಲಾಃ ಶ್ರೋತುಮಭೀಪ್ಸಿತೇಽತಿನಿಪುಣೋನಮ್ರೋಽಥಕ್ಲೃಪ್ತಾಂಜಲಿಃ॥
ಶಿಷ್ಯೋ ವಿಶ್ವಸಿತೋಽನುಚಿಂತನಪರಃ ಪ್ರಶ್ನೇಽನುರಕ್ತಃ ಶುಚಿ
ರ್ನಿತ್ಯಂ ಕೃಷ್ಣಜನಪ್ರಿಯೋ ನಿಗದಿತಃ ಶ್ರೋತಾ ಸ ವೈ ವಕ್ತೃಭಿಃ ॥ ೨೧ ॥

ಹಾಗೆಯೇ ವೃಕಸಮಾನನಾದ ಪಾಠಕನು ರಸಿಕರಾದ ಶ್ರೋತೃಗಳನ್ನು ತನ್ನ ವಿರಾವಗಳಿಂದ ದುಃಖಗೊಳಿಸುವನು.

೧೭. ಹಿಮವತ್ಪರ್ವತದ ಶೃಂಗದಲ್ಲಿ ಭೂರುಂಡವೆಂಬ ಪಕ್ಷಿವಿಶೇಷವಿರುವುದು. ಅದರಂತೆಯೇ ಮತ್ತೊಂದು ಜಾತಿಯ ಪಾಠಕನು ತತ್ತ್ವವನ್ನು ಕೇಳಿ ಇತರರಿಗೆ ಹೇಳುವನೇ ಹೊರತು ತಾನು ಮಾತ್ರ ಆಚರಣೆಗೆ ತರುವುದಿಲ್ಲ.

೧೮-೧೯. ವೃಷಭದಂತಿರುವ ಮತ್ತೊಬ್ಬ ಕೇಳುಮಟ್ಟದ ಶ್ರೋತೃವೊಬ್ಬನಿರುವನು. ಎತ್ತು ಹೇಗೆ ದ್ರಾಕ್ಷಿಯೇ ಮೊದಲಾದ ಸಿಹಿ ಪದಾರ್ಥಗಳನ್ನೂ ಕಹಿ ಪದಾರ್ಥಗಳನ್ನೂ ಭೇದಬುದ್ಧಿಯಿಲ್ಲದೆ ಸೇವಿಸುವುದೊ, ಹಾಗೆಯೇ ಈ ಶ್ರೋತೃವು ಕೇಳಿದುದೆಲ್ಲವನ್ನೂ ನಿರ್ವಿಶೇಷವಾಗಿ ಮನಸ್ಸಿಗೆ ತಂದುಕೊಳ್ಳುವನೇ ಹೊರತು ಅವುಗಳ ಸಾರಾಸಾರಗಳನ್ನು ವಿಚಾರಮಾಡುವುದಿಲ್ಲ. ಮಧುರವಾದ ನಾಮಾಮೃತದ ಸವಿಯನ್ನು ಬಿಟ್ಟು ಅನುವಾದಕನ ಸ್ಖಾಲಿತ್ಯದೋಷಗಳನ್ನೇ ಕಾಣುತ್ತಿರುವ ಶ್ರೋತೃವು ಸಿಹಿಯಾದ ಮಾವಿನ ಹಣ್ಣನ್ನು ಬಿಟ್ಟು ಬೇವಿನ ಹಣ್ಣನ್ನು ತಿನ್ನುವ ಒಂಟೆಗೆ ಸಮಾನನಾದವನೆಂದು ತಿಳಿಯಬೇಕು.

೨೦. ಹೀಗೆಯೇ ಪಾಠಕರಲ್ಲಿಯೂ ಶ್ರೋತೃಗಳಲ್ಲಿಯೂ ಭೃಂಗ, ಖರ ಮುಂತಾದುವುಗಳನ್ನು ಹೋಲುವ ಅನೇಕ ಬಗೆಯ ಜನರಿರುವರು. ಅವರವರ ಸ್ವಭಾವಗಳನ್ನನುಸರಿಸಿದ ಅವರವರ ಆಚಾರಗಳಿಂದ ಆಯಾ ಜಾತಿಯವರನ್ನು ತಿಳಿಯಬೇಕು.

೨೧. ಯಾವನು ಪೌರಾಣಿಕನಿಗೆ ಅಭಿಮುಖನಾಗಿ ನಿಂತು, ವಿಧ್ಯುಕ್ತ ರೀತಿಯಿಂದ ನಮಸ್ಕರಿಸಿ, ಇತರ ವಾದಗಳೆಲ್ಲವನ್ನೂ ತ್ಯಜಿಸಿ, ಶ್ರೀ ಕೃಷ್ಣನ

ಭಗವನ್ಮತಿರನಪೇಕ್ಷಃ ಸುಹೃದೋ ದೀನೇಷು ಸಾನುಕಂಪೋ ಯಃ ।
ಬಹುಧಾ ಬೋಧನಚತುರೋ ವಕ್ತಾ ಸಂಮಾನಿತೋ ಮುನಿಭಿಃ ॥ ೨೨ ॥
ಅಥ ಭಾರತ ಭೂಸ್ಥಾನೇ ಶ್ರೀಭಾಗವತಸೇವನೇ ।
ವಿಧಿಂ ಶೃಣುತ ಭೋ ವಿಪ್ರಾ ಯೇನ ಸ್ಯಾತ್ಸುಖಸಂತತಿಃ ॥ ೨೩ ॥
ರಾಜಸಂ ಸಾತ್ತ್ವಿಕಂ ಚಾಪಿ ತಾಮಸಂ ನಿರ್ಗುಣಂ ತಥಾ ।
ಚತುರ್ವಿಧಂ ತು ವಿಜ್ಞೇಯಂ ಶ್ರೀಭಾಗವತಸೇವನಂ ॥ ೨೪ ॥
ಸಪ್ತಾಹಂ ಯಜ್ಞವದ್ಯತ್ತು ಸಶ್ರಮಂ ಸತ್ವರಂ ಮುದಾ ।
ಸೇವಿತಂ ರಾಜಸಂ ತತ್ತು ಬಹುಪೂಜಾದಿಶೋಭನಂ ॥ ೨೫ ॥
ಮಾಸೇನ ಋತುನಾ ವಾಪಿ ಶ್ರವಣಂ ಸ್ವಾದುಸಂಯುತಂ ।
ಸಾತ್ತ್ವಿಕಂ ಯದನಾಯಾಸಂ ಸಮಸ್ತಾನಂದವರ್ಧನಂ ॥ ೨೬ ॥

ಲೀಲೆಗಳನ್ನೇ ಕೇಳುವ ಕುತೂಹಲವುಳ್ಳವನೊ, ಅತಿಮೇಧಾವಿಯಾದರೂ ಯಾವನು ನಮ್ರನಾಗಿ ಅಂಜಲಿಬಂಧವನ್ನು ಮಾಡಿಕೊಂಡು ಕುಳಿತಿರುವನೊ, ಯಾವನು ಗುರುವಿನ ವಿಶ್ವಾಸಕ್ಕೆ ಪಾತ್ರನಾದ ಶಿಷ್ಯನಾಗಿ ಹೇಳಿದ ವಿಷಯ ಗಳನ್ನೇ ಚಿಂತನಮಾಡುತ್ತ ಪ್ರಶ್ನೆಮಾಡುವರಲ್ಲಿ ಅನುರಕ್ತನಾಗಿರುವನೊ, ಯಾವನು ನಿತ್ಯವೂ ಶೌಚಾಚಾರಪರನಾಗಿ ಭಗವದ್ಭಕ್ತರಿಗೆ ಪ್ರಿಯನಾಗಿ ರುವನೊ, ಅವನನ್ನೇ ಪೌರಾಣಿಕರು ಉತ್ತಮಶ್ರೋತೃವೆಂದು ಹೇಳುವರು.

೨೨. ಭಗವಂತನಲ್ಲಿಯೇ ನಟ್ಟ ಮನಸ್ಸುಳ್ಳವನಾಗಿ ಇತರಾಪೇಕ್ಷೆಗಳನ್ನು ಬಿಟ್ಟು, ಶುದ್ಧಬುದ್ಧಿಯುಕ್ತನೂ ದೀನಾನುಕಂಪಿಯೂ ಆಗಿ, ಕೇಳುವವರಿಗೆ ಹಿತವಾಗುವಂತೆ ಅನೇಕ ವಿಧಗಳಲ್ಲಿ ಬೋಧಿಸುವ ಚತುರತೆಯುಳ್ಳವನನ್ನೇ ಮಹರ್ಷಿಗಳು ಪೌರಾಣಿಕನೆಂದು ಮರ್ಯಾದೆಮಾಡುವರು.

೨೩. ಎಲೈ ಬ್ರಾಹ್ಮಣರಿರಾ! ಈ ಭರತಖಂಡದಲ್ಲಿ ಶ್ರೀಮದ್ಭಾಗವತದ ಶ್ರವಣವನ್ನು ಮಾಡುವ ವಿಧಿಯನ್ನು ಹೇಳುವೆನು, ಕೇಳಿರಿ. ಅದರಿಂದಲೇ ಸಕಲ ಸೌಖ್ಯಪರಂಪರೆಗಳೂ ಪ್ರಾಪ್ತವಾಗುವುವು.

೨೪. ಭಾಗವತ ಸೇವನೆಯು ಸಾತ್ತ್ವಿಕ, ರಾಜಸ, ತಾಮಸ ಮತ್ತು ನಿರ್ಗುಣಗಳೆಂದು ನಾಲ್ಕು ಪ್ರಕಾರದ್ದಾಗಿರುವುದು ಎಂದು ತಿಳಿಯಬೇಕು.

೨೫. ಯಜ್ಞವನ್ನು ಮಾಡಿದಂತೆ ಏಳು ದಿವಸಗಳೊಳಗಾಗಿ ಕಷ್ಟದಿಂದಲೂ ತ್ವರೆಯಾಗಿಯೂ ಸಂತೋಷದಿಂದಲೂ ಮಾಡಲ್ಪಟ್ಟು ಅನೇಕ ಪೂಜಾದಿ ವಿಶೇಷಗಳಿಂದ ಶೋಭಿಸುವುದೇ ರಾಜಸ ಸೇವೆಯು.

೨೬. ಒಂದು ತಿಂಗಳಲ್ಲಾಗಲಿ ಎರಡು ತಿಂಗಳಲ್ಲಾಗಲಿ ಸಂಪೂರ್ಣ ರಸಾಸ್ವಾದದೊಡನೆ ಅನಾಯಾಸವಾಗಿಯೂ ವಕ್ತೃಶ್ರೋತೃಗಳಿಗೆ ಆನಂದ ವುಂಟಾಗುವಂತೆಯೂ ಮಾಡಿದ ಶ್ರವಣವೇ ಸಾತ್ತ್ವಿಕಸೇವೆಯೆನಿಸುವುದು.

ತಾಮಸಂ ಯತ್ತು ವರ್ಷೇಣ ಸಾಲಸಂ ಶ್ರದ್ಧಯಾಯುತಂ ।
ವಿಸ್ಮೃತಿಸ್ಮೃತಿಸಂಯುಕ್ತಂ ಸೇವನಂ ತಚ್ಚ ಸೌಖ್ಯದಂ ॥ ೨೭ ॥
ವರ್ಷಮಾಸದಿನಾನಾಂತು ವಿಮುಚ್ಯ ನಿಯಮಾಗ್ರಹಂ ।
ಸರ್ವದಾ ಪ್ರೇಮಭಕ್ತ್ಯೈವ ಸೇವನಂ ನಿರ್ಗುಣಂ ಮತಂ ॥ ೨೮ ॥
ಪಾರೀಕ್ಷಿತೇಽಪಿ ಸಂವಾದೇ ನಿರ್ಗುಣಂ ತತ್ಪ್ರಕೀರ್ತಿತಂ ।
ತತ್ರ ಸಪ್ತದಿನಾಖ್ಯಾನಂ ತದಾಯುರ್ದಿನಸಂಖ್ಯಯಾ ॥ ೨೯ ॥
ಅನ್ಯತ್ರ ತ್ರಿಗುಣಂ ಚಾಪಿ ನಿಗುಣಂ ಚ ಯಥೇಚ್ಛಯಾ ।
ಯಥಾ ಕಥಂಚಿತ್ ಕರ್ತವ್ಯಂ ಸೇವನಂ ಭಗವಚ್ಛ್ರುತೇಃ ॥ ೩೦ ॥
ಯೇ ಶ್ರೀಕೃಷ್ಣವಿಹಾರೈಕಭಜನಾಸ್ವಾದಲೋಲುಪಾಃ ।
ಮುಕ್ತಾವಪಿ ನಿರಾಕಾಂಕ್ಷಾಸ್ತೇಷಾಂ ಭಾಗವತಂ ಧನಂ ॥ ೩೦ ॥
ಯೇಽಪಿ ಸಂಸಾರಸಂತಾಪನಿರ್ವಿಣ್ಣಾ ಮೋಕ್ಷಕಾಂಕ್ಷಿಣಃ ।
ತೇಷಾಂ ಭವೌಷಧಂ ಚೈತತ್ಕಲೌ ಸೇವ್ಯಂ ಪ್ರಯತ್ನತಃ ॥ ೩೨ ॥

---

೨೭. ಒಂದು ವರ್ಷದವರೆಗೂ ಆಲಸ್ಯದಿಂದ ಕೂಡಿ ಶ್ರದ್ಧಾಭಕ್ತಿಗಳಿಲ್ಲದೆ ಪೂರ್ವಾಪರಗಳ ಸ್ಮರಣ ವಿಸ್ಮೃತಿಗಳೊಡನೆ ಕೂಡಿದುದಾಗಿ ಮಾಡಿದುದೇ ತಾಮಸ ಸೇವೆಯು. ಅದೂ ಸಹ ಸೌಖ್ಯವನ್ನು ಕೊಡುವುದು.

೨೮. ವರ್ಷ, ಮಾಸ, ದಿನಗಳೆಂಬ ಗಣನೆಯನ್ನೇ ಇಟ್ಟುಕೊಳ್ಳದೆ ಆಗ್ರಹ ರಹಿತನಾಗಿ ನಿರಂತರವೂ ಪ್ರೇಮ ಭಕ್ತಿಯಿಂದಲೇ ಮಾಡುವ ಸೇವೆಯು ನಿರ್ಗುಣವೆನಿಸುವುದು.

೨೯. ಪರೀಕ್ಷಿದ್ರಾಜನ ವಿಷಯದಲ್ಲಿ ಶುಕನಿರೂಪಣವೂ ನಿರ್ಗುಣವೆಂದೇ ಹೇಳಲ್ಪಟ್ಟಿರುವುದು. ಸಪ್ತಾಹದ ಕ್ರಮವು ಆತನ ಆಯುಸ್ಸಿನ ಪರಿಮಿತಿಯನ್ನ ನುಸರಿಸಿ ನಡೆಸಲ್ಪಟ್ಟಿತೇ ಹೊರತು ಬೇರೆ ಕಾರಣದಿಂದಲ್ಲವು.

೩೦. ಇತರ ಸ್ಥಳಗಳಲ್ಲಿ ಮೊದಲನೆಯ ಮೂರು ಕ್ರಮಗಳನ್ನೂ, ನಿರ್ಗುಣ ಸೇವೆಯನ್ನು ಸ್ವೇಚ್ಛೆಯಿಂದಲೂ ಮಾಡಬೇಕು. ಪರಂತು ಯಾವ ವಿಧದಿಂದಾದರೂ ಸರ್ವ ಕಾಲದಲ್ಲಿಯೂ ಶ್ರೀಮದ್ಭಾಗವತದ ಶ್ರವಣವು ನಡೆಯುತ್ತಿರಲೇಬೇಕು.

೩೧. ಯಾರು ಶ್ರೀ ಕೃಷ್ಣನ ಲೀಲೆಗಳ ಭಜನಾಮೃತದಿಂದಲೇ ತೃಪ್ತರಾಗಿ ಮೋಕ್ಷವನ್ನೂ ಸಹ ಅಪೇಕ್ಷಿಸುವುದಿಲ್ಲವೊ, ಅವರಿಗೆ ಶ್ರೀಮದ್ಭಾಗವತವು ಧನರೂಪವಾಗಿರುವುದು.

೩೨. ಯಾರು ಸಂಸಾರದ ಅನೇಕ ಕಷ್ಟಗಳಲ್ಲಿ ಬಿದ್ದು ನಿರ್ವೇದವನ್ನು ಹೊಂದಿ ಮೋಕ್ಷವನ್ನು ಬಯಸುತ್ತಿರುವರೊ, ಅವರಿಂದ ಕಲಿಯುಗದಲ್ಲಿ ಸಂಸಾರಾಮಯೌಷಧವಾದ ಈ ಪುರಾಣವು ಅವಶ್ಯಕವಾಗಿ ಸೇವಿಸಲ್ಪಡಬೇಕು.

ಯೇ ಚಾಪಿ ವಿಷಯಾರಾಮಾಃ ಸಾಂಸಾರಿಕಸುಖಸ್ಪೃಹಾಃ ।
ತೇಷಾಂ ತು ಕರ್ಮಮಾರ್ಗೇಣ ಯಾ ಸಿದ್ಧಿಃ ಸಾಽಧುನಾ ಕಲೌ ॥ ೩೩ ॥
ಸಾಮರ್ಥ್ಯಧನವಿಜ್ಞಾನಾಭಾವಾದತ್ಯಂತದುರ್ಲಭಾ ।
ತಸ್ಮಾತ್ತೈರಪಿ ಸಂಸೇವ್ಯಾ ಶ್ರೀಮದ್ಭಾಗವತೀ ಕಥಾ ॥ ೩೪ ॥
ಧನಂ ಪುತ್ರಾಂಸ್ತಥಾ ದಾರಾನ್ವಾಹನಾದಿ ಯಶೋ ಗೃಹಾನ್ ।
ಅಸಾಪತ್ನ್ಯಂ ಚ ರಾಜ್ಯಂ ಚ ದದ್ಯಾದ್ಭಾಗವತೀ ಕಥಾ ॥ ೩೫ ॥
ಇಹ ಲೋಕೇ ವರಾನ್ ಭುಂಕ್ತ್ವಾ ಭೋಗಾನ್ವೈ ಮನಸೇಪ್ಸಿತಾನ್ ।
ಶ್ರೀ ಭಾಗವತಸಂಗೇನ ಯಾತ್ಯಂತೇ ಶ್ರೀಹರೇಃ ಪದಂ ॥ ೩೬ ॥
ಯತ್ರ ಭಾಗವತೀ ವಾರ್ತಾ ಯೇ ಚ ತಚ್ಛ್ರವಣೇ ರತಾಃ ।
ತೇಷಾಂ ಸಂಸೇವನಂ ಕುರ್ಯಾದ್ದೇಹೇನ ಚ ಧನೇನ ಚ ॥ ೩೭ ॥
ತದನುಗ್ರಹತೋಽಸ್ಯಾಪಿ ಶ್ರೀ ಭಾಗವತಸೇವನಂ ।
ಶ್ರೀ ಕೃಷ್ಣವ್ಯತಿರಿಕ್ತಂ ಯತ್ತತ್ಸರ್ವಂ ಧನಸಂಜ್ಞಿತಂ ॥ ೩೮ ॥

---

೩೩. ಯಾರು ವಿಷಯಸುಖಾಭಿಲಾಷಿಗಳಾಗಿ ಸಂಸಾರಿಕವಾದ ಅನುಕೂಲಗಳನ್ನೇ ಅಪೇಕ್ಷಿಸುವರೊ, ಅವರಿಗೆ ಕರ್ಮಮಾರ್ಗದಿಂದುಂಟಾಗುವ ಸಿದ್ಧಿಯೇ ಕಲಿಯುಗದಲ್ಲಿ ಈ ಭಾಗವತ ಸೇವನೆಯಿಂದ ಲಭಿಸುವುದು.

೩೪. ಸಾಮರ್ಥ್ಯ, ಧನ, ಪರಮಾತ್ಮನ ಮಾಹಾತ್ಮ್ಯಜ್ಞಾನ ಮುಂತಾದುವುಗಳಿಲ್ಲದುದರಿಂದ ನಿಷ್ಕಾಮಕರ್ಮದ ಸಿದ್ಧಿಯೂ ಅತ್ಯಂತ ದುರ್ಲಭವಾಗಿರುವುದು. ಆದುದರಿಂದ ಅವರೂ ಸರ್ವಕಾಮಫಲಪ್ರದವಾದ ಶ್ರೀಮದ್ಭಾಗವತವನ್ನು ಸೇವಿಸಬೇಕು.

೩೫. ಸಂಸಾರಿಗಳಿಗೆ ಭಾಗವತಶ್ರವಣವು ಧನವನ್ನೂ, ಪುತ್ರಸಂತತಿಯನ್ನೂ, ಹೆಂಡತಿಯನ್ನೂ, ವಾಹನಸೌಕರ್ಯಗಳನ್ನೂ, ಯಶಸ್ಸನ್ನೂ, ಗೃಹಕ್ಷೇತ್ರಾದಿಗಳನ್ನೂ, ಅಸಾಪತ್ನ್ಯವಾದ (ದಾಯಾದಿಗಳಿಲ್ಲ), ರಾಜ್ಯಭೋಗಗಳನ್ನೂ ಸಂಪಾದಿಸಿಕೊಡುವುದು.

೩೬. ಅಂತಹ ಮಾನವನು ಈ ಲೋಕದಲ್ಲಿ ಮನಸ್ಸಿನಲ್ಲಿ ಅಪೇಕ್ಷಿಸಿದ ಉತ್ತಮ ಭೋಗಗಳನ್ನೆಲ್ಲ ಅನುಭವಿಸಿ ಭಾಗವತಶ್ರವಣದ ಪುಣ್ಯದಿಂದ ದೇಹಾವಸಾನವಾಗಲು ಶ್ರೀ ಹರಿಯ ಲೋಕವನ್ನು ಕುರಿತು ಹೊರಡುವನು.

೩೭. ಎಲ್ಲಿ ಭಾಗವತದ ಶ್ರವಣವು ನಡೆಯುತ್ತಿರುವುದೊ, ಮತ್ತು ಆ ಶ್ರವಣದಲ್ಲಿಯೇ ಯಾವ ಭಕ್ತರು ನಿರತರಾಗಿರುವರೊ, ಅವರಿಗೆ ಶರೀರದಿಂದಲೂ, ಧನದಿಂದಲೂ ಪ್ರತಿಮಾನವನೂ ಸೇವೆಯನ್ನು ಮಾಡಬೇಕು.

೩೮. ಅವರ ಅನುಗ್ರಹದಿಂದ ಅವನಿಗೂ ಶ್ರೀಮದ್ಭಾಗವತಸೇವೆಯು ಲಭಿಸುವುದು. ಶ್ರೀ ಕೃಷ್ಣನಲ್ಲದೆ ಅನ್ಯವಾದುದೆಲ್ಲವೂ ಲೌಕಿಕಧನವೆಂದು

ಕೃಷ್ಣಾರ್ಥೀತಿ ಧನಾರ್ಥೀತಿ ಶ್ರೋತಾ ವಕ್ತಾ ದ್ವಿಧಾ ಮತಃ ।
ಯಥಾ ವಕ್ತಾ ತಥಾ ಶ್ರೋತಾ ತತ್ರ ಸೌಖ್ಯಂ ವಿವರ್ಧತೇ ॥ ೩೯ ॥
ಉಭಯೋರ್ವೈಪರೀತ್ಯೇತು ರಸಾಭಾಸೇ ಫಲಚ್ಯುತಿಃ ।
ಕಿಂತು ಕೃಷ್ಣಾರ್ಥಿನಾಂ ಸಿದ್ಧಿರ್ವಿಲಂಬೇನಾಪಿ ಜಾಯತೇ ॥ ೪೦ ॥
ಧನಾರ್ಥಿನಸ್ತು ಸಂಸಿದ್ಧಿರ್ವಿಧಿಸಂಪೂರ್ಣತಾವಶಾತ್ ।
ಕೃಷ್ಣಾರ್ಥಿನೋಽಗುಣಸ್ಯಾಪಿ ಪ್ರೇಮೈವ ವಿಧಿರುತ್ತಮಃ ॥ ೪೧ ॥
ಆಸಮಾಪ್ತಿ ಸಕಾಮೇನ ಕರ್ತವ್ಯೋ ಹಿ ವಿಧಿಃ ಸ್ವಯಂ ।
ಸ್ನಾತೋಽನಿತ್ಯಕ್ರಿಯಾಂ ಕೃತ್ವಾ ಪ್ರಾಶ್ಯ ಪಾದೋದಕಂ ಹರೇಃ ॥ ೪೨ ॥
ಪುಸ್ತಕಂ ಚ ಗುರುಂ ಚೈವ ಪೂಜಯಿತ್ವೋಪಚಾರತಃ ।
ಬ್ರೂಯಾದ್ವಾ ಶೃಣುಯಾದ್ವಾಪಿ ಶ್ರೀಮದ್ಭಾಗವತಂ ಮುದಾ ॥ ೪೩ ॥
ಪಯಸಾ ವಾ ಹವಿಷ್ಯೇಣ ಮೌನಂ ಭೋಜನಮಾಚರೇತ್ ।
ಬ್ರಹ್ಮಚರ್ಯಮಧಃಸುಪ್ತಿಂ ಕ್ರೋಧಲೋಭಾದಿವರ್ಜನಂ ॥ ೪೪ ॥

---

ಕರೆಯಲ್ಪಡುವುದು. ಶ್ರೋತೃಗಳೂ ಪೌರಾಣಿಕರೂ ಕೃಷ್ಣಾರ್ಥಿಗಳೆಂದೂ ಧನಾರ್ಥಿಗಳೆಂದೂ ಎರಡುವಿಧಗಳಾಗಿರುವರು.

೩೯. ಶ್ರೋತೃವೂ, ವಕ್ತೃವೂ ಒಂದೇ ವಿಧದವರಾದರೆ ಪರಸ್ಪರ ಆನಂದವನ್ನು ಅಭಿವೃದ್ಧಿಗೊಳಿಸುವರು. ಇಬ್ಬರೂ ವಿಪರೀತ ಸ್ವಭಾವದವರಾದರೆ ರಸಾಭಾಸವುಂಟಾಗಿ ಪುರಾಣಶ್ರವಣವು ನಿಷ್ಫಲವಾಗುವುದು.

೪೦. ಆದರೆ ಕೃಷ್ಣಾರ್ಥಿಗಳಾದ ಶ್ರೋತೃಗಳಿಗೂ ವಕ್ತೃಗಳಿಗೂ ಬಹಳ ಕಾಲದ ಮೇಲಾದರೂ ಸಿದ್ಧಿಯು ಲಭಿಸುವುದು. ಧನಾರ್ಥಿಗಳಿಗೆ ಮಾತ್ರ ವಿಧಿವಿಶೇಷಗಳನ್ನು ಸಂಪೂರ್ಣವಾಗಿ ನೆರವೇರಿಸಿದ ಹೊರತು ಸಿದ್ಧಿಯು ಲಭಿಸಲಾರದು.

೪೧. ಗುಣಹೀನನಾದರೂ ಕೃಷ್ಣಾರ್ಥಿಯಾದವನಿಗೆ ಅನನ್ಯ ಪ್ರೇಮವೊಂದೇ ಉತ್ತಮವಿಧಿಯಾಗಿರುವುದು. ಧನಾರ್ಥಿಯಾದ ಭಕ್ತನು ಪುರಾಣಶ್ರವಣದ ಸಮಾಪ್ತಿಯವರೆಗೂ ಸ್ವಪ್ರಯತ್ನದಿಂದಲೇ ವಿಧಿನಿಯಮಗಳನ್ನನುಸರಿಸಬೇಕು.

೪೨–೪೩. ಪ್ರಾತಃಕಾಲದಲ್ಲಿ ಸ್ನಾನವನ್ನುಮಾಡಿ ನಿತ್ಯಕರ್ಮಗಳನ್ನು ತೀರಿಸಿಕೊಂಡು ಶ್ರೀಹರಿಯ ಪಾದೋದಕವನ್ನು ಸೇವಿಸಿ ಭಾಗವತಗ್ರಂಥವನ್ನೂ ಪೌರಾಣಿಕನನ್ನೂ ಗುರುವನ್ನೂ ಸಮಸ್ತೋಪಚಾರಗಳಿಂದ ಪೂಜಿಸಿ ಸಂತೋಷದಿಂದ ಪುರಾಣವನ್ನು ಅನುವಾದಮಾಡಬೇಕು. ಮತ್ತು ಕೇಳಬೇಕು.

೪೪. ಆ ಪರ್ಯಂತವೂ ಹಾಲಿನಿಂದಾಗಲಿ ಹವಿಷ್ಯಾನ್ನದಿಂದಾಗಲಿ ಮೌನದಿಂದ ಭೋಜನವನ್ನಾಚರಿಸಿ ಬ್ರಹ್ಮಚರ್ಯವ್ರತವನ್ನೂ ಭೂಶಯನವನ್ನೂ ಕ್ರೋಧಲೋಭಾದಿ ದುರ್ಗುಣತ್ಯಾಗವನ್ನೂ ಆಚರಿಸುತ್ತಿರಬೇಕು.

ಕಥಾಂತೇ ಕೀರ್ತನಂ ನಿತ್ಯಂ ಸಮಾಪ್ತೌ ಜಾಗರಂ ಚರೇತ್ ।
ಬ್ರಾಹ್ಮಣಾನ್ ಭೋಜಯಿತ್ವಾ ತು ದಕ್ಷಿಣಾಭಿಃ ಪ್ರತೋಷಯೇತ್ ॥೪೫॥
ಗುರುವೇ ವಸ್ತ್ರಭೂಷಾದಿ ದತ್ವಾ ಗಾಂ ಚ ಸಮರ್ಪಯೇತ್ ।
ಏವಂ ಕೃತೇ ವಿಧಾನೇ ತು ಲಭತೇ ವಾಂಛಿತಂ ಫಲಂ ॥ ೪೬ ॥
ದಾರಾಗಾರಸುತಾನ್ರಾಜ್ಯಂ ಧನಾದಿ ಚ ಯದೀಪ್ಸಿತಂ ।
ಪರಂತು ಶೋಭತೇ ನಾತ್ರ ಸಕಾಮತ್ವಂ ವಿಡಂಬನಂ ॥ ೪೭ ॥
ಕೃಷ್ಣಪ್ರಾಪ್ತಿಕರಂ ಶಶ್ವತ್ಪ್ರೇಮಾನಂದಫಲಪ್ರದಂ ।
ಶ್ರೀಮದ್ಭಾಗವತಂ ಶಾಸ್ತ್ರಂ ಕಲೌ ಕೀರೇಣ ಭಾಷಿತಂ ॥ ೪೮ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಶೀತಿಸಾಹಸ್ರ್ಯಾಂ ಸಂಹಿತಾಯಾಂ
ದ್ವಿತೀಯೇ ವೈಷ್ಣವಖಂಡೇ ಶ್ರೀಮದ್ಭಾಗವತಮಾಹಾತ್ಮ್ಯೇ
"ಶ್ರೀಭಾಗವತ ಸ್ವರೂಪ-ಪ್ರಮಾಣ-ಶ್ರುರಾಣಶ್ರವಣ-ಶ್ರೋತೃವರ್ಣನಂ" ನಾಮ
ಚತುರ್ಥೋಽಧ್ಯಾಯಃ

## ಶ್ರೀಮದ್ಭಾಗವತ ಮಹಾಪುರಾಣಮಾಹಾತ್ಮ್ಯಂ ಸಂಪೂರ್ಣಂ

---

೪೫-೪೬. ಪ್ರತಿನಿತ್ಯವೂ ಕಥಾಶ್ರವಣವಾದನಂತರ ಭಗವನ್ನಾಮಸಂಕೀರ್ತನೆಯನ್ನು ಮಾಡಬೇಕು. ಕಥೆಯು ಮುಗಿದ ದಿವಸ ಜಾಗರಣೆಯನ್ನಾಚರಿಸಿ ಮಾರನೆಯ ದಿನ ಬ್ರಾಹ್ಮಣರಿಗೆ ಭೋಜನವನ್ನು ಮಾಡಿಸಿ ದಕ್ಷಿಣಾದಾನಾದಿಗಳಿಂದ ಅವರನ್ನು ಸಂತೋಷಗೊಳಿಸಬೇಕು. ಆಚಾರ್ಯನಿಗೆ ವಸ್ತ್ರಭೂಷಣಾದಿಗಳನ್ನರ್ಪಿಸಿ ಗೋದಾನವನ್ನು ಕೊಡಬೇಕು. ಈ ವಿಧಿಯನ್ನನುಸರಿಸಲು ಭಗವದ್ಭಕ್ತನು ಈಪ್ಸಿತ ಫಲವನ್ನು ಪಡೆಯುವನು.

೪೭-೪೮. ಪತ್ನಿ, ಗೃಹ, ಪುತ್ರ, ರಾಜ್ಯಗಳನ್ನೂ, ಧನವೇ ಮುಂತಾದ ಸಕಲಾಭೀಷ್ಟಗಳನ್ನೂ ಧನಾರ್ಥಿಯಾದ ಭಕ್ತನು ಪಡೆಯುವನು. ಆದರೆ ಸಕಾಮವಾಗಿ ಮಾಡಿದ ಭಾಗವತಶ್ರವಣವು ಕೇವಲ ವಿಡಂಬನವೇ ಹೊರತು ಚೆನ್ನಾಗಿ ಶೋಭಿಸುವುದಿಲ್ಲ. ಶ್ರೀ ಶುಕಮಹರ್ಷಿಯಿಂದ ಪರೀಕ್ಷಿತನಿಗೆ ಉಪದೇಶಿಸಲ್ಪಟ್ಟ ಶ್ರೀಮದ್ಭಾಗವತವೆಂಬ ಶಾಸ್ತ್ರವು ಶ್ರೀ ಕೃಷ್ಣನ ಸಾನ್ನಿಧ್ಯವನ್ನೇ ಉಂಟುಮಾಡುವುದಾಗಿ ಶಾಶ್ವತವಾದ ಪ್ರೇಮಾನಂದರೂಪವಾದ ಫಲವನ್ನು ಭಕ್ತನಿಗೆ ಒದಗಿಸಿಕೊಡುವುದು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀಸ್ಕಾಂದಮಹಾಪುರಾಣದ ಎರಡನೆಯ ವೈಷ್ಣವಖಂಡದ ಶ್ರೀ ಭಾಗವತಮಾಹಾತ್ಮ್ಯದಲ್ಲಿ
"ಶ್ರೀ ಭಾಗವತ ಸ್ವರೂಪ-ಪ್ರಮಾಣ-ಪುರಾಣಶ್ರವಣ-ಶ್ರೋತೃವರ್ಣನ"ವೆಂಬ
ನಾಲ್ಕನೆಯ ಅಧ್ಯಾಯವು ಮುಗಿದುದು

## ಶ್ರೀಮದ್ಭಾಗವತ ಮಹಾಪುರಾಣ ಮಾಹಾತ್ಮ್ಯವು ಸಂಪೂರ್ಣವಾದುದು

॥ ಶ್ರೀಃ ॥

॥ ಶ್ರೀಶಂಕರಃ ಶಂಕರಃ ॥

# ಶ್ರೀ ಸ್ಕಾಂದಮಹಾಪುರಾಣಂ

## ಅಥ ವೈಶಾಖಮಾಸಮಾಹಾತ್ಮ್ಯಂ ಪ್ರಾರಭ್ಯತೇ

ಓಂ ಶ್ರೀ ಗಣೇಶಾಯ ನಮಃ । ಓಂ ನಮೋ ಬೃಹಸ್ಪತಯೇ ।
ನಮಸ್ತಸ್ಮೈ ಬ್ರಹ್ಮಣೇ । ವಿಷ್ಣವೇ ನಮಃ ॥

ಶ್ರೀಮತ್ಸುಂದರಗಜಾನನಂ ಶ್ರೀಮತ್ಸಿದ್ಧಿವಿನಾಯಕಂ ।
ಷಣ್ಮುಖಂ ಸ್ಕಂದಮಾನಂದಂ ಬ್ರಹ್ಮಾಣಂ ವಿಷ್ಣುಮಾಶ್ರಯೇ ॥
ಯಸ್ಯಾಜ್ಞಯಾ ಜಗತ್ಸ್ರಷ್ಟಾ ವಿರಿಂಚಿಃ ಪಾಲಕೋ ಹರಿಃ ।
ಸಂಹರ್ತಾ ಕಾಲರುದ್ರಾಖ್ಯೋ ನಮಸ್ತಸ್ಮೈ ಪಿನಾಕಿನೇ ॥

## ಅಥ ಪ್ರಥಮೋಽಧ್ಯಾಯಃ

### ವೈಶಾಖಸ್ನಾನಮಾಹಾತ್ಮ್ಯವರ್ಣನಂ

ಸೂತ ಉವಾಚ :—

ಭೂಯೋಽಪ್ಯಂಗಭುವಂ ರಾಜಾ ಬ್ರಹ್ಮಣಃ ಪರಮೇಷ್ಠಿನಃ ।
ಪುಣ್ಯಂ ಮಾಧವಮಾಹಾತ್ಮ್ಯಂ ನಾರದಂ ಪರ್ಯಪೃಚ್ಛತ ॥ ೧ ॥

ಅಂಬರೀಷ ಉವಾಚ :—

ಸರ್ವೇಷಾಮಪಿ ಮಾಸಾನಾಂ ತ್ವತ್ತೋ ಮಾಹಾತ್ಮ್ಯಮಂಜಸಾ ।
ಶೃತಂ ಮಯಾ ಪುರಾ ಬ್ರಹ್ಮನ್ ಯದಾ ಚೋಕ್ತಂ ತದಾ ತ್ವಯಾ ॥ ೨ ॥

---

### ಕನ್ನಡದ ಅನುವಾದ

#### ವೈಶಾಖಸ್ನಾನಮಾಹಾತ್ಮ್ಯವರ್ಣನ

೧. ಸೂತನು ಹೇಳುತ್ತಾನೆ:—ಎಲೈ ಮಹರ್ಷಿಗಳಿರಾ! ಒಮ್ಮೆ ಅಂಬರೀಷ ಮಹಾರಾಜನು ಚತುರ್ಮುಖನ ಮಾನಸಪುತ್ರನಾದ ನಾರದ ಮಹರ್ಷಿಯನ್ನು ಪವಿತ್ರವಾದ ವೈಶಾಖಮಾಸದ ಮಾಹಾತ್ಮ್ಯವನ್ನು ಕುರಿತು ಪ್ರಶ್ನೆಮಾಡಿದನು.

೨. ಅಂಬರೀಷನು ಹೇಳುತ್ತಾನೆ:—ಬ್ರಹ್ಮಜ್ಞಾನಿವರ್ಯನಾದ ನಾರದನೇ! ನೀನು ಹಿಂದೆ ನಿರೂಪಿಸಿದ ಸಕಲಮಾಸಗಳ ಮಾಹಾತ್ಮ್ಯವನ್ನೂ ಅಮೂಲಾಗ್ರವಾಗಿ ನಿನ್ನ ಅನುಗ್ರಹದಿಂದ ಚೆನ್ನಾಗಿ ಕೇಳಿ ತಿಳಿದುಕೊಂಡಿರುವೆನು.

ವೈಶಾಖಃ ಪ್ರವರೋ ಮಾಸೋ ಮಾಸೇಷ್ವೇತೇಷು ನಿಶ್ಚಿತಂ ।
ಇತಿ ತಸ್ಮಾದ್ವಿಸ್ತರೇಣ ಮಾಹಾತ್ಮ್ಯಂ ಮಾಧವಸ್ಯ ಚ ॥ ೩ ॥
ಶ್ರೋತುಂ ಕೌತೂಹಲಂ ಬ್ರಹ್ಮನ್ ಕಥಂ ವಿಷ್ಣುಪ್ರಿಯೋ ಹ್ಯಸೌ ।
ಕೇಚ ವಿಷ್ಣುಪ್ರಿಯಾ ಧರ್ಮಾ ಮಾಸೇ ಮಾಧವವಲ್ಲಭೇ ॥ ೪ ॥
ತತ್ರಾಪ್ಯಸ್ಯ ತು ಕರ್ತವ್ಯಾಃ ಕೇ ಧರ್ಮಾ ವಿಷ್ಣುವಲ್ಲಭಾಃ ।
ಕಿಂ ದಾನಂ ಕಿಂ ಫಲಂ ತಸ್ಯ ಕಾಮುದ್ದಿಶ್ಯಾಽಽಚರೇದಿಮಾನ್ ॥ ೫ ॥
ಕೈರ್ದ್ರವ್ಯೈಃ ಪೂಜನೀಯೋಽಸೌ ಮಾಧವೋ ಮಾಧವಾಗಮೇ ।
ಏತನ್ನಾರದ ವಿಸ್ತಾರ್ಯ ಮಹ್ಯಂ ಶ್ರದ್ಧಾವತೇ ವದ ॥ ೬ ॥

ಶ್ರೀ ನಾರದ ಉವಾಚ :—

ಮಯಾ ಪೃಷ್ಟಃ ಪುರಾ ಬ್ರಹ್ಮಾ ಮಾಸಧರ್ಮಾನ್ ಪುರಾತನಾನ್ ।
ವ್ಯಾಜಹಾರ ಪುರಾ ಪ್ರೋಕ್ತಂ ಯಚ್ಛ್ರಿಯೈ ಪರಮಾತ್ಮನಾ ॥ ೭ ॥

---

೩. ಈ ಮಾಸಗಳೆಲ್ಲವುಗಳಲ್ಲಿಯೂ ವೈಶಾಖವೇ ಅತ್ಯುತ್ತಮ ಮಾಸವೆಂಬುದಾಗಿ ಶಾಸ್ತ್ರಗಳಲ್ಲಿ ನಿಶ್ಚಯಮಾಡಲ್ಪಟ್ಟಿರುವುದು. ಆದುದರಿಂದ ಆ ವೈಶಾಖಮಾಸದ ಮಾಹಾತ್ಮ್ಯವನ್ನು ಸವಿಸ್ತಾರವಾಗಿ ನಿರೂಪಿಸುವವನಾಗು.

೪. ಎಲೈ ಬ್ರಹ್ಮರ್ಷಿಯೆ! ಈ ವಿಷಯವನ್ನು ಕೇಳಲು ನನಗೆ ಅತ್ಯಂತ ಕುತೂಹಲವುಂಟಾಗಿರುವುದು. ಈ ಮಾಸವು ಮಹಾವಿಷ್ಣುವಿಗೆ ಅತ್ಯಂತ ಪ್ರಿಯವಾಗಲು ಕಾರಣವೇನು? ವಿಷ್ಣುವಿನ ಅಧೀನವಾದ ಈ ಮಾಸದಲ್ಲಿ ಆತನಿಗೆ ಪ್ರಿಯತಮಗಳಾದ ಯಾವ ಯಾವ ಧರ್ಮಗಳನ್ನಾಚರಿಸಬೇಕು?

೫. ಅವುಗಳಲ್ಲಿಯೂ ಶ್ರೀ ಹರಿಯ ಆಜ್ಞಾನುಸಾರಿಗಳಾದ ಯಾವ ಧರ್ಮಗಳನ್ನು ಮಾನವರು ಅವಶ್ಯಕವಾಗಿ ಮಾಡಬೇಕು? ಯಾವ ದಾನಗಳನ್ನು ಕೊಡಬೇಕು? ಅವುಗಳಿಂದ ಯಾವ ಫಲವು ಲಭಿಸುವುದು? ಈ ದಾನಧರ್ಮಗಳನ್ನೆಲ್ಲ ಯಾವ ದೇವನ ಪ್ರೀತಿಗಾಗಿ ಆಚರಿಸಬೇಕು?

೬. ಈ ವೈಶಾಖಮಾಸವು ಪ್ರಾಪ್ತವಾಗಲು ಭಗವಂತನನ್ನು ಯಾವ ಪೂಜಾದ್ರವ್ಯಗಳಿಂದ ಅರ್ಚನೆಮಾಡಬೇಕು? ಎಲೈ ನಾರದನೆ! ಶ್ರದ್ಧೆಯಿಂದ ಕೇಳಬಯಸುತ್ತಿರುವ ನನಗೆ ಇದನ್ನೆಲ್ಲ ವಿಸ್ತಾರವಾಗಿ ಹೇಳು.

೭. ನಾರದನು ಹೇಳುತ್ತಾನೆ:—ಅನಾದಿಕಾಲದಿಂದ ನಡೆದು ಬರುತ್ತಿರುವ ಈ ಮಾಸ ಧರ್ಮಗಳನ್ನು ಕುರಿತು ನಾನು ಪೂರ್ವದಲ್ಲಿ ಬ್ರಹ್ಮದೇವನನ್ನು ಕೇಳಿದೆನು. ಆಗ ತನಗೆ ಪ್ರಪಂಚದ ಸೃಷ್ಟಿಯ ಆದಿಯಲ್ಲಿ ಶ್ರೀಮನ್ನಾರಾಯಣನೇ ಶ್ರೇಯೋಮಾರ್ಗದರ್ಶಕನಾಗಿ ಉಪದೇಶಮಾಡಿದುದೆಲ್ಲವನ್ನೂ ನನಗೆ ಹೇಳಿದನು.

**ತತೋ ಮಾಸಾ ವಿಶಿಷ್ಟೋಕ್ತಾಃ ಕಾರ್ತಿಕೋಮಾಘ ಏವ ಚ ।**
**ಮಾಧವಸ್ತೇಷು ವೈಶಾಖಂ ಮಾಸಾನಾಂ ಉತ್ತಮಂ ವ್ಯಧಾತ್ ॥ ೮ ॥**
**ಮಾತೇವ ಸರ್ವಜೀವಾನಾಂ ಸದೈವೇಷ್ಟಪ್ರದಾಯಕಃ ।**
**ದಾನಯಜ್ಞವ್ರತಸ್ನಾನೈಃ ಸರ್ವಪಾಪವಿನಾಶನಃ ॥ ೯ ॥**
**ಧರ್ಮಯಜ್ಞಕ್ರಿಯಾಸಾರಃ ತಪಃ ಸಾರಃ ಸುರಾರ್ಚಿತಃ ।**
**ವಿದ್ಯಾನಾಂ ವೇದವಿದ್ಯೇವ ಮಂತ್ರಾಣಾಂ ಪ್ರಣವೋ ಯಥಾ ॥ ೧೦ ॥**
**ಭೂರುಹಾಣಾಂ ಸುರತರುರ್ಧೇನೂನಾಂ ಕಾಮಧೇನುವತ್ ।**
**ಶೇಷವತ್ಸರ್ವನಾಗಾನಾಂ ಪಕ್ಷಿಣಾಂ ಗರುಡೋ ಯಥಾ ॥ ೧೧ ॥**
**ದೇವಾನಾಂ ತು ಯಥಾವಿಷ್ಣುರ್ವರ್ಣಾನಾಂ ಬ್ರಾಹ್ಮಣೋ ಯಥಾ ।**
**ಪ್ರಾಣವತ್ಪ್ರಿಯವಸ್ತೂನಾಂ ಭಾರ್ಯೇವ ಸುಹೃದಾಂ ಯಥಾ ॥ ೧೨ ॥**
**ಆಪಗಾನಾಂ ಯಥಾ ಗಂಗಾ ತೇಜಸಾಂ ತು ರವಿರ್ಯಥಾ ।**
**ಆಯುಧಾನಾಂ ಯಥಾ ಚಕ್ರಂ ಧಾತೂನಾಂ ಕಾಂಚನಂ ಯಥಾ॥ ೧೩ ॥**

---

೮. ಆ ಮಾಸಗಳಲ್ಲಿಯೂ ಕಾರ್ತಿಕ ಮತ್ತು ಮಾಘಮಾಸಗಳು ವಿಶೇಷ ಫಲದಾಯಕಗಳೆಂದು ಹೇಳಲ್ಪಟ್ಟುವು. ಮತ್ತು ವೈಶಾಖಮಾಸವೇ ಪರಮಾತ್ಮ ನಿಗೆ ಅತ್ಯಂತ ಪ್ರಿಯವಾದುದರಿಂದ ಉತ್ತಮೋತ್ತಮವಾದುದೆಂದೂ ಬ್ರಹ್ಮನೇ ನನಗೆ ತಿಳಿಸಿರುವನು.

೯. ಸಮಸ್ತ ಪ್ರಾಣಿಗಳಿಗೂ ತಾಯಿಯಾದವಳು ಹೇಗೆ ಪ್ರೀತಿಪಾತ್ರಳಾಗಿ ರುವಳೊ, ಹಾಗೆಯೇ ಈ ಮಾಸವೂ ಜನರಿಗೆ ಯಾವಾಗಲೂ ಅಭೀಷ್ಟಗಳನ್ನು ನೆರವೇರಿಸಿಕೊಡುವುದು. ಈ ಕಾಲದಲ್ಲಿ ಮಾಡಿದ ದಾನ, ಯಜ್ಞ, ವ್ರತೋಪ ವಾಸಗಳು ಮತ್ತು ಸ್ನಾನಗಳಿಂದ ಸಕಲ ಪಾಪಗಳೂ ನಾಶವನ್ನು ಹೊಂದುವುವು.

೧೦–೧೪. ಸಮಸ್ತ ಯಜ್ಞಕಾರ್ಯಗಳಲ್ಲಿ ಧರ್ಮವು ಹೇಗೆ ಸಾರಭೂತವೊ, ದೇವತಾರ್ಚನೆಗಳಲ್ಲಿ ತಪಸ್ಸು ಹೇಗೆ ಮುಖ್ಯವೊ, ಚತುಷ್ಷಷ್ಟಿ ವಿದ್ಯೆಗಳಲ್ಲಿ ವೇದಾಧ್ಯಯನವು ಹೇಗೆ ಶ್ರೇಷ್ಠವೊ, ಮಂತ್ರಗ್ರಾಮಗಳಲ್ಲಿ ಪ್ರಣವವು ಹೇಗೆ ಉತ್ತಮವೊ, ವೃಕ್ಷಗಳಲ್ಲಿ ಕಲ್ಪವೃಕ್ಷವು ಹೇಗೆ ಅಸಮಾನವೊ, ಗೋವುಗಳೆಲ್ಲವು ಗಳಲ್ಲಿ ಕಾಮಧೇನುವು ಹೇಗೆ ಸರ್ವೋತ್ಕೃಷ್ಟವೊ, ಸಮಸ್ತ ನಾಗರಲ್ಲಿ ಆದಿಶೇಷನು ಹೇಗೆ ಪ್ರವರನೊ, ಪಕ್ಷಿಗಳಲ್ಲಿ ಗರುಡನು ಹೇಗೆ ಅನುಪಮನೊ, ದೇವತೆಗಳಲ್ಲಿ ಮಹಾವಿಷ್ಣುವು ಹೇಗೆ ಜ್ಯೇಷ್ಠನೊ, ಚಾತುರ್ವರ್ಣ್ಯಗಳಲ್ಲಿ ಬ್ರಾಹ್ಮಣನು ಹೇಗೇ ಗುರುಸ್ಥಾನೀಯನೊ, ಪ್ರಿಯಗಳೆನಿಸಿರುವ ವಸ್ತುಗಳೆಲ್ಲವುಗಳಲ್ಲಿಯೂ ಪ್ರಾಣವು ಹೇಗೆ ಪ್ರಿಯತಮವಾಗಿರುವುದೊ, ಸ್ನೇಹಿತರಲ್ಲಿ ಪತ್ನಿಯು ಹೇಗೆ ಇಷ್ಟಳಾಗಿರುವಳೊ, ನದಿಗಳಲ್ಲಿ ಗಂಗೆಯು ಹೇಗೆ ಅಸದೃಶವೆನಿಸಿರುವುದೊ, ತೇಜೋರಾಶಿಗಳಲ್ಲಿ ಸೂರ್ಯನು ಹೇಗೆ ಅದ್ವಿತೀಯನೊ, ಸಮಸ್ತಾಯುಧಗಳಲ್ಲಿ

**ವೈಷ್ಣವಾನಾಂ ಯಥಾ ರುದ್ರೋ ರತ್ನಾನಾಂ ಕೌಸ್ತುಭೋ ಯಥಾ ।**
**ಮಾಸಾನಾಂ ಧರ್ಮಹೇತೂನಾಂ ವೈಶಾಖಶ್ಚೋತ್ತಮಸ್ತಥಾ ॥ ೧೪ ॥**
**ನಾನೇನ ಸದೃಶೋ ಲೋಕೇ ವಿಷ್ಣುಪ್ರೀತಿವಿಧಾಯಕಃ ।**
**ವೈಶಾಖಸ್ನಾನನಿರತೇ ಮೇಷೇ ಪ್ರಾಗರ್ಯಮೋದಯಾತ್ ॥ ೧೫ ॥**
**ಲಕ್ಷ್ಮೀಸಹಾಯೋ ಭಗವಾನ್ ಪ್ರೀತಿಂ ತಸ್ಮಿನ್ ಕರೋತ್ಯಲಂ ।**
**ಜಂತೂನಾಂ ಪ್ರೀಣನಂ ಯದ್ವದನ್ನೇನೈವ ಹಿ ಜಾಯತೇ ॥ ೧೬ ॥**
**ತದ್ವದ್ವೈಶಾಖಸ್ನಾನೇನ ವಿಷ್ಣುಃ ಪ್ರೀಣಾತ್ಯಸಂಶಯಂ ।**
**ವೈಶಾಖಸ್ನಾನನಿರತಾನ್ ಜನಾನ್ ದೃಷ್ಟ್ವಾಽನುಮೋದತೇ ॥ ೧೭ ॥**
**ತಾವತಾತಿವಿಮುಕ್ತೋಽಸೌ ವಿಷ್ಣುಲೋಕೇ ಮಹೀಯತೇ ।**
**ಸಕೃತ್ ಸ್ನಾತ್ವಾ ಮೇಷಸಂಸ್ಥೇ ಸೂರ್ಯೇ ಪ್ರಾತಃಕೃತಾಹ್ನಿಕಃ ॥ ೧೮ ॥**

ವಿಷ್ಣುಚಕ್ರವು ಹೇಗೆ ಅಭೇದ್ಯವೋ, ಲೋಹಗಳಲ್ಲಿ ಚಿನ್ನವು ಹೇಗೆ ಪ್ರಮುಖವೋ, ವಿಷ್ಣುಭಕ್ತರಲ್ಲಿ ಮಹೇಶ್ವರನು ಹೇಗೆ ಅಗ್ರಗಣ್ಯನೋ, ರತ್ನಗಳಲ್ಲಿ ಕೌಸ್ತುಭ ಮಣಿಯು ಹೇಗೆ ಅಪ್ರತಿಮವೋ, ಹಾಗೆಯೇ ಧರ್ಮಾರ್ಜನೆಗೆ ಕಾರಣಗಳಾದ ಸಕಲ ಮಾಸಗಳಲ್ಲಿಯೂ ವೈಶಾಖಮಾಸವು ಸರ್ವೋತ್ತಮವಾಗಿರುವುದು.

೧೫. ಲೋಕದಲ್ಲಿ ಮಹಾವಿಷ್ಣುವಿಗೆ ಸಂತೋಷವನ್ನುಂಟುಮಾಡಲು ಇದಕ್ಕೆ ಸಮಾನವಾದ ಬೇರೊಂದು ಸಾಧನವಿಲ್ಲವು. ಆದುದರಿಂದ ವೈಶಾಖ ಮಾಸದಲ್ಲಿ ಸೂರ್ಯನು ಮೇಷಸಂಸ್ಥನಾಗಿರಲು ಅರುಣೋದಯಕ್ಕೆ ಮುಂಚೆಯೇ ಯಾವನು ಸ್ನಾನಮಾಡುವುದರಲ್ಲಿ ನಿರತನಾಗಿರುವನೋ, ಅವನಲ್ಲಿ ಲಕ್ಷ್ಮೀದೇವಿಯೊಡಗೂಡಿರುವ ಮಹಾವಿಷ್ಣುವು ಆದರವನ್ನು ತೋರುವನು.

೧೬. ಸಕಲ ಜಂತುಗಳಿಗೂ ಹೇಗೆ ಅನ್ನದಿಂದಲೇ ಸಂತೋಷವುಂಟಾಗುವುದೋ, ಹಾಗೆಯೇ ವೈಶಾಖಮಾಸದಲ್ಲಿ ಮಾಡಿದ ಪ್ರಾತಃಕಾಲದ ಸ್ನಾನಗಳಿಂದ ಶ್ರೀ ಹರಿಯು ಸಂತೋಷಗೊಳ್ಳುವನೆಂಬುದು ನಿಸ್ಸಂಶಯವಾದ ವಿಷಯವು.

೧೭. ಆ ಮಹಾವಿಷ್ಣುವೇ ವೈಶಾಖಮಾಸಸ್ನಾನದಲ್ಲಿ ನಿರತರಾಗಿರುವ ಜನರನ್ನು ಕಂಡು ಅನುಮೋದಿಸುವನು. ಅಷ್ಟು ಮಾತ್ರದಿಂದಲೇ ಮನುಷ್ಯನು ಸಕಲ ಪಾಪಗಳಿಂದಲೂ ವಿಮುಕ್ತನಾಗಿ ವಿಷ್ಣುಲೋಕದಲ್ಲಿ ಅತ್ಯುತ್ತಮವಾದ ಸ್ಥಾನವನ್ನು ಪಡೆಯುವನು.

೧೮. ಸೂರ್ಯನು ಮೇಷರಾಶಿಯಲ್ಲಿರಲು ಯಾವ ಮನುಷ್ಯನು ಒಮ್ಮೆ ಯಾದರೂ ಪ್ರಾತಃಕಾಲದಲ್ಲಿ ನಿತ್ಯಕರ್ಮವಾದ ಆಹ್ನಿಕವನ್ನು ಮಾಡುವನೋ, ಅವನು ಮಹಾ ಪಾಪಗಳನ್ನೂ ಕಳೆದುಕೊಂಡು ಮಹಾವಿಷ್ಣುವಿನ ಸಾಯುಜ್ಯ ರೂಪಮೋಕ್ಷವನ್ನು ಪಡೆಯುವನು.

ಮಹಾಪಾಪೈರ್ವಿಮುಕ್ತೋಽಸೌ ವಿಷ್ಣೋಸ್ಸಾಯುಜ್ಯಮಾಪ್ನುಯಾತ್ ।
ಸ್ನಾನಾರ್ಥಂ ಮಾಸಿ ವೈಶಾಖೇ ಪಾದಮೇಕಂ ಚರೇದ್ಯದಿ ॥ ೧೯ ॥
ಸೋಽಶ್ವಮೇಧಾಯುತಾನಾಂ ಚ ಫಲಮಾಪ್ನೋತ್ಯಸಂಶಯಂ ।
ಅಥವಾ ಕೂಟಚಿತ್ತಸ್ತು ಕುರ್ಯಾತ್ ಸಂಕಲ್ಪಮಾತ್ರಕಂ ॥ ೨೦ ॥
ಸೋಽಪಿ ಕ್ರತುಶತಂ ಪುಣ್ಯಂ ಲಭೇದೇವ ನಸಂಶಯಃ ।
ಯೋ ಗಚ್ಛೇದ್ಧನುರಾಯಾಮಂ ಸ್ನಾತುಂ ಮೇಷಗತೇ ರವೌ ॥ ೨೧ ॥
ಸರ್ವಬಂಧವಿನಿರ್ಮುಕ್ತೋ ವಿಷ್ಣೋಸ್ಸಾಯುಜ್ಯಮಾಪ್ನುಯಾತ್ ।
ತ್ರೈಲೋಕ್ಯೇ ಯಾನಿ ತೀರ್ಥಾನಿ ಬ್ರಹ್ಮಾಂಡಾಂತರ್ಗತಾನಿ ಚ ॥ ೨೨ ॥
ತಾನಿ ಸರ್ವಾಣಿ ರಾಜೇಂದ್ರ ಸಂತಿ ಬಾಹ್ಯೇಽಲ್ಪಕೇ ಜಲೇ ।
ತಾವಲ್ಲಿಖಿತಪಾಪಾನಿ ಗರ್ಜಂತಿ ಯಮಶಾಸನೇ ॥ ೨೩ ॥
ಯಾವನ್ನಕುರುತೇ ಜಂತುರ್ವೈಶಾಖೇ ಸ್ನಾನಮಂಭಸಿ ।
ತೀರ್ಥಾದಿದೇವತಾಸ್ಸರ್ವಾ ವೈಶಾಖೇ ಮಾಸಿ ಭೂಮಿಪ ॥ ೨೪ ॥

---

೧೯. ವೈಶಾಖಮಾಸದಲ್ಲಿ ತೀರ್ಥೋದಕದಲ್ಲಿ ಸ್ನಾನಮಾಡುವ ಅಭಿಲಾಷೆಯಿಂದ ಮನುಷ್ಯನು ನಡೆಯುವ ಪ್ರತಿಯೊಂದು ಹೆಜ್ಜೆಗೂ ಹತ್ತುಸಾವಿರ ಅಶ್ವಮೇಧ ಯಜ್ಞಗಳನ್ನು ಮಾಡಿದ ಫಲವು ಲಭಿಸುವುದರಲ್ಲಿ ಸಂಶಯವಿಲ್ಲ.

೨೦. ಅಥವಾ ಇದರಲ್ಲಿ ಪೂರ್ಣವಿಶ್ವಾಸವಿಲ್ಲದಿರುವ ಮನುಷ್ಯನು ಸಂಕಲ್ಪಮಾತ್ರವನ್ನಾದರೂ ಮಾಡಬೇಕು. ಅವನೂ ಕೂಡ ಒಂದು ನೂರು ಯಜ್ಞಗಳನ್ನುಮಾಡಿದ ಪುಣ್ಯವನ್ನು ನಿಸ್ಸಂದೇಹವಾಗಿಯೂ ಪಡೆಯುವನು.

೨೧. ಸೂರ್ಯನು ಮೇಷರಾಶಿಗತನಾಗಿರಲು ಯಾವನು ಪ್ರಾತಃಸ್ನಾನಕ್ಕಾಗಿ ಒಂದು ಧನುಸ್ಸಿನ ಪ್ರಮಾಣದಷ್ಟು ಭೂಮಿಯನ್ನು ನಡೆಯುವನೊ, ಅವನು ಸಕಲ ಸಂಸಾರಬಂಧಗಳಿಂದಲೂ ಬಿಡುಗಡೆಯನ್ನು ಹೊಂದಿ ಮಹಾವಿಷ್ಣುವಿನ ಸಾಯುಜ್ಯವನ್ನು ಹೊಂದುವನು.

೨೨. ಸ್ವರ್ಗ, ಮರ್ತ್ಯ, ಪಾತಾಳಲೋಕಗಳಲ್ಲಿ ಯಾವ ತೀರ್ಥಗಳಿರುವುವೊ, ಸಕಲ ಬ್ರಹ್ಮಾಂಡದಲ್ಲಿ ಯಾವ ತೀರ್ಥಗಳು ಅಂತರ್ಗತಗಳಾಗಿರುವುವೊ, ಅವುಗಳೆಲ್ಲವೂ ಜನನಿವಾಸಗಳ ಹೊರಗಿರುವ ಪ್ರವಾಹ ಮತ್ತು ಕುಂಡರೂಪಗಳಾದ ಜಲಗಳಲ್ಲಿ ನೆಲಸಿರುವುವು.

೨೩. ವೈಶಾಖಮಾಸದಲ್ಲಿ ಎಲ್ಲಿಯವರೆಗೆ ಮನುಷ್ಯನು ತೀರ್ಥಸ್ನಾನವನ್ನು ಮಾಡುವುದಿಲ್ಲವೊ, ಅಲ್ಲಿಯವರೆಗೆ ಮಾತ್ರ ಯಮಧರ್ಮರಾಜನ ಶಾಸನದಲ್ಲಿ ಬರೆದಿರುವ ಪಾಪಪ್ರಾಯಶ್ಚಿತ್ತಗಳೂ ದಂಡಗಳೂ ಅವಶ್ಯಕವಾಗಿ ಅನುಭವಿಸಬೇಕಾಗಿರುವುವು.

೨೪. ಅಂಬರೀಷ ಮಹಾರಾಜನೆ! ವೈಶಾಖಮಾಸವು ಪ್ರಾಪ್ತವಾಗಲು

**ಬಹಿರ್ಜಲಂ ಸಮಾಶ್ರಿತ್ಯ ಸದಾ ಸನ್ನಿಹಿತಾ ನೃಪ ।**
**ಸೂರ್ಯೋದಯಂ ಸಮಾರಭ್ಯ ಯಾವತ್‌ಷಡ್ಘಟಿಕಾವಧಿ ॥ ೨೫ ॥**
**ತಷ್ಠಂತಿ ಚಾಽಽಜ್ಞಯಾ ವಿಷ್ಣೋರ್ನರಾಣಾಂ ಹಿತಕಾಮ್ಯಯಾ ।**
**ತಾವನ್ನಾಗಚ್ಛತಾಂ ಪುಂಸಾಂ ಶಾಪಂ ದತ್ವಾ ಸುದಾರುಣಂ ।**
**ಸ್ವಸ್ಥಾನಂ ಯಾಂತಿ ರಾಜೇಂದ್ರ ತಸ್ಮಾತ್‌ಸ್ನಾನಂ ಸಮಾಚರೇತ್ ॥ ೨೬ ॥**

**ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ದ್ವಿತೀಯೇ ವೈಷ್ಣವಖಂಡೇ ವೈಶಾಖಮಾಸಮಾಹಾತ್ಮ್ಯೇ ನಾರದಾಂಬರೀಷಸಂವಾದೇ "ವೈಶಾಖಸ್ನಾನಮಾಹಾತ್ಮ್ಯವರ್ಣನಂ" ನಾಮ ಪ್ರಥಮೋಽಧ್ಯಾಯಃ**

---

ತೀರ್ಥಕ್ಷೇತ್ರಗಳ ಸಮಸ್ತ ಅಭಿಮಾನಿದೇವತೆಗಳೂ ನದೀತಟಾಕಾದಿಗಳ ಜಲದಲ್ಲಿ ಆಶ್ರಯವನ್ನು ಪಡೆದು ಸನ್ನಿಹಿತರಾಗಿರುವರು.

೨೫. ಅವರು ಶ್ರೀ ಮಹಾವಿಷ್ಣುವಿನ ಆಜ್ಞೆಯನ್ನನುಸರಿಸಿ ಸಕಲ ಮಾನವರಿಗೂ ಹಿತವನ್ನುಂಟುಮಾಡುವ ಬುದ್ಧಿಯುಳ್ಳವರಾಗಿ ಪ್ರತಿದಿವಸವೂ ಸೂರ್ಯೋದಯದ ಮೊದಲ್ಗೊಂಡು ಆರು ಘಳಿಗೆಗಳು ಕಳೆಯುವವರೆಗೂ ಜಲದಲ್ಲಿ ನೆಲೆಸಿರುವರು.

೨೬. ರಾಜೇಂದ್ರನೆ! ಅಲ್ಲಿಯವರೆಗೆ ಯಾರು ಸ್ನಾನಕ್ಕೆ ಬರುವುದಿಲ್ಲವೊ, ಅವರಿಗೆ ಭಯಂಕರವಾದ ಶಾಪವನ್ನಿತ್ತು ಆ ದೇವತೆಗಳು ತಮ್ಮ ನೆಲೆಗಳಿಗೆ ಹೊರಟು ಹೋಗುವರು. ಆದುದರಿಂದ ಆ ಕಾಲದಲ್ಲಿ ಸಕಲ ಮಾನವರೂ ಊರುಗಳ ಹೊರಗಿರುವ ನದೀತಟಾಕಗಳೇ ಮೊದಲಾದ ಜಲಾಶಯಗಳಲ್ಲಿ ಪ್ರಾತಃ ಸ್ನಾನವನ್ನು ಮಾಡಬೇಕು.

**ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀ ಸ್ಕಾಂದಮಹಾಪುರಾಣದ ಎರಡನೆಯ ವೈಷ್ಣವಖಂಡದ ವೈಶಾಖಮಾಸಮಾಹಾತ್ಮ್ಯದ ನಾರದಾಂಬರೀಷ ಸಂವಾದದಲ್ಲಿ "ವೈಶಾಖಸ್ನಾನಮಾಹಾತ್ಮ್ಯವರ್ಣನ"ವೆಂಬ ಮೊದಲನೆಯ ಅಧ್ಯಾಯವು ಮುಗಿದುದು**

॥ ಶ್ರೀಃ ॥

# ಅಥ ದ್ವಿತೀಯೋಽಧ್ಯಾಯಃ

## ದಾನ ಮಾಹಾತ್ಮ್ಯಂ

ನಾರದ ಉವಾಚ :—

ನ ಮಾಧವಸಮೋ ಮಾಸೋ ನ ಕೃತೇನ ಯುಗಂ ಸಮಂ ।
ನ ಚ ವೇದಸಮಂ ಶಾಸ್ತ್ರಂ ನ ತೀರ್ಥಂ ಗಂಗಯಾ ಸಮಂ ॥ ೧ ॥
ನ ಜಲೇನ ಸಮಂ ದಾನಂ ನ ಸುಖಂ ಭಾರ್ಯಯಾ ಸಮಂ ।
ನ ಕೃಷೇಸ್ತು ಸಮಂ ವಿತ್ತಂ ನ ಲಾಭೋ ಜೀವಿತಾತ್ಪರಃ ॥ ೨ ॥
ನ ತಪೋಽನಶನಾತ್ತುಲ್ಯಂ ನ ದಾನಾತ್ಪರಮಂ ಸುಖಂ ।
ನ ಧರ್ಮಸ್ತು ದಯಾತುಲ್ಯೋ ನ ಜ್ಯೋತಿಶ್ಚಕ್ಷುಷಾ ಸಮಂ ॥ ೩ ॥
ನ ತೃಪ್ತಿರಶನಾತ್ತುಲ್ಯಾ ನ ವಾಣಿಜ್ಯಂ ಕೃಷೇಃ ಸಮಂ ।
ನ ಧರ್ಮೇಣ ಸಮಂ ಮಿತ್ರಂ ನ ಸತ್ಯೇನ ಸಮಂ ಯಶಃ ॥ ೪ ॥

---

## ಕನ್ನಡದ ಅನುವಾದ

### ದಾನ ಮಾಹಾತ್ಮ್ಯವು

೧. ನಾರದನು ಹೇಳುತ್ತಾನೆ:—ವೈಶಾಖಕ್ಕೆ ಸಮಾನವಾದ ಮಾಸವಿಲ್ಲ. ಕೃತಯುಗಕ್ಕೆ ಸಮವೆನಿಸಿದ ಯುಗವಿಲ್ಲವು. ವೇದರಾಶಿಗೆ ಸರಿಯಾದ ಶಾಸ್ತ್ರವಿಲ್ಲ ಮತ್ತು ಗಂಗಾನದಿಗೆ ಸಮವಾದ ತೀರ್ಥೋದಕವಿಲ್ಲವು.

೨. ಜಲದಾನಕ್ಕೆ ಸಮಾನವಾದ ದಾನವು ಮತ್ತೊಂದಿಲ್ಲ. ಸ್ವಸ್ತ್ರೀಯೊಡ ನಿರುವ ಸುಖಕ್ಕೆ ಸಮನಾದುದು ಮತ್ತೊಂದಿಲ್ಲವು. ಧನಾರ್ಜನೆಗೆ ವ್ಯವಸಾಯ ವನ್ನು ಸರಿಹೋಲುವ ಬೇರೊಂದು ಉಪಾಯವಿಲ್ಲವು. (ವ್ಯವಸಾಯದ ಫಲವಾದ ಧಾನ್ಯಕ್ಕೆ ಸಮಾನವಾದ ಧನವು ಬೇರೆಯಿಲ್ಲವು.) ಪ್ರಾಣಲಾಭಕ್ಕಿಂತ ಬೇರೆ ಉತ್ತಮವಾದ ಲಾಭವಿಲ್ಲವು.

೩. ಉಪವಾಸಕ್ಕೆ ಸಮನೆನಿಸಿದ ಬೇರೊಂದು ತಪಸ್ಸಿಲ್ಲವು. ಸುಖಕ್ಕೆ ದಾನಕ್ಕೆ ಸಮವಾದ ಸಾಧನವು ದೊರಕಲಾರದು. ಭೂತದಯೆಗಿಂತ ಮನುಷ್ಯರಿಗೆ ಉತ್ತಮವಾದ ಧರ್ಮವು ಬೇರೆಯಿಲ್ಲ. ನೇತ್ರೇಂದ್ರಿಯಕ್ಕೆ ಸಮಾನವಾದ ಜ್ಯೋತಿಯು ಎಲ್ಲಿಯೂ ಸಿಕ್ಕುವುದಿಲ್ಲ.

೪. ಭೋಜನಕ್ಕಿಂತ ತೃಪ್ತಿಪಡಿಸುವ ಸಾಧನವು ಮತ್ತೊಂದಿಲ್ಲವು. ವ್ಯವಸಾಯಕ್ಕೆ ಸಮಾನವಾದ ಜೀವನವೃತ್ತಿಯು ಬೇರೊಂದಿಲ್ಲ. ಧರ್ಮಕ್ಕೆ ಸಮಾನವಾದ ಇಹಪರಸ್ನೇಹಿತವಾದುದು ಬೇರೆಯಿಲ್ಲ. ಸತ್ಯವಾಕ್ಯಕ್ಕೆ ಸಮಾನ ವಾದ ಯಶಸ್ಸು ಬೇರೊಂದಿಲ್ಲವು.

ನಾರೋಗ್ಯಸಮಮುತ್ಥಾನಂ ನ ತ್ರಾತಾ ಕೇಶವಾತ್ಪರಃ ।
ನ ಮಾಧವಸಮಂ ಲೋಕೇ ಪವಿತ್ರಂ ಕವಯೋ ವಿದುಃ ॥ ೫ ॥
ಮಾಧವಃ ಪರಮೋ ಮಾಸಃ ಶೇಷಶಾಯಿಪ್ರಿಯಃ ಸದಾ ।
ಅವ್ರತೇನ ಕ್ಷಿಪೇದ್ಯಸ್ತು ಮಾಸಂ ಮಾಧವವಲ್ಲಭಂ ॥ ೬ ॥
ತಿರ್ಯಗ್ಯೋನಿಂ ಸಯಾತ್ಯಾಶು ಸರ್ವಧರ್ಮಬಹಿಷ್ಕೃತಃ ।
ಅವ್ರತೇನ ಗತೋ ಯೇಷಾಂ ಮಾಧವೋ ಮರ್ತ್ಯಧರ್ಮಿಣಾಂ ॥ ೭ ॥
ಇಷ್ಟಾಪೂರ್ತೋ ವೃಥಾ ತೇಷಾಂ ಧರ್ಮೋ ಧರ್ಮಭೃತಾಂವರ ।
ಪ್ರವೃತ್ತಾನಾಂ ತು ಭಕ್ಷ್ಯಾಣಾಂ ಮಾಧವೇ ನಿಯಮೇ ಕೃತೇ ॥ ೮ ॥
ಅವಶ್ಯಂ ವಿಷ್ಣುಸಾಯುಜ್ಯಂ ಪ್ರಾಪ್ನೋತ್ಯೇವ ನ ಸಂಶಯಃ ।
ಸಂತೀಹ ಬಹುವಿತ್ತಾನಿ ವ್ರತಾನಿ ವಿವಿಧಾನಿ ಚ ॥ ೯ ॥
ದೇಹಾಽಯಾಸಕರಾಣ್ಯೇವ ಪುನರ್ಜನ್ಮಪ್ರದಾನಿ ಚ ।
ವೈಶಾಖಸ್ನಾನಮಾತ್ರೇಣ ನ ಪುನರ್ಜಾಯತೇ ಭುವಿ ॥ ೧೦ ॥

---

೫. ಆರೋಗ್ಯಲಾಭಕ್ಕೆ ಸದೃಶವಾದ ಲಾಭವಿಲ್ಲವು. ಮಹಾ ವಿಷ್ಣುವಿಗಿಂತ ಉತ್ತಮನಾದ ರಕ್ಷಕನಿಲ್ಲ. ವೈಶಾಖಮಾಸಕ್ಕೆ ಸಮಾನವಾದ ಮಾಸವು ಮತ್ತೊಂದಿಲ್ಲವೆಂದು ಬಲ್ಲವರು ಹೇಳುವರು.

೬. ಈ ವೈಶಾಖಮಾಸವು ಸರ್ವೋತ್ತಮವಾದುದಾಗಿ ಶೇಷಶಾಯಿಯಾದ ಪರಮಾತ್ಮನಿಗೆ ಯಾವಾಗಲೂ ಸಂತೋಷದಾಯಕವಾಗಿರುವುದು.

೭. ಮಾಧವನಿಗೆ ಪರಮಪ್ರಿಯವಾದ ಈ ಮಾಸವನ್ನು ವ್ರತಾಚರಣೆಗಳನ್ನನುಸರಿಸದೆ ಯಾವನು ವ್ಯರ್ಥವಾಗಿ ಕಳೆಯುವನೊ, ಅವನು ಸಕಲ ಧರ್ಮಗಳಿಂದಲೂ ಬಹಿಷ್ಕಾರಕ್ಕೆ ವಿಷಯನಾಗಿ ತತ್‌ಕ್ಷಣದಲ್ಲಿಯೇ ತಿರ್ಯಗ್ಜಂತುವಾಗಿ ಜನ್ಮವನ್ನು ಪಡೆಯುವನು.

೮. ಎಲೈ ಧರ್ಮಿಷ್ಠರಲ್ಲಿ ಶ್ರೇಷ್ಠನಾದ ಅಂಬರೀಷ ಮಹಾರಾಜನೇ! ಯಾರು ಮನುಷ್ಯರಾಗಿ ಹುಟ್ಟಿ ಧರ್ಮಗಳನ್ನು ತಿಳಿದು ಈ ವೈಶಾಖಮಾಸವನ್ನು ವ್ರತರಹಿತರಾಗಿ ಕಳೆಯುವರೊ, ಅವರು ಎಷ್ಟೋ ಧರ್ಮಕಾರ್ಯಗಳನ್ನು ಮಾಡಿದವರಾದರೂ, ಅವರ ಯಜ್ಞದಾನಾದಿ ಪರೋಪಕಾರಗಳೆಲ್ಲವೂ ಕೇವಲ ವ್ಯರ್ಥಗಳಾಗುವುವು.

೯. ಈ ಮಾಧವ ಮಾಸವನ್ನು ನಿಯಮದಿಂದ ಕಳೆದು ಭಕ್ಷ್ಯಭೋಜ್ಯಾದಿ ಪದಾರ್ಥಗಳ ದಾನದಲ್ಲಿ ಪ್ರವೃತ್ತನಾಗಿರುವ ಮನುಷ್ಯನು ಖಂಡಿತವಾಗಿಯೂ ವಿಷ್ಣು ಸಾಯುಜ್ಯವನ್ನು ಪಡೆಯುವನು. ಈ ವಿಷಯದಲ್ಲಿ ಸಂದೇಹವಿಲ್ಲ.

೧೦. ಮನುಷ್ಯರ ಆಚರಣೆಗೆ ಬಹುದ್ರವ್ಯವಿನಿಮಯವನ್ನು ಮಾಡಿಸುವಂತಹ ಅನೇಕ ವಿಧಗಳಾದ ವ್ರತನಿಯಮಗಳಿರುವುವು. ಆದರೆ ಅವುಗಳೆಲ್ಲವೂ ವಿಶೇಷ ದೇಹಾಯಾಸವನ್ನುಂಟುಮಾಡುವುವುಗಳೂ ಪುನರ್ಜನ್ಮವನ್ನು ಕೊಡು

ಸರ್ವದಾನೇಷು ಯತ್ಪುಣ್ಯಂ ಸರ್ವತೀರ್ಥೇಷು ಯತ್ಫಲಂ ।
ತತ್ಫಲಂ ಸಮವಾಪ್ನೋತಿ ಮಾಧವೇ ಜಲದಾನತಃ ॥ ೧೧ ॥
ಜಲದಾನಾಸಮರ್ಥೇನ ಪರಸ್ಯಾಪಿ ಪ್ರಬೋಧನಂ ।
ಕರ್ತವ್ಯಂ ಭೂತಿಕಾಮೇನ ಸರ್ವದಾನಾಧಿಕಂ ಹಿತಂ ॥ ೧೨ ॥
ಏಕತಃ ಸರ್ವದಾನಾನಿ ಜಲದಾನಂ ಹಿ ಚೈಕತಃ ।
ತುಲಮಾರೋಪಿತಂ ಪೂರ್ವಂ ಜಲದಾನಂ ವಿಶಿಷ್ಯತೇ ॥ ೧೩ ॥
ಮಾರ್ಗೇಽಧ್ವಗಾನಾಂ ಯೋ ಮರ್ತ್ಯಃ ಪ್ರಪಾದಾನಂ ಕರೋತಿ ಹಿ ।
ಸಕೋಟಿಕುಲಮುದ್ಧೃತ್ಯ ವಿಷ್ಣುಲೋಕೇ ಮಹೀಯತೇ ॥ ೧೪ ॥
ದೇವಾನಾಂ ಚ ಪಿತೄಣಾಂ ಚ ಋಷೀಣಾಂ ರಾಜಸತ್ತಮ ।
ಅತ್ಯಂತಪ್ರೀತಿದಂ ಸತ್ಯಂ ಪ್ರಪಾದಾನಂ ನ ಸಂಶಯಃ ॥ ೧೫ ॥

---

ವುವುಗಳೂ ಆಗಿರುವುವು. ಆದರೆ ವೈಶಾಖಮಾಸದಲ್ಲಿ ಬಹಿರ್ಜಲದಲ್ಲಿ ಸ್ನಾನವನ್ನು ಮಾಡುವ ಮಾತ್ರದಿಂದ ಮನುಷ್ಯನು ಮತ್ತೆ ಭೂಲೋಕದಲ್ಲಿ ಜನನವನ್ನು ಪಡೆಯುವುದಿಲ್ಲವು.

೧೧. ಸಕಲದಾನಗಳನ್ನು ಮಾಡಿದುದರಿಂದ ಯಾವ ಪುಣ್ಯವುಂಟೊ, ಸಮಸ್ತತೀರ್ಥಗಳ ಸೇವನೆಯಿಂದ ಯಾವ ಫಲವು ಲಭಿಸುವುದೊ, ಅದನ್ನೆಲ್ಲ ವೈಶಾಖಮಾಸದಲ್ಲಿ ಕೇವಲ ಜಲದಾನವನ್ನು ಮಾಡುವುದರಿಂದಲೇ ಮಾನವನು ಹೊಂದಲು ಸಮರ್ಥನಾಗುವನು.

೧೨. ಯಾವನು ತಾನೇ ಜಲದಾನವನ್ನು ಮಾಡಲು ಅಸಮರ್ಥನಾಗಿರುವನೊ, ಅವನು ಉತ್ತರೋತ್ತರಾಭಿವೃದ್ಧಿಯನ್ನು ಅಪೇಕ್ಷಿಸಿದಲ್ಲಿ ಮತ್ತೊಬ್ಬನಿಗೆ ಅದನ್ನು ಮಾಡುವಂತೆ ಪ್ರೇರೇಪಿಸಬೇಕು. ಜಲದಾನವೇ ಸಕಲ ದಾನಗಳಲ್ಲಿಯೂ ಅತ್ಯಧಿಕ ಫಲದಾಯಕವೂ ಭೂತಪ್ರೀತಿಕರವೂ ಆಗಿರುವುದು.

೧೩. ಪೂರ್ವದಲ್ಲಿ ತುಲಾಯಂತ್ರದ ಒಂದು ತಟ್ಟೆಯಲ್ಲಿ ಸಮಸ್ತ ದಾನಗಳ ಫಲವನ್ನೂ ಮತ್ತೊಂದು ಕಡೆ ಜಲದಾನದ ಫಲವನ್ನೂ ಇಟ್ಟು ತೂಗಲಾಯಿತು. ಜಲದಾನದ ಫಲವೇ ಹೆಚ್ಚು ತೂಕವುಳ್ಳುದಾಗಿ ನಿಶ್ಚಯವಾಯಿತು.

೧೪. ವೈಶಾಖಮಾಸದಲ್ಲಿ ದಾರಿಗರಿಗೆ ಯಾವ ಮನುಷ್ಯನು ಮಾರ್ಗ ಮಧ್ಯದಲ್ಲಿ ಅರವಟ್ಟಿಗೆಯನ್ನು ಕಟ್ಟಿಸಿ ನೀರನ್ನು ದಾನಮಾಡುವನೊ, ಅವನು ಉಭಯಕುಲದವರ ಕೋಟಿ ಕುಲಗಳನ್ನುದ್ಧರಿಸಿ ವಿಷ್ಣುಲೋಕದಲ್ಲಿ ಪೂಜ್ಯಸ್ಥಾನವನ್ನು ಪಡೆಯುವನು.

೧೫. ರಾಜಶ್ರೇಷ್ಠನಾದ ಅಂಬರೀಷನೆ! ಅರವಟ್ಟಿಗೆಯನ್ನಿಡಿಸುವುದು ದೇವತೆಗಳಿಗೂ, ಮಹರ್ಷಿಗಳಿಗೂ ಅತ್ಯಂತವಾದ ಸಂತೋಷವನ್ನುಂಟುಮಾಡುವುದರಲ್ಲಿ ಸಂದೇಹವಿಲ್ಲವು; ಇದು ಸತ್ಯವು.

ಪ್ರಪಾದಾನೇನ ಸಂತುಷ್ಟಾ ಯೇನಾಽಧ್ವಶ್ರಮಕರ್ಷಿತಾಃ ।
ತೋಷಿತಾಸ್ತೇನ ದೇವಾಶ್ಚ ಬ್ರಹ್ಮವಿಷ್ಣುಶಿವಾದಯಃ ॥ ೧೬ ॥
ಸಲಿಲಂ ಸಲಿಲೇಚ್ಛೂನಾಂ ಛತ್ರಂ ಛಾಯಾಮುಪೇಚ್ಛತಾಂ ।
ವ್ಯಜನಂ ವ್ಯಜನೇಚ್ಛೂನಾಂ ವೈಶಾಖೇ ಮಾಸಿ ಭೂಮಿಪ ॥ ೧೭ ॥
ಜಲಂ ಛತ್ರಂ ಚ ವ್ಯಜನಂ ದಾನಂ ಯೇಷಾಂ ವಿಶಿಷ್ಯತೇ ।
ಮಾಧವೇ ಮಾಸಿ ಸಂಪ್ರಾಪ್ತೇ ಬ್ರಾಹ್ಮಣಾಯ ಕುಟುಂಬಿನೇ ॥ ೧೮ ॥
ಅದತ್ವೋದಕಕುಂಭಂ ಚ ಚಾತಕೋ ಜಾಯತೇ ಭುವಿ ॥ ೧೯ ॥
ಯೋ ದದ್ಯಾಚ್ಛೀತಲಂ ತೋಯಂ ತೃಷಾರ್ತಾಯ ಮಹಾತ್ಮನೇ ।
ತಾವನ್ಮಾತ್ರೇಣ ರಾಜೇಂದ್ರ ರಾಜಸೂಯಾಯುತಂ ಲಭೇತ್ ॥ ೨೦ ॥
ಘರ್ಮಶ್ರಮಾರ್ತವಿಪ್ರಾಯ ವೀಜಯೇದ್ವ್ಯಜನೇನ ಯಃ ।
ತಾವನ್ಮಾತ್ರೇಣ ನಿಷ್ಪಾಪೋ ವಿಹಗಾಧಿಪತಿರ್ಭವೇತ್ ॥ ೨೧ ॥

---

೧೬. ಯಾವ ಪುಣ್ಯಾತ್ಮನಿಂದ ಮಾರ್ಗವನ್ನು ನಡೆದು ಬಳಲಿದ ದಾರಿಗರು ಅರವಟ್ಟಿಗೆಯಲ್ಲಿ ಜಲ, ಪಾನಕಾದಿಗಳಿಂದ ಸಂತೋಷಗೊಳಿಸಲ್ಪಟ್ಟಿರುವರೊ, ಅವನಲ್ಲಿ ಸಕಲ ದೇವತೆಗಳೂ, ಬ್ರಹ್ಮ, ವಿಷ್ಣು, ಮಹೇಶ್ವರರೂ ಸಂತೋಷಗೊಂಡಿರುವರು.

೧೭–೧೮. ರಾಜೇಂದ್ರನೆ! ವೈಶಾಖಮಾಸದಲ್ಲಿ ತೃಷ್ಣಾತುರರಾದವರಿಗೆ ಜಲವನ್ನೂ, ಬಿಸಿಲಿನಲ್ಲಿ ಬಳಲಿ ಬಂದವರಿಗೆ ಅರವಟ್ಟಿಗೆಯ ನೆರಳನ್ನೂ, ಮೈ ಬೆವರುತ್ತಿರುವ ಪಾಂಥರಿಗೆ ಬೀಸಣಿಗೆಯ ಸೇವೆಯನ್ನೂ ಮನುಷ್ಯನು ಅವಶ್ಯಕವಾಗಿ ಅರ್ಪಿಸಲೇಬೇಕು. ವೈಶಾಖಮಾಸದಲ್ಲಿ ಕುಟುಂಬಸಹಿತನಾದ ಬ್ರಾಹ್ಮಣನಿಗೆ ಶೀತೋದಕವನ್ನೂ, ಛತ್ರಿಯನ್ನೂ, ಬೀಸಣಿಗೆಯನ್ನೂ ದಾನ ಮಾಡುವುದು ವಿಶೇಷ ಪುಣ್ಯಪ್ರದವು.

೧೯. ಆ ಕಾಲದಲ್ಲಿ ಯಾವನು ಶೀತಜಲದಿಂದ ಪೂರ್ಣವಾದ ಪಾತ್ರೆಯನ್ನು ದಾನಮಾಡುವುದಿಲ್ಲವೊ, ಅವನು ಮುಂದಿನ ಜನ್ಮದಲ್ಲಿ ಚಾತಕಪಕ್ಷಿಯ ಜನ್ಮವನ್ನು ಪಡೆಯುವನು.

೨೦. ಎಲೈ ರಾಜೋತ್ತಮನೆ! ಯಾವ ಮನುಷ್ಯನು ನೀರಡಿಕೆಯಿಂದ ಬಳಲಿರುವ ಮಹಾತ್ಮನಾದವನಿಗೆ ತಂಪಾದ ನೀರನ್ನು ಕೊಡುವನೊ, ಅವನು ಅಷ್ಟು ಮಾತ್ರದಿಂದಲೇ ಹತ್ತುಸಾವಿರ ರಾಜಸೂಯಯಜ್ಞಗಳನ್ನು ಮಾಡಿದ ಫಲವನ್ನು ಹೊಂದುವನು.

೨೧. ಬಿಸಿಲಿನ ಹೊಡೆತದಿಂದ ಆರ್ತನಾಗಿರುವ ಬ್ರಾಹ್ಮಣನಿಗೆ ಯಾವನು ಬೀಸಣಿಗೆಯಿಂದ ಬೀಸುವನೊ, ಅಷ್ಟರಿಂದಲೇ ಅವನು ಸಮಸ್ತ ಪಾಪಗಳನ್ನೂ ಕಳೆದುಕೊಂಡು ಸ್ವರ್ಗಲೋಕದಲ್ಲಿ ಮಹೇಂದ್ರಪದವಿಯನ್ನು ಹೊಂದುವನು.

ಅದತ್ವಾ ವ್ಯಜನಂ ಭೂಪ ವೈಶಾಖೇ ತು ದ್ವಿಜಾತಯೇ ।
ವಾತರೋಗಶತಾಕೀರ್ಣೋ ನರಕಾನೇವ ವಿಂದತಿ ॥ ೨೨ ॥
ಯೋ ವೀಜಯೇತ್ ಪಟೇನಾಽಪಿ ಪಥಿ ಶ್ರಾಂತದ್ವಿಜೋತ್ತಮಂ ।
ತಾವತಾಥ ವಿಮುಕ್ತೋಽಸೌ ವಿಷ್ಣುಸಾಯುಜ್ಯಮಾಪ್ನುಯಾತ್ ॥ ೨೩ ॥
ಯಸ್ತಾಲವ್ಯಜನಂ ವಾಽಪಿ ದತ್ವಾ ಶುದ್ಧೇನ ಚೇತಸಾ ।
ವಿಧೂಯ ಸರ್ವಪಾಪಾನಿ ಬ್ರಹ್ಮಲೋಕಂ ಸ ಗಚ್ಛತಿ ॥ ೨೪ ॥
ಸದ್ಯಃ ಶ್ರಮಹರಂ ಪುಣ್ಯಂ ನದದ್ಯಾದ್ವ್ಯಜನಂ ನರಃ ।
ನಾರಕೀಂ ಯಾತನಾಂ ಭುಂಕ್ತ್ವಾ ಕಶ್ಮಲೋ ಜಾಯತೇ ಭುವಿ ॥ ೨೫ ॥
ಆಧ್ಯಾತ್ಮಿಕಾದಿ ದುಃಖಾನಾಂ ಶಾಂತಯೇ ಮನುಜೇಶ್ವರ ।
ಛತ್ರಂ ದದ್ಯಾತ್ಪ್ರಯತ್ನೇನ ವೈಶಾಖೇ ಮಾಸಿ ವಾಽಸಕೃತ್ ॥ ೨೬ ॥
ಅಚ್ಛತ್ರದೋ ನರೋ ಯಸ್ತು ವೈಶಾಖೇ ಮಾಧವಪ್ರಿಯೇ ।
ಛಾಯಾಹೀನೋ ಮಹಾಕ್ರೂರಃ ಪಿಶಾಚೋ ಭುವಿ ಜಾಯತೇ ॥ ೨೭ ॥

---

೨೨. ಎಲೈ ಭೂಪಾಲಕನೆ! ವೈಶಾಖಮಾಸದಲ್ಲಿ ಆತುರನಾಗಿ ಬಂದ ಬ್ರಾಹ್ಮಣೋತ್ತಮನಿಗೆ ಬೀಸಣಿಗೆಯನ್ನು ಯಾವನು ಕೊಡುವುದಿಲ್ಲವೊ, ಅವನು ಶರೀರದಲ್ಲಿ ನೂರಾರು ವಾತೋತ್ಥಗಳಾದ ರೋಗಗಳಿಂದ ಹಿಂಸೆಗೊಳ್ಳುತ್ತ ಕಡೆಗೆ ಅನೇಕ ನರಕಗಳನ್ನನುಭವಿಸುವನು.

೨೩. ಯಾವನು ದಾರಿಯನ್ನು ನಡೆದು ಬಳಲಿರುವ ಬ್ರಾಹ್ಮಣೋತ್ತಮನಿಗೆ ಬಟ್ಟೆಯಿಂದಲಾದರೂ ಬೀಸಿ ಕ್ಲೇಶವನ್ನು ಹರಿಸುವನೊ, ಅವನು ಅಷ್ಟರಿಂದಲೇ ಮೋಕ್ಷಕ್ಕೆ ಅಧಿಕಾರಿಯಾಗಿ ವಿಷ್ಣುವಿನ ಸಾಯುಜ್ಯವನ್ನು ಹೊಂದಿ ಆನಂದ ಪಡುವನು.

೨೪. ಯಾವನು ತಾಳೆಯ ಗರಿಗಳ ಬೀಸಣಿಗೆಯಿಂದ ಬಂದವರಿಗೆ ಬೀಸಿ ಪರಿಶುದ್ಧವಾದ ಮನಸ್ಸುಳ್ಳವನಾಗಿರುವನೊ, ಅವನು ಸಕಲ ಪಾಪಗಳನ್ನೂ ಕಳೆದುಕೊಂಡು ಬ್ರಹ್ಮಲೋಕವನ್ನು ಸೇರುವನು.

೨೫. ತತ್ಕ್ಷಣದಲ್ಲಿಯೇ ಆಯಾಸವನ್ನು ಪರಿಹರಿಸುವುದೂ, ಪುಣ್ಯಪ್ರದವೂ ಆದ ಬೀಸಣಿಗೆಯನ್ನು ಯಾವನು ದಾನಮಾಡುವುದಿಲ್ಲವೊ, ಅವನು ನರಕಗಳ ಅನೇಕ ಯಾತನೆಗಳನ್ನನುಭವಿಸಿ ಪುನಃ ಭೂಲೋಕದಲ್ಲಿ ಕುಷ್ಠರೋಗವಂತನಾಗಿ ಹುಟ್ಟುವನು.

೨೬. ಎಲೈ ಮಹಾರಾಜನೆ! ಆಧ್ಯಾತ್ಮಿಕ, ಆಧಿದೈವಿಕ ಮತ್ತು ಆಧಿಭೌತಿಕ ತಾಪಗಳ ನಿವಾರಣೆಗಾಗಿ ಪ್ರತಿಯೊಬ್ಬ ಮಾನವನೂ ವೈಶಾಖಮಾಸದಲ್ಲಿ ಒಮ್ಮೆಯಾದರೂ ಛತ್ರವನ್ನು ದಾನಮಾಡಲು ಪ್ರಯತ್ನಮಾಡಬೇಕು.

೨೭. ಯಾವ ಮಾನವನು ಶ್ರೀಮನ್ನಾರಾಯಣನಿಗೆ ಪರಮಪ್ರಿಯವಾದ

ಯೋ ದದ್ಯಾತ್ಪಾದುಕೇ ದಿವ್ಯೇ ಮಾಧವೇ ಮಾಧವಪ್ರಿಯೇ ।
ಯಮದೂತೌ ತಿರಸ್ಕೃತ್ಯ ವಿಷ್ಣುಲೋಕಂ ಸ ಗಚ್ಛತಿ ॥ ೨೮ ॥
ಪಾದತ್ರಾಣಂ ತು ಯೋ ದದ್ಯಾತ್ ವೈಶಾಖೇ ಮಾಧವಾಗಮೇ ।
ನ ತಸ್ಯ ನರಕೋ ಲೋಕೋ ನ ಕ್ಲೇಶಾ ಐಹಿಕಾಶ್ಚ ಯೇ ॥ ೨೯ ॥
ಪಾದುಕೇ ಯಾಚಮಾನಾಯ ಯೋ ದದ್ಯಾದ್ಬ್ರಾಹ್ಮಣಾಯ ಚ ।
ಸ ಭೂಪಾಲೋ ಭವೇದ್ಭೂಮೌ ಕೋಟಿಜನ್ಮಸ್ವಸಂಶಯಂ ॥ ೩೦ ॥
ಅನಾಥಮಂಡಪಂ ಮಾರ್ಗೇ ಶ್ರಮಹಾರಿ ಕರೋತಿ ಯಃ ।
ತಸ್ಯ ಪುಣ್ಯಫಲಂ ವಕ್ತುಂ ಬ್ರಹ್ಮಣಾಽಪಿ ನ ಶಕ್ಯತೇ ॥ ೩೧ ॥
ಮಧ್ಯಾಹ್ನೇ ಬ್ರಾಹ್ಮಣಂ ಪ್ರಾಪ್ತಮತಥಿಂ ಭೋಜಯೇದ್ಯದಿ ।
ನ ತಸ್ಯ ಫಲವಿಶ್ರಾಂತಿರ್ಬ್ರಹ್ಮಣಾಽಪಿ ನಿರೂಪಿತಾ ॥ ೩೨ ॥

---

ವೈಶಾಖಮಾಸದಲ್ಲಿ ಒಂದು ಛತ್ರವನ್ನಾದರೂ ದಾನಮಾಡುವುದಿಲ್ಲವೊ, ಅವನು ಮಹಾಕ್ರೂರನಾದ ಪಿಶಾಚಿಯಾಗಿ ಹುಟ್ಟಿ ನಿಲ್ಲಲು ನೆರಳಿಲ್ಲದೆ ಭೂಮಂಡಲದಲ್ಲಿ ಸುಳಿದಾಡುತ್ತಿರುವನು.

೨೮. ಯಾವನು ಮಾಧವಸ್ವರೂಪನಾದ ವಿಪ್ರನಿಗೆ ಪ್ರಿಯತಮವಾದ ವೈಶಾಖಮಾಸದಲ್ಲಿ ದಿವ್ಯವಾದ ಪಾದರಕ್ಷಾದ್ವಯವನ್ನು ದಾನಮಾಡುವನೊ, ಅವನು ಯಮದೂತರನ್ನೂ ಧಿಕ್ಕರಿಸುತ್ತ ವಿಷ್ಣುಲೋಕವನ್ನು ಸೇರುವನು.

೨೯. ಪಾದತ್ರಾಣಗಳಾದ ಪಾವುಗೆ, ಚಪ್ಪಲಿ ಮುಂತಾದುವನ್ನು ಯಾವನು ವಸಂತಋತುವಿನಲ್ಲಿ ವೈಶಾಖಮಾಸದ ಪ್ರಾರಂಭದಲ್ಲಿ ದಾನಮಾಡುವನೊ, ಅವನಿಗೆ ನರಕಲೋಕದ ವಾಸವು ಸಂಭವಿಸುವುದಿಲ್ಲ. ಮತ್ತು ಈ ಲೋಕದ ಅನೇಕ ಕ್ಲೇಶಗಳೂ ದೂರವಾಗುವುವು.

೩೦. ಯಾವನು ಯಾಚಕನಾಗಿ ಬಂದಿರುವ ಬ್ರಾಹ್ಮಣೋತ್ತಮನಿಗೆ ಪಾದುಕೆಗಳನ್ನು ದಾನಮಾಡುವನೊ, ಅವನು ಒಂದು ಕೋಟಿ ಜನ್ಮಗಳಲ್ಲಿ ಮಹಾರಾಜನಾಗಿ ಹುಟ್ಟಿ ಭೂಮಂಡಲವನ್ನಾಳುವನು. ಈ ವಿಷಯದಲ್ಲಿ ಸಂಶಯವಿಲ್ಲವು.

೩೧. ದೀನಾನಾಥರ ಅನುಕೂಲಕ್ಕಾಗಿ ಯಾವನು ಮಾರ್ಗಮಧ್ಯದಲ್ಲಿ ಆಯಾಸ ಪರಿಹಾರಕವಾದ ಮಂಟಪವನ್ನು ರಚಿಸುವನೊ, ಅವನು ಸಂಪಾದಿಸಿದ ಪುಣ್ಯದ ಪ್ರಭಾವವನ್ನು ವರ್ಣಿಸಲು ಬ್ರಹ್ಮದೇವನಿಗೂ ಶಕ್ಯವಾಗುವುದಿಲ್ಲ.

೩೨. ಅನಾಹೂತನಾಗಿ ಮನೆಗೆ ಪ್ರಾಪ್ತನಾದ ಬ್ರಾಹ್ಮಣನನ್ನು ಮಧ್ಯಾಹ್ನ ಕಾಲದಲ್ಲಿ ಯಾವನು ಊಟ ಉಪಚಾರಗಳಿಂದ ತೃಪ್ತಿಪಡಿಸುವನೊ, ಅವನು ಸಂಪಾದಿಸಿದ ಪುಣ್ಯವು ಎಂದಿಗೆ ಕೊನೆಗಾಣುವುದೆಂಬುದನ್ನು ಹೇಳುವುದಕ್ಕೆ ಬ್ರಹ್ಮನೂ ಶಕ್ತನಲ್ಲ.

ಸದ್ಯಃ ಸ್ವಾಪ್ಯಾಯನಂ ನೃಣಾಮನ್ನದಾನಂ ನರಾಧಿಪ ।
ತಸ್ಮಾನ್ನಾನ್ನೇನ ಸದೃಶಂ ದಾನಂ ಲೋಕೇಷು ವಿದ್ಯತೇ ॥ ೩೩ ॥
ಮಾರ್ಗಶ್ರಾಂತಾಯ ವಿಪ್ರಾಯ ಪ್ರಶ್ರಯಂ ಪ್ರದದಾತಿ ಯಃ ।
ತಸ್ಯ ಪುಣ್ಯಫಲಂ ವಕ್ತುಂ ಬ್ರಹ್ಮಣಾಪಿ ನ ಶಕ್ಯತೇ ॥ ೩೪ ॥
ದಾರಾಪತ್ಯಗೃಹಾದೀನಿ ವಾಸೋಽಲಂಕಾರಭೂಷಣಂ ।
ಅಸಹ್ಯಂ ನಾಶ್ನತಃ ಪುಂಸಃ ಸಹ್ಯಂ ಭುಕ್ತವತೋ ಧ್ರುವಂ ॥ ೩೫ ॥
ತಸ್ಮಾದನ್ನಮಯಂ ದಾನಂ ನ ಭೂತಂ ನ ಭವಿಷ್ಯತಿ ।
ವೈಶಾಖೇ ಯೇನ ಚಾದತ್ತಂ ಮಾರ್ಗಶ್ರಾಂತೇ ಚ ಭೂಸುರೇ ॥ ೩೬ ॥
ಸ ಪಿಶಾಚೋ ಭವೇದ್ಭೂಮೌ ಸ್ವಮಾಂಸಾನ್ಯೇವ ಖಾದತಿ ।
ಯಥಾವಿಭೂತಿ ದಾತವ್ಯಂ ತಸ್ಮಾದನ್ನಂ ದ್ವಿಜಾತಯೇ ॥ ೩೭ ॥
ಅನ್ನದೋ ಮಾತೃಪಿತ್ರಾದೀನ್ ಪಿಸ್ಮಾರಯತಿ ಭೂಮಿಪ ।
ತಸ್ಮಾದನ್ನಂ ಪ್ರಶಂಸಂತಿ ಲೋಕಾಸ್ತ್ರೈಲೋಕ್ಯವರ್ತಿನಃ ॥ ೩೮ ॥

---

೩೩. ಮಹಾರಾಜನೆ! ಅನ್ನದಾನವೆಂಬುದು ಸಮಸ್ತ ಮನುಷ್ಯರಿಗೂ ತತ್ಕ್ಷಣದಲ್ಲಿಯೇ ಆತ್ಮತೃಪ್ತಿಯನ್ನುಂಟುಮಾಡುವುದು. ಆದುದರಿಂದ ಅನ್ನದಾನಕ್ಕೆ ಸದೃಶವಾದ ದಾನವು ಮೂರು ಲೋಕಗಳಲ್ಲಿಯೂ ಮತ್ತೊಂದಿಲ್ಲ.

೩೪. ದಾರಿಯನ್ನು ನಡೆದು ನಡೆದು ಬಿಸಿಲಿನಲ್ಲಿ ಬಳಲಿರುವ ಬ್ರಾಹ್ಮಣನಿಗೆ ಯಾವನು ಆಶ್ರಯವನ್ನೂ, ನೆರಳನ್ನೂ ಕೊಟ್ಟು ಸಂತೋಷಪಡಿಸುವನೊ, ಅವನ ಪುಣ್ಯಫಲದ ಪ್ರಮಾಣವನ್ನು ತಿಳಿಸಲು ಬ್ರಹ್ಮದೇವನಿಂದಲೂ ಸಾಧ್ಯವಾಗುವುದಿಲ್ಲ.

೩೫. ಅನ್ನವಿಲ್ಲದ ಮನುಷ್ಯನಿಗೆ ಹೆಂಡತಿ, ಮಕ್ಕಳು, ಮನೆಗಳು, ವಸ್ತ್ರಗಳು, ಅಲಂಕಾರಗಳು, ಆಭರಣಗಳು ಮುಂತಾದುವುಗಳೆಲ್ಲವೂ ಸಹಿಸಲಶಕ್ಯವಾಗಿ ಉದಾಸೀನಭಾವಕ್ಕೆ ವಿಷಯಗಳಾಗಿರುವುವು. ಆದರೆ ಅವುಗಳೇ ಭೋಜನಮಾಡಿದ ಮನುಷ್ಯನಿಗೆ ಅನುಕೂಲಗಳಾಗಿ ತೋರುವುವು. ಇದು ನಿಶ್ಚಯವಾದ ವಿಷಯವು.

೩೬–೩೭. ಆದುದರಿಂದ ಅನ್ನದಾನಕ್ಕೆ ಸಮಾನವಾದ ದಾನವು ಹಿಂದೆ ಎಂದೂ ಇರಲಿಲ್ಲ. ಮುಂದೆಯೂ ಇರುವುದಿಲ್ಲ. ಇಂತಹ ಅನ್ನವನ್ನು ವೈಶಾಖ ಮಾಸದಲ್ಲಿ ಮಾರ್ಗಕ್ರಮಣದಿಂದ ಶ್ರಾಂತನಾಗಿ ಬಂದಿರುವ ಬ್ರಾಹ್ಮಣನಿಗೆ ನೀಡುವುದಿಲ್ಲವೊ, ಅವನು ಭೂಲೋಕದಲ್ಲಿ ಪಿಶಾಚನಾಗಿ ನಿಲ್ಲುವನು. ಮತ್ತು ಆಹಾರಾಭಾವದಿಂದ ತನ್ನ ಮಾಂಸವನ್ನೇ ಭಕ್ಷಣಮಾಡುವ ಅವಸ್ಥೆಗೆ ಒಳಗಾಗುವನು.

೩೮. ಎಲೈ ರಾಜನೆ! ಆತುರನಾದವನಿಗೆ ಅನ್ನವನ್ನು ನೀಡಿದವನು ತಾಯಿ

ಮಾತರಃ ಪಿತರಶ್ಚಾಪಿ ಕೇವಲಂ ಜನ್ಮಹೇತವಃ ।
ಅನ್ನದಂ ಪಿತರಂ ಲೋಕೇ ವದಂತಿ ಚ ಮನೀಷಿಣಃ ॥ ೩೯ ॥
ಅನ್ನದೇ ಸರ್ವತೀರ್ಥಾನಿ ಅನ್ನದೇ ಸರ್ವದೇವತಾಃ ।
ಅನ್ನದೇ ಸರ್ವಧರ್ಮಾಶ್ಚ ತಿಷ್ಠಂತ್ಯರಿಧರಾಜಯ ॥ ೪೦ ॥

ಇತಿ ಶ್ರೀಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ದ್ವಿತೀಯೇ ವೈಷ್ಣವಖಂಡೇ ವೈಶಾಖಮಾಸಮಾಹಾತ್ಮ್ಯೇ ನಾರದಾಂಬರೀಷಸಂವಾದೇ "ದಾನಮಾಹಾತ್ಮ್ಯಂ" ನಾಮ ದ್ವಿತೀಯೋಽಧ್ಯಾಯಃ

---

ತಂದೆಯರನ್ನೂ ಮರೆಸಿಬಿಡುವನು. ಆದುದರಿಂದಲೇ ಮೂರು ಲೋಕಗಳಲ್ಲಿ ವಾಸಮಾಡುವ ಸಕಲ ನಿವಾಸಿಗಳೂ ಅನ್ನವನ್ನೇ ದೊಡ್ಡದೆಂದು ಪ್ರಶಂಸೆ ಮಾಡುವರು.

೩೯. ತಾಯಿಗಳೂ ತಂದೆಗಳೂ ಮನುಷ್ಯರಿಗೆ ಕೇವಲ ಜನನಕ್ಕೆ ಮಾತ್ರ ಕಾರಣಭೂತರಾಗಿರುವರು. ಆದರೆ ಬುದ್ಧಿವಂತರಾದವರು ಅನ್ನವನ್ನಿತ್ತು ಪೋಷಿಸಿದವನನ್ನೇ ನಿಜವಾದ ತಂದೆಯೆಂದು ಹೇಳುವರು.

೪೦. ಅನ್ನದಾನವನ್ನು ಮಾಡುವವನಲ್ಲಿಯೇ ಸಮಸ್ತ ತೀರ್ಥಗಳೂ ನೆಲಸಿರುವುವು. ಅವನಲ್ಲಿಯೇ ಸಮಸ್ತ ದೇವತೆಗಳೂ ಸನ್ನಿಹಿತರಾಗಿರುವರು. ಎಲೈ ಶತ್ರುಭೂಮಿಗಳನ್ನು ಜಯಿಸಿದ ಅಂಬರೀಷನೆ! ಅನ್ನದಾನವನ್ನು ಮಾಡುವವನಲ್ಲಿಯೇ ಸಕಲ ಧರ್ಮಗಳೂ ವಾಸಮಾಡಿಕೊಂಡಿರುವುವು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀಸ್ಕಾಂದಮಹಾಪುರಾಣದ ಎರಡನೆಯ ವೈಷ್ಣವಖಂಡದ ವೈಶಾಖಮಾಸಮಾಹಾತ್ಮ್ಯದ ನಾರದಾಂಬರೀಷಸಂವಾದದಲ್ಲಿ "ದಾನ ಮಾಹಾತ್ಮ್ಯ"ವೆಂಬ ಎರಡನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥ ತ್ರಯೋದಶೋಽಧ್ಯಾಯಃ

### ದಾನ ನಿರೂಪಣಂ

ನಾರದ ಉವಾಚ:—

ಯೋ ಮರ್ತ್ಯೋ ದ್ವಿಜವರ್ಯಾಯ ಪರ್ಯಂಕಂ ತು ದದಾತಿ ಹಿ ।
ಯತ್ರ ಸ್ವಸ್ಥಃ ಸುಖಂ ಶೇತೇ ಶೀತಾನಿಲನಿಷೇವಿತಃ ॥ ೧ ॥
ಧರ್ಮಸಾಧನಭೂತೇ ಹಿ ದೇಹೇ ನೈರುಜ್ಯಮಾಪ್ನುತೇ ।
ತಂ ದತ್ವಾ ಸಕಲಂ ಪಾಪಂ ನಿರಸ್ಯ ಗತಕಲ್ಮಷಃ ॥ ೨ ॥
ಅಖಂಡಪದವೀಂ ಯಾತಿ ಯೋಗಿನಾಮಪಿ ದುರ್ಲಭಾಂ ।
ವೈಶಾಖೇ ಘರ್ಮತಪ್ತಾನಾಂ ಶ್ರಾಂತಾನಾಂ ತು ದ್ವಿಜನ್ಮನಾಂ ॥ ೩ ॥
ದತ್ವಾ ಶ್ರಮಾಪಹಂ ದಿವ್ಯಂ ಪರ್ಯಂಕಂ ಮನುಜೇಶ್ವರ ।
ನ ಜಾತು ಸೀದತೇ ಲೋಕೇ ಜನ್ಮಮೃತ್ಯುಜರಾದಿಭಿಃ ॥ ೪ ॥
ಗ್ರಹೀತ್ವಾ ಬ್ರಾಹ್ಮಣೋ ಯತ್ರ ಶೇತೇ ಚಾಜೀವಮಾಸ್ಥಿತಃ ।
ಆಸೀನೇ ಸಕಲಂ ಪಾಪಂ ಜ್ಞಾನತೋಽಜ್ಞಾನತಃ ಕೃತಂ ॥ ೫ ॥

---

### ಕನ್ನಡದ ಅನುವಾದ

#### ದಾನ ನಿರೂಪಣವು

೧. ನಾರದನು ನಿರೂಪಿಸುತ್ತಾನೆ:—ಬ್ರಾಹ್ಮಣಶ್ರೇಷ್ಠನು ಸುಖವಾಗಿ ತಂಗಾಳಿಯಿಂದ ಸೇವಿತನಾಗಿ ಮಲಗುವುದಕ್ಕೆ ಅನುಕೂಲವಾಗಿರುವಂತಹ ಪರ್ಯಂಕವನ್ನು ಯಾವನು ಆತನಿಗೆ ದಾನಮಾಡುವನೊ, ಅವನು ಸಕಲ ಧರ್ಮಗಳ ಆಚರಣೆಗೂ ಮುಖ್ಯ ಸಾಧನವೆನಿಸಿದ ತನ್ನ ದೇಹದ ವಿಷಯದಲ್ಲಿ ಆರೋಗ್ಯಭಾಗ್ಯವನ್ನು ಪಡೆಯುವನು.

೨. ಆ ಪರ್ಯಂಕವನ್ನು ದಾನಮಾಡಿದ ಪುಣ್ಯದ ಫಲವಾಗಿ ಮನುಷ್ಯನು ತನ್ನ ಸಮಸ್ತ ಪಾತಕಗಳನ್ನೂ ಕಳೆದುಕೊಂಡು ಪರಿಶುದ್ಧನಾಗಿ ಪರಮಯೋಗಿಗಳಿಗೂ ದುರ್ಲಭವಾದ ಅವಿಚ್ಛಿನ್ನಪದವಿಯನ್ನು ಹೊಂದುವನು.

೩–೪. ಎಲೈ ರಾಜೇಶ್ವರನೆ! ವೈಶಾಖಮಾಸದಲ್ಲಿ ಬಿಸಿಲಿನ ತಾಪದಿಂದ ಬಳಲಿ ವಿಶ್ರಾಂತಿಯನ್ನು ಬಯಸುತ್ತಿರುವ ಬ್ರಾಹ್ಮಣರಿಗೆ ಆಯಾಸವನ್ನು ಪರಿಹರಿಸುವ ದಿವ್ಯಪರ್ಯಂಕಗಳನ್ನು ಕೊಡಲು ಮನುಷ್ಯನು ಭೂಲೋಕದಲ್ಲಿ ಮುಪ್ಪು, ಮರಣ, ಜನನಗಳೆಂಬ ಕ್ಲೇಶಗಳಿಗೆ ಸಿಕ್ಕಿ ನರಳುವುದಿಲ್ಲ.

೫–೬. ರಾಜೇಂದ್ರನೆ! ಯಾವನು ದಾನಮಾಡಿದ ಮಂಚವನ್ನು ಸ್ವೀಕರಿಸಿ ಒಬ್ಬ ಬ್ರಾಹ್ಮಣನು ಯಾವಜ್ಜೀವವೂ ಅದರಲ್ಲಿ ಸುಖವಾಗಿ ಶಯನಮಾಡುವನೊ

ವಿಲಯಂ ಯಾತಿ ರಾಜೇಂದ್ರ ಕರ್ಪೂರ ಇವ ಚಾಗ್ನಿನಾ ।
ಶಯನೇ ಬ್ರಹ್ಮನಿರ್ವಾಣಂ ಸ ನರೋ ಯಾತಿ ನಿಶ್ಚಿತಂ ॥ ೬ ॥
ಯೋ ದದ್ಯಾತ್‌ಕಶಿಪುಂ ಮಾಸೇ ವೈಶಾಖೇ ಸ್ನಾನವಲ್ಲಭೇ ।
ಸರ್ವಭೋಗಸಮಾಯುಕ್ತಸ್ತಸ್ಮಿನ್ನೇವ ಹಿ ಜನ್ಮನಿ ॥ ೭ ॥
ಸಾನ್ವಯೋ ವರ್ತತೇ ನೂನಂ ರೋಗಾದಿಭಿರನಾಹತಃ ।
ಆಯುಷ್ಯಂ ಪರಮಾರೋಗ್ಯಂ ಯಶೋ ಧೈರ್ಯಂ ಚ ವಿಂದತಿ ॥ ೮ ॥
ನಾಧಾರ್ಮಿಕಃ ಕುಲೇ ತಸ್ಯ ಜಾಯತೇ ಶತಪೌರುಷಂ ।
ಭುಕ್ತ್ವಾತು ಸಕಲಾನ್ ಭೋಗಾನ್ ತತಃ ಪಂಚತ್ವಮೇಷ್ಯತಿ ॥ ೯ ॥
ನಿರ್ಧೂತಾಖಿಲಪಾಪಸ್ತು ಬ್ರಹ್ಮನಿರ್ವಾಣಮೃಚ್ಛತಿ ।
ಶ್ರೋತ್ರಿಯಾಯ ದ್ವಿಜೇಂದ್ರಾಯ ಯೋ ದದ್ಯಾದುಪಬರ್ಹಣಂ ॥ ೧೦ ॥
ಸುಖಂ ನಿದ್ರಾಂವಿನಾ ಯೇನ ನ ನೃಣಾಂ ಜಾಯತೇ ಕ್ವಚಿತ್ ।
ಸರ್ವೇಷಾಮಾಶ್ರಯೋ ಭೂತ್ವಾ ಭುವಿ ಸಾಮ್ರಾಜ್ಯಮಶ್ನುತೇ ॥ ೧೧ ॥

---

ಆ ಬ್ರಾಹ್ಮಣೋತ್ತಮನು ಕುಳಿತಮಾತ್ರದಿಂದಲೇ ದಾತೃವು ಮಾಡಿದ ಜ್ಞಾನ ಮತ್ತು ಅಜ್ಞಾನಪೂರ್ವಕವಾದ ಪಾತಕಗಳೆಲ್ಲವೂ ಬೆಂಕಿಯನ್ನು ಹೊತ್ತಿಸಿದ ಕರ್ಪೂರದಂತೆ ನಾಶವನ್ನು ಹೊಂದುವುವು. ಶಯನಮಾಡುವ ಮಾತ್ರದಿಂದಲೇ ಕೊಟ್ಟವನು ಪುನರಾವೃತ್ತಿರಹಿತವಾದ ಬ್ರಹ್ಮಪದವಿಯನ್ನು ಹೊಂದುವುದು ನಿಶ್ಚಯವು.

೭–೮. ತೀರ್ಥಸ್ನಾನಕ್ಕೆ ಅತ್ಯುತ್ತಮವೆನಿಸಿದ ವೈಶಾಖಮಾಸದಲ್ಲಿ ಯಾವನು ಹಾಸಿಗೆಯನ್ನು ದಾನಮಾಡುವನೋ, ಅವನು ಆ ಜನ್ಮದಲ್ಲಿಯೇ ಸಮಸ್ತ ಅಭೀಪ್ಸಿತ ಭೋಗಗಳನ್ನೂ ಹೊಂದುವನು. ಆತನು ನಿಜವಾಗಿಯೂ ಪುತ್ರ ಪೌತ್ರ ಸಂತತಿಯೊಡನೆ ರೋಗಾದ್ಯುಪದ್ರವಗಳಿಂದ ಕ್ಲೇಶವನ್ನು ಹೊಂದದೆ ಜೀವಿಸುವನು. ದೀರ್ಘಾಯುಷ್ಯವನ್ನೂ ಉತ್ತಮವಾದ ಆರೋಗ್ಯ ವನ್ನೂ ದೇಶೋವಿಶಾಲವಾದ ಕೀರ್ತಿಯನ್ನೂ ಧೈರ್ಯವನ್ನೂ ಪಡೆಯುವನು.

೯. ಆತನ ವಂಶದಲ್ಲಿ ನೂರು ತಲೆಗಳವರೆಗೂ ಯಾವನೂ ಧರ್ಮ ಬಾಹಿರನಾಗಿ ಜನಿಸುವುದಿಲ್ಲ. ಇಂತು ಹಾಸಿಗೆಯನ್ನು ದಾನಮಾಡಿದ ಮಾನವನು ಇಹಲೋಕದಲ್ಲಿ ಸಮಸ್ತ ಭೋಗಗಳನ್ನೂ ಅನುಭವಿಸಿ ದೇಹವನ್ನು ಬಿಡುವನು.

೧೦–೧೧. ಅವನು ಸಕಲ ಪಾಪಗಳಿಂದಲೂ ಮುಕ್ತನಾಗಿ ಬ್ರಹ್ಮೈಕ್ಯವನ್ನು ಪಡೆಯುವನು. ಶ್ರೋತ್ರಿಯನಾದ ಬ್ರಾಹ್ಮಣೋತ್ತಮನಿಗೆ ಯಾವನು ತಲೆ ದಿಂಬನ್ನು ದಾನಮಾಡುವನೋ, ಅವನು ಸಕಲ ಜನರಿಗೂ ಆಶ್ರಯಭೂತನಾಗಿ ಭೂಲೋಕದಲ್ಲಿ ವಿಶಾಲವಾದ ರಾಜ್ಯದ ಆಡಳಿತವನ್ನು ಪಡೆಯುವನು. ತಲೆದಿಂಬಿಲ್ಲದೆ ಎಂದಿಗೂ ಯಾರಿಗೂ ಸುಖವಾಗಿ ನಿದ್ರೆಯು ಬರುವುದಿಲ್ಲವಷ್ಟೆ.

ಪುನಃ ಸುಖೀ ಪುನರ್ಭೋಗೀ ಪುನರ್ಧರ್ಮಪರಾಯಣಃ ।
ಆಸಪ್ತಜನ್ಮರಾಜೇಂದ್ರ ಜಾಯತೇ ಸರ್ವತೋ ಜಯೀ ॥ ೧೨ ॥
ಪಶ್ಚಾತ್ಸಪ್ತ ಕುಲೈರ್ಯುಕ್ತೋ ಬ್ರಹ್ಮಭೂಯಾಯ ಕಲ್ಪತೇ ।
ತಾರ್ಣಂ ಕಟಂ ತು ಯೋ ದದ್ಯಾತ್ ಕಟಮನ್ಯದಥಾಪಿವಾ ॥ ೧೩ ॥
ತತ್ರ ಶೇತೇ ಸ್ವಯಂ ವಿಷ್ಣುರ್ಯತ್ರಸ್ಥಃ ಪರಮೇಶ್ವರಃ ।
ಯಥಾ ಜಲಗತಾಚೋರ್ಣಾ ನ ಜಲೈರ್ಭಿದ್ಯತೇಕ್ವಚಿತ್ ॥ ೧೪ ॥
ತಥಾ ಸಂಸಾರಗೋ ಜಂತುಃ ಸಂಸಾರೇ ನ ಚ ಬಧ್ಯತೇ ।
ಆಸನೇ ಶಯನೇ ಸಕ್ತಃ ಕಟದಃ ಸರ್ವತಃ ಸುಖೀ ॥ ೧೫ ॥
ಪ್ರಶ್ರಯೇ ಶಯನಾರ್ಥಾಯ ಯೋ ದದ್ಯಾತ್ಕಟಕಂಬಲಂ ।
ತಾವನ್ಮಾತ್ರೇಣ ಮುಕ್ತಸ್ಸ್ಯಾನ್ನಾತ್ರ ಕಾರ್ಯಾವಿಚಾರಣಾ ॥ ೧೬ ॥
ನಿದ್ರಯಾ ಹೀಯತೇ ದುಃಖಂ ನಿದ್ರಯಾ ಹೀಯತೇ ಶ್ರಮಃ ।
ಸಾ ನಿದ್ರಾ ಕಟಸಂಸ್ಥಸ್ಯ ಸುಖಂ ಸಂಜಾಯತೇ ಧ್ರುವಂ ॥ ೧೭ ॥

---

೧೨. ಅವನು ಮತ್ತೆ ಸುಖಗಳನ್ನು ಪಡೆಯುವನು. ಮತ್ತೆ ಭೋಗಗಳನ್ನನುಭವಿಸುವನು. ಮತ್ತೆ ಧರ್ಮಕಾರ್ಯಗಳಲ್ಲಿಯೇ ನಿರತನಾಗಿರುವನು. ಎಲೈ ರಾಜೇಂದ್ರನೆ! ಇಂತು ಆತನು ಏಳು ಜನ್ಮಗಳವರೆಗೂ ಸರ್ವಪ್ರಕಾರದಿಂದಲೂ ವಿಜಯಶಾಲಿಯಾಗುವನು.

೧೩. ಬಳಿಕ ಏಳು ತಲೆಯವರೊಡನೆ ಕೂಡಿಕೊಂಡು ಬ್ರಹ್ಮಲೋಕಾವಾಪ್ತಿಗೆ ಅರ್ಹನಾಗುವನು. ಹುಲ್ಲುಗಳಿಂದ ಮಾಡಿದ ಚಾಪೆಯನ್ನಾಗಲಿ ಇತರ ಪದಾರ್ಥಗಳಿಂದ ಮಾಡಿದವುಗಳನ್ನಾಗಲಿ ಯಾವನು ಬ್ರಾಹ್ಮಣನಿಗೆ ದಾನ ಮಾಡುವನೊ, ಆತನ ಚಾಪೆಯಲ್ಲಿ ಮಹಾವಿಷ್ಣುವು ತಾನೇ ಮಲಗಿರುವನು. ಮಹೇಶ್ವರನೂ ಅಲ್ಲಿಯೇ ಸನ್ನಿಹಿತನಾಗಿರುವನು.

೧೪–೧೫. ನೀರಿನಲ್ಲಿ ಬಿದ್ದ ಉಣ್ಣೆಯ ದಾರವು ಸುತ್ತಲಿರುವ ಜಲರಾಶಿಯಿಂದ ಎಂದಿಗೂ ಹೇಗೆ ನೆನೆದು ಭಿನ್ನವಾಗುವುದಿಲ್ಲವೊ, ಹಾಗೆಯೇ ಕಟದಾನವನ್ನುಮಾಡಿದ ಮನುಷ್ಯನು ಸಂಸಾರದ ಮಧ್ಯದಲ್ಲಿ ಸಿಕ್ಕಿಬಿದ್ದಿದ್ದರೂ ಸಂಸಾರದ ಬಂಧನಕ್ಕೆ ವಿಷಯನಾಗಲಾರನು. ಅವನು ಆಸನ ಮತ್ತು ಶಯನಗಳಲ್ಲಿಯೇ ಆಸಕ್ತನಾಗಿ ಯಾವಾಗಲೂ ಸುಖಿಯಾಗಿಯೇ ಇರುವನು.

೧೬. ಆಶ್ರಯವನ್ನಪೇಕ್ಷಿಸಿ ಬಂದವನಿಗೆ ಮಲಗುವುದಕ್ಕಾಗಿ ಚಾಪೆಯನ್ನೂ ಹೊದಿಕೆಯನ್ನೂ ಯಾವನು ಕೊಡುವನೊ, ಅವನು ಅಷ್ಟುಮಾತ್ರದಿಂದಲೇ ಮೋಕ್ಷವನ್ನು ಪಡೆಯುವನು. ಈ ವಿಷಯದಲ್ಲಿ ವಿಚಾರಮಾಡಬೇಕಾದುದೇ ಇಲ್ಲವು.

೧೭. ನಿದ್ರೆಯಿಂದಲೇ ಸಕಲ ದುಃಖವೂ ಮರೆತುಹೋಗುವುದು. ನಿದ್ರೆ

**ಯೋ ದದ್ಯಾತ್ಕಂಬಲಂ ರಾಜನ್ ವೈಶಾಖೇ ಮಾಧವಾಗಮೇ ।**
**ಅಪಮೃತ್ಯೋಃ ಕಾಲಮೃತ್ಯೋರ್ಮುಕ್ತೋ ಜೀವತಿ ವೈ ಶತಂ ॥ ೧೮ ॥**
**ದದ್ಯಾದ್ವಸ್ತ್ರಂ ಸೂಕ್ಷ್ಮತರಂ ದ್ವಿಜೇಂದ್ರೇ ಧರ್ಮಕರ್ಶಿತೇ ।**
**ಪೂರ್ಣಮಾಯುಃ ಸಮಾಪ್ನೋತಿ ಪರತ್ರ ಚ ಪರಾಂಗತಿಂ ॥ ೧೯ ॥**
**ಅತಸ್ತಾಪಹರಂ ದಿವ್ಯಂ ಕರ್ಪೂರಂ ತು ದ್ವಿಜಾತಯೇ ।**
**ದತ್ವಾ ಮೋಕ್ಷಮವಾಪ್ನೋತಿ ದುಃಖಶಾಂತಿಂ ಚ ವಿಂದತಿ ॥ ೨೦ ॥**
**ಕುಸುಮಾನಿ ಚ ಯೋ ದದ್ಯಾತ್ ಕುಂಕುಮಂ ಚ ದ್ವಿಜಾತಯೇ ।**
**ಸಾರ್ವಭೌಮೋ ಭವೇದ್ರಾಜಾ ಸರ್ವಲೋಕವಶಂಕರಃ ॥ ೨೧ ॥**
**ಪುತ್ರಪೌತ್ರಾದಿ ಭೋಗಾಂಶ್ಚ ಭುಕ್ತ್ವಾ ಮೋಕ್ಷಮವಾಪ್ನುಯಾತ್ ।**
**ತ್ವಗಸ್ಥಿಗತಸಂತಾಪಂ ಸದ್ಯೋ ಹರತಿ ಚಂದನಂ ॥ ೨೨ ॥**

---

ಯಿಂದಲೇ ಆಯಾಸವೂ ಪರಿಹೃತವಾಗುವುದು. ಆ ನಿದ್ರೆಯು ಚಾಪೆಯ ಮೇಲೆ ಮಲಗಿದವನಿಗೆ ಸುಲಭವಾಗಿ ಪ್ರಾಪ್ತವಾಗುವುದೆಂಬುದು ನಿಶ್ಚಯವು.

೧೮. ಎಲೈ ಮಹಾರಾಜನೆ! ಮಹಾವಿಷ್ಣುವು ಪ್ರಾಪ್ತನಾಗುವ ಕಾಲವಾದ ವೈಶಾಖಮಾಸದಲ್ಲಿ ಯಾವನು ಕಂಬಳವನ್ನು ದಾನಮಾಡುವನೊ, ಅವನು ಅಪಮೃತ್ಯು, ಕಾಲಮೃತ್ಯುಗಳೆರಡನ್ನೂ ಜಯಿಸಿದವನಾಗಿ ನೂರು ವರ್ಷಗಳ ಪೂರ್ಣಾಯುರ್ದಾಯವನ್ನು ಅನುಭವಿಸುವನು.

೧೯. ಬಹಳ ಹಗುರವಾದ ವಸ್ತ್ರವನ್ನು ವ್ರತೋಪವಾಸ ಧರ್ಮಗಳನ್ನಾಚರಿಸಿ ಕೃಶನಾಗಿರುವ ಬ್ರಾಹ್ಮಣೋತ್ತಮನಿಗೆ ದಾನಮಾಡಬೇಕು. ಅದರಿಂದ ಕೊಡುವವನು ಈ ಲೋಕದಲ್ಲಿ ಸಂಪೂರ್ಣವಾದ ಆಯುಸ್ಸನ್ನೂ ಪರಲೋಕದಲ್ಲಿ ಉತ್ತಮವಾದ ಸದ್ಗತಿಯನ್ನೂ ಪಡೆಯುವನು.

೨೦. ಬಿಸಿಲಿನ ತಾಪವನ್ನು ಪರಿಹರಿಸುವ ದಿವ್ಯವಾದ ಪಚ್ಚಕರ್ಪೂರವನ್ನು ಬ್ರಾಹ್ಮಣೋತ್ತಮನಿಗೆ ದಾನಮಾಡಲು ಮನುಷ್ಯನು ಸಕಲ ದುಃಖಗಳಿಂದ ಶಾಂತಿಯನ್ನು ಹೊಂದಿದವನಾಗಿ ಮೋಕ್ಷವನ್ನು ಪಡೆಯುವನು.

೨೧. ಬ್ರಾಹ್ಮಣನಾದವನಿಗೆ ಯಾವನು ಪುಷ್ಪಗಳನ್ನೂ ಕುಂಕುಮ ಕೇಸರವನ್ನೂ ಕೊಡುವನೊ, ಅವನು ರಾಜನೂ, ಸಾರ್ವಭೌಮನೂ ಆಗಿ ಸಮಸ್ತ ಭೂಮಂಡಲವನ್ನೂ ತನ್ನ ವಶದಲ್ಲಿರಿಸಿಕೊಳ್ಳಲು ಶಕ್ತನಾಗುವನು.

೨೨. ಮಕ್ಕಳು ಮೊಮ್ಮಕ್ಕಳುಗಳೇ ಮುಂತಾದ ಸಕಲ ಭೋಗಗಳನ್ನೂ ಅನುಭವಿಸಿ ಕೊನೆಯಲ್ಲಿ ಮೋಕ್ಷವನ್ನು ಅವನು ಪಡೆಯುವನು. ಚಂದನವು ಚರ್ಮ ಮತ್ತು ಎಲುಬುಗಳಲ್ಲಿರುವ ಸಂತಾಪಗಳನ್ನು ಕ್ಷಣಮಾತ್ರದಲ್ಲಿಯೇ ಪರಿಹರಿಸುವುದು. ಅದನ್ನು ದಾನಮಾಡಿದವನು ತ್ರಿವಿಧತಾಪಗಳಿಂದಲೂ ರಹಿತನಾಗಿ ಮೋಕ್ಷವನ್ನು ಹೊಂದುವನು.

ತಾಪತ್ರಯವಿನಿರ್ಮುಕ್ತಃ ತದ್ಗತ್ವಾ ಮೋಕ್ಷಮಾಪ್ನುಯಾತ್ ।
ಉಶೀರಂ ಚಾಷಕಂ ಕೌಶಂ ಯೋ ದದ್ಯಾಜ್ಜಲವಾಸಿತಂ ॥ ೨೩ ॥
ಸರ್ವಭೋಗೇಷು ರಾಜೇಂದ್ರ ಸ ತು ದೇವಸಹಾಯವಾನ್ ।
ಪಾಪಹಾನಿಂ ದುಃಖಹಾನಿಂ ಪ್ರಾಪ್ಯ ನಿರ್ವೃತಿಮಾಪ್ನುಯಾತ್ ॥ ೨೪ ॥
ಗೋರೋಚಂ ಮೃಗನಾಭಿಂ ಚ ದದ್ಯಾದ್ವೈಶಾಖಧರ್ಮವಿತ್ ।
ತಾಪತ್ರಯವಿನಿರ್ಮುಕ್ತಃ ಪರಂ ನಿರ್ವಾಣಮೃಚ್ಛತಿ ॥ ೨೫ ॥
ತಾಂಬೂಲಂ ಚ ಸಕರ್ಪೂರಂ ಯೋ ದದ್ಯಾನ್ಮೇಷಗೇ ರವೌ ।
ಸಾರ್ವಭೌಮಸುಖಂ ಭುಕ್ತ್ವಾ ಪರಂ ನಿರ್ವಾಣಮೃಚ್ಛತಿ ॥ ೨೬ ॥
ಶತಪತ್ರೀಂ ಚ ಯೂಥೀಂ ಚ ಮೇಷಮಾಸೇ ದದನ್ನರಃ ।
ಸ ಸಾರ್ವಭೌಮೋ ಭವತಿ ಪಶ್ಚಾನ್ಮೋಕ್ಷಂ ಚ ವಿಂದತಿ ॥ ೨೭ ॥
ಕೇತಕೀಂ ಮಲ್ಲಿಕಾಂ ವಾಪಿ ಯೋ ದದ್ಯಾನ್ಮಾಧವಾಗಮೇ ।
ಸ ತು ಮೋಕ್ಷಮವಾಪ್ನೋತಿ ಮಧುಶಾಸನಶಾಸನಾತ್ ॥ ೨೮ ॥

೨೩–೨೪. ಎಲೈ ರಾಜೋತ್ತಮನೆ! ಯಾವನು ಉಶೀರಮೂಲ ಮತ್ತು ಕುಶಗಳೇ ಮೊದಲಾದ ಸುಗಂಧದ್ರವ್ಯಗಳಿಂದ ಕೂಡಿದ ಸುವಾಸನೆಯ ಜಲದ ಪಾತ್ರೆಯನ್ನು ದಾನಮಾಡುವನೊ, ಅವನು ಸಕಲ ಭೋಗಗಳನ್ನನುಭವಿಸುವು ದರಲ್ಲಿಯೂ ದೇವತೆಗಳ ಸಹಾಯವನ್ನು ಹೊಂದುವವನಾಗಿರುವನು. ಮತ್ತು ಪಾಪಗಳ ನಾಶವನ್ನೂ ದುಃಖಗಳ ಅಂತವನ್ನೂ ಪಡೆದು ಮೋಕ್ಷದ ಆನಂದಕ್ಕೆ ಭಾಗಿಯಾಗುವನು.

೨೫. ಗೋರೋಚನವನ್ನೂ ಕಸ್ತೂರಿಯನ್ನೂ ವೈಶಾಖಮಾಸಮಾಹಾತ್ಮ್ಯೆ ಯನ್ನು ತಿಳಿದ ಯಾವ ಪುರುಷನು ದಾನಮಾಡುವನೊ, ಅವನು ತಾಪತ್ರಯ ಗಳನ್ನೆಲ್ಲ ಕಳೆದುಕೊಂಡು ಪರಾತ್ಪರವಾದ ನಿರ್ವಾಣವನ್ನು ಹೊಂದುವನು.

೨೬. ಸೂರ್ಯನು ಮೇಷರಾಶಿಯಲ್ಲಿ ಸಂಚರಿಸುವ ಮಾಸದಲ್ಲಿ ಕರ್ಪೂರ ಸಹಿತವಾದ ತಾಂಬೂಲವನ್ನು ಯಾವನು ದಾನಮಾಡುವನೊ, ಅವನು ಚಕ್ರ ವರ್ತಿಯ ಸೌಖ್ಯವನ್ನನುಭವಿಸಿ ಪರಾತ್ಪರವಾದ ಬ್ರಹ್ಮಪದವಿಯನ್ನು ಪಡೆಯುವನು.

೨೭. ಕಮಲಗಳನ್ನೂ ಯೂಥಿಕಾಕುಸುಮಗಳನ್ನೂ ಮೇಷಮಾಸದಲ್ಲಿ ದಾನಮಾಡುವ ಮನುಷ್ಯನು ಭೂಮಂಡಲದ ಸಾರ್ವಭೌಮಪದವಿಯನ್ನಲಂ ಕರಿಸಿ ಅಂತ್ಯದಲ್ಲಿ ಮೋಕ್ಷವನ್ನು ಪಡೆಯುವನು.

೨೮. ಕೇದಿಗೆ ಮತ್ತು ಮಲ್ಲಿಗೆ ಹೂವುಗಳನ್ನು ಪರಮಾತ್ಮನಿಗೆ ಪ್ರಿಯ ವಾದ ವೈಶಾಖಮಾಸದಲ್ಲಿ ಯಾವನು ದಾನಮಾಡುವನೊ, ಅವನು ಮಧು ಸೂದನನ ಆಜ್ಞೆಯನ್ನನುಸರಿಸಿ ಮುಕ್ತಿಯನ್ನು ಪಡೆಯುವನು.

ಪೂಗೀಫಲಂ ತು ಯೋ ದದ್ಯಾತ್ ಸುಗಂಧಂ ತು ದ್ವಿಜಾತಯೇ ।
ನಾರಿಕೇಲಫಲಂ ರಾಜನ್ ತಸ್ಯ ಪುಣ್ಯಫಲಂ ಶೃಣು ॥ ೨೯ ॥
ಸಪ್ತಜನ್ಮ ಭವೇದ್ವಿಪ್ರೋ ಧನಾಢ್ಯೋ ವೇದಪಾರಗಃ ।
ಪಶ್ಚಾತ್ಸಪ್ತಕುಲೈರ್ಯುಕ್ತೋ ವಿಷ್ಣುಲೋಕಂ ಸ ಗಚ್ಛತಿ ॥ ೩೦ ॥
ವಿಶ್ರಾಮಮಂಡಪಂ ಯಸ್ತು ಕೃತ್ವಾ ದದ್ಯಾದ್ದ್ವಿಜನ್ಮನೇ ।
ತಸ್ಯ ಪುಣ್ಯಫಲಂ ವಕ್ತುಂ ನಾಹಂ ಶಕ್ನೋಮಿ ಭೂಪತೇ ॥ ೩೧ ॥
ಸುಚ್ಛಾಯಾಮಂಡಪಂ ಯಸ್ತು ಸಿಕತಾಕೀರ್ಣಮಂಜಸಾ ।
ಸಪ್ರಪಂ ಕಾರಯೇದ್ಯಸ್ತು ಸ ತು ಲೋಕಾಧಿಪೋ ಭವೇತ್ ॥ ೩೨ ॥
ಮಾರ್ಗೋದ್ಯಾನಂ ತಡಾಗಂ ವಾ ಕೂಪಂ ಮಂಡಪಮೇವ ಚ ।
ಯಃ ಕರೋತಿ ಸ ಧರ್ಮಾತ್ಮಾ ತಸ್ಯ ಪುತ್ರೈಸ್ತು ಕಿಂ ಫಲಂ ॥ ೩೩ ॥
ಕೂಪಸ್ತಡಾಗಮುದ್ಯಾನಂ ಮಂಡಪಂ ಚ ಪ್ರಪಾ ತಥಾ ।
ಸದ್ಧರ್ಮಕರಣಂ ಪುತ್ರಃ ಸಂತಾನಂ ಸಪ್ತಧೋಚ್ಯತೇ ॥ ೩೪ ॥

೨೯. ಎಲೈ ಮಹಾರಾಜನೆ! ಸುಗಂಧ ಪದಾರ್ಥಗಳೊಡನೆ ಬೆರಸಿದ ಅಡಿಕೆಯನ್ನೂ ತೆಂಗಿನಕಾಯಿಯನ್ನೂ ಯಾವನು ಬ್ರಾಹ್ಮಣನಿಗೆ ದಾನಮಾಡುವನೊ, ಅವನಿಗೆ ಲಭಿಸುವ ಪುಣ್ಯದ ಫಲವನ್ನು ಕೇಳುವವನಾಗು.

೩೦. ಅವನು ಏಳು ಜನ್ಮಗಳಲ್ಲಿ ಸರ್ವೈಶ್ವರ್ಯಸಮನ್ವಿತನೂ, ವೇದ ವೇದಾಂಗ ಪಾರಂಗತನೂ ಆದ ಬ್ರಾಹ್ಮಣನಾಗಿ ಜನಿಸಿ ಬಳಿಕ ಏಳು ಕುಲಗಳೊಡನೆ ವಿಷ್ಣುಲೋಕವನ್ನು ಸೇರಿ ಸುಖಿಸುವನು.

೩೧. ಎಲೈ ಭೂಪಾಲಕನೆ! ಯಾವನು ಬ್ರಾಹ್ಮಣನಿಗಾಗಿ ವಿಶ್ರಾಂತಿ ಮಂದಿರವನ್ನು ಕಟ್ಟಿಸಿ ದಾನಮಾಡುವನೊ, ಅವನು ಆರ್ಜಿಸಿದ ಪುಣ್ಯದ ಪ್ರಭಾವವನ್ನು ಆಮೂಲಾಗ್ರವಾಗಿ ವರ್ಣಿಸಲು ನಾನು ಶಕ್ತನಲ್ಲ.

೩೨. ತಂಪಾದ ನೆರಳಿನಿಂದ ಕೂಡಿದುದಾಗಿ ಮರಳು ಚೆಲ್ಲಿದ ನೆಲದೊಡನೆ ಅರವಟ್ಟಿಗೆಯುಳ್ಳ ಮಂಟಪವನ್ನು ಯಾವನು ನಿರ್ಮಾಣ ಮಾಡುವನೊ, ಅವನು ಲೋಕಕ್ಕೆಲ್ಲ ಅಧಿಪತಿಯಾಗುವನು.

೩೩. ಮಾರ್ಗಮಧ್ಯಗಳಲ್ಲಿ ಉದ್ಯಾನಗಳನ್ನೂ, ಕೊಳಗಳನ್ನೂ, ಭಾವಿಗಳನ್ನೂ, ವಿಶ್ರಾಂತಿಮಂಟಪಗಳನ್ನೂ ಯಾವನು ಕಟ್ಟಿಸುವನೊ, ಅವನೇ ಧರ್ಮಾತ್ಮನು. ಅವನಿಗೆ ಪುತ್ರ ಪೌತ್ರ ಸಂತತಿಯಿಂದ ಆಗಬೇಕಾದ ಫಲವೇನು?

೩೪. ಭಾವಿ, ಕೊಳ, ಉದ್ಯಾನವನ, ಮಂಟಪ, ಅರವಟ್ಟಿಗೆ, ಸದ್ಧರ್ಮಾನುಷ್ಠಾನ ಮತ್ತು ಸತ್ಪುತ್ರ—ಈ ಏಳೂ ಸಂತಾನಸಪ್ತಕವೆಂಬುದಾಗಿ ಶಾಸ್ತ್ರದಲ್ಲಿ ಕರೆಯಲ್ಪಡುವುವು.

ಏತೇಷ್ವನ್ಯತಮಾಭಾವೇ ನೋರ್ಧ್ವಂ ಗಚ್ಛಂತಿ ಮಾನವಾಃ ।
ಸಚ್ಛಾಸ್ತ್ರಶ್ರವಣಂ ತೀರ್ಥಯಾತ್ರಾ ಸಜ್ಜನಸಂಗತಿಃ ॥ ೩೫ ॥
ಜಲದಾನಂ ಚಾನ್ನದಾನಮಶ್ವತ್ಥಾರೋಪಣಂ ತಥಾ ।
ಪುತ್ರಶ್ಚೇತಿ ಚ ಸಂತಾನಂ ಸಪ್ತಮೇತಿವಿದೋ ವಿದುಃ ॥ ೩೬ ॥
ನಾಸಂತತಿರ್ಲಭೇಲ್ಲೋಕಾನ್ ಕೃತ್ವಾ ಧರ್ಮಶತಾನ್ಯಪಿ ।
ತಸ್ಮಾತ್ಸಂತಾನಮನ್ವಿಚ್ಛೇತ್ ಸಂತಾನೇಷ್ವೇಕತೋ ವ್ರಜೇತ್ ॥ ೩೭ ॥
ಪಶೂನಾಂ ಪಕ್ಷಿಣಾಂ ಚೈವ ಮೃಗಾಣಾಂ ಚೈವ ಭೂರುಹಾಂ ।
ನೋರ್ಧ್ವಲೋಕಂ ಸುಖಂ ಯಾತಿ ಮನುಷ್ಯಾಣಾಂ ತು ಕಾ ಕಥಾ ॥೩೮॥
ಪೂಗೀಫಲಸಮಾಯುಕ್ತಂ ನಾಗವಲ್ಲೀದಲೈರ್ಯುತಂ ।
ಕರ್ಪೂರಾಗುರುಸಂಯುಕ್ತಂ ದದತ್ತಾಂಬೂಲಮುತ್ತಮಂ ॥ ೩೯ ॥
ಶಾರೀರೈಃ ಸಕಲೈಃ ಪಾಪೈಃ ಮುಚ್ಯತೇ ನಾತ್ರ ಸಂಶಯಃ ।
ತಾಂಬೂಲದೋ ಯಶೋ ಧೈರ್ಯಂ ಶ್ರಿಯಮಾಪ್ನೋತಿ ನಿಶ್ಚಿತಂ ।
ರೋಗೀ ದತ್ವಾ ನಿರೋಗಃ ಸ್ಯಾದರೋಗೀ ಮೋಕ್ಷಮಾಪ್ನುಯಾತ್ ॥೪೦॥

೩೫-೩೬. ಇವುಗಳಲ್ಲಿ ಯಾವುದಾದರೂ ಒಂದೂಕೂಡ ಇಲ್ಲದಿದ್ದರೆ ಮನುಷ್ಯರಿಗೆ ಉತ್ತಮಲೋಕಗಳು ಲಭ್ಯಗಳಾಗಲಾರವು. ಮತ್ತೆ ಕೆಲವು ಶಾಸ್ತ್ರ ನಿಪುಣರಾದವರು ಸಚ್ಛಾಸ್ತ್ರಶ್ರವಣ, ತೀರ್ಥಯಾತ್ರೆ, ಸಾಧುಸಜ್ಜನರ ಸಹವಾಸ, ಜಲದಾನ, ಅನ್ನದಾನ, ಅಶ್ವತ್ಥವೃಕ್ಷದ ಆವಾಪ ಮತ್ತು ಪುತ್ರ— ಈ ಏಳನ್ನೂ ವಿವಿಧ ಸಂತಾನಗಳೆಂಬುದಾಗಿ ತಿಳಿದು ಹೇಳುವರು.

೩೭. ಸಂತತಿಯಿಲ್ಲದಾತನು ನೂರಾರು ಧರ್ಮಕಾರ್ಯಗಳನ್ನು ಮಾಡಿದವನಾದರೂ ಊರ್ಧ್ವಲೋಕಗಳನ್ನು ಪಡೆಯುವುದಿಲ್ಲ. ಆದುದರಿಂದ ಪ್ರತಿಯೊಬ್ಬ ಮಾನವನೂ ಸಂತಾನವನ್ನಪೇಕ್ಷಿಸಬೇಕು. ಈ ಏಳು ಸಂತಾನಗಳಲ್ಲಿ ಒಂದನ್ನಾದರೂ ಸಂಪಾದಿಸಿ ದೇಹವನ್ನು ಬಿಡಬೇಕು.

೩೮. ಪಶುಗಳು, ಪಕ್ಷಿಗಳು, ಮೃಗಗಳು ಮತ್ತು ಗಿಡಬಳ್ಳಿಗಳಿಗೂ ಕೂಡ ಸಂತತಿಯಿಲ್ಲದೆ ಉತ್ತಮಲೋಕವು ಸುಲಭವಾಗಿ ಪ್ರಾಪ್ತವಾಗುವುದಿಲ್ಲ. ಇನ್ನು ಮನುಷ್ಯರ ವಿಷಯವಾಗಿ ಹೇಳತಕ್ಕದ್ದೇನು?

೩೯-೪೦. ಅಡಿಕೆಯ ಚೂರುಗಳಿಂದ ಕೂಡಿದುದಾಗಿ ವೀಳ್ಯದೆಲೆಯ ಚಿಗುರುಗಳಿಂದಲೂ ಕರ್ಪೂರ, ಅಗುರು ಮುಂತಾದ ವಾಸನಾದ್ರವ್ಯಗಳಿಂದಲೂ ಘಮಘಮಿಸುವ ಉತ್ತಮವಾದ ತಾಂಬೂಲವನ್ನು ದಾನಮಾಡಿದವನು ಶರೀರಗತಗಳಾದ ಸಮಸ್ತಪಾಪಗಳಿಂದಲೂ ಮುಕ್ತನಾಗುವನು. ಈ ವಿಷಯದಲ್ಲಿ ಸಂದೇಹವಿಲ್ಲ. ತಾಂಬೂಲದಾನವನ್ನು ಮಾಡಿದ ಮಾನವನು ಕೀರ್ತಿಯನ್ನೂ

ವೈಶಾಖೇ ಮಾಸಿ ಯೋ ದದ್ಯಾತ್ತಕ್ರಂ ತಾಪವಿನಾಶನಂ ।
ವಿದ್ಯಾವಾನ್‌ಧನವಾನ್ ಭೂಮೌ ಜಾಯತೇ ನಾತ್ರ ಸಂಶಯಃ ॥ ೪೧ ॥
ನ ತಕ್ರಸದೃಶಂ ದಾನಂ ಘರ್ಮಕಾಲೇಷು ವಿದ್ಯತೇ ।
ತಸ್ಮಾತ್ತಕ್ರಂ ಪ್ರದಾತವ್ಯಮಧ್ವಶ್ರಾಂತದ್ವಿಜಾತಯೇ ॥ ೪೨ ॥
ಜಂಬೀರರಸುರಸೋಪೇತಂ ಲಸಲ್ಲವಣಮಿಶ್ರಿತಂ ।
ಯಸ್ತಕ್ರಮರುಚಿಘ್ನಂ ತು ದತ್ವಾ ಮೋಕ್ಷಮವಾಪ್ನುಯಾತ್ ॥ ೪೩ ॥
ಯೋ ದದ್ಯಾದ್ದಧಿಖಂಡಂ ತು ವೈಶಾಖೇ ಘರ್ಮಶಾಂತಯೇ ।
ತಸ್ಯ ಪುಣ್ಯಫಲಂ ವಕ್ತುಂ ನಾಹಂ ಶಕ್ನೋಮಿ ಭೂಮಿಪ ॥ ೪೪ ॥
ಯೋ ದದ್ಯಾತ್ತಂಡುಲಾನ್‌ದಿವ್ಯಾನ್ ಮಧುಸೂದನವಲ್ಲಭೇ ।
ಸ ಲಭೇತ್ಪೂರ್ಣಮಾಯುಷ್ಯಂ ಸರ್ವಯಜ್ಞಫಲಂ ಲಭೇತ್ ॥ ೪೫ ॥

ಧೈರ್ಯವನ್ನೂ ಐಶ್ವರ್ಯವನ್ನೂ ಪಡೆಯುವುದು ನಿಶ್ಚಯವು. ರೋಗಿ
ನೀರೋಗಿಯೂ
ದಾನಮಾಡುವುದರಿಂದ ಮೋಕ್ಷವನ್ನು ಪಡೆಯುವನು.

೪೧. ವೈಶಾಖಮಾಸದಲ್ಲಿ ಯಾವನು ಬಿಸಿಲಿನ ತಾಪವನ್ನು ಪರಿಹರಿಸುವ ಮಜ್ಜಿಗೆಯನ್ನು ದಾನಮಾಡುವನೊ, ಅವನು ಭೂಲೋಕದಲ್ಲಿ ಸಕಲ ವಿದ್ಯಾಪಾರಂಗತನಾಗಿ ಹುಟ್ಟುವುದರಲ್ಲಿ ಸಂಶಯವಿಲ್ಲ.

೪೨. ಬಿಸಿಲಿನ ಕಾಲದಲ್ಲಿ ಮಜ್ಜಿಗೆಯನ್ನು ನೀಡುವುದಕ್ಕೆ ಸಮಾನವಾದ ದಾನವು ಬೇರೊಂದಿಲ್ಲವು. ಆದುದರಿಂದ ದಾರಿಯನ್ನು ನಡೆದು ಬಳಲಿರುವ ಬ್ರಾಹ್ಮಣೋತ್ತಮನಿಗೆ ಮಜ್ಜಿಗೆಯನ್ನು ದಾನಮಾಡಬೇಕು.

೪೩. ನಿಂಬೆ ಹಣ್ಣಿನ ರಸದಿಂದ ಕೂಡಿರುವುದೂ, ಉತ್ತಮವಾದ ಲವಣಮಿಶ್ರಿತವಾದುದೂ, ನಾಲಿಗೆಯ ಅರುಚಿಯನ್ನು ನಾಶಮಾಡುವುದೂ ಆದ ಮಜ್ಜಿಗೆಯನ್ನು ಯಾವನು ದಾನಮಾಡುವನೊ, ಅವನು ಮೋಕ್ಷವನ್ನು ಪಡೆಯುವನು.

೪೪. ಎಲೈ ಮಹಾರಾಜನೆ! ವೈಶಾಖಮಾಸದಲ್ಲಿ ಬಿಸಿಲಿನ ತಾಪವನ್ನು ನೀಗಿಸಲು ಯಾವನು ದಾರಿಗರಿಗೆ ಮೊಸರಿನ ಗಡ್ಡೆಗಳನ್ನು ದಾನಮಾಡುವನೊ, ಅವನ ಪುಣ್ಯದ ಪ್ರಭಾವವನ್ನು ವರ್ಣಿಸಲು ನಾನು ಶಕ್ತನಲ್ಲ.

೪೫. ಮಧುಸೂದನನಿಗೆ ಪ್ರಿಯತಮವಾದ ಈ ವೈಶಾಖಮಾಸದಲ್ಲಿ ಯಾವನು ಪರಿಶುದ್ಧವಾದ ದಿವ್ಯತಂಡುಲವನ್ನು (ಅಕ್ಕಿಯನ್ನು) ಯಾಚಕರಿಗೆ ದಾನಮಾಡುವನೊ, ಅವನು ಸಂಪೂರ್ಣವಾದ ಆಯುಷ್ಯವನ್ನೂ ಸಕಲ ಯಜ್ಞಗಳನ್ನು ಮಾಡಿದ ಪುಣ್ಯವನ್ನೂ ಪಡೆಯುವನು.

ಯೋ ಘೃತಂ ತೇಜಸೋ ರೂಪಂ ಗವ್ಯಂ ದದ್ಯಾದ್ದ್ವಿಜಾತಯೇ ।
ಸೋಽಶ್ವಮೇಧಫಲಂ ಪ್ರಾಪ್ಯ ಮೋದತೇ ವಿಷ್ಣುಮಂದಿರೇ ॥ ೪೬ ॥
ಉರ್ವಾರುಗುಡಸಂಮಿಶ್ರಂ ವೈಶಾಖೇ ಮೇಷಗೇ ರವೌ ।
ಸರ್ವಪಾಪವಿನಿರ್ಮುಕ್ತಃ ಶ್ವೇತದ್ವೀಪೇ ವಸೇದ್ಧ್ರುವಂ ॥ ೪೭ ॥
ಯಶ್ಚೇಕ್ಷುದಂಡಂ ಸಾಯಾಹ್ನೇ ದಿವಾ ತಾಪೋಪಶಾಂತಯೇ ।
ಬ್ರಾಹ್ಮಣಾಯ ಚ ಯೋ ದದ್ಯಾತ್ತಸ್ಯ ಪುಣ್ಯಮನಂತಕಂ ॥ ೪೮ ॥
ವೈಶಾಖೇ ಪಾನಕಂ ದತ್ವಾ ಸಾಯಾಹ್ನೇ ಶ್ರಮಶಾಂತಯೇ ।
ಸರ್ವಪಾಪವಿನಿರ್ಮುಕ್ತೋ ವಿಷ್ಣೋಃ ಸಾಯುಜ್ಯಮಾಪ್ನುಯಾತ್ ॥
ಸಫಲಂ ಪಾನಕಂ ಮೇಷಮಾಸೇ ಸಾಯಂ ದ್ವಿಜಾತಯೇ ।
ದದ್ಯಾತ್ತೇನ ಪಿತೄಣಾಂ ತು ಸುಧಾಪಾನಂ ನ ಸಂಶಯಃ ॥ ೫೦ ॥
ವೈಶಾಖೇ ಪಾನಕಂ ಚೂತಸುಪಕ್ವಫಲಸಂಯುತಂ ।
ತಸ್ಯ ಸರ್ವಾಣಿ ಪಾಪಾನಿ ವಿನಾಶಂ ಯಾಂತಿ ನಿಶ್ಚಿತಂ ॥ ೫೧ ॥

೪೬. ಗೋಕ್ಷೀರದಿಂದ ಮಾಡಿದ ತೇಜಸ್ಸಿನ ರೂಪವಾದ ಉತ್ತಮ ಘೃತವನ್ನು ಯಾವನು ಬ್ರಾಹ್ಮಣನಿಗೆ ದಾನಮಾಡುವನೋ, ಅವನು ಅಶ್ವಮೇಧ ಯಜ್ಞವನ್ನು ಮಾಡಿದ ಫಲವನ್ನು ಹೊಂದಿ ವಿಷ್ಣುಮಂದಿರವಾದ ವೈಕುಂಠದಲ್ಲಿ ಸಂತೋಷದಿಂದ ವಾಸಮಾಡುವನು.

೪೭. ಉರ್ವಾರುಫಲ (ಕೆಕ್ಕರಿಕೆ ಹಣ್ಣು) ಮತ್ತು ಬೆಲ್ಲಗಳಿಂದ ಮಿಶ್ರಿತ ವಾದ ಪಾನಕವನ್ನು ಸೂರ್ಯನು ಮೇಷರಾಶಿಸ್ಥನಾಗಿರುವ ವೈಶಾಖ ಮಾಸದಲ್ಲಿ ಯಾವನು ದಾನಮಾಡುವನೊ, ಅವನು ಸಮಸ್ತ ಪಾಪಗಳಿಂದಲೂ ಬಿಡುಗಡೆ ಯನ್ನು ಹೊಂದಿ ಶಾಶ್ವತವಾಗಿ ಶ್ವೇತದ್ವೀಪದಲ್ಲಿ ವಾಸಮಾಡುವನು.

೪೮. ಯಾವನು ಸಾಯಂಕಾಲದಲ್ಲಾಗಲಿ, ಹಗಲಿನಲ್ಲಾಗಲಿ ಬಿಸಿಲಿನ ತಾಪವನ್ನು ಪರಿಹರಿಸಲು ಬ್ರಾಹ್ಮಣನಿಗೆ ಕಬ್ಬಿನ ಜಲ್ಲೆಗಳನ್ನು ದಾನಮಾಡು ವನೊ, ಅವನ ಪುಣ್ಯವು ಅನಂತವಾಗಿರುವುದು.

೪೯. ವೈಶಾಖಮಾಸದಲ್ಲಿ ಆಯಾಸಪರಿಹಾರವನ್ನು ಮಾಡುವ ಉದ್ದೇಶ ದಿಂದ ಸಾಯಂಕಾಲಸಮಯದಲ್ಲಿ ಪಾನಕವನ್ನು ದಾನಮಾಡಿದವನು ಸಮಸ್ತ ಪಾಪಗಳಿಂದಲೂ ನಿರ್ಮುಕ್ತನಾಗಿ ವಿಷ್ಣುವಿನ ಸಾಯುಜ್ಯವನ್ನು ಪಡೆಯುವನು.

೫೦. ಕೆಕ್ಕರಿಕೆ, ಬೇಲ ಮುಂತಾದ ಫಲಗಳಿಂದ ಪಾನಕವನ್ನು ಮಾಡಿ ಮೇಷಮಾಸದಲ್ಲಿ ಪ್ರತಿನಿತ್ಯವೂ ಸಾಯಂಕಾಲದಲ್ಲಿ ಬ್ರಾಹ್ಮಣೋತ್ತಮನಿಗೆ ದಾನಮಾಡಬೇಕು. ಅದರಿಂದ ಸಮಸ್ತ ಪಿತೃದೇವತೆಗಳಿಗೂ ಅಮೃತಪಾನವು ಲಭಿಸುವುದರಲ್ಲಿ ಸಂದೇಹವಿಲ್ಲ.

೫೧. ವೈಶಾಖಮಾಸದಲ್ಲಿ ಪರಿಪಕ್ವವಾದ ಮಾವಿನಹಣ್ಣುಗಳನ್ನೂ ಪಾನಕ

ಯೋ ದದಾಚ್ಚೈತ್ರದರ್ಶೇ ತು ಕುಂಭಂ ಪೂರ್ಣಂ ತು ಪಾನಕೈಃ ।
ಗಯಾಶ್ರಾದ್ಧಶತಂ ತೇನ ಕೃತಮೇವ ನ ಸಂಶಯಃ ॥ ೫೨ ॥
ಕಸ್ತೂರೀಕರ್ಪೂರೋಪೇತಂ ಮಲ್ಲಿಕೋಶೀರಸಂಯುತಂ ।
ಕಲಶಂ ಪಾನಕೈಃ ಪೂರ್ಣಂ ಚೈತ್ರದರ್ಶೇ ತು ಮಾನವಃ ।
ದದ್ಯಾತ್ಪಿತೄನ್ ಸಮುದ್ದಿಶ್ಯ ಸಷಣ್ಣವತಿದೋ ಭವೇತ್ ॥ ೫೩ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ದ್ವಿತೀಯೇ ವೈಷ್ಣವಖಂಡೇ ವೈಶಾಖಮಾಸಮಾಹಾತ್ಮ್ಯೇ ನಾರದಾಂಬರೀಷಸಂವಾದೇ
"ದಾನನಿರೂಪಣಂ" ನಾಮ ತೃತೀಯೋಽಧ್ಯಾಯಃ

ವನ್ನು ಯಾವನು ದಾನಮಾಡುವನೊ, ಅವನ ಸಕಲ ಪಾತಕಗಳೂ ಖಂಡಿತವಾಗಿಯೂ ನಾಶವನ್ನು ಹೊಂದುವವು.

೫೨. ಚೈತ್ರಮಾಸದ ಪೌರ್ಣಮಿಯ ದಿನದಲ್ಲಿ ಯಾವನು ಪಾನಕದಿಂದ ತುಂಬಿದ ಪಾತ್ರೆಯನ್ನು ದಾನಮಾಡುವನೊ, ಅವನಿಂದ ನೂರು ಗಯಾಶ್ರಾದ್ಧಗಳು ಮಾಡಲ್ಪಟ್ಟವೆಂಬುದರಲ್ಲಿ ಸಂಶಯಕ್ಕೆ ಅವಕಾಶವಿಲ್ಲ.

೫೩. ಕಸ್ತೂರಿ, ಪಚ್ಚಕರ್ಪೂರ, ಅಗರು, ಲಾಮಂಚ ಮುಂತಾದ ಸುಗಂಧ ದ್ರವ್ಯಗಳಿಂದ ಕೂಡಿದ ಪಾನಕಗಳಿಂದ ಕೊಡಗಳನ್ನು ತುಂಬಿ ಪ್ರತಿಯೊಬ್ಬ ಮನುಷ್ಯನೂ ಚೈತ್ರಮಾಸದ ಅಮಾವಾಸ್ಯೆಯ ದಿನದಲ್ಲಿ ತನ್ನ ಪಿತೃದೇವತೆಗಳನ್ನುದ್ದೇಶಿಸಿ ದಾನಮಾಡಬೇಕು. ಇದರಿಂದ ತೊಂಬತ್ತಾರು ಪಿತೃಶ್ರಾದ್ಧಗಳನ್ನು ಮಾಡಿದ ಪುಣ್ಯವನ್ನು ಪಡೆಯುವನು.

ಇಲ್ಲಿಗೆ ಎಂಬತ್ತೊಂದು ಸಾವಿರ ಶ್ಲೋಕಗಳ ಸಂಹಿತೆಯಿಂದ ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಎರಡನೆಯ ವೈಷ್ಣವಖಂಡದ ವೈಶಾಖಮಾಸಮಾಹಾತ್ಮ್ಯದ
ನಾರದಾಂಬರೀಷ ಸಂವಾದದಲ್ಲಿ "ದಾನ ನಿರೂಪಣ"ವೆಂಬ
ಮೂರನೆಯ ಅಧ್ಯಾಯವು ಮುಗಿದುದು

ಶ್ರೀಃ

## ಅಥ ಚತುರ್ಥೋಽಧ್ಯಾಯಃ

### ವೈಶಾಖ ಧರ್ಮಪ್ರಶಂಸಾ

ನಾರದ ಉವಾಚ:—

ತೈಲಾಭ್ಯಂಗಂ ದಿವಾಸ್ವಾಪಂ ತಥಾ ವೈ ಕಾಂಸ್ಯಭೋಜನಂ ।
ಖಟ್ವಾನಿದ್ರಾಂ ಗೃಹೇಸ್ನಾನಂ ನಿಷಿದ್ಧಸ್ಯ ಚ ಭಕ್ಷಣಂ ॥ ೧ ॥
ವೈಶಾಖೇ ವರ್ಜಯೇದಷ್ಟೌ ನಿಭುಕ್ತಂ ನಕ್ತಭೋಜನಂ ।
ಪದ್ಮಪತ್ರೇ ತು ಯೋ ಭುಂಕ್ತೇ ವೈಶಾಖವ್ರತಸಂಸ್ಥಿತಃ ॥ ೨ ॥
ಸ ತು ಪಾಪವಿನಿರ್ಮುಕ್ತೋ ವಿಷ್ಣುಲೋಕಂ ಚ ಗಚ್ಛತಿ ।
ವೈಶಾಖೇ ಮಾಸಿ ಮಧ್ಯಾಹ್ನೇ ಶ್ರಾಂತಾನಾಂತು ದ್ವಿಜನ್ಮನಾಂ ॥ ೩ ॥
ಪಾದಾವನೇಜನಂ ಕುರ್ಯಾತ್ತದ್ವ್ರತಂ ಸುವ್ರತೋತ್ತಮಂ ॥ ೪ ॥
ಅಧ್ವಶ್ರಾಂತಂ ದ್ವಿಜಂ ಯಸ್ತು ಮಧ್ಯಾಹ್ನೇ ಸ್ವಗೃಹಾಗತಂ ।
ಉಪವೇಶ್ಯಾಸನೇ ರಮ್ಯೇ ಕೃತ್ವಾ ಪಾದಾವನೇಜನಂ ॥ ೫ ॥

## ಕನ್ನಡದ ಅನುವಾದ

### ವೈಶಾಖ ಧರ್ಮ ಪ್ರಶಂಸೆ

೧. ನಾರದನು ಹೇಳುತ್ತಾನೆ:—ವೈಶಾಖಮಾಸದಲ್ಲಿ ತೈಲಾಭ್ಯಂಜನ, ಹಗಲಿನಲ್ಲಿ ನಿದ್ರೆ, ಕಂಚಿನ ತಟ್ಟೆಗಳಲ್ಲಿ ಭೋಜನ, ಮಂಚಗಳಲ್ಲಿ ನಿದ್ರಿಸುವುದು, ಮನೆಯಲ್ಲಿ ಸ್ನಾನಮಾಡುವುದು, ನಿಷಿದ್ಧ ಪದಾರ್ಥಗಳನ್ನು ಸೇವಿಸುವುದು, ಎರಡು ಭೋಜನಗಳು, ಮತ್ತು ರಾತ್ರಿಯ ಭೋಜನ ಈ ಎಂಟು ವಿಷಯಗಳನ್ನು ತ್ಯಜಿಸಬೇಕು.

೨. ಯಾವನು ವೈಶಾಖಮಾಸದ ವ್ರತವನ್ನು ನಡೆಸುವವನಾಗಿ ಕಮಲ ಪತ್ರಗಳಲ್ಲಿ ಭೋಜನವನ್ನು ಮಾಡುವನೋ, ಅವನು ಸಕಲ ಪಾಪಗಳನ್ನು ಕಳೆದುಕೊಂಡು ಮಹಾವಿಷ್ಣುವಿನ ಲೋಕವನ್ನು ಸೇರುವನು.

೩. ವೈಶಾಖಮಾಸದ ಪ್ರತಿಯೊಂದು ದಿನದಲ್ಲಿಯೂ ಮಧ್ಯಾಹ್ನ ಸಮಯದಲ್ಲಿ ದಾರಿಯನ್ನು ನಡೆದು ಬಳಲಿ ಬಂದಿರುವ ಬ್ರಾಹ್ಮಣೋತ್ತಮರಿಗೆ ಪಾದಪ್ರಕ್ಷಾಳನೆಯನ್ನು ಮಾಡಬೇಕು. ಇದೇ ಸಕಲ ವ್ರತಗಳಲ್ಲಿಯೂ ಉತ್ತಮೋತ್ತಮವೆನಿಸಿರುವುದು.

೪–೫. ದಾರಿಯಿಂದ ಬಳಲಿ ತನ್ನ ಮನೆಗೆ ಬಂದ ಬ್ರಾಹ್ಮಣನನ್ನು ಮಧ್ಯಾಹ್ನ ಸಮಯದಲ್ಲಿ ಆದರಿಸಿ ಉಚಿತಾಸನದಲ್ಲಿ ಕುಳ್ಳಿರಿಸಿ ಅತನ ಪಾದಗಳನ್ನು ತೊಳೆದು ಆ ಪಾದೋದಕವನ್ನು ತಲೆಯಲ್ಲಿ ಧರಿಸಿದ ಮಾನವನು ಸಕಲ ಸಂಸಾರ ಬಂಧಗಳನ್ನೂ ಕಳೆದುಕೊಳ್ಳುವನು. ಅವನು ನಿಜವಾಗಿಯೂ ಗಂಗೆಯೇ

**ಧೃತ್ವಾ ಶರಸಿ ತಾಶ್ವಾಪ್ರೋ ವಿಧ್ವಸ್ತಾಖಿಲಬಂಧನಃ ।**
**ಗಂಗಾದಿ ಸರ್ವತೀರ್ಥೇಷು ಸ್ನಾತೋ ಭವತಿ ನಿಶ್ಚಿತಂ ॥ ೬ ॥**
**ಅಸ್ನಾಯಿಶಾ ನಾऽಪ್ಯಪತ್ರಾಶೀ ವೈಶಾಖಂ ತು ನಯೇದ್ಯದಿ ।**
**ರಾಸಭೀಂ ಯೋನಿಮಾಸಾದ್ಯ ಪಶ್ಚಾದಶ್ವತರೋ ಭವೇತ್ ॥ ೭ ॥**
**ದೃಢಾಂಗೋ ರೋಗಹೀನಶ್ಚ ತಥಾ ಸ್ವಸ್ಥೋऽಪಿ ಮಾನವಃ ।**
**ವೈಶಾಖೇ ತು ಗೃಹೇ ಸ್ನಾತ್ವಾ ಚಾಂಡಾಲೀಂ ಯೋನಿಮಾಪ್ನುಯಾತ್ ॥**
**ವೈಶಾಖೇ ಮಾಸಿ ರಾಜೇಂದ್ರ ಮೇಷಸಂಸ್ಥೇ ದಿವಾಕರೇ ।**
**ನ ಕರೋತಿ ಬಹಿಃಸ್ನಾನಂ ಶ್ವಾನಯೋನಿಶತಂ ವ್ರಜೇತ್ ॥ ೯ ॥**
**ಅಸ್ನಾತ್ವಾ ಚಾಪ್ಯದತ್ವಾ ಚ ವೈಶಾಖೋ ಯೇನ ನೀಯತೇ ।**
**ಸ ಪಿಶಾಚೋ ಭವೇನ್ನೂನಮನ್ವೈಶಾಖಾದಧೋ ವ್ರಜೇತ್ ॥ ೧೦ ॥**
**ಯೋ ನ ದದ್ಯಾಜ್ಜಲಂ ಚಾನ್ನಂ ವೈಶಾಖೇ ಲೋಭಮಾನಸಃ ।**
**ಪಾಪಹಾನಿಂ ದುಃಖಹಾನಿಂ ನೈವಾಪ್ನೋತಿ ನ ಸಂಶಯಃ ॥ ೧೧ ॥**

---

ಮೊದಲಾದ ಸಮಸ್ತ ತೀರ್ಥಗಳಲ್ಲಿಯೂ ಸ್ನಾನ ಮಾಡಿದ ಪುಣ್ಯವನ್ನು ಪಡೆಯುವನು.

೭. ಕೂಪತಟಾಕಾದಿಗಳಲ್ಲಿ ಸ್ನಾನವನ್ನು ಮಾಡದೆಯೂ, ಎಲೆಗಳಲ್ಲಿ ಭೋಜನವನ್ನು ಮಾಡದೆಯೂ ಯಾವ ಮನುಷ್ಯನು ವೈಶಾಖಮಾಸವನ್ನು ವ್ಯರ್ಥವಾಗಿ ಕಳೆಯುವನೋ, ಅವನು ಮುಂದಿನ ಜನ್ಮದಲ್ಲಿ ಕತ್ತೆಯಾಗಿ ಬಳಿಕ ಹೇಸರಕತ್ತೆಯ ಜನ್ಮವನ್ನು ತಾಳುವನು.

೮. ದೃಢಶರೀರನೂ, ರೋಗರಹಿತನೂ, ಸ್ವಸ್ಥನೂ ಆಗಿದ್ದರೂ ಯಾವ ಮಾನವನು ವೈಶಾಖಮಾಸದಲ್ಲಿ ಮನೆಯಲ್ಲಿ ಸ್ನಾನವನ್ನು ಮಾಡುವನೋ, ಅವನು ಚಂಡಾಲಿ ಜನ್ಮವನ್ನು ಪಡೆಯುವನು.

೯. ಎಲೈ ಮಹಾರಾಜನೆ! ವೈಶಾಖಮಾಸದಲ್ಲಿ ಸೂರ್ಯನು ಮೇಷರಾಶಿಯಲ್ಲಿರಲು ಹೊರಗೆ ನದೀತೀರ್ಥಾದಿಗಳಲ್ಲಿ ಯಾವನು ಸ್ನಾನವನ್ನು ಮಾಡುವುದಿಲ್ಲವೋ, ಅವನು ಒಂದು ನೂರು ಜನ್ಮಗಳವರೆಗೂ ನಾಯಿಯಾಗಿ ಹುಟ್ಟುವನು.

೧೦. ಬಹಿಸ್ತೀರ್ಥಗಳಲ್ಲಿ ಪ್ರಾತಃಸ್ನಾನವನ್ನು ಮಾಡದೆಯೂ, ತನ್ನ ಶಕ್ತ್ಯನುಸಾರವಾಗಿ ಸ್ವಲ್ಪವನ್ನಾದರೆಯೂ ದಾನಮಾಡದೆ ಯಾವನು ವೈಶಾಖಮಾಸವನ್ನು ವ್ಯರ್ಥವಾಗಿ ಕಳೆಯುವನೋ, ಅವನು ನಿಜವಾಗಿಯೂ ಪಿಶಾಚಿಯಾಗಿ ಅಂತರಿಕ್ಷದಲ್ಲಿ ತಿರುಗುತ್ತಿರುವನು ಮತ್ತು ವೈಶಾಖಮಾಸದ ವ್ರತವನ್ನು ಆಚರಿಸದೆ ಇದ್ದುದರ ಫಲವಾಗಿ ಅಧೋಲೋಕಗಳನ್ನು ಸೇರುವನು.

೧೧. ಯಾವನು ಲೋಭದಿಂದ ಕೂಡಿದ ಮನಸ್ಸುಳ್ಳವನಾಗಿ ವೈಶಾಖ

ನದೀಸ್ನಾನಂ ತು ಯಃ ಕುರ್ಯಾತ್ ವೈಶಾಖೇ ವಿಷ್ಣುತತ್ಪರಃ ।
ಜನ್ಮತ್ರಯಾರ್ಜಿತಾತ್ ಪಾಪಾತ್ ಮುಚ್ಯತೇ ನಾತ್ರ ಸಂಶಯಃ ॥ ೧೨ ॥
ಸಮುದ್ರಗನದೀಸ್ನಾನಂ ಕುರ್ಯಾತ್ ಪ್ರಾತರ್ಭಗೋದಯೇ ।
ಸಪ್ತಜನ್ಮಾರ್ಜಿತೈಃ ಪಾಪೈಃ ತತ್ಕ್ಷಣಾದೇವ ಮುಚ್ಯತೇ ॥ ೧೩ ॥
ಕುರ್ಯಾದುಷಸಿ ಯಃ ಸ್ನಾನಂ ಸಪ್ತಗಂಗಾಸು ಮಾನವಃ ।
ಕೋಟಿಜನ್ಮಾರ್ಜಿತಾತ್ಪಾಪಾತ್ ಮುಚ್ಯತೇ ನಾತ್ರ ಸಂಶಯಃ ॥ ೧೪ ॥
ಜಾಹ್ನವೀ ವೃದ್ಧಗಂಗಾ ಚ ಕಾಲಿಂದೀ ಚ ಸರಸ್ವತೀ ।
ಕಾವೇರೀ ನರ್ಮದಾ ವೇಣೀ ಸಪ್ತಗಂಗಾಃ ಪ್ರಕೀರ್ತಿತಾಃ ॥ ೧೫ ॥
ದೇವಖಾತೇಷು ಯಃ ಕುರ್ಯಾತ್ ಪ್ರಾತರ್ವೈಶಾಖಮಜ್ಜನಂ ।
ಜನ್ಮಾರಭ್ಯ ಕೃತಾತ್ಪಾಪಾತ್ ಮುಚ್ಯತೇ ನಾತ್ರ ಸಂಶಯಃ ॥ ೧೬ ॥

[illegible]
ಅವನಿಗೆ ಪಾಪಗಳೂ, [illegible] ಸಿದ್ಧಿಯು
[illegible].

೧೨. ಯಾವ ಮಾನವನು ಸದಾ ವಿಷ್ಣುವಿನಲ್ಲಿಯೇ ಆಸಕ್ತನಾದ ಚಿತ್ತವುಳ್ಳವನಾಗಿ ವೈಶಾಖಮಾಸದಲ್ಲಿ ನದೀಸ್ನಾನವನ್ನು ಮಾಡುವನೋ, ಅವನು ಮೂರು ಜನ್ಮಗಳಲ್ಲಿ ಕೂಡಿಸಿದ ಸಮಸ್ತ ಪಾಪಗಳನ್ನು ಕಳೆದುಕೊಳ್ಳುವನು. ಈ ವಿಷಯದಲ್ಲಿ ಸಂದೇಹವೇ ಇಲ್ಲವು.

೧೩. ಸಮುದ್ರವನ್ನು ಸೇರುವ ನದಿಗಳಲ್ಲಿಯೇ ಸೂರ್ಯೋದಯದ ಸಮಯಕ್ಕೆ ಸರಿಯಾಗಿ ಪ್ರಾತಃಸ್ನಾನವನ್ನು ಮಾಡಬೇಕು. ಇದರ ಫಲವಾಗಿ ಮನುಷ್ಯನು ಏಳು ಜನ್ಮಗಳಲ್ಲಿ ಸಂಪಾದಿಸಿದ ಸಕಲ ಪಾಪಗಳಿಂದಲೂ ಕ್ಷಣಮಾತ್ರದಲ್ಲಿಯೇ ಬಿಡುಗಡೆಯನ್ನು ಹೊಂದುವನು.

೧೪. ಉಷಃಕಾಲದಲ್ಲಿ ಜಾಹ್ನವಿ, ವೃದ್ಧಗಂಗೆ, ಮುಂತಾದ ಹೆಸರುಗಳುಳ್ಳ ಏಳು ಗಂಗೆಗಳಲ್ಲಿ ಯಾವುದರಲ್ಲಿಯಾದರೂ ಸ್ನಾನವನ್ನು ಮಾಡುವ ಮನುಷ್ಯನು ಕೋಟಿ ಜನ್ಮಗಳಲ್ಲಿ ಸಂಪಾದಿಸಿದ ಪಾಪಗಳಿಂದಲೂ ಮುಕ್ತನಾಗುವುದರಲ್ಲಿ ಸಂದೇಹವಿಲ್ಲ.

೧೫. ಜಾಹ್ನವಿ, ವೃದ್ಧಗಂಗೆ, ಕಾಳಿಂದಿ, ಸರಸ್ವತಿ, ಕಾವೇರಿ, ನರ್ಮದಾ, ವೇಣಿ—ಇವುಗಳೇ ಏಳು ಗಂಗೆಗಳೆಂದು ಬಲ್ಲವರು ಹೇಳಿರುವರು.

೧೬. ದೇವಾಲಯಗಳ ಸಮೀಪದಲ್ಲಿರುವ ವಾಪೀಕೂಪಾದಿಗಳಲ್ಲಿ ವೈಶಾಖಮಾಸದ ಪ್ರಾತಃಸ್ನಾನವನ್ನು ಮಾಡುವ ಮಾನವನು ಹುಟ್ಟಿದ ದಿನದ ಮೊದಲ್ಗೊಂಡು ಮಾಡಿದ ಪಾಪಗಳಿಂದಲೂ ಸಹ ನಿಸ್ಸಂದೇಹವಾಗಿ ಮುಕ್ತನಾಗುವನು.

ವೈಶಾಖೇ ಮಾಸಿ ಸಂಪ್ರಾಪ್ತೇ ಯೋ ವಾಪೀಷ್ವವಗಾಹನಂ ।
ಪ್ರಾತಃ ಕುರ್ಯಾನ್ಮಹಾರಾಜ ಮಹಾಪಾತಕನಾಶನಂ ॥ ೧೭ ॥
ಅಪಿ ಗೋಷ್ಪದಮಾತ್ರೇಷು ಬಹಿಃಸ್ಥೇಷು ಜಲೇಷು ಚ ।
ತಿಷ್ಠಂತಿ ಸರಿತಃ ಸರ್ವೇ ಗಂಗಾದ್ಯಾ ಇತಿ ನಿಶ್ಚಯಃ ।
ಇತಿ ಜಾನನ್ ಸಮಾಪ್ನೋತಿ ಸರ್ವತೀರ್ಥಾದಿಕಂ ಫಲಂ ॥ ೧೮ ॥
ಕ್ಷೀರಂ ರಸಾಧಿಕಂ ಕ್ಷೀರಾದಧಿಕಂ ದಧಿ ಭೂಮಿಪ ।
ದಧ್ನೋಽಧಿಕಂ ಘೃತಂ ಯದ್ವದೂರ್ಜೋ ಮಾಸೋಽಧಿಕಸ್ತಥಾ ॥೧೯॥
ಕಾರ್ತಿಕಾದಧಿಕೋ ಮಾಘೋ ಮಾಘಾದ್ವೈಶಾಖ ಉತ್ತಮಃ ।
ತಸ್ಮಿನ್ ಮಾಸೇ ಕೃತೋ ಧರ್ಮೋ ವರ್ಧತೇ ವಟಬೀಜವತ್ ॥ ೨೦ ॥
ಅಥ್ಯೋವಾಽತಿದರಿದ್ರೋವಾ ಪರತಂತ್ರೋಽಥ ವಾ ನರಃ ।
ಯದ್ಯಸ್ತು ಲಭತೇ ತೇನ ತದ್ದಾತವ್ಯಂ ದ್ವಿಜಾತಯೇ ॥ ೨೦ ॥
ಕಂದಮೂಲಫಲಂ ಶಾಕಂ ಲವಣಂ ಗುಡಮೇವ ಚ ।
ಕೋಲಂ ಪತ್ರಂ ಜಲಂ ತಕ್ರಮಾನಂತ್ಯಾಯೋಪಕಲ್ಪತೇ ॥ ೨೨ ॥

೧೭. ಮಹಾರಾಜನೆ! ವೈಶಾಖಮಾಸವು ಪ್ರಾಪ್ತವಾಗಲು ಪ್ರಾತಃ ಕಾಲದಲ್ಲಿ ತಟಾಕಗಳಲ್ಲಿ ಯಾವನು ಸ್ನಾನಾದಿಕಗಳನ್ನು ಮಾಡುವನೊ. ಅವನ ಸ್ನಾನವು ಮಹಾ ಪಾತಕಗಳನ್ನೂ ನಾಶಗೊಳಿಸುವುದು.

೧೮. ಈ ಮಾಸದಲ್ಲಿ ಹೊರಗಿರುವ ಗೋಷ್ಪಾದ ಪ್ರಮಾಣದ ಜಲ ಗಳಲ್ಲಿಯೂ ಕೂಡ ಗಂಗೆಯೇ ಮೊದಲಾದ ಸಕಲ ತೀರ್ಥಗಳೂ ಸನ್ನಿಹಿತಗಳಾ ಗಿರುವುವೆಂಬುದೇ ಶಾಸ್ತ್ರಸಿದ್ಧವುವು. ಇವನ್ನು ತಿಳಿದ ಮನುಷ್ಯನು ಸಕಲ ತೀರ್ಥಗಳಲ್ಲಿ ಸ್ನಾನಮಾಡಿದ ಉತ್ತಮ ಫಲಕ್ಕೆ ಭಾಗಿಯಾಗುವನು.

೧೯. ಭೂಪಾಲಕನೆ! ಈ ಸಮಯದಲ್ಲಿ ಜಲದಾನಕ್ಕಿಂತಲೂ ಹಾಲಿನ ದಾನವು ಅಧಿಕ ಫಲದಾಯಕವು. ಹಾಲಿಗಿಂತಲೂ ಮೊಸರು ಶ್ರೇಷ್ಠವು. ಮೊಸರಿಗಿಂತಲೂ ತುಪ್ಪವು ಸರ್ವೋತ್ತಮವಾಗಿರುವುದು. ಹಾಗೆಯೇ ಮಿಕ್ಕ ಅನೇಕ ಮಾಸಗಳಿಗಿಂತ ಕಾರ್ತಿಕಮಾಸವು ಉತ್ತಮವು.

೨೦–೨೧. ಕಾರ್ತಿಕಕ್ಕಿಂತಲೂ ಮಾಘಮಾಸವು ಅಧಿಕವು. ಮಾಘಮಾಸ ಕ್ಕಿಂತಲೂ ವೈಶಾಖವು ಶ್ರೇಷ್ಠವು. ಆ ಮಾಸದಲ್ಲಿ ಮಾಡಿದ ಅತ್ಯಲ್ಪವಾದ ಧರ್ಮಕಾರ್ಯವು ಕೂಡ ಆಲದ ಬೀಜದಂತೆ ಅಪಾರವಾದ ಫಲವನ್ನು ಕೊಡುವುದು. ಹಣವಂತನಾಗಲಿ, ಅತ್ಯಂತ ದರಿದ್ರನಾಗಿರಲಿ, ಪಾರತಂತ್ರ್ಯದಲ್ಲಿ ಸಿಕ್ಕಿದವನಾಗಿರಲಿ, ಮನುಷ್ಯನಿಗೆ ಯಾವ ಪದಾರ್ಥವು ಲಭಿಸುವುದೊ. ಅದನ್ನೇ ಉತ್ತಮನಾದ ಬ್ರಾಹ್ಮಣನಿಗೆ ದಾನಮಾಡಬೇಕು.

೨೨. ಈ ಮಾಸದಲ್ಲಿ ದಾನಮಾಡಿದ ಗಡ್ಡೆ, ಗೆಣಸು, ಹಣ್ಣು, ಸೊಪ್ಪು,

ನಾದತ್ತಂ ಲಭತೇ ಕ್ವಾಪಿ ಬ್ರಹ್ಮಾದ್ಯೈಸ್ತ್ರಿದಶೈರಪಿ ॥ ೨೩ ॥
ದಾನೇನ ಹೀನೋ ಹಿ ಭವೇದಕಿಂಚನೋ
ನಿಷ್ಕಿಂಚನತ್ವಾಚ್ಚ ಕರೋತಿ ಪಾಪಂ ।
ಪಾಪಾದವಶ್ಯಂ ನರಕಂ ಪ್ರಯಾತಿ
ದಾತವ್ಯಮಸ್ಮಾತ್ಸುಖಮಿಚ್ಛತಾ ತದಾ ॥ ೨೪ ॥
ಯಥಾ ಗೃಹಂ ಸರ್ವಗುಣೋಪಪನ್ನಂ
ಪರಿಚ್ಛದೈರ್ಹೀನಮಶೋಭನಂ ತಥಾ ।
ಮಾಸೇಷು ಧರ್ಮಃ ಸಕಲೇಷ್ವನುಷ್ಠಿತೋ
ವೈಶಾಖಹೀನಸ್ತು ವೃಥೈವ ಯಾತಿ ॥ ೨೫ ॥
ತಥೈವ ಕನ್ಯಾ ಸಕಲೈಶ್ಚ ಲಕ್ಷಣೈ
ರ್ಯುಕ್ತಾಪಿ ಜೀವತ್ಪತಿಲಕ್ಷಣಾ ನ ಹಿ ।
ಕ್ರಿಯಾಽಪಿ ಸಾಂಗಾ ಸಕಲಾಽಪಿ ರಾಜನ್
ವೈಶಾಖಹೀನಾ ತು ವೃಥೈವ ತಾಂ ವಿದುಃ ॥ ೨೬ ॥

ಉಪ್ಪು, ಜೆಲ್ಲ, ಬದರೀಫಲ, ಪತ್ರ, ಜಲ, ಮಜ್ಜಿಗೆ ಮುಂತಾದುವುಗಳೂ ಸಹ ಅನಂತ ಫಲಗಳನ್ನು ಪಡೆಯಲು ಕಾರಣಗಳಾಗಿರುವುವು.

೨೩. ಬ್ರಹ್ಮದೇವನೇ ಮೊದಲಾದ ದೇವತೆಗಳಿಗೂ ಕೂಡ ದಾನ ಮಾಡಿದಲ್ಲದೆ ಪುಣ್ಯಫಲವು ಎಂದಿಗೂ ಲಭಿಸಲಾರದು.

೨೪. ಅನುಕೂಲವಿದ್ದರೂ ದಾನವಮಾಡದಿರುವ ಮನುಷ್ಯನು ಮುಂದಿನ ಜನ್ಮದಲ್ಲಿ ದರಿದ್ರನಾಗಿ ಜನಿಸುವನು. ಮತ್ತು ದಾರಿದ್ರ್ಯದಿಂದ ಪೀಡಿತನಾಗಿ ಪಾಪಕೃತ್ಯಗಳನ್ನು ಮಾಡುವನು. ಆ ಪಾಪಗಳ ಫಲನಾಗಿ ದಂಡಿತನಾಗಿಯೂ ನರಕವನ್ನು ಅನುಭವಿಸುವನು. ಆದುದರಿಂದ ಸೌಖ್ಯವನ್ನು ಅಪೇಕ್ಷಿಸುವ ಮಾನವನು ನಿತ್ಯವೂ ದಾನಗಳನ್ನು ಮಾಡಬೇಕು.

೨೫. ಮನೆಯು ಸಮಸ್ತೈಶ್ವರ್ಯಗಳಿಂದ ಕೂಡಿದುದಾದರೂ ಸೇವಕರಿಲ್ಲದೆ ಹೇಗೆ ಶೋಭಿಸುವುದಿಲ್ಲವೊ, ಹಾಗೆಯೇ ಸಮಸ್ತ ಮಾಸಗಳಲ್ಲಿಯೂ ಅನುಷ್ಠಿಸಿದ ಧರ್ಮವೂ ಸಹ ವೈಶಾಖನಿಯಮರಹಿತವಾದರೆ ಕೇವಲ ವೈಯರ್ಥ್ಯವನ್ನೇ ಹೊಂದುವುದು.

೨೬. ಸ್ತ್ರೀಯು ಸಮಸ್ತ ಲಕ್ಷಣಗಳಿಂದಲೂ, ಆಭರಣಗಳಿಂದಲೂ ಯುಕ್ತಳಾಗಿದ್ದರೂ ಪತಿಯನ್ನು ಕಳೆದುಕೊಂಡರೆ ಹೇಗೆ ವಿಧವೆಯೆಂದು ಕರೆಯಲ್ಪಟ್ಟು ಅಮಂಗಳೆಯಾಗುವಳೊ, ಹಾಗೆಯೇ ಸಮಗ್ರವಾಗಿ ಮಾಡಿದ ಕಾರ್ಯಕಲಾಪವೂ ಸಹ ವೈಶಾಖವ್ರತರಹಿತವಾದರೆ ವೃಥಾಚರಣೆಯೆಂದೇ ಶಾಸ್ತ್ರಜ್ಞರು ಹೇಳುವರು.

ದಯಾವಿಹೀನಾಸ್ತು ಯಥಾ ಗುಣಾ ವೃಥಾ
ವೈಶಾಖಧರ್ಮೇಣ ವಿನಾ ತಥಾ ಕ್ರಿಯಾಃ ।
ಶಾಕಂ ತು ಯದ್ವಲ್ಲವಣೇನ ಹೀನಂ
ನ ರೋಚತೇ ಸರ್ವಗುಣೋಪಪನ್ನಂ ॥ ೨೭ ॥
ವೈಶಾಖಹೀನಂ ತು ತಥೈವ ಪುಣ್ಯಂ
ನ ಸಾಧುಸೇವ್ಯಂ ನ ಫಲಾಪ್ತಿಹೇತುಃ ।
ಯದ್ವನ್ನಭೂಷಾ ಸಹಿತಾಽಪಿ ಶೋಭತೇ
ವಸ್ತ್ರೇಣ ಹೀನಾ ಲಲನಾ ಸುರೂಪಾ ।
ಕ್ರಿಯಾಕಲಾಪಃ ಸುಕೃತೋಽಪಿಪುಂಭಿ
ರ್ನಭಾಸತೇ ತನ್ಮಧುಮಾಸಹೀನಂ ॥ ೨೮ ॥
ತಸ್ಮಾತ್ಸರ್ವಪ್ರಯತ್ನೇನ ಯೇನ ಕೇನಾಽಪಿ ಜಂತುನಾ ।
ಧರ್ಮೋ ವೈಶಾಖಮಾಸೇ ತು ಕರ್ತವ್ಯ ಇತಿ ನಿಶ್ಚಯಃ ॥ ೨೯ ॥
ಮಧುಸೂದನಮುದ್ದಿಶ್ಯ ಮೇಷಸಂಸ್ಥೇ ದಿವಾಕರೇ ।
ಪ್ರಾತಃ ಸ್ನಾತ್ವಾಽರ್ಚಯೇದ್ವಿಷ್ಣುಮನ್ಯಥಾ ನರಕಂ ವ್ರಜೇತ್ ॥ ೩೦ ॥

೨೭. ದಯೆಯೆಂಬ ಉತ್ತಮಗುಣದಿಂದ ಹೀನಗಳಾದ ಇತರ ಗುಣಗಳು ಹೇಗೆ ಅಪ್ರಯೋಜಕಗಳೊ, ಸಕಲ ಉಪಕರಣಗಳಿಂದಲೂ ಪಾಕಮಾಡಿದ ಶಾಕವು ಲವಣವೊಂದರಿಂದ ಹೀನವಾದರೆ ಹೇಗೆ ಯಾರಿಗೂ ರುಚಿಸುವುದಿಲ್ಲವೊ, ಹಾಗೆಯೇ ವೈಶಾಖವ್ರತಾಚರಣೆಯೊಂದಿಲ್ಲದಿದ್ದರೆ ಸಮಸ್ತವ್ರತೋಪವಾಸಾದಿ ಸತ್ಕ್ರಿಯೆಗಳೂ ನಿರರ್ಥಕಗಳಾಗುವುವು.

೨೮. ವೈಶಾಖಮಾಸದ ಆಚರಣೆಯಿಂದ ಹೀನವಾದ ಯಾವ ಪುಣ್ಯಕಾರ್ಯವೂ ಶೋಭಿಸುವುದಿಲ್ಲ. ಅದನ್ನು ಯಾವ ಸಾಧುಗಳೂ ಸೇವಿಸಬಾರದು. ಆ ಕರ್ಮವು ಯಾವ ಸತ್ಫಲದ ಪ್ರಾಪ್ತಿಗೂ ಕಾರಣವಾಗಲಾರದು. ಸ್ತ್ರೀಯು ಸರ್ವಾಂಗಸುಂದರಳಾಗಿದ್ದರೂ, ಸಕಲಾಭರಣಭೂಷಿತೆಯಾಗಿದ್ದರೂ, ವಸ್ತ್ರರಹಿತಳಾದರೆ ಹೇಗೆ ಸಜ್ಜನರ ನಿಂದೆಗೆ ಪಾತ್ರಳಾಗುವಳೊ, ಹಾಗೆಯೇ ಮನುಷ್ಯರು ಮಾಡುವ ಸಮಸ್ತಕಾರ್ಯಕಲಾಪವೂ ಎಷ್ಟೇ ಚೆನ್ನಾಗಿ ಮಾಡಲ್ಪಟ್ಟಿದ್ದಾದರೂ ವೈಶಾಖಮಾಸವ್ರತರಹಿತವಾದರೆ ಶೋಭಿಸುವುದಿಲ್ಲ.

೨೯. ಆದುದರಿಂದ ಪ್ರತಿಯೊಬ್ಬ ಮನುಷ್ಯನೂ ಸರ್ವಪ್ರಯತ್ನಗಳನ್ನೂ ಮಾಡಿ ವೈಶಾಖಮಾಸದ ಧರ್ಮವನ್ನು ಪಾಲಿಸಬೇಕೆಂಬುದೇ ಶಾಸ್ತ್ರನಿಶ್ಚಯವು.

೩೦. ಸೂರ್ಯನು ಮೇಷರಾಶಿಯಲ್ಲಿ ಸಂಚರಿಸುತ್ತಿರಲು ಶ್ರೀ ಮಹಾವಿಷ್ಣುವನ್ನೇ ಮನಸ್ಸಿನಲ್ಲಿ ಧ್ಯಾನಿಸಿ ಪ್ರಾತಃಕಾಲದಲ್ಲಿ ಬಹಿಸ್ತೀರ್ಥಗಳಲ್ಲಿ

ಕಶ್ಚಿನ್ಮಹೀರಥೋ ರಾಜಾ ಕಾಮಾಸಕ್ತೋ ಜಿತೇಂದ್ರಿಯಃ ।
ವೈಶಾಖಸ್ನಾನಯೋಗೇನ ವೈಕುಂಠಂ ಗತವಾನ್ ಸ್ವಯಂ ॥ ೩೧ ॥
ವೈಶಾಖಃ ಸಫಲೋ ಮಾಸೋ ಮಧುಸೂದನದೈವತಃ ।
ತೀರ್ಥಯಾತ್ರಾಸ್ತಪೋಯಜ್ಞಾ ದಾನಹೋಮಫಲಾಧಿಕಃ ॥ ೩೨ ॥

ಪ್ರಾರ್ಥನಾಮಂತ್ರಃ

ಮಧುಸೂದನ ದೇವೇಶ ವೈಶಾಖೇ ಮೇಷಗೇ ರವೌ ।
ಪ್ರಾತಃಸ್ನಾನಂ ಕರಿಷ್ಯಾಮಿ ನಿರ್ವಿಘ್ನಂ ಕುರುಮಾಧವ ॥ ೩೩ ॥

ಅರ್ಘ್ಯಮಂತ್ರಾಃ

ವೈಶಾಖೇ ಮೇಷಗೇ ಭಾನೌ ಪ್ರಾತಃಸ್ನಾನಪರಾಯಣಃ ।
ಅರ್ಘ್ಯಂ ತೇಽಹಂ ಪ್ರದಾಸ್ಯಾಮಿ ಗೃಹಾಣ ಮಧುಸೂದನ ॥ ೩೪ ॥

ಸ್ನಾನವನ್ನು ಮಾಡಿಕೊಂಡು ವಿಷ್ಣು ಪೂಜೆಯನ್ನು ಮಾಡಬೇಕು. ಹಾಗೆ ಮಾಡದ ಮಾನವನು ನರಕಭಾಜನನಾಗುವನು.

೩೧. ಪೂರ್ವಕಾಲದಲ್ಲಿ ಕೇವಲ ಕಾಮಭೋಗಗಳಲ್ಲಿಯೇ ಆಸಕ್ತನಾಗಿದ್ದ ಮಹೀರಥನೆಂಬ ಒಬ್ಬ ಮಹಾರಾಜನು ದೈವಯೋಗದಿಂದ ಕಾಲಾಂತರದಲ್ಲಿ ಜಿತೇಂದ್ರಿಯನಾಗಿ ವೈಶಾಖಮಾಸದಲ್ಲಿ ಬಹಿರ್ಜಲಗಳಲ್ಲಿ ಮಾಡಿದ ಸ್ನಾನಗಳ ಫಲವಾಗಿ ವೈಕುಂಠವನ್ನು ಸೇರುವವನಾದನು.

೩೨. ಮಧುಸೂದನನೇ ಅಧಿದೈವವಾಗಿರುವ ವೈಶಾಖಮಾಸವೇ ಉತ್ತಮ ಫಲಪ್ರದವಾದುದು. ಆ ಸಮಯದಲ್ಲಿ ಮಾಡಿದ ತೀರ್ಥಯಾತ್ರೆ, ತಪಸ್ಸು, ಯಜ್ಞ, ದಾನ, ಹೋಮ ಮುಂತಾದ ಸತ್ಕರ್ಮಗಳೆಲ್ಲವೂ ಅಧಿಕ ಫಲವನ್ನು ಕೊಡುವುವು.

೩೩. ಪ್ರಾತಃಕಾಲದ ಸ್ನಾನಸಮಯದಲ್ಲಿ ಈ ಮಂತ್ರವನ್ನು ಹೇಳಬೇಕು. "ದೇವದೇವನಾದ ಎಲೈ ಮಧುಸೂದದನೆ! ಸೂರ್ಯನು ಮೇಷರಾಶಿಯಲ್ಲಿರುವ ಈ ವೈಶಾಖಮಾಸದಲ್ಲಿ ನಾನು ಪ್ರಾತಃಸ್ನಾನವನ್ನು ಮಾಡುತ್ತಿರುವೆನು. ಓ ಲಕ್ಷ್ಮೀರಮಣ! ಸಕಲ ಕಾರ್ಯಗಳಲ್ಲಿಯೂ ನನಗೆ ನಿರ್ವಿಘ್ನವನ್ನುಂಟುಮಾಡುವವನಾಗು."

೩೪. ಮುಂದಿನ ಮಂತ್ರಗಳು ಅರ್ಘ್ಯಪ್ರದಾನಕ್ಕೆ ಸಂಬಂಧಪಟ್ಟವುಗಳು. "ಎಲೈ ಮಧುಸೂದನನೆ! ವೈಶಾಖಮಾಸದಲ್ಲಿ ಸೂರ್ಯನು ಮೇಷಲಗ್ನಗತನಾಗಿರಲು ಪ್ರಾತಃಕಾಲದ ಸ್ನಾನಕಾರ್ಯದಲ್ಲಿ ನಿರತನಾಗಿರುವ ನಾನು ನಿನಗೆ ಅರ್ಘ್ಯವನ್ನು ಕೊಡುವೆನು; ಸ್ವೀಕರಿಸು.

ಗಂಗಾದ್ಯಾಃ ಸರಿತಃ ಸರ್ವಾಸ್ತೀರ್ಥಾನಿ ಚ ಹ್ರದಾಶ್ಚ ಯೇ ।
ಪ್ರಗೃಹ್ಣೀತ ಮಯಾದತ್ತಮರ್ಘ್ಯಂ ಸಮ್ಯಕ್ಪ್ರಸೀದತ ॥ ೩೫ ॥
ಋಷಭಃ ಪಾಪಿನಾಂ ಶಾಸ್ತಾ ತ್ವಂ ಯಮಃ ಸಮದರ್ಶನಃ ।
ಗೃಹಾಣಾರ್ಘ್ಯಂ ಮಯಾ ದತ್ತಂ ಯಥೋಕ್ತಫಲದೋ ಭವ ॥ ೩೬ ॥
ಇತಿ ಚಾರ್ಘ್ಯಂ ಸಮರ್ಪ್ಯಾಥ ಪಶ್ಚಾತ್ಸ್ನಾನಂ ಸಮಾಚರೇತ್ ।
ವಾಸಸೀ ಪರಿಧಾಯಾಥ ಕೃತ್ವಾ ಕರ್ಮಾಣಿ ಸರ್ವಶಃ ॥ ೩೭ ॥
ಮಧುಸೂದನಮಭ್ಯರ್ಚ್ಯ ಪ್ರಸೂನೈರ್ಮಾಧವೋದ್ಭವೈಃ ।
ಶ್ರುತ್ವಾ ವಿಷ್ಣುಕಥಾಂ ದಿವ್ಯಾಮೇತನ್ಮಾಸಪ್ರಶಂಸಿನೀಂ ॥ ೩೮ ॥
ಕೋಟಿಜನ್ಮಾರ್ಜಿತಾತ್ಪಾಪಾನ್ಮುಕ್ತೋ ಮೋಕ್ಷಮವಾಪ್ನುಯಾತ್ ॥ ೩೯ ॥
ನ ಜಾತು ಖಿದ್ಯತೇ ಭೂಮೌ ನ ಸ್ವರ್ಗೇ ನ ರಸಾತಲೇ ।
ನ ಗರ್ಭೇ ಜಾಯತೇ ಕ್ವಾಪಿ ನ ಭೂಯಃ ಸ್ತನಪೋ ಭವೇತ್ ॥ ೪೦ ॥

೩೫. ಗಂಗಾದಿ ಸಮಸ್ತ ನದಿಗಳಿರಾ! ತೀರ್ಥಗಳಿರಾ! ತಾಟಕಾಭಿಮಾನಿ ದೇವತೆಗಳಿರಾ! ನನ್ನಿಂದ ಅರ್ಪಿಸಲ್ಪಟ್ಟ ಈ ಅರ್ಘ್ಯವನ್ನು ನೀವೆಲ್ಲರೂ ಸ್ವೀಕರಿಸಿ ನನ್ನಲ್ಲಿ ಸುಪ್ರಸನ್ನರಾಗಿರಿ.

೩೬. ಯಮಧರ್ಮರಾಜನೆ! ನೀನು ಸರ್ವೋತ್ತಮನು. ಪಾಪಿಗಳಾದ ಮನುಜರನ್ನು ಶಿಕ್ಷಿಸುವವನು; ಆದರೂ ಮಿತ್ರಾಮಿತ್ರರಲ್ಲಿ ಸಮದೃಷ್ಟಿಯುಳ್ಳವನಾಗಿರುವೆ. ನನ್ನಿಂದ ಕೊಡಲ್ಪಡುವ ಈ ಅರ್ಘ್ಯವನ್ನು ಸ್ವೀಕರಿಸಿ ಶಾಸ್ತ್ರೋಕ್ತವಾದ ಫಲವನ್ನು ನನಗೆ ಅನುಗ್ರಹಿಸು.''

೩೭–೩೯. ಇಂತೆಂದು ಅರ್ಘ್ಯಗಳನ್ನು ಸಮರ್ಪಿಸಿ ಬಳಿಕ ಸ್ನಾನವನ್ನು ಮಾಡಬೇಕು. ಬಳಿಕ ಒಣಗಿದ ವಸ್ತ್ರಗಳನ್ನುಟ್ಟುಕೊಂಡು ಆಹ್ನಿಕ ಕಾರ್ಯಗಳನ್ನೆಲ್ಲ ಸಮಗ್ರವಾಗಿ ನೆರವೇರಿಸಿ ವಸಂತಕಾಲದಲ್ಲಿ ಒದಗುವ ಪುಷ್ಪವಿಶೇಷಗಳಿಂದ ಶ್ರೀಮನ್ನಾರಾಯಣನನ್ನು ಪೂಜಿಸಿ ಈ ಮಾಸದ ಮಾಹಾತ್ಮ್ಯೆಯನ್ನು ಪ್ರತಿಪಾದಿಸುವ ಮಹಾವಿಷ್ಣುವಿನ ದಿವ್ಯಚರಿತ್ರೆಯನ್ನು ಕೇಳಿದ ಭಗವದ್ಭಕ್ತನು ಕೋಟಿ ಜನ್ಮಗಳಲ್ಲಿ ಮಾಡಿ ಗಳಿಸಿರುವ ಪಾಪಗಳೆಲ್ಲವನ್ನೂ ಕಳೆದುಕೊಂಡು ಮೋಕ್ಷವನ್ನು ಪಡೆಯುವನು.

೪೦. ಅಂತಹ ಭಕ್ತನು ಭೂಲೋಕದಲ್ಲಾಗಲಿ, ಸ್ವರ್ಗದಲ್ಲಾಗಲಿ, ರಸಾತಲವೇ ಮೊದಲಾದ ಅಧೋಲೋಕಗಳಲ್ಲಾಗಲಿ ಎಂದಿಗೂ ದುಃಖಪಡುವುದಿಲ್ಲ. ಯಾವ ಪ್ರಾಣಿಯ ಗರ್ಭದಲ್ಲಿಯೂ ಜನ್ಮವನ್ನು ತಾಳುವುದಿಲ್ಲ. ಮತ್ತು ಎಂದಿಗೂ ತಾಯಿಯ ಸ್ತನ್ಯವನ್ನು ಪಾನಮಾಡುವುದಿಲ್ಲ.

ವೈಶಾಖೇ ಕಾಂಸ್ಯಭೋಜೀ ಯಸ್ತ್ವಥಾಚಾತ್ಯಕ್ತಸತ್ಕಥಃ ।
ನ ಸ್ನಾತೋ ನಾಪಿ ದಾತಾ ಚ ನರಕಾನೇವ ಗಚ್ಛತಿ ॥ ೪೧ ॥
ಬ್ರಹ್ಮಹತ್ಯಾಸಹಸ್ರಸ್ಯ ಪಾಪಂ ಶಾಮ್ಯೇತ್ಕಥಂ ಚ ನ ।
ವೈಶಾಖೇ ಯೇನ ನ ಸ್ನಾತಂ ತತ್ಪಾಪಂ ನೈವ ಗಚ್ಛತಿ ॥ ೪೨ ॥
ಸ್ವಾಧೀನೇನ ಸ್ವಕಾಯೇನ ಜಲೇ ಸ್ವಾತಂತ್ರ್ಯವರ್ತಿನಿ ।
ಸ್ವಾಧೀನಜಿಹ್ವಯೋಚ್ಚಾರ್ಯಂ ಹರಿರಿತ್ಯಕ್ಷರದ್ವಯಂ ॥ ೪೩ ॥
ನ ಕುರ್ಯಾದ್ಯದಿ ವೈಶಾಖೇ ಪ್ರಾತಃಸ್ನಾನಂ ನರಾಧಮಃ ।
ಜೀವನ್ನೇವ ಸ ಪಂಚತ್ವಮಾಗತೋ ನಾತ್ರ ಸಂಶಯಃ ॥ ೪೪ ॥
ಯೇನ ಕೇನಾಪ್ಯುಪಾಯೇನ ಮಾಧವೇ ಮಧುಸೂದನಂ ।
ನಾರ್ಚಯೇದ್ಯದಿ ಮೂಢಾತ್ಮಾ ಸೌಕರೀಂ ಯೋನಿಮಾಪ್ನುಯಾತ್ ॥
ಯೋಽರ್ಚಯೇತ್ತುಲಸೀಪತ್ರೈರ್ವೈಶಾಖೇ ಮಧುಸೂದನಂ ।
ನೃಪೋ ಭೂತ್ವಾ ಸಾರ್ವಭೌಮಃ ಕೋಟಿಜನ್ಮಸು ಭೋಗವಾನ್ ।
ಪಶ್ಚಾತ್ಕೋಟಿಕುಲೈರ್ಯುಕ್ತೋ ವಿಷ್ಣೋಃ ಸಾಯುಜ್ಯಮಾಪ್ನುಯಾತ್॥

---

೪೧. ವೈಶಾಖಮಾಸದಲ್ಲಿ ಕಂಚಿನ ತಟ್ಟೆಗಳಲ್ಲಿ ಊಟಮಾಡುವವನೂ, ಸತ್ಕಥಾ ಶ್ರವಣವನ್ನು ಮಾಡದೆ ಇರುವವನೂ, ಪ್ರಾತಃಸ್ನಾನವನ್ನು ತೀರ್ಥೋದಕಗಳಲ್ಲಿ ಮಾಡದವನೂ, ಬ್ರಾಹ್ಮಣರಿಗೆ ದಾನಮಾಡದವನೂ ನರಕಗಳನ್ನೇ ಅನುಭವಿಸುವನು.

೪೨. ಒಂದು ಸಾವಿರ ಬ್ರಹ್ಮಹತ್ಯೆಗಳನ್ನು ಮಾಡಿದರೂ ಪಾಪವು ಯಾವ ಉಪಾಯದಿಂದಲಾದರೂ ಶಮನವಾಗುವ ಸಂಭವವುಂಟು. ಆದರೆ ವೈಶಾಖ ಮಾಸದಲ್ಲಿ ಪ್ರಾತಃಕಾಲ ಶೀತೋದಕದಲ್ಲಿ ಯಾವನು ಸ್ನಾನಮಾಡುವುದಿಲ್ಲವೋ ಅವನ ಪಾಪವು ಎಂದಿಗೂ ಕಳೆದುಹೋಗುವುದಿಲ್ಲ.

೪೩–೪೪. ಸಮಸ್ತ ಶರೀರವೂ ಸ್ವಾಧೀನದಲ್ಲಿರುವಾಗ ಸ್ವೇಚ್ಛೆಯಾಗಿ ಲಭ್ಯವಾಗುತ್ತಿರುವ ಜಲಾಶಯಗಳಿರಲು "ಹರಿ"ಯೆಂಬ ಎರಡಕ್ಷರಗಳ ನಾಮವನ್ನು ತನ್ನ ಸ್ವಾಧೀನದಲ್ಲಿರುವ ನಾಲಿಗೆಯಿಂದ ಗಟ್ಟಿಯಾಗಿ ಉಚ್ಚರಿಸುತ್ತ ವೈಶಾಖಮಾಸದಲ್ಲಿ ಯಾವನು ಸ್ನಾನವನ್ನು ಮಾಡುವುದಿಲ್ಲವೋ, ಅವನೇ ಮನುಷ್ಯಾಧಮನು. ಅವನು ಜೀವಿಸಿದ್ದರೂ ಮೃತನಾದಂತೆಯೇ ಸರಿ. ಈ ವಿಷಯವು ನಿಸ್ಸಂದೇಹವಾದುದು.

೪೫. ಯಾವ ಮೂಢಮಾನವನು ಯಾವ ಸಹಾಯ ಸಂಪತ್ತಿಯಿಂದ ಲಾದರೂ ವೈಶಾಖಮಾಸದಲ್ಲಿ ಮಧುಸೂದನನ್ನು ಪೂಜಿಸುವುದಿಲ್ಲವೋ. ಅವನು ಮುಂದಿನ ಜನ್ಮದಲ್ಲಿ ಹಂದಿಯಾಗಿ ಹುಟ್ಟುವನು.

೪೬. ಯಾವನು ಪವಿತ್ರವಾದ ವೈಶಾಖಮಾಸದಲ್ಲಿ ಪರಮಾತ್ಮನನ್ನು

ವಿವಿಧೈರ್ಭಕ್ತಿಮಾರ್ಗೈಶ್ಚ ವಿಷ್ಣುಂ ಸೇವೇತ ಯೋ ವ್ರತೈಃ ।
ಸಗುಣಂ ನಿರ್ಗುಣಂ ವಾಽಪಿ ನಿತ್ಯಂ ಧ್ಯಾಯೇದನನ್ಯಧೀಃ ॥ ೪೭ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ದ್ವಿತೀಯೇ ವೈಷ್ಣವಖಂಡೇ ವೈಶಾಖಮಾಸಮಾಹಾತ್ಮ್ಯೇ ನಾರದಾಂಬರೀಷಸಂವಾದೇ
"ವೈಶಾಖಧರ್ಮಪ್ರಶಂಸಾ" ನಾಮ ಏಕವಿಂಶೋಽಧ್ಯಾಯಃ

ತುಲಸೀದಳಗಳಿಂದ ಪೂಜಿಸುವನೊ, ಅವನು ಕೋಟಿ ಜನ್ಮಗಳಲ್ಲಿ ಸಮಸ್ತ ಭೂಮಂಡಲವನ್ನೂ ಆಳುವ ಚಕ್ರೇಶ್ವರನಾಗಿ ಸಮಸ್ತ ಭೋಗಗಳನ್ನೂ ಅನುಭವಿಸುವನು. ಬಳಿಕ ತನ್ನ ಕೋಟಿ ಕುಲಗಳೊಡನೆ ಕೂಡಿಕೊಂಡು ಮಹಾ ವಿಷ್ಣುವಿನ ಸಾಯುಜ್ಯವನ್ನು ಪಡೆಯುವನು.

೪೭. ಅನೇಕ ವಿಧಗಳಾದ ಭಕ್ತಿಮಾರ್ಗಗಳಿಂದಲೂ ವ್ರತೋಪವಾಸಗಳಿಂದಲೂ ಯಾವ ಭಕ್ತನು ವಿಷ್ಣುವನ್ನು ಸೇವಿಸಲಿಚ್ಛಿಸುವನೊ, ಅವನು ಅನನ್ಯನಾದ ಮನಸ್ಸಿನಿಂದ ಪರಮಾತ್ಮನ ಸಗುಣ ನಿರ್ಗುಣ ರೂಪಗಳೆರಡನ್ನೂ ನಿರಂತರವೂ ಧ್ಯಾನಿಸಬೇಕು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಎರಡನೆಯ ವೈಷ್ಣವಖಂಡದ ವೈಶಾಖಮಾಸಮಾಹಾತ್ಮ್ಯದ
ನಾರದಾಂಬರೀಷ ಸಂವಾದದಲ್ಲಿ "ವೈಶಾಖ ಧರ್ಮ ಪ್ರಶಂಸೆ"ಯೆಂಬ
ಇಪ್ಪತ್ತೊಂದನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥ ಪಂಚಮೋಽಧ್ಯಾಯಃ

### ವೈಶಾಖಶ್ರೇಷ್ಠತ್ವನಿರೂಪಣಂ

ಅಂಬರೀಷ ಉವಾಚ:—

ವೈಶಾಖಃ ಸರ್ವಧರ್ಮೇಭ್ಯಸ್ತಪೋಧರ್ಮೇಭ್ಯ ಏವ ಚ ।
ಸ ಕಥಂ ಸರ್ವಮಾಸೇಭ್ಯೋ ದಾನೇಭ್ಯೋಽಪ್ಯಧಿಕೋಽಭವತ್ ॥ ೧ ॥

ನಾರದ ಉವಾಚ:—

ತದ್ವಕ್ಷ್ಯಾಮಿ ಮಹಾಪ್ರಾಜ್ಞ ಶೃಣು ಚೈಕಮನಾ ಭವ ।
ಕಲ್ಪಾಂತೇ ದೇವರಾಡ್ವಿಷ್ಣುಃ ಶೇಷಶಾಯೀ ಮಹಾಪ್ರಭುಃ ॥ ೨ ॥
ಕುಕ್ಷಿಸ್ಥಲೋಕಸಂಘೋಽಯಂ ಸ ಶೇತೇ ಪ್ರಲಯಾರ್ಣವೇ ।
ಅನೇಕೋ ಹ್ಯೇಕತಾಂ ಪ್ರಾಪ್ಯ ಭೂತಿಭಿರ್ಯೋಗಮಾಯಯಾ ॥ ೩ ॥
ನಿಮೇಷಸ್ಯಾವಸಾನೇತು ಶ್ರುತಿಭಿರ್ಬೋಧಿತಸ್ತತಃ ।
ಕುಕ್ಷಿಸ್ಥಜೀವಸಂಘಾನಾಂ ರಕ್ಷಾಂ ಚಕ್ರೇ ದಯಾನಿಧಿಃ ॥ ೪ ॥

## ಕನ್ನಡದ ಅನುವಾದ

### ವೈಶಾಖಶ್ರೇಷ್ಠತ್ವ ನಿರೂಪಣ

೧. ಅಂಬರೀಷನು ಪ್ರಶ್ನಿಸುತ್ತಾನೆ:—ಸಕಲ ಧರ್ಮಾಚರಣೆಗಳಿಗೂ, ತಪಸ್ಸಿನ ಅಭ್ಯಾಸಗಳಿಗೂ, ದಾನಕಾರ್ಯಗಳಿಗೂ ವೈಶಾಖಮಾಸವು ಇತರ ಮಾಸಗಳಿಗಿಂತ ಹೇಗೆ ಪ್ರಶಸ್ತವಾಯಿತು?

೨. ನಾರದನು ಹೇಳುತ್ತಾನೆ:—ಎಲೈ ಮಹಾಪ್ರಾಜ್ಞನೆ! ನೀನು ಕೇಳಿದ ಪ್ರಶ್ನೆಗೆ ಉತ್ತರವನ್ನು ಹೇಳುವೆನು. ಏಕಾಗ್ರಮನಸ್ಸುಳ್ಳವನಾಗಿ ಕೇಳು. ಮಹಾಪ್ರಳಯದ ಸಮಯವೊದಗಲು ದೇವಾಧಿದೇವನಾದ ಮಹಾವಿಷ್ಣುವು ಸಕಲಲೋಕವ್ಯಾಪಾರವನ್ನೂ ಉಪಸಂಹರಿಸಿ ಕ್ಷೀರಸಾಗರದಲ್ಲಿ ಆದಿಶೇಷನ ಮೇಲೆ ಮಲಗಿ ನಿದ್ರಿಸುವನು.

೩. ಆತನ ಉದರದಲ್ಲಿ ಅಡಗಿರುವ ಈ ಬ್ರಹ್ಮಾಂಡವೆಲ್ಲವೂ ಪ್ರಳಯ ಮಹಾಸಮುದ್ರದಲ್ಲಿ ನಿಶ್ಚೇಷ್ಟವಾಗಿರುವುದು. ಪರಮಾತ್ಮನ ಯೋಗಮಾಯೆಯ ಉಪಸಂಹಾರದ ಕಾರಣದಿಂದಲೂ ಭಗವಂತನ ವಿಭೂತಿಮಹಿಮೆಯಿಂದಲೂ ವಿಚಿತ್ರರೂಪವಾದ ಈ ಬ್ರಹ್ಮಾಂಡವು ಏಕರೂಪವಾಗಿರುವುದು.

೪. ಪರಮಪುರುಷನ ಯೋಗನಿದ್ರೆಯು ಮುಗಿಯಲು ವೇದವಾಕ್ಯಗಳಿಂದ ಎಚ್ಚರಗೊಳಿಸಲ್ಪಟ್ಟು ಆತನು ದಯಾಪರವಶನಾಗಿ ಹೊಟ್ಟೆಯೊಳಗಿರುವ ಸಮಸ್ತ ಜೀವರಾಶಿಗಳ ಸಂರಕ್ಷಣೆಯನ್ನೂ ಮಾಡಿದನು.

ತತ್ಕರ್ಮಫಲಪ್ರಾಪ್ತ್ಯೈ ಸೃಷ್ಟಿಂ ಸ್ರಷ್ಟುಮನೋದಧೇ ।
ತಸ್ಯ ನಾಭೇರಭೂತ್ಪದ್ಮಂ ಸೌವರ್ಣಂ ಭುವನಾಶ್ರಯಂ ॥ ೫ ॥
ಬ್ರಹ್ಮಾಣಂ ಜನಯಾಮಾಸ ವೈರಾಜಂ ಪುರುಷಾಹ್ವಯಂ ।
ತಸ್ಮಿನ್ ಸಸರ್ಜ ಭಗವಾನ್ ಭುವನಾನಿ ಚತುರ್ದಶ ॥ ೬ ॥
ಭಿನ್ನಕರ್ಮಾಶಯಾನ್ ಪ್ರಾಣಿಸಂಘಾಂಶ್ಚ ವಿವಿಧಾನ್ ಬಹೂನ್ ।
ತ್ರಿಗುಣಾನ್ ಪ್ರಕೃತಿಂ ಲೋಕೇ ಮರ್ಯಾದಾಶ್ಚಾಧಿಪಾಂಸ್ತಥಾ ॥ ೭ ॥
ವರ್ಣಾಶ್ರಮವಿಭಾಗಾಂಶ್ಚ ಧರ್ಮಕ್ಲೃಪ್ತಿಂ ಚ ಸೋಽಕರೋತ್ ।
ವೇದೈಶ್ಚತುರ್ಭಿಸ್ತಂತ್ರೈಶ್ಚ ಸಹಿತಾನ್ ಸ್ಮೃತಿಭಿಸ್ತಥಾ ॥ ೮ ॥
ಪುರಾಣೈರಿತಿಹಾಸೈಶ್ಚ ಸ್ವಾಜ್ಞಾರೂಪೈರ್ಮಹೇಶ್ವರಃ ।
ಋಷೀನ್ ಪ್ರವರ್ತಕಾಂಶ್ಚಕ್ರೇ ಧರ್ಮಗುಪ್ತ್ಯೈ ಮಹಾಪ್ರಭುಃ ॥ ೯ ॥
ತೈಃ ಪ್ರವರ್ತಿತಧರ್ಮಾಸ್ತು ವರ್ಣಾಶ್ರಮವಿಭಾಗಜಾಃ ।
ಪ್ರಜಾಃ ಶ್ರದ್ದಧಿರೇ ಸರ್ವಾಃ ಸ್ವೋಚಿತಾನ್ನಿಷ್ಟತೋಷದಾನ್ ॥ ೧೦ ॥

---

೫. ಜೀವರ ಆಯಾ ಕರ್ಮಗಳ ಫಲಗಳನ್ನನುಭವಿಸಲು ಅನುಕೂಲವಾಗುವಂತೆ ಜಗತ್ಸೃಷ್ಟಿಯನ್ನು ಮಾಡಲು ಶ್ರೀಮನ್ನಾರಾಯಣನು ಮನಸ್ಸಿನಲ್ಲಿ ನಿರ್ಧರಿಸಿದನು. ಆಗ ಆತನ ನಾಭೀಮಂಡಲದಿಂದ ಸಮಸ್ತಲೋಕಗಳಿಗೆ ಆಶ್ರಯವಾದ ಹೊಂಬಣ್ಣದ ಕಮಲವು ಹೊರಟಿತು.

೬. ಷಡೈಶ್ವರ್ಯಯುಕ್ತನಾದ ಮಹಾವಿಷ್ಣುವು ಆ ಕಮಲದಿಂದ ವಿರಾಟ್ಪುರುಷನೆಂದು ಪ್ರಖ್ಯಾತನಾದ ಬ್ರಹ್ಮನನ್ನೂ ಆತನ ಮೂಲಕ ಹದಿನಾಲ್ಕು ಲೋಕಗಳನ್ನೂ ಸೃಷ್ಟಿಮಾಡಿದನು.

೭. ತಮ್ಮ ತಮ್ಮ ಕರ್ಮಗಳಿಗೆ ಅನುಸಾರವಾಗಿ ದೇಹಗಳನ್ನು ಪಡೆದಿರುವ ವಿವಿಧಗಳೂ ಅಸಂಖ್ಯಾತಗಳೂ ಆದ ಪ್ರಾಣಿಸಮೂಹಗಳನ್ನೂ, ಸತ್ತ್ವ ರಜಸ್ಸು, ತಮಸ್ಸುಗಳೆಂಬ ತ್ರಿಗುಣಗಳಿಂದ ಕೂಡಿದ ಪ್ರಕೃತಿಯನ್ನೂ, ಲೋಕದಲ್ಲಿ ವರ್ಣಾಶ್ರಮವಿಭಾಗಗಳನ್ನೂ, ಲೋಕೇಶ್ವರರನ್ನೂ, ಯುಕ್ತಾಯುಕ್ತ ವಿಚಾರಸಹಿತಗಳಾದ ಮರ್ಯಾದೆಗಳನ್ನೂ, ಧರ್ಮಮಾರ್ಗದ ನಿಯಮಾವಳಿಯನ್ನೂ ಪರಮಾತ್ಮನು ನಿರ್ಮಾಣಮಾಡಿದನು.

೮-೯. ನಾಲ್ಕು ವೇದಗಳಿಂದಲೂ, ಅನೇಕ ತಂತ್ರಗಳಿಂದಲೂ, ಸ್ಮೃತಿಗಳಿಂದಲೂ, ತನ್ನ ಆಜ್ಞೆಗಳ ರೂಪದಿಂದಿರುವ ಪುರಾಣಗಳಿಂದಲೂ, ಇತಿಹಾಸಗಳಿಂದಲೂ, ಸರ್ವೇಶ್ವರನೂ ನಿರ್ಮಾಣ ಮಹಾಪ್ರಭುವೂ ಆದ ಶ್ರೀ ಹರಿಯು ಧರ್ಮದ ಪಾಲನೆಗಾಗಿ ಅನೇಕ ಮಹರ್ಷಿಗಳನ್ನು ಧರ್ಮಮಾರ್ಗಪ್ರವರ್ತಕರನ್ನಾಗಿ ಮಾಡಿದನು.

೧೦. ಅವರಿಂದ ಆಚರಣೆಗೆ ತರಲ್ಪಟ್ಟ ಧರ್ಮಗಳೆಲ್ಲವೂ ವರ್ಣಗಳ ಮತ್ತು

ತಾಂಸ್ತು ಪ್ರವರ್ತಮಾನಾಂಸ್ತು ಸ್ವಾಶ್ರಮಾನ್ ದ್ರಷ್ಟುಮೀಶ್ವರಃ ।
ಹೃದಿಸ್ಥೋಽಪ್ಯವ್ಯಯಃ ಸಾಕ್ಷಾದ್ವಿಭೀಷಾರ್ಥಂ ಪರೀಕ್ಷಯಾ ॥ ೧೧ ॥
ಅನೂನಾನ್ಕುಶಲಾನ್ಯತ್ರ ಧರ್ಮಾನ್ಕುರ್ವಂತಿ ವೈ ಪ್ರಜಾಃ ।
ಸಕಾಲಃ ಕೋ ಭವೇದ್ವಿದ್ವಾನಿತಿ ಸಂಚಿಂತಯತ್ಪ್ರಭುಃ ॥ ೧೨ ॥
ವರ್ಷಾಕಾಲೋ ಮಯಾ ಸೃಷ್ಟಃ ಸೀದಂತ್ಯಸ್ತತ್ರಮಾಃ ಪ್ರಜಾಃ ।
ತತ್ರಾನೂನಾನ್ನ ಕುರ್ವಂತಿ ಧರ್ಮಾನ್ಪಂಕಾದ್ಯುಪದ್ರುತಾಃ ॥ ೧೩ ॥
ತಾಂ ದೃಷ್ಟ್ವಾ ಕೋಪ ಏವ ಸ್ಯಾತ್ತೇಷು ತುಷ್ಟಿರ್ನ ಮೇ ಭವೇತ್ ।
ಮಯೇಕ್ಷಿತಾ ನಸೀದಂತು ತಸ್ಮಾತ್ತಾನವಲೋಕಯೇ ॥ ೧೪ ॥
ಶರದ್ಯಪಿ ತಥಾಪೂರ್ತಿಃ ಕರ್ಷಣಾನ್ನೈವ ಜಾಯತೇ ।
ಕೇಚಿತ್ಪಕ್ವಫಲಾಸಕ್ತಾಃ ಕೇಚಿದ್ವೃಷ್ಟಿಭಿರರ್ದಿತಾಃ ॥ ೧೫ ॥

---

ಆಶ್ರಮಗಳ ವಿಭಾಗಗಳನ್ನನುಸರಿಸಿ ಮಾಡಲ್ಪಟ್ಟವು. ಮಹಾವಿಷ್ಣುವಿಗೆ ಸಂತೋಷವನ್ನುಂಟುಮಾಡುವ ಆ ಧರ್ಮಗಳಲ್ಲಿ ತಮತಮಗೆ ಉಚಿತಗಳಾದ ಧರ್ಮಗಳನ್ನು ಸಕಲ ಮಾನವರೂ ಶ್ರದ್ಧೆಯಿಂದ ಕೂಡಿ ಅನುಸರಿಸುತ್ತಿದ್ದರು.

೧೧. ಅವರೆಲ್ಲರೂ ತಮ್ಮ ತಮ್ಮ ಆಶ್ರಮೋಚಿತಗಳಾದ ಧರ್ಮಗಳಲ್ಲಿ ನಡೆಯುತ್ತಿರುವುದನ್ನು ನೋಡುವುದಕ್ಕೂ ಅಧರ್ಮಾಚರಣೆಯ ಭಯವನ್ನುಂಟು ಮಾಡುವುದಕ್ಕೂ, ಪರೀಕ್ಷಾರ್ಥವಾಗಿ ಶಾಶ್ವತನಾದ ಪರಮಾತ್ಮನು ಸಕಲರ ಹೃದಯಗಳಲ್ಲಿಯೂ ಅಂತರ್ಯಾಮಿಯಾಗಿ ನೆಲಸಿದನು.

೧೨. ಊನಗಳಿಲ್ಲದೆ ಸರ್ವಾರ್ಥಸಾಧಕಗಳಾದ ಈ ಧರ್ಮಗಳನ್ನೆಲ್ಲ ಸರಿಯಾಗಿ ಅನುಷ್ಠಾನಮಾಡುವುವಕ್ಕೆ ಅನುಕೂಲವಾದ ಸಮಯವು ಯಾವು ದೆಂದು ಸರ್ವಜ್ಞನಾದ ಆ ಲೋಕೇಶ್ವರನು ಚಿಂತಿಸತೊಡಗಿದನು.

೧೩. "ನಾನು ವರ್ಷರ್ತುವನ್ನು ಸೃಷ್ಟಿಮಾಡಿದೆನು. ಆಗ ಈ ಪ್ರಜೆ ಗಳೆಲ್ಲರೂ ಸಂಚಾರವಿಲ್ಲದೆ ದುಃಖಪಡುವರು. ಮತ್ತು ಕೆಸರು, ಮಳೆಗಳಿಂದ ಹಿಂಸೆಗೊಳಗಾಗಿ ಧರ್ಮಗಳನ್ನು ಸಮಗ್ರವಾಗಿ ನೆರವೇರಿಸಲು ಸಮರ್ಥರಾಗ ಲಾರರು.

೧೪. ಅವರನ್ನು ಕಂಡರೆ ನನಗೆ ಕೋಪವೇ ಉಂಟಾಗುವುದು. ಎಂದಿಗೂ ಸಂತೋಷವುಂಟಾಗಲಾರದು. ನನ್ನ ದೃಷ್ಟಿಗೆ ಬಿದ್ದ ಮಾನವರು ದುಃಖ ಗಳಿಗೊಳಗಾಗದಿರಲಿ, ಆದುದರಿಂದ ಅವರನ್ನು ಆ ಕಾಲದಲ್ಲಿ ಕೃಪಾದೃಷ್ಟಿ ಯಿಂದ ನೋಡುತ್ತೇನೆ.

೧೫. ಶರತ್ಕಾಲದಲ್ಲಿಯೂ ಹಾಗೆಯೇ; ಮನಶ್ಚಾಂಚಲ್ಯದಿಂದ ಧರ್ಮಗಳ ಆಚರಣೆಯು ಸಂಪೂರ್ಣವಾಗಿ ನಡೆಯುವುದಿಲ್ಲ. ಆಗ ಕೆಲವರು ಪಕ್ವಗಳಾದ ಫಲ ಗಳನ್ನು ಹುಡುಕುತ್ತಿರುವರು. ಹಲವರು ಮಳೆಯ ಭಯದಿಂದ ಕ್ಲೇಶಪಡುವರು.

**ಕೇಚಿಚ್ಛೀತಾರ್ದಿತಾಶ್ಚೈವ ತಾನ್ ದೃಷ್ಟ್ವಾ ರೋಷ ಏವ ಮೇ ।**
**ವೈಗುಣ್ಯಂ ಪಶ್ಯತಶ್ಚೈವ ನ ಮೇ ತೋಷೋಽಭಿಜಾಯತೇ ॥ ೧೬ ॥**
**ಉತ್ಥಾಪನಂ ತು ನೇಚ್ಛಂತಿ ಪ್ರಾತರ್ಹೇಮಂತ ಆಗತೇ ।**
**ಕೋಪೋ ಮೇಽನುತ್ಥಿತಾನ್ ದೃಷ್ಟ್ವಾ ಪ್ರಾತಃಸೂರ್ಯೋದಯೇ ಸತಿ ॥**
**ಶಿಶಿರೇಽಪಿ ತಥೈವಾರ್ತಾಃ ಪ್ರಾತಃಕಾಲ ಇಮಾಃ ಪ್ರಜಾಃ ।**
**ತಥಾ ಪಕ್ವಫಲಾದಾನಾಶಕ್ತಾ ಹ್ಯನಿಶಮಂಜಸಾ ॥ ೧೮ ॥**
**ಪುನಃ ಶೀತಾರ್ದಿತಾಃ ಪ್ರಾತಃಸ್ನಾನಾರ್ಥಮಿತಿಚಿಂತಿತಾಃ ।**
**ತೇಷಾಂ ತು ಕರ್ಮಲೋಪಃ ಸ್ಯಾನ್ನೈವ ಪೂರ್ತಿಃ ಕಥಂಚನ ॥ ೧೯ ॥**
**ಪ್ರೇಕ್ಷಾಯಾಃ ಸಮಯೋ ನಾಽಯಮಿತಿಚಿಂತಾಽಽಕುಲೋ ವಿಭುಃ ।**
**ವಸಂತಸಮಯಂ ಮೇನೇ ಸರ್ವಾಪತ್ತಿನಿವಾರಕಂ ॥ ೨೦ ॥**
**ಸ್ನಾನೇ ದಾನೇ ತಥಾ ಯಾಗೇ ಕ್ರಿಯಾಯಾಂ ಭೋಗ ಏವ ಚ ।**
**ನಾನಾಧರ್ಮವಿಧಾನೇ ಚ ಹ್ಯನುಕೂಲಸ್ತ್ವಯಂ ಹ್ಯೃತುಃ ॥ ೨೧ ॥**

---

೧೬. ಮತ್ತೆ ಕೆಲವರು ಚಳಿಯ ಕೊರೆತಕ್ಕೆ ಸಿಕ್ಕಿರುವರು. ಅವರನ್ನೆಲ್ಲ ಕಂಡು ನನಗೆ ರೋಷವೇ ಉಂಟಾಗುವುದು. ಅವರು ಆಚರಿಸುವ ಧರ್ಮಗಳಲ್ಲಿ ವೈಪರೀತ್ಯಗಳನ್ನು ನೋಡುತ್ತಿರುವ ನನಗೆ ಎಂದಿಗೂ ಸಂತೋಷವುಂಟಾಗಲಾರದು.

೧೭. ಹೇಮಂತಋತುವು ಪ್ರಾಪ್ತವಾಗಲು ಜನರು ಉಷಃಕಾಲದಲ್ಲಿ ಹಾಸಿಗೆಗಳಿಂದ ಏಳುವುದಕ್ಕೇ ಇಚ್ಛಿಸುವುದಿಲ್ಲ. ಪ್ರಾತಃಕಾಲದಲ್ಲಿ ಸೂರ್ಯೋದಯವಾದರೂ ಮೇಲಕ್ಕೇಳದಿರುವ ಜನರನ್ನು ಕಂಡರೆ ನನಗೆ ಅಪರಿಮಿತವಾದ ಕೋಪವುಂಟಾಗುವುದು ನಿಶ್ಚಯವು.

೧೮. ಶಿಶಿರಋತುವಿನಲ್ಲಿಯೂ ಈ ಜನರು ಹಾಗೆಯೇ ಪ್ರಾತಃಕಾಲಗಳಲ್ಲಿ ಆರ್ತರಾಗಿರುವರು. ಆದುದರಿಂದ ನಿತ್ಯವೂ ಪಕ್ವಫಲಾದಿ ಪದಾರ್ಥಗಳನ್ನು ಸಂಪಾದಿಸಲು ಅಶಕ್ತರಾಗಿರುವರು.

೧೯. ಆಗಲೂ ಶೀತದಿಂದ ಕ್ಲೇಶಪಡುತ್ತ ಪ್ರಾತಃಸ್ನಾನವನ್ನು ಮಾಡಲಾರರು ಎಂದೇ ನಿಶ್ಚಯಿಸಬೇಕು. ಅವರಲ್ಲಿಯೂ ಕರ್ಮಲೋಪವಾಗುವುದೇ ಹೊರತು ನಿಶ್ಚಯವಾಗಿಯೂ ಸಂಪೂರ್ಣತೆಯು ಎಂದಿಗೂ ಉಂಟಾಗಲಾರದು.

೨೦. ಆದುದರಿಂದ ಭಗವಂತನ ದರ್ಶನಕ್ಕೆ ಈ ಸಮಯವೂ ಉಚಿತವಾದುದಲ್ಲ, ಈ ವಿಧವಾದ ಯೋಚನೆಯಲ್ಲಿಯೇ ವ್ಯಾಕುಲನಾಗಿದ್ದ ಪರಮಾತ್ಮನು ವಸಂತಋತುವನ್ನೇ ಸಕಲ ದೋಷರಹಿತವಾದುದಾಗಿ ನಿಶ್ಚಯಿಸಿದನು.

೨೧. ಪ್ರಾತಃಸ್ನಾನ, ದಾನ, ಯಜ್ಞ, ಸತ್ಕಾರ್ಯಗಳು, ಭೋಗ

ಅಪ್ರಯಾಸೇನ ಲಭ್ಯಾನಿ ದ್ರವ್ಯಾಣ್ಯಸುಭೃತಾಂ ಧ್ರುವಂ ।
ಯೇನ ಕೇನಾಪಿ ದ್ರವ್ಯೇಣ ತುಷ್ಟಿಸ್ತ್ವಸುಭೃತಾಂ ಭವೇತ್ ॥ ೨೨ ॥
ವಿಷ್ಣೋರಾಧಾರಭೂತಾನಾಂ ತದ್ದ್ರವ್ಯಂ ಧರ್ಮಸಾಧನಂ ।
ವಸಂತೇ ಸಕಲಂ ದ್ರವ್ಯಂ ಪ್ರಾಣಿನಾಂ ತು ಸುಖಾವಹಂ ॥ ೨೩ ॥
ದಾನಯೋಗ್ಯಂ ಧರ್ಮಯೋಗ್ಯಂ ಭೋಗಯೋಗ್ಯಂ ತು ಸರ್ವಶಃ ।
ನಿರ್ಧನಾನಾಂ ತು ಪಂಗ್ವಾದಿ ವಿಕಲಾನಾಂ ಮಹಾತ್ಮನಾಂ ॥ ೨೪ ॥
ದ್ರವ್ಯಾಣಿ ಚ ಸುಲಭ್ಯಾನಿ ಜಲಾದೀನಿ ನ ಸಂಶಯಃ ।
ದ್ರವ್ಯೈರೇತೈಃ ಸ್ವಾತ್ಮಹಿತಂ ಧರ್ಮಂ ಕುರ್ವಂತಿ ಮತ್ಪ್ರಿಯಾಃ ॥ ೨೫ ॥
ಪತ್ರೈಃ ಪುಷ್ಪೈಃ ಫಲೈರನ್ಯೈಃ ಶಾಕೈಶ್ಚಾಪಿ ಪ್ರಿಯೋಕ್ತಿಭಿಃ ।
ಸ್ರಕ್ತಾಂಬೂಲೈಶ್ಚಂದನಾದ್ಯೈಃ ಪಾದಪ್ರಕ್ಷಾಲನಾದಿಭಿಃ ॥ ೨೬ ॥

---

ಬಹುವಿಧಗಳಾದ ಧರ್ಮಕಾರ್ಯಗಳ ಆಚರಣೆ ಇವುಗಳೆಲ್ಲವುಗಳಿಗೂ ಈ ವಸಂತ ಸಮಯವೇ ಅತ್ಯಂತಾನುಕೂಲವಾಗಿರುವುದಲ್ಲವೆ.

೨೨. ಸಕಲ ಪ್ರಾಣಿಗಳಿಗೂ ಈ ಋತುವಿನಲ್ಲಿ ಫಲಪುಷ್ಪಾದಿ ಪದಾರ್ಥಗಳು ನಿಶ್ಚಯವಾಗಿಯೂ ಪ್ರಯಾಸವಿಲ್ಲದೆಯೇ ಲಭಿಸುವುವು. ಅಲ್ಲದೆ ಸಮಸ್ತ ಮಾನವರಿಗೂ ಸಮಯಕ್ಕೆ ದೊರಕಿದ ಯಾವ ಅಲ್ಪ ದ್ರವ್ಯದಿಂದಾದರೂ ಸಂತೋಷವುಂಟಾಗುವುದು.

೨೩. ಮಹಾವಿಷ್ಣುವೇ ಜೀವನಸರ್ವಸ್ವವೆಂದು ತಿಳಿದಿರುವವರಿಗೆ ಆ ದ್ರವ್ಯಗಳೇ ಧರ್ಮಸಾಧನಗಳಾಗುವುವು. ವಸಂತಕಾಲದಲ್ಲಿ ಲಭಿಸುವ ಸಮಸ್ತ ಪದಾರ್ಥಗಳೂ ಪ್ರಾಣಿಗಳಿಗೆ ಸೌಖ್ಯವನ್ನುಂಟುಮಾಡುವುವು.

೨೪. ನಿರ್ಗತಿಕರೂ, ಕುಂಟರೇ ಮೊದಲಾದ ಅಂಗಹೀನರೂ, ಆದ ಮಹಾತ್ಮರಿಗೂ ದಾನಯೋಗ್ಯಗಳೂ, ಧರ್ಮಯೋಗ್ಯಗಳೂ, ಭೋಗಯೋಗ್ಯಗಳೂ ಆದ ದ್ರವ್ಯಗಳು ಆ ಸಮಯದಲ್ಲಿ ಎಲ್ಲೆಲ್ಲಿಯೂ ಸುಲಭವಾಗಿ ದೊರಕುವುವು.

೨೫. ಶೀತೋದಕವೇ ಮುಂತಾದ ದ್ರವ್ಯಗಳು ಸುಲಭವಾಗಿ ಕೈಸೇರುವುವೆಂಬುದರಲ್ಲಿ ಸಂದೇಹವಿಲ್ಲ. ನನಗೆ ಪ್ರೀತಿಪಾತ್ರರಾದ ಭಕ್ತರು ಈ ದ್ರವ್ಯಗಳಿಂದಲೇ ತಮ್ಮ ಆತ್ಮಗಳಿಗೆ ಸದ್ಗತಿದಾಯಕಗಳಾದ ಧರ್ಮಕಾರ್ಯಗಳನ್ನು ಮಾಡುವರು.

೨೬–೨೭. ಪತ್ರಗಳು, ಪುಷ್ಪಗಳು, ಬಹುವಿಧಗಳಾದ ಫಲಗಳು, ಶಾಕಗಳು, ಪ್ರಿಯಾಲಾಪಾದಿ ಸತ್ಕಾರಗಳು, ಪುಷ್ಪತಾಂಬೂಲಗಳು, ಚಂದನಾದಿ ಶೀತ ದ್ರವ್ಯಗಳು, ಪಾದಪ್ರಕ್ಷಾಳನಗಳು, ಸಾಷ್ಟಾಂಗ ನಮಸ್ಕಾರಗಳು ಮುಂತಾದ ಸುಲಭಲಭ್ಯಗಳಾದ ಪದಾರ್ಥಗಳ ದಾನಗಳಿಂದಲೇ ನಾನು ಜನರಿಗೆ ವರಗಳನ್ನು

ಪ್ರತ್ಯಯಾದ್ಯೈರಹೋ ತೇಷಾಂ ವರದೋಽಹಮಿತೀರಯನ್ ।
ಸಂಚಿಂತ್ಯ ಭಗವಾನ್ವಿಷ್ಣುಃ ಪ್ರತಸ್ಥೇ ರಮಯಾಸಹ ॥ ೨೭ ॥
ವನಾನಿ ಸರ್ವತಃ ಪಶ್ಯನ್ವಿಕಸತ್ಕುಸುಮಾನಿಚ ।
ಹೃಷ್ಟಪುಷ್ಟಜನಾಕೀರ್ಣಂ ಮತ್ತಾಲಿದ್ವಿಜಸೇವಿತಂ ॥ ೨೮ ॥
ಆಶ್ರಮಾಣಾಂ ಮಹಾರ್ಹಾಣಾಂ ವನಗ್ರಾಮನಿವಾಸಿನಾಂ ।
ಪ್ರಾಂಗಣಾದೀನಿ ರಮ್ಯಾಣಿ ಹ್ಯುದ್ಯಾನಾನಿ ಸ್ಥಲಾನಿ ಚ ॥ ೨೯ ॥
ರಮಾಯೈ ದರ್ಶಯನ್ವಿಷ್ಣುಃ ಸಹದೇವೈರ್ಮುನೀಶ್ವರೈಃ ।
ಸಿದ್ಧಚಾರಣಗಂಧರ್ವಕಿನ್ನರೋರಗರಾಕ್ಷಸೈಃ ॥ ೩೦ ॥
ಸ್ತೂಯಮಾನೋಽಭ್ಯಗಾದ್ಗೇಹಾನ್ ವರ್ಣಾಶ್ರಮನಿವಾಸಿನಾಂ ।
ಮೀನಾದಿ ಕರ್ಕಟಾಂತಂ ವೈ ಸ ತಿಷ್ಠನ್ರಮಯಾ ಸುರೈಃ ॥ ೩೧ ॥
ಸಾರ್ದ್ರಂ ಪ್ರತೀಕ್ಷ್ಯ ಪುರುಷಾನ್ ಕೃತಾಕೃತ ಸಪರ್ಯಯಾ ।
ತತ್ರ ಧರ್ಮವತಾಂ ಪುಂಸಾಂ ದಧಾತೀಷ್ಟಾನ್ ಮನೋರಥಾನ್ ॥ ೩೨ ॥

ದಯೆ ಪಾಲಿಸುವೆನು. ಇಂತೆಂದು ಯೋಚಿಸಿ ಭಗವಂತನಾದ ಮಹಾವಿಷ್ಣುವು ಲಕ್ಷ್ಮೀದೇವಿಯೊಡನೆ ಅಂತರ್ಧಾನವನ್ನು ಹೊಂದಿದನು.

೨೮. ಬಳಿಕ ಆತನು ಭೂಮಂಡಲವನ್ನೆಲ್ಲ ಸುತ್ತುತ್ತ ಅರಳಿದ ಕುಸುಮಗಳುಳ್ಳ ಅನೇಕ ವನಗಳನ್ನು ಎಲ್ಲೆಲ್ಲಿಯೂ ನೋಡಿದನು. ಸಂತುಷ್ಟರೂ ದೃಢಕಾಯರೂ ಆದ ಜನರಿಂದಲೂ, ಮಧುಪಾನದಿಂದ ಮದಿಸಿದ ದುಂಬಿಗಳಿಂದಲೂ ಪಕ್ಷಿವಿಶೇಷಗಳಿಂದಲೂ ದೇಶಗಳು ಶೋಭಿಸುತ್ತಿರುವುವು.

೨೯. ಅರಣ್ಯಗಳಲ್ಲಿಯೂ ಗ್ರಾಮಗಳಲ್ಲಿಯೂ ನಿವಾಸಿಸುವ ಜನರ ಆಶ್ರಮಗಳು ಮಹಾರ್ಹಗಳಾಗಿರುವುವು. ಅವುಗಳ ಪ್ರಾಂಗಣಗಳೂ ಉದ್ಯಾನವನಗಳೂ ಸ್ಥಳವಿಶೇಷಗಳೂ ಅತ್ಯಂತ ಮನೋಹರಗಳಾಗಿರುವುವು.

೩೦. ಇವುಗಳನ್ನೆಲ್ಲ ಮಹಾವಿಷ್ಣುವು ಲಕ್ಷ್ಮೀದೇವಿಗೆ ತೋರಿಸುತ್ತ ದೇವತೆಗಳಿಂದಲೂ, ಮುನಿವರ್ಯರಿಂದಲೂ, ಸಿದ್ಧರಿಂದಲೂ, ಚಾರಣರಿಂದಲೂ, ಗಂಧರ್ವರಿಂದಲೂ, ಕಿನ್ನರರಿಂದಲೂ, ನಾಗರಿಂದಲೂ, ರಾಕ್ಷಸರಿಂದಲೂ ಪರಿವಾರಿತನಾಗಿ ಸಂಚರಿಸುತ್ತಿರುವನು.

೩೧. ಅವರೆಲ್ಲರಿಂದ ಸ್ತೋತ್ರಗಳನ್ನು ಕೇಳುವವನಾಗಿ ವರ್ಣಾಶ್ರಮಾಚಾರಗಳಲ್ಲಿ ನಿರತರಾಗಿರುವ ಮಾನವರ ಗೃಹಗಳಿಗೆ ಶ್ರೀಹರಿಯು ಬಂದು ಸೇರುವನು. ಮೀನಸಂಕ್ರಮಣದ ಮೊದಲುಗೊಂಡು ಕಟಕ ಸಂಕ್ರಾಂತಿಯ ಪರ್ಯಂತವೂ ಆತನು ಲಕ್ಷ್ಮಿಯಿಂದಲೂ ದೇವತೆಗಳಿಂದಲೂ ಕೂಡಿ ನೆಲಸಿರುವನು.

೩೨. ಕೆಲವೆಡೆಗಳಲ್ಲಿ ಪೂಜೆಯನ್ನು ಹೊಂದುವವನೂ, ಕೆಲವೆಡೆಗಳಲ್ಲಿ

ಮತ್ತಾನ್ನಸಹತೇ ಪುಂಸೋ ಹರತ್ಯಾಯುರ್ಧನಾದಿಕಂ ।
ಯದಿ ಕುರ್ವಂತಿ ವೈಶಾಖೇ ಸಪರ್ಯಾಂ ಪರಮಾತ್ಮನಃ ॥ ೩೩ ॥
ತತ್ರಾಪಿ ಚಲಮೂರ್ತೀನಾಂ ಸಾಧೂನಾಂ ಯತ್ರ ವೈ ವಿಭುಃ ।
ಮಾಸೇಷ್ವನ್ಯೇಷು ಯಜ್ಜಾತಂ ಕರ್ಮಲೋಪಂ ಸಹಿಷ್ಯತಿ ॥ ೩೪ ॥
ಯಥಾ ದೇಶಾಗತಂ ಭೂಪಂ ದೃಷ್ಟ್ವಾ ಜನಪದಾಃ ಪ್ರಜಾಃ ।
ಯದಿ ತಂ ಚೋಪತಿಷ್ಠಂತಿ ಪ್ರತ್ಯಯಾದ್ಯೈರ್ಮಹಾರ್ಹಣೈಃ ॥ ೩೫ ॥
ತದಾ ಕರಾದಿಕಂ ನ್ಯೂನಂ ಪೂರ್ಣಂ ಜಾನಾತಿ ಪಾರ್ಥಿವಃ ।
ಪುನರಪ್ಯಧಿಕಂ ಚೇಷ್ಟಂ ತುಷ್ಟೋ ದಾಸ್ಯತಿ ನಿಶ್ಚಿತಂ ॥ ೩೬ ॥
ತದಾತ್ವಕೃತಪೂಜಾನಾಂ ದಂಡಂ ತೇಷಾಂ ಕರೋತಿ ಚ ।
ತಥಾ ವಿಷ್ಣುಃ ಸ್ವಕೀಯಾನಾಂ ವೈಶಾಖೇ ಮಾಧವಾಗಮೇ ॥ ೩೭ ॥
ಸಪರ್ಯಾಂ ಕುರ್ವತಾಂ ಪುಂಸಾಂ ದಧಾರೇಷ್ಟಾನ್ ಮನೋರಥಾನ್ ।
ಅಕುರ್ವತಾಂ ತಥಾ ಪುಂಸಾಂ ಧನಾದೀನಿ ಹರತ್ಯಲಂ ॥ ೩೮ ॥

---

ಹೊಂದದವಳೂ ಆದ ಆಕೆಯೊಡನೆ ಮನುಷ್ಯರನ್ನೆಲ್ಲ ಪರೀಕ್ಷಿಸುತ್ತ ಅವರಲ್ಲಿ ಧರ್ಮಕಾರ್ಯಗಳಲ್ಲಿ ನಿರತರಾಗಿರುವವರಿಗೆ ಮಾತ್ರ ಅಪೇಕ್ಷಿತಗಳಾದ ಮನೋರಥಗಳನ್ನು ದಯೆಪಾಲಿಸುವನು.

೩೩-೩೪. ಆತನು ಐಶ್ವರ್ಯಾದಿಗಳಿಂದ ಮದಿಸಿರುವವರನ್ನು ನೋಡಿ ಸಹಿಸುವುದಿಲ್ಲ. ಅವರ ಆಯುಸ್ಸನ್ನೂ ಹಣವೇ ಮುಂತಾದ ವೈಭವವನ್ನೂ ಅಪಹರಿಸುವನು. ಆದರೆ ಯಾರು ವೈಶಾಖಮಾಸದಲ್ಲಿ ಪರಮಾತ್ಮನ ಪೂಜೆಯನ್ನು ಮಾಡುವರೊ, ವಿಶೇಷವಾಗಿ ಸರ್ವವ್ಯಾಪಿಯಾದ ಆತನ ಚರಮೂರ್ತಿಗಳೆನಿಸಿದ ಸಾಧುಸಜ್ಜನರ ಸೇವೆಯನ್ನು ನೆರವೇರಿಸುವರೊ, ಅವರು ಇತರ ಮಾಸಗಳಲ್ಲಿ ಮಾಡಿರುವ ಕರ್ಮಲೋಪಗಳನ್ನೂ ಸಹನೆಮಾಡುವನು.

೩೫-೩೬. ಪರದೇಶಗಳಲ್ಲಿ ಸಂಚಾರವನ್ನು ಮಾಡಿ ತನ್ನ ರಾಜ್ಯಕ್ಕೆ ಹಿಂದಿರುಗಿದ ರಾಜನನ್ನು ಕಂಡು ದೇಶದ ಜನರೆಲ್ಲರೂ ನಮಸ್ಕಾರಗಳಿಂದಲೂ, ಕಪ್ಪಕಾಣಿಕೆಗಳಿಂದಲೂ ಆತನನ್ನು ಸ್ವಾಗತಿಸಿದರೆ, ರಾಜನು ಸಂತೋಷಗೊಂಡು ಅವರು ಹಿಂದಿನಿಂದ ಕೊಡದೆ ನಿಲ್ಲಿಸಿಕೊಂಡಿರುವ ಕಂದಾಯವೇ ಮೊದಲಾದ ಹಣಗಳನ್ನೂ ಕ್ಷಮಿಸುವನು. ಅದಕ್ಕೂ ಹೆಚ್ಚಾಗಿ ಸಂತೋಷದಿಂದ ಅವರಿಗೆ ಬೇಕಾದ ಅನುಕೂಲಗಳನ್ನೂ ಕಲ್ಪಿಸಿಕೊಡುವುದು ನಿಶ್ಚಯವು.

೩೭-೩೮. ಆದರೆ ಆಗ ಯಾರು ತನಗೆ ಪೂಜೆಯನ್ನು ಮಾಡುವುದಿಲ್ಲವೊ, ಅವರಿಗೆ ಉಗ್ರವಾದ ದಂಡವನ್ನು ವಿಧಿಸುವನು. ಹಾಗೆಯೇ ಮಹಾವಿಷ್ಣುವೂ ವಸಂತಕಾಲದ ವೈಶಾಖಮಾಸದಲ್ಲಿ ತನಗೆ ಪೂಜೋಪಚಾರಗಳನ್ನು ಮಾಡುವವರಿಗೆ ಇಷ್ಟಗಳಾದ ಮನೋರಥಗಳೆಲ್ಲವನ್ನೂ ನೆರವೇರಿಸಿಕೊಡುವನು. ಹಾಗೆ

**ಧರ್ಮಗೋಪ್ತುರ್ಮಹಾವಿಷ್ಣೋರ್ದೇವದೇವಸ್ಯ ಶಾರ್ಙ್ಗಿಣಃ ।**
**ಪರೀಕ್ಷಾಕಾಲ ಏವಾಽಯಂ ತಸ್ಮಾನ್ಮಾಸೋತ್ತಮೋಹ್ಯಯಂ ॥ ೩೯ ॥**

**ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ದ್ವಿತೀಯೇ ವೈಷ್ಣವಖಂಡೇ ವೈಶಾಖಮಾಸಮಾಹಾತ್ಮ್ಯೇ ನಾರದಾಂಬರೀಷಸಂವಾದೇ "ವೈಶಾಖಶ್ರೇಷ್ಠತ್ವನಿರೂಪಣಂ" ನಾಮ ಪಂಚಮೋಽಧ್ಯಾಯಃ**

ಮಾಡದೆ ಇರುವ ಜನರ ಐಶ್ವರ್ಯವೇ ಮುಂತಾದ ಸಮಸ್ತ ಸೌಭಾಗ್ಯವನ್ನು ನಿಶ್ಚಯವಾಗಿಯೂ ಅಪಹರಿಸುವನು.

೩೯. ಧರ್ಮರಕ್ಷಕನೂ, ದೇವಾಧಿದೇವನೂ, ಶಾರ್ಙ್ಗಧಾರಿಯೂ ಆದ ಮಹಾವಿಷ್ಣುವು ಈ ಕಾಲದಲ್ಲಿ ಸಕಲ ಮಾನವರನ್ನೂ ಪರೀಕ್ಷೆಮಾಡುವನು. ಆದುದರಿಂದ ವೈಶಾಖವೇ ಸಕಲ ಮಾಸಗಳಲ್ಲಿಯೂ ಸರ್ವೋತ್ತಮವೆನಿಸಿರುವುದು.

ಇಲ್ಲಿಗೆ ಎಂಬತ್ತೊಂದು ಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀಸ್ಕಾಂದಮಹಾಪುರಾಣದ ಎರಡನೆಯ ವೈಷ್ಣವಖಂಡದ ವೈಶಾಖಮಾಸಮಾಹಾತ್ಮ್ಯದ ನಾರದಾಂಬರೀಷ ಸಂವಾದದಲ್ಲಿ "ವೈಶಾಖಶ್ರೇಷ್ಠತ್ವ ನಿರೂಪಣ" ವೆಂಬ ಐದನೆಯ ಅಧ್ಯಾಯವು ಮುಗಿದುದು

॥ ಶ್ರೀ ॥

## ಅಥ ಷಷ್ಠೋಽಧ್ಯಾಯಃ

### ಗೃಹಗೋಧಿಕಾಖ್ಯಾನಃ

ನಾರದ ಉವಾಚ:—

ವೈಶಾಖೇಽಧ್ವಗತಪ್ತಾನಾಂ ತೃಷಾರ್ತಾನಾಂ ಮಹೀಪತೇ ।
ಜಲದಾನಮಕುರ್ವಾಣಸ್ತಿರ್ಯಗ್ಯೋನಿಮವಾಪ್ನುಯಾತ್ ॥ ೧ ॥
ಅತ್ರೈವೋದಾಹರಂತೀಮಮಿತಿಹಾಸಂ ಪುರಾತನಂ ।
ವಿಪ್ರಸ್ಯ ಗೃಹಗೋಧಾಯಾಃ ಸಂವಾದಂ ಪರಮಾದ್ಭುತಂ ॥ ೨ ॥
ಪುರಾ ಚೇಕ್ಷ್ವಾಕುವಂಶೇಽಭೂದ್ಧೇಮಾಂಗ ಇತಿ ಭೂಮಿಪಃ ।
ಬ್ರಹ್ಮಣ್ಯಶ್ಚ ವದಾನ್ಯಶ್ಚ ಜಿತಾಮಿತ್ರೋ ಜಿತೇಂದ್ರಿಯಃ ॥ ೩ ॥
ಯಾವತ್ಯೋ ಭೂಮಿಕಣಿಕಾ ಯಾವಂತೀ ಜಲಬಿಂದವಃ ।
ಯಾವಂತ್ಯುಡೂನಿ ಗಗನೇ ತಾವತೀರದದಾತ್ಸ ಗಾಃ ॥ ೪ ॥

## ಕನ್ನಡದ ಅನುವಾದ

### ಗೃಹಗೋಧಿಕಾಖ್ಯಾನ

೧. ನಾರದನು ಹೇಳುತ್ತಾನೆ:—ಎಲೈ ಅಂಬರೀಷ ಮಹಾರಾಜನೆ! ವೈಶಾಖಮಾಸದಲ್ಲಿ ದಾರಿಯನ್ನು ನಡೆದು ಬಿಸಿಲಿನಲ್ಲಿ ಬಳಲಿದ ಬಾಯಾರಿದವರಿಗೆ ನೀರನ್ನು ದಾನಮಾಡದೆ ಇರುವ ಮನುಷ್ಯನು ತಿರ್ಯಗ್ಜಂತುವಿನ ಜನ್ಮವನ್ನು ಪಡೆಯುವನು.

೨. ಆ ವಿಷಯವಾಗಿಯೇ ಬ್ರಾಹ್ಮಣನಿಗೂ ಮನೆಯೊಳಗಿನ ಒಂದು ಹಲ್ಲಿಗೂ ನಡೆದ ಸಂವಾದದ ರೂಪವಾದ ಈ ಪುರಾತನ ಇತಿಹಾಸವನ್ನು ಬಲ್ಲವರು ಉದಾಹರಣೆಯಾಗಿ ನಿರೂಪಿಸುವರು. ಈ ಕಥೆಯು ಪರಮಾದ್ಭುತವಾಗಿರುವುದು.

೩. ಪೂರ್ವಕಾಲದಲ್ಲಿ ಇಕ್ಷ್ವಾಕುವಂಶದಲ್ಲಿ ಜನಿಸಿದ ಹೇಮಾಂಗನೆಂಬ ಮಹಾರಾಜನೊಬ್ಬನು ರಾಜ್ಯಭಾರವನ್ನು ಮಾಡುತ್ತಿದ್ದನು. ಆತನು ಬ್ರಾಹ್ಮಣರಿಗೆ ಹಿತವನ್ನುಂಟುಮಾಡುವವನೂ, ಯಥೇಚ್ಛದಾನವನ್ನು ಕೊಡುವವನೂ, ಸಕಲ ಶತ್ರುಗಳನ್ನೂ ಜಯಿಸಿದವನೂ, ಇಂದ್ರಿಯಗಳನ್ನು ಸ್ವಾಧೀನಗೊಳಿಸಿದವನೂ ಆಗಿದ್ದನು.

೪. ಭೂಮಿಯಲ್ಲಿ ಎಷ್ಟು ಧೂಳಿನ ಕಣಗಳಿರುವುವೊ, ಎಷ್ಟು ನೀರಿನ ಹನಿಗಳಿರುವುವೊ, ಆಕಾಶದಲ್ಲಿ ಎಷ್ಟು ನಕ್ಷತ್ರಗಳಿರುವುವೊ, ಅಷ್ಟು (ಅಸಂಖ್ಯಾತಗಳಾದ) ಗೋವುಗಳನ್ನು ಆತನು ದಾನಮಾಡಿದ್ದನು.

ಯೇನೇಷ್ಟೇ ಯಜ್ಞದರ್ಭೈಶ್ಚ ಭೂಮಿರ್ಬರ್ಹಿಷ್ಮತೀ ಶುಭಾ ।
ಗೋಭೂತಿಲಹಿರಣ್ಯಾದ್ಯೈಸ್ತೋಷಿತಾ ಬಹವೋ ದ್ವಿಜಾಃ ॥ ೫ ॥
ತೇನಾದತ್ತಾನಿ ದಾನಾನಿ ನ ವಿದ್ಯಂತ ಇತಿ ಶ್ರುತಂ ।
ತೇನಾದತ್ತಂ ಜಲಂ ಚೈಕಂ ಸುಖಲಭ್ಯಧಿಯಾ ನೃಪ ॥ ೬ ॥
ಬೋಧಿತೋ ಬ್ರಹ್ಮಪುತ್ರೇಣ ವಸಿಷ್ಠೇನ ಮಹಾತ್ಮನಾ ।
ಅಮೌಲ್ಯಂ ಸರ್ವತೋ ಲಭ್ಯಂ ತದ್ದಾತಾ ಕಿಂ ಫಲಂ ಲಭೇತ್ ॥ ೭ ॥
ದುರ್ಬುಧ್ಯಾ ಹೇತುವಾದೈಶ್ಚ ನಜಲಂ ದತ್ತವಾನ್ ದ್ವಿಜೇ ।
ಅಲಭ್ಯದಾನೇ ಪುಣ್ಯಂ ಸ್ಯಾದಿತಿ ವಾಕ್ಯಂ ಸುಯುಕ್ತಿಮತ್ ॥ ೮ ॥
ಸ ಆನರ್ಚ ದ್ವಿಜಾನ್ವ್ಯಂಗಾನ್ ದರಿದ್ರಾನ್ವೃತ್ತಿಕರ್ಶಿತಾನ್ ।
ನಾರ್ಚಯಚ್ಛ್ರೋತ್ರಿಯಾನ್ವಿಪ್ರಾಂಸ್ತತ್ವಜ್ಞಾನ್ ಬ್ರಹ್ಮವಾದಿನಃ ॥ ೯ ॥
ಪ್ರಖ್ಯಾತಾನ್ಪೂಜಯಿಷ್ಯಂತಿ ಸರ್ವಲೋಕಾ ಮಹಾರ್ಹಣಾನ್ ।
ಅನಾಥಾನಾಮವಿದ್ಯಾನಾಂ ವ್ಯಂಗಾನಾಂ ಚ ದ್ವಿಜನ್ಮನಾಂ ॥ ೧೦ ॥

---

೫. ಆತನು ಯಜ್ಞಗಳನ್ನು ಮಾಡುವಾಗ ಯಜ್ಞಶಾಲೆಗಳಲ್ಲಿ ಚೆಲ್ಲಿರುವ ದರ್ಭೆಗಳಿಂದಲೇ ಭೂಮಿಗೆ ಬರ್ಹಿಷ್ಮತಿಯೆಂಬ ಹೆಸರಾಯಿತು. ಗೋದಾನ, ಭೂದಾನ, ತಿಲದಾನ, ಹಿರಣ್ಯದಾನ ಮುಂತಾದ ಅನೇಕ ದಾನಗಳಿಂದ ಅನೇಕ ಬ್ರಾಹ್ಮಣರನ್ನು ಆತನು ತೃಪ್ತಿಗೊಳಿಸಿದ್ದನು.

೬. ಆತನು ಕೊಡದೆ ಇರುವ ದಾನಗಳೇ ಇಲ್ಲವೆಂದು ನಾವು ತಿಳಿದವರಿಂದ ಕೇಳಿರುವೆವು. ಎಲೈ ಮಹಾರಾಜನೆ! ಆದರೆ ಸುಲಭವಾಗಿ ಎಲ್ಲೆಲ್ಲಿಯೂ ದೊರಕುವುದೆಂಬ ವ್ಯಾಜದಿಂದ ಆತನು ಜಲವನ್ನು ಮಾತ್ರ ಎಂದೂ ದಾನಮಾಡಲಿಲ್ಲ.

೭. ಬ್ರಹ್ಮಪುತ್ರನೂ, ಮಹಾಮುನಿಯೂ ಆದ ವಸಿಷ್ಠನು ಎಚ್ಚರಿಕೆಯನ್ನು ಕೊಟ್ಟರೂ ಮನಸ್ಸಿಗೆ ತಂದುಕೊಳ್ಳಲಿಲ್ಲ. "ಜಲವು ಬೆಲೆಯಿಲ್ಲದ ಪದಾರ್ಥ. ಮೇಲಾಗಿ ಎಲ್ಲೆಲ್ಲಿಯೂ ಲಭ್ಯವಾಗಿರುವುದು. ಅದನ್ನು ದಾನಮಾಡಿದವನಿಗೆ ಯಾವ ಫಲವು ಕೈಗೂಡುವುದು?"

೮–೯. ದುರ್ಬುದ್ಧಿಯುಳ್ಳವನಾಗಿ ಆ ಮಹಾರಾಜನು ಈ ರೀತಿಯಾದ ಶುಷ್ಕತರ್ಕಗಳಿಂದ ವಾದವನ್ನು ಮಾಡುತ್ತ ಬ್ರಾಹ್ಮಣರಿಗೆ ಜಲದಾನವನ್ನು ಮಾಡಲಿಲ್ಲ. ಸುಲಭವಾಗಿ ಸಿಕ್ಕಲಾರದ ಪದಾರ್ಥಗಳ ದಾನದಿಂದಲೇ ಪುಣ್ಯವು ಲಭಿಸುವುದೆಂದು ಯುಕ್ತಿಯುಕ್ತವಾಗಿ ಮಾತುಗಳನ್ನಾಡುತ್ತಿದ್ದನು. ಮತ್ತು ಆ ಹೇಮಾಂಗನು ಅಂಗವಿಹೀನರೂ, ದರಿದ್ರರೂ ಜೀವನೋಪಾಯರಹಿತರೂ ಆದ ಬ್ರಾಹ್ಮಣರನ್ನೇ ಪೂಜಿಸುತ್ತಿದ್ದನು. ಶ್ರೋತ್ರಿಯರೂ, ತತ್ತ್ವಜ್ಞಾನಿಗಳೂ, ಬ್ರಹ್ಮವಿಚಾರಪರರೂ ಆದ ಬ್ರಾಹ್ಮಣರನ್ನು ಎಂದೂ ಆದರದಿಂದ ಸತ್ಕರಿಸಲಿಲ್ಲ.

೧೦–೧೧. "ಮಹಾ ವಿಭವವಂತರಾದ ಸಮಸ್ತ ಜನರೂ ಲೋಕವಿಖ್ಯಾತ

ದರಿದ್ರಾಣಾಂ ಗತಿಃ ಕಾ ವಾ ತಸ್ಮಾತ್ತೇ ಮೇ ದಯಾಸ್ಪದಂ ।
ಇತಿ ದುರ್ಧೀರಪಾತ್ರೇಷು ದತ್ತವಾನ್ಸ್ವಮಪಿ ಸ್ವಯಂ ॥ ೧೦ ॥
ತೇನ ದೋಷೇಣ ಮಹತಾ ಚಾತಕತ್ವಂ ತ್ರಿಜನ್ಮಸು ।
ಏಕಜನ್ಮನಿ ಗೃಧ್ರತ್ವಂ ಶ್ವಾಽಭವತ್ಸಪ್ತಜನ್ಮಸು ॥ ೧೧ ॥
ಪಶ್ಚಾನ್ಮಿಥಿಲಪ ಗೃಹೇ ಜಾತೋ ಭೂಪೋಽಯಂ ಗೃಹಗೋಧಿಕಾ ।
ಶ್ರುತಕೀರ್ತ್ಯಾಖ್ಯ ಭೂಪಸ್ಯ ಮಿಥಿಲಾಧಿಪತೇರ್ನೃಪ ॥ ೧೨ ॥
ಗೃಹದ್ವಾರಪ್ರತೋಲ್ಯಾಂಚ ವರ್ತತೇ ಕೀಟಕಾಶನಾ ।
ಸಪ್ತಾಶೀತಿಷು ವರ್ಷೇಷು ಸ್ಥಿತಂ ತೇನ ದುರಾತ್ಮನಾ ॥ ೧೩ ॥
ವಿದೇಹಾಧಿಪತೇರ್ಗೇಹೇ ಕದಾಚಿದೃಷಿಸತ್ತಮಃ ।
ಶ್ರುತದೇವ ಇತಿ ಖ್ಯಾತಃ ಶ್ರೌತೋ ಮಧ್ಯಾಹ್ನ ಆಗತಃ ॥ ೧೪ ॥
ತಂ ದೃಷ್ಟ್ವಾ ಸಹಸೋತ್ಥಾಯ ಜಾತಹರ್ಷೋ ನರಾಧಿಪಃ ।
ಮಧುಪರ್ಕಾದಿಭಿಃ ಪೂಜ್ಯ ತಸ್ಯ ಪಾದಾವನೇಜನೀಃ ॥ ೧೫ ॥

---

ರಾದ ಮನುಷ್ಯರನ್ನು ಪೂಜಿಸುವರು. ಅನಾಥರೂ, ವಿದ್ಯಾವಿಹೀನರೂ, ಅಂಗವಿಕಲರೂ ಆದ ಬ್ರಾಹ್ಮಣರಿಗೂ, ದರಿದ್ರರಿಗೂ ಬೇರೆ ಗತಿಯಾವುದು? ಆದುದರಿಂದ ಅವರೇ ನನ್ನ ದಯೆಗೆ ಉಚಿತ ಪಾತ್ರಗಳು." ಇಂತೆಂದು ದುರ್ಬುದ್ಧಿಯುಳ್ಳವನಾಗಿ ಮಹಾರಾಜನು ಗುರುವಿನ ಆಜ್ಞೆಯನ್ನು ಮೀರಿ ತಾನೇ ಅವರಿಗೆಲ್ಲ ದಾನಗಳನ್ನು ಕೊಡುತ್ತಿದ್ದನು.

೧೧. ಆ ಮಹತ್ತರವಾದ ದೋಷದಿಂದ ಆತನು ಮೂರು ಜನ್ಮಗಳಲ್ಲಿ ಚಾತಕಪಕ್ಷಿಯಾಗಿಯೂ, ಒಂದು ಜನ್ಮದಲ್ಲಿ ಹದ್ದಾಗಿಯೂ, ಏಳುಜನ್ಮಗಳಲ್ಲಿ ನಾಯಿಯಾಗಿಯೂ ಹುಟ್ಟಿದನು.

೧೨. ಎಲೈ ಅಂಬರೀಷನೆ! ಬಳಿಕ ಮಿಥಿಲಾನಗರಕ್ಕೆ ಅಧಿಪತಿಯೆನಿಸಿದ ಶ್ರುತಕೀರ್ತಿಯೆಂಬ ಹೆಸರಿನ ಮಹಾರಾಜನ ಅರಮನೆಯಲ್ಲಿ ಆ ಮಹಾರಾಜನು ಹಲ್ಲಿಯ ಜನ್ಮವನ್ನು ಪಡೆದನು.

೧೩. ಆ ಹಲ್ಲಿಯು ಕೀಟಗಳನ್ನೇ ಭಕ್ಷಿಸುತ್ತ ಮನೆಯ ಬಾಗಿಲಿನ ಹೊಸ್ತಿಲಿನಲ್ಲಿಯೇ ಯಾವಾಗಲೂ ಇರುತ್ತಿದ್ದಿತು. ಇಂತು ನೀಚ ಜನ್ಮವನ್ನು ಪಡೆದ ಆತನಿಗೆ ಎಂಬತ್ತೇಳು ವರ್ಷಗಳು ಕಳೆದುಹೋದುವು.

೧೪. ಒಂದಾನೊಂದು ದಿನ ಮಧ್ಯಾಹ್ನ ಕಾಲಕ್ಕೆ ಸರಿಯಾಗಿ ಆ ವಿದೇಹ ರಾಜನ ಅರಮನೆಗೆ ಮಹರ್ಷಿಶ್ರೇಷ್ಠನೂ, ವೇದವೇದಾಂಗ ಪಾರಂಗತನೂ ಆದ ಶ್ರುತವೇವನೆಂಬ ಪ್ರಖ್ಯಾತನಾದ ಬ್ರಾಹ್ಮಣೋತ್ತಮನು ಪ್ರಾಪ್ತನಾದನು.

೧೫–೧೬. ಆತನನ್ನು ಕಂಡು ಶ್ರುತಕೀರ್ತಿಯು ಅಪರಿಮಿತಾನಂದವನ್ನು ಹೊಂದಿ ಸಂಭ್ರಮದಿಂದ ಎದ್ದು ಬಂದು ಮಧುಪರ್ಕವೇ ಮುಂತಾದ ಪದಾರ್ಥ

ಅಪ್ಸೋ ಮೂರ್ಧ್ನಿ ಸಹಂಕ್ಷಿಪ್ತಂ ತದೋತ್ಸಿಕ್ತೈಸ್ತು ಬಿಂದುಭಿಃ ।
ದೈವೋಪದಿಷ್ಟಕಾಲೇನ ಪ್ರೋಕ್ಷಿತಾ ಗೃಹಗೋಧಿಕಾ ॥ ೧೭ ॥
ಸದ್ಯೋಜಾತಸ್ಮೃತಿರಭೂತ್ಸ್ಮೃತಕರ್ಮಾದಿ ದುಃಖಿತಾ ।
ತ್ರಾಹಿತ್ರಾಹೀತಿ ಚುಕ್ರೋಶ ಬ್ರಾಹ್ಮಣಂ ಗೃಹಮಾಗತಂ ॥ ೧೮ ॥
ತಿರ್ಯಗ್ಜಂತುರವಂ ಶ್ರುತ್ವಾ ಬ್ರಾಹ್ಮಣೋ ವಿಸ್ಮಿತೋಽವದತ್ ।
ಕುತಃ ಕ್ರೋಶಸಿ ಗೋಧೇ ತ್ವಂ ದೇಶೋಽಯಂ ಕೇನ ಕರ್ಮಣಾ ॥ ೧೯ ॥
ತ್ವಂ ದೇವಪುರುಷಃ ಕಶ್ಚಿನ್ನೃಪೋ ವಾಽಥ ದ್ವಿಜೋಽಥವಾ ।
ಕಸ್ತ್ವಂ ಬ್ರೂಹಿ ಮಹಾಭಾಗ ತ್ವಾಮದ್ಯಾಹಂ ಸಮುದ್ಧರೇ ॥ ೨೦ ॥
ಇತ್ಯುಕ್ತಃ ಸ ನೃಪಃ ಪ್ರಾಹ ಶ್ರುತದೇವಂ ಮಹಾಮತಿಂ ।
ಅಹಮಿಕ್ಷ್ವಾಕುಕುಲಜೋ ವೇದಶಾಸ್ತ್ರವಿಶಾರದಃ ॥ ೨೧ ॥
ಯಾವತ್ಯೋ ಭೂಮಿಕಣಿಕಾ ಯಾವಂತಸ್ತೋಯಬಿಂದವಃ ।
ಯಾವಂತ್ಯುಡೂನಿ ಗಗನೇ ತಾವತೀರದದಂ ಸ್ಮ ಗಾಃ ॥ ೨೨ ॥

ಗಳಿಂದ ಅತಿಥಿಪೂಜೆಯನ್ನು ಮಾಡಿ ಆತನ ಪಾದಗಳನ್ನು ತೊಳೆದು ಆ ತೀರ್ಥೋದಕವನ್ನು ಬೇಗ ತನ್ನ ತಲೆಯಲ್ಲಿ ಪ್ರೋಕ್ಷಣೆ ಮಾಡಿಕೊಂಡನು. ದೈವಾನುಕೂಲ್ಯವಾಗಿದ್ದರಿಂದ ಆಗ ಎರಚಿದ ನೀರಿನ ಹನಿಗಳಿಂದ ಆ ಹೊಸಲಿನಲ್ಲಿದ್ದ ಹಲ್ಲಿಯ ಶರೀರವೂ ಪ್ರೋಕ್ಷಿಸಲ್ಪಟ್ಟಿತು.

೧೮. ತತ್‌ಕ್ಷಣವಲ್ಲಿಯೇ ಅದಕ್ಕೆ ತನ್ನ ಪೂರ್ವಜನ್ಮಗಳ ಸ್ಮರಣೆ ಉಂಟಾಯಿತು. ತನ್ನ ಹಿಂದಿನ ದುಷ್ಕರ್ಮಗಳನ್ನು ನೆನೆದುಕೊಂಡು ಅತ್ಯಂತ ದುಃಖಪಟ್ಟಿತು. ಮತ್ತು ಮನೆಗೆ ಬಂದ ಆ ಶ್ರುತದೇವನನ್ನು ಕುರಿತು "ನನ್ನನ್ನು ರಕ್ಷಿಸು, ರಕ್ಷಿಸು" ಎಂಬುದಾಗಿ ಮೊರೆಯಿಟ್ಟಿತು.

೧೯. ಆ ಬ್ರಾಹ್ಮಣನು ತಿರ್ಯಗ್ಜಂತುವಿನ ಆ ಧ್ವನಿಯನ್ನು ಕೇಳಿ ವಿಸ್ಮಯಗೊಂಡು ಹೇಳತೊಡಗಿದನು. "ಎಲೆ ಹಲ್ಲಿಯೇ! ನೀನು ಏತಕ್ಕೆ ಕೂಗುತ್ತಿರುವೆ? ನಿನಗೆ ಯಾವ ಕರ್ಮದ ಫಲವಾಗಿ ಈ ದುರವಸ್ಥೆಯು ಪ್ರಾಪ್ತವಾಯಿತು?

೨೦. ಎಲೈ ಮಹಾಪುರುಷನೆ! ನೀನು ದೇವಪುರುಷನೊ, ಅಥವಾ ಯಾವನಾದರೂ ಮಹಾರಾಜನೊ? ಅಲ್ಲವೆ ಬ್ರಾಹ್ಮಣನೊ? ನೀನು ಯಾರೆಂಬುದನ್ನು ನನಗೆ ಹೇಳು. ನಿನ್ನನ್ನು ಈಗಲೇ ಉದ್ಧಾರಮಾಡುತ್ತೇನೆ."

೨೧. ಇಂತೆಂದ ಮಹಾಪ್ರಾಜ್ಞನಾದ ಶ್ರುತದೇವನನ್ನು ಕುರಿತು ಹೇಮಾಂಗನು ಹೇಳಲುಪಕ್ರಮಿಸಿದನು. "ನಾನು ಇಕ್ಷ್ವಾಕುವಂಶದಲ್ಲಿ ಹುಟ್ಟಿದವನು, ವೇದಗಳಲ್ಲಿಯೂ; ವೇದಾಂಗಗಳಲ್ಲಿಯೂ ನಿಷ್ಣಾತನಾಗಿದ್ದೆನು.

೨೨. ಭೂಮಿಯಲ್ಲಿ ಎಷ್ಟು ಧೂಳಿನ ಕಣಗಳಿರುವುವೊ, ಎಷ್ಟು ನೀರಿನ ಬಿಂದುಗಳಿರುವುವೊ, ಆಕಾಶದಲ್ಲಿ ಎಷ್ಟು ನಕ್ಷತ್ರಗಳಿರುವುವೊ, ಅಷ್ಟು ಗೋವುಗಳನ್ನು ನಾನು ಬ್ರಾಹ್ಮಣರಿಗೆ ದಾನಮಾಡಿದೆನು.

ಸರ್ವೇ ಯಜ್ಞಾ ಮಯಾ ಚೇಷ್ಟಾಃ ಪೂರ್ತಾನ್ಯಾಚರಿತಾನಿ ಮೇ ।
ದಾನಾನ್ಯಪಿ ಚ ದತ್ತಾನಿ ಧರ್ಮರಾಜಸ್ತ್ವನುಷ್ಠಿತಃ ॥ ೩೩ ॥
ತಥಾಪಿ ದುರ್ಗತಿರ್ಜಾತಾ ಮಮ ಚೋರ್ಧ್ವಗತಿಂ ವಿನಾ ।
ತ್ರಿವಾರಂ ಚಾತಕತ್ವಂ ಮೇ ಗೃಧ್ರತ್ವಂ ಚೈಕಜನ್ಮನಿ ॥ ೩೪ ॥
ಸಪ್ತಜನ್ಮಸ್ವಲರ್ಕತ್ವಂ ಪ್ರಾಪ್ತಂ ಪೂರ್ವಂ ಮಯಾ ದ್ವಿಜ ।
ಸಿಂಚತಾಽನೇನ ಭೂಪೇನ ತ್ವಪಃ ಪಾದಾವನೇಜನೀಃ ॥ ೩೫ ॥
ಬಿಂದವೋ ದೂರಮುತ್ಕ್ಷಿಪ್ತಾಸ್ತೈಃ ಸಿಕ್ತೋಽಹಂ ಕಥಂಚನ ।
ತೇನ ಜನ್ಮಸ್ಮೃತಿರಭೂತ್ಸರ್ವಪಾಪಾಪ್ತ ಹತಶ್ಚ ಮೇ ॥ ೩೬ ॥
ಗೋಧಾಜನ್ಮಾನಿ ಭಾವ್ಯಾನಿ ಹ್ಯಷ್ಟಾವಿಂಶತಿಕಾನಿ ಮೇ ।
ದೃಶ್ಯಂತೇ ದೈವಸೃಷ್ಟಾನಿ ಬಿಭ್ಯೇ ತೈರ್ಜನ್ಮಭಿರ್ಭೃಶಂ ॥ ೩೭ ॥
ನ ಕಾರಣಂ ಪ್ರಪಶ್ಯಾಮಿ ತನ್ಮೇ ವಿಸ್ತರತೋ ವದ ।
ಇತ್ಯುಕ್ತಃ ಸ ಋಷಿಃ ಪ್ರಾಹ ಜ್ಞಾತ್ವಾ ವಿಜ್ಞಾನಚಕ್ಷುಷಾ ॥ ೩೮ ॥

---

೩೩. ವೇದೋಕ್ತಗಳಾದ ಸಕಲ ಯಜ್ಞಗಳನ್ನೂ ನಾನು ಆಚರಿಸಿರುವೆನು. ವಾಪೀಕೂಪಾದಿ ಸಮಸ್ತ ಪೂರ್ತಕರ್ಮಗಳನ್ನೂ ಅನುಷ್ಠಾನ ಮಾಡಿರುವೆನು. ಸಕಲದಾನಗಳನ್ನೂ ಕೊಟ್ಟಿರುವೆನು. ಉತ್ತಮವಾದ ಸ್ವಾಚಾರ ಧರ್ಮವನ್ನೂ ನಡೆಸಿಕೊಂಡು ಬಂದೆನು.

೩೪. ಹಾಗಾದರೂ ನನಗೆ ಉತ್ತಮ ಲೋಕಗಳು ಸಿಕ್ಕದೆ ಕೇವಲ ನೀಚ ಜನ್ಮಗಳೇ ಸಂಭವಿಸಿತು. ಮೂರು ಜನ್ಮಗಳಲ್ಲಿ ನನಗೆ ಚಾತಕತ್ವವೂ ಒಂದು ಜನ್ಮದಲ್ಲಿ ಗೃಧ್ರತ್ವವೂ ಪ್ರಾಪ್ತವಾದುವು.

೩೫–೩೬. ಏಳು ಜನ್ಮಗಳಲ್ಲಿ ನಾಯಿಯಾಗಿ ಜನಿಸಿದೆನು. ಎಲೈ ಬ್ರಾಹ್ಮಣೋತ್ತಮನೆ! ಇಂತು ಪೂರ್ವದಲ್ಲಿ ನನಗೆ ನೀಚಯೋನಿಗಳಲ್ಲಿ ಜನ್ಮಗಳು ಪ್ರಾಪ್ತಗಳಾದವು. ನಿನ್ನ ಪಾದಗಳನ್ನು ತೊಳೆದು ಆ ತೀರ್ಥವನ್ನು ಪ್ರೋಕ್ಷಣೆ ಮಾಡಿಕೊಳ್ಳುತ್ತಿದ್ದ ಈ ಮಹಾರಾಜನು ಸಿಂಪಡಿಸಿದ ನೀರಿನ ಹನಿಗಳಿಂದ ನಾನೂ ದೈವವಶದಿಂದ ಪ್ರೋಕ್ಷಿತನಾದೆನು. ಆ ತೀರ್ಥೋದಕದ ಫಲರೂಪವಾಗಿ ನನಗೆ ಪೂರ್ವಜನ್ಮಗಳ ಸ್ಮರಣೆಯುಂಟಾಯಿತು. ನನ್ನ ಪಾಪರಾಶಿಯೆಲ್ಲವೂ ನಾಶವಾಯಿತು.

೩೭. ನನ್ನ ಪೂರ್ವಕರ್ಮದ ಫಲವಾಗಿ ನನಗೆ ಇಪ್ಪತ್ತೆಂಟು ಹಲ್ಲಿಯ ಜನ್ಮಗಳು ಮುಂದೆ ಕಳೆಯಬೇಕಾಗಿರುವುವು. ಅವುಗಳನ್ನು ಕುರಿತು ನಾನು ಅತ್ಯಂತ ಭಯದಿಂದ ಕೂಡಿದವನಾಗಿರುವೆನು.

೩೮. ಈ ನೀಚಜನ್ಮಗಳಿಗೆ ಕಾರಣವೇನೆಂಬುದನ್ನು ತಿಳಿಯಲಾರದವನಾಗಿರುವೆನು. ಅದನ್ನು ನನಗೆ ವಿಸ್ತಾರವಾಗಿ ತಿಳಿಸುವವನಾಗು.'' ಇಂತು ಹೇಳಿದ

ಶೃಣು ಭೂಪ ಪ್ರವಕ್ಷ್ಯಾಮಿ ತವ ದುರ್ಯೋನಿಕಾರಣಂ ।
ನ ಜಲಂ ತು ತ್ವಯಾ ದತ್ತಂ ವೈಶಾಖೇ ಮಾಧವಪ್ರಿಯೇ ॥ ೨೯ ॥
ತಜ್ಜಲಂ ಸುಲಭಂ ಮತ್ವಾ ಹ್ಯಮೂಲ್ಯಮಿತಿ ನಿಶ್ಚಿತಂ ।
ನಾಧ್ವಗಾನಾಂ ದ್ವಿಜಾತೀನಾಂ ಘರ್ಮಕಾಲೇಽಪ್ಯಜಾನತಾ ॥ ೩೦ ॥
ತಥಾ ಪಾತ್ರಂ ಸಮುತ್ಸೃಜ್ಯ ಹ್ಯಪಾತ್ರೇ ಪ್ರತಿದತ್ತವಾನ್ ।
ಜ್ವಲಂತಮಗ್ನಿಮುತ್ಸೃಜ್ಯ ನಹಿ ಭಸ್ಮನಿ ಹೂಯತೇ ॥ ೩೧ ॥
ಬಹುಧಾ ವರ್ಣಿತಸ್ಯಾಪಿ ಸೌಗಂಧ್ಯಾದಿಯುತಸ್ಯ ಚ ।
ಕಂಟಕಾನ್ವಿತವೃಕ್ಷಸ್ಯ ನ ಕುರ್ವಂತಿ ಸಮರ್ಚನಂ ॥ ೩೨ ॥
ವಿಶಿಷ್ಟಾನಾಂ ಪಾದಪಾನಾಮಶ್ವತ್ಥಃ ಸೇವ್ಯತಾಂ ಗತಃ ।
ತುಲಸೀಂ ತು ಸಮುತ್ಸೃಜ್ಯ ಬೃಹತೀ ಪೂಜ್ಯತೇ ನು ಕಿಂ ॥ ೩೩ ॥
ಅನಾಥತ್ವಂ ಪೂಜ್ಯತಾಯಾಂ ನ ಪ್ರಯೋಜಕತಾಮಿಯಾತ್ ।
ಪಂಗ್ವಾದ್ಯಾ ಯೇಽಪ್ಯನಾಥಾ ಹಿ ದಯಾಪಾತ್ರಂ ಹಿ ಕೇವಲಂ ॥ ೩೪ ॥

ಮಾತನ್ನು ಕೇಳಿ ಶ್ರುತದೇವಮಹರ್ಷಿಯು ತನ್ನ ಜ್ಞಾನದೃಷ್ಟಿಯಿಂದ ವಿಚಾರ ವೆಲ್ಲವನ್ನೂ ತಿಳಿದು ಹೇಳತೊಡಗಿದನು.

೨೯. ಮಹಾರಾಜನೆ! ನಿನ್ನ ನೀಚಜನ್ಮಗಳಿಗೆ ಕಾರಣವನ್ನು ಹೇಳುವೆನು, ಶ್ರದ್ಧೆಯಿಂದ ಕೇಳು. ಪರಮಾತ್ಮನಿಗೆ ಪ್ರಿಯವಾದ ವೈಶಾಖಮಾಸದಲ್ಲಿ ನೀನು ಯಾವಾಗಲೂ ಅರ್ಥಿಗಳಿಗೆ ಜಲವನ್ನು ದಾನಮಾಡಲಿಲ್ಲ.

೩೦. ನೀನು ನಿಜವಾಗಿಯೂ ಜಲವು ಸುಲಭವಾಗಿ ಸಿಕ್ಕುವುದೂ ಬೆಲೆಗೆ ಬಾರದುದೂ ಎಂದೇ ತಿಳಿದಿದೆ. ಜಲದಾನದ ಮಾಹಾತ್ಮ್ಯವನ್ನು ತಿಳಿಯದ ನೀನು ಬೇಸಿಗೆಯ ಕಾಲದಲ್ಲಿ ದಾರಿಯನ್ನು ನಡೆದು ಬಂದ ಬ್ರಾಹ್ಮಣರಿಗೆ ನೀರನ್ನು ನೀಡಲಿಲ್ಲ.

೩೧. ಅದೂ ಅಲ್ಲದೆ ಸತ್ಪಾತ್ರಗಳನ್ನೆಲ್ಲ ತ್ಯಜಿಸಿ ಅಪಾತ್ರಗಳಲ್ಲಿಯೇ ನೀನು ಸಕಲ ದಾನಗಳನ್ನೂ ಮಾಡುವವನಾದೆ. ಜ್ವಲಿಸುವ ಅಗ್ನಿಯನ್ನು ಬಿಟ್ಟು ಯಾರಾದರೂ ಬೂದಿಯಲ್ಲಿ ಹೋಮಮಾಡಬಹುದೆ?

೩೨. ಬಹು ವಿಧಗಳಾದ ಜನರ ವರ್ಣನೆಗೆ ವಿಷಯವಾದರೂ, ಸುಗಂಧಾನ್ವಿತಗಳಾದ ಪುಷ್ಪಗಳಿಂದ ತುಂಬಿದ್ದರೂ ಮುಳ್ಳುಗಳಿಂದ ಕೂಡಿದ ವೃಕ್ಷಕ್ಕೆ ಬುದ್ಧಿವಂತರು ಯಾರೂ ಪೂಜೆಯನ್ನು ಮಾಡುವುದಿಲ್ಲಷ್ಟೆ.

೩೩. ಸಕಲ ವೃಕ್ಷಗಳಲ್ಲಿಯೂ ಅಶ್ವತ್ಥವೃಕ್ಷವೇ ಮಾನವರ ಪೂಜೆಗೆ ಅರ್ಹವಾಯಿತು. ತುಲಸೀತರುವನ್ನು ತ್ಯಜಿಸಿ ಯಾರಾದರೂ ಬದನೆಯ ಗಿಡವನ್ನು ಪೂಜಿಸಬಹುದೆ?

೩೪. ಅನಾಥತ್ವವೆಂಬುದು ಅರ್ಚಾಪೂಜಾದಿಗಳಿಗೆ ಎಂದೂ ಕಾರಣ

ತಪೋನಿಷ್ಠಾ ಜ್ಞಾನನಿಷ್ಠಾಃ ಶ್ರುತಿಶಾಸ್ತ್ರವಿಶಾರದಾಃ ।
ವಿಷ್ಣುರೂಪಾಃ ಸದಾಪೂಜ್ಯಾ ನೇತರೇ ತು ಕದಾಚನ ॥ ೩೫ ॥
ತತ್ರಾಪಿ ಜ್ಞಾನಿನೋಽತ್ಯರ್ಥಂ ವಿಪ್ರಾ ವಿಷ್ಣೋಃ ಸದೈವಹಿ ।
ಜ್ಞಾನಿನಾಮಪಿ ಭೂಪಾಲ ವಿಷ್ಣುರೇವ ಸದಾಪ್ರಿಯಃ ।
ತಸ್ಮಾತ್ ಜ್ಞಾನೀ ಸದಾಪೂಜ್ಯಃ ಪೂಜ್ಯಾತ್ಪೂಜ್ಯತರಃ ಸ್ಮೃತಃ ॥ ೩೬ ॥
ಅವಜ್ಞಾ ಸಾಧುವೃತ್ತಾನಾಮಿಹಾಮುತ್ರ ಚ ದುಃಖದಾ ।
ಸೇವಾ ವೈ ಮಹತಾಂ ಪುಂಸಾಂ ಪುಮರ್ಥಾನಾಂ ಹಿ ಕಾರಣಂ ॥ ೩೭ ॥
ಕೋಟಯೋಽಪ್ಯಂಧಜಾತೀನಾಂ ನ ಪಶ್ಯಂತಿ ಯಥಾಯಥಂ ।
ಏವಂ ಮೂಢಾಯುತಾನಾಂ ತು ಸಂಗತಿರ್ನಾರ್ಥದಾ ಭವೇತ್ ॥ ೩೮ ॥
ನಹ್ಯಮ್ಮಯಾನಿ ತೀರ್ಥಾನಿ ನ ದೇವಾ ಮೃಚ್ಛಿಲಾಮಯಾಃ ।
ತೇ ಪುನಂತ್ಯುರುಕಾಲೇನ ದರ್ಶನಾದೇವ ಸಾಧವಃ ॥ ೩೯ ॥

---

ವಾಗಲಾರದು. ಕುಂಟರೇ ಮೊದಲಾದ ಅಂಗವಿಕಲರೂ, ಅನಾಥರೂ ಕೇವಲ ದಯೆಗೆ ಪಾತ್ರರೇ ಹೊರತು ದಾನಾದಿಗಳಿಗೆ ಸತ್ಪಾತ್ರರಲ್ಲ.

೩೫. ತಪಸ್ಸಿನಲ್ಲಿಯೇ ನಿರತರಾಗಿರುವವರೂ, ಜ್ಞಾನಯೋಗಸಮನ್ವಿತರಾದವರೂ, ವೇದ ಶಾಸ್ತ್ರಗಳಲ್ಲಿ ವಿಶಾರದರಾದವರೂ ಆದ ವಿಪ್ರರು ಮಹಾವಿಷ್ಣುವಿನ ಜಂಗಮರೂಪಗಳಾಗಿರುವರು. ಅವರೇ ನಿತ್ಯವೂ ಅರ್ಚನೆಗಳಿಗೆ ಸತ್ಪಾತ್ರರಾಗಿರುವರೇ ಹೊರತು ಇತರರು ಎಂದಿಗೂ ಅರ್ಹರಾಗಲಾರರು.

೩೬. ಅವರಲ್ಲಿಯೂ ಜ್ಞಾನಿಗಳಾದ ಬ್ರಾಹ್ಮಣರೇ ಯಾವಾಗಲೂ ಮಹಾವಿಷ್ಣುವಿಗೆ ಪ್ರೀತಿಪಾತ್ರರಾಗಿರುವರಲ್ಲವೆ. ಎಲೈ ಮಹಾರಾಜನಾದ ಹೇಮಾಂಗನೆ! ಜ್ಞಾನಿಗಳಿಗೂ ಸಹ ಹಾಗೆಯೇ ವಿಷ್ಣುವೊಬ್ಬನೇ ಸರ್ವಕಾಲದಲ್ಲಿಯೂ ಪ್ರಿಯತಮನಾಗಿರುವನು. ಆದುದರಿಂದ ಜ್ಞಾನಿಯೇ ನಿರಂತರವೂ ಜನರ ಪೂಜೆಗೆ ಅರ್ಹನಾಗಿರುವನು. ಸಕಲ ಪೂಜ್ಯವಸ್ತುಗಳಲ್ಲಿಯೂ ಆತನೇ ಅತ್ಯಂತ ಪೂಜ್ಯತಮವಾದ ವ್ಯಕ್ತಿಯಾಗಿರುವನೆಂದು ಸ್ಮೃತಿಗಳಲ್ಲಿ ಹೇಳಲ್ಪಟ್ಟಿರುವುದು.

೩೭–೩೮. ಸಾಧುವಾದ ಆಚಾರ ವ್ಯವಹಾರಗಳಲ್ಲಿ ತೊಡಗಿರುವವರನ್ನು ಕಡೆಗಾಣುವುದೇ ಇಲ್ಲಿಯೂ, ಪರಲೋಕದಲ್ಲಿಯೂ ಅತ್ಯಂತ ದುಃಖವನ್ನುಂಟುಮಾಡುವುದು. ಮಹಾತ್ಮರಾದ ಮನುಷ್ಯರ ಸೇವೆಯೇ ಸಮಸ್ತ ಪುರುಷಾರ್ಥಗಳ ಪ್ರಾಪ್ತಿಗೂ ಕಾರಣವೆನಿಸಿರುವುದು. ಜಾತ್ಯಂಧರಾಗಿರುವವರು ಕೋಟಿಗಟ್ಟಲೆಯಾಗಿ ಸೇರಿದರೂ ಸಹ ಮಾರ್ಗದ ಯಥಾತ್ವ-ಅಯಥಾತ್ವಗಳನ್ನು ಹೇಗೆ ತಿಳಿಯಲು ಶಕ್ತರಾಗಲಾರರೊ ಹಾಗೆಯೇ ಹತ್ತುಸಾವಿರ ಮೂಢರು ಒಟ್ಟುಗೂಡಿದರೂ ಅವರ ಸಹವಾಸವು ಪ್ರಯೋಜನಕಾರಿಯಾಗಲಾರದು.

೩೯. ತೀರ್ಥಗಳು ಕೇವಲ ಜಲಮಯಗಳಾಗಿರಲಾರವು. ದೇವತೆಗಳೂ

ನ ಸಾಧುಸೇವನಾತ್ಕ್ವಾಪಿ ಸೀದಂತೇ ತೈಃಸುಶಿಕ್ಷಿತಾಃ ।
ಜನ್ಮಮೃತ್ಯುಜರಾದ್ಯೈರ್ವಾ ಸುಧಾಯಾಃ ಪ್ಯಾಯಿತಾ ಯಥಾ ॥ ೪೦ ॥
ನ ಜಲಂ ತು ತ್ವಯಾ ದತ್ತಂ ಸಾಧವೋ ವಾ ನ ಸೇವಿತಾಃ ।
ತೇನ ತೇ ದುರ್ಗತಿಶ್ಚೇಯಂ ಪ್ರಾಪ್ತಾ ಚೇಕ್ಷ್ವಾಕುನಂದನ ॥ ೪೧ ॥
ವೈಶಾಖೇ ಮತ್ಕೃತಂ ಪುಣ್ಯಂ ತುಭ್ಯಂ ದಾಸ್ಯಾಮಿ ಶಾಂತಯೇ ।
ಭೂತಂ ಭವ್ಯಂ ಭವದ್ಯೇನ ಕರ್ಮಜಾತಂ ವಿಜೇಷ್ಯಸಿ ॥ ೪೨ ॥
ಇತ್ಯುಕ್ತ್ವಾಽಪ ಉಪಸ್ಪೃಶ್ಯ ದದೌ ಪುಣ್ಯಮನುತ್ತಮಂ ॥ ೪೩ ॥
ಯದಾ ದತ್ತಂ ಬ್ರಾಹ್ಮಣೇನ ಸ್ನಾನಂ ಚೈಕದಿನೇ ಕೃತಂ ।
ತೇನ ಧ್ವಸ್ತಾಽಖಿಲಾಘಸ್ತು ತ್ಯಕ್ತ್ವಾತಾಂ ಗೃಹಗೋಧಿಕಾಂ ॥ ೪೪ ॥

ಕೇವಲ ಮಣ್ಣಿನ ಅಥವ ಕಲ್ಲಿನ ವಿಗ್ರಹಗಳು ಮಾತ್ರವಾಗಿರಲಾರರು. ಜಲ ಮತ್ತು ವಿಗ್ರಹಗಳಲ್ಲಿ ಪೂಜ್ಯಬುದ್ಧಿಯನ್ನಿಟ್ಟು ನಾವು ಪೂಜೆಮಾಡಿದರೂ ಆ ದೇವತೆಗಳು ಬಹಳ ಕಾಲದ ಮೇಲೆ ನಮ್ಮನ್ನು ಪವಿತ್ರಗೊಳಿಸುವರು. ಆದರೆ ಸಾಧುಪುರುಷರು ದರ್ಶನಮಾತ್ರದಿಂದಲೇ ನಮ್ಮನ್ನು ಪುನೀತರನ್ನಾಗಿ ಮಾಡುವರು.

೪೦. ಅಮೃತಪಾನವನ್ನು ಮಾಡಿ ಸಂತೋಷಗೊಂಡವರು ಹೇಗೆ ಜನನ ಮರಣ ಜರಾದಿ ದುಃಖಗಳಿಂದ ಹೇಗೆ ಕ್ಲೇಶಗೊಳ್ಳಲಾರರೊ, ಹಾಗೆಯೇ ಸಾಧುಗಳನ್ನು ಸೇವಿಸಿ ಅವರಿಂದ ಚೆನ್ನಾಗಿ ಉಪದೇಶವನ್ನು ಹೊಂದಿರುವವರು ಎಂದಿಗೂ ದುಃಖಪಡಲಾರರು.

೪೧. ಎಲೈ ಇಕ್ಷ್ವಾಕುಕುಲೋತ್ಪನ್ನನೆ! ನೀನು ಜಲದಾನವನ್ನು ಮಾಡಲಿಲ್ಲ. ಮತ್ತು ಸಾಧು ಜನರನ್ನು ಸೇವಿಸಲಿಲ್ಲ. ಆದುದರಿಂದಲೇ ಸತ್ಕುಲ ಪ್ರಸೂತನಾದ ನಿನಗೂ ಈ ವಿಧವಾದ ನೀಚಜನ್ಮವು ಪ್ರಾಪ್ತವಾಯಿತು.

೪೨. ನಿನ್ನ ಮನಸ್ಸಿನ ಶಾಂತಿಗಾಗಿ ನಾನು ವೈಶಾಖಮಾಸದಲ್ಲಿ ಆರ್ಜಿಸಿರುವ ಪುಣ್ಯವನ್ನು ನಿನಗೆ ಧಾರೆಯೆರೆದು ಕೊಡುವೆನು. ಅದರಿಂದ ನೀನು ಹಿಂದೆಯೂ, ಈಗಲೂ, ಮುಂದೆಯೂ ಸಂಬಂಧಿಸಿದ ಕರ್ಮಫಲವನ್ನೆಲ್ಲ ಜಯಿಸಲು ಶಕ್ತನಾಗುವೆ.

೪೩. ಇಂತೆಂದು ಆ ಬ್ರಾಹ್ಮಣನು ಆಚಮನವನ್ನು ಮಾಡಿ ಸರ್ವೋತ್ತಮ ವಾದ ತನ್ನ ಪುಣ್ಯವನ್ನು ಹೇಮಾಂಗನಿಗೆ ಕೊಟ್ಟನು.

೪೪. ಆ ಬ್ರಾಹ್ಮಣನು ಒಂದು ದಿನದಲ್ಲಿ ಮಾಡಿದ ಪ್ರಾತಃಸ್ನಾನದ ಫಲವನ್ನು ಕೊಟ್ಟ ಮಾತ್ರದಿಂದಲೇ ಆ ಮಹಾರಾಜನ ಪಾಪಗಳೆಲ್ಲವೂ ಧ್ವಂಸಿತ ಗಳಾದುವು. ಆತನು ತನ್ನ ಹಲ್ಲಿಯ ದೇಹವನ್ನು ತ್ಯಜಿಸಿದನು.

ದಿವ್ಯಂ ವಿಮಾನಮಾರುಹ್ಯ ದಿವ್ಯಸ್ರಗ್ವಸ್ತ್ರಭೂಷಣಃ ।
ಪಶ್ಯತಾಮೇವ ಭೂತಾನಾಂ ಮೈಥಿಲಸ್ಯ ಗೃಹಾಂತರೇ ॥ ೪೫ ॥
ಬದ್ಧಾಂಜಲಿಪುಟೋ ಭೂತ್ವಾ ಪರಿಕ್ರಮ್ಯ ಪ್ರಣಮ್ಯ ಚ ।
ಅನುಜ್ಞಾತೋ ಯಯೌ ರಾಜಾ ಸ್ತೂಯಮಾನೋಽಮರೈರ್ದಿವಂ ॥ ೪೬ ॥
ತತ್ರ ಭುಕ್ತ್ವಾ ಮಹಾಭೋಗಾನ್ವರ್ಷಾಯುತಮತಂದ್ರಿತಃ ।
ಸ ಏವ ಚೇಕ್ಷ್ವಾಕುಕುಲೇ ಕಾಕುತ್ಸ್ಥೋಽಭೂನ್ಮಹಾಪ್ರಭುಃ ॥ ೪೭ ॥
ಸಪ್ತದ್ವೀಪವತೀಪಾಲೋ ಬ್ರಹ್ಮಣ್ಯಃ ಸಾಧುಸಂಮತಃ ।
ದೇವೇಂದ್ರಸ್ಯ ಸಖಾ ವಿಷ್ಣೋರಂಶ ಏವ ಮಹಾಪ್ರಭುಃ ॥ ೪೮ ॥
ಬೋಧಿತಸ್ತು ವಸಿಷ್ಠೇನ ವೈಶಾಖೋಕ್ತಾನ್ಮನೋರಮಾನ್ ।
ಅನುಷ್ಠಾಯಾಖಿಲಾನ್ ಧರ್ಮಾಂಸ್ತೇನ ಧ್ವಸ್ತಾಖಿಲಾಶುಭಃ ॥ ೪೯ ॥
ದಿವ್ಯಜ್ಞಾನಂ ಸಮಾಸಾದ್ಯ ವಿಷ್ಣೋಃ ಸಾಯುಜ್ಯಮಾಪ್ತವಾನ್ ।
ವೈಶಾಖಃ ಶುಭದಸ್ತಸ್ಮಾತ್ಪುಂಭಿಃ ಸರ್ವೈರನುಷ್ಠಿತಃ ॥ ೫೦ ॥

೪೫. ಮಿಥಿಲಾದೇಶದೊಡೆಯನ ಅರಮನೆಯೊಳಗಿದ್ದ ಸರ್ವರೂ ನೋಡುತ್ತಿರುವಂತೆಯೇ ಅವನು ದೇವಲೋಕದಿಂದ ಬಂದ ವಿಮಾನವನ್ನೇರಿ ನಂದನವನದ ಪುಷ್ಪಗಳಿಂದಲೂ, ದಿವ್ಯವಸ್ತ್ರಗಳಿಂದಲೂ ಅಲಂಕೃತನಾದನು.

೪೬. ಬಳಿಕ ಕೈಗಳನ್ನು ಜೋಡಿಸಿಕೊಂಡು ಆ ಶ್ರುತದೇವನೆಂಬ ಬ್ರಹ್ಮಜ್ಞೋತ್ತಮನಿಗೆ ಪ್ರದಕ್ಷಿಣೆಯನ್ನೂ ನಮಸ್ಕಾರವನ್ನೂ ಮಾಡಿ ಆತನ ಅನುಜ್ಞೆಯನ್ನು ಪಡೆದು ಹೇಮಾಂಗರಾಜನು ದೇವತೆಗಳಿಂದ ಸ್ತೋತ್ರಗಳನ್ನು ಕೇಳುತ್ತ ಸ್ವರ್ಗಲೋಕವನ್ನು ಕುರಿತು ತೆರಳಿದನು.

೪೭–೪೮. ಅಲ್ಲಿ ಹತ್ತು ಸಾವಿರ ವರ್ಷಗಳವರೆಗೂ ಅವಿಚ್ಛಿನ್ನವಾಗಿ ಅನೇಕ ದುರ್ಲಭಭೋಗಗಳನ್ನೆಲ್ಲ ಅನುಭವಿಸಿ ಬಳಿಕ ಆ ಇಕ್ಷ್ವಾಕುಕುಲದಲ್ಲಿಯೇ ಕಕುತ್ಸ್ಥರಾಜನಿಗೆ ಮಗನಾಗಿ ಜನಿಸಿ ಅನೇನನೆಂಬ ಹೆಸರಿನಿಂದ ಮಹಾರಾಜನಾದನು. ಸಪ್ತದ್ವೀಪಗಳಿಂದ ಕೂಡಿದ ಅಖಂಡಭೂಮಂಡಲವನ್ನು ಪಾಲಿಸುತ್ತ ಆ ಮಹಾರಾಜನು ಬ್ರಾಹ್ಮಣಹಿತಕಾರಿಯೂ, ಸಾಧುಜನ ಸಮ್ಮತನೂ, ದೇವೇಂದ್ರನಿಗೆ ಪರಮ ಸ್ನೇಹಿತನೂ, ಮಹಾವಿಷ್ಣುವಿನ ಅಂಶಭೂತನೂ ಆಗಿದ್ದನು.

೪೯. ವಸಿಷ್ಠನಿಂದ ಉಪದೇಶವನ್ನು ಹೊಂದಿ ಕುಲಗುರುವಾದ ಆತನು ಹೇಳಿದಂತೆ ವೈಶಾಖಮಾಸದಲ್ಲಿ ಕರ್ತವ್ಯಗಳೆಂದು ಹೇಳಲ್ಪಟ್ಟಿರುವ ಮನೋರಮಗಳಾದ ಸಕಲ ಧರ್ಮಗಳನ್ನೂ ಸರಿಯಾಗಿ ಆಚರಿಸಿ ತನ್ನ ಸಮಸ್ತ ಪಾಪಗಳನ್ನೂ ಕಳೆದುಕೊಂಡನು.

೫೦. ಮತ್ತು ಸಂಸಾರೋತ್ತಾರಕವಾದ ಪರಮಾತ್ಮನ ಮಾಹಾತ್ಮ್ಯದ

ಆಯುರ್ಯಶಃಪುಷ್ಟಿದೋಽಯಂ ಮಹಾಪಾಪೌಘನಾಶನಃ ।
ಪುಮರ್ಥಾನಾಂ ನಿದಾನಂ ಚ ವಿಷ್ಣುಃ ಪ್ರೀಣಾತ್ಯನೇನ ತು ॥ ೫೦ ॥
ಚಾತುರ್ವರ್ಣ್ಯನರೈಃ ಸರ್ವೈಶ್ಚತುರಾಶ್ರಮವರ್ತಿಭಿಃ ।
ಅನುಷ್ಠೇಯೋ ಮಹಾಧರ್ಮೋ ವೈಶಾಖೇ ಮಾಧವಾಗಮೇ ॥ ೫೧ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ದ್ವಿತೀಯೇ ವೈಷ್ಣವಖಂಡೇ ವೈಶಾಖಮಾಸಮಾಹಾತ್ಮ್ಯೇ ನಾರದಾಂಬರೀಷಸಂವಾದೇ
"ಗೃಹಗೋಧಿಕಾಖ್ಯಾನಂ" ನಾಮ ಷಷ್ಠೋಽಧ್ಯಾಯಃ

ಜ್ಞಾನವನ್ನು ಹೊಂದಿ ಮಹಾವಿಷ್ಣುವಿನ ಸಾಯುಜ್ಯವನ್ನು ಪಡೆಯುವವನಾದನು. ಆದುದರಿಂದ ಸಮಸ್ತ ಮಂಗಳಗಳನ್ನು ಕೈಗೂಡಿಸುವ ಈ ವೈಶಾಖ ವ್ರತವು ಸಕಲಮಾನವರಿಂದಲೂ ಅನುಷ್ಠಿಸಲ್ಪಟ್ಟಿರುವುದು.

೫೦. ಈ ನಿಯಮವು ಜನರಿಗೆ ಆಯುಸ್ಸಿನ ಅಭಿವೃದ್ಧಿಯನ್ನೂ, ಯಶಸ್ಸನ್ನೂ, ದೇಹಾರೋಗ್ಯವನ್ನೂ ಕೊಟ್ಟು ಮಹಾಪಾಪಗಳ ಸಮೂಹಗಳನ್ನೂ ನಾಶಗೊಳಿಸುವುದು. ಇದೇ ಸಕಲ ಪುರುಷಾರ್ಥಗಳಿಗೆ ಆಶ್ರಯಭೂತವಾಗಿರುವುದು. ಇದನ್ನು ಸಮಗ್ರವಾಗಿ ನೆರವೇರಿಸುವುದರಿಂದ ಮಹಾವಿಷ್ಣುವು ಸುಪ್ರೀತನಾಗುವನು.

೫೧. ಪರಮಾತ್ಮನು ಭೂಲೋಕದಲ್ಲಿ ಸಂಚರಿಸುವ ಈ ವೈಶಾಖಮಾಸದಲ್ಲಿ ಸ್ನಾನದಾನಾದಿ ಮಹಾಧರ್ಮಗಳನ್ನು ನಾಲ್ಕು ವರ್ಣದವರೂ, ನಾಲ್ಕು ಆಶ್ರಮಗಳ ಧರ್ಮಗಳನ್ನನುಷ್ಠಾನಮಾಡುತ್ತಿರುವವರೂ ಆಚರಿಸಬೇಕು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀಸ್ಕಾಂದಮಹಾಪುರಾಣದ ಎರಡನೆಯ ವೈಷ್ಣವಖಂಡದ ವೈಶಾಖಮಾಸಮಾಹಾತ್ಮ್ಯದ
ನಾರದಾಂಬರೀಷ ಸಂವಾದದಲ್ಲಿ "ಗೃಹಗೋಧಿಕಾಖ್ಯಾನ"ವೆಂಬ
ಆರನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥ ಸಪ್ತಮೋಽಧ್ಯಾಯಃ

### ಓಜಾಪಮೋಕ್ಷಪ್ರಾಪ್ತಿವರ್ಣನಂ

ನಾರದ ಉವಾಚ :—

ರಾಜಾ ತದದ್ಭುತಂ ದೃಷ್ಟ್ವಾ ಮೈಥಿಲೋ ಧರ್ಮವಿತ್ತಮಃ ।
ಕೃತಾಂಜಲಿಃ ಸುಖಾಸೀನಂ ವಿಸ್ಮಿತೋ ವಾಕ್ಯಮಬ್ರವೀತ್ ॥ ೧ ॥

ಮೈಥಿಲ ಉವಾಚ :—

ದೃಷ್ಟಮೇತನ್ಮಹಾಶ್ಚರ್ಯಂ ಸಾಧೂನಾಂ ಚರಿತಂ ತಥಾ ।
ಯೇನ ಧರ್ಮೇಣ ಮುಕ್ತೋಽಭೂದ್ರಾಜಾ ಚೇಕ್ಷ್ವಾಕುನಂದನಃ ॥ ೨ ॥
ತಂ ಧರ್ಮಂ ವಿಸ್ತರೇಣೈವ ಶ್ರೋತುಂ ಕೌತೂಹಲಂ ಹಿ ಮೇ ।
ಮಹ್ಯಂ ಶ್ರದ್ಧಾವತೇ ವಿದ್ವನ್ ಕೃಪಯಾ ವಿಸ್ತರಾದ್ವದ ॥ ೩ ॥
ಇತಿ ರಾಜ್ಞಾ ಸುಸಂಪೃಷ್ಟಃ ಶ್ರುತದೇವೋ ಮಹಾಮುನಿಃ ।
ಸಾಧುಸಾಧ್ವಿತಿ ಸಂಭಾಷ್ಯ ವ್ಯಾಜಹಾರ ನೃಪೋತ್ತಮಂ ॥ ೪ ॥

---

## ಕನ್ನಡದ ಅನುವಾದ

### ಓಜಾಪಮೋಕ್ಷಪ್ರಾಪ್ತಿವರ್ಣನ

೧. ನಾರದನು ಹೇಳುತ್ತಾನೆ:—ಶ್ರುತಕೀರ್ತಿಯೆಂಬ ಮಹಾರಾಜನು ಈ ಅದ್ಭುತ ವ್ಯಾಪಾರವನ್ನೆಲ್ಲ ಕಂಡು ಸಮಸ್ತಧರ್ಮಗಳನ್ನೂ ತಿಳಿದವನಾದುದರಿಂದ ಅಂಜಲಿಬಂಧವನ್ನು ಮಾಡಿಕೊಂಡು ಸುಖಾಸನದಲ್ಲಿ ಕುಳಿತಿದ್ದ ಬ್ರಾಹ್ಮಣೋತ್ತಮನನ್ನು ಕುರಿತು ಆಶ್ಚರ್ಯದಿಂದ ಕೇಳತೊಡಗಿದನು.

೨. ರಾಜನು ಕೇಳುತ್ತಾನೆ:—"ಎಲೈ ದ್ವಿಜನೇ! ಮಹಾಶ್ಚರ್ಯಕರವಾದ ಈ ವ್ಯಾಪಾರವನ್ನೂ, ಸಾಧುಪುರುಷರ ಪರೋಪಕಾರಪರವಾದ ಚರಿತ್ರೆಯನ್ನೂ ಈಗ ನೋಡಿದೆನು. ಆ ಧರ್ಮದಿಂದಲೇ ಇಕ್ಷ್ವಾಕುವಂಶೋದ್ಭವನಾದ ಈ ರಾಜನು ತನ್ನ ದೋಷಗಳಿಂದ ಮುಕ್ತನಾದನು.

೩. ವೈರಾಜ ಧರ್ಮವನ್ನು ವಿಸ್ತಾರವಾಗಿ ಕೇಳಬೇಕೆಂದು ನನಗೆ ಅತ್ಯಂತ ಕುತೂಹಲವುಂಟಾಗಿರುವುದು. ಧರ್ಮಜ್ಞನಾದ ಎಲೈ ಬ್ರಾಹ್ಮಣೋತ್ತಮನೆ! ಶ್ರದ್ಧಾಯುಕ್ತನಾಗಿರುವ ನನಗೆ ಅದರ ವಿಷಯವನ್ನು ವಿಸ್ತರಿಸಿ ಹೇಳು.

೪. ಇಂತೆಂದು ರಾಜನಿಂದ ಕೇಳಲ್ಪಟ್ಟವನಾಗಿ ವಿಶಾಲಮತಿಯಾದ ಶ್ರುತದೇವನು ಸಾಧುವಾದಗಳಿಂದ ಆತನ ಪ್ರಶ್ನೆಯನ್ನು ಹೊಗಳಿ ಆ ರಾಜಶ್ರೇಷ್ಠನನ್ನು ಕುರಿತು ಹೇಳತೊಡಗಿದನು.

ಶ್ರುತದೇವ ಉವಾಚ:—

ಸಮ್ಯಗ್ವ್ಯವಸಿತಾ ಬುದ್ಧಿಸ್ತವ ರಾಜರ್ಷಿಸತ್ತಮ ।
ವಾಸುದೇವಪ್ರಿಯಾನ್ ಧರ್ಮಾಂಛ್ರೋತುಂ ಯಸ್ಮಾನ್ಮತಿಸ್ತವ ॥ ೫ ॥
ಬಹುಜನ್ಮಾರ್ಜಿತಂ ಪುಣ್ಯಂ ವಿನಾ ಕಸ್ಯಾಪಿ ದೇಹಿನಃ ।
ವಾಸುದೇವಕಥಾಲಾಪೇ ಮತಿರ್ನೈವೋಪಜಾಯತೇ ॥ ೬ ॥
ಯಾ ತೇ ರಾಜಾಧಿರಾಜಾಯ ಜಾತೇಯಂ ಮತಿರೀದೃಶೀ ।
ಶುದ್ಧಂ ಭಾಗವತಂ ಮನ್ಯೇ ತೇನ ತ್ವಾಂ ಸಾಧುಸತ್ತಮಂ ॥ ೭ ॥
ತಸ್ಮಾತ್ತುಭ್ಯಂ ಬ್ರವೇ ಸೌಮ್ಯ ಧರ್ಮಾನ್ ಭಾಗವತಾಂಛುಭಾನ್ ।
ಯಾನ್ ಜ್ಞಾತ್ವಾ ಮುಚ್ಯತೇ ಜಂತುರ್ಜನ್ಮಸಂಸಾರಬಂಧನಾತ್ ॥ ೮ ॥
ಯಥಾ ಶೌಚಂ ಯಥಾ ಸ್ನಾನಂ ಯಥಾ ಸಂಧ್ಯಾ ಚ ತರ್ಪಣಂ ।
ಅಗ್ನಿಹೋತ್ರಂ ಯಥಾ ಶ್ರಾದ್ಧಂ ತಥಾ ವೈಶಾಖಸತ್ಕ್ರಿಯಾಃ ॥ ೯ ॥

೫. ಶ್ರುತದೇವನು ಹೇಳುತ್ತಾನೆ:— "ಎಲೈ ರಾಜರ್ಷಿವರ್ಯನೇ! ಶ್ರೀಮನ್ನಾರಾಯಣನಿಗೆ ಪ್ರಿಯಗಳಾದ ಭಾಗವತಧರ್ಮಗಳನ್ನು ಕೇಳಲು ನಿನಗೆ ಕುತೂಹಲವುಂಟಾಗಿರುವುದರಿಂದ ನಿನ್ನ ಬುದ್ಧಿಯು ಸನ್ಮಾರ್ಗದಲ್ಲಿಯೇ ಪ್ರವರ್ತಿಸುತ್ತಿರುವುದು.

೬. ಅಸಂಖ್ಯಾತಗಳಾದ ಜನ್ಮಗಳಲ್ಲಿ ಸಂಪಾದಿಸಿದ ಪುಣ್ಯದ ಫಲವಾಗಿ ಯಲ್ಲದೆ ಯಾವ ಮನುಷ್ಯನಿಗೂ ವಾಸುದೇವನ ದಿವ್ಯಚರಿತ್ರೆಗಳನ್ನು ಕೇಳುವುದರಲ್ಲಿ ಆಸಕ್ತಿಯು ಎಂದಿಗೂ ಉಂಟಾಗಲಾರದು.

೭. ರಾಜಾಧಿರಾಜನಾದ ನಿನಗೆ ಯೌವನಾವಸ್ಥೆಯಲ್ಲಿಯೇ ಪಾರಲೌಕಿಕವಾದ ಈ ಬುದ್ಧಿಯು ಉಂಟಾಗಿರುವುದು. ಆದುದರಿಂದ ನೀನು ಪರಿಶುದ್ಧನೂ ಭಾಗವತೋತ್ತಮನೂ ಸಾಧುಗಳಲ್ಲಿ ಸರ್ವೋತ್ತಮನೂ ಆಗಿರುವೆಯೆಂದು ನಿಶ್ಚಯಿಸುವೆನು.

೮. ಎಲೈ ಸತ್ಪುರುಷನೆ! ಆದುದರಿಂದ ನಿನಗೆ ಪಾವನಗಳಾದ ಭಾಗವತ ಧರ್ಮಗಳನ್ನು ವಿವರಿಸುವೆನು. ಅವುಗಳನ್ನು ಸಮೂಲವಾಗಿ ತಿಳಿದು ಅನುಷ್ಠಾನ ಮಾಡಲು ಪ್ರತಿಯೊಬ್ಬ ಮಾನವನೂ ಜನನಮರಣರೂಪವಾದ ಸಂಸಾರ ಬಂಧನದಿಂದ ಬಿಡುಗಡೆಯನ್ನು ಹೊಂದುವನು.

೯. ಶೌಚವೂ, ಪ್ರಾತಃಸ್ನಾನವೂ, ಆಹ್ನಿಕವೂ, ಪಿತೃತರ್ಪಣಾದಿಗಳೂ, ವೈಶ್ವದೇವಾಗ್ನಿಕಾರ್ಯವೂ, ಮೃತತಿಥಿಗಳಲ್ಲಿ ಮಾತಾಪಿತೃಗಳ ಶ್ರಾದ್ಧಕಾರ್ಯಗಳೂ ಮನುಷ್ಯರಿಗೆ ಹೇಗೆ ಅವಶ್ಯಕರ್ತವ್ಯಗಳೋ, ಹಾಗೆಯೇ ವೈಶಾಖಮಾಸದಲ್ಲಿ ಮೇಲೆ ಹೇಳಿದ ಸತ್ಕಾರ್ಯಗಳೂ ಶಾಸ್ತ್ರವಿಹಿತಗಳಾಗಿರುವುವು.

ವೈಶಾಖೇ ಮಾಧವೇ ಧರ್ಮಾನಕೃತ್ವಾ ನೋರ್ಧ್ವಗೋ ಭವೇತ್ ।
ನ ವೈಶಾಖಸಮೋ ಧರ್ಮೋ ಧರ್ಮಜಾತಿಷು ವಿದ್ಯತೇ ॥ ೧೦ ॥
ಸಂತ್ಯೇವ ಬಹವೋ ಧರ್ಮಾಃ ಪ್ರಜಾಶ್ಚಾರಾಜಕಾ ಇವ ।
ಉಪದ್ರವೈಶ್ಚ ಲುಪ್ಯಂತಿ ನಾತ್ರ ಕಾರ್ಯಾ ವಿಚಾರಣಾ ॥ ೧೧ ॥
ಸುಲಭಾಃ ಸಕಲಾ ಧರ್ಮಾಃ ಕರ್ತುಂ ವೈಶಾಖಚೋದಿತಾಃ ।
ಉದಕುಂಭಂ ಪ್ರಪಾದಾನಂ ಪ್ರತಿಚ್ಛಾಯಾದಿನಿರ್ಮಿತಿಃ ॥ ೧೨ ॥
ಉಪಾನತ್ಪಾದುಕಾದಾನಂ ಛತ್ರವ್ಯಜನಯೋಸ್ತಥಾ ।
ತಿಲಯುಕ್ತಮಧೋರ್ದಾನಂ ಗೋರಸಾನಾಂ ಶ್ರಮಾಪಹಂ ॥ ೧೩ ॥
ವಾಪೀಕೂಪತಟಾಗಾದಿಕರಣಂ ಪಥಿಕಾಶ್ರಯಂ ।
ನಾರಿಕೇಲೇಕ್ಷುಕರ್ಪೂರಕಸ್ತೂರೀದಾನಮೇವ ಚ ॥ ೧೪ ॥

೧೦. ಪರಮಾತ್ಮನಿಗೆ ಪ್ರಿಯವಾದ ವೈಶಾಖಮಾಸದಲ್ಲಿ ಸ್ನಾನದಾನಾದಿ ಧರ್ಮಗಳನ್ನು ಮಾಡದಿದ್ದರೆ ಎಂದಿಗೂ ಉತ್ತಮಲೋಕಗಳು ಲಭಿಸಲಾರವು. ಸಕಲ ಧರ್ಮಸಮೂಹಗಳಲ್ಲಿಯೂ ವೈಶಾಖವ್ರತಕ್ಕೆ ಸಮಾನವಾದ ಮತ್ತೊಂದು ಧರ್ಮವು ಕಾಣುವುದಿಲ್ಲ.

೧೧. ರಾಜಶಾಸನಕ್ಕೆ ಒಳಗಾಗದಿರುವ ಪ್ರಜೆಗಳಂತೆ ದೇವತಾವಿಶೇಷಗಳಾದ ಅನೇಕ ಧರ್ಮಗಳಿರುವುವು. ಆದರೆ ಆ ಪ್ರಜೆಗಳು ಪರರಾಜನ ಆಕ್ರಮಣಕ್ಕೆ ಒಳಗಾಗಿ ಕ್ಲೇಶಪಡುವಂತೆ ಆ ಧರ್ಮಗಳೂ ಇತರ ಉಪದ್ರವಗಳಿಂದ ಲೋಪವನ್ನು ಹೊಂದುವುದರಲ್ಲಿ ಸಂದೇಹವಿಲ್ಲ.

೧೨. ವೈಶಾಖಮಾಸ ಕರ್ತವ್ಯಗಳೆಂದು ಶಾಸ್ತ್ರೋಕ್ತಗಳಾಗಿರುವ ಸಮಸ್ತ ಧರ್ಮಗಳೂ ಬಹಳ ಸುಲಭಗಳಾಗಿರುವುವು. ಶೀತೋದಕಕುಂಭದಾನ, ಅರವಟ್ಟಿಗೆಯಲ್ಲಿ ನೀರು, ಮಜ್ಜಿಗೆ, ಪಾನಕ ಮುಂತಾದುವುಗಳನ್ನು ಕೊಡುವುದು, ದಾರಿಯಲ್ಲಿ ತಿರುಗಾಡುವವರು ವಿಶ್ರಾಂತಿಗೊಳ್ಳುವುದಕ್ಕಾಗಿ ನೆರಳನ್ನುಂಟು ಮಾಡಲು ಚಪ್ಪರಗಳು ಇವುಗಳನ್ನು ನಿರ್ಮಿಸುವುದು;

೧೩. ಚಪ್ಪಲಿ, ಪಾದುಕೆಗಳ ದಾನ, ಛತ್ರಿ, ಬೀಸಣಿಗೆಗಳನ್ನು ಕೊಡುವುದು, ಎಳ್ಳಿನಿಂದ ಕೂಡಿದ ಜೇನುತುಪ್ಪದ ದಾನ, ಆಯಾಸಪರಿಹಾರಕಗಳಾದ ಹಾಲು, ಮೊಸರು ಮುಂತಾದ ಗೋರಸಗಳ ದಾನ;

೧೪. ಕೊಳಗಳು, ಬಾವಿಗಳು, ಕೆರೆಗಳು ಮುಂತಾದುವುಗಳ ನಿರ್ಮಾಣ, ದಾರಿಗರಿಗೆ ಅನುಕೂಲಗಳಾದ ಛತ್ರಗಳನ್ನು ಕಟ್ಟುವುದು. ಎಳನೀರು, ಕಬ್ಬಿನ ಹಾಲು, ಪಚ್ಚಕರ್ಪೂರ, ಕಸ್ತೂರಿ ಮುಂತಾದುವುಗಳ ದಾನ

ಗಂಧಾನುಲೇಪನಂ ಶಯ್ಯಾ ಖಟ್ವಾದಾನಂ ತಥೈವ ಚ ।
ತಥಾ ಚೂತಫಲಂ ರಮ್ಯಮುರ್ವಾರುಕರಸಾಯನಂ ॥ ೧೩ ॥
ದಾನಂ ದಮನಪುಷ್ಪಾಣಾಂ ತಥಾ ಸಾಯಂ ಗುಡೋದಕಂ ।
ಚಿತ್ರಾಣ್ಯನ್ನಾನಿ ಪೂರ್ಣಾಯಾಂ ದಧ್ಯನ್ನಂ ಪ್ರತ್ಯಹಂ ತಥಾ ॥ ೧೬ ॥
ತಾಂಬೂಲಸ್ಯ ಸದಾದಾನಂ ಚೈತ್ರದರ್ಶೇ ಕರೀರಕಂ ।
ರವಾವನುದಿತೇ ಸೂರ್ಯೇ ಪ್ರಾತಃಸ್ನಾನಂ ದಿನೇದಿನೇ ॥ ೧೭ ॥
ಮಧುಸೂದನಪೂಜಾ ಚ ಕಥಯಾಃ ಶ್ರವಣಂ ತಥಾ ।
ಅಭ್ಯಂಗವರ್ಜನೇ ಚೈವ ತಥಾ ನ್ಯೈ ಪತ್ರಭೋಜನಂ ॥ ೧೮ ॥
ಮಧ್ಯೇಮಧ್ಯೇ ಶ್ರಮಾರ್ತಾನಾಂ ವೀಜನಂ ವ್ಯಜನೇನ ಚ ।
ಸುಗಂಧೈಃ ಕೋಮಲೈಃ ಪುಷ್ಪೈಃ ಪ್ರತ್ಯಹಂ ಪೂಜನಂ ಹರೇಃ ॥ ೧೯ ॥
ಫಲಂ ದಧ್ಯನ್ನನೈವೇದ್ಯಂ ಧೂಪದೀಪೌ ದಿನೇದಿನೇ ।
ಗೋಗ್ರಾಸಂ ವೃಷಪತ್ನೀನಾಂ ದ್ವಿಜಪಾದಾವನೇಜನಂ ॥ ೨೦ ॥

೧೩. ಸುಗಂಧದ್ರವ್ಯಗಳ ಲೇಪನಗಳನ್ನು ದಾನಮಾಡುವುದು. ಹಾಸಿಗೆ ಮಂಚಗಳ ದಾನ, ಮನೋಹರಗಳಾದ ಮಾವಿನ ಹಣ್ಣುಗಳು ಮತ್ತು ಕೆಕ್ಕರಿಕೆ ಹಣ್ಣುಗಳ ರಸಾಯನಗಳು;

೧೬. ಮರುಗ, ದವನಗಳ ದಾನ, ಸಾಯಂಕಾಲದಲ್ಲಿ ಬೆಲ್ಲದ ನೀರಿನ ದಾನ, ಹುಣ್ಣಿಮೆಯ ದಿನದಲ್ಲಿ ಚಿತ್ರಾನ್ನಗಳ ದಾನ, ಪ್ರತಿದಿನವೂ ಮೊಸರನ್ನದ ದಾನ;

೧೭. ಸರ್ವಕಾಲಗಳಲ್ಲಿಯೂ ತಾಂಬೂಲದ್ರವ್ಯಗಳ ದಾನ, ಚೈತ್ರ ಮಾಸದ ಅಮಾವಾಸ್ಯೆಯಲ್ಲಿ ಉದಕುಂಭದ ದಾನ, ಮಾಸದ ಪ್ರತಿದಿವಸದಲ್ಲಿಯೂ ಸೂರ್ಯನು ಹುಟ್ಟುವುದಕ್ಕೆ ಮುಂಚೆಯೇ ಬಹಿರ್ಜಲಗಳಲ್ಲಿ ಸ್ನಾನವನ್ನು ಮಾಡುವುದು;

೧೮. ಶ್ರೀಮನ್ನಾರಾಯಣನ ಪೂಜೆ, ಮತ್ತು ಆತನ ದಿವ್ಯಕಥೆಗಳನ್ನು ಶ್ರದ್ಧೆಯಿಂದ ಕೇಳುವುದು, ಅಭ್ಯಂಜನದ ತ್ಯಾಗ ಮತ್ತು ಎಲೆಗಳಲ್ಲಿ ಮಾತ್ರ ಭೋಜನವನ್ನು ಮಾಡುವುದು;

೧೯. ಈ ಕಾರ್ಯಗಳ ಮಧ್ಯದಲ್ಲಿ ಅವಕಾಶವೊದಗಿದಾಗಲೆಲ್ಲ ಬಿಸಿಲಿನ ತಾಪದಿಂದ ಆಯಾಸಗೊಂಡವರ ಶ್ರಮವನ್ನು ಬೀಸಣಿಗೆಯ ಬೀಸುವಿಕೆಯಿಂದ ಕಳೆಯುವುದು. ಸುವಾಸನಾಯುಕ್ತಗಳೂ, ಕೋಮಲಗಳೂ ಆದ ಪುಷ್ಪಗಳಿಂದ ಪ್ರತಿದಿನವೂ ಶ್ರೀ ಹರಿಯನ್ನು ಪೂಜಿಸುವುದು;

೨೦. ಫಲಗಳನ್ನೂ ಮೊಸರಿನ ಅನ್ನವನ್ನೂ ಪರಮಾತ್ಮನಿಗೆ ನಿವೇದಿಸಿ ದಾನಮಾಡುವುದು; ದಿನದಿನದಲ್ಲಿಯೂ ಧೂಪದೀಪಗಳ ಸೇವೆ; ಗೋವು

ಗುಡನಾಗರದಾನಂ ಚ ಧಾತ್ರೀಪಿಷ್ಟಪ್ರದಾಪನಂ ।
ಪಥಿಕಾನಾಂ ಪ್ರತ್ರ್ಯಂ ಚ ದಾನಂ ತಂಡುಲಶಾಕಯೋಃ ।
ಏತೇ ಧರ್ಮಾಃ ಪ್ರಶಸ್ತಾ ಹಿ ವೈಶಾಖೇ ಮಾಧವಪ್ರಿಯೇ ॥ ೨೧ ॥
ತಥಾ ಚ ವಿಷ್ಣೋಃ ಕುಸುಮಾರ್ಪಣಂ ಹರೇಃ
ಪೂಜಾ ಚ ಕಾಲೋಚಿತ ಪಲ್ಲವಾದ್ಯೈಃ ।
ದಧ್ಯನ್ನನೈವೇದ್ಯನಿವೇದನಂ ಚ
ಸಮಸ್ತಪಾಪೌಘವಿನಾಶಹೇತುಃ ॥ ೨೨ ॥
ನಾರೀಪುಷ್ಪೈರ್ಮಾಧವಂ ನಾರ್ಚಯೇದ್ಯಾ
ಕಾಲೋತ್ಪನ್ನೈರ್ಮಂದಿರೇ ವಾ ಗೃಹೇ ವಾ ।
ಪುತ್ರಂ ಸೌಖ್ಯಂ ಕ್ವಾಪಿ ನಾಪ್ನೋತಿ ಹಂತಿ
ಚಾಯುರ್ಭರ್ತುಃ ಸ್ವಾತ್ಮನೋ ವಾ ಮಹಾತ್ಮನ್ ॥ ೨೩ ॥
ರಮಾಸಹಾಯೇ ಮಾಧವೇ ಮಾಸಿ ವಿಷ್ಣೋ
ಪರೀಕ್ಷಾರ್ಥೈ ಧರ್ಮಸೇತೋಃ ಪ್ರಜಾನಾಂ ।
ಗೃಹಂ ಯಾತೇ ಮುನಿಭಿರ್ದೈವತೈಶ್ಚ ಕಾಲೇ
ಪುಷ್ಪೈರ್ನಾರ್ಚಯೇದ್ಯಸ್ತು ಮೂಢಃ ॥ ೨೪ ॥

ಗಳಿಗೆ ಹುಲ್ಲು, ಹಿಂಡಿ ಮುಂತಾದ ಗೋಗ್ರಾಸಗಳನ್ನು ನೀಡುವುದು, ಬ್ರಾಹ್ಮ ಣೋತ್ತಮರ ಪಾದಕಮಲಗಳನ್ನು ತೊಳೆಯುವುದು;

೨೧. ಶೊಂಠಿಬೆಲ್ಲಗಳ ಲೇಪದಾನ. ನೆಲ್ಲಿಯಕಾಯಿನ ಚೂರ್ಣದ ದಾನ, ದಾರಿಗರಾಗಿ ಬಂದಿರುವವರಿಗೆ ಸಮಸ್ಕಾರವನ್ನುಮಾಡಿ ಅಕ್ಕಿಯನ್ನೂ ಕಾಯಿ ಪಲ್ಯಗಳನ್ನೂ ದಾನಮಾಡುವುದು— ಈ ದಾನಗಳೇ ಮಾಧವನಿಗೆ ಪ್ರಿಯವಾದ ವೈಶಾಖಮಾಸದಲ್ಲಿ ಮಾಡಲು ಪ್ರಶಸ್ತಗಳಾದುವು.

೨೨. ಮತ್ತು ವಿಷ್ಣುವಿಗೆ ಪುಷ್ಪಗಳನ್ನರ್ಪಿಸುವುದು, ವಸಂತಕಾಲೋ ಚಿತಗಳಾದ ಪಲ್ಲವಗಳೇ ಮೊದಲಾದುವುಗಳಿಂದ ಪ್ರಾತಃಕಾಲದಲ್ಲಿ ಪೂಜಿಸು ವುದು, ಮೊಸರನ್ನವನ್ನುಮಾಡಿ ನಿವೇದನ ಮಾಡುವುದು. ಇವುಗಳೇ ಮನುಷ್ಯನ ಸಕಲ ಪಾತಕಗಳ ಸಮೂಹದ ವಿನಾಶಕ್ಕೆ ಕಾರಣಗಳಾಗಿರುವುವು.

೨೩. ಎಲೈ ಮಹಾತ್ಮನೆ! ಯಾವ ಸ್ತ್ರೀಯು ಆ ಕಾಲದಲ್ಲಿ ಸಿಕ್ಕುವ ಪುಷ್ಪವಿಶೇಷಗಳಿಂದ ದೇವಾಲಯದಲ್ಲಿಯಾಗಲಿ. ಮನೆಯಲ್ಲಿಯೇ ಆಗಲಿ ಮಹಾವಿಷ್ಣುವನ್ನು ಪೂಜಿಸುವುದಿಲ್ಲವೊ, ಅವಳು ಪುತ್ರಸಂತತಿಯನ್ನೂ ಸೌಖ್ಯ ವನ್ನೂ ಎಂದಿಗೂ ಪಡೆಯುವುದಿಲ್ಲ. ಅಲ್ಲದೆ ತನ್ನ ಮತ್ತು ತನ್ನ ಪತಿಯ ಆಯುರ್ದಾಯವನ್ನೂ ಕ್ಷೀಣಗೊಳಿಸುವಳು.

೨೪. ವೈಶಾಖ ಮಾಸದಲ್ಲಿ ಲಕ್ಷ್ಮೀಸಹಾಯನಾದ ಮಹಾವಿಷ

ಸಮೂಢಾತ್ಮಾ ರೌರವಂ ಪ್ರಾಪ್ಯ ಪಶ್ಚಾ-
ದ್ಯಾಯಾದ್ಯೋನಿಂ ರಾಕ್ಷಸೀಂ ಪಂಚವಾರಂ ।
ಜಲಂ ಚಾನ್ನಂ ಸರ್ವದಾ ದೇಯಮಸ್ಮಿನ್
ಕ್ಷುಧಾರ್ತಾನಾಂ ಪ್ರಾಣಿನಾಂ ಪ್ರಾಣಹೇತುಃ ॥ ೨೫ ॥
ತಿರ್ಯಗ್ಜಂತುರ್ಜಾಯತೇ ವಾರ್ಯದಾನಾ
ದನ್ನಾದಾನಾಜ್ಜಾಯತೇ ವೈ ಪಿಶಾಚಃ ।
ಅನ್ನದಾನೇ ಚಾನುಭೂತಾಂ ಕಥಾಂ ತೇ
ಹ್ಯಹಂ ವಕ್ಷ್ಯೇ ಚಾದ್ಭುತಾಂ ಭೂಮಿಪಾಲ ॥ ೨೬ ॥
ರೇವಾತೀರೇ ಮತ್ಪಿತಾಃಭೂತ್ಪಿಶಾಚಃ
ಸ್ವಮಾಂಸಾಶೀ ಕ್ಷುತ್ತೃಷಾಕ್ರಾಂತಗಾತ್ರಃ ।
ಛಾಯಾಹೀನೇ ಶಾಲ್ಮಲೀವೃಕ್ಷಮೂಲೇ
ಹ್ಯನ್ನಾಭಾವಾನ್ನಷ್ಟಚೈತನ್ಯ ಏಷಃ ॥ ೨೭ ॥

ಮಹರ್ಷಿಗಳಿಂದಲೂ ದೇವತೆಗಳಿಂದಲೂ ಪರಿವಾರಿತನಾಗಿ ಲೋಕದ ಮಾನವರು ಧರ್ಮದ ಕಟ್ಟಳೆಗಳನ್ನು ಪಾಲಿಸುವುದನ್ನು ಪರೀಕ್ಷಿಸಲು ಮನೆ ಮನೆಗೂ ಬರುವನು. ಆತನನ್ನು ಸಕಾಲದಲ್ಲಿ ಪುಷ್ಪಗಳಿಂದ ಯಾವನು ಪೂಜಿಸುವುದಿಲ್ಲವೋ, ಅವನೇ ಮೂಢನು.

೨೫. ಆ ಮೂಢಮಾನವನು ರೌರವನರಕವನ್ನು ಹೊಂದಿ ಯಾತನೆಗಳನ್ನನುಭವಿಸಿ ಬಳಿಕ ಐದು ಜನ್ಮಗಳಲ್ಲಿ ರಾಕ್ಷಸಯೋನಿಯಲ್ಲಿ ಹುಟ್ಟುವನು. ಆದುದರಿಂದ ಈ ಮಾಸದಲ್ಲಿ ಹಸಿವು ಬಾಯಾರಿಕೆಯುಳ್ಳವರಿಗೆ ಯಾವಾಗಲೂ ಜೀವನಾಧಾರವಾದ ಜಲವನ್ನೂ ಅನ್ನವನ್ನೂ ದಾನಮಾಡುವುದೇ ಕರ್ತವ್ಯವು.

೨೬. ನೀರನ್ನು ದಾನಮಾಡದಿರುವುದರಿಂದ ನೀಚಜಂತುವಾಗಿ ಹುಟ್ಟುವನು. ಅನ್ನವನ್ನು ದಾನಮಾಡದಿದ್ದರೆ ಮನುಷ್ಯನು ಪಿಶಾಚನಾಗಿ ಜನಿಸುವನು. ಎಲೈ ಭೂಪಾಲಕನೆ! ಈ ಅನ್ನದಾನವನ್ನು ಮಾಡದಿರುವ ವಿಷಯದಲ್ಲಿ ನನ್ನ ಅನುಭವಕ್ಕೆ ಬಂದ ಅದ್ಭುತವಾದ ಕಥೆಯೊಂದನ್ನು ನಾನು ನಿನಗೆ ಹೇಳುವೆನು.

೨೭. ನರ್ಮದಾನದಿಯ ತೀರದಲ್ಲಿ ನನ್ನ ತಂದೆಯು ತನ್ನ ಮಾಂಸವನ್ನೇ ಭಕ್ಷಿಸುತ್ತ ಹಸಿವು ಬಾಯಾರಿಕೆಗಳಿಂದ ಒಣಗಿದ ಶರೀರವುಳ್ಳ ಪಿಶಾಚನಾಗಿ ನೆಲಸಿದ್ದನು. ಆತನು ನೆರಳಿಲ್ಲದ ಒಂದು ಬೂರುಗದ ಮರದಡಿಯಲ್ಲಿ ಅನ್ನವಿಲ್ಲದೆ ಚೈತನ್ಯಹೀನನಾಗಿ ಬಿದ್ದಿರುತ್ತಿದ್ದನು.

ಕ್ಷುಧಾ ತೃಷಾ ಕರ್ಮಣಾ ಯಸ್ಯ ಬಹ್ವೀ
ಸೂಕ್ಷ್ಮಂ ಛಿದ್ರಂ ಕಂಠನಾಲಸ್ಯ ಚಾಽಸೀತ್ ।
ಮಾಂಸಂ ಚಾಂತಃ ಕಂಠಮಧ್ಯೇ ನಿಷಣ್ಣಂ
ಕುರ್ಯಾತ್ಪೀಡಾಂ ಪ್ರಾಣಪರ್ಯಂತಮೇವ ॥ ೨೮ ॥
ಜಲಂ ದೃಷ್ಟ್ವಾ ಕಾಲಕೂಟಪ್ರಕಲ್ಪಂ
ತಾಪ್ಯಂ ಶೀತಂ ವಾಽಪಿ ಕಾಸಾರಸಂಸ್ಥಂ ।
ತಸ್ಯಾಸ್ತೀರೇ ಚಾಗತಂ ದೈವಯೋಗಾ
ದ್ಗಂಗಾಯಾತ್ರಾಕಾರಣಾತ್ ಮಾರ್ಗಮಧ್ಯೇ ॥ ೨೯ ॥
ದೃಷ್ಟ್ವಾಽದ್ಭುತಂ ಶಾಲ್ಮಲೀವೃಕ್ಷಮೂಲೇ
ದೃಷ್ಟ್ವಾ ಭಕ್ಷಯಂತಂ ಸ್ವಮಾಂಸಂ ।
ಕ್ರೋಶಂತಂ ತಂ ಬಹುಧಾ ಶೋಚಮಾನಂ
ಕ್ಷುಧಾ ತೃಷಾ ವ್ಯಾಧಿತಂ ಕರ್ಮಭಿಃ ಸ್ವೈಃ ॥ ೩೦ ॥
ಸ ಮಾಂ ಹಂತು ಪ್ರಾದ್ರವತ್ಪಾಪಕರ್ಮಾ
ಮತ್ತೇಜಸಾ ನಿಹತೋ ದುದ್ರುವೇ ಚ ।
ತಂ ಚಾಽಬ್ರುವಂ ಕೃಪಯಾ ಕ್ಲಿನ್ನಚಿತ್ತೋ
ಮಾಭೈಷ್ಟ ತ್ವಂ ಹ್ಯಭಯಂ ಮೇ ಹಿ ದತ್ತಂ ॥ ೩೧ ॥

೨೮. ಆವನ ಪೂರ್ವಕರ್ಮದ ಫಲವಾಗಿ ಅವನಿಗೆ ಹಸಿವು ತೃಷೆಗಳು ಅಪರಿಮಿತಗಳಾಗಿದ್ದರೂ ಗಂಟಲಿನಲ್ಲಿ ಮಾತ್ರ ಅತ್ಯಂತ ಸೂಕ್ಷ್ಮವಾದ ಛಿದ್ರವೇ ಇದ್ದಿತು. ಆತ್ಯಾಶೆಯಿಂದ ತನ್ನ ಮಾಂಸದ ಒಂದು ತುತ್ತನ್ನೇ ಬಾಯಲ್ಲಿ ಹಾಕಿಕೊಂಡರೂ ಅದು ಗಂಟಲಿನ ಮಧ್ಯದಲ್ಲಿ ಸಿಕ್ಕಿಕೊಂಡು ಪ್ರಾಣಾಪಾಯಕ್ಕೆ ಸಮಾನವಾದ ಸಂಕಟವನ್ನುಂಟುಮಾಡುತ್ತಿದ್ದಿತು.

೨೯. ಬಾವಿಗಳಲ್ಲಿಯೂ ಕೆರೆಗಳಲ್ಲಿಯೂ ನಿಂತಿರುವ ಶೀತಲವಾದ ಜಲವನ್ನು ನೋಡಿದರೂ ಆತನಿಗೆ ಕಾಲಕೂಟವಿಷವನ್ನು ಕಂಡಂತೆ ಭಾಸವಾಗುತ್ತಿದ್ದಿತು. ಇಂತಿರಲು ನಾನು ಗಂಗಾ ಯಾತ್ರೆಯನ್ನು ಮಾಡುವವನಾಗಿ ದೇಶಗಳನ್ನು ಸುತ್ತುತ್ತ ಮಾರ್ಗಮಧ್ಯದಲ್ಲಿ ದೈವಯೋಗದಿಂದ ಆ ನರ್ಮದಾ ನದಿಯ ದಡವನ್ನು ಸೇರಿದೆನು.

೩೦. ಬೂರುಗದ ಮರದ ಬುಡದಲ್ಲಿ ಕುಳಿತು ತನ್ನ ದೇಹದ ಮಾಂಸವನ್ನೇ ಕತ್ತರಿಸಿ ತಿನ್ನುತ್ತ, ಅನೇಕ ವಿಧವಾಗಿ ಕೂಗುತ್ತ, ದುಃಖಪಡುತ್ತ, ಹಸಿವು ಬಾಯಾರಿಕೆಗಳಿಂದ ಪೀಡಿತನಾಗಿ ತನ್ನ ಪೂರ್ವಕರ್ಮಗಳ ಫಲವನ್ನು ಅನುಭವಿಸುತ್ತಿರುವ ಆ ಪಿಶಾಚದ ಅದ್ಭುತವಾದ ನಡತೆಯನ್ನು ನಾನು ನೋಡುತ್ತಿದ್ದೆನು.

೩೧. ಆ ಪಾಪಕರ್ಮಫಲವನ್ನನುಭವಿಸುವ ಆ ಪಿಶಾಚನು ನನ್ನನ್ನುಕೊಂದು

ಕಸ್ತ್ವಂ ತಾತ ಬ್ರೂಹಿ ಸದ್ಯೋಽತ್ರ ಹೇತುಂ
ಕೃಚ್ಛ್ರಾದಸ್ಮಾನ್ಮೋಚಯೇ ಮಾ ವಿಷೀದ ।
ಇತ್ಯುಕ್ತೋ ಮಾಂ ಪ್ರಾಹ ಪುತ್ರಂ ತ್ವಜಾನ
ನ್ಪುರಾನರ್ತೇ ಭೂವರಾಖ್ಯೇ ಪುರೇ ಚ ॥ ೩೨ ॥
ನಾಮ್ನಾ ಮೈತ್ರಃ ಸಾಂಕೃತೇರ್ಗೋತ್ರಜೋಽಹಂ
ತಪೋ ವಿದ್ಯಾದಾನಯಜ್ಞಾದಿ ನಿಷ್ಠಃ ।
ಮಯಾಽಧೀತಾಽಧ್ಯಾಪಿತಾಃ ಸರ್ವವಿದ್ಯಾಃ
ಕೃತೋ ಮಯಾ ಸರ್ವತೀರ್ಥಾವಗಾಹಃ ॥ ೩೩ ॥
ದತ್ತಂ ನಾಽನ್ನಂ ಮಾಸಿ ವೈಶಾಖಸಂಜ್ಞೇ
ಲೋಭಾದ್ಭಿಕ್ಷಾಮಾತ್ರಮಪ್ಯೇವ ಕಾಲೇ ।
ಶೋಚೇ ಚಾಽಹಂ ಪ್ರಾಪ್ಯ ಪೈಶಾಚಯೋನಿಂ
ನಾಽನ್ಯೋ ಹೇತುಃ ಸತ್ಯಮೇವೋಕ್ತಮಂಗ ॥ ೩೪ ॥

ಹಾಕುವುದಕ್ಕೆ ಓಡಿಬಂದನು. ಆದರೆ ನನ್ನ ಬ್ರಹ್ಮತೇಜಸ್ಸಿನಿಂದ ಪರಾಭವವನ್ನು ಹೊಂದಿದವನಾಗಿ ಓಡಿಹೋದನು. ಅವನ್ನು ಕಂಡು ನಾನು ಕೃಪೆಯಿಂದ ಆರ್ದ್ರವಾದ ಮನಸ್ಸುಳ್ಳವನಾಗಿ ಹೇಳತೊಡಗಿದೆನು. "ಅಯ್ಯಾ, ಭಯಪಡಬೇಡ. ನಾನು ನಿನಗೆ ಅಭಯವನ್ನು ಕೊಟ್ಟಿರುವೆನು.

೩೨. ನೀನು ಯಾರೆಂಬುವನ್ನು ಹೇಳು. ಈ ಕಷ್ಟದಕೆಗೆ ಕಾರಣ ವೇನೆಂಬುದನ್ನು ತಿಳಿಸು. ಈ ದುಃಖದಿಂದ ನಿನ್ನನ್ನು ಬಿಡುಗಡೆಮಾಡುವೆನು, ದುಃಖಪಡಬೇಡ." ಅವನು ಇಂತೆಂದ ನನ್ನನ್ನು ತನ್ನ ಮಗನೆಂದು ತಿಳಿಯ ದೆಯೇ ಹೇಳತೊಡಗಿದನು. "ಪೂರ್ವದಲ್ಲಿ ನಾನು ಆನರ್ತದೇಶದ ಭೂವರ ವೆಂಬ ಪಟ್ಟಣದಲ್ಲಿ ವಾಸಮಾಡುತ್ತಿದ್ದೆನು.

೩೩. ನನ್ನ ಹೆಸರು ಮೈತ್ರನು. ನಾನು ಸಂಕೃತಿಗೋತ್ರೋದ್ಭವನು. ನಿರಂತರವೂ ತಪಸ್ಸು, ವಿದ್ಯಾಭ್ಯಾಸ, ದಾನ, ಯಜ್ಞ ಮುಂತಾದುವುಗಳಲ್ಲಿಯೇ ನಿರತನಾಗಿರುತ್ತಿದ್ದೆನು. ನಾನು ಸಮಸ್ತ ವಿದ್ಯೆಗಳನ್ನೂ ಅಧ್ಯಯನಮಾಡಿದೆನು. ಶಿಷ್ಯರಿಗೆ ಅವುಗಳನ್ನೆಲ್ಲ ಉಪದೇಶವನ್ನೂ ಮಾಡಿಸಿದೆನು. ಭೂಮಂಡಲದ ಸಕಲ ತೀರ್ಥಗಳಲ್ಲಿಯೂ ಸ್ನಾನಗಳನ್ನು ಮಾಡಿದೆನು.

೩೪. ಆದರೆ ಸಕಲ ದಾನಗಳಿಗೂ ಪ್ರಶಸ್ತವೆನಿಸಿದ ವೈಶಾಖಮಾಸದಲ್ಲಿ ಲೋಭಪರವಶನಾಗಿ ಒಬ್ಬನಿಗಾದರೂ ಭಿಕ್ಷಾಮಾತ್ರವೂ ಅನ್ನವನ್ನು ದಾನ ಮಾಡಲಿಲ್ಲ. ಅದರ ಫಲವಾಗಿ ಈಗ ಪಿಶಾಚ ಜನ್ಮವನ್ನು ಪಡೆದು ಈ ವಿಧವಾಗಿ ದುಃಖವನ್ನನುಭವಿಸುತ್ತಿರುವೆನು. ಎಲೈ ಬ್ರಾಹ್ಮಣೋತ್ತಮನೆ! ಈ ಜನ್ಮಕ್ಕೆ ಬೇರೆ ಯಾವುದೂ ಕಾರಣವಲ್ಲವೆಂಬುದಾಗಿ ಸತ್ಯವನ್ನೇ ಹೇಳುವೆನು.

ಪುತ್ರೋಽಧುನಾ ವರ್ತತೇ ಮದ್ಗೃಹೇ ಚ
ಭೂರಿಖ್ಯಾತಿಃ ಶ್ರುತದೇವಾಭಿಧಾನಃ ।
ನಾಖ್ಯಾ ತಸ್ಮೈ ಮದ್ದಶಾಂ ಚಾಽತ್ರಚಾಯ
ವೈಶಾಖಾನ್ನಾದಾನತೋಽಭೂತ್ಪಿಶಾಚಃ ॥ ೩೫ ॥
ದೃಷ್ಟಸ್ತೀರೇ ತೇ ಪಿತಾ ನರ್ಮದಾಯಾ
ನೋರ್ಧ್ವಂ ಗತೋ ವರ್ತತೇ ವೃಕ್ಷಮೂಲೇ ।
ಖಾದನ್ಮಾಂಸಂ ಸ್ವೀಯಮೇವಾಽಸ್ಯಮಿದ್ಧ್ಯ
ತ್ಪಿತುರ್ಮುಕ್ತ್ಯೈ ಮಾಸಿ ವೈಶಾಖಸಂಜ್ಞೇ ॥ ೩೬ ॥
ಪ್ರಾತಃ ಸ್ನಾತ್ವಾ ಪೂಜಯಿತ್ವಾ ಚ ವಿಷ್ಣುಂ
ನಿರ್ವ್ಯಾಜಾನ್ನಾಂ ತರ್ಪಯಿತ್ವಾ ಜಲೈಶ್ಚ ।
ದೇಯಂ ಚಾಽನ್ನಂ ದ್ವಿಜವರ್ಯೇ ಗುಣಾಢ್ಯೇ
ಮುಕ್ತೋ ಯೋ ವೈ ಯಾತಿ ವಿಷ್ಣೋಃ ಪದಂ ಚ ॥ ೩೭ ॥
ಇತ್ಥಂ ಚೋಕ್ತಂ ತ್ವತ್ಪುರಸ್ತಾದ್ವದೇತಿ
ದಯಾ ಚೈಷಾ ಮತ್ಕೃತೇ ನಾಽತ್ರ ಶಂಕಾ ।
ಭದ್ರಂ ಭೂಯಾತ್ಸರ್ವತೋ ಮಂಗಲಂ ತೇ
ಶ್ರುತ್ವಾ ಚಾಽಹಂ ಭಾಷಿತಂ ಮೇ ಪಿತುಶ್ಚ ॥ ೩೮ ॥

೩೫. ಈಗ ನನ್ನ ಮನೆಯಲ್ಲಿ ವಿಶಾಲವಾದ ಯಶಸ್ಸುಳ್ಳ ಶ್ರುತದೇವನೆಂಬ ಹೆಸರಿನ ನನ್ನ ಮಗನೊಬ್ಬನಿರುವನು. ಪುತ್ರನಾದ ಆತನಿಗೆ ನನ್ನ ಈ ಹೀನ ದಶೆಯನ್ನು ನೀನು ತಿಳಿಸಬೇಕು. 'ಎಲೈ ಶ್ರುತದೇವನೆ! ವೈಶಾಖಮಾಸದಲ್ಲಿ ಅನ್ನದಾನವನ್ನು ಮಾಡದೆ ಇದ್ದುದರ ಫಲವಾಗಿ ನಿನ್ನ ತಂದೆಯು ಪಿಶಾಚಿ ಯಾಗಿರುವನು.

೩೬–೩೭. ನರ್ಮದಾನದಿಯ ತೀರದಲ್ಲಿ ನಾನು ನಿನ್ನ ತಂದೆಯನ್ನು ನೋಡಿದೆನು. ಆತನಿಗೆ ಊರ್ಧ್ವಲೋಕಗಳು ಲಭಿಸಲಿಲ್ಲ. ನದೀತೀರದ ಒಂದು ಬೂರುಗದ ಮರದಡಿಯಲ್ಲಿ ಬಿದ್ದಿರುವನು. ಆತನು ತನ್ನ ಶರೀರದ ಮಾಂಸವನ್ನೇ ತಿನ್ನುತ್ತ ದುಃಖಪಡುತ್ತಿರುವನು. ನಿನ್ನ ತಂದೆಯ ಮೋಕ್ಷಕ್ಕಾಗಿ ನೀನು ವೈಶಾಖಮಾಸದಲ್ಲಿ ಪ್ರಾತಃಕಾಲದಲ್ಲಿ ಒಂದು ತೀರ್ಥದಲ್ಲಿ ಸ್ನಾನವನ್ನು ಮಾಡಿಕೊಂಡು ಸಂಪೂರ್ಣಮನಸ್ಸಿನಿಂದ ಮಹಾವಿಷ್ಣುವನ್ನು ಪೂಜಿಸಿ ತಂದೆ ಯನ್ನು ಜಲತರ್ಪಣಾಗಳಿಂದ ತೃಪ್ತಿಗೊಳಿಸಿ ವೈದಿಕನೂ ಗುಣಾಢ್ಯನೂ ಆದ ಬ್ರಾಹ್ಮಣೋತ್ತಮನಿಗೆ ಅನ್ನವನ್ನು ನೀಡಬೇಕು. ಇದರಿಂದ ನಿನ್ನ ತಂದೆಯು ಪಿಶಾಚತ್ವವನ್ನು ಕಳೆದುಕೊಂಡು ಮಹಾವಿಷ್ಣುವಿನ ಲೋಕವನ್ನು ಸೇರುವನು.'

೩೮–೩೯. ಇಂತೆಂದು ಆತನೇ ನನ್ನ ಮುಂದೆ ಹೇಳಿದನು ಎಂಬುದಾಗಿ

ದುಃಖಾತ್ಕಾಯಂ ದಂಡವತ್ಪಾತಯಿತ್ವಾ
ಭೃಶಾರ್ತೋಽಹಂ ಪಾದಯೋರ್ಭೂರಿಕಾಲಂ ।
ನಿಂದನ್ನಿಂದನ್ಸ್ವೀಯಮಹಂ ಬಾಷ್ಪನೇತ್ರಃ
ಪುತ್ರೋಽಹಂ ತೇ ತಾತ ದೈವಾದಾಗತೋಽಹಂ ॥ ೩೯ ॥
ಕರ್ಮಭ್ರಷ್ಟೋ ಭೂಸುರಾಣಾಂ ವಿನಿಂದ್ಯೋ
ನಾಭೂದ್ಯಸ್ಮಾತ್ಕ್ಲೇಶಮೋಕ್ಷಃ ಪಿತೄಣಾಂ ।
ಆಖ್ಯಾಹಿ ತ್ವಂ ಕರ್ಮಣಾ ಕೇನ ಮುಕ್ತೋ
ಭವಿತಾ ನ್ವೈ ತತ್ಕರೋಮಿ ದ್ವಿಜೇಂದ್ರ ॥ ೪೦ ॥
ತತಃ ಪ್ರಾಹ ಪ್ರೀತಸರ್ವಾಂತರಾತ್ಮಾ
ಯಾತ್ರಾಂ ಕೃತ್ವಾ ಶೀಘ್ರಮಾಗತ್ಯ ಗೇಹಂ ।
ಪ್ರಾಪ್ತೇ ಮಾಸೇ ಮೇಷಸಂಸ್ಥೇ ಚ ಭಾನೌ
ನಿವೇದ್ಯಾನ್ನಂ ವಿಷ್ಣವೇ ತ್ವಂ ಗುಣಾಢ್ಯಂ ॥ ೪೧ ॥
ದಾನಂ ದೇಹಿ ದ್ವಿಜವರ್ಯೇ ಮಹಾತ್ಮನ್
ತ್ತಸ್ಮಾನ್ಮೋಕ್ಷೋ ಭವಿತಾ ಸಾನ್ವಯಸ್ಯ ।
ಪಿತ್ರಾದಿಷ್ಟಃ ಕೃತಯಾತ್ರಃ ಸ್ವಗೇಹೇ
ಪ್ರಾಪ್ಯಾಕರಂ ಮಾಧವೇಽತಾಽನ್ನದಾನಂ ॥ ೪೨ ॥

ನನ್ನ ಮಗನಿಗೆ ತಿಳಿಸು. ಈ ಕಾರ್ಯವು ನನಗೋಸ್ಕರ ನೀನು ಮಾಡುವ ಪರೋಪಕಾರವೇ ಎಂಬುದರಲ್ಲಿ ಸಂದೇಹವಿಲ್ಲ. ನಿನಗೆ ಸಕಲ ವಿಧಗಳಲ್ಲಿಯೂ ಶುಭವೂ ಮಂಗಳವೂ ಉಂಟಾಗಲಿ.” ಇಂತೆಂದ ನನ್ನ ತಂದೆಯ ಮಾತುಗಳನ್ನು ಕೇಳಿದವನಾಗಿ ದುಃಖಗೊಂಡು ದೇಹವನ್ನು ಭೂಮಿಯಲ್ಲಿ ದಂಡದಂತೆ ಈಡಾಡಿ ಅಪಾರವಾದ ಮನಃಕ್ಲೇಶವನ್ನು ಅನುಭವಿಸುತ್ತ ಬಹಳ ಕಾಲದವರೆಗೂ ಆತನ ಪಾದಗಳಲ್ಲಿ ಬಿದ್ದಿದ್ದು ಮತ್ತೆ ಮತ್ತೆ ತನ್ನನ್ನೇ ನಿಂದಿಸಿಕೊಳ್ಳುತ್ತ ಕಣ್ಣುಗಳಲ್ಲಿ ನೀರು ಸುರಿಯುತ್ತಿರಲು ಇಂತೆಂದನು. “ಎಲೈ ತಂದೆಯೆ! ನಾನೇ ನಿನ್ನ ಪುತ್ರನಾದ ಶ್ರುತದೇವನು. ದೈವವಶದಿಂದ ಇಲ್ಲಿಗೆ ಪ್ರಾಪ್ತನಾಗಿರುವೆನು.

೪೦. ಓ ಬ್ರಾಹ್ಮಣೋತ್ತಮ! ನನ್ನಿಂದ ಪಿತೃದೇವತೆಗಳಿಗೆ ದುಃಖಗಳಿಂದ ಬಿಡುಗಡೆಯುಂಟಾಗಲಿಲ್ಲವಾದುದರಿಂದ ನಾನು ಕರ್ಮಭ್ರಷ್ಟನಾದೆನು. ಬ್ರಾಹ್ಮಣರ ಸಮೂಹದಲ್ಲಿ ಅಪವಾದಕ್ಕೆ ಅರ್ಹನಾದೆನು. ನಿನಗೆ ಯಾವ ಕರ್ಮವನ್ನು ಮಾಡುವುದರಿಂದ ಮೋಕ್ಷವುಂಟಾಗುವುದೆಂಬುದನ್ನು ನನಗೆ ಹೇಳು. ಅದನ್ನು ನಿಶ್ಚಯವಾಗಿಯೂ ನೆರವೇರಿಸುವೆನು.”

೪೧—೪೨. ಆಗ ತಂದೆಯು ಸಂತುಷ್ಟಾಂತರಂಗನಾಗಿ ನನಗೆ ಹೇಳತೊಡಗಿದನು. “ನಿನ್ನ ತೀರ್ಥಯಾತ್ರೆಯನ್ನು ಮುಗಿಸಿಕೊಂಡು ಮನೆಗೆ ಬೇಗ

ತಸ್ಮಾನ್ಮುಕ್ತೋ ಮತ್ಪಿತಾ ಮಾಂ ಸಮೇತ್ಯ
ಯಾನಾರೂಢೋ ಹ್ಯಭಿನಂದ್ಯಾಽಽಶಿಷಾ ಚ ।
ಗತೋ ಲೋಕಂ ಶ್ರೀಪತೇರ್ದುರ್ವಿಭಾವ್ಯಂ
ಯಸ್ಮಿನ್ಗತಾ ನ ನಿವರ್ತಂತಿ ಭೂಯಃ ॥ ೪೩ ॥
ತಸ್ಮಾದ್ದಾನಂ ಸರ್ವಶಾಸ್ತ್ರೇಷು ಚೋಕ್ತಂ
ತುಭ್ಯಂ ಪ್ರೋಕ್ತಂ ಧರ್ಮಸಾರಂ ಸುಧರ್ಮ್ಯಂ ।
ಕಿಮನ್ಯತ್ರ ಶ್ರೋತುಮಿಚ್ಛಾ ವದಸ್ವ
ಶ್ರುತ್ವಾ ಸರ್ವಂ ತೇ ವದಾಮೀತಿ ಸತ್ಯಂ ॥ ೪೪ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ದ್ವಿತೀಯೇ ವೈಷ್ಣವಖಂಡೇ ವೈಶಾಖಮಾಸಮಾಹಾತ್ಮ್ಯೇ ನಾರದಾಂಬರೀಷಸಂವಾದೇ
"ಪಿಶಾಚಮೋಕ್ಷಪ್ರಾಪ್ತಿವರ್ಣನಂ" ನಾಮ ಸಪ್ತಮೋಽಧ್ಯಾಯಃ

---

ಒಂದಿರುಗಿ ಸೂರ್ಯಭಗವಾನನು ಮೇಷರಾಶಿಸ್ಥನಾಗಿರುವ ವೈಶಾಖಮಾಸದಲ್ಲಿ ನೀನು ಸಕಲ ಗುಣಗಳಿಂದ ಕೂಡಿದ ಉತ್ತಮವಾನ್ನವನ್ನು ಮಹಾವಿಷ್ಣುವಿಗೆ ನಿವೇದನ ಮಾಡಿ ಒಬ್ಬ ಬ್ರಾಹ್ಮಣೋತ್ತಮನಿಗೆ ದಾನಮಾಡು. ಮಹಾತ್ಮನೆ! ಇದರಿಂದ ವಂಶಸಹಿತನಾದ ನನಗೆ ಮೋಕ್ಷವು ಪ್ರಾಪ್ತವಾಗುವುದು." ಇಂತೆಂದು ತಂದೆಯ ಆಜ್ಞೆಯನ್ನು ಪಡೆದು ನಾನು ನನ್ನ ಯಾತ್ರೆಯನ್ನು ನೆರವೇರಿಸಿ ನನ್ನ ಮನೆಯನ್ನು ಸೇರಿ ವೈಶಾಖಮಾಸವು ಪ್ರಾಪ್ತವಾಗಲು ಯಥೋಕ್ತರೀತಿಯಲ್ಲಿ ಅನ್ನದಾನವನ್ನು ಮಾಡಿದೆನು.

೪೩. ಆ ಸತ್ಕಾರ್ಯದ ಫಲವಾಗಿ ನನ್ನ ತಂದೆಯು ಪಿಶಾಚತ್ವದಿಂದ ಮುಕ್ತನಾಗಿ ದಿವ್ಯ ವಿಮಾನದಲ್ಲಿ ಕುಳಿತು ನನ್ನಲ್ಲಿಗೆ ಬಂದು ಅನೇಕ ಆಶೀರ್ವಾದಗಳಿಂದ ನನ್ನನ್ನು ಅಭಿನಂದನೆಮಾಡಿ ಮನಸ್ಸಿನಿಂದ ಊಹಿಸಲಸಾಧ್ಯವೂ ಪುನರಾವೃತ್ತಿರಹಿತವೂ ಶ್ರೀನಾರಾಯಣನ ವಾಸಸ್ಥಾನವೂ ಆದ ವೈಕುಂಠ ಲೋಕವನ್ನು ಕುರಿತು ತೆರಳಿದನು.

೪೪. ಆದುದರಿಂದ ಸಕಲ ಶಾಸ್ತ್ರಗಳಲ್ಲಿಯೂ ವೈಶಾಖಮಾಸದಲ್ಲಿ ಮಾಡುವ ದಾನವು ಉತ್ತಮವೆಂದು ಉಕ್ತವಾಗಿರುವುದು. ಶ್ರುತಕೀರ್ತಿಯೇ! ಸಮಸ್ತ ದಾನಗಳ ಸಾರವೂ ಉತ್ತಮ ಧರ್ಮವೂ ಆದುದನ್ನು ನಿನಗೆ ಹೇಳಿರುವೆನು. ನಿನಗೆ ಮತ್ತೆ ಯಾವುದನ್ನು ಕೇಳುವ ಇಚ್ಛೆಯಿರುವುದು? ಹೇಳುವವನಾಗು. ಅದನ್ನು ಕೇಳಿ ಸಕಲವನ್ನೂ ಯಥಾರ್ಥವಾಗಿ ನಿರೂಪಿಸುವೆನು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯಿಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಎರಡನೆಯ ವೈಷ್ಣವಖಂಡದ ವೈಶಾಖಮಾಸಮಾಹಾತ್ಮ್ಯದ
ನಾರದಾಂಬರೀಷ ಸಂವಾದದಲ್ಲಿ "ಪಿಶಾಚಮೋಕ್ಷಪ್ರಾಪ್ತಿವರ್ಣನ"ವೆಂಬ
ಏಳನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

# ಅಥಾಷ್ಟಮೋಽಧ್ಯಾಯಃ

### ದಕ್ಷಯಜ್ಞವಿಧ್ವಂಸನ ಪೂರ್ವಕ ಪಾರ್ವತೀ ಜನ್ಮ ಕಾಮದಹನವರ್ಣನಂ

ಮೈಥಿಲ ಉವಾಚ :—

ಬೃಹನ್ನಿಕ್ಷ್ವಾಕುತನಯೋ ಜಲಾಽದಾನಾಚ್ಚ ಚಾತಕಃ ।
ಮಿತ್ರವಾರಮಭವತ್ಪಶ್ಚಾತ್ ಮದ್ಗೃಹೇ ಗೋಧಿಕಾ ತಥಾ ॥ ೧ ॥
ಕರ್ಮಾನುಗುಣಮೇತದ್ಧಿ ಯುಕ್ತಂ ತಸ್ಯಾಕೃತಾತ್ಮನಃ ।
ಸ ತಾಮಸೇವನಾತ್ತಸ್ಯ ಗೃಧ್ರತ್ವಂ ಸಾರಮೇಯತಾ ॥ ೨ ॥
ಸಪ್ತವಾರಮಿತಿಪ್ರೋಕ್ತಂ ತನ್ಮೇ ಭಾತಿ ಚ ನೋಚಿತಂ ।
ಸಂತೋ ನ ದೂಷಿತಾಸ್ತೇನ ನ ತಥಾ ಕೃಪಣಾಪಿಚ ॥ ೩ ॥
ತಸ್ಮಾದಸೇವಿನಸ್ತಸ್ಯ ಫಲಾಽಭಾವೋ ಭವೇದ್ಧ್ರುವಂ ।
ನಾನಾರ್ಥಕರಣಾಭಾವಾದಿದಿಂ ಹಿ ಪರಪೀಡನಂ ॥ ೪ ॥
ಅನಿಮಿತ್ತಮಿದಂ ಕಸ್ಮಾತ್ಕುಯೋನಿತ್ವಮವಾಪ್ತವಾನ್ ।
ತದೇತಂ ಸಂಶಯಂ ಛಿಂಧಿ ಶಿಷ್ಯಸ್ಯಾಽತ್ಮಪ್ರಿಯಸ್ಯ ಚ ॥ ೫ ॥

## ಕನ್ನಡದ ಅನುವಾದ

### ದಕ್ಷಯಜ್ಞಧ್ವಂಸ—ಪಾರ್ವತೀಜನ್ಮ—ಕಾಮದಹನ ವರ್ಣನ

೧. ಶ್ರುತಕೀರ್ತಿಯು ಕೇಳುತ್ತಾನೆ:—“ಎಲೈ ಬ್ರಾಹ್ಮಣೋತ್ತಮನೆ! ಇಕ್ಷ್ವಾಕುತನಯನು ಜಲವನ್ನು ದಾನಮಾಡದಿದ್ದುದರಿಂದ ಚಾತಕಪಕ್ಷಿಯಾಗಿ ಮೂರು ಜನ್ಮಗಳನ್ನು ಪಡೆದು ಬಳಿಕ ನನ್ನ ಮನೆಯಲ್ಲಿ ಹಲ್ಲಿಯಾಗಿ ಜನಿಸಿದನಲ್ಲವೆ.

೨-೩. ಪುಣ್ಯವನ್ನು ಸಂಪಾದಿಸದ ಆತನಿಗೆ ಈ ಜನ್ಮಗಳು ಪೂರ್ವಾರ್ಜಿತ ಕರ್ಮಗಳಿಗನುಗುಣವಾಗಿ ಸಂಭವಿಸಿದುದು ಯುಕ್ತವೇ ಆಗಿರುವುದು. ಆದರೆ ಸತ್ಪುರುಷರನ್ನು ಸೇವಿಸದೆ ಇದ್ದುದರಿಂದ ಗೃಧ್ರವಾಗಿಯೂ, ನಾಯಿಯಾಗಿಯೂ ಏಳು ಜನ್ಮಗಳನ್ನು ಪಡೆದನೆಂದು ಹೇಳಿದೆ. ಅದು ಮಾತ್ರ ನನಗೆ ಉಚಿತವೆಂದು ಕಾಣಲಿಲ್ಲ. ಆತನು ಯಾವ ಸತ್ಪುರುಷರನ್ನೂ ದೂಷಿಸಲಿಲ್ಲ. ಮತ್ತು ದೀನರನ್ನೂ ಅಲ್ಲಗಳೆಯಲಿಲ್ಲ.

೪. ಆದುದರಿಂದ ಸಾಧು ಸೇವೆಯನ್ನು ಮಾಡದಿರುವ ಆತನಿಗೆ ನಿಜವಾಗಿಯೂ ಸತ್ಫಲದ ಅಭಾವವುಂಟಾಯಿತು. ಆದರೆ ಆತನು ಯಾವ ಅಪಕಾರಗಳನ್ನೂ ಯಾರಿಗೂ ಮಾಡಿದವನಲ್ಲ. ಹಾಗೆ ಮಾಡದಿರುವಿಕೆಯಿಂದಲೇ ಪರಪೀಡನವುಂಟಾಗುವುದಿಲ್ಲವಷ್ಟೆ.

೫. ಯಾವ ಕಾರಣವೂ ಇಲ್ಲದೆ ಆತನು ನೀಚ ಜನ್ಮಗಳನ್ನು ಹೇಗೆ

ಇತಿ ರಾಜ್ಞಾ ಸುಸಂಪೃಷ್ಟಃ ಶ್ರುತದೇವೋ ಮಹಾಯಶಾಃ ।
ಸಾಧುಸಾಧ್ವಿತಿ ಸಂಭಾಷ್ಯ ವಚೋಽವ್ಯಾಹರ್ತುಮಾದದೇ ॥ ೬ ॥

ಶ್ರುತದೇವ ಉವಾಚ :—

ಶೃಣು ರಾಜನ್ಪ್ರವಕ್ಷ್ಯಾಮಿ ಯತ್ಪೃಷ್ಟಂ ತು ತ್ವಯಾಽನಘ ।
ಶಿವಾಯೈ ಚ ಶಿವೇನೋಕ್ತಂ ಕೈಲಾಸಶಿಖರೇಽಮಲೇ ॥ ೭ ॥
ಸೃಷ್ಟ್ವೇಮಾನ್ಸಕಲಾನ್ಲೋಕಾನ್ಪರಸ್ತತ್ರೇಷಾಮವಸ್ಥಿತಿಂ ।
ಆಮುಷ್ಮಿಕೀಮೈಹಿಕೀಂ ಚ ದ್ವಿವಿಧಾಂ ಪರ್ಯಕಲ್ಪಯತ್ ॥ ೮ ॥
ಹೇತುತ್ರಯಂ ಚ ಪ್ರತ್ಯೇಕಂ ಹೇತುಸ್ಥಿತ್ಯೈ ಮಹಾಪ್ರಭುಃ ।
ಜಲಸೇವಾ ಚಾನ್ನಸೇವಾ ಸೇವಾ ಚೈವೌಷಧಸ್ಯ ಚ ॥ ೯ ॥
ಯತ್ರ ಚೈತೇ ಮಹಾಭಾಗ ಹ್ಯೈಹಿಕಸ್ಥಿತಿಹೇತವಃ ।
ಏವಮಾಮುಷ್ಮಿಕೇ ರಾಜಂಸ್ತ್ರಯ ಏವೇರಿತಾಃ ಶ್ರುತೌ ॥ ೧೦ ॥

ಪಡೆವನು? (ಎಂದರೆ ಅಭಾವರೂಪವಾದ ಅಕರಣದಿಂದ ಭಾವರೂಪವಾದ ಮುಯೋಗಸಿಯು ಆತನಿಗೆ ಹೇಗೆ ಪ್ರಾಪ್ತವಾಯಿತು?) ನಿನ್ನ ಶಿಷ್ಯನೂ, ಪ್ರೀತಿ ಪಾತ್ರನೂ ಆದ ನನಗೆ ಈ ಸಂಶಯವುಂಟಾಗಿರುವುದು. ಅದನ್ನು ನೀನು ಪರಿಹರಿಸಬೇಕು."

೬-೭. ಇಂತೆಂದು ರಾಜನಿಂದ ಕೇಳಲ್ಪಟ್ಟ ಮಹಾ ಮತಿಯಾದ ಶ್ರುತ ದೇವನು ಅನೇಕ ಸಾಧುವಾದಗಳಿಂದ ಆತನನ್ನು ಹೊಗಳಿ ಆತನ ಪ್ರಶ್ನೆಗಳಿಗೆ ಉತ್ತರಗಳನ್ನು ಹೇಳಲುಪಕ್ರಮಿಸಿದನು. ಶ್ರುತದೇವನು ಹೇಳುತ್ತಾನೆ:— "ಪಾಪರಹಿತನಾದ ಎಲೈ ರಾಜನೆ! ನೀನು ಕೇಳಿದ ಪ್ರಶ್ನೆಗಳಿಗೆ ಉತ್ತರವನ್ನು ಹೇಳುವೆನು, ಕೇಳು. ಈ ವಿಷಯವನ್ನೇ ಮುನ್ನು ನಿರ್ಮಲವಾದ ಕೈಲಾಸಶಿಖರ ದಲ್ಲಿ ಪರಮೇಶ್ವರನು ಶಿವೆಯಾದ ಪಾರ್ವತಿಗೆ ತಿಳಿಸಿದನು.

೮. ಪರಮೇಶ್ವರನು ಈ ಲೋಕಗಳೆಲ್ಲವನ್ನೂ ಸೃಷ್ಟಿಮಾಡಿ ಬಳಿಕ ಅವುಗಳ ಸ್ಥಿರೀಕರಣಕ್ಕಾಗಿ ಐಹಿಕ ಮತ್ತು ಆಮುಷ್ಮಿಕಗಳೆಂಬ ಎರಡು ವಿಧಗಳಾದ ಸಾಧನಗಳನ್ನು ಕಲ್ಪಿಸಿಕೊಟ್ಟನು.

೯. ಮಹಾಸ್ವಾಮಿಯಾದ ಆತನು ಒಂದೊಂದಕ್ಕೂ ಮೂರು ಮೂರು ಹೇತುಗಳನ್ನು ನಿರ್ದೇಶಮಾಡಿರುವನು. ಈ ಲೋಕದಲ್ಲಿ ದೇಹಧಾರಣಾದಿ ಧರ್ಮಗಳು ನಡೆಯಲು ಜಲಸೇವನೆ, ಅನ್ನಸೇವನೆ ಮತ್ತು ಔಷಧಸೇವನೆಗಳೆಂಬ ಮೂರು ಆಹಾರಗಳು ಕಾರಣಗಳಾಗಿರುವುವು.

೧೦. ಎಲೈ ಮಹಾತಪನೆ! ಐಹಿಕಭೋಗಗಳ ಅನುಭವಗಳಿಗೆ ಈ ಮೂರೂ ಹೇಗೆ ಕಾರಣಗಳಾಗಿರುವುವೊ, ಹಾಗೆಯೇ ಪರಲೋಕಗಳ ಭೋಗಗಳ ಪ್ರಾಪ್ತಿಗೂ ಮೂರು ಸಾಧನಗಳಿರುವುವೆಂದು ಶ್ರುತಿಗಳು ಸಾರುತ್ತಿರುವುವು.

ಸಾಧುಸೇವಾ ವಿಷ್ಣುಸೇವಾ ಸೇವಾ ಧರ್ಮಪಥಸ್ಯ ಚ ।
ಯತ್ರ ಚೈತೇ ಮಹಾಭಾಗ ಹ್ಯೈಹಿಕಸ್ಥಿತಿಹೇತವಃ ॥ ೧೧ ॥
ಗೃಹೇ ಸಂಪಾದಿತಂ ಯದ್ವಾ ಪಾಥೇಯಂ ಪದ್ಧತೌ ಯಥಾ ।
ಐಹಿಕಾ ಹೇತವೋ ರಾಜನ್ ಸದ್ಭಿಃ ಸಂಪಾದಿತಾರ್ಥದಾಃ ॥ ೧೨ ॥
ಕಿಂ ಚೇಷ್ಟಮಪಿ ಸಾಧೂನಾಂ ಮನಸೋ ಯದಿ ದುಸ್ಸಹಂ ।
ಕುತಶ್ಚಿತ್ಕಾರಣಾದ್ರಾಜಂಸ್ತಚ್ಚಾನರ್ಥಾಯ ಕಲ್ಪತೇ ॥ ೧೩ ॥
ಅಪ್ರಿಯಂ ಕಿಮು ವಕ್ತವ್ಯಂ ದುಃಖಹೇತುರಿತಿಸ್ಫುಟಂ ।
ಅತ್ರೈವೋದಾಹರಂತೀಮಮಿತಿಹಾಸಂ ಪುರಾತನಂ ॥ ೧೪ ॥
ಪಾಪಘ್ನಂ ಮಹದಾಶ್ಚರ್ಯಂ ಶೃಣ್ವತಾಂ ರೋಮಹರ್ಷಣಂ ।
ಯಜ್ಞದೀಕ್ಷಾಮುಪಗತಃ ಪುರಾ ದಕ್ಷಃ ಪ್ರಜಾಪತಿಃ ॥ ೧೫ ॥
ಆಹ್ವಾನಾರ್ಥಂ ಭೂತಪತೇರಗಮದ್ರಜತಾಚಲಂ ।
ತಂ ದೃಷ್ಟ್ವಾ ನೋತ್ಥಿತಃ ಶಂಭುಸ್ತಸ್ಯೈವ ಹಿತಕಾಮ್ಯಯಾ ॥ ೧೬ ॥

---

೧೧. ಸಾಧುಸೇವೆ, ವಿಷ್ಣುಪೂಜೆ ಮತ್ತು ಧರ್ಮಮಾರ್ಗತತ್ಪರತೆ ಎಂಬುವುಗಳೇ ಆ ಮೂರು ಸಾಧನಗಳು. ಉತ್ತಮ ಲೋಕಗಳ ಪ್ರಾಪ್ತಿಗಾಗಿ ಇವುಗಳೇ ಪೂರ್ವಕಾಲದಲ್ಲಿ ಹಿರಿಯರಿಂದ ಸಂಪಾದಿಸಲ್ಪಟ್ಟಿರುವುವು.

೧೨–೧೩. ಎಲೈ ರಾಜೇಂದ್ರನೆ! ಮನೆಯಲ್ಲಿ ಸಂಪಾದಿಸಿ ಕಟ್ಟಿಕೊಂಡ ಬುತ್ತಿಯನ್ನವು ದಾರಿಯನ್ನು ನಡೆಯುವವನಿಗೆ ಮಧ್ಯಮಾರ್ಗದಲ್ಲಿ ಹೇಗೆ ಅನುಕೂಲವಾಗುವುದೊ, ಹಾಗೆಯೇ ಈ ಲೋಕದಲ್ಲಿ ಸಂಪಾದಿಸಿದ ಪುಣ್ಯಪಾಪಗಳು ಪರಲೋಕಗಳಲ್ಲಿ ಸುಖದುಃಖಗಳ ಅನುಭವಗಳಿಗೆ ಹೇತುಗಳಾಗಿರುವುವು. ಅದರಿ ನಮಗೆ ಇಷ್ಟವಾದ ಒಂದು ಕಾರ್ಯವು ಯಾವುದಾದರೂ ಕಾರಣದ ಮೂಲಕ ಸಾಧುಗಳ ಮನಸ್ಸಿಗೆ ಸಹಿಸಲಶಕ್ಯವಾದುದಾದರೆ ಅದನ್ನು ಮಾಡಬಾರದು. ಅದರಿಂದ ನಿಶ್ಚಯವಾಗಿಯೂ ಅನರ್ಥಗಳೇ ಉಂಟಾಗುವುವು.

೧೪. ಇನ್ನು ಅವರಿಗೆ ಕೇವಲ ಪ್ರತಿಕೂಲಗಳನ್ನು ಮಾಡುವ ವಿಷಯದಲ್ಲಿ ಹೇಳತಕ್ಕದ್ದೇನಿದೆ. ಅವುಗಳಿಂದ ದುಃಖವುಂಟಾಗುವುದು ಸ್ಪಷ್ಟವಾಗಿಯೇ ಇರುವುದು. ಈ ವಿಷಯದಲ್ಲಿಯೇ ಮುಂದೆ ಹೇಳುವ ಪುರಾತನವಾದ ಇತಿಹಾಸವೊಂದನ್ನು ಪ್ರಾಜ್ಞರು ಉದಹರಿಸಿರುವರು.

೧೫–೧೬. ಈ ಆಖ್ಯಾನವು ಸಕಲ ಪಾಪಗಳನ್ನೂ ಕಳೆಯುವುದು. ಅತ್ಯಂತ ಆಶ್ಚರ್ಯಗಳಿಂದ ಕೂಡಿರುವುದು. ಕೇಳುವವರಿಗೆ ರೋಮಾಂಚವನ್ನುಂಟು ಮಾಡುವಂತಿರುವುದು. ಪೂರ್ವಕಾಲದಲ್ಲಿ ಪ್ರಜಾಪತಿಯಾದ ದಕ್ಷಬ್ರಹ್ಮನು ಒಂದು ಯಜ್ಞವನ್ನು ಮಾಡುವ ಕುತೂಹಲವುಳ್ಳವನಾಗಿ ಭೂತನಾಥನಾದ ಪರಮೇಶ್ವರನನ್ನು ಆಹ್ವಾನಿಸಲು ಕೈಲಾಸಪರ್ವತಕ್ಕೆ ಹೊರಟನು. ಆತನನ್ನು

ಸರ್ವಾಮರಗುರುಶ್ಚಾಹಂ ಛಂದೋಗಮ್ಯಃ ಸನಾತನಃ ।
ಭೃತ್ಯಾ ಹ್ಯೇತೇ ಬಲಿಹರಾಶ್ಚಂದ್ರೇಂದ್ರಾದ್ಯಾಃ ಸುರೇಶ್ವರಾಃ ॥ ೧೭ ॥
ಸ್ವಾಮೀ ಭೃತ್ಯಾಯ ನೋತ್ತಿಷ್ಠೇತ್ತ್ವಥ ಭಾರ್ಯಾಯೈ ಪತಿಸ್ತಥಾ ।
ಗುರುಃ ಶಿಷ್ಯಾಯ ನೋತ್ತಿಷ್ಠೇದಿತಿ ಶಾಸ್ತ್ರವಿದಾಂ ಮತಂ ॥ ೧೮ ॥
ನ ಸಂಬಂಧೋ ಗುರುತ್ವೇ ಚ ಕಾರಣಂ ತ್ವಿತಿ ವೈ ಶ್ರುತಿಃ ।
ಬಲಂ ಜ್ಞಾನಂ ತಪಃ ಶಾಂತಿರ್ಯತ್ರ ಚೈವಾಧಿಕಂ ಭವೇತ್ ॥ ೧೯ ॥
ಸ ಗುರುಶ್ಚೇತರೇಷಾಂ ಚ ನೀಚಾ ಈಯುಶ್ಚ ಪ್ರೇಷ್ಯಕಾಂ ।
ಉತ್ತಿಷ್ಠಂತಿ ಚ ಸ್ವಾಮ್ಯಾದ್ಯಾ ಭೃತ್ಯಾದೀನ್ಯದಿ ಚಾಗ್ರಹಾತ್ ॥ ೨೦ ॥
ಆಯುರ್ವಿತ್ತಂ ಯಶಸ್ತೇಷಾಂ ಸದ್ಯೋ ನಶ್ಯತಿ ಸಂತತಿಃ ।
ತಸ್ಮಾಹಂತು ನೋತ್ತಿಷ್ಠೇ ಪ್ರಿಯೋಽಯಂ ಶ್ವಶುರೋ ಮಮ ॥ ೨೧ ॥
ಇತಿ ತಸ್ಯ ಹಿತಾನ್ವೇಷೀ ನೋಚ್ಚಚಾಲಾಸನಾದ್ವಿಭುಃ ।
ನೋತ್ಥಿತಂ ತು ಮೃಡಂ ದೃಷ್ಟ್ವಾ ಕುಪಿತೋಽಭೂತ್ಪ್ರಜಾಪತಿಃ ॥ ೨೨ ॥

---

ಕಂಡು ಆತನಿಗೆ ಹಿತವನ್ನುಂಟುಮಾಡಬೇಕೆಂಬ ಬಯಕೆಯಿಂದಲೇ ಶಿವನು ಪ್ರತ್ಯುತ್ಥಾನವನ್ನು ಮಾಡಲಿಲ್ಲ.

೧೭. "ನಾನು ಸಮಸ್ತ ದೇವತೆಗಳಿಗೂ ಪೂಜ್ಯನಾಗಿರುವೆನು. ವೇದಪ್ರತಿಪಾದ್ಯನಾಗಿರುವೆನು; ಸನಾತನನಾಗಿರುವೆನು. ಚಂದ್ರ, ಮಹೇಂದ್ರನೇ ಮೊದಲಾದ ಸಕಲ ದೇವೋತ್ತಮರೂ ನನಗೆ ಭೃತ್ಯರಾಗಿ ಕಪ್ಪಕಾಣಿಕೆಗಳನ್ನು ತರುತ್ತಿರುವರು.

೧೮. ಸ್ವಾಮಿಯು ಭೃತ್ಯನು ಬಂದಾಗ ಎದ್ದು ಸ್ವಾಗತಿಸಬಾರದು. ಹೆಂಡತಿಗಾಗಿ ಗಂಡನು ಇದಿರೇಳಬಾರದು. ಗುರುವು ಶಿಷ್ಯನನ್ನು ಎದ್ದು ಇದಿರುಗೊಳ್ಳಲಾಗದು. ಇದೇ ಶಾಸ್ತ್ರಜ್ಞರ ನಿಶ್ಚಿತವಾದ ಅಭಿಪ್ರಾಯವಾಗಿರುವುದು.

೧೯–೨೧. ಪೂಜ್ಯಾಪೂಜ್ಯತೆಗಳ ನಿರ್ಣಯದಲ್ಲಿ ಬಂಧುತ್ವವು ಕಾರಣವಾಗಲಾರದೆಂದು ವೇದಗಳೂ ಹೇಳುತ್ತಿರುವುವಲ್ಲವೆ. ಬಲ, ಜ್ಞಾನ, ತಪಸ್ಸು, ಮನಶ್ಶಾಂತಿಗಳೆಂಬ ಸದ್ಗುಣಗಳು ಯಾರಲ್ಲಿ ಅಧಿಕವಾಗಿ ಕಾಣುತ್ತಿರುವುವೋ, ಅವನೇ ಇತರ ಮನುಷ್ಯರಿಗೆ ಗುರುಸ್ಥಾನೀಯನು. ಇತರರೆಲ್ಲರೂ ಆತನಿಗೆ ಭೃತ್ಯತ್ವವನ್ನು ಹೊಂದುವರು. ಸೇವಕರೇ ಮೊದಲಾದವರನ್ನು ಕಂಡು ಸ್ವಾಮ್ಯಾದಿ ಉತ್ಕೃಷ್ಟರು ಆಸನಗಳಿಂದೆದ್ದು ಸತ್ಕರಿಸುವವರಾದರೆ ಇಬ್ಬರ ಆಯುಸ್ಸುಗಳೂ, ಧನವೂ, ಯಶಸ್ಸೂ, ಪುತ್ರಾದಿಸಂತಾನವೂ ಶೀಘ್ರವಾಗಿಯೇ ನಾಶವನ್ನೈದುವುವು. ಆದುದರಿಂದ ಈಗ ನಾನು ಎದ್ದು ದಕ್ಷನನ್ನು ಸ್ವಾಗತಿಸುವುದಿಲ್ಲ. ಮೇಲಾಗಿ ಆತನು ನನಗೆ ಪ್ರಿಯನಾದ ಮಾವನೂ ಆಗಿರುವನಲ್ಲವೆ?"

೨೨. ಇಂತೆಂದು ಸರ್ವವ್ಯಾಪಿಯಾದ ಸ್ವಾಮಿಯು ದಕ್ಷನ ಹಿತವನ್ನೇ

ಅನಿಂದದ್ಬಹುಧಾ ತಸ್ಯೈ ಪುರತೋ ಗಿರಿಜಾಪತೇಃ ।
ಅಹೋ ದರ್ಪಮಹೋ ದರ್ಪಂ ದರಿದ್ರಸ್ಯಾಕೃತಾತ್ಮನಃ ॥ ೨೩ ॥
ಯಸ್ಯ ವಿತ್ತಂ ಬಹುವಯಾ ವೃಷಶ್ಚರ್ಮಾವಶೇಷಿತಃ ।
ಅತ ಏವ ಕಪಾಲಾಸ್ಥಿಧರಃ ಪಾಖಂಡಗೋಚರಃ ॥ ೨೪ ॥
ವೃಥಾಽಹಂಕಾರಿಣೋ ದೈವಂ ಕುತೋ ದಾಸ್ಯತಿ ಮಂಗಲಂ ।
ಲೋಕೇ ಕೃತ್ಯೇನ ಕರ್ಮಾಣಿ ಶುಚೀನೀತಿ ವಿದೋ ವಿದುಃ ॥ ೨೫ ॥
ಧತ್ತೇ ದರಿದ್ರಃ ಶೀತಾರ್ತಃ ಪವಿತ್ರಂ ಚ ಗಜಾಜಿನಂ ।
ವೇಶ್ಮ ಶ್ಮಶಾನಂ ಯಸ್ಯ ಸ್ಯಾದ್ಭುಜಂಗಃ ಕಿಲ ಭೂಷಣಂ ॥ ೨೬ ॥
ನ ಧೀರತಾಽಪಿ ಚ ಜ್ಞಾನಂ ವೃಕಾತ್ತಸ್ಮಾತ್ಪಲಾಯಿತೇ ।
ಭೂತಪ್ರೇತಪಿಶಾಚಾದಿದುರ್ಜನೈಃ ಸಂಗತೋಽನಿಶಂ ॥ ೨೭ ॥

ಕೋರುವವನಾಗಿ ತನ್ನ ಆಸನವನ್ನು ಬಿಟ್ಟು ಮೇಲಕ್ಕೇಳಲಿಲ್ಲ. ಎದ್ದು ಸತ್ಕರಿಸದ ಪರಮೇಶ್ವರನನ್ನು ಕಂಡು ಪ್ರಜಾಪತಿಯಾದ ದಕ್ಷನು ಅತ್ಯಂತ ಕೋಪಗೊಂಡವನಾದನು.

೨೩. ಮತ್ತು ಗಿರಿಜಾನಾಥನ ಇದಿರಿನಲ್ಲಿಯೇ ನಿಂತುಕೊಂಡು ಆತನನ್ನು ಅನೇಕ ವಿಧವಾಗಿ ನಿಂದಿಸಿದನು. " ದರಿದ್ರನೂ ಆತ್ಮಸಂಸ್ಕಾರವಿಲ್ಲದವನೂ ಆದ ಇವನ ಗರ್ವವು ಎಷ್ಟರಮಟ್ಟಿಗಿರುವುದು !

೨೪. ಈತನ ಆಸ್ತಿಯೆಲ್ಲ ಬಹಳ ಮುದಿಯಾಗಿ ಕೇವಲ ಅಸ್ಥಿ ಚರ್ಮಗಳಿಂದ ಕೂಡಿದ ಒಂದು ಎತ್ತು ಮಾತ್ರವಾಗಿರುವುದು. ಆದುದರಿಂದಲೇ ಈತನು ಹೆಣದ ಕಪಾಲವನ್ನು ಕೈಯಲ್ಲಿ ಹಿಡಿದು, ಮೂಳೆಗಳ ಮಾಲೆಗಳನ್ನು ಧರಿಸಿ ತಂತ್ರಮಾರ್ಗಾನುಸಾರಿಗಳಾದ ಪಾಖಂಡರಿಗೆ ದೃಗ್ಗೋಚರನಾಗುತ್ತಿರುವನು.

೨೫. ವ್ಯರ್ಥವಾಗಿಯೇ ಅಹಂಕಾರಗೊಳ್ಳುತ್ತಿರುವ ಇವನಿಗೆ ದೈವವು ಹೇಗೆ ಮಂಗಳಗಳನ್ನುಂಟುಮಾಡಬಲ್ಲುದು ? ಲೋಕದಲ್ಲಿ ಆಚರಣೆಯಿಂದಲೇ ಕರ್ಮಗಳು ಶುಚಿ ಅಶುಚಿಗಳೆಂದು ಬಲ್ಲವರಿಂದ ನಿರ್ಧರಿಸಲ್ಪಡುವುವು.

೨೬. ಇವನು ದರಿದ್ರನಾದುದರಿಂದ ಶೀತವನ್ನು ತಡೆಯಲಾರದೆ ಆನೆಯ ಚರ್ಮವನ್ನೇ ಪವಿತ್ರವೆಂದು ತಿಳಿದು ಹೊದ್ದುಕೊಂಡಿರುವನು. ಇವನಿಗೆ ಸ್ಮಶಾನವೇ ನೆಲೆವನೆಯಾಗಿರುವುದು. ಹಾವುಗಳೇ ಇವನ ಅಂಗಗಳಿಗೆ ಭೂಷಣಗಳಲ್ಲವೆ.

೨೭. ಇವನು ತೋಳದಂತೆ ಸರ್ವಭಕ್ಷಕನಾಗಿರುವುದರಿಂದಲೇ ಧೈರ್ಯವೂ ಜ್ಞಾನವೂ ಇವನನ್ನು ಬಿಟ್ಟು ಹೋಗಲಾರದಾದುವು. ಇವನು ಯಾವಾಗಲೂ ಭೂತಗಳು, ಪ್ರೇತಗಳು, ಪಿಶಾಚಗಳು ಮುಂತಾದ ನೀಚ ಜಂತುಗಳಿಂದಲೇ ಪರಿವಾರಿತನಾಗಿರುವನು.

ನ ಕುಲಂ ಶ್ರೂಯತೇ ಕ್ವಾಽಪಿ ನಾಽಸೌ ವೈ ಸಾಧುಸಮ್ಮತಃ ।
ವೃಥಾ ವಿಶ್ರಂಭಿತಃ ಪೂರ್ವಂ ನಾರದೇನ ದುರಾತ್ಮನಾ ॥ ೨೮ ॥
ಯೇನಾಽಹಂ ಬೋಧಿತಃ ಪ್ರಾದಾಂ ಕನ್ಯಾಂ ಚೈತಾಂ ಸತೀಂ ಮನು ।
ಪೃಥಗ್ಧರ್ಮಗತಾ ಚೈಷಾ ಸುಖಂ ವಸತು ತದ್ಗೃಹೇ ॥ ೨೯ ॥
ನಾಸ್ಮಾಭಿಃ ಶ್ಲಾಘನೀಯೋಽಸೌ ಮತ್ಸುತಾಽಪಿ ಕಥಂಚನ ।
ಯಥಾ ಕುಲಾಲಕಲಶಶ್ಚಂಡಾಲಸ್ಯ ವಶಂಗತಃ ॥ ೩೦ ॥
ಇತಿ ದಕ್ಷೋ ವಿಮೂಢಾತ್ಮಾ ಹ್ಯುಮಾಂ ನಾಹೂಯ ತಂ ಮೃಡಂ ।
ಬಹುಧಾ ತಂ ವಿನಿರ್ಭರ್ತ್ಸ್ಯ ತೂಷ್ಣೀಮೇವ ಗೃಹಂ ಯಯೌ ॥ ೩೧ ॥
ಯಜ್ಞವಾಟಂ ತತೋ ಗತ್ವಾ ಋತ್ವಿಗ್ಭಿರ್ಮುನಿಭಿಃ ಸಹ ।
ಈಜೇ ಯಜ್ಞಂ ವಿಧಾನೇನ ನಿಂದನ್ನೇವ ಮಹಾಪ್ರಭುಂ ॥ ೩೨ ॥
ಬ್ರಹ್ಮವಿಷ್ಣೂ ವಿಹಾಯೈವ ಸರ್ವೇ ದೇವಾಃ ಸಮಾಗತಾಃ ।
ಸಿದ್ಧಚಾರಣಗಂಧರ್ವಾ ಯಕ್ಷರಾಕ್ಷಸಕಿನ್ನರಾಃ ॥ ೩೩ ॥

೨೮. ಇವನ ಕುಲವು ಯಾವುದೆಂಬುದನ್ನು ನಾವು ಎಲ್ಲಿಯೂ ಕೇಳಿದುದಿಲ್ಲ. ಇವನು ಎಂದಿಗೂ ಸಾಧುಸಂತರಿಗೆ ಸಮ್ಮತನಾದವನಲ್ಲ. ಪೂರ್ವದಲ್ಲಿ ದುರಾತ್ಮನಾದ ನಾರದ ಮುನಿಯ ವಿಶ್ವಾಸದ ವಾಕ್ಯಗಳಿಗೆ ವ್ಯರ್ಥವಾಗಿಯೇ ಕಿವಿಗೊಟ್ಟೆನು.

೨೯. ಆತನ ಉಪದೇಶವನ್ನನುಸರಿಸಿಯೇ ನಾನು ನನ್ನ ಪುತ್ರಿಯಾದ ಸತೀದೇವಿಯನ್ನು ಇವನಿಗೆ ಕೊಟ್ಟೆನು. ಈಗ ಆಕೆಯು ಗಂಡನ ಮನೆಯ ಧರ್ಮಗಳನ್ನೇ ಅನುಸರಿಸಬೇಕಾದುದು ಕರ್ತವ್ಯವಾಗಿರುವುದು. ಆಕೆಯು ಆ ಮನೆಯಲ್ಲಿಯೇ ಸುಖವಾಗಿ ವಾಸಮಾಡಲಿ.

೩೦. ನಮಗೆ ಮಾತ್ರ ಇವನು ಯಾವ ವಿಧದ ಸತ್ಕ್ರಿಯೆಗೂ ಅರ್ಹನಲ್ಲ. ನನ್ನ ಮಗಳೂ ಹಾಗೆಯೇ ನಮ್ಮ ಸನ್ಮಾನಕ್ಕೆ ಅನರ್ಹಳು. ಕುಂಬಾರನಿಂದ ಮಾಡಲ್ಪಟ್ಟ ಮಣ್ಣಿನ ಮಡಿಕೆಯು ಚಂಡಾಲನ ವಶಕ್ಕೆ ಹೋದಮೇಲೆ ಯಾರಾದರೂ ಅದನ್ನು ಮತ್ತೆ ಪರಿಗ್ರಹಿಸಬಹುದೆ?"

೩೧. ಇಂತೆಂದು ಬುದ್ಧಿಶೂನ್ಯನಾದ ಆ ದಕ್ಷಪ್ರಜಾಪತಿಯು ಆಕೆಯನ್ನೂ ಮಹೇಶ್ವರನನ್ನೂ ಯಜ್ಞಕ್ಕೆ ಆಹ್ವಾನಿಸದೆಯೇ ಆತನನ್ನು ಅನೇಕ ವಿಧವಾಗಿ ನಿಂದಿಸಿ ಸುಮ್ಮನೆ ಮನೆಗೆ ಹಿಂದಿರುಗಿದನು.

೩೨. ಬಳಿಕ ಯಜ್ಞಶಾಲೆಯನ್ನು ಪ್ರವೇಶಮಾಡಿ ಋತ್ವಿಜರಿಂದಲೂ ಮುನಿವರ್ಯರಿಂದಲೂ ಕೂಡಿದವನಾಗಿ ಮಹಾದೇವನನ್ನು ನಿಂದಿಸುತ್ತಲೇ ಕಲ್ಪಸೂತ್ರಗಳಲ್ಲಿ ಹೇಳಿರುವ ಪ್ರಕಾರವಾಗಿ ಯಜ್ಞವನ್ನು ನೆರವೇರಿಸಿದನು.

೩೩. ಆ ಯಜ್ಞಕ್ಕೆ ಬ್ರಹ್ಮವಿಷ್ಣುಗಳಿಬ್ಬರನ್ನುಳಿದ ಸಕಲ ದೇವತೆಗಳೂ

ತದಾ ದೇವೀ ಸತೀ ಪುಣ್ಯಾ ಸ್ತ್ರೀಚಾಂಚಲ್ಯಾತ್ಪ್ರಲೋಭಿತಾ ।
ಉತ್ಸುಕಾಚ್ಚೋತ್ಸವಂ ದ್ರಷ್ಟುಂ ಬಂಧೂಂಸ್ತತ್ರ ಸಮಾಗತಾನ್ ॥ ೩೪ ॥
ನಿವಾರ್ಯಮಾಣಾ ರುದ್ರೇಣ ತರಲಾ ಸ್ತ್ರೀಸ್ವಭಾವತಃ ।
ಪ್ರತ್ಯುಕ್ತಾಽಪಿ ಪುನಶ್ಚೈವ ಗಂತವ್ಯಮಿತಿ ನಿಶ್ಚಿತಾ ॥ ೩೫ ॥
ಸ ನಿಂದತಿ ಸಭಾಮಧ್ಯೇ ಸದಾ ಮಾಂ ವರವರ್ಣಿನಿ ।
ತಚ್ಛ್ರುತ್ವಾಸಹ್ಯಂ ಚ ತ್ವಂ ಕೃತ್ವಾ ಕಾಯಂ ಸತ್ಯಂ ಪ್ರಹಾಸ್ಯಸಿ ॥ ೩೬ ॥
ಅಸಹ್ಯಮಪಿ ಸೋಢವ್ಯಂ ಮಯಾಽಪಿ ಗೃಹಮಿಚ್ಛತಾ ।
ಮಯಾ ಯಥಾ ಕೃತಂ ದೇವಿ ತಥಾ ತ್ವಂ ನೈವ ವರ್ತಸೇ ॥ ೩೭ ॥
ತಸ್ಮಾನ್ಮಾಗಚ್ಛ ಶಾಲಾಂ ವೈ ನ ಶುಭಂ ತು ಭವೇದ್ಧ್ರುವಂ ।
ಇತ್ಯೇವಂ ಬೋಧಿತಾ ದೇವೀ ಚಾಪಲ್ಯಂ ಪುನರಾಗಮತ್ ॥ ೩೮ ॥

---

ಬಂದು ನೆರೆದಿದ್ದರು. ಸಮಸ್ತ ಸಿದ್ಧರೂ, ಚಾರಣರೂ, ಗಂಧರ್ವರೂ, ಯಕ್ಷರೂ ರಾಕ್ಷಸರೂ, ಕಿನ್ನರರೂ ಪ್ರಾಪ್ತರಾದರು.

೩೪. ಆಗ ಪರಮಪಾವನೆಯಾದ ಸತೀದೇವಿಯು ಸ್ತ್ರೀಯರಿಗೆ ಸ್ವಾಭಾವಿಕವಾದ ಚೌರುಮನೆಯ ವಾತ್ಸಲ್ಯದಿಂದ ಕೂಡಿದವಳಾಗಿ ಯಜ್ಞಮಹೋತ್ಸವವನ್ನೂ ಅದಕ್ಕಾಗಿ ನೆರೆದಿರುವ ತನ್ನ ಬಂಧುಬಳಗದವರನ್ನೂ ನೋಡಬೇಕೆಂಬ ಪ್ರಲೋಭದಿಂದಲೂ, ಔತ್ಸುಕ್ಯದಿಂದಲೂ ಕೂಡಿದ್ದಳು.

೩೫. ಮಹೇಶ್ವರನು ಆಕೆಯನ್ನು ಬೇಡವೆಂದು ತಡೆದರೂ ಮತ್ತೆ ಮತ್ತೆ ಆತನಿಂದ ಪ್ರತ್ಯುಕ್ತಿಗಳನ್ನು ಕೇಳಿದರೂ ಸ್ತ್ರೀ ಚಾಪಲ್ಯದಿಂದ ಪ್ರೇರಿತಳಾಗಿ ಅಲ್ಲಿಗೆ ಹೋಗಲೇಬೇಕೆಂಬುದಾಗಿ ನಿಶ್ಚಯವನ್ನು ಮಾಡಿದಳು.

೩೬. "ಎಲೌ ಮಂಗಳಾಂಗಿಯೆ! ದಕ್ಷಬ್ರಹ್ಮನು ನನ್ನನ್ನು ಯಾವಾಗಲೂ ಸಭಾ ಮಧ್ಯದಲ್ಲಿ ನಿಂದಿಸುತ್ತಿರುವನು. ಆ ನಿಂದೆಯು ನಿನಗೆ ಸಹಿಸಲಸಾಧ್ಯವಾಗಿರುವುದು. ಅದನ್ನು ಕೇಳಿ ನೀನು ನಿಜವಾಗಿಯೂ ದೇಹವನ್ನು ಬಿಡುವೆಯೆಂಬುದು ಭಾವ್ಯವು.

೩೭. ನನ್ನ ವಿಷಯದಲ್ಲಿಯಾದರೊ, ಸಂಸಾರದ ಒಗ್ಗಟ್ಟನ್ನು ಅಪೇಕ್ಷಿಸುತ್ತಿರುವೆನಾದುದರಿಂದ ಆತನ ಮಾತುಗಳು ಎಷ್ಟೇ ತಿರಸ್ಕಾರಗಳಾದರೂ ಸಹಿಸಿಕೊಂಡಿರುವೆನು. ದೇವಿ! ನಾನು ಹೇಗೆ ನಡೆದುಕೊಳ್ಳುತ್ತಿರುವೆನೊ, ಹಾಗೆಯೇ ನೀನು ವರ್ತಿಸುತ್ತಲೇ ಇಲ್ಲವಲ್ಲ.

೩೮. ಆದುದರಿಂದ ನೀನು ಆ ದಕ್ಷನ ಯಜ್ಞಶಾಲೆಯನ್ನು ಸೇರಬೇಡ. ಅದರಿಂದ ಶುಭವುಂಟಾಗುವುದಿಲ್ಲವೆಂಬುದು ನಿಶ್ಚಯವು." ಇಂತೆಂದು ಪರಮೇಶ್ವರನು ಬಹು ವಿಧವಾಗಿ ಬೋಧಿಸಿದರೂ ದೇವಿಯು ಮತ್ತೆ ಚಾಪಲ್ಯವುಳ್ಳವಳಾದಳು.

ನಿಶ್ಚಕ್ರಾಮ ಸತೀ ಗೇಹಾದೇಕಾಕೀ ಪಾದಚಾರಿಣೀ ।
ತಾಂ ದೃಷ್ಟ್ವಾ ವೃಷಸ್ತೂಷ್ಣೀಂ ಪೃಷ್ಠೇ ದೇವೀಮುವಾಹ ಸಃ ॥ ೪೯ ॥
ಕೋಟಿಶೋ ಭೂತಸಂಘಾಶ್ಚ ಹ್ಯನುಜಗ್ಮುಃ ಸತೀಂ ತದಾ ।
ಯಜ್ಞವಾಟಂ ತು ಸಾ ಗತ್ವಾ ಪತ್ನೀಶಾಲಾಂ ಯಯೌ ಪುರಾ ॥ ೫೦ ॥
ತೂಷ್ಣೀಮಾಸ ಸತೀಂ ದೃಷ್ಟ್ವಾ ಖೇದಾತ್ತಸ್ಮಾದ್ವಿನಿರ್ಗತಾ ।
ಪತಿವಾಕ್ಯಂ ತು ಸಂಸ್ಮೃತ್ಯ ಜಗಾಮೋತ್ತರವೇದಿಕಾಂ ॥ ೫೦ ॥
ಪಿತಾ ಸಭ್ಯಾಶ್ಚ ತಾಂ ದೃಷ್ಟ್ವಾ ಸ್ಥಿತಾಸ್ತೂಷ್ಣೀಂ ಹತಾಶಿಷಃ ।
ಸಾ ರುದ್ರಾಹುತಿಪರ್ಯಂತಂ ಪಶ್ಯಂತೀ ಪಿತೃಚೇಷ್ಟಿತಂ ।
ತ್ಯಕ್ತ್ವಾ ರುದ್ರಂ ಚ ಜುಹ್ವಂತಮುವಾಚಾಽಶ್ರುಕುಲೇಕ್ಷಣಾ ॥ ೫೨ ॥

ದೇವ್ಯುವಾಚ :—

ಮಹದುಲ್ಲಂಘನಂ ಪುಂಸಾಂ ನ ಪ್ರಾಯಃ ಶ್ರೇಯಸೇ ಭವೇತ್ ।
ಲೋಕಕರ್ತಾ ಲೋಕಭರ್ತಾ ಸರ್ವೇಷಾಂ ಪ್ರಭುರವ್ಯಯಃ ॥ ೫೩ ॥

೪೯–೫೦. ಬಳಿಕ ಸತೀದೇವಿಯು ಏಕಾಕಿನಿಯಾಗಿಯೇ ಕಾಲ್ನಡಿಗೆಯಿಂದ ಮನೆಯನ್ನು ಬಿಟ್ಟು ಹೊರಟಳು. ಆಕೆಯನ್ನು ಕಂಡು ನಂದಿಕೇಶ್ವರನು ಮರುಮಾತನಾಡದೆಯೇ ತನ್ನ ಮೇಲೆ ಕೂಡಿಸಿಕೊಂಡು ವಾಹನನಾಗಿ ಹೊರಡು ವವನಾದನು. ಆಗ ಆ ಸತೀದೇವಿಯನ್ನು ಕೋಟಿಗಟ್ಟಲೆಯಾಗಿ ಭೂತಸಮೂಹ ಗಳು ಹಿಂಬಾಲಿಸಿ ಹೊರಟವು. ಆಕೆಯು ಯಜ್ಞಮಂಟಪವನ್ನು ಸೇರಿ ಮೊದಲು ಅಂತಃಪುರದ ಶಾಲೆಯನ್ನು ಪ್ರವೇಶಿಸಿದಳು.

೫೧. ಆದರೆ ತಾಯಿಯು ಸತಿಯನ್ನು ನೋಡಿದರೂ ನೋಡದಂತೆ ಸುಮ್ಮನೆ ತನ್ನ ಕಾರ್ಯಗಳಲ್ಲಿ ನಿರತಳಾಗಿದ್ದಳು. ಅದನ್ನು ಕಂಡು ಮುಖಗೊಂಡು ಸತಿಯು ಹೊರಕ್ಕೆ ಬಂದಳು. ಮತ್ತು ತನ್ನ ಪತಿಯ ಮಾತುಗಳನ್ನೇ ಸ್ಮರಿಸಿ ಕೊಳ್ಳುತ್ತ ಯಜ್ಞಶಾಲೆಯ ಉತ್ತರವೇದಿಕೆಯನ್ನು ಸೇರಿದಳು.

೫೨. ತಂದೆಯಾದ ದಕ್ಷಬ್ರಹ್ಮನೂ, ಸಭಾಸದರೂ ಆಕೆಯನ್ನು ನೋಡಿದರೂ ಶ್ರೇಯೋಹೀನರಾದುದರಿಂದ ಮಾತನಾಡಿಸದೆ ಸುಮ್ಮನೆಯೇ ಇದ್ದರು. ಆಕೆಯು ತಂದೆಯು ಮಾಡುತ್ತಿರುವ ಯಜ್ಞವನ್ನು ರುದ್ರಾಹುತಿಯ ಸಮಯದವರೆಗೂ ನೋಡುತ್ತಿದ್ದಳು. ಮತ್ತು ರುದ್ರದೇವತೆಗೆ ಆಹುತಿಯನ್ನೇ ಕೊಡದೆ ಹೋಮ ಮಾಡುತ್ತಿದ್ದ ತಂದೆಯನ್ನು ಕಂಡು ಕಣ್ಣೀರು ಸುರಿಸುತ್ತ ಹೇಳತೊಡಗಿದಳು.

೫೩. ದೇವಿಯು ಹೇಳುತ್ತಾಳೆ:—"ತಂದೆಯೆ! ಮಹಾತ್ಮರ ಪೂಜೆಯನ್ನು ಮಾಡದೆ ಉಲ್ಲಂಘಿಸುವುದು ಎಂದಿಗೂ ಜನರಿಗೆ ಶ್ರೇಯಸ್ಸನ್ನುಂಟುಮಾಡ ಲಾರದು. ನನ್ನ ಸ್ವಾಮಿಯು ಲೋಕಗಳ ಸೃಷ್ಟಿಕರ್ತನು. ಅವುಗಳನ್ನು ತಾನೇ ಪಾಲಿಸುತ್ತಿರುವನು; ನಮ್ಮೆಲ್ಲರಿಗೂ ಪ್ರಭುವಾದ ಆತನು ಸನಾತನನಾಗಿರುವನು.

ಏವಂ ಭೂತಸ್ಯ ರುದ್ರಸ್ಯ ಕಥಂ ನೋದೀಯತೇ ಹವಿಃ ।
ಜಾತಾಂ ನ ಕಿಂ ತೇ ದುರ್ಬುದ್ಧಿಂ ಹರಂತ್ಯೇತೇ ಸಮಾಗತಾಃ ॥ ೪೪ ॥
ನ ಚೇದ್ವೃತಾ ಮಹಾತ್ಮಾನಃ ಕಿಮೇಷಾಂ ವಿಮುಖೋ ವಿಧಿಃ ॥ ೪೫ ॥
ಇತ್ಯೇವಂ ಭಾಷಮಾಣಾಂ ತಾಂ ಪೂಷಾ ದೇವೋ ಜಹಾಸ ಹ ।
ಶ್ಮಶ್ರೂಣಾಂ ಚಾಲನಂ ಚಕ್ರೇ ಭೃಗುರ್ಗತಶುಭಸ್ತಥಾ ॥ ೪೬ ॥
ಭುಜಪಾದೋರುಕಕ್ಷ್ಯಾಣಾಂಶ್ಚಾಲನಂ ಚಕ್ರಿರೇ ಪರೇ ।
ಬಹುಧಾ ನಿಂದನಂ ಚಕ್ರೇ ತತ್ಪಿತಾ ಹತಭಾಗ್ಯವಾನ್ ॥ ೪೭ ॥
ತಚ್ಛ್ರುತ್ವಾ ರುದ್ರಭಾರ್ಯಾ ಸಾ ಕೋಪಾಕುಲಿತಮಾನಸಾ ।
ಪ್ರಾಯಶ್ಚಿತ್ತಂ ಪತೇಃ ಕರ್ತುಂ ದೇಹಂ ತತ್ಯಾಜ ಸಾ ಸತೀ ।
ಹೋಮಾಗ್ನೌ ವೇದಿಕಾಮಧ್ಯೇ ಸರ್ವೇಷಾಮೇವ ಪಶ್ಯತಾಂ ॥ ೪೮ ॥
ಹಾಹಾಕಾರೋ ಮಹಾನಾಸೀದ್ದುದ್ರುವುಃ ಪ್ರಮಥಾ ದ್ರುತಂ ।
ಆಚಖ್ಯುರ್ದೇವದೇವಾಯ ವೃತ್ತಾಂತಮಖಿಲಂ ತದಾ ॥ ೪೯ ॥

---

೪೪. ಇಂತಹ ಮಹಾಮಹಿಮನಾದ ರುದ್ರನಿಗೆ ನೀನೇಕೆ ಆಹುತಿಯನ್ನು ಕೊಡಲಿಲ್ಲ? ನಿನಗೆ ಇಂತಹ ದುರ್ಬುದ್ಧಿಯುಂಟಾದರೂ ಇಲ್ಲಿ ನೆರೆದಿರುವ ಇತರ ಸಭಾಸದರಾದರೂ ಏಕೆ ನಿನ್ನ ಈ ಅಜ್ಞಾನವನ್ನು ಪರಿಹರಿಸಲಿಲ್ಲ?

೪೫. ಮಹಾಪುರುಷರೆಂದಿಗೂ ಹೀಗಿರಲಾರರು. ವಿಧಿಯು ಈ ಜನಗಳಿಗೆ ವಿಮುಖವಾಗಿರುವುದೆ, ಏನು?"

೪೬. ಇಂತೆಂದು ಮಾತನಾಡುತ್ತಿರುವ ಆಕೆಯನ್ನು ಕಂಡು ಸೂರ್ಯದೇವನು ಹಲ್ಲುಂಕಿರಿದು ನಕ್ಕನು. ಮಂಗಳಹೀನನಾದ ಭೃಗುಮಹರ್ಷಿಯು ಗರ್ವದಿಂದ ಮೀಸೆಗಳನ್ನು ಹುರಿಮಾಡಿದನು.

೪೭–೪೮. ಇತರರೂ ಭುಜಗಳನ್ನೂ, ಪಾದಗಳನ್ನೂ, ಎದೆಯನ್ನೂ ಪಕ್ಕಗಳನ್ನೂ ಸದ್ದುಹೊಡೆದು ಧ್ವನಿಗೈದರು. ಮಂದಭಾಗ್ಯನಾದ ದಕ್ಷಬ್ರಹ್ಮನು ಮಹೇಶ್ವರನನ್ನು ಬಹುವಿಧವಾಗಿ ನಿಂದಿಸಿದನು. ಆ ಮಾತುಗಳನ್ನು ಕೇಳಿ ರುದ್ರಪತ್ನಿಯಾದ ಸತೀದೇವಿಯು ಕೋಪದಿಂದ ಕದಡಿದ ಮನಸ್ಸುಳ್ಳವಳಾಗಿ ಪತಿನಿಂದೆಯನ್ನು ಕೇಳಿದ ಪಾಪಕ್ಕೆ ತಕ್ಕ ಪ್ರಾಯಶ್ಚಿತ್ತವನ್ನು ಮಾಡಲೆಳಸಿ ಪತಿವ್ರತೆಯಾದುದರಿಂದ ಸಭಾಸದರೆಲ್ಲರೂ ನೋಡುತ್ತಿದ್ದಂತೆಯೇ ಯಜ್ಞವೇದಿಕೆಯನ್ನು ಪ್ರವೇಶಿಸಿ ಹೋಮಾಗ್ನಿಯಲ್ಲಿ ಬಿದ್ದು ದೇಹವನ್ನು ತ್ಯಜಿಸಿದಳು.

೪೯. ಆಗ ಮಹತ್ತರವಾದ ಹಾಹಾಕಾರವುಂಟಾಯಿತು. ದೇವಿಯನ್ನು ಸುತ್ತುವರಿದು ಬಂದಿದ್ದ ಪ್ರಮಥಗಣಗಳೆಲ್ಲರೂ ತತ್ಕ್ಷಣವಲ್ಲಿಯೇ ಓಡಿಹೋದರು. ದೇವೇಶ್ವರನಾದ ಪರಶಿವನಿಗೆ ದಕ್ಷನ ಯಜ್ಞವಾಟದಲ್ಲಿ ನಡೆದ ಸಮಸ್ತ ವೃತ್ತಾಂತವನ್ನೂ ತಿಳಿಸಿದರು.

ತಚ್ಛ್ರುತ್ವಾ ಸಹಸೋತ್ಥಾಯ ರುದ್ರಃ ಕಾಲಾಂತಕೋಪಮಃ ।
ಜಟಾಮುತ್ಪಾಟ್ಯ ಹಸ್ತೇನ ಭೂತಲೇ ತಾಮತಾಡಯತ್ ॥ ೫೦ ॥
ತತೋಽಭವನ್ಮಹಾಕಾಯೋ ವೀರಭದ್ರೋ ಮಹಾಬಲಃ ।
ಸಹಸ್ರಬಾಹುರಭವತ್ಕಾಲಾಂತಕಸಮಪ್ರಭಃ ॥ ೫೧ ॥
ಬದ್ಧಾಂಜಲಿಪುಟೋ ಭೂತ್ವಾ ವ್ಯಾಜಹಾರ ಹರಂ ತದಾ ।
ಮತ್ಸೃಷ್ಟಿಸು ಯದರ್ಥಂ ತೇ ತದರ್ಥಂ ಮಾಂ ನಿಯೋಜಯ ॥ ೫೨ ॥
ಇತ್ಯುಕ್ತಃ ಪ್ರಾಹ ತಂ ಕ್ರುದ್ಧೋ ಧೂರ್ಜಟಿಶ್ಚ ಪುರಸ್ಥಿತಂ ॥ ೫೩ ॥
ಹನ ತ್ವಂ ನಿಂದಕಂ ದಕ್ಷಂ ಯದರ್ಥೇ ಮತ್ಪ್ರಿಯಾ ಹತಾ ।
ಭೂತಸಂಘಾಸ್ತು ಗಚ್ಛಂತು ಸಹ ತೇನ ಮಹಾಬಲಾಃ ॥ ೫೪ ॥
ಇತ್ಯಾದಿಷ್ಟಾ ಭಗವತಾ ಯಯುರ್ಯಜ್ಞಸಭಾಂ ತದಾ ।
ಜಘ್ನುಃ ಸರ್ವಾನ್ಮಹಾವೀರಾನ್ ದೇವಾಸುರನರಾಧಿಕಾನ್ ॥ ೫೫ ॥

೫೦. ಅದನ್ನು ಕೇಳಿ ಸಂಭ್ರಮದಿಂದ ಎದ್ದು ರುದ್ರನು ಪ್ರಳಯಕಾಲದ ಯಮನನ್ನು ಹೋಲುವವನಾಗಿ ಜಡೆಯನ್ನು ಬಿಚ್ಚಿ ಕೈಯಲ್ಲಿ ಹಿಡಿದು ಭೂಮಿಯಲ್ಲಿ ಅಪ್ಪಳಿಸಿದನು.

೫೧. ಅದರಿಂದ ಮಹಾಶರೀರನೂ ಅತ್ಯಂತಬಲಶಾಲಿಯೂ ಆದ ವೀರಭದ್ರಸ್ವಾಮಿಯು ಜನಿಸಿದನು. ಆತನು ಒಂದು ಸಾವಿರ ಬಾಹುಗಳುಳ್ಳವನಾಗಿ ಕಾಲಯಮನಿಗೆ ಸಮಾನವಾದ ತೇಜಸ್ಸಿನಿಂದ ಮೆರೆಯುತ್ತಿದ್ದನು.

೫೨. ಆತನು ಕೈಗಳನ್ನು ಜೋಡಿಸಿಕೊಂಡವನಾಗಿ ಮಹಾದೇವನನ್ನು ಕುರಿತು ಹೇಳತೊಡಗಿದನು. "ಎಲೈ ಮಹೇಶ್ವರನೆ! ಯಾವ ಕಾರ್ಯಕ್ಕಾಗಿ ನನ್ನ ಜನ್ಮವುಂಟಾಯಿತೋ, ಆ ಕಾರ್ಯಗೌರವದಲ್ಲಿ ನನ್ನನ್ನು ನಿಯೋಜಿಸು."

೫೩. ಇಂತೆಂದ ಆತನನ್ನು ಕುರಿತು ಕೋಪದಿಂದ ಕೂಡಿದ ಮಹೇಶ್ವರನು ಹೇಳಿದನು.

೫೪. "ನೀನು ನನ್ನನ್ನು ನಿಂದಿಸುತ್ತಿರುವ ಆ ದಕ್ಷಬ್ರಹ್ಮನನ್ನು ವಧಿಸಬೇಕು. ಅವನಿಂದಲೇ ನನ್ನ ಪ್ರಿಯಪತ್ನಿಯಾದ ಸತೀದೇವಿಯು ದೇಹವನ್ನು ಬಿಟ್ಟಿಳಲ್ಲವೆ. ನಿನ್ನೊಡನೆ ಮಹಾಪರಾಕ್ರಮಶಾಲಿಗಳಾದ ಈ ಭೂತಗಣಗಳೆಲ್ಲವೂ ಸೈನ್ಯವಾಗಿ ಹೊರಡಲಿ."

೫೫. ಇಂತೆಂದ ಪರಮೇಶ್ವರನ ಆಜ್ಞೆಯನ್ನು ಪಡೆದು ಅವರೆಲ್ಲರೂ ಆ ಕ್ಷಣದಲ್ಲಿಯೇ ಯಜ್ಞಶಾಲೆಯನ್ನು ಕುರಿತು ಹೊರಟರು. ಮತ್ತು ಅಲ್ಲಿ ನೆರೆದಿದ್ದ ಮಹಾ ವೀರರೆನಿಸಿದ ದೇವತೆಗಳನ್ನೂ, ರಾಕ್ಷಸರನ್ನೂ, ಮನುಷ್ಯರನ್ನೂ ಕೊಲ್ಲುವುದಕ್ಕೆ ಪ್ರಾರಂಭಿಸಿದರು.

ಪೂಷ್ಣಶ್ಚ ಹಸತೋ ದಂತಾನ್‌ಜಹಾಭೂಶ್ಚ ಬಭಂಜ್ಜಹ ।
ಶ್ಮಶ್ರೂಣ್ಯುತ್ಪಾಟಯಾಂಚಕ್ರೇ ಭೃಗೋಸ್ತಸ್ಯ ದುರಾತ್ಮನಃ ॥ ೫೬ ॥
ಯದ್ಯದಾರಸ್ಫಾಲಿತಂ ಪೂರ್ವಂ ತತ್ತಚ್ಚಿಚ್ಛೇದ ವೀರ್ಯವಾನ್ ।
ತತೋ ದಕ್ಷಶಿರೋ ಹರ್ತುಂ ಬಹೂದ್ಯೋಗಂ ಚಕಾರಹ ॥ ೫೭ ॥
ಮುನಿಮಂತ್ರಪ್ರಗುಪ್ತಂ ತು ನೈವಕೃತ್ತತಿ ತದ್ಬಲಾತ್ ।
ಹರೋ ಜ್ಞಾತ್ವಾ ತು ಚಿಚ್ಛೇದ ಸ್ವಯಮೇವ ದುರಾತ್ಮನಃ ॥ ೫೮ ॥
ಏವಂ ಮಖಗತಾನ್‌ಹತ್ವಾ ಸಾನುಗಃ ಸ್ವಾಲಯಂ ಯಯೌ ।
ಹತಾವಶಿಷ್ಟಾಃ ಕೇಚಿತ್ತು ಬ್ರಹ್ಮಾಣಂ ಶರಣಂ ಯಯುಃ ॥ ೫೯ ॥
ತೈರನ್ವಿತೋ ಯಯೌ ಬ್ರಹ್ಮಾ ಕೈಲಾಸಂ ತು ಶಿವಾಲಯಂ ।
ತತೋ ರುದ್ರಂ ಸಾಂತ್ವಯಿತ್ವಾ ವಚೋಭಿರ್ವಿವಿಧೈರಪಿ ॥ ೬೦ ॥
ತೇನೈವ ಸಹಿತಃ ಪ್ರಾಗಾದ್ಯಜ್ಞವಾಟಂ ಮಹಾಪ್ರಭುಃ ।
ತೇನೈವೋಜ್ಜೀವಯಾಮಾಸ ಸರ್ವಾನ್ಯಜ್ಞಸಮಾಗತಾನ್ ॥ ೬೧ ॥

೫೬. ವೀರಭದ್ರನಾದರೋ ಹಿಂದೆ ಸತೀದೇವಿಯನ್ನು ನೋಡಿ ನಕ್ಕಿದ್ದ ಸೂರ್ಯನ ಹಲ್ಲುಗಳನ್ನು ಕರತಳಪ್ರಹಾರದಿಂದ ಉದುರಿಸಿದನು. ದುರಾತ್ಮನಾದ ಭೃಗುಮುನಿಯ ಗಡ್ಡಮೀಸೆಗಳನ್ನು ಕಿತ್ತೊಗೆದನು.

೫೭. ಪೂರ್ವದಲ್ಲಿ ಯಾವ ಸಭಾಸದರು ಯಾವ ಅಂಗಗಳನ್ನು ಸದ್ದು ಹೊಡೆದಿದ್ದರೋ, ಅವುಗಳನ್ನೆಲ್ಲ ಮಹಾ ಬಲಶಾಲಿಯಾದ ಆ ವೀರಭದ್ರನು ಕತ್ತರಿಸಿ ಕೆಡಹಿದನು. ಬಳಿಕ ದಕ್ಷಪ್ರಜಾಪತಿಯ ತಲೆಯನ್ನು ಕತ್ತರಿಸಲು ಅತಿಶಯವಾದ ಪ್ರಯತ್ನವನ್ನು ಮಾಡಿದನು.

೫೮. ಆದರೆ ಋತ್ವಿಜರಾದ ಮಹಾ ಮುನಿಗಳ ಮಂತ್ರಶಕ್ತಿಯಿಂದ ರಕ್ಷಿಸಲ್ಪಟ್ಟ ಆ ತಲೆಯು ಆತನ ಸಾಹಸಕ್ಕೆ ಎಡೆಗೊಡಲಿಲ್ಲ. ಅದನ್ನು ತಿಳಿದು ಪರಮೇಶ್ವರನು ತಾನೇ ಬಂದು ಆ ದುರಾತ್ಮನ ತಲೆಯನ್ನು ಕತ್ತರಿಸಿದನು.

೫೯. ಇಂತು ದಕ್ಷಯಜ್ಞಕ್ಕೆ ಬಂದವರನ್ನೆಲ್ಲ ನಾಶಮಾಡಿ ರುದ್ರದೇವನು ತನ್ನ ಪರಿವಾರದೊಡನೆ ಕೈಲಾಸಕ್ಕೆ ಹಿಂದಿರುಗಿದನು. ಆ ಯಜ್ಞದಲ್ಲಿ ಅಳಿದುಳಿದ ಕೆಲವರು ಬ್ರಹ್ಮದೇವನನ್ನು ಶರಣುಹೊಕ್ಕರು.

೬೦. ಅವರನ್ನು ಕೂಡಿಕೊಂಡು ಬ್ರಹ್ಮದೇವನು ಶಿವನ ನಿವಾಸವಾದ ಕೈಲಾಸಪರ್ವತಕ್ಕೆ ಬಂದು ಸೇರಿದನು. ಬಳಿಕ ಕೋಪಾವಿಷ್ಟನಾಗಿದ್ದ ಮಹೇಶ್ವರನನ್ನು ಅನೇಕ ವಿಧಗಳಾದ ವಾಕ್ಯಗಳಿಂದ ಸಮಾಧಾನಗೊಳಿಸಿದನು.

೬೧. ಮತ್ತು ತ್ರಿಲೋಕಾಧಿಪತಿಯಾದ ಬ್ರಹ್ಮನು ಮಹಾದೇವನೊಡನೆಯೇ ಪುನಃ ಯಜ್ಞವಾಟಕ್ಕೆ ಬಂದನು. ಆತನ ಮೂಲಕವಾಗಿಯೇ ಯಜ್ಞವಾಟದಲ್ಲಿ ನಿಧನರಾಗಿದ್ದ ಸಕಲರನ್ನೂ ಪುನರುಜ್ಜೀವನಗೊಳಿಸಿದನು.

ಖ್ಯಾತ್ಯೈ ಪ್ರಾದಾದಜಮುಖಂ ದಕ್ಷಸ್ಯ ತು ತದಾಶಿವಃ ।
ಅಜಶ್ಮಶ್ರೂಣ್ಯದಾಚ್ಛಂಭುರ್ಭೃಗವೇ ತು ಮಹಾತ್ಮನೇ ॥ ೬೨ ॥
ಪೂಷ್ಣಶ್ಚ ದಂತಾನ್ನಪ್ರಾದಾತ್ಪಿಷ್ಟಾದಂ ಚ ಚಕಾರಹ ।
ತದಂಗಾನಾಂ ವ್ಯತಿಕರಂ ಕೇಷಾಂಚಿದಪಿ ವೈ ಶಿವಃ ॥ ೬೩ ॥
ಶಿವಮಾಪೃಚ್ಛ್ಯ ತೇ ಸರ್ವೇ ಬ್ರಹ್ಮಣಾ ಚ ಶಿವೇನ ಚ ।
ಪುನಃ ಪ್ರವರ್ತಿತೋ ಯಜ್ಞೋ ಯಥಾಪೂರ್ವಂ ಮಹಾತ್ಮನಃ ॥ ೬೪ ॥
ಯಜ್ಞಾಂತೇ ಸರ್ವದೇವಾಶ್ಚ ಜಗ್ಮುತುಸ್ತೇ ಸ್ವಂ ಸ್ವಮಾಲಯಾನ್ ।
ನೈಷ್ಠಿಕಂ ಬ್ರಹ್ಮಚರ್ಯಂ ತು ಕೃತ್ವಾ ರುದ್ರೋ ಮಹಾತಪಾಃ ॥ ೬೫ ॥
ತೇಪೇ ಗಂಗಾತಟೇ ರುದ್ರಃ ಪುನ್ನಾಗತರುಮೂಲಗಃ ।
ದಕ್ಷಾತ್ಮಜಾ ಸತೀದೇವೀ ತ್ಯಕ್ತದೇಹಾ ಪತಿವ್ರತಾ ॥ ೬೬ ॥
ಜಜ್ಞೇ ಹಿಮಾದ್ರೇರ್ಮೇನಕ್ಯಾಂ ವವೃಧೇ ತಸ್ಯ ವೇಶ್ಮನಿ ।
ಏತಸ್ಮಿನ್ನೇವ ಕಾಲೇ ತು ತಾರಕಾಖ್ಯೋ ಮಹಾಸುರಃ ॥ ೬೭ ॥

---

೬೨–೬೩. ಆಗ ಪರಮೇಶ್ವರನು ತನ್ನ ಖ್ಯಾತಿಯು ಭೂಮಿಯಲ್ಲಿ ಶಾಶ್ವತವಾಗಿ ನಿಲ್ಲುವಂತೆಸಗಲು ದಕ್ಷಬ್ರಹ್ಮನಿಗೆ ಮೇಕೆಯ ಮುಖವನ್ನು ಕೊಟ್ಟನು. ತನ್ನ ಮಾಹಾತ್ಮ್ಯವನ್ನರಿತ ಲೋಕಪೂಜ್ಯನಾದ ಭೃಗುಮುನಿಗೆ ಮೇಕೆಯ ಗಡ್ಡವನ್ನೇ ಅನುಗ್ರಹಿಸಿದನು. ಆದರೆ ಸೂರ್ಯನಿಗೆ ಹಲ್ಲುಗಳನ್ನು ಕೊಡದೆ ಅವನನ್ನು ಪಿಷ್ಟಭೋಜನನನ್ನಾಗಿ ಮಾಡಿ ಕಳಿಸಿದನು. ಮತ್ತು ಸದಾಶಿವನು ವೀರಭದ್ರನ ಪರಾಕ್ರಮದಿಂದ ಅಂಗವೈಕಲ್ಯವನ್ನು ಹೊಂದಿದ್ದ ಅನೇಕರಿಗೆ ದೇಹಗಳನ್ನು ಸರಿಪಡಿಸಿ ಕಳುಹಿಸಿದನು.

೬೪. ಬ್ರಹ್ಮದೇವನ ಮತ್ತು ಮಹೇಶ್ವರನ ಅನುಗ್ರಹಗಳ ಫಲವಾಗಿ ಮತ್ತೆ ಅವರೆಲ್ಲರೂ ಶುಭವನ್ನು ಪಡೆಯುವವರಾದರು. ಮಹಾತ್ಮನಾದ ದಕ್ಷಪ್ರಜಾಪತಿಯೂ ಮುನ್ನಿನಂತೆಯೇ ಯಜ್ಞವನ್ನು ಪುನಃ ಪ್ರಾರಂಭಿಸಿ ಸಾಂಗವಾಗಿ ನೆರವೇರಿಸಿದನು.

೬೫–೬೭. ಯಜ್ಞದ ಅವಭೃಥಸ್ನಾನವಾದ ಮೇಲೆ ಸಮಸ್ತ ದೇವತೆಗಳೂ ತಮ್ಮ ತಮ್ಮ ನಿವಾಸಗಳಿಗೆ ಹೊರಟುಹೋದರು. ರುದ್ರನು ಮಾತ್ರ ಮಹಾ ತಪಸ್ಸನ್ನು ಮಾಡಲೆಳಸಿ ಅಖಂಡವಾದ ಬ್ರಹ್ಮಚರ್ಯವನ್ನು ಸ್ವೀಕರಿಸಿ ಗಂಗಾ ತೀರದಲ್ಲಿ ಒಂದು ಪುನ್ನಾಗವೃಕ್ಷದ ನೆರಳಿನಲ್ಲಿ ಕುಳಿತು ಘೋರವಾದ ತಪಸ್ಸನ್ನು ಮಾಡಿದನು. ದಕ್ಷನ ಮಗಳೂ ಮಹಾಪತಿವ್ರತೆಯೂ ಆದ ಸತೀದೇವಿಯು ತಂದೆಯ ಯಜ್ಞಶಾಲೆಯಲ್ಲಿ ದೇಹವನ್ನು ತ್ಯಜಿಸಿ ಹಿಮವದ್ರಾಜನಿಗೆ ಮೇನಕಾ ದೇವಿಯಲ್ಲಿ ಪುತ್ರಿಯಾಗಿ ಜನಿಸಿ ಆತನ ಮನೆಯಲ್ಲಿಯೇ ಶುಕ್ಲಪಕ್ಷದ ಚಂದ್ರನಂತೆ ಬೆಳೆಯುತ್ತಿದ್ದಳು.

ಸ ತೀವ್ರತಪಸಾಽಽರಾಧ್ಯ ಬ್ರಹ್ಮಾಣಂ ಪರಮೇಷ್ಠಿನಂ ।
ಅವಧ್ಯತ್ವಂ ವರಂ ವವ್ರೇ ದೇವಾಸುರನರೋರಗೈಃ ॥ ೬೮ ॥
ಆಯುಧೈರಸ್ತ್ರಸಂಘೈಶ್ಚ ಸರ್ವೈರೇವ ಮಹಾಬಲೈಃ ।
ರುದ್ರಪುತ್ರಂ ವಿನಾ ದೈತ್ಯ ಹ್ಯವಧ್ಯಃ ಸಕಲೈರಪಿ ॥ ೬೯ ॥
ಇತಿ ತಸ್ಮೈ ವರಂ ಪ್ರಾದಾದ್ಬ್ರಹ್ಮಾ ಲೋಕಪಿತಾಮಹಃ ।
ಅಸ್ತ್ರೀಕತ್ವಾದಪುತ್ರತ್ವಾದ್ರುದ್ರಸ್ಯೇತಿ ತಥಾಸ್ತ್ವಿತಿ ॥ ೭೦ ॥
ವರಂ ಗೃಹೀತ್ವಾ ಸ್ವಗೃಹಂ ಪ್ರಾಪ್ಯ ಲೋಕಾನ್ ಬಬಾಧಹ ।
ದಾಸಾ ದೇವಾ ಮಾರ್ಜನಾದೌ ದಾಸ್ಯೋ ದೇವ್ಯಶ್ಚ ತದ್ಗೃಹೇ ॥ ೭೧ ॥
ತತಸ್ತೇ ಪೀಡಿತಾ ದೇವಾ ಬ್ರಹ್ಮಾಣಂ ಶರಣಂ ಯಯುಃ ।
ತೈಃ ಪೀಡಾಂ ವರ್ಣಿತಾಂ ಶ್ರುತ್ವಾ ವೇಧಾಃ ಪ್ರಾಹ ಸುರಾನಿದಂ ॥ ೭೨ ॥

೬೮. ಈ ಸಮಯದಲ್ಲಿಯೇ ತಾರಕನೆಂಬ ಮಹಾದೈತ್ಯನೊಬ್ಬನು ಜನಿಸಿ ಅತ್ಯುಗ್ರವಾದ ತಪಸ್ಸಿನಿಂದ ಚತುರ್ದಶಲೋಕಗಳ ಪಿತಾಮಹನಾದ ಬ್ರಹ್ಮದೇವನನ್ನು ಆರಾಧಿಸುತ್ತ ಇದ್ದನು.

೬೯. ಮತ್ತು ಬ್ರಹ್ಮದೇವನು ಪ್ರತ್ಯಕ್ಷನಾಗಲು ದೇವತೆಗಳು, ರಾಕ್ಷಸರು, ನಾಗರು, ಮನುಷ್ಯರೆ ಮೊದಲಾದವರಿಂದಲೂ, ಬಲವತ್ತರಗಳಾದ ಆಯುಧಗಳಿಂದಲೂ, ಅಸ್ತ್ರಶಸ್ತ್ರ ಸಮೂಹಗಳಿಂದಲೂ ತನಗೆ ಮರಣವುಂಟಾಗಬಾರದೆಂಬ ವರವನ್ನು ಕೇಳಿಕೊಂಡನು.

೭೦. "ಎಲೈ ದೈತ್ಯನೆ! ಮಹಾದೇವನ ಪುತ್ರನಿಂದಲ್ಲದೆ ನೀನು ಯಾರಿಂದಲೂ ವಧ್ಯನಾಗಲಾರೆ." ಇಂತೆಂದು ಲೋಕಪಿತಾಮಹನಾದ ಬ್ರಹ್ಮದೇವನು ಆ ರಾಕ್ಷಸನಿಗೆ ವರವನ್ನು ಕೊಟ್ಟನು. ಆ ರುದ್ರ ಶಿಶುವು ಸ್ತ್ರೀಯಾಗಿಯಾಗಲಿ ಪುರುಷನಾಗಿಯಾಗಲಿ ಚೆನ್ನಾಗಿ ಬೆಳೆಯುವುದಕ್ಕೆ ಮೊದಲೇ ನಿನ್ನೊಡನೆ ಯುದ್ಧಮಾಡುವನೆಂದು ಹೇಳಲು ತಾರಕಾಸುರನು ಹಾಗೆಯೇ ಆಗಲೆಂದು ಅಂಗೀಕರಿಸಿ ತಪಸ್ಸಿನಿಂದ ವಿಮುಖನಾದನು.

೭೧. ಇಂತು ತಾರಕನು ಬ್ರಹ್ಮನಿಂದ ವರವನ್ನು ಪಡೆದು ಅದರ ಬಲದಿಂದ ಲೋಕಗಳನ್ನೆಲ್ಲ ಬಾಧಿಸತೊಡಗಿದನು. ಅವನಿಗೆ ಸ್ನಾನಾದಿಗಳನ್ನು ಮಾಡಿಸಲೂ ಅವನ ಮನೆಯಲ್ಲಿ ಕಸಗುಡಿಸಲೂ ದೇವತೆಗಳೇ ಸೇವಕರಾದರು. ದೇವಕನ್ಯೆಯರೇ ಅವನ ಅಂತಃಪುರದಲ್ಲಿ ಪರಿಚಾರಿಕೆಯರಾಗಿದ್ದರು.

೭೨. ಬಳಿಕ ಆತನಿಂದ ಪೀಡಿತರಾದ ದೇವತೆಗಳೆಲ್ಲರೂ ಬ್ರಹ್ಮದೇವನನ್ನೇ ಶರಣುಹೊಕ್ಕರು. ಅವರು ವಿವರಿಸಿದ ಬಹುವಿಧಪೀಡೆಗಳನ್ನೆಲ್ಲ ಸಾವಧಾನದಿಂದ ಕೇಳಿ ಬ್ರಹ್ಮನು ದೇವತೆಗಳನ್ನು ಕುರಿತು ಇಂತೆಂದನು.

ವರಪ್ರದಾನಕಾಲೇಽಹಂ ರುದ್ರಪುತ್ರಂ ವಿನಾ ಸುರಾಃ ।
ನಾನ್ಯೈರ್ವಧ್ಯ ಇತಿ ಪ್ರಾದಾಂ ವರಂ ತಸ್ಮೈ ದುರಾತ್ಮನೇ ॥ ೭೩ ॥
ಪುರಾ ಸತೀ ರುದ್ರಪತ್ನೀ ಸತ್ರೇ ತ್ಯಕ್ತಕಳೇವರಾ ।
ಜಾತಾ ಹಿಮವತಃ ಪುತ್ರೀ ಪಾರ್ವತೀತಿ ಚ ಯಾಂ ವಿದುಃ ॥ ೭೪ ॥
ರುದ್ರೋ ಹಿಮವತಃ ಪೃಷ್ಠೇ ತಪಶ್ಚರತಿ ದುಶ್ಚರಂ ।
ಯೋಜಯಧ್ವಂ ಚ ಪಾರ್ವತ್ಯಾ ರುದ್ರಂ ಲೋಕೇಶ್ವರಂ ಪ್ರಭುಂ ॥ ೭೫ ॥
ಪುನರ್ದೇವೇಂದ್ರಸದನೇ ಸಂಗತೈರಮರೇಶ್ವರೈಃ ।
ಧಿಷಣೇನಾಽಪಿ ಸಮ್ಮಂತ್ರ್ಯ ದೇವೇಂದ್ರಃ ಪಾಕಶಾಸನಃ ॥ ೭೬ ॥
ಸಸ್ಮಾರ ಚ ಸ ಕಾರ್ಯಾರ್ಥಂ ನಾರದಂ ಸ್ಮರನೇವ ಚ ।
ತತ್ರಾಽಽಗತೌ ತತಸ್ತೌ ತು ಬಲಭಿದ್ವಾಕ್ಯಮಬ್ರವೀತ್ ॥ ೭೭ ॥
ಹಿಮವಂತಂ ಭವಾನ್ಗತ್ವಾ ವಚಸಾ ತಂ ನಿಬೋಧಯ ।
ಪುತ್ರೀ ತವ ಪ್ರಾಗ್ದಕ್ಷಸ್ಯ ಹರಪತ್ನೀ ಸುತಾ ಸತೀ ॥ ೭೮ ॥

೭೩. "ಎಲೈ ದೇವತೆಗಳಿರಾ! ಆತನಿಗೆ ವರವನ್ನು ಕೊಟ್ಟ ಕಾಲದಲ್ಲಿ ಮಹೇಶ್ವರನ ಪುತ್ರನಿಂದಲ್ಲದೆ ಇತರರಿಂದ ನಿನಗೆ ಸಂಹಾರವುಂಟಾಗಲಾರದೆಂದು ಆ ದುರಾತ್ಮನಿಗೆ ನಾನು ವರವನ್ನು ಕೊಟ್ಟಿರುವೆನು.

೭೪. ಮಹಾದೇವನ ಪತ್ನಿಯಾದ ಸತೀದೇವಿಯು ಹಿಂದೆ ತಂದೆಯ ಯಜ್ಞವಾಟದಲ್ಲಿ ದೇಹವನ್ನು ತ್ಯಜಿಸಿ ಈಗ ಹಿಮವಂತ ಮಹಾರಾಜನ ಮಗಳಾಗಿ ಜನಿಸಿ ಆತನ ಅರಮನೆಯಲ್ಲಿ ಬೆಳೆಯುತ್ತಿರುವಳು. ಆಕೆಯನ್ನೇ ಈಗ ಜನರು ಪಾರ್ವತಿಯೆಂದು ಕರೆಯುತ್ತಿರುವರು.

೭೫. ಮಹಾರುದ್ರನೂ ಆ ಹಿಮವತ್ಪರ್ವತದ ಪಾರ್ಶ್ವದಲ್ಲಿಯೇ ದುಸ್ಸಾಧ್ಯವಾದ ತಪಸ್ಸನ್ನು ಮಾಡುತ್ತಿರುವನು. ಲೋಕೇಶ್ವರನೂ ನಮ್ಮ ಪ್ರಭುವೂ ಆದ ರುದ್ರನನ್ನು ಹೇಗಾದರೂ ಪಾರ್ವತೀದೇವಿಯೊಡನೆ ಸೇರಿಸಿರಿ."

೭೬. ಬಳಿಕ ಮಹೇಂದ್ರನ ಅರಮನೆಯಲ್ಲಿ ದಿಕ್ಪಾಲಕಾದಿ ದೇವತೆಗಳೆಲ್ಲರೂ ಸಭೆಯನ್ನು ನಡೆಸಿದರು. ಪಾಕಶಾಸನನಾದ ದೇವೇಂದ್ರನು ಬೃಹಸ್ಪತ್ಯಾಚಾರ್ಯರೊಡನೆ ಮಂತ್ರಾಲೋಚನೆಯನ್ನು ಮಾಡಿದನು.

೭೭. ಮತ್ತು ತನ್ನ ಕಾರ್ಯಕ್ಕೆ ಸಹಾಯಕರು ಯಾರೆಂಬುದನ್ನು ನಿಶ್ಚಯಿಸಿ ನಾರದಮಹರ್ಷಿಯನ್ನೂ, ಮನ್ಮಥನನ್ನೂ ಸ್ಮರಿಸಿಕೊಂಡನು. ತತ್‌ಕ್ಷಣದಲ್ಲಿಯೇ ಅವರಿಬ್ಬರೂ ಸಭೆಗೆ ಪ್ರಾಪ್ತರಾಗಲು ದೇವೇಂದ್ರನು ಅವನನ್ನು ಕುರಿತು ಹೇಳತೊಡಗಿದನು.

೭೮. ಎಲೈ ನಾರದನೆ! ನೀನು ಹಿಮವದ್ರಾಜನಲ್ಲಿಗೆ ಹೋಗಿ ನಿನ್ನ ಮಾತುಗಳಿಂದ ಆತನನ್ನು ಎಚ್ಚರಗೊಳಿಸು. "ನಿನ್ನ ಮಗಳಾದ ಪಾರ್ವತಿಯು

ತಪಶ್ಚರತಿ ತೇ ಶೃಂಗೇ ವಿಯುಕ್ತಾ ದಕ್ಷಕನ್ಯಯಾ ।
ಮೃಡಸ್ತಸ್ಯ ಸಪರ್ಯಾಯೈ ವಿನಿಯೋಜಯ ತತ್ಪ್ರಿಯಾಂ ॥ ೭೯ ॥
ತಸ್ಯೈವ ಪತ್ನೀ ಭವಿತಾ ಸ ಏವ ಭವಿತಾ ಪತಿಃ ।
ಇತ್ಯಾಽಽದಿಷ್ಟೋ ವಚೋ ನಾರದೋ ಪ್ರೇತ್ಯ ತಂ ಗಿರಿಂ ॥ ೮೦ ॥
ತಥೈವ ಕಾರಯಾಮಾಸ ದೇವೇಂದ್ರೇಣೋದಿತಂ ಯಥಾ ।
ಪಶ್ಚಾತ್ಕಾಮಂ ಸಮಾಹೂಯ ಮಘವಾನಿದಮಾಹ ಚ ॥ ೮೧ ॥
ದೇವಾನಾಂ ಚ ಹಿತಾರ್ಥಾಯ ತಥಾ ಮೃಡಹಿತಾಯ ಚ ।
ವಸಂತೇನ ಸಮಾಯುಕ್ತೋ ಗತ್ವಾ ರುದ್ರತಪೋವನಂ ॥ ೮೨ ॥
ಗುಣಾನ್ವಿಜೃಂಭಯಿತ್ವಾ ತು ವಾಸಂತಾನ್ ಹೃಚ್ಛಯಾವಹಾನ್ ।
ಯದಾ ಸನ್ನಿಹಿತಾ ದೇವೀ ಪಾರ್ವತೀ ತು ಮೃಡಸ್ಯ ಚ ॥ ೮೩ ॥
ತದಾ ಪ್ರಯುಜ್ಯ ತ್ವಂ ಬಾಣಾನ್ಮೋಹಯಸ್ವ ಮಹಾಪ್ರಭುಂ ।
ತಯೋಸ್ತು ಸಂಗಮೇ ಜಾತೇ ಕಾರ್ಯಂ ನೋಽದ್ಧಾ ಭವಿಷ್ಯತಿ ॥ ೮೪ ॥

---

ಹಿಂದಿನ ಜನ್ಮದಲ್ಲಿ ದಕ್ಷಬ್ರಹ್ಮನ ಮಗಳೂ, ಮಹಾದೇವನ ಪತ್ನಿಯೂ ಆದ ಸತೀದೇವಿಯಾಗಿದ್ದಳು.

೭೯. ಗಂಡನಿಂದ ವಿರಹಿತಳಾದ ಆಕೆಯು ಹತ್ತಾಜನ ಸಖಿಯರೊಡನೆ ತಪಸ್ಸನ್ನು ಮಾಡುತ್ತಿರುವಳು. ಅವಳಿಗಾಗಿ ಮಹೇಶ್ವರನೂ ನಿನ್ನ ಪರ್ವತದ ಶೃಂಗದಲ್ಲಿಯೆ ತಪಸ್ಸನ್ನಾಚರಿಸುತ್ತಿರುವನು. ಆದುದರಿಂದ ಆತನ ಪ್ರಿಯ ಪತ್ನಿಯನ್ನು ಆತನ ಸಪರ್ಯೆಯಲ್ಲಿಯೇ ಇರುವಂತೆ ನಿಯೋಜಿಸು.

೮೦. ಅವಳು ಆತನಿಗೇ ಪತ್ನಿಯಾಗುವವಳು ಆತನೂ ಆಕೆಗೆ ಪತಿಯಾಗುವನು.” ಇಂತೆಂದು ಮಹೇಂದ್ರನ ಸಂದೇಶವನ್ನು ಪಡೆದ ನಾರದ ಮಹಾಮುನಿಯು ಪರ್ವತರಾಜನನ್ನು ಸಮೀಪಿಸಿದನು.

೮೧. ಮತ್ತು ದೇವೇಂದ್ರನು ಹೇಳಿದ್ದಂತೆಯೇ ತನ್ನ ಕಾರ್ಯಭಾರವನ್ನೆಲ್ಲ ನೆರವೇರಿಸಿ ಹೊರಟುಹೋದನು. ಬಳಿಕ ಮಹೇಂದ್ರನು ಮನ್ಮಥನನ್ನು ಹತ್ತಿರಕ್ಕೆ ಕರೆದು ಆತನಿಗೆ ಹೇಳತೊಡಗಿದನು.

೮೨. “ದೇವತೆಗಳಿಗೆ ಹಿತವನ್ನುಂಟುಮಾಡುವುದಕ್ಕಾಗಿಯೂ ಮಹೇಶ್ವರನಿಗೆ ಪ್ರಿಯವನ್ನುಂಟುಮಾಡುವುದಕ್ಕಾಗಿಯೂ ನೀನು ವಸಂತನೊಡನೆ ಸೇರಿ ಮಹಾದೇವನು ತಪಸ್ಸುಮಾಡುತ್ತಿರುವ ವನಕ್ಕೆ ಪ್ರಯಾಣಮಾಡು.

೮೩–೮೪. ಬಳಿಕ ವಸಂತಕಾಲಕ್ಕೆ ಸಂಬಂಧಿಸಿದ ಹೃದಯತಾಪಗಳನ್ನುಂಟುಮಾಡುವ ನಿನ್ನ ಸಕಲ ಗುಣಗಳನ್ನೂ ಅತ್ಯಿ ವೈಭವದಿಂದ ವ್ಯಕ್ತಗೊಳಿಸಿ ಪಾರ್ವತೀದೇವಿಯು ಪರಮೇಶ್ವರನಿಗೆ ಸಮೀಪದಲ್ಲಿರುವ ಸಮಯವನ್ನು ನೋಡಿ ನಿನ್ನ ಪಂಚಬಾಣಗಳನ್ನೂ ಪ್ರಯೋಗಿಸಿ ಆ ಮಹಾದೇವನು

ಇತ್ಯಾದಿಷ್ಟಃ ಸ್ಮರಸ್ತೂರ್ಣಂ ಪ್ರತಸ್ಥೇ ಬಾಢಮಿತ್ಯಥ ।
ಸವಸಂತಃ ಸರತಿಕಃ ಸಾನುಗಸ್ತದ್ವನಂ ಯಯೌ ॥ ೮೫ ॥
ಅಕಾಲೇ ತು ವಸಂತರ್ತುಂ ಜೃಂಭಯಿತ್ವಾ ಸ್ವಶಕ್ತಿತಃ ।
ತದ್ವನೇ ಸರ್ವತೋ ರಮ್ಯೇ ಮಂದಾನಿಲನಿಷೇವಿತೇ ॥ ೮೬ ॥
ಕದಾಚಿದ್ದೇವದೇವೋಽಪಿ ಪಾರ್ವತ್ಯಾಶ್ಚ ಸಮರ್ಚಯಾ ।
ಪ್ರೀತಃ ಸ್ವಾಂಕಂ ಸಮಾರೋಪ್ಯ ಕಿಂಚಿದ್ವ್ಯಾಹರ್ತುಮಾರಭತ್ ॥ ೮೭ ॥
ಪ್ರಾಣಪ್ರಿಯಾಸಂಗಮಸ್ಯ ಕಾಲೋಽಯಮಿತಿ ನಿಶ್ಚಿತಃ ।
ಪೇಶಲಂ ಧನುರಾದಾಯ ಸತಸ್ಥೌ ಹರಪೃಷ್ಠತಃ ॥ ೮೮ ॥
ಕೃತ್ವಾ ಜವನಿಕಾಂ ವೃಕ್ಷಂ ಬಾಣಮೇಕಂ ಮುಮೋಚ ಹ ।
ದ್ವಿತೀಯಮಪಿ ಸಂಧಾಯ ಚಕ್ರೇ ಮೋಕ್ತುಂ ಮಹೋದ್ಯಮಂ ॥ ೮೯ ॥
ಅಥೈಕ್ನೈಬ್ಬಮನಾ ಭೂತ್ವಾ ಸ್ಮೃಡಂಚಿಂತಾಮವಾಪಹ ।
ನಮೋ ಮನಶ್ಚಲೇತ್ಯಾಪಿ ಕೇನ ತತ್ಕಶ್ಚಲೀಕೃತಂ ॥ ೯೦ ॥

---

ಆಕೆಯಲ್ಲಿ ಮೋಹಗೊಳ್ಳುವಂತೆ ಮಾಡು. ಅವರಿಬ್ಬರೂ ಪತಿಪತ್ನಿಯರಾಗಲು ನಮ್ಮ ಕಾರ್ಯವು ಶೀಘ್ರವಾಗಿಯೇ ನೆರವೇರುವುದು."

೮೫. ಇಂತೆಂದು ಮಹೇಂದ್ರನ ಅಪ್ಪಣೆಯನ್ನು ಪಡೆದು ಮನ್ಮಥನು ಹಾಗೆಯೇ ಆಗಲೆಂದು ಅಂಗೀಕರಿಸಿ ತತ್‌ಕ್ಷಣದಲ್ಲಿಯೇ ವಸಂತ, ರತಿ, ಮುಂತಾದ ಪರಿವಾರಗಳಿಂದ ಸಮೇತನಾಗಿ ಹೊರಟು ರುದ್ರನು ತಪಸ್ಸನ್ನು ಮಾಡುತ್ತಿದ್ದ ವನವನ್ನು ಸೇರಿದನು.

೮೬. ತನ್ನ ಪರಾಕ್ರಮದಿಂದ ಅಕಾಲದಲ್ಲಿಯೇ ವಸಂತಕಾಲದ ಸೌಂದರ್ಯಗಳನ್ನು ವನದಲ್ಲಿ ವಿಸ್ತರಿಸುತ್ತ ಸಮಸ್ತ ಪ್ರದೇಶಗಳಲ್ಲಿಯೂ ಮನೋಹರವಾಗಿ ಮಂದಮಾರುತವು ಬೀಸುವಂತೆ ಮಾಡುತ್ತಿದ್ದನು.

೮೭. ಒಮ್ಮೆ ಮಹಾದೇವನೂ ಸಹ ಪಾರ್ವತೀದೇವಿಯ ಪರಿಚರ್ಯೆಯಿಂದ ಸಂತೋಷಗೊಂಡು ಆಕೆಯನ್ನು ತನ್ನ ತೊಡೆಯ ಮೇಲೆ ಕುಳ್ಳಿರಿಸಿ ಮಾತನಾಡುವ ಸಂಭ್ರಮದಲ್ಲಿದ್ದನು.

೮೮. ಆ ಸಮಯಕ್ಕೆ ಸರಿಯಾಗಿ ಮನ್ಮಥನೂ ಈಶ್ವರಪಾರ್ವತಿಯರ ಸಂಗಮಕ್ಕೆ ಇದೇ ತಕ್ಕ ಕಾಲವೆಂದು ನಿಶ್ಚಯಿಸಿ ಅತ್ಯಂತಕೋಮಲವಾದ ತನ್ನ ಪುಷ್ಪಧನುಸ್ಸನ್ನು ತೆಗೆದುಕೊಂಡು ಪರಮೇಶ್ವರನ ಹಿಂಮುಗಡೆಯಲ್ಲಿ ನಿಂತನು.

೮೯. ಮತ್ತು ಒಂದು ವೃಕ್ಷವನ್ನು ಮರೆಮಾಡಿಕೊಂಡು ಬಾಣವೊಂದನ್ನು ಗುರಿಯಿಟ್ಟು ಹೊಡೆದು ಎರಡನೆಯದನ್ನೂ ಬಿಲ್ಲಿನಲ್ಲಿ ಜೋಡಿಸಿ ಹೊಡೆಯಲು ಮಹತ್ಪ್ರಯತ್ನವನ್ನು ಮಾಡುತ್ತಿದ್ದನು.

೯೦. ಆ ಒಂದು ಬಾಣದಿಂದಲೇ ಮಹಾದೇವನು ಪ್ರಚಲಿತಮನಸ್ಕ

ಇತಿ ಚಿಂತಾಕುಲೋ ವಾಮೇ ಪಾರ್ಶ್ವೇ ಕಾಮಂ ದದರ್ಶಹ ।
ಕ್ರುದ್ಧೋನ್ಮೀಲ್ಯ ಲಲಾಟಾಕ್ಷಂ ಸ್ವಾಂಕಾದ್ದೇವೀಮಪಾಸ್ಯತ ॥ ೯೧ ॥
ತಸ್ಯಾಕ್ಷ್ಣಃ ಸಮಭೂದಗ್ನಿಸ್ತೀಕ್ಷ್ಣೋ ಲೋಕವಿಭೀಷಣಃ ।
ತೇನ ದಗ್ಧೋಽಭವತ್ಸದ್ಯೋ ಮನ್ಮಥಃ ಸ ಶರಾಸನಃ ॥ ೯೨ ॥
ಕಾರ್ಯಸಿದ್ಧಿಂ ಚ ಪಶ್ಯಂತೋ ದುದ್ರುವುಶ್ಚಾಮರಾ ದಿವಂ ।
ಶಂಕಮಾನಾಃ ಸ್ವದಂಡಂಚ ವಸಂತೋ ರತಿರೇವಚ ॥ ೯೩ ॥
ನಿಮೀಲ್ಯ ಲೋಚನೇ ಭೀತಾ ದೇವೀ ದೂರಂ ಪ್ರದುದ್ರುವೇ ।
ಸನ್ನಿಧಾನಂ ಸ್ತ್ರಿಯೋ ಹರ್ತುಂ ಮೃಡೋಽಪ್ಯಂತರಧೀಯತ ॥ ೯೪ ॥
ರುದ್ರಸ್ಯೇಷ್ಟಂ ಪ್ರಕುರ್ವಾಣೋ ದೇವಶ್ಚ ಮನಸೋಹಿತಂ ।
ಲೇಭೇಽನರ್ಥಮಿಂದ್ರಸ್ತು ವಿಪ್ರಿಯಂ ಕುರ್ವತಸ್ತು ಕಿಂ ॥ ೯೫ ॥

ನಾಗಿ ಪೂರ್ಣ ಚಿಂತೆಯಲ್ಲಿ ಮುಳುಗಿದನು. "ನನ್ನ ಮನಸ್ಸು ಎಂದೂ ಈ ವಿಧವಾಗಿ ಚಂಚಲವಾಗಲಿಲ್ಲ. ಈಗ ಯಾವ ಕಾರಣದಿಂದ ಕಶ್ಮಲಯುಕ್ತವಾಯಿತು?"

೯೧. ಇಂತೆಂದು ಚಿಂತಾಕುಲನಾಗಿ ಸುತ್ತಲೂ ನೋಡುತ್ತ ಎಡಗಡೆಯಲ್ಲಿ ಅವಿತುಕೊಂಡಿದ್ದ ಮನ್ಮಥನನ್ನು ಕಂಡನು. ತತ್‌ಕ್ಷಣದಲ್ಲಿಯೇ ಅತ್ಯುಗ್ರವಾದ ಕ್ರೋಧವನ್ನು ತಾಳಿ ತನ್ನ ತೊಡೆಯಲ್ಲಿದ್ದ ದೇವಿಯನ್ನು ಕೆಳಗಿಳಿಸಿ ಹಣೆಯೊಳಗಿನ ಅಗ್ನಿನೇತ್ರವನ್ನು ತೆರೆದು ನೋಡಿದನು.

೯೨. ಆತನ ಫಾಲನೇತ್ರದಿಂದ ಅತ್ಯುಗ್ರವೂ ತ್ರಿಲೋಕಭಯಂಕರವೂ ಆದ ಅಗ್ನಿಯುಂಟಾಯಿತು. ಅದರ ಜ್ವಾಲೆಗಳಿಂದಾವೃತನಾಗಿ ಕ್ಷಣಮಾತ್ರದಲ್ಲಿಯೇ ಮನ್ಮಥನು ಬಿಲ್ಲುಬಾಣಗಳ ಸಮೇತನಾಗಿ ಸುಟ್ಟು, ಭಸ್ಮೀಭೂತನಾದನು.

೯೩. ತಮ್ಮ ಕಾರ್ಯವು ಸಿದ್ಧಿಸುವುದೆಂಬ ಬಯಕೆಯಿಂದ ಅಲ್ಲಿ ನೆರೆದಿದ್ದ ದೇವತೆಗಳೆಲ್ಲರೂ ತಮಗೂ ಶಿಕ್ಷೆಯಾಗುವುದೆಂಬ ಭಯದಿಂದ ಸ್ವರ್ಗಲೋಕಕ್ಕೆ ಓಡಿಹೋದರು. ವಸಂತನೂ ರತಿದೇವಿಯೂ ದಿಕ್ಕುತೋಚದೆ ಹಿಂದಿರುಗಿದರು.

೯೪. ಪಾರ್ವತೀದೇವಿಯೂ ಭಯಗೊಂಡು ಕಣ್ಣುಗಳನ್ನು ಮುಚ್ಚಿ ದೂರಕ್ಕೆ ಓಡಿಹೋದಳು. ಸ್ತ್ರೀಸನ್ನಿಧಾನವನ್ನು ಕೊನೆಗಾಣಿಸುವುದಕ್ಕೆ ಮಹೇಶ್ವರನೂ ಕೂಡ ಅಲ್ಲಿಂದ ಅಂತರ್ಧಾನವನ್ನೈದಿದನು.

೯೫. ಇಂತು ಮಹಾದೇವನಿಗೆ ಇಷ್ಟವನ್ನೂ ಮನಸ್ಸಮಾಧಾನವನ್ನೂ ಮಾಡಲೆಳಸಿದ ಮಹೇಂದ್ರನೇ ಕೊನೆಯಿಲ್ಲದ ಅನರ್ಥಪರಂಪರೆಯನ್ನು ಹೊಂದಿದನೆಂದ ಮೇಲೆ ಆತನಿಗೆ ಅಪ್ರಿಯವನ್ನು ಮಾಡುವವರ ವಿಷಯವನ್ನು ಹೇಳಬೇಕೆ?

ತಸ್ಮಾದಿಕ್ಷ್ವಾಕುತನಯಃ ಸಾಧೂನಾಮಪ್ರಿಯಃ ಸದಾ ।
ತಸ್ಮಾದಾತ್ಮಹಿತಾಂ ಸೇವಾಂ ನಾಽಕಾರ್ಷೀನ್ಮಂದಧೀರ್ನತಾಂ ॥ ೯೬ ॥
ಅನುಭೂತಂ ಮಹದ್ದುಃಖಂ ತಸ್ಮಾದ್ದುರ್ಯೋನಿರೇವಚ ।
ತಸ್ಮಾತ್ಕುರ್ಯಾತ್ತು ಸಾಧೂನಾಂ ಸೇವಾಂ ಸರ್ವಾರ್ಥಸಾಧಿನೀಂ ॥ ೯೭ ॥
ರುದ್ರಸ್ಯಾಽಪ್ರಿಯಕಾರಿತ್ವಾತ್ಸ್ಮರೋ ಭಾವಿನಿ ಜನ್ಮನಿ ।
ದುಃಖಂ ತು ಬಹುಲಂ ಲೇಭೇ ಜನ್ಮಕಾಲೇ ಮಹಾಪ್ರಭುಃ ॥ ೯೮ ॥
ಇತಿಹಾಸಮಿಮಂ ಪುಣ್ಯಂ ಯೇ ಶೃಣ್ವಂತಿ ದಿವಾನಿಶಂ ।
ಜನ್ಮಮೃತ್ಯುಜರಾದಿಭ್ಯೋ ಮುಚ್ಯಂತೇ ನಾಽತ್ರ ಸಂಶಯಃ ॥ ೯೯ ॥

ಇತಿ ಶ್ರೀಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ದ್ವಿತೀಯೇ ವೈಷ್ಣವಖಂಡೇ ವೈಶಾಖಮಾಸಮಾಹಾತ್ಮ್ಯೇ ನಾರದಾಂಬರೀಷಸಂವಾದೇ
"ದಕ್ಷಯಜ್ಞವಿಧ್ವಂಸನಪೂರ್ವಕ ಪಾರ್ವತೀ ಜನ್ಮ ಕಾಮದಹನವರ್ಣನಂ"
ನಾಮಾಷ್ಟಮೋಽಧ್ಯಾಯಃ

೯೬. ಇಕ್ಷ್ವಾಕುಕುಲಸಂಭೂತನಾದ ಹೇಮಾಂಗನಾದರೂ ಯಾವಾಗಲೂ ಸಾಧುಸತ್ಪುರುಷರಿಗೆ ಅಪ್ರಿಯವನ್ನೇ ಮಾಡುತ್ತಿದ್ದನು. ಮತ್ತು ಮಂದ ಬುದ್ಧಿಯುಳ್ಳವನಾದುದರಿಂದ ಆತ್ಮೋದ್ಧಾರಕ್ಕೆ ಕಾರಣವಾದ ಸಜ್ಜನರ ಸೇವೆಯನ್ನು ಎಂದೂ ಮಾಡಲಿಲ್ಲ.

೯೭. ಆದುದರಿಂದಲೇ ಮಹಾ ದುಃಖವೂ, ನೀಚಯೋನಿಗಳಲ್ಲಿ ಜನನವೂ ಆತನಿಗೆ ಅವಶ್ಯಗಳಾಗಿ ಸಂಭವಿಸಿದುವು. ಆದುದರಿಂದ ಸಕಲ ಇಷ್ಟಾರ್ಥಗಳನ್ನು ನೆರವೇರಿಸಿಕೊಡುವ ಸಾಧುಸೇವೆಯನ್ನು ಸಮಸ್ತ ಮಾನವರೂ ಮಾಡಲೇಬೇಕು.

೯೮. ಮಹಾದೇವನಿಗೆ ಇಂತು ಅಪ್ರಿಯವನ್ನು ಮಾಡಿದುದರಿಂದಲೇ ಮನ್ಮಥನು ಮುಂದಿನ ಜನ್ಮದಲ್ಲಿ ಜನನ ಕಾಲದಲ್ಲಿ ಮಹತ್ತರವಾದ ದುಃಖವನ್ನನುಭವಿಸಿದನು.

೯೯. ಪರಮಪುಣ್ಯಪ್ರದವಾದ ಈ ಇತಿಹಾಸವನ್ನು ಅಹೋರಾತ್ರಗಳಲ್ಲಿಯೂ ಯಾರು ಭಕ್ತಿಶ್ರದ್ಧೆಗಳಿಂದ ಕೇಳುವರೊ, ಅವರು ಜನನ ಮರಣ ವಾರ್ಧಕ್ಯಗಳಿಂದ ಬಿಡುಗಡೆಯನ್ನು ಪಡೆಯುವರೆಂಬುದರಲ್ಲಿ ಸಂದೇಹ ಪಡಬೇಕಾದುದಿಲ್ಲ.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಎರಡನೆಯ ವೈಷ್ಣವಖಂಡದ ವೈಶಾಖಮಾಸಮಾಹಾತ್ಮ್ಯದ
ನಾರದಾಂಬರೀಷ ಸಂವಾದದಲ್ಲಿ " ದಕ್ಷಯಜ್ಞಧ್ವಂಸ–ಪಾರ್ವತೀಜನ್ಮ–ಕಾಮದಹನ
ವರ್ಣನ "ವೆಂಬ ಎಂಟನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥ ನವಮೋಽಧ್ಯಾಯಃ

### ಕುಮಾರೋತ್ಪತ್ತಿ ಕಥನಂ

ಮೈಥಿಲ ಉವಾಚ:—

ತಸ್ಮಾದ್ದಗ್ಧಸ್ಯ ಕಾಮಸ್ಯ ಕಸ್ಮಾಜ್ಜನ್ಮಾಭವದ್ವಿಭೋ ।
ಕಿಂ ದುಃಖಂಸಮಭವತ್ತಸ್ಮಿನ್ ಕರ್ಮಣಃ ಸಹಲಂಘನಾತ್ ॥ ೧ ॥
ಏತದಾಚಕ್ಷ್ವ ಮೇ ಬ್ರಹ್ಮನ್ ಶ್ರೋತುಂ ಕೌತೂಹಲಂ ಹಿ ಮೇ ।

ಶ್ರುತದೇವ ಉವಾಚ:—

ಕುಮಾರಜನ್ಮ ವಕ್ಷ್ಯಾಮಿ ಶ್ರವಣಾತ್ಪಾಪನಾಶನಂ ॥ ೨ ॥
ಯಶಸ್ಯಂ ಪುತ್ರದಂ ಧರ್ಮ್ಯಂ ಸರ್ವರೋಗವಿನಾಶನಂ ॥ ೩ ॥
ಶಂಭುನಾ ತು ಹತೇ ಕಾಮೇ ತತ್ಪತ್ನೀ ರತಿಸಂಜ್ಞಿಕಾ ।
ಮುಮೋಹ ಪುರತೋ ದೃಷ್ಟ್ವಾ ಪತಿಂ ಭಸ್ಮಾವಶೇಷಿತಂ ॥ ೪ ॥

## ಕನ್ನಡದ ಅನುವಾದ

### ಕುಮಾರೋತ್ಪತ್ತಿ ಕಥನ

೧. ಶ್ರುತಕೀರ್ತಿಯು ಕೇಳುತ್ತಾನೆ:—ಸರ್ವಜ್ಞನೆ! ಇಂತು ಮಹೇಶ್ವರನ ಉರಿಗಣ್ಣಿನಿಂದ ಸುಡಲ್ಪಟ್ಟ ಮನ್ಮಥನಿಗೆ ಮತ್ತೆ ಯಾರ ಹೊಟ್ಟೆಯಲ್ಲಿ ಜನ್ಮ ಲಾಭವಾಯಿತು? ಮಹಾದೇವನಿಗೆ ಅಪಕಾರವನ್ನು ಮಾಡಿದ ಕರ್ಮದ ಫಲವಾಗಿ ಆತನಿಗೆ ಯಾವ ವಿಧವಾದ ದುಃಖವುಂಟಾಯಿತು?

೨. ಓ ಬ್ರಾಹ್ಮಣೋತ್ತಮನೆ! ಇದನ್ನು ವಿಸ್ತಾರವಾಗಿ ನನಗೆ ತಿಳಿಸು. ಕೇಳಲು ನನಗೆ ಉತ್ಕಟವಾದ ಕುತೂಹಲವುಂಟಾಗಿರುವುದು. ಶ್ರುತದೇವನು ಹೇಳುತ್ತಾನೆ:—ಇನ್ನು ಕುಮಾರಸ್ವಾಮಿಯ ಜನ್ಮವನ್ನು ವಿವರಿಸುವೆನು. ಆ ಚರಿತ್ರೆಯನ್ನು ಕೇಳುವುದರಿಂದಲೇ ಸಕಲ ಪಾಪಗಳೂ ನಾಶಹೊಂದುವುವು.

೩. ಆ ಕಥೆಯು ಯಶಸ್ಸನ್ನು ಕೊಡುವುದೂ, ಪುತ್ರಪೌತ್ರಸಂತಾನ ಸಂಪಾದಕವೂ, ಧರ್ಮವರ್ಧಕವೂ, ಸಕಲ ದೈಹಿಕ ಮಾನಸಿಕ ರೋಗಗಳನ್ನು ನಿವಾರಿಸುವುದೂ ಆಗಿರುವುದು.

೪. ಶಂಭುವಿನ ಫಾಲನೇತ್ರದಿಂದ ಕಾಮದೇವನು ವಿನಷ್ಟನಾಗಲು ಆತನ ಪತ್ನಿಯಾದ ರತಿದೇವಿಯೆಂಬುವಳು ತನ್ನ ಕಣ್ಣಿನ ಮುಂದೆಯೇ ಪತಿಯು ಭಸ್ಮರಾಶಿಯಾದುದನ್ನು ಕಂಡು ಮೂರ್ಛಿತಳಾದಳು.

ಭೂತಸಂಜ್ಞಾ ಮುಹೂರ್ತೇನ ವಿಲಲಾಪ ಚ ಚಿತ್ರಧಾ ।
ಯದ್ವಿಲಾಪಾದ್ವನಂ ಚಾಪಿ ಸಮದುಃಖಮಭೂತ್ತದಾ ॥ ೫ ॥
ತಚ್ಚಿತಾಗ್ನೌ ಸ್ವಕಾಯಂ ತು ತ್ಯಕ್ತುಕಾಮಾ ಚ ಮಾಧವಂ ।
ಪತ್ಯುಃ ಸಖಾಯಂ ಸಸ್ಮಾರ ಕರ್ತುಂ ತಾತ್ಕಾಲಿಕೀಂ ಕ್ರಿಯಾಂ ॥ ೬ ॥
ಸ ಆಗತಶ್ಚಿತಿಂ ಕರ್ತುಂ ವೀರಪತ್ನ್ಯಾ ಮಹಾಪ್ರಭುಃ ।
ಸ ತು ತ್ರಸ್ತಃ ಸಖೀಂ ದೃಷ್ಟ್ವಾ ಕ್ಷಣಂ ಮೂರ್ಛಾಪರೋಽಭವತ್ ॥ ೭ ॥
ರತಿಂ ತು ಸಾಂತ್ವಯಾಮಾಸ ಸಾಂತ್ವೈರ್ಬಹುವಿಧೈರಪಿ ।
ಪುತ್ರತುಲ್ಯೋಽಸ್ಮಿ ತೇ ಭದ್ರೇ ಸ್ಥಿತೇ ಮಯಿ ಚ ನಾರ್ಹಸಿ ॥ ೮ ॥
ಕಾಯಂ ತ್ಯಕ್ತುಂ ಧರ್ಮಹೇತುಮಿತ್ಯಾದ್ಯೈರ್ಬಹುಧಾಽಪಿ ಸಾ ।
ನೈವ ಸ್ಥಾತುಂ ಮನಶ್ಚಕ್ರೇ ತೇನ ಸಂಸ್ತಂಭಿತಾ ರತಿಃ ॥ ೯ ॥

೫. ಮುಹೂರ್ತ ಮಾತ್ರವಾದ ಮೇಲೆ ಮತ್ತೆ ಪ್ರಜ್ಞೆಯನ್ನು ಪಡೆದವಳಾಗಿ ಅವಳು ಬಹು ವಿಧವಾಗಿ ಪ್ರಲಾಪವನ್ನು ಮಾಡುತ್ತಿದ್ದಳು. ಅವಳ ವಿಲಾಪದಿಂದ ಆ ತಪೋವನವೆಲ್ಲವೂ ಸಮಾನವಾದ ದುಃಖವನ್ನನುಭವಿಸುತ್ತಿದ್ದಂತೆಯೇ ತೋರುತ್ತಿದ್ದಿತು.

೬. ಆತನ ಚಿತೆಯ ಬೆಂಕಿಯಲ್ಲಿಯೇ ತಾನೂ ದೇಹವನ್ನು ತ್ಯಜಿಸ ಬೇಕೆಂಬ ಮನಸ್ಸುಳ್ಳವಳಾಗಿ ಕಾಲೋಚಿತಗಳಾದ ಔರ್ಧ್ವದೇಹಿಕ ಕ್ರಿಯೆ ಗಳನ್ನು ಮಾಡಲು ತನ್ನ ಗಂಡನ ಪರಮ ಮಿತ್ರನಾದ ವಸಂತನನ್ನು ಸ್ಮರಿಸಿ ಕೊಂಡಳು.

೭. ಸರ್ವಶಕ್ತನಾದ ಆತನೂ ಆ ವೀರಪತ್ನಿಗೆ ಚಿತೆಯನ್ನು ಸಿದ್ಧ ಗೊಳಿಸಲು ಅಲ್ಲಿಗೆ ಬಂದನು. ಅವನು ಆ ಸಖಿಯ ಅವಸ್ಥೆಯನ್ನು ಕಂಡು ಮೈನಡುಕವುಂಟಾಗಲು ಬಹಳ ಕಾಲದವರೆಗೂ ಮೂರ್ಛಾಕ್ರಾಂತ ನಾಗಿ ಬಿದ್ದಿದ್ದನು.

೮–೯. ಬಳಿಕ ಎಚ್ಚತ್ತು ಆಕೆಯನ್ನು ಬಹು ವಿಧಗಳಾದ ಸಾಂತ್ವ ವಚನಗಳಿಂದ ಸಮಾಧಾನಗೊಳಿಸಲು ಪ್ರಯತ್ನಿಸಿದನು. "ಮಂಗಳಾಂಗಿಯೆ! ನಾನು ನಿನಗೆ ಪುತ್ರ ಸಮಾನನಾಗಿರುವೆನು. ನಾನು ಜೀವದಿಂದಿರಲು ನೀನು ದೇಹವನ್ನು ಈ ರೀತಿಯಾಗಿ ತ್ಯಜಿಸುವುದು ಯುಕ್ತವಲ್ಲ. ಈ ಶರೀರವೇ ಧರ್ಮಾರ್ಜನೆಗೆ ಹೇತುವಾಗಿರುವುದಲ್ಲವೆ?" ಈ ರೀತಿಯಾದ ಅನೇಕ ವಚನ ಗಳಿಂದ ಸಮಾಧಾನಗೊಳಿಸಲ್ಪಟ್ಟರೂ ಪತಿವಿರಹದಿಂದ ನಿಶ್ಚೇಷ್ಟಳಾಗಿದ್ದ ರತಿಯು ದೇಹಧಾರಣವನ್ನು ಮಾಡಿಕೊಂಡಿರಲು ನಿಶ್ಚಯಿಸಲಿಲ್ಲ.

ದೃಷ್ಟ್ವಾ ದಾರ್ಢ್ಯಂ ವಸಂತೋಽಪಿ ಚಿತಿಂ ಚಕ್ರೇ ಸರಿತ್ತಟೇ ।
ಸಾಽವಗಾಹ್ಯ ದ್ಯುನದ್ಯಾಂಚ ಕೃತ್ವಾ ಕಾರ್ಯಾಣಿ ಸರ್ವಶಃ ॥ ೧೦ ॥
ಸನ್ನಿಯಮ್ಯೇಂದ್ರಿಯಗ್ರಾಮಂ ನಿವೇಶ್ಯಾತ್ಮನಿ ವೈ ಮನಃ ।
ಚಿತಿಮಾರೋಢುಮಾರೇಭೇ ತತೋ ಜಾತಾಽಶರೀರವಾಕ್ ॥ ೧೧ ॥
ಮಾ ಪ್ರವೇಶ ಕಲ್ಯಾಣಿ ವಹ್ನಿಂ ಪತಿಪರಾಯಣಾ ।
ಭವಿಷ್ಯತಿ ಚ ತೇ ಪತ್ಯುರ್ಹರಾದ್ವಿಷ್ಣೋಶ್ಚ ಯಾದವಾತ್ ॥ ೧೨ ॥
ಜನ್ಮದ್ವಯಂ ಕ್ರಮೇಣೈವ ತತ್ರ ಚೋತ್ತರಜನ್ಮನಿ ।
ಭೈಷ್ಮ್ಯಾಂ ಕೃಷ್ಣಾನ್ಮಹಾವಿಷ್ಣೋಃ ಪ್ರದ್ಯುಮ್ನಾಖ್ಯೋ ಭವಿಷ್ಯತಿ ॥ ೧೩ ॥
ವಸಿಷ್ಯಸಿ ತ್ವಂ ಚ ಶಾಪಾದ್ಬ್ರಹ್ಮಣಃ ಶಂಬರಾಲಯೇ ।
ಪ್ರದ್ಯುಮ್ನಾಖ್ಯೇನ ತೇ ಪತ್ಯಾ ಸಂತತಿಶ್ಚ ಭವಿಷ್ಯತಿ ॥ ೧೪ ॥
ಇತ್ಯುಕ್ತ್ವಾ ವಿರರಾಮಾಽಥ ವಾಣೀ ಚಾಽಽಕಾಶಗೋಚರಾ ।
ಶ್ರುತ್ವಾ ತಾಂ ತು ನಿವೃತ್ತಾಽಭೂನ್ಮರಣೇ ಕೃತನಿಶ್ಚಯಾ ॥ ೧೫ ॥

೧೦-೧೧. ಆಕೆಯ ಮನೋದಾರ್ಢ್ಯವನ್ನು ಕಂಡು ವಸಂತನೂ ಗಂಗಾನದಿಯ ದಡದಲ್ಲಿಯೇ ಚಿತಿಯನ್ನು ನಿರ್ಮಿಸಿದನು. ಆಕೆಯು ಗಂಗಾನದಿಯಲ್ಲಿ ಸ್ನಾನವನ್ನು ಮಾಡಿಕೊಂಡು ಉಚಿತ ಕಾರ್ಯಗಳೆಲ್ಲವನ್ನೂ ಸಮಗ್ರವಾಗಿ ಆಚರಿಸಿ, ಸಕಲೇಂದ್ರಿಯಗಳನ್ನೂ ಸಂಯಮನ ಮಾಡಿಕೊಂಡು, ಆತ್ಮವಸ್ತುವಿನಲ್ಲಿಯೇ ತನ್ನ ಮನಸ್ಸನ್ನು ಏಕಾಗ್ರಗೊಳಿಸಿ ಚಿತಿಯನ್ನು ಹತ್ತಲು ಪ್ರಾರಂಭಿಸಿದಳು. ಆಗ ಆಕೆಗೆ ಅಶರೀರವಾಣಿಯೊಂದು ಹೇಳತೊಡಗಿತು.

೧೨-೧೩. "ಎಲೆ ಕಲ್ಯಾಣಿ! ಪತಿಪರಾಯಣೆಯಾದ ನೀನು ಅಗ್ನಿಪ್ರವೇಶವನ್ನು ಮಾಡಬೇಡ. ನಿನ್ನ ಪತಿಯಾದ ಮನ್ಮಥನಿಗೆ ಶಿವನಿಂದಲೂ ಯದುವಂಶದಲ್ಲಿ ಹುಟ್ಟುವ ಶ್ರೀಕೃಷ್ಣರೂಪಿಯಾದ ಮಹಾ ವಿಷ್ಣುವಿನಿಂದಲೂ ಕ್ರಮವಾಗಿ ಎರಡು ಜನ್ಮಗಳು ಲಭಿಸುವುವು. ಆ ಎರಡನೆಯ ಜನ್ಮದಲ್ಲಿ ವಿಷ್ಣುವಿನ ಅವತಾರವಾದ ಶ್ರೀಕೃಷ್ಣನಿಂದ ಅವನು ರುಕ್ಮಿಣೀದೇವಿಯಲ್ಲಿ ಪ್ರದ್ಯುಮ್ನನೆಂಬ ಹೆಸರಿನಿಂದ ಜನಿಸುವನು.

೧೪. ನೀನು ಬ್ರಹ್ಮದೇವನ ಶಾಪದಿಂದ ಗ್ರಸ್ತಳಾಗಿರುವೆಯಾಗಿ ಶಂಬರಾಸುರನ ಅರಮನೆಯಲ್ಲಿ ವಾಸಮಾಡುವೆ. ಪ್ರದ್ಯುನೆಂಬ ಹೆಸರಿನ ಆ ಪತಿಯೊಡನೆ ನಿನ್ನ ಸಮಾಗಮವು ಕಾಲಾನುಸಾರವಾಗಿ ಅಲ್ಲಿಯೆ ನಡೆಯುವುದು."

೧೫. ಇಂತೆಂದು ಆಕಾಶದಲ್ಲಿಯೇ ನುಡಿಯುತ್ತಿದ್ದ ಅಶರೀರವಾಣಿಯು ನಿಂತುಹೋಯಿತು. ಈ ವಾರ್ತೆಯನ್ನು ಕೇಳಿ ಮರಣದಲ್ಲಿಯೇ ನಿಶ್ಚಿತ ಮನಸ್ಕಳಾಗಿದ್ದ ರತಿದೇವಿಯು ಆ ಕಾರ್ಯದಿಂದ ನಿವೃತ್ತಳಾದಳು.

ತತೋ ದೇವಾಃ ಸಮಾಜಗ್ಮುಃ ಸ್ವಾರ್ಥೇ ಕಾಮೇ ಹತೇ ಹರಾತ್ ।
ರತ್ಯಾ ಕೃತಂ ಪ್ರಪಶ್ಯಂತೋ ಗುರ್ವಿಂದ್ರಾಗ್ನಿಪುರೋಗಮಾಃ ।
ತಾಂ ತೇ ನಿವರ್ತಯಾಮಾಸುರ್ವರೇಣ ಮಹತಾ ಸತೀಂ ॥ ೧೬ ॥
ಅನಂಗೋಽಪಿ ಭವತ್ಯಾಂಗೋ ಮೃತವಿವಾಕ್ಷಿಗೋ ಭವೇತ್ ।
ಇತಿ ತಾಂತು ವಿನಿರ್ವರ್ತ್ಯ ಧರ್ಮಂ ಚೋಪದಿದೇಶಿರೇ ॥ ೧೭ ॥
ಪೂರ್ವಕಲ್ಪೇ ತ್ವಯಂ ರಾಜಾ ಸುಂದರಾಖ್ಯೋ ಮಹಾಪ್ರಭುಃ ।
ತ್ವಮೇವ ಪತ್ನೀ ತಸ್ಯಾಪಿ ರಜಃಸಂಕರಕಾರಿಣೀ ॥ ೧೮ ॥
ತೇನೇಯಂ ಚ ದಶಾಭೂತ್ತೇ ಕುರ್ವಿದಾನೀಂ ಚ ನಿಷ್ಕೃತಿಂ ।
ಮಂದಾಕಿನ್ಯಾಂ ತು ವೈಶಾಖೇ ಪ್ರಾತಃಸ್ನಾನಂ ತದಾ ಕುರು ॥ ೧೯ ॥
ಮಧುಸೂದನಮಭ್ಯರ್ಚ್ಯ ಕಥಾಂ ದಿವ್ಯಾಂ ತಥಾ ಶೃಣು ।
ಅಶೂನ್ಯಶಯನಂ ನಾಮ ವ್ರತಮಾರಭ ಭಾಮಿನಿ ॥ ೨೦ ॥

೧೬. ಈ ರೀತಿಯಾಗಿ ತನ್ನ ಕಾರ್ಯಸಾಧನೆಯಲ್ಲಿ ನಿರತನಾಗಿ ಮಹೇಶ್ವರನಿಂದ ಸಂಹೃತನಾದ ಮನ್ಮಥನನ್ನೂ ದೇಹತ್ಯಾಗವನ್ನು ಮಾಡಲು ಸಿದ್ಧಳಾಗಿದ್ದ ರತಿಯನ್ನೂ ಕಂಡು ಬೃಹಸ್ಪತಿ, ಮಹೇಂದ್ರ, ಅಗ್ನಿ ಮುಂತಾದ ದೇವತೆಗಳೆಲ್ಲರೂ ಆ ಪತಿವ್ರತಾಶಿರೋಮಣಿಯನ್ನು ತನ್ನ ಮನೋರಥದಿಂದ ಹಿಂದಿರುಗಿಸಲು ದುರ್ಲಭವಾದ ವರವನ್ನು ಕೊಟ್ಟು ಪ್ರಬೋಧಗೊಳಿಸಿದರು.

೧೭. "ಎಲೈ ದೇವಿಯೇ! ನಿನ್ನ ಪತಿಯು ಭಸ್ಮೀಭೂತನಾಗಿಯೂ ನಿನಗೆ ಮಾತ್ರ ಸಶರೀರನಾಗಿಯೇ ಸುಖಗಳನ್ನು ಕೊಡುತ್ತಿರುವನು. ಮೃತನಾಗಿದ್ದರೂ ನಿನ್ನ ನೇತ್ರಗಳಿಗೆ ಯಾವಾಗಲೂ ಪ್ರತ್ಯಕ್ಷನಾಗಿಯೇ ಇರುವನು." ಇಂತೆಂದು ಆಕೆಯನ್ನು ತನ್ನ ಉದ್ದೇಶದಿಂದ ಹಿಂತಿರುಗಿಸಿ ಧರ್ಮವನ್ನು ಉಪದೇಶ ಮಾಡತೊಡಗಿದರು.

೧೮. "ಹಿಂದಿನ ಕಲ್ಪದಲ್ಲಿ ಈ ಕಾಮದೇವನು ಸುಂದರನೆಂಬ ಹೆಸರಿನ ಮಹಾರಾಜನಾಗಿ ರಾಜ್ಯವನ್ನು ಆಳುತ್ತಿದ್ದನು. ನೀನೂ ಆತನಿಗೆ ಆ ಜನ್ಮದಲ್ಲಿಯೂ ಪತ್ನಿಯಾಗಿದ್ದೆ. ರಜಃಕಾಲದಲ್ಲಿ ಆಗ ನೀನು ಗೃಹಸಂಕವನ್ನು ಮಾಡಿದವಳಾದೆ.

೧೯. ಆದುದರಿಂದಲೇ ನಿನಗೆ ಈ ಜನ್ಮದಲ್ಲಿ ಈ ಅವಸ್ಥೆಯುಂಟಾಯಿತು. ಅದಕ್ಕಾಗಿ ಈಗ ನೀನು ಪ್ರಾಯಶ್ಚಿತ್ತವನ್ನು ಮಾಡಿಕೊಳ್ಳಬೇಕು. ವೈಶಾಖ ಮಾಸದಲ್ಲಿ ಪ್ರತಿ ಪ್ರಾತಃಕಾಲದಲ್ಲಿಯೂ ಗಂಗಾನದಿಯಲ್ಲಿ ಸ್ನಾನವನ್ನು ಮಾಡು.

೨೦. ಶ್ರೀಮನ್ನಾರಾಯಣನನ್ನು ಭಕ್ತಿಯಿಂದ ಪೂಜಿಸಿ ಆತನ ದಿವ್ಯಚರಿತ್ರೆಯನ್ನು ಶ್ರದ್ಧೆಯಿಂದ ಕೇಳು. ಎಲೌ ಸುಂದರಿಯೆ! ಅಶೂನ್ಯಶಯನವೆಂಬ ಉತ್ತಮ ವ್ರತವನ್ನು ನೀನು ಇಂದಿನಿಂದಲೇ ಆರಂಭಿಸು.

ಧರ್ಮೇಣಾನೇನ ತೇ ಭದ್ರೇ ವ್ರತೇನಾಽಪಿ ಚ ಮಾಧವೇ ।
ನೂನಂ ತೇ ಭವಿತಾ ಪತ್ಯುರುಪಲಬ್ಧಿರ್ನ ಸಂಶಯಃ ॥ ೨೦ ॥
ಇತಿ ತಸ್ಯೈ ವರಂ ದತ್ವಾ ದೇವಾ ಜಗ್ಮುರ್ಯಥಾಽಽಗತಾಃ ।
ತಥಾ ಕೃಚ್ಛ್ರಾನ್ನಿವೃತ್ತಾ ಸಾ ದೇವೀ ಕಾಮಸತೀ ತಥಾ ॥ ೨೨ ॥
ಗಂಗಾಽವಗಾಹನಂ ಚಕ್ರೇ ಮೇಷಸಂಸ್ಥೇ ದಿವಾಕರೇ ।
ಅಶೂನ್ಯಶಯನಂ ನಾಮ ವ್ರತಂ ಚಾಽಪಿ ಮಹಾಮನಾಃ ॥ ೨೩ ॥
ತೇನ ಪುಣ್ಯಪ್ರಭಾವೇನ ಸದ್ಯಃ ಕಾಮೋಽಕ್ಷಿಗೋಚರಃ ।
ಅಭೂತ್ತಸ್ಯೈ ಮಹಾರಾಜ ಲೋಕೇ ಚಾವಾರ್ಯವೀರ್ಯವಾನ್ ॥೨೪॥
ಪೂರ್ವಕಲ್ಪೇಽಪ್ಯಯಮಪಿ ರಾಜಾಧರ್ಮಪರಾಯಣಃ ।
ವೈಶಾಖೋಕ್ತಾನ್ಮಹಾಧರ್ಮಾನ್ನಾಕರೋತ್ತೇನ ವೈ ಸ್ಮರಃ ।
ದೇಹಹಾನಿಂ ಪ್ರಪೇದೇಽಸೌ ಪುತ್ರೋಽಪಿ ಪರಮಾತ್ಮನಃ ॥ ೨೫ ॥

೨೧. ಮಂಗಳೆಯೆ! ಈ ಧರ್ಮಾಚರಣೆಯಿಂದಲೂ ವೈಶಾಖಮಾಸದ ವ್ರತವನ್ನಾಚರಿಸುವುದರಿಂದಲೂ ನಿನ್ನ ಸ್ವಾಮಿಯು ನಿನ್ನನ್ನು ಸೇರುವುದರಲ್ಲಿ ಸಂದೇಹಕ್ಕೆ ಖಂಡಿತವಾಗಿಯೂ ಆಸ್ಪದವಿರುವುದಿಲ್ಲ.''

೨೨. ಇಂತೆಂದು ಅತ್ಯಂತ ದುರ್ಲಭವಾದ ವರವನ್ನು ಕೊಟ್ಟು ದೇವತೆಗಳೆಲ್ಲರೂ ತಮ್ಮ ತಮ್ಮ ಸ್ಥಾನಗಳಿಗೆ ಹಿಂದಿರುಗಿದರು. ಈ ವಿಧವಾಗಿ ಕಾಮದೇವನ ಪತ್ನಿಯಾದ ರತೀದೇವಿಯು ತನ್ನ ಕಷ್ಟದಿಂದ ನಿವಾರಣೆಯನ್ನು ಹೊಂದಿದಳು.

೨೩. ಬಳಿಕ ಸೂರ್ಯನು ಮೇಷರಾಶಿಗತನಾಗಿರುವ ಮಾಸದಲ್ಲಿ ಪ್ರಾತಃಕಾಲದ ಗಂಗಾಸ್ನಾನವನ್ನು ಮಾಡಿದಳು. ಮಹಾ ಬುದ್ಧಿವಂತೆಯಾದ ಆಕೆಯು ಅಶೂನ್ಯಶಯನವೆಂಬ ವ್ರತವನ್ನೂ ಸಮಗ್ರವಾಗಿ ಆಚರಿಸಿದಳು.

೨೪. ಆ ಎರಡು ವ್ರತಾಚಾರಣೆಗಳ ಪುಣ್ಯದ ಫಲವಾಗಿ ಮನ್ಮಥನು ನಿರಂತರವೂ ಆಕೆಗೆ ಪ್ರತ್ಯಕ್ಷಗೋಚರನಾಗಿರುತ್ತಿದ್ದನು. ಎಲೈ ಮಹಾರಾಜನೆ! ಆತನೇ ಮೂರು ಲೋಕಗಳಲ್ಲಿಯೂ ಅನಿವಾರ್ಯವಾದ ಪರಾಕ್ರಮವುಳ್ಳವನೂ ಆದನು.

೨೫. ಪೂರ್ವಕಲ್ಪದಲ್ಲಿ ಈತನೂ ಧರ್ಮಕಾರ್ಯಗಳಲ್ಲಿ ನಿರತನಾಗಿದ್ದ ಮಹಾರಾಜನಾಗಿದ್ದನು. ಆದರೆ ಶಾಸ್ತ್ರೋಕ್ತಗಳಾಗಿರುವ ವೈಶಾಖಮಾಸ ಧರ್ಮಗಳನ್ನು ಆಚರಿಸಲಿಲ್ಲ. ಆದುದರಿಂದಲೇ ಮನ್ಮಥನು ಮಹಾವಿಷ್ಣುವಿನ ಮಗನಾದರೂ ಈಶ್ವರನಿಂದ ದೇಹನಾಶವನ್ನು ಹೊಂದುವವನಾದನು.

ವೃಥಾನೀತೇ ತು ವೈಶಾಖೇ ಮೇಷಸಂಸ್ಥೇ ದಿವಾಕರೇ।
ಅವಸ್ಥೇಯಂ ಚ ದೇವಾನಾಂ ಮನುಷ್ಯಾಣಾಂತುಕಾ ಕಥಾ ॥ ೨೬ ॥
ತ್ರ್ಯಂಬಕೇಽಂತರ್ಹಿತೇ ಪಶ್ಚಾನ್ನಿರಾಶಾ ಗಿರಿಕನ್ಯಕಾ ।
ತೂಷ್ಣೀಂ ಸ್ಥಿತಾಂ ತದಾ ಭೂತಾಂ ತಾಂ ದೃಷ್ಟ್ವಾ ಹಿಮವಾನ್ಗಿರಿಃ ॥ ೨೭ ॥
ಚಕಿತಃ ಸ್ವಗೃಹಂ ನಿನ್ಯೇ ದೋರ್ಭ್ಯಾಂ ತಾಂ ಪರಿರಭ್ಯ ಚ ।
ರೂಪೌದಾರ್ಯಗುಣಾನ್ ದೃಷ್ಟ್ವಾ ಹರಸ್ಯೈವ ಮಹಾತ್ಮನಃ ॥ ೨೮ ॥
ಸ ಏವ ಮೇ ಪತಿರ್ಭೂಯಾದಿತಿ ತನ್ನಿಷ್ಠಮಾನಸಾ ।
ಗಂಗೋಪಕೂಲಮಾಪೇದೇ ತಪಸ್ತಪ್ತುಂ ಧೃತವ್ರತಾ ॥ ೨೯ ॥
ನಿವಾರಿತಾಽಪಿ ಸಾ ದೇವೀ ಪಿತ್ರಾ ಮಾತ್ರಾ ಸ್ವಕೈರ್ಜನೈಃ ।
ಅರ್ಚಯಂತೀ ಮಹಾಲಿಂಗಂ ನಿರಾಹಾರಾ ಜಟಾಧರಾ ॥ ೩೦ ॥
ದಿವ್ಯವರ್ಷಸಹಸ್ರಾಂತೇ ಪ್ರತ್ಯಕ್ಷೋಽಭೂನ್ಮಹೇಶ್ವರಃ ।
ಭೂತ್ವಾ ವರ್ಣ್ಯಪಿ ಸಾಯಾಹ್ನೇ ಪರ್ಣಶಾಲಾಮುಖೇ ವಿಭುಃ ॥ ೩೧ ॥

---

೨೬. ಸೂರ್ಯನು ಮೇಷರಾಶಿಸ್ಥನಾಗಿರುವ ವೈಶಾಖಮಾಸವನ್ನು ವ್ಯರ್ಥವಾಗಿ ಕಳೆಯಲು ದೇವತೆಗಳಿಗೂ ಕೂಡ ಈ ವಿಧವಾದ ಅವಸ್ಥೆಯು ಉಂಟಾಗುವುದೆಂದ ಮೇಲೆ ಮನುಷ್ಯ ಸಾಮಾನ್ಯರ ಪಾಡೇನು?

೨೭–೨೯. ತ್ರಿನೇತ್ರನು ಮನ್ಮಥನನ್ನು ಸುಟ್ಟು ಅಂತರ್ಧಾನವನ್ನು ಹೊಂದಲು ಗಿರಿಪುತ್ರಿಕೆಯು ನಿರಾಶೆಯಿಂದ ಕೂಡಿದವಳಾದಳು. ದಿಗ್ಭ್ರಾಂತಳಾಗಿ ಸುಮ್ಮನೆ ನಿಂತಿದ್ದ ಮಗಳನ್ನು ಕಂಡು ಆಶ್ಚರ್ಯಚಕಿತನಾದ ಹಿಮವದ್ರಾಜನು ತನ್ನ ಬಾಹುಗಳಿಂದ ಆಕೆಯನ್ನು ಆಲಂಗಿಸಿಕೊಂಡು ತನ್ನ ಅರಮನೆಗೆ ಕರೆದು ಕೊಂಡು ಹೋದನು. ಪಾರ್ವತಿಯೂ ಮಹಾಮಹಿಮನಾದ ಪರಮೇಶ್ವರನ ರೂಪ, ಔದಾರ್ಯ ಮುಂತಾದ ಸದ್ಗುಣಗಳನ್ನು ಕಂಡು ಆತನೇ ತನಗೆ ಪತಿಯಾಗಬೇಕೆಂದು ನಿಶ್ಚಯಿಸಿ ಆತನಲ್ಲಿಯೇ ನಟ್ಟ ಮನಸ್ಸುಳ್ಳವಳಾದಳು. ಮತ್ತು ಉಗ್ರವಾದ ವ್ರತವನ್ನು ಧರಿಸಿದವಳಾಗಿ ತಪಸ್ಸನ್ನು ಮಾಡಲು ಗಂಗಾ ನದಿಯ ದಡವನ್ನು ಸೇರಿದಳು.

೩೦. ತಂದೆಯೂ, ತಾಯಿಯೂ, ಬಂಧುಬಳಗಗಳೂ ಎಷ್ಟು ನಿವಾರಿಸಿದರೂ ಆಹಾರವನ್ನು ತ್ಯಜಿಸಿ ಜಡೆಗಳನ್ನು ಧರಿಸಿ ಆಕೆಯು ಶಿವನ ಮಹಾ ಲಿಂಗವನ್ನು ನಿಯಮದಿಂದ ಪೂಜಿಸುತ್ತಿದ್ದಳು.

೩೧. ಒಂದು ಸಾವಿರ ವರ್ಷಗಳು ದೇವಮಾನಗಳಲ್ಲಿ ಕಳೆಯಲು ಆಕೆಗೆ ಮಹೇಶ್ವರನು ಪ್ರತ್ಯಕ್ಷನಾದನು. ಒಂದಾನೊಂದು ಸಾಯಂಸಮಯದಲ್ಲಿ ಬ್ರಹ್ಮಚಾರಿಯ ವೇಷವನ್ನು ಧರಿಸಿಕೊಂಡು ಸರ್ವವ್ಯಾಪಿಯಾದ ಶಿವನು ಆಕೆಯು ತಪಸ್ಸನ್ನು ಮಾಡುತ್ತಿದ್ದ ಪರ್ಣಶಾಲೆಯ ಬಾಗಿಲಿನಲ್ಲಿ ಬಂದು ನಿಂತನು.

ಸ್ವನಿಷ್ಠ ಮನಸೋ ದಾರ್ಢ್ಯಂ ವಾಕ್ಯೈರ್ನಾನಾವಿಧೈರಪಿ ।
ಜ್ಞಾತ್ವಾ ವರಾದರಂ ಭದ್ರೇ ವರಯೇತಿ ಮಹಾಪ್ರಭುಃ ॥ ೩೨ ॥
ಸಾ ವವ್ರೇಽಥ ಪತಿಂ ರುದ್ರಂ ತ್ವಂ ಭವೇತಿ ವರಾನನಾ ।
ಸ ತಥೈವ ವರಂ ದತ್ವಾ ಋಷೀನ್ಸಸ್ಮಾರ ಸಪ್ತ ಚ ॥ ೩೩ ॥
ಆಜಗ್ಮುಸ್ತೇಽಪಿ ಮುನಯಃ ಸ್ಥಿತಾಃ ಪ್ರಾಂಜಲಯಃ ಪುರಃ ।
ಋಷೀನಾಜ್ಞಾಪಯಾಮಾಸ ಕನ್ಯಾಂ ಪ್ರಷ್ಟುಂ ಹಿಮಾಲಯಂ ॥ ೩೪ ॥
ತಥಾಽಽದಿಷ್ಟಾ ಭಗವತಾ ಕನ್ಯಾರ್ಥಂ ಹಿಮವದ್ಗೃಹಂ ।
ಪ್ರಾಪುರ್ವಿಹಾಯಸಾ ಸರ್ವೇ ದ್ಯೋತಯಂತೋ ದಿಶೋದಶ ॥ ೩೫ ॥
ಪ್ರತ್ಯುಜ್ಜಗಾಮ ಸ ಗಿರಿಃ ಸಪ್ತೈತಾನ್ಬ್ರಹ್ಮವಿತ್ತಮಾನ್ ।
ಸಂಪೂಜ್ಯ ವಿಧಿವತ್ಸರ್ವಾನ್ ಸುಖಾಸೀನಾನಪೃಚ್ಛತ ॥ ೩೬ ॥

---

೩೨. ತನ್ನಲ್ಲಿಯೇ ಸ್ಥಿರವಾಗಿ ನೆಲೆಗೊಂಡ ಆಕೆಯ ಮನಸ್ಸಿನ ದಾರ್ಢ್ಯವನ್ನು ಬಹು ವಿಧಗಳಾದ ವಾಕ್ಯಗಳಿಂದ ಪರೀಕ್ಷಿಸಿ ಸಂತೋಷಗೊಂಡು "ಎಲೌ ಶುಭಾಂಗಿಯೆ! ನಿನಗೆ ಬೇಕಾದ ಉತ್ತಮ ವರವನ್ನು ಬೇಡಿಕೊ" ಎಂದು ಹೇಳಿದನು.

೩೩. ಆಕೆಯೂ ಮಹಾದೇವನನ್ನು ಕುರಿತು "ನೀನೇ ನನಗೆ ಪತಿಯಾಗಬೇಕು" ಎಂಬುದಾಗಿ ವರವನ್ನು ಕೇಳಿಕೊಂಡಳು. ಆತನೂ ಆ ವರವನ್ನೇ ದಯಪಾಲಿಸಿದವನಾಗಿ ತನ್ನ ಕಾರ್ಯಸಿದ್ಧಿಗಾಗಿ ಸಪ್ತರ್ಷಿಗಳನ್ನು ಸ್ಮರಿಸಿಕೊಂಡನು.

೩೪. ಆ ಮಹಾಮುನಿಗಳೂ ಸ್ಮರಿಸಿದ ಮಾತ್ರದಿಂದಲೇ ಅಲ್ಲಿಗೆ ಪ್ರಾಪ್ತರಾಗಿ ಆತನ ಮುಂದೆ ಬದ್ಧಾಂಜಲಿಪುಟರಾಗಿ ನಿಂತುಕೊಂಡರು. ಪರಮೇಶ್ವರನು ಅವರನ್ನು ಕುರಿತು ಪರ್ವತರಾಜನಲ್ಲಿಗೆ ಹೋಗಿ ತನಗಾಗಿ ಕನ್ಯೆಯನ್ನು ಯಾಚಿಸುವಂತೆ ಪ್ರೇರೇಪಿಸಿ ಕಳುಹಿಸಿದನು.

೩೫. ಇಂತು ಪರಮಾತ್ಮನಿಂದ ಆಜ್ಞೆಯನ್ನು ಹೊಂದಿ ಆ ಮಹರ್ಷಿಗಳೆಲ್ಲರೂ ಆಕಾಶ ಮಾರ್ಗದಲ್ಲಿ ಸಂಚರಿಸುತ್ತ ತಮ್ಮ ಬ್ರಾಹ್ಮತೇಜಸ್ಸಿನಿಂದ ಹತ್ತು ದಿಕ್ಕುಗಳನ್ನೂ ಬೆಳಗುತ್ತಿರುವವರಾಗಿ ಸದಾಶಿವನಿಗೋಸ್ಕರ ಕನ್ಯೆಯನ್ನು ಯಾಚಿಸಲು ಹಿಮಾಲಯವನ್ನು ಸೇರಿ ಪರ್ವತರಾಜನ ಅರಮನೆಯ ಬಾಗಿಲಿಗೆ ಬಂದು ನಿಂತರು.

೩೬. ಅವರ ಬರವನ್ನು ತಿಳಿದು ಪರ್ವತರಾಜನೂ ಹೊರಕ್ಕೆ ಬಂದು ಬ್ರಹ್ಮಜ್ಞಾನಿಗಳಲ್ಲಿ ಸರ್ವೋತ್ತಮರೆನಿಸಿದ ಆ ಏಳು ಮಂದಿಯನ್ನೂ ಪ್ರತ್ಯುತ್ಥಾನಾದಿಗಳಿಂದ ಪೂಜಿಸಿ ವಿಧ್ಯುಕ್ತಗಳಾದ ಅತಿಥಿ ಸತ್ಕಾರಗಳಿಂದ ತೃಪ್ತಿಗೊಳಿಸಿ ಸುಖಾಸನಗಳಲ್ಲಿ ಮಂಡಿಸಿದ್ದ ಅವರನ್ನು ಕೇಳತೊಡಗಿದನು.

ಧನ್ಯೋಽಸ್ಮಿ ಕೃತಕೃತ್ಯೋಽಸ್ಮಿ ಯದ್ಭವಂತೋ ಗೃಹಾಽಽಗತಾಃ ।
ಭವದಾಗಮನಂ ಮನ್ಯೇ ಮಮ ಜನ್ಮಫಲಂ ತ್ವಿತಿ ॥ ೩೭ ॥
ನ ಕೃತಂ ವಿದ್ಯತೇಽಸ್ಮಾಭಿಃ ಪೂರ್ಣಾರ್ಥಾನಾಂ ಮಹಾತ್ಮನಾಂ ।
ತಥಾಽಪಿ ಭೂತಕಾರ್ಯಂ ವೋ ಯತ್ಕರ್ತವ್ಯಂ ಮಯಾಽಧುನಾ ॥ ೩೮ ॥
ಇತ್ಯುಕ್ತಾಸ್ತೇ ತಥಾಪ್ಯೂಚುರ್ಹಿಮವಂತಂ ಮಹಾಗಿರಿಂ ।
ತ್ವಯಾ ಸ್ವಸದೃಶಂ ವಾಕ್ಯಮುಕ್ತಂ ಗಿರಿಪತೇ ದೃಢಂ ॥ ೩೯ ॥
ಅಸ್ಮದಾಗಮನೇ ಹೇತುಂ ವಕ್ಷ್ಯಾಮ ತೇ ಮಹೋದಯೇ ।
ಕನ್ಯಾ ತೇ ಪಾರ್ವತೀ ನಾಮ ಪೂರ್ವಂ ದಕ್ಷಾತ್ಮಜಾ ಸತೀ ॥ ೪೦ ॥
ಜಾತಾ ತವ ಕುಮಾರೀ ಯಾ ಯಜ್ಞೇ ತ್ಯಕ್ತಕಳೇಬರಾ ।
ಅಸ್ಯಾಃ ಪಾಣಿಗ್ರಹೇ ದಕ್ಷಃ ಶಂಭುರ್ನಾಽನ್ಯೋ ಜಗತ್ರಯೇ ॥ ೪೧ ॥

೩೭. "ನಾನು ಧನ್ಯನಾದೆನು. ನೀವು ನಮ್ಮ ಮನೆಗೆ ದಯಮಾಡಿಸಿದುದರಿಂದ ನಾನು ಇಂದು ಕೃತಕೃತ್ಯನಾದೆನು. ನನ್ನ ಪೂರ್ವ ಜನ್ಮಗಳಲ್ಲಿ ಸಂಪಾದಿಸಿದ ಪುಣ್ಯಗಳ ಫಲದ ರೂಪವಾಗಿಯೇ ನೀವು ನಮ್ಮ ಮನೆಗೆ ಬಂದಿರೆಂದು ತಿಳಿಯುವೆನು.

೩೮. ಆದರೂ ನೀವು ಸಂಪೂರ್ಣ ಮನೋರಥರೂ, ಮಹಾತ್ಮರೂ ಆಗಿರುವುದರಿಂದ ನಮ್ಮಂತಹ ಅಲ್ಪಜ್ಞರಿಂದ ನಿಮಗೆ ಲಭ್ಯವಾಗಬೇಕಾದುದು ಯಾವುದೂ ಇಲ್ಲ. ಆದರೂ ನೀವು ಇಲ್ಲಿಗೆ ಒಂದ ಕಾರ್ಯಗೌರವವನ್ನು ನನ್ನಿಂದ ನಿಮಗೆ ಆಗಬೇಕಾದ ಸೇವೆಯನ್ನು ಅಪ್ಪಣೆ ಮಾಡಿರಿ."

೩೯. ಇಂತೆಂದು ಆತನು ಬಿನ್ನವಿಸಲು ಆ ಸಪ್ತರ್ಷಿಗಳು ಪರ್ವತಶ್ರೇಷ್ಠನಾದ ಹಿಮವಂತನಿಗೆ ತಮ್ಮ ಆಗಮನಕ್ಕೆ ಕಾರಣವನ್ನು ತಿಳಿಸಿದರು. "ಅಯ್ಯಾ ಗಿರಿರಾಜನೇ ನಿಜವಾಗಿಯೂ ನಿನ್ನ ಕುಲಶೀಲಗಳಿಗೆ ಸದೃಶವಾದ ಮಾತುಗಳನ್ನೇ ನೀನು ಆಡಿರುವೆ.

೪೦. ನಿನಗೆ ಮಹೋತ್ಸವದ ಸಂಭ್ರಮವನ್ನುಂಟುಮಾಡಬೇಕೆಂಬ ಕಾರಣದಿಂದ ಬಂದಿರುವ ನಮ್ಮ ಆಗಮನಕ್ಕೆ ಕಾರಣವನ್ನು ಹೇಳುವೆವು. ಈಗ ನಿನಗೆ ಜನಿಸಿರುವ ಪಾರ್ವತಿಯೆಂಬ ಹೆಸರಿನ ಕನ್ಯಾರತ್ನವು ಹಿಂದಿನ ಜನ್ಮದಲ್ಲಿ ದಕ್ಷಬ್ರಹ್ಮನ ಮಗಳಾಗಿ ಸತೀದೇವಿಯೆನಿಸಿದ್ದಳು.

೪೧. ತಂದೆಯ ಯಜ್ಞದಲ್ಲಿ ಅಪಮಾನವನ್ನು ಸಹಿಸಲಾರದೆ ಅಗ್ನಿಯಲ್ಲಿ ದೇಹವನ್ನು ತ್ಯಜಿಸಿ ಈಗ ನಿನ್ನ ಕುಮಾರಿಯಾಗಿ ಜನಿಸಿರುವಳು. ಈಕೆಯ ಕೈಯನ್ನು ಹಿಡಿಯಲು ಪರಮಶಿವನೊಬ್ಬನೇ ಸರಿಯಾದ ವರನಲ್ಲದೆ ಮೂರು ಲೋಕಗಳಲ್ಲಿಯೂ ಮತ್ತೊಬ್ಬನಾವನೂ ಸಿಕ್ಕಲಾರನು.

ದೇಯಾ ಸಾ ಶಂಭವೇ ದೇವೀ ಭವತಾಽನಂತ್ಯಮಿಚ್ಛತಾ ॥ ೪೨ ॥
ಪೂರ್ವಜನ್ಮಸಹಸ್ರೇಷು ಭವತಾ ಸುಕೃತಂ ಕೃತಂ ।
ಇದಾನೀಂ ತವ ದಿಷ್ಟ್ಯಾತು ಪರಿಪಾಕಮುಪಾಗತಂ ॥ ೪೩ ॥
ತೇಷಾಂ ತದ್ವಚನಂ ಶೃತ್ವಾ ಸಂದೃಷ್ಟಾತ್ಮಾ ಮಹಾಗಿರಿಃ ।
ವ್ಯಾಜಹಾರ ಪುನರ್ವಾಕ್ಯಂ ಪುತ್ರೀ ವಲ್ಕಲಧಾರಿಣೀ ॥ ೪೪ ॥
ಗಂಗಾತೀರೇ ನಿರಾಹಾರಾ ತಪಸ್ತಪತಿ ದುಶ್ಚರಂ ।
ಕಾಂಕ್ಷಮಾಣಾ ಪತಿಂ ಶಂಭುಂ ತಸ್ಯಾ ಇಷ್ಟಮಿದಂ ತ್ವಿತಿ ॥ ೪೫ ॥
ದತ್ತಾ ಕನ್ಯಾ ಮಯಾ ತಸ್ಮೈ ತ್ರ್ಯಂಬಕಾಯ ಮಹಾತ್ಮನೇ ।
ಶೀಘ್ರಂ ಗತ್ವಾ ಭವಂತಸ್ತು ಯತ್ರ ಶಂಭುರ್ಮಹಾಪ್ರಭುಃ ॥ ೪೬ ॥
ಪ್ರೀತ್ಯಾ ಹಿಮವತಾ ದತ್ತಾಂ ಗೃಹಾಣೇತಿ ನಿವೇದ್ಯ ಚ ।
ಭವಂತ ಏವ ಕುರ್ವಂತು ವೈತದ್ವೈವಾಹಿಕೀಂ ಕ್ರಿಯಾಂ ॥ ೪೭ ॥
ಇತ್ಯುಕ್ತಾಸ್ತೇ ಹಿಮವತಾ ತಮಾಮಂತ್ರ್ಯ ಶಿವಂ ಯಯುಃ ।
ಲಕ್ಷ್ಮ್ಯಾದ್ಯಾ ಯೋಷಿತಃ ಸರ್ವಾ ವಿಷ್ಣ್ವಾದ್ಯಾ ದೇವತಾ ಅಪಿ ॥ ೪೮ ॥

೪೨–೪೩. ಕನ್ಯಾದಾನದ ಅನಂತಪುಣ್ಯಫಲವನ್ನು ಇಚ್ಛಿಸುವೆಯಾದರೆ ನೀನು ಆ ಪಾರ್ವತೀದೇವಿಯನ್ನು ಶಂಭುವಿಗೆ ಕೊಡಲು ನಿಶ್ಚಯಿಸು. ಸಾವಿರಾರುಜನ್ಮಗಳಲ್ಲಿ ಮಾಡಲ್ಪಟ್ಟಿರುವ ಸುಕೃತವೆಲ್ಲವೂ ಕಾಲಧರ್ಮ ಸಂಯೋಗದಿಂದ ಫಲೋನ್ಮುಖವಾಗುವ ಸಮಯವೀಗ ಒದಗಿರುವುದು.''

೪೪. ಆ ಸಪ್ತರ್ಷಿಗಳ ಮಾತುಗಳನ್ನು ಕೇಳಿ ಪರ್ವತರಾಜನು ಸಂತುಷ್ಟಾಂತರಂಗನಾದನು. ಮತ್ತು ಹೇಳತೊಡಗಿದನು. ''ನನ್ನ ಪುತ್ರಿಯು ಈಗ ನಾರು ಬಟ್ಟೆಗಳನ್ನು ಧರಿಸಿರುವಳು.

೪೫. ಮಹಾದೇವನೇ ತನಗೆ ಪತಿಯಾಗಬೇಕೆಂದು ಅಪೇಕ್ಷೆಯುಳ್ಳವಳಾಗಿ ಗಂಗಾನದಿಯ ದಡದಲ್ಲಿ ಅತ್ಯುಗ್ರವಾದ ತಪಸ್ಸನ್ನು ಆಚರಿಸುತ್ತಿರುವಳು. ಅವಳಿಗೆ ನಿಮ್ಮ ಸಂದೇಶವು ಅತ್ಯಂತ ಪ್ರಿಯವಾಗಿಯೇ ಇರುವುದು.

೪೬. ಮಹಾಪುರುಷನಾದ ಆ ತ್ರಿನೇತ್ರನಿಗೆ ನಾನು ಕನ್ಯೆಯನ್ನು ಕೊಡಲು ಈಗ ವಾಗ್ದಾನವನ್ನು ಕೊಟ್ಟಿರುವೆನು. ಲೋಕೇಶ್ವರನಾದ ಶಂಭುವು ಇರುವ ಸ್ಥಳಕ್ಕೆ ನೀವೆಲ್ಲರೂ ಶೀಘ್ರವಾಗಿ ಹೊರಡುವವರಾಗಿರಿ.

೪೭. ಹಿಮವಂತರಾಜನು ಪ್ರೀತಿಯುಕ್ತನಾಗಿ ಸಮರ್ಪಿಸುವ ಕನ್ಯಾರತ್ನವನ್ನು ನೀನು ಸ್ವೀಕರಿಸಬೇಕೆಂದು ನಿವೇದಿಸಿ ನೀವೆಲ್ಲರೂ ಸೇರಿ ಈ ವಿವಾಹ ಕಾರ್ಯವನ್ನು ಸಾಂಗವಾಗಿ ನೆರವೇರಿಸಿಕೊಡಿರಿ.''

೪೮–೫೨. ಇಂತೆಂದು ಹೇಳಲ್ಪಟ್ಟ ಸಪ್ತರ್ಷಿಗಳು ಆ ಹಿಮವಂತನನ್ನು

ಷಣ್ಮಾತರೋಽಥ ಮುನಯೋ ದ್ರಷ್ಟುಂ ಜಗ್ಮುರ್ಮಹೋತ್ಸವಂ ।
ಶಿವಃ ಸರ್ವಾಮರಗಣೈರ್ಮುನಿಭಿರ್ಮಾತೃಭಿಸ್ತಥಾ ॥ ೪೯ ॥
ಅನ್ವಿತೋ ವೃಷಭಾರೂಢಃ ಪ್ರಮಥಾನಾಂ ಗಣೈರ್ವೃತಃ ।
ಭೇರೀಶಂಖಮೃದಂಗಾದ್ಯೈಃ ಕಾಹಲೀಪಟಹಾದಿಕೈಃ ॥ ೫೦ ॥
ಬ್ರಹ್ಮಘೋಷೈರ್ಬಂದಿಭಿಶ್ಚ ಪ್ರಾವಿಶದ್ಧಿಮವತ್ಪುರೀಂ ।
ಸುಮುಹೂರ್ತೇ ಶುಭೇ ಲಗ್ನೇ ಶುಭಗ್ರಹನಿರೀಕ್ಷಿತೇ ॥ ೫೧ ॥
ವಿವಾಹಮಕರೋಚ್ಛೈಲಃ ಪ್ರಹೃಷ್ಟೇನಾಂತರಾತ್ಮನಾ ।
ಮಹೋತ್ಸವಸ್ತದಾಚಾಽಸೀತ್ತ್ರಿಲೋಕ್ಯಾಂ ಪ್ರಾಣಿನಾಂ ನೃಪ ॥ ೫೨ ॥
ಮಹೋತ್ಸವೇ ನಿವೃತ್ತೇ ತು ಶಂಕರೋ ಲೋಕಶಂಕರಃ ।
ರೇಮೇ ಸ್ವಚ್ಛಂದಯಾ ದೇವ್ಯಾ ಲೋಕಧರ್ಮಾನನುವ್ರತಃ ॥ ೫೩ ॥

ಬೇಕೊಂಡು ಶಿವನಿದ್ದಲ್ಲಿಗೆ ಹೊರಟರು. ಮಹಾಲಕ್ಷ್ಮಿಯೇ ಮೊದಲಾದ ಸಕಲ ಸ್ತ್ರೀಯರೂ, ವಿಷ್ಣುವೇ ಮುಂತಾದ ದೇವತೆಗಳೂ, ಬ್ರಾಹ್ಮೀ, ವೈಷ್ಣವೀ, ಕೌಮಾರೀ, ವಾರಾಹೀ, ಇಂದ್ರಾಣೀ, ಚಾಮುಂಡೆಯರೆಂಬ ಷಣ್ಮಾತೃಕೆಯರೂ, ಮುನಿವರ್ಯರೂ ಪರಮೇಶ್ವರನ ವಿವಾಹಮಹೋತ್ಸವವನ್ನು ನೋಡಲು ಗುಂಪುಗೂಡಿ ಹೊರಟರು. ಪರಮೇಶ್ವರನು ಸಕಲ ದೇವತಾಗಣಗಳಿಂದಲೂ, ಮುನಿಗಳಿಂದಲೂ, ಮಾತೃಕೆಯರಿಂದಲೂ ಕೂಡಿದವನಾಗಿ, ವೃಷಭವಾಹನವನ್ನೇರಿಕೊಂಡು ಪ್ರಮಥಗಣಗಳೆಲ್ಲವೂ ಸುತ್ತುವರೆದು ಬರುತ್ತಿರಲು ಭೇರಿ, ಶಂಖ, ಮೃದಂಗ, ಕಹಳೆ, ತಮಟೆ ಮುಂತಾದ ವಾದ್ಯಗಳ ಝಾಂಕಾರಗಳಿಂದಲೂ, ಬ್ರಹ್ಮರ್ಷಿಗಳ ವೇದಘೋಷಗಳಿಂದಲೂ, ವಂದಿ ಮಾಗಧರ ಹೊಗಳಿಕೆಗಳಿಂದಲೂ ಹಿಮವಂತನ ರಾಜಧಾನಿಯನ್ನು ಪ್ರವೇಶಮಾಡಿದನು. ಸುಮುಹೂರ್ತವೂ ಶುಭಗ್ರಹಗಳ ನಿರೀಕ್ಷಣೆಯುಳ್ಳ ಉತ್ತಮ ಲಗ್ನವೂ ಪ್ರಾಪ್ತವಾಗಲು ಶೈಲರಾಜನು ಅಪರಿಮಿತಾನಂದತುಂದಿಲಾಂತರಂಗನಾಗಿ ಪಾರ್ವತಿಯ ವಿವಾಹವನ್ನು ಸಂಭ್ರಮದಿಂದ ನೆರವೇರಿಸಿದನು. ಎಲೈ ಶ್ರುತಕೀರ್ತಿ ಮಹಾರಾಜನೆ! ಆಗ ಮೂರು ಲೋಕಗಳಲ್ಲಿಯೂ ಅಭೂತಪೂರ್ವವಾದ ಮಹೋತ್ಸವವು ನಡೆಯಿತು.

೫೩. ವಿವಾಹ ಮಹೋತ್ಸವದ ವೈಭವಗಳೆಲ್ಲ ಸಾಂಗವಾಗಿ ನೆರವೇರಲು ತ್ರಿಲೋಕಗಳಿಗೂ ಸೌಖ್ಯವನ್ನುಂಟುಮಾಡುವ ಶ್ರೀ ಶಂಕರನು ಲೋಕದ ಧರ್ಮವನ್ನನುಸರಿಸಿ ತನ್ನ ಇಷ್ಟಾನುಸಾರವಾಗಿ ದೇವಿಯೊಡನೆ ಸುರತಸೌಖ್ಯಗಳನ್ನನುಭವಿಸುತ್ತಿದ್ದನು.

ಋದ್ಧಿಮದ್ಧಿಮವದ್ಗೇಹೇ ದೇವೇಂದ್ರಭವನೋಪಮೇ ।
ಶರ್ವರ್ಯಾಂ ನಂದಿನೀತೀರೇ ವನರಾಜಿಷು ಶಂಕರಃ ॥ ೫೪ ॥
ಮತ್ತಾಲಿದ್ವಿಜಸನ್ನಾದಮಯೂರರವಮಂಡಿತೇ ।
ದಿವ್ಯವರ್ಷಸಹಸ್ರಾಣಿ ರೇಮೇ ಸ್ವಚ್ಛಂದಯಾ ವಿಭುಃ ॥ ೫೫ ॥
ಸ್ತ್ರೀಣಾಮಿಂದ್ರವರಾಭಾವಾತ್ತಸ್ಮಿನ್‌ಕಾಲೇ ನೃಪೋತ್ತಮ ।
ಪುಂಸಃ ಸಂಗಾತ್ಪುನರ್ಗರ್ಭೋ ನಾರೀಣಾಂ ಸ್ರವತಿ ಧ್ರುವಂ ॥ ೫೬ ॥
ಪ್ರತ್ಯಹಂ ರಮಣಾದ್ದೇವ್ಯಾಂ ನಾ ಭೂದ್ಗರ್ಭೋ ಹರಾದ್ಭತ ।
ದೇವಾನಾಮಭವಚ್ಚಿಂತಾ ಪುತ್ರಾಲಾಭಾದ್ವರಾದ್ವಿಭೋಃ ॥ ೫೭ ॥
ಸರ್ವೇ ಸಂಗತ್ಯ ಸಂಮಂತ್ರ್ಯ ಮಿಥ ಏವಂ ಬಭಾಷಿರೇ ।
ಕಾಮಿವಾಃಭೂದ್ರತೌ ನಿತ್ಯಂ ಸಕ್ತೋ ದೇವ್ಯಾಹರಃ ಸ್ವರಾಟ್ ॥ ೫೮ ॥

೫೪–೫೫. ಸಕಲವೈಭವಗಳಿಂದ ಕೂಡಿದ ಮಹೇಂದ್ರ ಭವನ ಸದೃಶವಾದ ಹಿಮವಂತರಾಜನ ಅರಮನೆಯಲ್ಲಿಯೂ, ರಾತ್ರಿಯ ಕಾಲಗಳಲ್ಲಿ ಮದಿಸಿದ ದುಂಬಿಗಳ ಮತ್ತು ಪಕ್ಷಿಗಳ ಧ್ವನಿಗಳಿಂದಲೂ, ನವಿಲುಗಳ ಕ್ರೇಂಕಾರಗಳಿಂದಲೂ ಮನೋಹರವಾಗಿದ್ದ ನಂದಿನೀನದಿಯ ದಡಗಳಲ್ಲಿ ವ್ಯಾಪಿಸಿರುವ ವನಪ್ರದೇಶ ಗಳಲ್ಲಿಯೂ ದೇವಮಾನದಲ್ಲಿ ಅನೇಕ ಸಾವಿರ ವರ್ಷಗಳವರೆಗೂ ಸರ್ವೇಶ್ವರನಾದ ಆ ಶಂಕರನು ಸ್ವೇಚ್ಛೆಯಿಂದ ಪಾರ್ವತೀದೇವಿಯೊಡನೆ ರಮಿಸು ತ್ತಿದ್ದನು.

೫೬. ರಾಜಶ್ರೇಷ್ಠನೆ! ಆ ಕಾಲದಲ್ಲಿ ಸ್ತ್ರೀಯರಿಗೆ ಮಹೇಂದ್ರನ ವರವಿಲ್ಲ ದುದರಿಂದ ಗರ್ಭಿಣಿಯಾದ ಸ್ತ್ರೀಯು ಮತ್ತೆ ಪುರುಷಸಂಪರ್ಕವನ್ನು ಹೊಂದು ವುದರಿಂದಲೇ ಪೂರ್ವ ಗರ್ಭವು ಸ್ರಾವವಾಗುವ ಪದ್ಧತಿಯೇ ಲೋಕ ಸಾಮಾನ್ಯವಾಗಿದ್ದಿತು.

೫೭. ಆದುದರಿಂದ ಪರಮೇಶ್ವರನು ನಿತ್ಯದಲ್ಲಿಯೂ ಪಾರ್ವತೀದೇವಿ ಯೊಡನೆ ರಮಿಸುತ್ತಿರಲು ಆಕೆಗೆ ಬಹಳ ಕಾಲದವರೆಗೂ ಗರ್ಭವು ನಿಲ್ಲಲೇ ಇಲ್ಲವು. ಎಲೈ ಶ್ರುತಕೀರ್ತಿಯೆ! ಇವರಿಗೆ ಪುತ್ರನು ಹುಟ್ಟದಿರಲು ತಾರಕಾಸುರನ ವಧೆಗಾಗಿ ಬ್ರಹ್ಮದೇವನು ಕೊಟ್ಟಿದ್ದ ವರವನ್ನು ಸ್ಮರಿಸಿಕೊಂಡ ದೇವತೆಗಳಿಗೆ ಮಹತ್ತರವಾದ ವ್ಯಾಕುಲವುಂಟಾಯಿತು.

೫೮. ಆಗ ಅವರೆಲ್ಲರೂ ಒಟ್ಟುಗೂಡಿ ಆಲೋಚನೆಯನ್ನು ಮಾಡಿ ತಮ್ಮ ತಮ್ಮಲ್ಲಿಯೇ ಇಂತು ಮಾತನಾಡಿಕೊಂಡರು. "ಸರ್ವತಂತ್ರಸ್ವತಂತ್ರನಾದ ಪರಮೇಶ್ವರನು ಗ್ರಾಮ್ಯನಾದ ಕಾಮಿಪುರುಷನಂತೆ ದೇವಿಯೊಡನೆ ಸುರತ ಸುಖದಲ್ಲಿಯೇ ಆಸಕ್ತನಾಗಿರುವನು.

ನಾಽಸ್ಮಾಕಂ ಸಿಧ್ಯತೇ ಕಾರ್ಯಂ ನಿತ್ಯಂ ಗರ್ಭಸ್ಯ ಸಂಸ್ರವಾತ್ ।
ಪುನಾರತಿರ್ಯಥಾ ನಾಽಭೂತ್ತಥಾಽಸ್ಮಾಭಿರ್ವಿಧೀಯತಾಂ ॥ ೫೯ ॥
ಮಿಥ ಏವಂ ತು ಸಂಭಾಷ್ಯ ವ್ಯಚಿನ್ವನ್ ಕ್ಷಣಮಾತ್ರಕೇ ।
ಅಗ್ನಿಂ ಕೃತ್ಯೇ ವಿನಿಶ್ಚಿತ್ಯ ಹ್ಯೂಚುರ್ಮಾನಪುರಃಸರಂ ॥ ೬೦ ॥
ಅಗ್ನಿಮುಖಂ ತ್ವಂ ದೇವಾನಾಂ ತ್ವಂ ಬಂಧುರ್ಗತಿರೇವ ಚ ।
ಇದಾನೀಮಪಿ ಗಚ್ಛ ತ್ವಂ ರಮತೇ ಯತ್ರ ವೈ ಹರಃ ॥ ೬೧ ॥
ರತ್ಯಂತೇ ದರ್ಶಯಾಽಽತ್ಮಾನಂ ಪುನಾರತಿರ್ಯಥಾ ನ ವೈ ।
ತ್ವಾಂ ದೃಷ್ಟ್ವಾ ವ್ರೀಡಿತಾ ದೇವೀ ತತಶ್ಚಾಪಹರೇದ್ಧ್ರುವಂ ॥ ೬೨ ॥
ಶಿಷ್ಯೋ ಭೂತ್ವಾ ತು ರತ್ಯಂತೇ ಪೃಚ್ಛ ತತ್ತ್ವಂ ಸ್ಮರಾಂತಕಂ ।
ತತ್ತ್ವಸಂಪ್ರಶ್ನವ್ಯಾಜೇನ ಕಾಲಂ ಬಹುನಯ ಪ್ರಭೋ ॥ ೬೩ ॥

೫೯. ನಿತ್ಯವೂ ಆಕೆಯ ಗರ್ಭವು ಸ್ರವಿಸುತ್ತಿರುವುದರಿಂದ ನಮ್ಮ ಕಾರ್ಯವು ಎಂದಿಗೂ ಸಿದ್ಧಿಸುವ ಸಂಭವವೇ ಇರುವುದಿಲ್ಲ. ಆದುದರಿಂದ ಪುನಃ ಅವರ ಸಂಯೋಗವು ಆಗದಿರುವಂತೆ ನಾವು ಯಾವುದಾದರೂ ಕಾರ್ಯಕ್ರಮವನ್ನು ಕೈಗೊಳ್ಳಬೇಕು."

೬೦. ಇಂತು ಪರಸ್ಪರಸಂಭಾಷಣೆಯಾದ ಬಳಿಕ ಒಂದು ಕ್ಷಣದವರೆಗೂ ಈ ಕಾರ್ಯಕ್ಕೆ ಯೋಗ್ಯರಾದವರು ಯಾರೆಂದು ಅನ್ವೇಷಣೆ ಮಾಡಿದರು. ಅಗ್ನಿಯೇ ಆ ಕಾರ್ಯಕ್ಕೆ ಸರಿಯಾದವನೆಂದು ನಿಶ್ಚಯಿಸಿ ಆತನಿಗೆ ಮರ್ಯಾದೆಯನ್ನು ಮಾಡಿ ಹೇಳತೊಡಗಿದರು.

೬೧. "ಎಲೈ ಅಗ್ನಿದೇವನೆ! ನೀನು ದೇವತೆಗಳಿಗೆ ಮುಖಪ್ರಾಯನಾಗಿರುವೆ. ನೀನೇ ನಮಗೆ ಬಂಧುವೂ ಗತಿದಾಯಕನೂ ಆಗಿರುವೆ. ಈಗಲೂ ನೀನು ಪರಮೇಶ್ವರನು ಪಾರ್ವತಿಯೊಡನೆ ವಿಹರಿಸುತ್ತಿರುವ ಸ್ಥಳಕ್ಕೆ ಹೋಗು.

೬೨. ಒಂದು ದಿವಸ ಸುರತಾಂತ್ಯದಲ್ಲಿ ನೀನು ಅವರೆದುರಿಗೆ ಹೋಗಿ ನಿಲ್ಲಲು ಮತ್ತೆ ಅವರಿಬ್ಬರಲ್ಲಿ ಸಂಭೋಗವುಂಟಾಗಲಾರದು. ನಿನ್ನನ್ನು ನೋಡಿ ಲಜ್ಜೆಗೊಂಡ ಪಾರ್ವತೀದೇವಿಯು ಅಲ್ಲಿಂದ ಹಿಂದಕ್ಕೆ ಸರಿಯುವಳೆಂಬುದು ನಿಜವು.

೬೩. ನೀನು ಶಿಷ್ಯನಂತೆ ವೇಷವನ್ನು ತಾಳಿ ಮನ್ಮಥ ವೈರಿಯಾದ ಆತನಲ್ಲಿ ತತ್ತ್ವೋಪದೇಶವನ್ನು ಕೇಳುವವನಾಗು. ತತ್ತ್ವಾರ್ಥಗಳ ಸೂಕ್ಷ್ಮಗಳನ್ನು ತಿಳಿಯಲೆಳಸುವ ವ್ಯಾಜದಿಂದ ಬಹಳ ಕಾಲದವರೆಗೂ ಆತನನ್ನು ಸುರತದಿಂದ ವಿಮುಖಗೊಳಿಸು.

ಬಹುಕಾಲೇ ಗತೇ ದೇವೀ ಕುಮಾರಂ ಪ್ರಸವಿಷ್ಯತಿ ।
ದೇವೈರೇವಂ ಪ್ರಾರ್ಥಿತೋಽಗ್ನಿರೋಮಿತ್ಯುಕ್ತ್ವಾ ಹರಂ ಯಯೌ ॥೬೪॥
ವೀರ್ಯೋತ್ಸರ್ಗಾತ್ಪೂರ್ವಮೇವ ಗತೋ ವಹ್ನೀ ರತಾಂತರೇ ।
ತಂ ದೃಷ್ಟ್ವಾ ವ್ರೀಡಿತಾ ದೇವೀ ವಿವಸ್ತ್ರಾ ವಿಮನಾ ಯಯೌ ॥ ೬೫ ॥
ರತಿಂ ವಿಹಾಯ ತ್ವರಯಾ ತತೋ ರುದ್ರೋಽತಿಕೋಪಿತಃ ।
ವಹ್ನಿಂ ಪ್ರಾಹ ಗೃಹಾಣೇದಮಭಿಸೃಷ್ಟಂ ತು ದುರ್ಮತೇ ॥ ೬೬ ॥
ಮದ್ವೀರ್ಯಂ ದುಃಸಹಂ ಪಾಪ ರತೌ ವಿಘ್ನಸ್ತ್ವಯಾಽಭವತ್ ।
ಉತ್ಸೃಜಾಮಿ ಚ ಮದ್ವೀರ್ಯಂ ತ್ವನ್ಮುಖೇ ಹವ್ಯವಾಹನ ॥ ೬೭ ॥
ಇತ್ಯುಕ್ತ್ವೋತ್ಸೃಷ್ಟವಾನ್ವೀರ್ಯಂ ಹವ್ಯವಾಹಮುಖೇ ಹರಃ ।
ತದ್ಧೃತ್ವಾ ದಹ್ಯಮಾನಃ ಸನ್ಸ್ವೋದರೇ ವೀರ್ಯಮುಲ್ಬಣಂ ॥ ೬೮ ॥
ಚಿಂತಯಾನೋ ಯಯೌ ಧಾಮ ದೇವಾನಾಂ ಯಜ್ಞಪೂರುಷಃ ।
ಕಥಂಚಿತ್ಪ್ರಾಣತೋ ಮುಕ್ತೋ ದೇವೇಭ್ಯಸ್ತನ್ನ್ಯವೇದಯತ್ ॥ ೬೯ ॥

೬೪. ಇಂತು ಬಹಳ ಕಾಲವು ಕಳೆದುಹೋಗಲು ಪಾರ್ವತೀದೇವಿಯು ಸುಪುತ್ರನನ್ನು ಪಡೆಯುವಳು" ಇಂತೆಂದು ದೇವತೆಗಳಿಂದ ಪ್ರಾರ್ಥಿಸಲ್ಪಟ್ಟ ಅಗ್ನಿದೇವನು ಓಂ ಎಂದು ಅಂಗೀಕರಿಸಿ ಪರಮಶಿವನಸಿದ್ದೆಡೆಗೆ ಬಂದನು.

೬೫. ಪಾರ್ವತೀ ಪರಮೇಶ್ವರರು ಏಕಾಂತದಲ್ಲಿದ್ದು ರತಿಕ್ರೀಡೆಗಳಲ್ಲಿ ನಿರತರಾಗಿದ್ದ ಪ್ರದೇಶವನ್ನು ಪರಮಶಿವನಿಗೆ ವೀರ್ಯೋತ್ಸರ್ಗವಾಗುವುದಕ್ಕೆ ಮುಂಚೆಯೇ ಪ್ರವೇಶಮಾಡಿದನು. ಅವನನ್ನು ಕಂಡು ನಗ್ನಳಾಗಿದ್ದ ಗಿರಿಜೆಯು ಲಜ್ಜೆಯಿಂದಲೂ ಉದಾಸೀನಮನಸ್ಸಿನಿಂದಲೂ ಕೂಡಿದವಳಾಗಿ ಹೊರಟುಹೋದಳು.

೬೬. ಆಗ ಮಹಾದೇವನೂ ತ್ವರೆಯಿಂದ ಸುರತವಿಮುಖನಾಗಿ ಅತ್ಯಂತ ಕೋಪವನ್ನು ತಾಳಿ ಅಗ್ನಿಗೆ ಹೇಳತೊಡಗಿದನು. "ಎಲೈ ದುರ್ಬುದ್ಧಿಯೆ! ನನ್ನ ದೇಹದಿಂದ ಸ್ಖಲಿಸುತ್ತಿರುವ ವೀರ್ಯವನ್ನು ನೀನೇ ಗ್ರಹಿಸು.

೬೭–೬೮. ಎಲೈ ಪಾಪಿಯೆ! ಈ ನನ್ನ ವೀರ್ಯವು ಇತರರಿಗೆ ಧರಿಸಲಶಕ್ಯವಾಗಿರುವುದು. ನನ್ನ ಸಂಭೋಗಕ್ಕೆ ನಿನ್ನಿಂದ ವಿಘ್ನವುಂಟಾಯಿತು. ಸರ್ವಭಕ್ಷಕನಾಗಿ ದೇವತೆಗಳಿಗೆ ಹವ್ಯವನ್ನು ಹೊರುವ ದೂತನಾದ ನಿನ್ನ ಮುಖದಲ್ಲಿಯೇ ಈ ವೀರ್ಯವನ್ನು ಇಡುವೆನು." ಇಂತೆಂದು ಪರಮಶಿವನು ತನ್ನ ತೇಜಸ್ಸನ್ನು ಅಗ್ನಿದೇವನ ಮುಖದಲ್ಲಿ ಬಿಡುವವನಾದನು. ಅಗ್ನಿಯೂ ಅತ್ಯುಗ್ರಮಹಿಮೆಯಿಂದ ಕೂಡಿದ ಆ ವೀರ್ಯವನ್ನು ತನ್ನ ಹೊಟ್ಟೆಯಲ್ಲಿ ಧರಿಸಿಕೊಂಡು ದೇಹವಲ್ಲಿಯೇ ದಹಿಸಲ್ಪಡುತ್ತಿದ್ದನು.

೬೯. ಯಜ್ಞಪುರುಷನು ಈ ವಿಷಯವನ್ನೇ ಕುರಿತು ಚಿಂತಿಸುತ್ತ ಬಹಳ

ದೇವಾ ವಹ್ನೇರಿತಂ ಶ್ರುತ್ವಾ ಹರ್ಷಶೋಕೌ ಸಮಾಯಯುಃ ।
ಸ್ಥಿತಂ ವೀರ್ಯಮಿತಿ ಹ್ಲಾದಂ ಕಥಂ ತು ಪ್ರಸವೋ ಭವೇತ್ ॥ ೭೦ ॥
ಇತಿ ದುಃಖಂ ತದಾ ಚಾಽಽಸೀದ್ವಹ್ನೇಃ ಕುಕ್ಷೌ ತು ಶಾಂಭವಂ ।
ವವೃಧೇ ತೇಜ ಆಕ್ಷಿಪ್ತಂ ದಶಮಾಸಾ ಗತಾಸ್ತದಾ ॥ ೭೧ ॥
ನಾಽಪಶ್ಯತ್ಪ್ರಸವೋಪಾಯಂ ಬಹುದುಃಖಪರಾಯಣಃ ।
ದೇವಾನ್ಸ್ವೈ ಶರಣಂ ಪ್ರಾಪ ಗರ್ಭಮೋಚನಹೇತವೇ ॥ ೭೨ ॥
ತೇನ ದೇವಾ ವಹ್ನಿನಾ ಸಾಕಂ ಪ್ರಾಪುರ್ಗಂಗಾಂ ಯಶಸ್ವಿನೀಂ ।
ಗಂಗಾಂ ಸ್ತೋತ್ರೇಣ ತೇ ಸ್ತುತ್ವಾ ಪ್ರಾರ್ಥಯಾಮಾಸುರಂಜಸಾ ॥ ೭೩ ॥
ತ್ವಂ ಮಾತಾ ಸರ್ವದೇವಾನಾಂ ತ್ವಮೇವ ಜಗತಾಂ ಗತಿಃ ।
ದೇವತಾರ್ಥಂ ತು ತ್ವಂ ಭದ್ರೇ ಧತ್ಸ್ವ ತೇಜಸ್ತು ಶಾಂಭವಂ ॥ ೭೪ ॥

ಕಷ್ಟದಿಂದ ಪರಶಿವನ ಸಾನ್ನಿಧ್ಯದಿಂದ ಪ್ರಾಣಾವಶೇಷಿತನಾಗಿ ಹೊರಟು ಸ್ವರ್ಗಲೋಕವನ್ನು ಸೇರಿ ದೇವತೆಗಳಿಗೆ ನಡೆದುದೆಲ್ಲವನ್ನೂ ವಿಸ್ತಾರವಾಗಿ ತಿಳಿಸಿದನು.

೭೦–೭೧. ಅಗ್ನಿದೇವನ ಮಾತುಗಳನ್ನು ಕೇಳಿ ದೇವತೆಗಳಿಗೆ ಸಂತೋಷವೂ ದುಃಖವೂ ಏಕಕಾಲದಲ್ಲಿಯೇ ಉಂಟಾದುವು. ಮಹೇಶ್ವರನ ವೀರ್ಯವು ಲಭ್ಯವಾಯಿತೆಂದು ಸಂತೋಷಗೊಂಡರು. ಈ ವೀರ್ಯವು ವೃದ್ಧಿಯನ್ನು ಹೊಂದಿ ಹೇಗೆ ಶಿಶುವಾಗಿ ಅಗ್ನಿಯು ಪ್ರಸವಿಸುವನು ಎಂಬ ದುಃಖವೂ ಅವರಿಗೆ ಉಂಟಾಯಿತು. ಬಳಿಕ ಪರಮೇಶ್ವರನ ವೀರ್ಯವು ಅಗ್ನಿದೇವನ ಉದರದಲ್ಲಿ ಸ್ಥಿರವಾಗಿ ನೆಲಸಿ ದಿನದಿನಕ್ಕೂ ವೃದ್ಧಿಯಾಗತೊಡಗಿತು. ಹೀಗೆ ಹತ್ತು ತಿಂಗಳುಗಳು ಕಳೆದುಹೋದವು.

೭೨. ಆದರೂ ಅಗ್ನಿಯ ಕಷ್ಟವೂ ಗರ್ಭದ ವೃದ್ಧಿಯನ್ನನುಸರಿಸಿಯೇ ಹೆಚ್ಚುತ್ತಿತ್ತು. ಅಸಹ್ಯವಾದ ದುಃಖದಿಂದ ಕೂಡಿದವನಾದರೂ ಪ್ರಸವಕ್ಕೆ ಉಪಾಯವನ್ನು ಕಾಣಲಾರದಾದನು. ಮತ್ತು ಗರ್ಭಮೋಚನಕ್ಕಾಗಿ ಪುನಃ ದೇವತೆಗಳನ್ನೇ ಶರಣುಹೊಕ್ಕನು.

೭೩. ಆ ದೇವತೆಗಳೆಲ್ಲರೂ ಅಗ್ನಿಯೊಡಗೂಡಿಕೊಂಡು ತ್ರಿಲೋಕಗಳಲ್ಲಿಯೂ ಪ್ರಖ್ಯಾತಳಾದ ಗಂಗಾನದಿಯಲ್ಲಿಗೆ ಬಂದರು. ಮತ್ತು ಆಕೆಯನ್ನು ಅನೇಕ ಸ್ತೋತ್ರಗಳಿಂದ ಸ್ತುತಿಸಿ ಗಂಗಾದೇವಿಯನ್ನು ತಮ್ಮ ಕಾರ್ಯಗೌರವದ ದೆಸೆಯಿಂದ ಪ್ರಾರ್ಥಿಸಿಕೊಂಡರು.

೭೪. "ನೀನೇ ಸಮಸ್ತ ದೇವತೆಗಳಿಗೂ ಮಾತೆಯು. ನೀನೇ ಸಕಲ ಲೋಕಗಳನ್ನೂ ಪಾಲಿಸುತ್ತಿರುವೆ. ಮಂಗಳಾಂಗಿಯೇ! ದೇವತೆಗಳ

ತದ್ವಹ್ನೇರ್ವರ್ಧತೇ ಗರ್ಭೋ ನಾಸ್ತ್ರೀತ್ವಾತ್ಪ್ರಸವೋಽಸ್ಯ ಚ ।
ತಸ್ಮಾದೇನಂ ಚ ನಃ ಸರ್ವಾನ್ ಸಮುದ್ಧರ ದಯಾಂ ಕುರು ॥ ೭೫ ॥
ಇತ್ಯೇವಂ ಪ್ರಾರ್ಥಿತಾ ದೇವೀ ತಥಾಸ್ತ್ವಿತಿ ವಚೋಽಬ್ರವೀತ್ ।
ದೇವಾಸ್ತು ವಹ್ನಯೇ ಪ್ರಾಹುರ್ಮಂತ್ರಂ ಗರ್ಭವಿಮೋಚನಂ ॥ ೭೬ ॥
ತನ್ಮಂತ್ರಾದ್ಗರ್ಭಮಾಕೃಷ್ಯ ವ್ಯಸೃಜದ್ಧವ್ಯವಾಹನಃ ।
ಗಂಗಾಯಾಂ ಶಾಂಭವಂ ತೇಜೋ ಭಾಸ್ವಲ್ಲೋಕಸುದುಃಸಹಂ ॥ ೭೭ ॥
ಸಾಚೋಢ್ವಾ ಕತಿಚಿನ್ಮಾಸಾನ್ನಶಶಾಕ ತತಃ ಪರಂ ।
ನಿರ್ಜಲಾ ತತ್ಪ್ರಭಾವೇಣ ಸ್ಫುಟದ್ರಕ್ತಕಲೇವರಾ ॥ ೭೮ ॥
ಬಹುದುಃಖಾಽಽಕುಲಾ ದೇವೀ ಪಾತಿವ್ರತ್ಯಪ್ರಭಾವತಃ ।
ಉಜ್ಜಹಾರ ಸ್ವೋದರಸ್ಥಂ ಗರ್ಭಂ ಲೋಕೈಕಪಾವನೀ ॥ ೭೯ ॥
ಶರಕಾಂಡೇ ತು ಚಿಕ್ಷೇಪ ದಹ್ಯಮಾನಂ ಸಮಂತತಃ ।
ಶರಕಾಂಡೈಸ್ತು ಸಂಭಿನ್ನಃ ಷೋಢಾಭಿನ್ನೋ ಬಭೂವಹ ॥ ೮೦ ॥

---

ಕಾರ್ಯಾರ್ಥವಾಗಿ ಲಭಿಸಿರುವ ಪರಮೇಶ್ವರನ ಈ ವೀರ್ಯವನ್ನು ಈಗ ನೀನು ಧರಿಸಬೇಕು.

೭೫. ಈಗ ಆ ಗರ್ಭವು ಅಗ್ನಿದೇವನ ಉದರದಲ್ಲಿ ಪ್ರವರ್ಧಮಾನವಾಗುತ್ತಿರುವುದು. ಆತನು ಸ್ತ್ರೀಯಲ್ಲದುದರಿಂದ ಗರ್ಭಮೋಚನವಾಗುವುದಕ್ಕೆ ಉಪಾಯವಿಲ್ಲವು. ಆದುದರಿಂದ ಈ ಅಗ್ನಿಯನ್ನೂ ನಮ್ಮೆಲ್ಲರನ್ನೂ ಉದ್ಧಾರ ಮಾಡು. ನಮ್ಮಲ್ಲಿ ದಯೆಯನ್ನು ತೋರುವವಳಾಗು.''

೭೬–೭೭. ಇಂತೆಂದು ದೇವತೆಗಳಿಂದ ಪ್ರಾರ್ಥಿತಳಾದ ಗಂಗಾದೇವಿಯು ಹಾಗೆಯೇ ಆಗಲೆಂದು ಉತ್ತರವನ್ನಿತ್ತಳು. ಬಳಿಕ ದೇವತೆಗಳು ಅಗ್ನಿದೇವನಿಗೆ ಗರ್ಭವಿಮೋಚನಕ್ಕಾಗಿ ಒಂದು ಮಂತ್ರವನ್ನು ಹೇಳಿಕೊಟ್ಟರು. ಆ ಮಂತ್ರದ ಪ್ರಭಾವದಿಂದ ಅಗ್ನಿಯು ತನ್ನಲ್ಲಿದ್ದ ಗರ್ಭವನ್ನು ಸೆಳೆದುಕೊಟ್ಟನು. ಪರಮೇಶ್ವರನ ವೀರ್ಯವು ತೇಜೋಮಯವೂ ಮೂರುಲೋಕಗಳಿಂದ ಧರಿಸಲು ಅಶಕ್ಯವೂ ಆಗಿ ಗಂಗೆಯಲ್ಲಿ ಪ್ರಕ್ಷಿಪ್ತನಾಯಿತು.

೭೮. ಆಕೆಯೂ ಸಹ ಕೆಲವು ತಿಂಗಳವರೆಗೂ ಅದನ್ನು ಧರಿಸಿಕೊಂಡಿದ್ದು ಬಳಿಕ ತಡೆಯಲು ಅಶಕ್ತಳಾದಳು. ಆ ವೀರ್ಯದ ಪ್ರಭಾವದಿಂದ ಆಕೆಯೂ ಜಲರಹಿತಳಾಗಿ ಶರೀರದ ಅಂಗಾಂಗಗಳಲ್ಲಿಯೂ ರಕ್ತವನ್ನು ಸ್ರವಿಸುವಂತಾದಳು.

೭೯. ಇಂತು ಬಹಳ ಕ್ಲೇಶಗೊಂಡ ಗಂಗಾದೇವಿಯು ತನ್ನ ಪಾತಿವ್ರತ್ಯದ ಮಹಿಮೆಯಿಂದ ತನ್ನ ಉದರದಲ್ಲಿದ್ದ ಗರ್ಭವನ್ನು ಹೊರಕ್ಕೆ ತೆಗೆದುಹಾಕಲು ಆಕೆಯು ತ್ರಿಲೋಕಪಾವನೆಯೆನಿಸಿದಳು.

೮೦. ಮತ್ತು ತೇಜಸ್ಸಿನಿಂದ ಹತ್ತು ದಿಕ್ಕುಗಳನ್ನೂ ಬೆಳಗುತ್ತಿರುವ

ಷಟ್ ಕೃತ್ತಿಕಾಃ ಸಮಾಜಗ್ಮುರ್ಬ್ರಹ್ಮಣಾ ಚೋದಿತಾಸ್ತದಾ ।
ಶರಕಾಂಡೇ ವಿನಿರ್ಭಿನ್ನಂ ಷೋಢಾಸಂಧಾಯ ಶಾಂಭವಂ ॥ ೮೧ ॥
ಷಣ್ಮುಖಂ ಪುರುಷಂ ಕೃತ್ವಾ ತ್ವೇಕದೇಹಮಿತಿಸ್ಫುಟಂ ।
ಕೃತ್ತಿಕಾವಿಧಿನಾಽಽಜ್ಞಪ್ತಾಸ್ತಂ ತಥಾ ಚಕ್ರಿರೇ ದೃಢಂ ॥ ೮೨ ॥
ತದ್ದೇಹಂ ಪುರುಷಾಕಾರಂ ಷಣ್ಮುಖಂ ಶರಕಾಂಡಗಂ ।
ಅರಕ್ಷ್ಯಮೇವಮೇವಾಸೀಚ್ಛರಕಾಂಡೇಷು ವೈ ಚಿರಂ ॥ ೮೩ ॥
ಏಕದಾ ವೃಷಭಾಽಽರೂಢೌ ಪಾರ್ವತೀ ಪರಮೇಶ್ವರೌ ।
ಶ್ರೀಶೈಲಂ ಗಂತುಮನಸೌ ತತ್ಸ್ಥಲಂ ಪರಿಜಗ್ಮತುಃ ॥ ೮೪ ॥
ತದಾಸೀತ್ಪಾರ್ವತೀ ದೇವೀ ಸದ್ಯಃ ಸ್ನುತಪಯೋಧರಾ ।
ವಿಸ್ಮಿತಾ ಚಾವದದ್ರುದ್ರಂ ಸ್ನುತೌ ಕಸ್ಮಾತ್ಪಯೋಧರೌ ॥ ೮೫ ॥

ಆ ಗರ್ಭವನ್ನು ತೀರದಲ್ಲಿದ್ದ ಒಂದು ಜೊಂಡುಹುಲ್ಲಿನ ಗುಂಪಿನೊಳಕ್ಕೆ ಬಿಸುಟಳು. ಆ ಗರ್ಭವು ಜೊಂಡುಗಳ ತೀಕ್ಷ್ಣಾಗ್ರಗಳಿಂದ ಕತ್ತರಿಸಲ್ಪಟ್ಟು ಆರು ಭಾಗಗಳಾಗಿ ಬಿದ್ದಿತು.

೮೧. ಆಗ ಬ್ರಹ್ಮದೇವನಿಂದ ಅಪ್ಪಣೆಯನ್ನು ಪಡೆದ ಆರು ಕೃತ್ತಿಕೆಯರು ಅಲ್ಲಿ ಪ್ರಾಪ್ತರಾದರು. ಮತ್ತು ಆರು ಹೋಳುಗಳಾಗಿ ಜೊಂಡು ಹುಲ್ಲಿನಲ್ಲಿ ಬಿದ್ದಿದ್ದ ಮಹೇಶ್ವರನ ವೀರ್ಯವನ್ನು ಒಂದೆಡೆಯಲ್ಲಿಟ್ಟರು.

೮೨. ಬಳಿಕ ಆರು ಮುಖಗಳನ್ನು ಸ್ಫುಟವಾಗಿ ಅವುಗಳಿಂದ ನಿರ್ಮಾಣ ಮಾಡಿ ಒಂದೇ ದೇಹಕ್ಕೆ ಅವುಗಳನ್ನು ಸೇರಿಸಿ ಪುರುಷಾಕಾರವನ್ನು ಪೂರ್ತಿಗೊಳಿಸಿದರು. ಕೃತ್ತಿಕಾಮಾತೆಯರು ಬ್ರಹ್ಮನ ಅನುಜ್ಞೆಯನ್ನನುಸರಿಸಿಯೇ ಈ ರೀತಿಯಾಗಿ ಷಣ್ಮುಖಸ್ವಾಮಿಯ ದೇಹವನ್ನು ನಿರ್ಮಿಸಿದುದು ನಿಜವು.

೮೩. ಇಂತು ಅವರು ದೇಹವನ್ನು ಕೂಡಿಸಿ ಹೊರಟುಹೋಗಲು ಆರು ಮುಖಗಳುಳ್ಳ ಗಂಡುಮಗುವಿನ ಆ ದೇಹವು ಜೊಂಡುಹುಲ್ಲಿನ ಪೊದೆಯಲ್ಲಿಯೇ ಬಿದ್ದಿದ್ದು ಬಹಳ ಕಾಲದವರೆಗೂ ಅನಾಥಶಿಶುವಾಗಿಯೇ ಬೆಳೆಯಿತು.

೮೪. ಒಮ್ಮೆ ಪಾರ್ವತೀಪರಮೇಶ್ವರರು ತಮ್ಮ ವಾಹನವಾದ ವೃಷಭವನ್ನೇರಿ ಶ್ರೀಶೈಲವನ್ನು ಸೇರಬೇಕೆಂಬ ಅಪೇಕ್ಷೆಯುಳ್ಳವರಾಗಿ ಹೊರಟು ಮಾರ್ಗಮಧ್ಯದಲ್ಲಿ ಆ ಜೊಂಡುಹುಲ್ಲಿದ್ದ ಭೂಮಿಯ ಮೇಲೆ ಆಕಾಶದಲ್ಲಿ ಬರುತ್ತಿದ್ದರು.

೮೫. ಆಗ ಪಾರ್ವತೀದೇವಿಗೆ ನಿಷ್ಕಾರಣವಾಗಿಯೇ ಸ್ತನಗಳಿಂದ ಕ್ಷೀರವು ಹೊರಹೊಮ್ಮಿತು. ಇದರಿಂದ ವಿಸ್ಮಯಗೊಂಡು ಆಕೆಯು ಪತಿಯನ್ನು ಕುರಿತು ಪ್ರಶ್ನೆಮಾಡಿದಳು. "ನನ್ನ ಸ್ತನಗಳಿಂದ ಕ್ಷೀರವು ಉಕ್ಕಿಬರಲು ಕಾರಣವೇನು?

ಕಾರಣಂ ಬ್ರೂಹಿ ವಿಶ್ವಾತ್ಮನ್ನಿತ್ಯುಕ್ತಸ್ತು ಹರೋಽಬ್ರವೀತ್ ।
ಶೃಣು ದೇವಿ ಪ್ರವಕ್ಷ್ಯಾಮಿ ಪುತ್ರೋಽಧೋ ವರ್ತತೇ ತವ ॥ ೮೬ ॥
ತ್ವಯಿ ವೀರ್ಯಮನುತ್ಸೃಷ್ಟಂ ಪ್ರಾಗೇವಾಽಽಗಾದ್ಧವಿರ್ವಹಃ ।
ತಂ ದೃಷ್ಟ್ವಾ ವ್ರೀಡಿತಾ ತ್ವಂ ವೈ ಪ್ರವಿಷ್ಟಾಚ ಸ್ಥಲಾಂತರಂ ॥ ೮೭ ॥
ಮಯಾ ಕೋಪಾದ್ವಹ್ನಿಮುಖೇ ವಿಸೃಷ್ಟಂ ವೀರ್ಯಮುಲ್ಬಣಂ ।
ದೇವಾನಾಂ ಚ ಪ್ರಸಾದೇನ ಗಂಗಾಯಾಂ ವ್ಯಸೃಜದ್ವಿಭುಃ ॥ ೮೮ ॥
ಗಂಗಾ ಚ ದಹ್ಯಮಾನಾ ಸಾ ವ್ಯಕ್ಷಿಪಂಚ ಶರಾಂತರಂ ।
ತತ್ರ ಷೋಢಾ ಪ್ರಭಿನ್ನಂ ತು ಮಾತೃಭಿಶ್ಚ ದೃಢೀಕೃತಂ ॥ ೮೯ ॥
ಪುರುಷಾಕೃತಿಮಾಪೇದೇ ತಂ ದೃಷ್ಟ್ವಾ ತೇ ಸ್ತನೌ ಸೃತೌ ।
ಪಾಲನೀಯಂ ಮಹಾವೀರ್ಯಂ ವಿಷ್ಣುನಾ ಸಮವಿಕ್ರಮಂ ॥ ೯೦ ॥

೮೬. ಸರ್ವರಲ್ಲಿಯೂ ಅಂತರ್ಯಾಮಿಯಾದ ಸ್ವಾಮಿಯೆ! ಇದಕ್ಕೆ ಕಾರಣವನ್ನು ನನಗೆ ತಿಳಿಸು.'' ಇಂತೆಂದ ದೇವಿಯನ್ನು ಕುರಿತು ಮಹೇಶ್ವರನು ಹೇಳತೊಡಗಿದನು. "ಎಲೌ ದೇವಿಯೆ! ಇದಕ್ಕೆ ಕಾರಣವನ್ನು ಹೇಳುವೆನು. ನಿನ್ನ ಮಗನೊಬ್ಬನು ಕೆಳಗೆ ಭೂಮಿಯಲ್ಲಿರುವನು.

೮೭. ನಮ್ಮ ಸಂಭೋಗದ ಕಾಲದಲ್ಲಿ ನಿನ್ನಲ್ಲಿಡಲ್ಪಡದ ವೀರ್ಯವನ್ನು ಆಕಾಲದಲ್ಲಿ ರತಿ ಭಂಗವನ್ನು ಮಾಡಿದ ಅಗ್ನಿದೇವನೇ ಧರಿಸಿದನು. ಅವನನ್ನು ಕಂಡು ನೀನು ಲಜ್ಜಾನ್ವಿತಳಾಗಿ ಸ್ಥಳಾಂತರಕ್ಕೆ ಹೊರಟುಹೋದೆಯಲ್ಲವೆ.

೮೮. ಆದರಿಂದ ಕೋಪಗೊಂಡು ನಾನು ನನ್ನ ಅಮೋಘ ವೀರ್ಯವನ್ನು ಅಗ್ನಿಯ ಮುಖದಲ್ಲಿಯೇ ಬಿಡುವವನಾದೆನು. ಸರ್ವವ್ಯಾಪಿಯಾದ ಆತನೂ ದೇವತೆಗಳ ಅನುಗ್ರಹದ ಫಲವಾಗಿ ಆ ವೀರ್ಯವನ್ನು ಗಂಗೆಯಲ್ಲಿ ನೆಲೆಗೊಳಿಸಿದನು.

೮೯. ಗಂಗಾದೇವಿಯೂ ಆ ಗರ್ಭದ ತೇಜಸ್ಸನ್ನು ಧರಿಸಲಾರದೆ ಒಂದು ಜೊಂಡುಹುಲ್ಲಿನ ಪೊದೆಯಲ್ಲಿ ಅದನ್ನು ಬಿಸುಟಳು. ಅವುಗಳ ತೀಕ್ಷ್ಣಾಗ್ರಗಳಿಂದ ಆರು ಭಾಗಗಳಾಗಿ ಕತ್ತರಿಸಲ್ಪಟ್ಟ ಗರ್ಭವು ಮಾತೃಗಳಾದ ಕೃತ್ತಿಕೆಯರಿಂದ ಒಟ್ಟುಗೂಡಿಸಲ್ಪಟ್ಟಿತು.

೯೦. ಆ ಗರ್ಭವು ಆರು ಮುಖಗಳುಳ್ಳ ಗಂಡುಮಗುವಿನ ರೂಪವನ್ನು ಹೊಂದಿತು. ಅದನ್ನು ಕಂಡೇ ನಿನ್ನ ಸ್ತನಗಳಲ್ಲಿ ಕ್ಷೀರವು ಹೊರಚಿಮ್ಮಿತು. ತ್ರಿವಿಕ್ರಮನಾದ ಮಹಾವಿಷ್ಣುವಿಗೆ ಸಮಾನವಾದ ಅಮಿತಶಕ್ತಿಸಮನ್ವಿತವಾದ ಈ ಶಿಶುವನ್ನು ನೀನು ಸರ್ವಪ್ರಕಾರದಿಂದಲೂ ರಕ್ಷಿಸಬೇಕು.

ಅಯಮೇವೌರಸಃ ಪುತ್ರಸ್ತವ ಭಾತಿ ವಿನಿಶ್ಚಿತಂ ।
ತಸ್ಮಾದ್ಗೃಹಾಣ ಶೀಘ್ರಂ ತ್ವಂ ತೇನಾಽಽಪ್ತ್ಯಾತಿ ರತೀವ ತೇ ॥ ೯೧ ॥
ಇತ್ಯಾಽಽಜ್ಞಪ್ತಾ ಶಂಭುನಾ ಸಾ ತಮಾದಾಯಾಽರ್ಭಕಂ ದ್ರುತಂ ।
ಅಂಕಮಾರೋಪ್ಯ ತಂ ದೇವೀ ಪಾಯಯಾಮಾಸ ಸ್ತನೌ ॥ ೯೨ ॥
ದೇವೇನ ಮೋಹಿತಾ ದೇವೀ ಪುತ್ರಸ್ನೇಹಪರಾಽಭವತ್ ।
ಪುನಃ ಕೈಲಾಸಮಗಮತ್ಪ್ರಭುಣಾ ಸಹ ಶಾಂಕರೀ ॥ ೯೩ ॥
ಲಾಲಯಂತೀ ಸುತಂ ದೇವೀ ಸಂತೋಷಂ ಪರಮಂ ಯಯೌ ।
ಏವಂ ಕುಮಾರಜನನಂ ವರ್ಣಿತಂ ತೇ ಮಯಾಽದ್ಭುತಂ ॥ ೯೪ ॥
ಯ ಇದಂ ಶೃಣುಯಾನ್ನಿತ್ಯಂ ಕುಮಾರಜನನಂ ಶುಭಂ ।
ಪುತ್ರಪೌತ್ರಾಭಿವೃದ್ಧಿಂ ತು ಲಭತೇ ನಾಽತ್ರ ಸಂಶಯಃ ॥ ೯೫ ॥
ಮಹದ್ದುಃಖಂ ತು ಜನನೇ ಹರಸ್ಯಾಽಪಿ ಯತೋಽಭವತ್ ।
ಪ್ರೀತ್ಯಾನುಕೃತವನ್ಯೈಶಾಖ ಧರ್ಮೋಽಪ್ಯಪ್ರತಿಮೋ ಭವೇತ್ ॥ ೯೬ ॥

---

೯೧. ಇವನೇ ನಿನಗೆ ಹೊಟ್ಟೆಯಲ್ಲಿ ಹುಟ್ಟಿದ ಮಗನೆಂಬುದು ನಿಜವಾಗಿಯೂ ನನ್ನ ಮನಸ್ಸಿಗೆ ತೋರುತ್ತಿರುವುದು. ಆದುದರಿಂದ ಈ ಶಿಶುವನ್ನು ಶೀಘ್ರವಾಗಿ ನೀನು ಸ್ವೀಕರಿಸು. ಇದರಿಂದ ನಿನಗೆ ಮುಂದೆ ಅಪಾರವಾದ ಪ್ರಖ್ಯಾತಿಯೂ ಉಂಟಾಗುತ್ತದೆ.''

೯೨. ಇಂತೆಂದು ಪತಿಯಾದ ಶಂಕರನಿಂದ ಆಜ್ಞಪ್ತಳಾದ ಪಾರ್ವತಿಯು ವೇಗದಿಂದ ಕೆಳಗಿಳಿದು ಆ ಶಿಶುವನ್ನು ಎತ್ತಿಕೊಂಡು ತೊಡೆಯ ಮೇಲೆ ಮಲಗಿಸಿಕೊಂಡು ಅದಕ್ಕೆ ಮೊಲೆಯನ್ನು ಉಣಿಸಿದಳು.

೯೩. ಮಹೇಶ್ವರನ ಅನಿರ್ವಚನೀಯವಾದ ಮಾಯೆಯಿಂದ ಮೋಹಿತಳಾದ ದೇವಿಯು ಪುತ್ರಸ್ನೇಹದ ಪಾಶದಲ್ಲಿ ಸಿಕ್ಕಿಕೊಂಡು ಮತ್ತೆ ಗಂಡನೊಡನೆ ಕೈಲಾಸಪರ್ವತಕ್ಕೆ ಬಂದು ಸೇರಿದಳು.

೯೪. ಆ ಮಗನನ್ನು ಲಾಲನೆ ಪಾಲನೆ ಮಾಡುತ್ತಲೇ ದೇವಿಯು ಅನುತ್ತಮವಾದ ಸಂತೋಷವನ್ನು ಪಡೆದು ಪರವಶಳಾಗಿದ್ದಳು. ಎಲೈ ಶ್ರುತಕೀರ್ತಿ ಮಹಾರಾಜನೆ! ಇಂತು ಅದ್ಭುತವಾದ ಕುಮಾರಸ್ವಾಮಿಯ ಜನನದ ಚರಿತ್ರೆಯನ್ನು ವರ್ಣಿಸಿರುವೆನು.

೯೫. ಯಾವ ಮಾನವನು ಪ್ರತಿನಿತ್ಯವಲ್ಲಿಯೂ ಪರಮಪಾವನವಾದ ಈ ಕುಮಾರಜನನದ ಕಥೆಯನ್ನು ಶ್ರದ್ಧೆಯಿಂದ ಕೇಳುವನೊ, ಅವನು ಪುತ್ರ ಪೌತ್ರಾದಿ ಅನಂತಸಂತಾನವನ್ನು ಪಡೆಯುವುದರಲ್ಲಿ ಸಂದೇಹವೇ ಇಲ್ಲವು.

೯೬. ಈ ರೀತಿಯಾಗಿ ದೇವಕಾರ್ಯಾರ್ಥವಾಗಿ ಕುಮಾರಸ್ವಾಮಿಯನ್ನು ಪಡೆಯುವುದರಲ್ಲಿ ಪರಮೇಶ್ವರನಿಗೂ ಮಹತ್ತರವಾದ ಕಷ್ಟವು ಪ್ರಾಪ್ತವಾಯಿತು.

ತಸ್ಮಾದ್ವೈಶಾಖಧರ್ಮೋಽಹಿ ಸರ್ವಾಘೌಘವಿನಾಶನಃ ।
ಅವೈಧವ್ಯಪ್ರದಃ ಪುಣ್ಯಃ ಸರ್ವ ಸಂಪದ್ವಿಧಾಯಕಃ ॥ ೯೭ ॥
ಅನಂಗೋಽಪಿ ಹಿ ಸಾಂಗತ್ವಂ ಯತ್ಪ್ರಭಾವಾತ್ಸಮಾಪ್ತವಾನ್ ।
ಅಸ್ನಾತ್ವಾ ಚಾಪ್ಯದತ್ವಾ ಚ ವೈಶಾಖೋ ಯಸ್ಯ ವೈ ಗತಃ ॥ ೯೮ ॥
ಅಪಿ ಧರ್ಮಕೃತೋ ವಾಽಪಿ ಭವೇದ್ದುಃಖಪರಂಪರಾ ।
ಸರ್ವಧರ್ಮೋ ಹಿತಃ ಸ್ಯಾಚ್ಚ ಯದ್ಯೇಕೋಽಯಮನುಷ್ಠಿತಃ ॥ ೯೯ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ದ್ವಿತೀಯೇ ವೈಷ್ಣವಖಂಡೇ ವೈಶಾಖಮಾಸಮಾಹಾತ್ಮ್ಯೇ ನಾರದಾಂಬರೀಷಸಂವಾದೇ "ಕುಮಾರೋತ್ಪತ್ತಿಕಥನಂ" ನಾಮ ನವಮೋಽಧ್ಯಾಯಃ

---

ಮಹಾರಾಜನೆ! ಭಕ್ತಿಯುಕ್ತವಾಗಿ ದಿನದಿನವೂ ಶ್ರವಣಮಾಡಿದ ವೈಶಾಖ ವ್ರತದ ಮಾಹಾತ್ಮ್ಯವು ಅಪ್ರತಿಮವಾದ ಫಲವನ್ನು ಕೊಡುವುದು.

೯೭. ಆದುದರಿಂದಲೇ ವೈಶಾಖ ವ್ರತಾಚರಣೆಯು ಸಮಸ್ತ ಪಾಪಗಳನ್ನೂ ನಾಶಗೊಳಿಸುವುದು. ಇದು ಸ್ತ್ರೀಯರಿಗೆ ದೀರ್ಘಸೌಮಂಗಲ್ಯವನ್ನು ಅನುಗ್ರಹಿಸುವುದು; ಸಕಲರಿಗೂ ಪುಣ್ಯವನ್ನೂ ಸಮಸ್ತಸೌಭಾಗ್ಯಗಳನ್ನೂ ಸಂಪಾದಿಸಿ ಕೊಡುವುದು.

೯೮–೯೯. ಈ ಧರ್ಮದ ಆಚರಣೆಯ ಫಲವಾಗಿಯೇ ದೇಹರಹಿತನಾದ ಮನ್ಮಥನೂ ರತಿದೇವಿಗೆ ಸಾಂಗನಾಗಿ ಕಾಣಿಸುತ್ತಿದ್ದನು. ಯಾವ ಮನುಷ್ಯನು ಬಹಿಸ್ತೀರ್ಥಗಳಲ್ಲಿ ಪ್ರಾತಃಸ್ನಾನವನ್ನೂ ಕಾಲಾನುಕೂಲೋಚಿತಗಳಾದ ದಾನಗಳನ್ನೂ ಮಾಡದೆ ವೈಶಾಖಮಾಸವನ್ನು ಕಳೆಯುವನೊ, ಅವನು ಇತರ ಅನೇಕ ಧರ್ಮಗಳನ್ನಾಚರಿಸಿದ್ದರೂ ಅವನಿಗೆ ದುಃಖಪರಂಪರೆಗಳು ಎಂದಿಗೂ ತಪ್ಪಲಾರವು. ಆದರೆ ಈ ಒಂದು ವ್ರತವನ್ನು ಮಾಡುವುದರಿಂದ ಮಿಕ್ಕ ಸಕಲ ಧರ್ಮಗಳೂ ಸಾಫಲ್ಯವನ್ನು ಹೊಂದುವುವು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀ ಸ್ಕಾಂದಮಹಾಪುರಾಣದ ಎರಡನೆಯ ವೈಷ್ಣವಖಂಡದ ವೈಶಾಖಮಾಸಮಾಹಾತ್ಮ್ಯದ ನಾರದಾಂಬರೀಷ ಸಂವಾದದಲ್ಲಿ "ಕುಮಾರೋತ್ಪತ್ತಿ ಕಥನ"ವೆಂಬ ಒಂಬತ್ತನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥ ದಶಮೋಽಧ್ಯಾಯಃ

### ಹೇಮಕಾಂತಸ್ಯ ಬ್ರಹ್ಮಹತ್ಯಾದಿ ಪಾಪಸಮುಪವರ್ಗಃ

ಮೈಥಿಲ ಉವಾಚ:—

ಯತ್ಕಾಮಪತ್ನೀ ಚರಿತಮಶೂನ್ಯಶಯನವ್ರತಂ ।
ದೇವ್ಯೋಪದಿಷ್ಟಂ ತಸ್ಯಾಽಸ್ಯ ವಿಧಾನಂ ಬ್ರೂಹಿ ಭೂಸುರ ॥ ೧ ॥
ಕಿಂ ದಾನಂ ಕೋ ವಿಧಿಸ್ತಸ್ಯ ಪೂಜನಂ ಕಿಂ ಫಲಂ ತಥಾ ।
ಏತದಾಚಕ್ಷ್ವ ಭೂದೇವ ಶ್ರೋತುಂ ಕೌತೂಹಲಂ ಹಿ ಮೇ ॥ ೨ ॥

ಶ್ರುತದೇವ ಉವಾಚ:—

ಶೃಣು ಭೂಯಃ ಪ್ರವಕ್ಷ್ಯಾಮಿ ವ್ರತಂ ಪಾಪಪ್ರಣಾಶನಂ ।
ಅಶೂನ್ಯಶಯನಂ ನಾಮ ರಮಾಯೈ ಹರಿಣೋದಿತಂ ॥ ೩ ॥
ಯೇನ ಚೀರ್ಣೇನ ದೇವೇಶೋ ಜೀಮೂತಾಽಽಭಃ ಪ್ರಸೀದತಿ ।
ಲಕ್ಷ್ಮೀಭರ್ತಾ ಜಗನ್ನಾಥಃ ಸಮಸ್ತಾಘೌಘನಾಶನಃ ॥ ೪ ॥

## ಕನ್ನಡದ ಅನುವಾದ

### ಹೇಮಕಾಂತನಿಗೆ ಬ್ರಹ್ಮಹತ್ಯಾದಿ ಪಾಪಗಳು ನಾಶವಾದುದು

೧. ಶ್ರುತಕೀರ್ತಿಯು ಕೇಳುತ್ತಾನೆ:—"ಎಲೈ ಬ್ರಾಹ್ಮಣೋತ್ತಮನೆ! ನೀನು ಮನ್ಮಥನ ಪತ್ನಿಯಾದ ರತಿದೇವಿಯು ಅಶೂನ್ಯಶಯನವೆಂಬ ವ್ರತವನ್ನಾಚರಿಸಿದಳೆಂದು ಹೇಳಿದೆಯಷ್ಟೆ. ದೇವತೆಗಳಿಂದ ಆಕೆಗೆ ಉಪದೇಶಿಸಲ್ಪಟ್ಟ ಈ ವ್ರತದ ವಿಧಾನವನ್ನು ನನಗೆ ಹೇಳುವವನಾಗು.

೨. ಆ ವ್ರತದಲ್ಲಿ ಯಾವ ದಾನವನ್ನು ಮಾಡಬೇಕು? ಅದನ್ನಾಚರಿಸುವ ವಿಧಿಯಾವುದು? ಯಾವ ಪೂಜೆಯನ್ನು ಮಾಡಬೇಕು. ಅದರಿಂದ ಲಭಿಸುವ ಫಲವೇನು? ಇವುಗಳೆಲ್ಲವನ್ನೂ ನನಗೆ ವಿಸ್ತರಿಸಿ ಹೇಳು. ಕೇಳಲು ನನಗೆ ಅತ್ಯಂತ ಕುತೂಹಲವುಂಟಾಗಿರುವುದು."

೩. ಶ್ರುತದೇವನು ಹೇಳುತ್ತಾನೆ:—ಸಮಸ್ತ ಪಾಪಗಳನ್ನೂ ನಿರ್ಮೂಲಗೊಳಿಸುವ ಅಶೂನ್ಯಶಯನವೆಂಬ ಹೆಸರಿನ ಆ ಮಹಾವ್ರತವನ್ನು ನಿನಗೆ ವಿವರಿಸುವೆನು, ಕೇಳು. ಈ ವ್ರತವನ್ನು ಶ್ರೀಮನ್ನಾರಾಯಣನು ಲಕ್ಷ್ಮೀದೇವಿಗೆ ವಿವರಿಸಿದನು.

೪. ಈ ವ್ರತವನ್ನು ಸಾಂಗವಾಗಿ ನೆರವೇರಿಸುವುದರಿಂದ ನೀಲಮೇಘ

**ಅಕೃತ್ವಾ ಯಸ್ತ್ವಿದಂ ರಾಜನ್ ವ್ರತಂ ಪಾತಕನಾಶನಂ ।**
**ಗಾರ್ಹಸ್ಥ್ಯಮನುವರ್ತೇತ ತಸ್ಯೇದಂ ನಿಷ್ಫಲಂ ಭವೇತ್ ॥ ೫ ॥**
**ಶ್ರಾವಣೇ ಶುಕ್ಲಪಕ್ಷೇ ತು ದ್ವಿತೀಯಾಯಾಂ ಮಹೀಪತೇ ।**
**ಅಶೂನ್ಯಶಯನಾಖ್ಯಂ ತದ್ಗ್ರಾಹ್ಯಂ ವ್ರತಮನುತ್ತಮಂ ॥ ೬ ॥**
**ಚಾತುರ್ಮಾಸ್ಯೇ ತು ಸಂಪ್ರಾಪ್ತೇ ಹವಿಷ್ಯಾಶೀ ಭವೇನ್ನರಃ ।**
**ಚತುರ್ಭಿಃ ಪಾರಣಂ ಮಾಸೈಃ ಸಮ್ಯಕ್ ನಿಷ್ಪಾದ್ಯತೇ ಪ್ರಭೋ ॥ ೭ ॥**
**ಲಕ್ಷ್ಮೀಯುಕ್ತೋ ಜಗನ್ನಾಥಃ ಪೂಜನೀಯೋ ಜನಾರ್ದನಃ ।**
**ಪಾರಣೇ ದಿವಸೇ ಪ್ರಾಪ್ತೇ ಭಕ್ಷ್ಯಂ ಚೈವ ಚತುರ್ವಿಧಂ ॥ ೮ ॥**
**ಉಪಾಯನಂ ಚ ದಾತವ್ಯಂ ಬ್ರಾಹ್ಮಣಾಯ ಕುಟುಂಬಿನೇ ।**
**ಸೌವರ್ಣೀಂ ರಾಜತೀಂ ಚಾಪಿ ಮೂರ್ತಿಂ ಕುರ್ಯಾನ್ಮನೋರಮಾಂ ॥ ೯ ॥**

ಸ್ವಾಮಿಯೂ, ಲಕ್ಷ್ಮೀರಮಣನೂ, ಲೋಕೇಶ್ವರನೂ, ಸಕಲಪಾಪಗಳನ್ನು ನಾಶಗೊಳಿಸುವನೂ, ದೇವೋತ್ತಮನೂ ಆದ ಶ್ರೀಹರಿಯು ಸುಪ್ರಸನ್ನನಾಗುವನು.

೫. ಎಲೈ ಮಹಾರಾಜನೆ! ಸಕಲಪಾಪನಿವಾರಕವಾದ ಈ ಉತ್ತಮ ವ್ರತವನ್ನು ಮಾಡದೆಯೇ ಯಾರು ಗಾರ್ಹಸ್ಥ್ಯಧರ್ಮವನ್ನು ನಡೆಸಿಕೊಂಡು ಬರುವರೊ, ಅವರ ಸಕಲಪುಣ್ಯಾಚರಣೆಯೂ ನಿಷ್ಫಲವೇ ಆಗುವುದು.

೬. ಓ ಭೂಪಾಲಕನೆ! ಶ್ರಾವಣಮಾಸದ ಶುಕ್ಲಪಕ್ಷದ ದ್ವಿತೀಯೆಯ ದಿನದಲ್ಲಿ ಅಶೂನ್ಯಶಯನವೆಂಬ ಹೆಸರುಳ್ಳ ಈ ಸರ್ವೋತ್ತಮವಾದ ವ್ರತವನ್ನು ಹಿಡಿಯಬೇಕು.

೭. ಚಾತುರ್ಮಾಸ್ಯವು ಪ್ರಾಪ್ತವಾಗಲು ಮನುಷ್ಯನು ಕೇವಲ ಹವಿಷ್ಯಾನ್ನವನ್ನೇ ಸೇವಿಸುತ್ತ ನಾಲ್ಕು ತಿಂಗಳುಗಳು ಕಳೆದ ಮೇಲೆ ಉಚಿತರೀತಿಯಿಂದ ಪಾರಣೆಯನ್ನು ನೆರವೇರಿಸಬೇಕು.

೮. ಆ ನಾಲ್ಕುತಿಂಗಳುಗಳಲ್ಲಿ ಲಕ್ಷ್ಮೀಸಮೇತನೂ, ಲೋಕನಾಥನೂ, ಆದ ಜನಾರ್ದನನನ್ನು ಪೂಜಿಸಬೇಕು. ಮತ್ತು ಪಾರಣೆಯ ದಿವಸವು ಪ್ರಾಪ್ತವಾಗಲು ಲೇಹ್ಯ, ಚೋಷ್ಯ, ಪೇಯ ಮತ್ತು ಖಾದ್ಯಗಳೆಂಬ ನಾಲ್ಕು ಬಗೆಯ ಪದಾರ್ಥಗಳನ್ನೂ ನೈವೇದ್ಯಮಾಡಬೇಕು.

೯. ಗೃಹಸ್ಥಾಶ್ರಮಿಯೂ ದರಿದ್ರನೂ ಆದ ಬ್ರಾಹ್ಮಣೋತ್ತಮನಿಗೆ ಅವುಗಳನ್ನು ಉಪಾಯನವಾಗಿ ಕೊಡಬೇಕು. ಚಿನ್ನದಲ್ಲಾಗಲಿ ಬೆಳ್ಳಿಯಲ್ಲಾಗಲಿ ಮನೋಹರವಾಗಿರುವ ವಿಷ್ಣುವಿನ ವಿಗ್ರಹವನ್ನು ಮಾಡಿಸಬೇಕು.

ಪೀತಾಂಬರಧರಾಂ ದಿವ್ಯಾಂ ವನಮಾಲಾವಿಭೂಷಿತಾಂ ।
ಶುಕ್ಲಪುಷ್ಪೈಃ ಸುಗಂಧೈಶ್ಚ ಪೂಜಯೇತ್ಪುರುಷೋತ್ತಮಂ ॥ ೧೦ ॥
ಶಯ್ಯಾದಾನೈರ್ವಸ್ತ್ರದಾನೈರ್ವಿಪ್ರಾಣಾಂ ಭೋಜನೈಸ್ತಥಾ ।
ದಂಪತ್ಯೋರ್ಭೋಜನೈಶ್ಚೈವ ದಕ್ಷಿಣಾಭಿಃ ಪ್ರಪೂಜಯೇತ್ ॥ ೧೧ ॥
ಏವಂ ತು ಚತುರೋ ಮಾಸಾನ್ ಪೂಜಯಿತ್ವಾ ಜನಾರ್ದನಂ ।
ಮಾರ್ಗಶೀರ್ಷಾದಿ ಮಾಸೇಷು ಪೂಜಯೇತ್ಪೂರ್ವವದ್ಧರಿಂ ॥ ೧೨ ॥
ರಕ್ತವರ್ಣಂ ಹರಿಂ ಧ್ಯಾಯೇದ್ರುಕ್ಮಿಣೀಸಹಿತಂ ತಥಾ ।
ಚೈತ್ರಾದೀಂಶ್ಚತುರೋ ಮಾಸಾನೇವಂ ಸಂಪೂಜಯೇತ್ತತಃ ॥ ೧೩ ॥
ಭೂಮ್ಯಾಸಹಸ್ಥಿತಂ ದೇವಮರ್ಚಯೇದ್ಭಕ್ತಿಪೂರ್ವಕಂ ।
ಸನಂದನಾದ್ಯೈರ್ಮುನಿಭಿಃ ಸ್ತೂಯಮಾನಮಕಲ್ಮಷಂ ॥ ೧೪ ॥
ಆಷಾಢಸ್ಯ ಚ ಮಾಸಸ್ಯ ದ್ವಿತೀಯಾಯಾಂ ಸಮಾಪಯೇತ್ ।
ಅಷ್ಟಾಕ್ಷರೇಣ ಮಂತ್ರೇಣ ಜುಹುಯಾದನಲೇ ಶುಭೇ ॥ ೧೫ ॥

---

೧೦. ಆ ಮೂರ್ತಿಯು ಪೀತಾಂಬರದಿಂದ ಆವೃತವಾಗಿ ಸುಂದರವಾಗಿ ವನಮಾಲೆಯಿಂದಲಂಕೃತವಾಗಿರಬೇಕು. ಆ ಮೂರ್ತಿಯಲ್ಲಿ ಪುರುಷೋತ್ತಮನನ್ನು ಆವಾಹನೆಮಾಡಿ ಬಿಳಿಯ ಪುಷ್ಪಗಳಿಂದಲೂ, ಸುಗಂಧದ್ರವ್ಯಗಳಿಂದಲೂ ಸಮಗ್ರಪೂಜೆಯನ್ನು ನೆರವೇರಿಸಬೇಕು.

೧೧. ಪ್ರತಿದಿನದಲ್ಲಿಯೂ ಶಯ್ಯಾದಾನಗಳನ್ನೂ, ವಸ್ತ್ರದಾನಗಳನ್ನೂ, ಬ್ರಾಹ್ಮಣರ ಭೋಜನಗಳನ್ನೂ, ದಂಪತಿಗಳ ಭೋಜನಗಳನ್ನೂ, ದಕ್ಷಿಣಾದಾನಾದಿಗಳನ್ನೂ ಮಾಡಿ ಶ್ರೀಮನ್ನಾರಾಯಣನನ್ನು ಪೂಜೆಮಾಡಬೇಕು.

೧೨. ಈ ವಿಧವಾಗಿ ನಾಲ್ಕು ಮಾಸಗಳವರೆಗೂ ಶ್ರೀಮನ್ನಾರಾಯಣನ ಪೂಜೆಯನ್ನು ಮಾಡಿ ಬಳಿಕ ಮಾರ್ಗಶೀರ್ಷವೇ ಮೊದಲಾದ ನಾಲ್ಕು ಮಾಸಗಳಲ್ಲಿಯೂ ಮುನ್ನಿನಂತೆಯೇ ಪೂಜೆಯನ್ನು ಮುಂದುವರಿಸಬೇಕು.

೧೩. ಆದರೆ ಆ ಕಾಲದಲ್ಲಿ ರುಕ್ಮಿಣೀಸಹಿತನಾಗಿ ರಕ್ತವರ್ಣದ ದೇಹವುಳ್ಳವನಾಗಿರುವ ಶ್ರೀಹರಿಯನ್ನು ಧ್ಯಾನಿಸಬೇಕು. ಇಂತು ನಾಲ್ಕು ಮಾಸಗಳು ಕಳೆಯಲು ಚೈತ್ರಮಾಸವೇ ಮೊದಲಾದ ನಾಲ್ಕು ತಿಂಗಳಲ್ಲಿಯೂ ಹೀಗೆಯೇ ಪೂಜೆಯನ್ನು ನೆರವೇರಿಸಬೇಕು.

೧೪. ಆ ಸಮಯದಲ್ಲಿ ಭೂದೇವಿಯೊಡನಿರುವವನನ್ನಾಗಿ ಭಾವಿಸಿ ಪರಮಾತ್ಮನನ್ನು ಭಕ್ತಿಯುಕ್ತನಾಗಿ ಅರ್ಚನೆ ಮಾಡಬೇಕು. ಸನಂದನನೇ ಮೊದಲಾದ ಮಹಾಮುನಿಗಳ ಸ್ತೋತ್ರಗಳಿಗೆ ವಿಷಯನಾಗಿ ನಿಷ್ಕಲ್ಮಷನಾಗಿರುವಂತೆ ಶ್ರೀಹರಿಯನ್ನು ಭಾವಿಸಬೇಕು.

೧೫. ಆಷಾಢಮಾಸದ ದ್ವಿತೀಯೆಯಲ್ಲಿ ಈ ವ್ರತವನ್ನು ಸಮಾಪ್ತಿ

ಮಾರ್ಗಶೀರ್ಷಾದಿ ಮಾಸಾನಾಂ ಪಾರಣೇ ಭೂಮಿಪಾಲಕ ।
ಜುಹುಯಾದ್ವಿಷ್ಣುಗಾಯತ್ರ್ಯಾ ಚೈತ್ರಾದೀನಾಂ ನಿಬೋಧಯ ॥ ೧೬ ॥
ಪೌರುಷೇಣ ಮಂತ್ರೇಣ ಜುಹುಯಾದನಲೇ ಶುಭೇ ।
ಪಂಚಾಮೃತಂ ಪಾಯಸಂ ಚ ಹ್ಯಪೂಪಂ ಘೃತಪಾಚಿತಂ ॥ ೧೭ ॥
ಏವಂ ಕ್ರಮೇಣ ದ್ರವ್ಯಾಣಿ ಪ್ರತಿಮಾಸಂ ನಿಬೋಧಯ ।
ಸೌವರ್ಣೀಂ ಪ್ರತಿಮಾಂ ದದ್ಯಾಲ್ಲಕ್ಷ್ಮೀನಾರಾಯಣಸ್ಯ ಚ ॥ ೧೮ ॥
ಸೌವರ್ಣೀಂ ಮಧ್ಯಮೇ ದದ್ಯಾತ್ಕೃಷ್ಣಸ್ಯ ಪರಮಾತ್ಮನಃ ।
ರಾಜತೀಂ ತ್ವಂತಿಮೇ ದದ್ಯಾದ್ವರಾಹಸ್ಯ ಮಹಾತ್ಮನಃ ॥ ೧೯ ॥
ಬ್ರಾಹ್ಮಣಾನ್ ಭೋಜಯೇತ್ಪಶ್ಚಾನ್ನಾಮಭಿಃ ಕೇಶವಾದಿಭಿಃ ।
ವಸ್ತ್ರಯುಗ್ಮೈರಲಂಕಾರೈರ್ಯಥಾವಿತ್ತಾನುಸಾರತಃ ॥ ೨೦ ॥

---

ಗೊಳಿಸಬೇಕು. "ಓಂ ನಮೋ ನಾರಾಯಣಾಯ" ಎಂಬ ಅಷ್ಟಾಕ್ಷರೀ ಮಂತ್ರದಿಂದ ಸಂಸ್ಕಾರಸಹಿತವಾದ ಅಗ್ನಿಯಲ್ಲಿ ಹೋಮವನ್ನು ಮಾಡಬೇಕು.

೧೬. ಎಲೈ ಮಹಾರಾಜನೆ! ಮಾರ್ಗಶೀರ್ಷವೇ ಮೊದಲಾದ ಮಾಸಗಳಲ್ಲಿ ಪಾರಣೆಯ ದಿವಸಗಳಲ್ಲಿ ವಿಷ್ಣುಗಾಯತ್ರಿಯೆನಿಸಿದ "ನಾರಾಯಣಾಯ ವಿದ್ಮಹೇ ವಾಸುದೇವಾಯ ಧೀಮಹಿ ತನ್ನೋ ವಿಷ್ಣುಃ ಪ್ರಚೋದಯಾತ್" ಎಂಬ ಮಂತ್ರದಿಂದ ಹೋಮಮಾಡಬೇಕು. ಇನ್ನು ಚೈತ್ರಾದಿ ನಾಲ್ಕು ಮಾಸಗಳಲ್ಲಿ ಮಾಡಬೇಕಾದ ಕಾರ್ಯವನ್ನು ಕೇಳು.

೧೭. ಆ ಮಾಸಗಳಲ್ಲಿ ಪುರುಷಸೂಕ್ತದ ಮಂತ್ರಗಳಿಂದ ಪವಿತ್ರವಾದ ಅಗ್ನಿಯಲ್ಲಿ ಹೋಮವನ್ನು ಮಾಡಬೇಕು. ಈ ಮೂರು ಚಾತುರ್ಮಾಸ್ಯಗಳಲ್ಲಿಯೂ ಪಂಚಾಮೃತ, ಪಾಯಸ ಮತ್ತು ತುಪ್ಪದಲ್ಲಿ ಕರೆದಿರುವ ಅಪೂಪಗಳು— ಇವುಗಳನ್ನು ನಿತ್ಯವೂ ಉಪಯೋಗಿಸಬೇಕು.

೧೮. ಇಲ್ಲಿಯವರೆಗೆ ದ್ರವ್ಯಗಳ ವಿಷಯವನ್ನು ಹೇಳಿದ್ದಾಯಿತು. ಇನ್ನು ಪ್ರತಿಮೆಗಳನ್ನು ಮಾಡುವ ವಿಧಾನವನ್ನು ಕೇಳು, ಶ್ರಾವಣಾದಿ ಚಾತುರ್ಮಾಸ್ಯದ ಪಾರಣೆಯಲ್ಲಿ ಚಿನ್ನದಿಂದ ಮಾಡಿದ ಲಕ್ಷ್ಮೀನಾರಾಯಣರ ವಿಗ್ರಹವನ್ನು ದಾನಮಾಡಬೇಕು.

೧೯. ಮಾರ್ಗಶೀರ್ಷಾದಿ ಮಾಸ ಚತುಷ್ಟಯದ ಪಾರಣೆಯ ದಿನಗಳಲ್ಲಿ ಪರಮಾತ್ಮನಾದ ಶ್ರೀಕೃಷ್ಣನ ವಿಗ್ರಹವನ್ನು ಚಿನ್ನದಲ್ಲಿ ಮಾಡಿಸಿ ದಾನ ಮಾಡಬೇಕು. ಕೊನೆಯದಾಗಿ ಚೈತ್ರಾದಿ ಚಾತುರ್ಮಾಸ್ಯದಲ್ಲಿ ಮಹಾ ಮಹಿಮನಾದ ವರಾಹಸ್ವಾಮಿಯ ಪ್ರತಿಮೆಯನ್ನು ಬೆಳ್ಳಿಯಲ್ಲಿ ಮಾಡಿಸಿ ದಾನ ಮಾಡಬೇಕು.

೨೦. ಬಳಿಕ ಕೇಶವಾದಿ ಚತುರ್ವಿಂಶತಿರೂಪಗಳನ್ನು ಇಪ್ಪತ್ತುನಾಲ್ಕು

ಅರ್ಚಯಿತ್ವಾ ತತೋ ದದ್ಯಾದಪೂಪಾನ್ ಘೃತಪಾಚಿತಾನ್ ।
ಉಪಾಯನಾರ್ಥಂ ವಿಪ್ರೇಭ್ಯೋ ದ್ವಾದಶೇಭ್ಯೋ ನಿವೇದಯೇತ್ ॥೨೦॥
ಆಚಾರ್ಯಾಯ ತತೋ ದದ್ಯಾತ್ಪ್ರತಿಮಾಂ ಪೂರ್ವಕಲ್ಪಿತಾಂ ।
ಶಯ್ಯಾಂ ಸಂಕಲ್ಪಿತಾಂ ಪೂರ್ಣಾಂ ಸರ್ವಾಲಂಕಾರಭೂಷಿತಾಂ ॥ ೨೧ ॥
ತಸ್ಯಾಮಭ್ಯರ್ಚ್ಯ ವಿಧಿವಲ್ಲಕ್ಷ್ಮೀನಾರಾಯಣಂ ಪರಂ ।
ಕಾಂಸ್ಯಪಾತ್ರೇಣ ಸಹಿತಾಮಪೂಪೈರ್ಬಹುಭಿಸ್ತಥಾ ॥ ೨೩ ॥
ವಸ್ತ್ರಾಲಂಕಾರಸಹಿತಾಂ ದಕ್ಷಿಣಾಭಿಸ್ತಥೈವ ಚ ।
ಬ್ರಾಹ್ಮಣಾಯ ವಿಶಿಷ್ಟಾಯ ವೈಷ್ಣವಾಯ ಕುಟುಂಬಿನೇ ।
ದಾತವ್ಯಾ ವಿಧಿವತ್ಪೂಜ್ಯ ಬ್ರಾಹ್ಮಣಾಂಶ್ಚಾಪಿ ಭೋಜಯೇತ್ ॥ ೨೪ ॥

ದಾನಮಂತ್ರಃ

ಲಕ್ಷ್ಮ್ಯಾಃ ಅಶೂನ್ಯಂ ಶಯನಂ ಯಥಾ ತವ ಜನಾರ್ದನ ।
ಶಯ್ಯಾ ಮಮಾಪ್ಯಶೂನ್ಯಾ ಸ್ಯಾದ್ದಾನೇನಾನೇನ ಕೇಶವ ॥ ೨೫ ॥

---

ಬ್ರಾಹ್ಮಣರಲ್ಲಿ ಚಿಂತನೆಮಾಡಿ ಅವರಿಗೆ ಭೋಜನವನ್ನು ಮಾಡಿಸಬೇಕು. ಮತ್ತು ತನ್ನ ಐಶ್ವರ್ಯಕ್ಕನುಗುಣವಾಗಿ ವಸ್ತ್ರದ್ವಯಗಳಿಂದಲೂ ಇತರ ಅಲಂಕಾರಗಳಿಂದಲೂ ಅವರನ್ನು ಪೂಜಿಸಿ ತೃಪ್ತಿಪಡಿಸಬೇಕು.

೨೦. ಬಳಿಕ ಹನ್ನೆರಡು ಮಂದಿ ಬ್ರಾಹ್ಮಣರನ್ನು ಕರೆದು ಸತ್ಕರಿಸಿ ತುಪ್ಪದಲ್ಲಿ ಪಾಕ ಮಾಡಿದ ಅಪೂಪಗಳನ್ನು ಅವರಿಗೆ ಉಪಾಯನದಾನವನ್ನಾಗಿ ನಿವೇದಿಸಬೇಕು.

೨೧. ಬಳಿಕ ಆಚಾರ್ಯನಿಗೆ ಪೂರ್ವದಲ್ಲಿಯೇ ಸಿದ್ಧಗೊಳಿಸಿ ಪೂಜಿಸಲ್ಪಟ್ಟಿರುವ ಪ್ರತಿಮೆಯನ್ನು ದಾನಮಾಡಬೇಕು. ಮತ್ತು ಮೊದಲೇ ಸಂಕಲ್ಪವನ್ನು ಮಾಡಿಕೊಂಡು ಸಕಲೋಪಕರಣಸಹಿತವೂ, ಸರ್ವಾಲಂಕಾರಭೂಷಿತವೂ ಆದ ಪ್ರತಿಮೆಯನ್ನು ಆತನಿಗೆ ಒಪ್ಪಿಸಬೇಕು.

೨೨–೨೪. ಆ ಶಯ್ಯೆಯಲ್ಲಿ ಲಕ್ಷ್ಮೀನಾರಾಯಣರ ವಿಗ್ರಹಗಳನ್ನಿಟ್ಟು ವಿಧ್ಯುಕ್ತಪ್ರಕಾರದಿಂದ ಪೂಜೆಯನ್ನು ಮಾಡಿ ಸತ್ಪಾತ್ರನಾದ ಆತನಿಗೆ ಕಂಚಿನ ಪಾತ್ರೆಯಲ್ಲಿ ಅನೇಕ ವಿಧಗಳಾದ ಅಪೂಪಗಳನ್ನು ನೈವೇದ್ಯಮಾಡಿ ವಸ್ತ್ರಗಳಿಂದಲೂ, ಅಲಂಕಾರಗಳಿಂದಲೂ ಕೂಡಿದ ಆ ಶಯನವನ್ನು ಉಚಿತ ದಕ್ಷಿಣೆಯೊಡನೆ ಸ್ವಧರ್ಮನಿರತನೂ, ವಿಷ್ಣುಭಕ್ತನೂ, ಗೃಹಸ್ಥಾಶ್ರಮಿಯೂ ಆದ ಬ್ರಾಹ್ಮಣೋತ್ತಮನಿಗೆ ಸಮರ್ಪಿಸಬೇಕು. ಮತ್ತು ತನ್ನ ಶಕ್ತ್ಯನುಸಾರವಾಗಿ ಆ ಬ್ರಾಹ್ಮಣರೆಲ್ಲರಿಗೂ ಭೋಜನವನ್ನು ಮಾಡಿಸಬೇಕು.

೨೫. ಶಯ್ಯಾದಾನವನ್ನು ಮಾಡುವಾಗ ಈ ಮಂತ್ರವನ್ನು ಹೇಳಬೇಕು. "ಎಲೈ ಜನಾರ್ದನನೆ! ನಿನಗೆ ಲಕ್ಷ್ಮೀದೇವಿಯಿಂದ ಅಶೂನ್ಯವಾದ ಶಯನವು

ಏವಂ ಸಂಪ್ರಾರ್ಥ್ಯ ದೇವೇಶಂ ಸ್ವಯಂ ಭೋಜನಮಾಚರೇತ್ ॥ ೨೬ ॥
ಪುರುಷೋ ವಾಸರೇ ವಾಽಪಿ ವಿಧವಾ ವಾ ಸಮಾಚರೇತ್ ।
ಅಶೂನ್ಯಶಯನಾರ್ಥಂ ಚ ಕರ್ತವ್ಯಂ ವರಮುತ್ತಮಂ ॥ ೨೭ ॥
ಏವಂ ತವ ಮಯಾಖ್ಯಾತಂ ವಿಸ್ತರಾನ್ನೃಪಸತ್ತಮ ।
ಸುಪ್ರಸನ್ನೇ ಜಗನ್ನಾಥೇ ಭವೇಯುರ್ವಿವಿಧಾಃ ಪ್ರಜಾಃ ॥ ೨೮ ॥
ತಸ್ಮಿಂಸ್ತುಷ್ಟೇ ತು ದೇವೇಶೇ ದೇವಾನಾಮಪಿ ದುರ್ಲಭಾಃ ।
ತಸ್ಮಾತ್ಸರ್ವಪ್ರಯತ್ನೇನ ವ್ರತಮೇತತ್ಸಮಾಚರೇತ್ ॥ ೨೯ ॥
ಅವಶ್ಯಂ ಗಂತುಕಾಮೇನ ತದ್ವಿಷ್ಣೋಃ ಪರಮಂ ಪದಂ ।
ಏವಮುಕ್ತಂ ಮಯಾ ಸರ್ವಂ ಕಿಮನ್ಯಚ್ಛ್ರೋತುಮಿಚ್ಛಸಿ ॥ ೩೦ ॥
ಇತ್ಯುಕ್ತಸ್ತೇನ ರಾಜರ್ಷಿಃ ಪುನರಪ್ಯಾಹ ತಂ ಮುನಿಂ ।
ವೈಶಾಖೇ ಛತ್ರದಾನಸ್ಯ ಮಾಹಾತ್ಮ್ಯಂ ವಿಸ್ತರಾದ್ವದ ॥ ೩೧ ॥

ಹೇಗೆ ಸಂತತವೂ ಪ್ರಾಪ್ತವಾಗಿರುವುದೊ, ಹಾಗೆಯೇ ನನ್ನ ಶಯ್ಯೆಯೂ ಈ ದಾನದ ಫಲವಾಗಿ ಎಂದಿಗೂ ಶೂನ್ಯವಾಗದಿರಲಿ.

೨೬–೨೭. ಈ ರೀತಿಯಾಗಿ ದೇವತಾಸಾರ್ವಭೌಮನಾದ ಶ್ರೀಮನ್ನಾರಾಯಣನನ್ನು ಪ್ರಾರ್ಥಿಸಿಕೊಂಡು ಬಳಿಕ ವ್ರತವನ್ನು ಮಾಡುವವನು ಭೋಜನವನ್ನು ಮಾಡಬೇಕು. ಪುರುಷನಾಗಲಿ, ಸ್ತ್ರೀಯಾಗಲಿ, ವಿಧವೆಯರಾಗಲಿ ಯಾರಾದರೂ ಈ ವ್ರತವನ್ನು ಆಚರಿಸಬಹುದು. ದಂಪತಿಗಳ ಶಯ್ಯೆಯು ಪರಸ್ಪರ ಶೂನ್ಯವಾಗದಿರಲು ಉತ್ತಮವಾದ ಈ ವ್ರತವನ್ನು ಸಕಲರೂ ನೆರವೇರಿಸಬೇಕು.

೨೮. ಎಲೈ ಮಹಾರಾಜನೆ! ಈ ರೀತಿಯಾಗಿ ನಿನಗೆ ಅಶೂನ್ಯಶಯನ ವ್ರತದ ಪ್ರಕಾರವನ್ನು ವಿಸ್ತಾರವಾಗಿ ತಿಳಿಸಿರುವೆನು. ಜಗನ್ನಾಥನಾದ ಮಹಾವಿಷ್ಣುವು ಸುಪ್ರಸನ್ನನಾಗಲು ಅನೇಕವಿಧಗಳಾದ ಪ್ರಜಾಸಂತತಿಯೂ ಅಭಿವೃದ್ಧಿಯನ್ನು ಹೊಂದುವುದು.

೨೯–೩೦. ದೇವೋತ್ತಮನಾದ ಆತನು ಸಂತುಷ್ಟನಾಗಲು ಮನುಷ್ಯರು ದೇವತೆಗಳಿಗೂ ದುರ್ಲಭವಾದ ಸ್ಥಾನಗಳನ್ನು ಪಡೆಯುವರು. ಆದುದರಿಂದ ಆ ಮಹಾವಿಷ್ಣುವಿನ ಪರಮಪದವನ್ನು ಖಂಡಿತವಾಗಿ ಪಡೆಯಲೇಬೇಕೆಂಬ ಬಯಕೆಯುಳ್ಳ ಮಾನವನು ಈ ವ್ರತವನ್ನು ಸರ್ವಪ್ರಕಾರದಿಂದಲೂ ಅವಶ್ಯವಾಗಿ ಮಾಡಲೇಬೇಕು. ಇಂತು ನಿನಗೆ ಈ ವ್ರತದ ಆದ್ಯಂತವೆಲ್ಲವನ್ನೂ ತಿಳಿಸಿರುವೆನು. ಮತ್ತೇನನ್ನು ಕೇಳಲು ಕುತೂಹಲವುಳ್ಳವನಾಗಿರುವೆ?

೩೧. ಇಂತೆಂದ ರಾಜರ್ಷಿಯಾದ ಶ್ರುತಕೀರ್ತಿಯು ಬ್ರಾಹ್ಮಣನನ್ನು

ಶೃಣ್ವತೋಽಪಿ ನ ತೃಪ್ತಿರ್ಮೇ ವೈಶಾಖೋತ್ಥಾನ್ ಸುಧಾವಹಾನ್ ॥೧೨॥
ಇತಿ ತದ್ವಚನಂ ಶ್ರುತ್ವಾ ಯಶಸ್ಯಂ ಪುಣ್ಯವರ್ಧನಂ ।
ಪ್ರತ್ಯುವಾಚ ಮಹಾಭಾಗಂ ಶ್ರುತದೇವೋ ಮಹಾಯಶಾಃ ॥ ೧೩ ॥

ಶ್ರುತದೇವ ಉವಾಚ:—

ವೈಶಾಖೇ ಘರ್ಮತಪ್ತಾನಾಂ ಮಾನವಾನಾಂ ಮಹಾತ್ಮನಾಂ ।
ಯೇ ಕುರ್ವಂತ್ಯಾತಪತ್ರಾಣಾಂ ತೇಷಾಂ ಪುಣ್ಯಮನಂತಕಂ ॥ ೧೪ ॥
ಅತ್ರೈವೋದಾಹರಂತೀಮಮಿತಿಹಾಸಂ ಪುರಾತನಂ ।
ವೈಶಾಖಧರ್ಮಮುದ್ದಿಶ್ಯ ಪುರಾ ಕೃತಯುಗೇ ಕೃತಂ ॥ ೧೫ ॥
ವಂಗದೇಶೇ ಪುರಾ ಕಶ್ಚಿದ್ಧೇಮಕಾಂತ ಇತಿ ಶ್ರುತಃ ।
ಕುಶಕೇತೋಃ ಸುತೋ ಧೀಮಾನ್ ರಾಜಾ ಶಸ್ತ್ರಭೃತಾಂ ವರಃ ।
ಏಕದಾ ಮೃಗಯಾಽಽಸಕ್ತೋ ಗಹನಂ ವನಮಾವಿಶತ್ ॥ ೧೬ ॥

ಕುರಿತು ಪುನಃ ಪ್ರಶ್ನೆಯನ್ನು ಮಾಡಿದನು. "ವೈಶಾಖಮಾಸದಲ್ಲಿ ಛತ್ರವನ್ನು ದಾನಮಾಡುವುದರ ಮಾಹಾತ್ಮ್ಯವನ್ನು ನನಗೆ ವಿಸ್ತಾರವಾಗಿ ನಿರೂಪಿಸು.

೧೨. ನೀನು ಹೇಳುತ್ತಿರುವ ಪರಮ ಮಂಗಳಕರಗಳಾದ ವೈಶಾಖಮಾಸ ಧರ್ಮಗಳನ್ನು ಕೇಳಿದಷ್ಟೂ ನನಗೆ ತೃಪ್ತಿಯೇ ಉಂಟಾಗುತ್ತಿಲ್ಲ."

೧೩. ಯಶಸ್ಕಾರಣವೂ ಪುಣ್ಯಫಲದಾಯಕವೂ ಆದ ಈ ಪ್ರಶ್ನೆಗಳನ್ನು ರಾಜನಿಂದ ಕೇಳಿ ಮಹಾ ಪ್ರಭಾವಶಾಲಿಯಾದ ಶ್ರುತದೇವನು ಮಹಾತ್ಮನಾದ ಆತನಿಗೆ ಉತ್ತರವನ್ನು ಹೇಳಲುಪಕ್ರಮಿಸಿದನು.

೧೪. ಶ್ರುತದೇವನು ನಿರೂಪಿಸುತ್ತಾನೆ:— ಎಲೈ ರಾಜೋತ್ತಮನೆ! ವೈಶಾಖಮಾಸದಲ್ಲಿ ಬಿಸಿಲಿನಿಂದ ಸಂತಪ್ತರಾಗಿ ಬರುವ ಮಹಾತ್ಮರಾದ ಮನುಷ್ಯರಿಗೆ ಯಾರು ನೆರಳನ್ನು ಕಲ್ಪಿಸಿಕೊಡುವರೋ, ಅವರ ಪುಣ್ಯವು ನಾಶರಹಿತವಾಗಿರುವುದು.

೧೫. ಈ ವಿಷಯದಲ್ಲಿ ಪುರಾತನವಾದ ಮುಂದೆ ಹೇಳುವ ಈ ಇತಿಹಾಸವೊಂದನ್ನು ಶಾಸ್ತ್ರಜ್ಞರು ಉದಾಹರಿಸುವರು. ವೈಶಾಖಮಾಸದ ಧರ್ಮಕ್ಕೆ ಸಂಬಂಧಿಸಿದ ಈ ಸಂಗತಿಯು ಮುನ್ನ ಕೃತಯುಗದಲ್ಲಿ ನಡೆದ ವಿಷಯವಾಗಿದೆ.

೧೬. ಪೂರ್ವಕಾಲದಲ್ಲಿ ವಂಗದೇಶದಲ್ಲಿ ಕುಶಕೇತುವಿನ ಪುತ್ರನಾದ ಹೇಮಕಾಂತನೆಂಬ ಒಬ್ಬ ಬುದ್ಧಿಶಾಲಿಯೂ ಧನುರ್ಧಾರಿಗಳಲ್ಲಿ ಅಗ್ರೇಸರನೂ ಆದ ರಾಜನು ರಾಜ್ಯವನ್ನಾಳುತ್ತಿದ್ದನು. ಒಂದಾನೊಂದು ದಿನ ಆತನು ಬೇಟೆಯನ್ನಾಡುವ ಆಸಕ್ತಿಯುಳ್ಳವನಾಗಿ ದುರ್ಗಮವಾದ ಅರಣ್ಯವೊಂದನ್ನು ಪ್ರವೇಶಿಸಿದನು.

ತತ್ರ ನಾನಾವಿಧಾನ್ ಹತ್ವಾ ಮೃಗಾನ್ ಕ್ರೋಡಾಧಿಕಾನ್ ಬಹೂನ್ ।
ಶ್ರಾಂತೋ ಮಧ್ಯಾಹ್ನವೇಲಾಯಾಂ ಮುನೀನಾಮಾಶ್ರಮಂ ಯಯೌ॥
ತದಾ ಶತರ್ಚಿನೋ ನಾಮ ಋಷಯಃ ಶಂಸಿತವ್ರತಾಃ ।
ಸಮಾಧಿಸ್ಥಾ ನಜಾನಂತಿ ಬಾಹ್ಯಕೃತ್ಯಂ ಚ ಕಿಂಚನ ॥ ೩೮ ॥
ತಾನ್ ದೃಷ್ಟ್ವಾ ನಿಶ್ಚಲಾನ್ವಿಪ್ರಾನ್ ಕ್ರುದ್ಧೋ ಹಂತುಂ ಮನೋ ದಧೇ ।
ಭೂಪಂ ನಿವಾರಯಾಮಾಸ ಶಿಷ್ಯಾಣಾಮಯುತಂ ತದಾ ॥ ೩೯ ॥
ದುರ್ಬುದ್ಧೇ! ಶೃಣು ನೋ ವಾಕ್ಯಂ ಗುರವಸ್ತು ಸಮಾಧಿಗಾಃ ।
ನೋ ಜಾನಂತಿ ಬಹಿಃಕೃತ್ಯಂ ತಸ್ಮಾತ್ಕ್ರೋಧಂ ನಚಾರ್ಹಸಿ ॥ ೪೦ ॥
ತತಃ ಶಿಷ್ಯಾನುವಾಚೇದಂ ವಚನಂ ಕ್ರೋಧವಿಹ್ವಲಃ ।
ಯೂಯಂ ಕುರುಧ್ವಮಾತಿಥ್ಯಮಧ್ವಶ್ರಾಂತಸ್ಯ ಮೇ ದ್ವಿಜಾಃ ॥ ೪೧ ॥
ಏವಮುಕ್ತಾಸ್ತು ಭೂಪೇನ ಶಿಷ್ಯಾ ಊಚುಸ್ತದಾ ನೃಪಂ ।
ನಾಽಽಜ್ಞಪ್ತಾ ಗುರುಭಿರ್ಭೂಪ ವಯಂ ಭಿಕ್ಷಾಶಿನಃ ಪುನಃ ॥ ೪೨ ॥

---

೩೭-೩೮. ಅಲ್ಲಿ ಕಾಡುಹಂದಿಗಳೇ ಮೊದಲಾದ ಬಹು ವಿಧಗಳಾದ ಅನೇಕ ದುಷ್ಟಮೃಗಗಳನ್ನು ನಿಗ್ರಹಿಸಿ ಮಧ್ಯಾಹ್ನಸಮಯವು ಪ್ರಾಪ್ತವಾಗಲು ಬಹಳ ಬಳಲಿದವನಾಗಿ ಹತ್ತಿರದಲ್ಲಿದ್ದ ಮಹರ್ಷಿಗಳ ಆಶ್ರಮವೊಂದನ್ನು ಸಮೀಪಿಸಿದನು. ಆ ಆಶ್ರಮದಲ್ಲಿ ಶತರ್ಚಿಗಳೆಂಬ ಋಷಿವರ್ಯರು ಉತ್ತಮ ವ್ರತಗಳ ನಿಯಮಗಳನ್ನು ಪಾಲಿಸುತ್ತ ಮನಸ್ಸನ್ನು ಸಮಾಧಿಸ್ಥಿತಿಯಲ್ಲಿ ನಿಲ್ಲಿಸಿದ್ದ ರಾದುದರಿಂದ ಬಾಹ್ಯಪ್ರಪಂಚದ ವ್ಯಾಪಾರವೊಂದನ್ನೂ ತಿಳಿಯಲಾರದೆ ಇದ್ದರು.

೩೯. ಇಂತು ನಿಶ್ಚಲರಾಗಿ ಪ್ರತ್ಯುತ್ತರವನ್ನು ಕೊಡದೆ ಕುಳಿತಿದ್ದ ಮಹರ್ಷಿಗಳನ್ನು ಕಂಡು ಕೋಪಗೊಂಡ ಮಹಾರಾಜನು ಅವರನ್ನು ಸಂಹರಿಸುವ ಯೋಚನೆಯನ್ನು ಮಾಡಿದನು. ಆದರೆ ಅವರ ಹತ್ತು ಸಾವಿರ ಶಿಷ್ಯರೂ ಆತನನ್ನು ಆ ಕಾರ್ಯದಿಂದ ತಡೆದರು.

೪೦. ಮತ್ತು ಇಂತೆಂದರು. "ಎಲೈ ಮೂಢನೆ! ನಮ್ಮ ಮಾತನ್ನು ಕೇಳು. ಗುರುಗಳು ಈಗ ಸಮಾಧಿಸ್ಥಿತಿಯಲ್ಲಿರುವರು. ಬಾಹ್ಯಪ್ರಪಂಚದ ವ್ಯಾಪಾರ ಗಳನ್ನು ಯಾವುದನ್ನೂ ತಿಳಿಯಲಾರರು. ಆದುದರಿಂದ ನೀನು ಈ ಸಮಯದಲ್ಲಿ ಕೋಪಗೊಳ್ಳುವುದು ಉಚಿತವಲ್ಲ."

೪೧. ಈ ಮಾತುಗಳನ್ನು ಕೇಳಿ ಮತ್ತೂ ಕೋಪಗೊಂಡ ರಾಜನು ಆ ಶಿಷ್ಯರನ್ನೇ ಕುರಿತು ಇಂತೆಂದನು. "ಎಲೈ ಬ್ರಾಹ್ಮಣರಿರಾ! ನಾನು ದಾರಿಯನ್ನು ನಡೆದು ಬಳಲಿರುವೆನು. ಶ್ರಾಂತನಾದ ನನಗೆ ನೀವೇ ಉಚಿತ ಸತ್ಕಾರವನ್ನು ನೆರವೇರಿಸಿರಿ."

೪೨. ಇಂತು ಮಹಾರಾಜನು ಕೇಳಲು ಶಿಷ್ಯರು ಆತನಿಗೆ ಪ್ರತ್ಯುತ್ತರವನ್ನು

ಗುರುತಂತ್ರಾಃ ಕಥಂ ಕರ್ತುಮಾತಿಥ್ಯಂ ತೇ ವಯಂ ಕ್ಷಮಾಃ ।
ಪ್ರತ್ಯಾಖ್ಯಾತೋ ನೃಪಃ ಶಿಷ್ಯೈಸ್ತಾನ್ ಹಂತುಂ ಧನುರಾದದೇ ॥ ೪೩ ॥
ಮೃಗದಸ್ಯುಭಯಾದಿಭ್ಯೋ ಬಹುಧಾ ರಕ್ಷಿತಾ ಮಯಾ ।
ತೇ ಮಾಮೇವೋಪಶಿಕ್ಷಂತಿ ಮಯಾ ದತ್ತಪ್ರತಿಗ್ರಹಾಃ ॥ ೪೪ ॥
ಏತೇ ಮಾಂ ನ ವಿಜಾನಂತಿ ಕೃತಘ್ನಾ ಭೂತಮಾನಿನಃ ।
ಘ್ನತೋಽಪಿ ನೇ ನ ದೋಷಃ ಸ್ಯಾದೇತಾನ್ವೈ ಹ್ಯಾತತಾಯಿನಃ ॥ ೪೫ ॥
ಏವಂ ವಿಕ್ರುದ್ಧಮಾನಃ ಸಂಚ್ಛರಾನ್ಮುಂಚನ್ ಶರಾಸನಾತ್ ।
ತಾನ್ನಿದ್ರುತಾನನುದ್ಧೃತ್ಯ ಜಘ್ನೇ ಶಿಷ್ಯ ಶತತ್ರಯಂ ॥ ೪೬ ॥
ದುದ್ರುವುರ್ಭಯಭೀತಾಃ ಸರ್ವೇ ವಿಹಾಯಾಶ್ರಮಮಂಜಸಾ ।
ವಿಧಾವತೇಷು ಶಿಷ್ಯೇಷು ಬಲಾದಾಶ್ರಮಸಂಸ್ಥಿತಾನ್ ॥ ೪೭ ॥

ಹೇಳಿದರು. "ಎಲೈ ಭೂಪಾಲಕನೆ! ನಮಗೆ ಗುರುಗಳಿಂದ ಅನುಜ್ಞೆಯಿಲ್ಲವು. ಅಲ್ಲದೆ ನಾವು ಆಶ್ರಮ ಪದಾರ್ಥಗಳಲ್ಲಿ ಸ್ವಾಮ್ಯವುಳ್ಳವರಲ್ಲ. ಕೇವಲ ಭಿಕ್ಷಾನ್ನವನ್ನೇ ಭೋಜನ ಮಾಡುವವರಾಗಿರುವೆವು.

೪೩. ಗುರುಗಳ ಆಜ್ಞೆಗಳಿಗೆ ಅಧೀನರಾಗಿ ಮಾತ್ರ ನಡೆಯುವವರಾಗಿರುವೆವು. ಇಂತಹ ನಾವು ನಿನಗೆ ಅತಿಥಿ ಸತ್ಕಾರವನ್ನು ಮಾಡಲು ಹೇಗೆ ಸಮರ್ಥರಾಗುವೆವು?" ಈ ರೀತಿಯಾದ ಪ್ರತ್ಯುತ್ತರವನ್ನು ಆ ಶಿಷ್ಯಮಂಡಲಿಯಿಂದ ಕೇಳಿ ಮಹಾರಾಜನು ಕೋಪದಿಂದ ಅವರನ್ನೇ ಕೊಲ್ಲಲು ಧನುಸ್ಸನ್ನು ಕೈಗೆ ತೆಗೆದುಕೊಂಡನು.

೪೪. "ಈ ಬ್ರಾಹ್ಮಣರು ನನ್ನ ಪರಾಕ್ರಮದಿಂದಲೇ ದುಷ್ಟ ಮೃಗಗಳ ಮತ್ತು ದಸ್ಯುಗಳ ಭಯವಿಲ್ಲದೆ ಬಹುವಿಧವಾಗಿ ರಕ್ಷಿಸಲ್ಪಡುತ್ತಿರುವರಲ್ಲವೆ. ನನ್ನಿಂದಲೇ ಇಷ್ಟು ವಿಧವಾದ ಉಪಕಾರಗಳನ್ನು ಪಡೆದಿರುವ ಇವರು ಈಗ ನನಗೇ ಶಿಕ್ಷೆಮಾಡಲು ಬಯಸುತ್ತಿರುವರು.

೪೫. ಇವರೆಲ್ಲರೂ ಕೃತಘ್ನರೂ ಸ್ವಾತ್ಮೋತ್ಕರ್ಷಪರರೂ ಆಗಿರುವುದರಿಂದಲೇ ನನ್ನನ್ನು ಚೆನ್ನಾಗಿ ತಿಳಿಯದವರಾಗಿರುವರು. ಆದುದರಿಂದ ಆತತಾಯಿಗಳಾದ ಇವರನ್ನೆಲ್ಲ ಈಗಲೇ ಸಂಹಾರ ಮಾಡಿದರೂ ನನಗೆ ಯಾವ ದೋಷವೂ ಸಂಭವಿಸಲಾರದು."

೪೬. ಇಂತೆಂದು ಕೋಪದಿಂದ ಉರಿಯುತ್ತ ಭಯದಿಂದ ಓಡಿಹೋಗುತ್ತಿರುವ ಆ ಶಿಷ್ಯರನ್ನು ಅಟ್ಟಿಸಿಕೊಂಡು ಹೋಗಿ ತನ್ನ ಧನುಸ್ಸಿನಿಂದ ತೀಕ್ಷ್ಣಗಳಾದ ಬಾಣಗಳನ್ನು ಬಿಡುತ್ತ ಅವರಲ್ಲಿ ಮುನ್ನೂರು ಜನರನ್ನು ಕೊಂದುಹಾಕಿದನು.

೪೭–೪೮. ಮಿಕ್ಕವರೆಲ್ಲರೂ ಭಯಾವಿಷ್ಟರಾಗಿ ತತ್ಕ್ಷಣದಲ್ಲಿಯೇ ಆಶ್ರಮ

ಸಂಭಾರಾನ್ ಜಹ್ರುಹುಃ ಶೀಘ್ರಂ ಸೈನಿಕಾಃ ಪಾಪಬುದ್ಧಯಃ ।
ಯಥೇಷ್ಟಂ ಭೋಜನಂ ಚಕ್ರುರ್ನೃಪೇಣೈವಾನುಮೋದಿತಾಃ ॥ ೪೮ ॥
ತತಃ ಸೇನಾಽನ್ವಿತೋ ರಾಜಾ ಪುರೀಮಾಗಾದ್ದಿನಾತ್ಯಯೇ ।
ಕುಶಕೇತುಸ್ತತಃ ಶ್ರುತ್ವಾ ತನಯಸ್ಯ ವಿಚೇಷ್ಟಿತಂ ॥ ೪೯ ॥
ಪುರಾನ್ನಿರ್ಯಾತಯಾಮಾಸ ಗರ್ಹಯನ್ ಗರ್ಹಯನ್ ಸುತಂ ।
ರಾಜ್ಯಾನರ್ಹಂ ಕ್ಷಮಾಹೀನಂ ಸ್ವದೇಶಾದಪಿ ಭೂಮಿಪ ॥ ೫೦ ॥
ಪಿತ್ರಾ ತ್ಯಕ್ತಸ್ತತೋ ರಾಜಾ ಹೇಮಕಾಂತೋಽತಿವಿಹ್ವಲಃ ।
ವನಂ ವಿವೇಶ ಗಹನಂ ಹತ್ಯಾಭಿಶ್ಚ ಸುಪೀಡಿತಃ ॥ ೫೧ ॥
ಬಹುಕಾಲಮುವಾಸೋಚ್ಚ ಗಹ್ವರೇ ನಿರ್ಜನೇ ವನೇ ।
ಆಹಾರಂ ಕಲ್ಪಯಾಮಾಸ ವ್ಯಾಧಧರ್ಮಮುಪಾಶ್ರಿತಃ ॥ ೫೨ ॥
ನಕ್ವಾಽಪಿ ಸ್ಥಿತಿಮಾಪೇದೇ ಹತ್ಯಯಾಽಭಿದ್ರುತೋ ಭೃಶಂ ।
ಅಷ್ಟಾವಿಂಶತಿವರ್ಷಾಣಿ ಗತಾನ್ಯಸ್ಯ ದುರಾತ್ಮನಃ ॥ ೫೩ ॥

---

ಪ್ರವೇಶವನ್ನು ತ್ಯಜಿಸಿ ದಿಕ್ಕಾಪಾಲಾಗಿ ಓಡಿಹೋದರು. ಆಶ್ರಮ ರಕ್ಷಕರಾದ ಶಿಷ್ಯರೆಲ್ಲರೂ ಓಡಿಹೋಗಲು ಪಾಪಬುದ್ಧಿಗಳಾದ ಆ ರಾಜನ ಸೈನಿಕರೆಲ್ಲರೂ ಬೇಗನೆ ಮುತ್ತಿಕೊಂಡು ದೇಹಬಲದಿಂದಲೇ ಆಶ್ರಮದಲ್ಲಿದ್ದ ಸಕಲ ಸಾಮಗ್ರಿಗಳನ್ನೂ ಕಿತ್ತುಕೊಂಡರು. ಮಹಾರಾಜನು ನೋಡಿ ಅನುಮೋದಿಸುತ್ತಿರಲು ತಮಗೆ ಇಷ್ಟಗಳಾದ ಪದಾರ್ಥಗಳನ್ನು ಮಾಡಿಕೊಂಡು ಭೋಜನವನ್ನು ಮಾಡಿದರು.

೪೯–೫೦. ಬಳಿಕ ಸೇನಾಸಮೇತನಾದ ರಾಜನು ಸಾಯಂಸಮಯದಲ್ಲಿ ರಾಜಧಾನಿಗೆ ಹಿಂದಿರುಗಿದನು. ತಂದೆಯಾದ ಕುಶಕೇತುವು ಮಗನು ಅರಣ್ಯದಲ್ಲಿ ನಡೆಸಿದ ಬ್ರಾಹ್ಮಣವಧಾದಿ ವಿಚಾರವನ್ನೆಲ್ಲ ಕೇಳಿ ಮತ್ತೆ ಮತ್ತೆ ಅವನನ್ನು ನಿಂದಿಸಿ ರಾಜ್ಯಾಧಿಕಾರಕ್ಕೆ ಅನರ್ಹನೂ, ಶಾಂತಿಹೀನನೂ ಆದವನೆಂದು ನಿಶ್ಚಯಿಸಿ ರಾಜಧಾನಿಯಿಂದಲೂ ತನ್ನ ದೇಶದಿಂದಲೂ ಹೊರ ಹೊರಡಿಸಿದನು.

೫೧. ತಂದೆಯಿಂದ ಪರಿತ್ಯಕ್ತನಾದ ಹೇಮಕಾಂತನು ಅತ್ಯಂತ ದುಃಖಗೊಂಡವನೂ ಬ್ರಹ್ಮಹತ್ಯೆಯೆಂಬ ಮಹಾ ಪಾತಕದಿಂದ ಪೀಡಿತನೂ ಆಗಿ ಸಂಚರಿಸುತ್ತ ಗಹನವಾದ ಒಂದು ಅರಣ್ಯವನ್ನು ಪ್ರವೇಶಿಸಿದನು.

೫೨. ನಿರ್ಜನವಾದ ಆ ಅರಣ್ಯದಲ್ಲಿ ಒಂದು ಗುಹೆಯನ್ನೇ ಮನೆಯನ್ನಾಗಿ ಮಾಡಿಕೊಂಡು ಬಹಳಕಾಲದವರೆಗೂ ಅಲ್ಲಿಯೇ ವಾಸಿಸುತ್ತಿದ್ದನು. ಮತ್ತು ಬೇಡರ ವೃತ್ತಿಯನ್ನವಲಂಬಿಸಿ ಕ್ಷುದ್ರಮೃಗಗಳನ್ನು ಕೊಂದು ಆಹಾರವನ್ನು ಮಾಡಿಕೊಳ್ಳುತ್ತಿದ್ದನು.

೫೩. ಮುನ್ನೂರು ಬ್ರಾಹ್ಮಣರನ್ನು ಕೊಂದ ಬ್ರಹ್ಮಹತ್ಯೆಯು ಭಯಂಕರ

ತೀರ್ಥಯಾತ್ರಾಪ್ರಸಂಗೇನ ತ್ರಿತೋ ನಾಮ ಮಹಾಮುನಿಃ ।
ತಸ್ಮಿನ್ನರಣ್ಯೇ ವೈಶಾಖೇ ರವೌ ಮಧ್ಯಂದಿನೇ ಗತೇ ॥ ೫೪ ॥
ಗಚ್ಛನ್ನಾತಪವಿಕ್ಲಾಂತಸ್ತೃಷಯಾ ಚಾಽಪಿ ಪೀಡಿತಃ ।
ಕ್ವಚಿದ್ವೃಕ್ಷವಿಹೀನೇಷು ಪ್ರದೇಶೇ ಮೂರ್ಚ್ಛಿತೋಽಭವತ್ ॥ ೫೫ ॥
ದೈವಾದ್ದೃಷ್ಟ್ವಾ ಹೇಮಕಾಂತಸ್ತ್ರಿತಂ ನಾಮ ಮಹಾಮುನಿಂ ।
ತೃಷಾರ್ತಂ ಮೂರ್ಚ್ಛಿತಂ ಶ್ರಾಂತಂ ಕೃಪಾಂ ಚಕ್ರೇ ನೃಪಾಧಮಃ ॥ ೫೬ ॥
ಬ್ರಹ್ಮಪತ್ರೈಸ್ತದಾಛತ್ರಂ ಕೃತ್ವಾಚಾಽಽತಪವಾರಣಂ ।
ಮುನೇರ್ಜಗ್ರಾಹ ಶಿರಸಿ ಹ್ಯಲಾಬುಸ್ಥಂ ಜಲಂ ದದೌ ॥ ೫೭ ॥
ಲಬ್ಧಸಂಜ್ಞೋಽಭವತ್ತೇನ ಹ್ಯುಪಚಾರೇಣ ವೈ ಮುನಿಃ ।
ಪತ್ರಂ ಛತ್ರಂ ಕ್ಷತ್ರದತ್ತಂ ಗೃಹೀತ್ವಾ ಗತವಿಕ್ಲಮಃ ॥ ೫೮ ॥

---

ವಾಗಿ ಕಾಣುತ್ತ ತನ್ನನ್ನು ಅನುಸರಿಸುತ್ತಿರಲು ಎಲ್ಲಿಯೂ ಮನಶ್ಶಾಂತಿಯನ್ನು ಹೊಂದಲಾರದಾದನು. ಈ ವಿಧವಾಗಿಯೇ ದುರಾತ್ಮನಾದ ಇವನಿಗೆ ಇಪ್ಪತ್ತೆಂಟು ವರ್ಷಗಳು ಕಳೆದುಹೋದವು.

೫೪. ಒಂದಾನೊಂದು ದಿನ ವೈಶಾಖಮಾಸವು ಪ್ರಾಪ್ತವಾಗಿ ಸೂರ್ಯನು ಮಧ್ಯಾಹ್ನಸಮಯದಲ್ಲಿ ಬೇಗುದಿಯುತ್ತಿರಲು ಆ ಕಾಡಿನಲ್ಲಿ ತೀರ್ಥ ಯಾತ್ರೆಯನ್ನು ಮಾಡಲು ಹೊರಟು ಬರುತ್ತಿದ್ದ ತ್ರಿತನೆಂಬ ಮಹಾಮುನಿ ಯೊಬ್ಬನು ಕಾಣುವವನಾದನು.

೫೫. ಆತನು ದಾರಿಯನ್ನು ನಡೆಯುತ್ತ ಬಿಸಿಲಿನಿಂದ ಪರಿತಪಿಸುತ್ತ ನೀರಡಿಕೆಯಿಂದಲೂ ಬಹಳ ಪೀಡಿತನಾಗಿ ದಿಕ್ಕು ತೋಚದೆ ಗಿಡಗಳ ನೆರಳೂ ಕೂಡ ಇಲ್ಲದ ಒಂದು ಬಯಲು ಪ್ರದೇಶದಲ್ಲಿ ಮೂರ್ಛೆಯನ್ನು ಹೊಂದಿ ಬಿದ್ದಿದ್ದನು.

೫೬. ರಾಜವಂಶಕಳಂಕನಾದ ಆ ಹೇಮಕಾಂತನು ಆಕಸ್ಮಿಕನಾಗಿ ಆ ಪ್ರದೇಶದಲ್ಲಿ ಓಡಾಡುತ್ತ ತ್ರಿತನೆಂಬ ಮಹಾಮುನಿಯು ನೀರಡಿಕೆಯಿಂದಲೂ ಬಳಲಿಕೆಯಿಂದಲೂ ಮೂರ್ಛಾಕ್ರಾಂತನಾಗಿ ಬಿದ್ದಿರುವುದನ್ನು ಕಂಡು ದಯೆಯಿಂದ ಕೂಡಿದವನಾದನು.

೫೭. ಪಲಾಶವೃಕ್ಷದ ಎಲೆಗಳಿಂದ ಒಂದು ಛತ್ರಿಯನ್ನು ಜೋಡಿಸಿ ಬಿಸಿಲಿನ ವೇಗವು ಆತನಿಗೆ ತಾಗದಂತೆ ತಲೆಯ ಮೇಲ್ಗಡೆಯಲ್ಲಿ ಹಿಡಿದುಕೊಂಡು ಆ ಹೇಮಕಾಂತನು ತನ್ನ ಸೋರೆಯಕಾಯಿಯ ಕಮಂಡಲಿನಿಂದ ಆತನಿಗೆ ನೀರನ್ನು ಕುಡಿಸಿದನು.

೫೮. ಆತನ ಆದರೋಪಚಾರಗಳಿಂದ ಸ್ವಲ್ಪಕಾಲದಲ್ಲಿಯೇ ಆ ಮುನಿ ವರ್ಯನು ಮತ್ತೆ ಪ್ರಜ್ಞೆಯನ್ನು ಹೊಂದಿದನು. ಕ್ಷತ್ರಿಯ ಬಂಧುವಾದ

ಗ್ರಾಮಂ ಕ್ವಚಿಚ್ಛನೈಃ ಪ್ರಾಪ್ಯ ಕಿಂಚಿದಾಪ್ಯಾಯಿತೇಂದ್ರಿಯಃ ।
ತೇನ ಪುಣ್ಯಪ್ರಭಾವೇನ ಬ್ರಹ್ಮಹತ್ಯಾಶತತ್ರಯಂ ॥ ೫೯ ॥
ನಿವಿಷ್ಟಮಭವತ್ತಸ್ಯ ಕ್ಷಣಾದೇವ ಮಹಾತ್ಮನಃ ।
ತತೋ ವಿಸ್ಮಯಮಾಪನ್ನೋ ಹೇಮಕಾಂತೋ ಮಹಾರಥಃ ॥ ೬೦ ॥
ಬಹುಧಾ ಪೀಡ್ಯಮಾನಸ್ಯ ಬ್ರಹ್ಮಹತ್ಯಾಃ ಕಥಂ ಗತಾಃ ।
ಕೇನಾಪಿ ನಿಷ್ಕೃತಾ ಹ್ಯೇತಾಃ ಕ್ವಗತಾ ಕೇನ ಹೇತುನಾ ॥ ೬೧ ॥
ಇತ್ಯೇವಂ ಚಿಂತಯಾಮಾಸ ಬ್ರಹ್ಮಹತ್ಯಾವಿಮೋಚನಂ ।
ಏವಂಚಾಜ್ಞಸ್ಥಿತೇ ರಾಜ್ಞಿ ಯಮದೂತಾ ಅಥಾಗಮನ್ ॥ ೬೨ ॥
ನೇತುಮೇನಂ ಮಹಾತ್ಮಾನಂ ಹೇಮಕಾಂತಂ ವನೇ ಸ್ಥಿತಂ ।
ಗ್ರಹಣೀಂ ಜನಯಾಮಾಸುಃ ಪ್ರಾಣಾನ್ ಹರ್ತುಂ ಮಹಾತ್ಮನಃ ॥ ೬೩ ॥

ಹೇಮಾಂಗನು ಒದಗಿಸಿಕೊಟ್ಟ ಎಲೆಗಳ ಛತ್ರಿಯನ್ನು ಸ್ವೀಕರಿಸಿ ಆತನು ತನ್ನ ಶ್ರಮವನ್ನು ಪರಿಹಾರ ಮಾಡಿಕೊಂಡು ಚೇತರಿಸಿಕೊಂಡನು.

೫೯. ಸ್ವಲ್ಪವಾಗಿ ಇಂದ್ರಿಯಗಳ ಪಟುತ್ವವನ್ನು ಹೊಂದಿದ ಮೇಲೆ ಅವನು ಮೆಲ್ಲಮೆಲ್ಲಗೆ ತನ್ನ ಗ್ರಾಮವನ್ನು ಕೆಲವು ದಿನಗಳಲ್ಲಿಯೇ ಸೇರುವವನಾದನು. ಮಹಾತ್ಮನಾದ ಆ ತ್ರಿತ ಮಹಾಮುನಿಗೆ ನೈರಾಶ್ಯಮಾಸದಲ್ಲಿ ಛತ್ರದಾನವನ್ನು ಮಾಡಿದುದರಿಂದ ಪುಣ್ಯವಂತನಾದ ಹೇಮಕಾಂತನಿಗೆ ಆ ಕ್ಷಣದಲ್ಲಿಯೇ ಮುನ್ನೂರು ಬ್ರಾಹ್ಮಣರನ್ನು ವಧೆಮಾಡಿದ ಬ್ರಹ್ಮಹತ್ಯಾಪಾತಕವು ನಷ್ಟವಾಯಿತು.

೬೦. ಇದರಿಂದ ಆಶ್ಚರ್ಯಚಕಿತನಾದ ಮಹಾರಥಿಕನಾದ ಆ ಹೇಮಕಾಂತನು ಯೋಚಿಸತೊಡಗಿದನು. "ಬಹು ವಿಧಗಳಾದ ಪೀಡೆಯನ್ನನುಭವಿಸುತ್ತಿದ್ದ ನನ್ನ ಬ್ರಹ್ಮಹತ್ಯೆಗಳೆಲ್ಲವೂ ಹೇಗೆ ನನ್ನನ್ನು ಬಿಟ್ಟು ಹೊರಟುಹೋದುವು?

೬೧. ಯಾವನಾದರೂ ಮಹಾತ್ಮನಿಂದ ಇವುಗಳು ನಾಶಗೊಳಿಸಲ್ಪಟ್ಟುವೊ? ಇವುಗಳೆಲ್ಲಿಗೆ ಹೋದುವು? ಇವುಗಳು ಬಿಟ್ಟು ಹೋಗಲು ಕಾರಣವೇನು?" ಇಂತು ಮೊದಲಾಗಿ ಬ್ರಹ್ಮಹತ್ಯೆಯಿಂದ ತಾನು ನಿವಾರಣೆಯನ್ನು ಹೊಂದಿದ ವಿಷಯವನ್ನೇ ಕುರಿತು ಯೋಚಿಸುತ್ತಿದ್ದನು.

೬೨. ಈ ರೀತಿಯಾಗಿ ಪಾಪವಿಮೋಚನದ ಮರ್ಮವನ್ನು ತಿಳಿಯದೆಯೇ ರಾಜನು ಕಾಲವನ್ನು ಕಳೆಯುತ್ತಿರಲು ಆತನ ದೇಹಾವಸಾನ ಸಮಯವೊದಗಿತು. ಅರಣ್ಯವಾಸಿಯಾಗಿ ಮಹಾತ್ಮನಾದ ಹೇಮಕಾಂತನನ್ನು ಸೆಳೆದುಕೊಂಡು ಹೋಗಲು ಯಮದೂತರು ಅಲ್ಲಿಗೆ ಬಂದರು.

೬೩–೬೪. ಆ ಮಹಾಪುರುಷನ ಪ್ರಾಣಗಳನ್ನು ಆಕರ್ಷಿಸುವುದಕ್ಕಾಗಿ ಆತನ ಶರೀರದಲ್ಲಿ ಗ್ರಹಣೀರೋಗವನ್ನುಂಟುಮಾಡಿದರು. ಆಗ ಪ್ರಾಣಗಳ

ತದಾ ಪ್ರಾಣವಿಯೋಗಾರ್ತಃ ಪುರುಷಾಂಸ್ತ್ರೀಂಶ್ಚ ದದರ್ಶಹ ।
ಯಮದೂತಾನ್ ಮಹಾಘೋರಾನೂರ್ಧ್ವಕೇಶಾನ್ ಭಯಂಕರಾನ್ ॥
ಚಿಂತಯಾನಃ ಸ್ವಕರ್ಮಾಣಿ ತುಷ್ಣೀಮಾಸೀತ್ತದಾ ನೃಪಃ ।
ಛತ್ರದಾನಪ್ರಭಾವೇನ ಜಾತಾ ವಿಷ್ಣುಸ್ಮೃತಿರ್ನೃಪ ॥ ೬೫ ॥
ತೇನ ಸ್ಮೃತೋ ಮಹಾವಿಷ್ಣುರ್ವಿಷ್ವಕ್ಸೇನಂ ಸ್ವಮಂತ್ರಿಣಂ ।
ಉವಾಚ ತೂರ್ಣಂ ತ್ವಂ ಗಚ್ಛ ಯಮದೂತಾನ್ನಿವಾರಯ ॥ ೬೬ ॥
ವೈಶಾಖಧರ್ಮನಿರತಂ ಹೇಮಕಾಂತಂ ತು ಪಾಲಯ ।
ನಿಷ್ಪಾಪಮೇನಂ ಮದ್ಭಕ್ತಂ ಪಿತ್ರೇ ದೇಹಿ ಪುರಂ ಗತಃ ॥ ೬೭ ॥
ಮದೀರಿತೇನ ವಾಕ್ಯೇನ ಕುಶಕೇತುಂ ಚ ಬೋಧಯ ।
ಸರ್ವಧರ್ಮೋಜ್ಝಿತೋ ವಾಪಿ ಬ್ರಹ್ಮಚರ್ಯಾದಿವರ್ಜಿತಃ ।
ವೈಶಾಖಧರ್ಮನಿರತೋ ಮತ್ಪ್ರಿಯಃ ಸ್ಯಾನ್ನಸಂಶಯಃ ॥ ೬೮ ॥

ವಿಯೋಗದ ವ್ಯಥೆಯಿಂದ ಕೂಡಿದವನಾಗಿ ಮಹಾ ಭಯಂಕರರೂ, ಕೆದರಿದ ಕೂದಲುಗಳುಳ್ಳವರೂ ಘೋರರೂಪರೂ ಆದ ಪುರುಷರನ್ನೂ ಸ್ತ್ರೀಯರನ್ನೂ ಆ ಮಹಾರಾಜನು ಕಂಡನು.

೬೫–೬೬. ತನ್ನ ಮುನ್ನಿನ ಅನಾಚಾರಗಳನ್ನೆಲ್ಲ ಸ್ಮರಿಸಿಕೊಳ್ಳುತ್ತ ಆ ಹೇಮಕಾಂತನು ಏನನ್ನೂ ಹೇಳಲಾರದೆ ಮೌನದಿಂದಿದ್ದನು. ಆದರೆ ವೈಶಾಖಮಾಸದಲ್ಲಿ ತ್ರಿತ ಬ್ರಾಹ್ಮಣನಿಗೆ ಛತ್ರದಾನವನ್ನು ಮಾಡಿದ ಪುಣ್ಯದ ಪ್ರಭಾವದಿಂದ ಅವಸಾನಕಾಲದಲ್ಲಿ ಆತನಿಗೆ ಮಹಾವಿಷ್ಣುವಿನ ಸ್ಮರಣೆ ಯುಂಟಾಯಿತು. ಆತನಿಂದ ಆ ಸತ್ಕಾಲದಲ್ಲಿ ಸ್ಮರಿಸಲ್ಪಟ್ಟ ಮಹಾವಿಷ್ಣುವು ತನ್ನ ಮಂತ್ರಿಸತ್ತಮನಾದ ವಿಷ್ವಕ್ಸೇನನನ್ನು ಕುರಿತು ಇಂತು ಬೆಸಸಿದನು. "ನೀನು ಈ ಕ್ಷಣವೇ ಇಲ್ಲಿಂದ ಹೊರಟು ಹೇಮಕಾಂತನನ್ನು ಸೆಳೆಯಲು ಕಾತುರರಾಗಿರುವ ಯಮದೂತರನ್ನು ನಿವಾರಿಸು.

೬೭. ವೈಶಾಖಮಾಸದ ಧರ್ಮದಲ್ಲಿ ಒಮ್ಮೆಯಾದರೂ ನಿರತನಾಗಿದ್ದ ಆತನನ್ನು ನೀನು ಸಂರಕ್ಷಿಸಬೇಕು. ಮತ್ತು ರಾಜಧಾನಿಗೆ ಹೋಗಿ ಪಾಪ ರಹಿತನಾದ ಈ ನನ್ನ ಭಕ್ತೋತ್ತಮನನ್ನು ಅವನ ತಂದೆಗೆ ಒಪ್ಪಿಸು.

೬೮. ನನ್ನ ಸಂದೇಶರೂಪಗಳಾದ ಈ ವಾಕ್ಯಗಳಿಂದ ಕುಶಕೇತುವನ್ನು ಜ್ಞಾನಸಂಪನ್ನನಾಗಿ ಮಾಡು. ಯಾವ ಮಾನವನೇ ಆಗಲಿ ಸಕಲ ಧರ್ಮಗಳನ್ನೂ ಕೈಬಿಟ್ಟವನಾದರೂ, ಬ್ರಹ್ಮಚರ್ಯಾದಿ ಆಶ್ರಮ ಚತುಷ್ಟಯದ ನಿಯಮಗಳನ್ನು ಪಾಲಿಸದವನಾದರೂ ಒಮ್ಮೆಯಾದರೂ ವೈಶಾಖಮಾಸದ ಧರ್ಮಗಳನ್ನು ಪಾಲಿಸಿದ್ದಲ್ಲಿ ನನಗೆ ಅತ್ಯಂತ ಪ್ರಿಯನೇ ಸರಿ. ಈ ವಿಷಯದಲ್ಲಿ ಸಂದೇಹವಿಲ್ಲ.

ಕೃತಾಗಾಶ್ಚಾಽಪಿ ತ್ವತ್ಪುತ್ರೋ ಮುನಿತ್ರಾಣಪರಾಯಣಃ
ವೈಶಾಖೇ ಛತ್ರದಾನೇನ ನಿಷ್ಪಾಪೋ ನಾತ್ರಸಂಶಯಃ ॥ ೧೯ ॥
ತೇನ ಪುಣ್ಯಪ್ರಭಾವೇನ ಶಾಂತೋ ದಾಂತಶ್ಚಿರಾಯುಷಃ ॥ ೨೦ ॥
ಶೌರ್ಯೌದಾರ್ಯಗುಣೋಪೇತಸ್ತ್ವತ್ಸಮೋಽಯಂ ಗುಣೈರಪಿ ।
ತಸ್ಮಾದೇನಂ ರಾಜ್ಯಭಾರೇ ಸಂಸ್ಥಾಪಯ ಮಹಾಬಲಂ ॥ ೨೧ ॥
ವಿಷ್ಣುನೈವಂ ಸಮಾಜ್ಞಪ್ತಮಿತ್ಯಾದಿಶ್ಯ ನೃಪೋತ್ತಮಂ ।
ಪಿತುರ್ವಶೇ ಹೇಮಕಾಂತಂ ಸ್ಥಾಪ್ಯಾಽಽಯಾಹಿ ಚ ಮಾಂ ಪುನಃ ॥ ೨೨ ॥
ಇತ್ಯಾದಿಷ್ಟೋ ಭಗವತಾ ವಿಷ್ವಕ್ಸೇನೋ ಮಹಾಬಲಃ ।
ಹೇಮಕಾಂತಂ ಸಮಾಸಾದ್ಯ ಯಮದೂತಾನ್ನಿವಾರ್ಯ ಚ ॥ ೨೩ ॥
ಪಾಣಿನಾ ಶಂತಮೇನೈವ ಪಸ್ಪರ್ಶಾಂಗೇಷು ಭೂಮಿಪಂ ।
ಭಗವದ್ಭಕ್ತಸಂಸ್ಪರ್ಶಾದ್ಧತವ್ಯಾಧಿಃ ಕ್ಷಣಾದಭೂತ್ ॥ ೨೪ ॥

೧೯. ಈ ನಿನ್ನ ಮಗನು ಅನೇಕ ಅಪರಾಧಗಳನ್ನು ಮಾಡಿದ್ದರೂ ಒಮ್ಮೆ ಮಹಾಮುನಿಯಾದ ತ್ರಿತನನ್ನು ಸಂರಕ್ಷಿಸುವುದರಲ್ಲಿ ನಿರತನಾಗಿದ್ದನು. ವೈಶಾಖಮಾಸದಲ್ಲಿ ಆತನಿಗೆ ಛತ್ರದ ದಾನವನ್ನು ಮಾಡಿದನಾದುದರಿಂದ ಇವನು ಸಕಲ ಪಾಪಗಳನ್ನೂ ಕಳೆದುಕೊಂಡಿರುವನು, ಸಂದೇಹವಿಲ್ಲ.

೨೦–೨೧. ಆ ಪುಣ್ಯದ ಪ್ರಭಾವದಿಂದಲೇ ಈಗ ಈತನು ಬಾಹ್ಯೇಂದ್ರಿಯ ಮತ್ತು ಅಂತರಿಂದ್ರಿಯಗಳನ್ನು ನಿಗ್ರಹಿಸಲು ಶಕ್ತನಾಗಿ ದೀರ್ಘಾಯುಸ್ಸನ್ನೂ ಸಹ ಪಡೆದಿರುವನು. ಶೌರ್ಯ, ಔದಾರ್ಯ ಮುಂತಾದ ಅನೇಕ ಸದ್ಗುಣಗಳಿಂದ ಕೂಡಿದವನಾಗಿ ನಿನಗೆ ಸಮಾನನೆನಿಸಿರುವನು. ಆದುದರಿಂದ ಮಹಾ ಪರಾಕ್ರಮ ಶಾಲಿಯಾದ ಈತನನ್ನು ರಾಜ್ಯಭಾರದಲ್ಲಿ ಸ್ಥಿರಗೊಳಿಸುವವನಾಗು.

೨೨. ಶ್ರೀ ಮಹಾವಿಷ್ಣುವೇ ಇಂತು ಆಜ್ಞೆಯನ್ನು ಮಾಡಿರುವನು. ಇಂತೆಂದು ರಾಜಶ್ರೇಷ್ಠನಾದ ಕುಶಕೇತುವಿಗೆ ನೀನು ನನ್ನ ಸಂದೇಶವನ್ನು ತಿಳಿಸಿ ಹೇಮಕಾಂತನನ್ನು ತಂದೆಯ ವಶಕ್ಕೆ ಒಪ್ಪಿಸಿಕೊಟ್ಟು ಮತ್ತೆ ನನ್ನನ್ನು ಬಂದು ಸೇರು.”

೨೩–೨೪. ಇಂತೆಂದ ಭಗವಂತನ ಆದೇಶವನ್ನು ಪಡೆದು ಮಹಾ ಬಲಶಾಲಿಯಾದ ವಿಷ್ವಕ್ಸೇನನು ನಿಮಿಷಮಾತ್ರದಲ್ಲಿ ಹೇಮಕಾಂತನಿದ್ದಲ್ಲಿಗೆ ಬಂದು ಯಮದೂತರನ್ನು ಜರಿದು ನಿವಾರಿಸಿ ಸುಖಕರವಾದ ತನ್ನ ಹಸ್ತತಳದಿಂದ ರಾಜನ ಶರೀರವೆಲ್ಲವನ್ನೂ ತಡವಿದನು. ಪರಮ ಭಾಗವತನಾದ ಆ ವಿಷ್ವಕ್ಸೇನನ ಸಂಸ್ಪರ್ಶಮಾತ್ರದಿಂದಲೇ ಹೇಮಕಾಂತನು ನಿಮಿಷಮಾತ್ರದಲ್ಲಿಯೇ ನೀರೋಗ ದೃಢಕಾಯನಾದನು.

ವಿಷ್ವಕ್ಸೇನಸ್ತತಸ್ತೇನ ಸಹ ತಸ್ಯ ಪುರೀಂ ಯಯೌ ॥ ೭೫ ॥
ತಂ ದೃಷ್ಟ್ವಾ ವಿಸ್ಮಿತೋ ಭೂತ್ವಾ ಕುಶಕೇತುರ್ಮಹಾಪ್ರಭುಃ
ನನಾಮ ಶಿರಸಾ ಭಕ್ತ್ಯಾ ದಂಡವತ್ಪತಿತೋ ಭುವಿ ॥ ೭೬ ॥
ಗೃಹಂ ಪ್ರವೇಶಯಾಮಾಸ ಪಾರ್ಷದಂ ಪರಮಾತ್ಮನಃ
ಸ್ತುತ್ವಾ ಚ ವಿವಿಧೈಃ ಸ್ತೋತ್ರೈಃ ಪೂಜಯಾಮಾಸ ವೈಭವೈಃ ॥ ೭೭ ॥
ತಸ್ಮೈ ಪ್ರೀತಮನಾಃ ಪ್ರಾಹ ವಿಷ್ವಕ್ಸೇನೋ ಮಹಾಬಲಃ
ಹೇಮಕಾಂತಂ ಸಮುದ್ದಿಶ್ಯ ಯದುಕ್ತಂ ವಿಷ್ಣುನಾ ಪುರಾ ॥ ೭೮ ॥
ತಚ್ಛ್ರುತ್ವಾ ಕುಶಕೇತುಶ್ಚ ಪುತ್ರಂ ರಾಜ್ಯೇ ನಿವೇಶ್ಯ ಚ
ವಿಷ್ವಕ್ಸೇನಾಭ್ಯನುಜ್ಞಾತಃ ಸಭಾರ್ಯೋ ವನಮಾವಿಶತ್ ॥ ೭೯ ॥
ವಿಷ್ವಕ್ಸೇನೋ ಹೇಮಕಾಂತಮನುಮಂತ್ರ್ಯಾಭಿಪೂಜ್ಯ ಚ
ಶ್ವೇತದ್ವೀಪಂ ಯಯೌ ಧೀಮಾನ್ ವಿಷ್ಣುಪಾರ್ಶ್ವೇ ಮಹಾಮನಾಃ ॥ ೮೦ ॥

೭೫. ಬಳಿಕ ವಿಷ್ವಕ್ಸೇನನು ಆತನೊಡನೆ ರಾಜಧಾನಿಯನ್ನು ಕುರಿತು ಪ್ರಯಾಣಮಾಡಿದವನಾದನು.

೭೬. ಆತನನ್ನು ಕಂಡು ಮಹಾರಾಜನಾದ ಕುಶಕೇತುವು ವಿಸ್ಮಯಗೊಂಡವನಾಗಿ ಭಕ್ತಿಯಿಂದ ತಲೆಬಾಗಿ ನಮಸ್ಕರಿಸಿದನು; ಭೂಮಿಯಲ್ಲಿ ಬಿದ್ದು ದಂಡವತ್ಪ್ರಣಾಮವನ್ನೂ ಮಾಡಿದನು.

೭೭. ಬಳಿಕ ಪರಮಾತ್ಮನ ಪಾರ್ಷದಶ್ರೇಷ್ಠನಾದ ವಿಷ್ವಕ್ಸೇನನನ್ನು ಮನೆಯೊಳಕ್ಕೆ ಕರೆದುಕೊಂಡು ಹೋಗಿ ಬಹು ವಿಧಗಳಾದ ಸ್ತೋತ್ರಗಳಿಂದ ಆತನನ್ನು ಸ್ತುತಿಸಿ ತನ್ನ ವೈಭವಕ್ಕನುಸಾರವಾದ ದ್ರವ್ಯಸಂಗ್ರಹದಿಂದ ಆತನಿಗೆ ಅತಿಥಿಪೂಜೆಯನ್ನು ನೆರವೇರಿಸಿದನು.

೭೮. ಈ ಸತ್ಕಾರದಿಂದ ಸಂತೋಷಗೊಂಡು ಮಹಾ ಪರಾಕ್ರಮಿಯಾದ ವಿಷ್ವಕ್ಸೇನನು ಆತನಿಗೆ ಹೇಮಕಾಂತನ ವಿಷಯವಾಗಿ ಮಹಾ ವಿಷ್ಣುವು ಅಪ್ಪಣೆ ಮಾಡಿದ ಸಂದೇಶವನ್ನು ತಿಳಿಸಿದನು.

೭೯. ಅದನ್ನು ಕೇಳಿ ಅಂಗೀಕರಿಸಿ ಕುಶಕೇತುಮಹಾರಾಜನು ಮಗನಾದ ಹೇಮಕಾಂತನನ್ನು ಸಿಂಹಾಸನದಲ್ಲಿ ಕುಳ್ಳಿರಿಸಿ ಪಟ್ಟಾಭಿಷೇಕವನ್ನು ಮಾಡಿ ವಿಷ್ವಕ್ಸೇನನ ಅನುಜ್ಞೆಯನ್ನು ಪಡೆದು ಪತ್ನೀಸಮೇತನಾಗಿ ವಾನಪ್ರಸ್ಥಾಶ್ರಮವನ್ನು ಸ್ವೀಕರಿಸಿ ಹೊರಟುಹೋದನು.

೮೦. ಮಹಾಪ್ರಾಜ್ಞನೂ, ಮಹಾ ಮನಸ್ಸುಳ್ಳವನೂ ಆದ ವಿಷ್ವಕ್ಸೇನನು ಬಳಿಕ ಹೇಮಕಾಂತನನ್ನು ಅನುಮಂತ್ರಿಸಿ ಉಚಿತ ಪೂಜೆಯನ್ನೆಸಗಿ ಶ್ವೇತದ್ವೀಪವನ್ನು ಸೇರಿ ಮಹಾವಿಷ್ಣುವಿನ ಪಾರ್ಶ್ವದಲ್ಲಿ ಎಂದಿನಂತೆಯೇ ಇರುತ್ತಿದ್ದನು.

ಹೇಮಕಾಂತಸ್ತತೋ ರಾಜಾ ವೈಶಾಖೋಕ್ತಾಂಚ್ಛುಭಾವಹಾನ್ ।
ವಿಷ್ಣುಪ್ರೀತಿಕರಾನ್ ಧರ್ಮಾನ್ ಪ್ರತಿವರ್ಷಂ ಚಕಾರ ಹ ॥ ೮೧ ॥
ಬ್ರಹ್ಮಣ್ಯೋ ಧರ್ಮಮಾರ್ಗಸ್ಥಃ ಶಾಂತೋ ದಾಂತೋ ಜಿತೇಂದ್ರಿಯಃ ॥
ದಯಾಲುಃ ಸರ್ವಭೂತೇಷು ಸರ್ವಯಜ್ಞೇಷು ದೀಕ್ಷಿತಃ ॥ ೮೨ ॥
ಪ್ರವೃದ್ಧಃ ಸರ್ವಸಂಪದ್ಭಿಃ ಪುತ್ರಪೌತ್ರಾದಿಭಿರ್ವೃತಃ ।
ಭುಕ್ತ್ವಾ ಭೋಗಾನ್ ಸಮಸ್ತಾಂಶ್ಚ ವಿಷ್ಣುಲೋಕಮವಾಪ್ತವಾನ್ ॥

ನೇಕ್ಷೇ ತು ವೈಶಾಖಸಮಾಂಶ್ಚ ಧರ್ಮಾನ್
ಸುಖಪ್ರಯತ್ನಾನ್ ಬಹುಪುಣ್ಯಹೇತೂನ್ ।
ಪಾಪೇಂಧನಾದ್ಯಗ್ನಿನಿಭಾನ್ ಸುಲಭ್ಯಾನ್
ಧರ್ಮಾದಿಮೋಕ್ಷಾಂತಪುಮರ್ಥಹೇತೂನ್ ॥ ೮೪ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ದ್ವಿತೀಯೇ ವೈಷ್ಣವಖಂಡೇ ವೈಶಾಖಮಾಸಮಾಹಾತ್ಮ್ಯೇ ನಾರದಾಂಬರೀಷಸಂವಾದೇ "ಛತ್ರದಾನಪ್ರಶಂಸನೇ ಹೇಮಕಾಂತಸ್ಯ ಬ್ರಹ್ಮಹತ್ಯಾದಿ ಪಾಪಶಮನವರ್ಣನಂ" ನಾಮ ದಶಮೋಽಧ್ಯಾಯಃ

---

೮೧. ಬಳಿಕ ಮಹಾರಾಜನಾದ ಹೇಮಕಾಂತನು ಪುಣ್ಯಫಲದಾಯಕಗಳೂ ವಿಷ್ಣುಪ್ರೀತಿಕರಗಳೂ ಆದ ವೈಶಾಖಮಾಸದ ಧರ್ಮಗಳನ್ನೆಲ್ಲ ಪ್ರತಿವರ್ಷದಲ್ಲಿಯೂ ಸಮಗ್ರವಾಗಿ ಆಚರಿಸುತ್ತಿದ್ದನು.

೮೨. ಆತನು ಬ್ರಾಹ್ಮಣಪಕ್ಷಪಾತಿಯೂ, ಧರ್ಮಮಾರ್ಗೈಕತತ್ಪರನೂ ಕರ್ಮೇಂದ್ರಿಯಗಳನ್ನೂ, ಜ್ಞಾನೇಂದ್ರಿಯಗಳನ್ನೂ ಜಯಿಸಿದವನೂ, ವಿಷಯಾಪೇಕ್ಷೆಯಿಲ್ಲದವನೂ, ಸಕಲ ಪ್ರಾಣಿಗಳಲ್ಲಿಯೂ ದಯೆಯುಳ್ಳವನೂ, ಅನೇಕ ಯಜ್ಞಗಳನ್ನು ಮಾಡಿದ ದೀಕ್ಷಿತನೂ ಆಗಿ ರಾಜ್ಯಭಾರವನ್ನು ಮಾಡುತ್ತಿದ್ದನು.

೮೩. ಸಕಲೈಶ್ವರ್ಯಗಳನ್ನೂ ಸಂಪಾದಿಸಿ ಪ್ರವರ್ಧಮಾನನಾಗಿದ್ದನು. ಮತ್ತು ಮಕ್ಕಳು, ಮೊಮ್ಮಕ್ಕಳುಗಳೇ ಮೊದಲಾದ ಅನೇಕ ಬಂಧುಬಳಗಗಳಿಂದ ಸಂತೋಷಗೊಂಡಿದ್ದನು. ಈ ರೀತಿಯಾಗಿ ಹೇಮಕಾಂತಮಹಾರಾಜನು ಈ ಲೋಕದಲ್ಲಿ ಅನೇಕ ಭೋಗಗಳನ್ನನುಭವಿಸಿ ಅಂತ್ಯದಲ್ಲಿ ವಿಷ್ಣುಲೋಕವಾದ ವೈಕುಂಠದಲ್ಲಿ ನೆಲಸಿದನು.

೮೪. ಎಲೈ ಶ್ರುತಕೀರ್ತಿಮಹಾರಾಜನೆ! ಐಹಿಕಾಮುಷ್ಮಿಕ ಸೌಖ್ಯಗಳನ್ನು ಸಂಪಾದಿಸಿಕೊಡುವುದರಲ್ಲಿಯೂ, ಅನಂತವಾದ ಪುಣ್ಯರಾಶಿಗೆ ಕಾರಣವೆನಿಸಿರುವುದರಲ್ಲಿಯೂ, ಪಾಪಗಳೆಂಬ ಕಾಷ್ಠಗಳಿಗೆ ಅಗ್ನಿಯಂತಿರುವುದರಲ್ಲಿಯೂ, ಸುಲಭಸಾಧ್ಯವಾಗಿರುವುದರಲ್ಲಿಯೂ, ಧರ್ಮಾರ್ಥಕಾಮಮೋಕ್ಷಗಳೆಂಬ ಚತುರ್ವಿಧ ಪುರುಷಾರ್ಥಗಳಿಗೆ ಸಾಧನವೆನಿಸಿರುವುದರಲ್ಲಿಯೂ ವೈಶಾಖಮಾಸದ ವ್ರತಕ್ಕೆ ಸಮಾನವಾದ ಮತ್ತೊಂದು ಸಾಧನೆಯನ್ನು ನಾನು ಎಲ್ಲಿಯೂ ಕಾಣಲಿಲ್ಲವು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀ ಸ್ಕಾಂದಮಹಾಪುರಾಣದ ಎರಡನೆಯ ವೈಷ್ಣವಖಂಡದ ವೈಶಾಖಮಾಸಮಾಹಾತ್ಮ್ಯದ ನಾರದಾಂಬರೀಷಸಂವಾದದಲ್ಲಿ "ಹೇಮಕಾಂತನಿಗೆ ಬ್ರಹ್ಮಹತ್ಯಾದಿ ಪಾಪಗಳು

॥ ಶ್ರೀಃ ॥

## ಅಷ್ಟಾದಶೋಽಧ್ಯಾಯಃ

### ಕೀರ್ತಿಮದ್ವಿಜಯವರ್ಣನಂ

**ಮೈಥಿಲ ಉವಾಚ:—**

**ವೈಶಾಖಧರ್ಮಾಃ ಸುಲಭಾಃ ಪುಣ್ಯರಾಶಿವಿಧಾಯಕಾಃ ।**
**ವಿಷ್ಣುಪ್ರೀತಿಕರಾಃ ಸದ್ಯಃ ಪುರುಷಾರ್ಥಾನಾಂ ತು ಹೇತವಃ ॥ ೧ ॥**
**ನ ಪ್ರಖ್ಯಾತಾಃ ಕಥಂ ಲೋಕೇ ಶಾಶ್ವತಾಃ ಶ್ರುತಿಚೋದಿತಾಃ ।**
**ಪ್ರಖ್ಯಾತಾ ರಾಜಸಾ ಧರ್ಮಾಸ್ತಾಮಸಾ ಅಪಿ ಭೂರಿಶಃ ॥ ೨ ॥**
**ದುರ್ಘಟಾ ಬಹುಯತ್ನಾಶ್ಚ ಬಹುದ್ರವ್ಯವ್ಯಯಾವಹಾಃ ।**
**ಕೇಚಿನ್ಮಾಘಂ ಪ್ರಶಂಸಂತಿ ಚಾತುರ್ಮಾಸ್ಯಾನ್ ಪರೇ ಜಗುಃ ॥ ೩ ॥**
**ವ್ಯತೀಪಾತಾದಿಧರ್ಮಾಂಶ್ಚ ವರ್ಣಯಂತೀಹ ಭೂರಿಶಃ ।**
**ಏತದ್ವಿವೇಕಂ ವಿಸ್ತಾರ್ಯ ಶ್ರೋತುಕಾಮಾಯ ಮೇ ವದ ॥ ೪ ॥**

### ಕನ್ನಡದ ಅನುವಾದ

#### ಕೀರ್ತಿಮದ್ವಿಜಯವರ್ಣನ

೧. ಶ್ರುತಕೀರ್ತಿಯು ಹೇಳುತ್ತಾನೆ:—"ವೈಶಾಖಮಾಸದ ಧರ್ಮಗಳು ಅನುಸರಿಸಲು ಸುಲಭಸಾಧ್ಯಗಳಾಗಿರುವುವು. ಪುಣ್ಯರಾಶಿಯನ್ನು ಸಂಪಾದಿಸಿ ಕೊಡುವುವು. ಕ್ಷಿಪ್ರದಲ್ಲಿಯೇ ಮಹಾವಿಷ್ಣುವಿಗೆ ಸಂತೋಷವನ್ನುಂಟುಮಾಡಿ ಸಕಲ ಪುರುಷಾರ್ಥಗಳ ಸಾಧನೆಗಳಿಗೂ ಕಾರಣಗಳಾಗಿರುವುವು.

೨. ಸನಾತನಗಳೂ, ವೇದಪ್ರತಿಪಾದ್ಯಗಳೂ ಆದ ಈ ಧರ್ಮಗಳು ಪ್ರಪಂಚದಲ್ಲಿ ಪ್ರಖ್ಯಾತಿಯನ್ನು ಪಡೆಯದಿರಲು ಕಾರಣವೇನು? ರಾಜಸ ಮತ್ತು ತಾಮಸಗಳಾದ ಅನೇಕ ವಿಧಗಳಾದ ಧರ್ಮಗಳು ನೆಲೆಗೊಂಡಿರುವುವು.

೩. ಅವುಗಳೆಲ್ಲವೂ ದುರ್ಘಟಗಳೂ, ಬಹು ಪ್ರಯತ್ನಸಾಧ್ಯಗಳೂ, ಬಹು ದ್ರವ್ಯ ವಿನಿಮಯದಿಂದ ಕೂಡಿದವುಗಳೂ ಆಗಿರುವುವು. ಕೆಲವರು ಮಾಘಮಾಸ ವ್ರತವನ್ನು ಪ್ರಶಂಸೆ ಮಾಡುವರು. ಇತರರು ಚಾತುರ್ಮಾಸ್ಯ ವ್ರತಕ್ಕೆ ಸಮಾನವಾದ ನಿಯಮವಿಲ್ಲವೆಂದು ಹೇಳುವರು.

೪. ಅನೇಕರು ವ್ಯತೀಪಾತಾದಿ ಪರ್ವಕಾಲಗಳಲ್ಲಿ ಮಾಡಬೇಕಾದ ನಿಯಮಗಳನ್ನು ಬಹು ವಿಧಗಳಾಗಿ ವರ್ಣಿಸುವರು. ಈ ಹಲವು ವ್ರತಗಳ ಯುಕ್ತಾಯುಕ್ತತೆಗಳನ್ನು ವಿಸ್ತಾರವಾಗಿ ಕೇಳಲು ಕುತೂಹಲವುಳ್ಳ ನನಗೆ ತಿಳಿಯಹೇಳಬೇಕೆಂದು ಬೇಡುವೆನು."

ಶ್ರುತದೇವ ಉವಾಚ:—

ಶೃಣು ಭೂಪ ಪ್ರವಕ್ಷ್ಯಾಮಿ ನ ಪ್ರಖ್ಯಾತಾ ಇಮೇ ಕಥಂ ।
ಇತರೇಷಾಂ ಚ ಧರ್ಮಾಣಾಂ ಕಥಂ ಖ್ಯಾತಿಶ್ಚ ಭೂತಲೇ ॥ ೫ ॥
ರಾಜಸಾಸ್ತಾಮಸಾ ಭೂಮೌ ಬಹವಃ ಕಾಮುಕಾ ಜನಾಃ ।
ಇಚ್ಛಂತ್ಯೈಹಿಕಭೋಗಾಂಸ್ತೇ ಪುತ್ರಪೌತ್ರಾದಿಸಂಪದಃ ॥ ೬ ॥
ಕ್ವಚಿತ್ಕಥಂ ಚ ನ ಕ್ವಾಪಿ ಜನೇಷ್ವೇಕೋಽತಿಕೃಚ್ಛ್ರತಃ ।
ಸ್ವರ್ಗಾಯ ಯತತೇ ಲೋಕೇ ತಸ್ಮಾದ್ಯಜ್ಞಾದಿಸತ್ಕ್ರಿಯಾಃ ॥ ೭ ॥
ಕುರುತೇಽತಿಪ್ರಯತ್ನೇನ ಮೋಕ್ಷಂ ನೋಪಾಸತೇ ನರಃ ।
ಕ್ಷುದ್ರಾಶಾ ಭೂರಿಕರ್ಮಾಣೋ ಜನಾಃ ಕಾಮ್ಯಾನುಪಾಸತೇ ॥ ೮ ॥
ಪ್ರಖ್ಯಾತಾ ರಾಜಸಾ ಧರ್ಮಾಸ್ತಾಮಸಾ ಅಪಿ ತೇನ ವೈ ।
ನ ಖ್ಯಾತಾಃ ಸಾತ್ವಿಕಾ ಧರ್ಮಾ ಹರಿಪ್ರೀತಿಕರಾ ಇಮೇ ॥ ೯ ॥

೫. ಶ್ರುತದೇವನು ಹೇಳುತ್ತಾನೆ:—ಎಲೈ ಮಹಾರಾಜನೆ! ಈ ವೈಶಾಖ ಧರ್ಮಗಳು ಭೂಲೋಕದಲ್ಲಿ ಪ್ರಖ್ಯಾತಗಳಾಗದಿರುವುದಕ್ಕೂ, ಇತರ ಧರ್ಮಗಳು ವಿಸ್ತಾರವಾಗಿ ಪ್ರಸಿದ್ಧಿಗಳನ್ನು ಹೊಂದುವುದಕ್ಕೂ ಕಾರಣಗಳನ್ನು ಹೇಳುವೆನು. ಏಕಾಗ್ರಮನಸ್ಕನಾಗಿ ಲಾಲಿಸು.

೬. ಭೂಮಂಡಲದಲ್ಲಿ ಜನರೆಲ್ಲರೂ ಸಾಧಾರಣವಾಗಿ ರಾಜಸ ತಾಮಸ ಗುಣಗಳಿಂದಲೇ ಆವೃತರಾಗಿರುವುದರಿಂದ ಕೇವಲ ಕಾಮ್ಯ ಕರ್ಮಗಳಲ್ಲಿಯೇ ಪ್ರವೃತ್ತಿಯುಳ್ಳವರಾಗಿರುವರು. ಅವರೆಲ್ಲರೂ ಇಹಲೋಕದ ಭೋಗಗಳನ್ನೂ ಪುತ್ರಪೌತ್ರಾದಿ ಐಶ್ವರ್ಯಗಳನ್ನೂ ಮಾತ್ರ ಅಪೇಕ್ಷಿಸುವರು.

೭–೮. ಆಕಸ್ಮಿಕವಾಗಿ ಒಂದೊಂದೆಡೆಯಲ್ಲಿ ಬಹು ಮಂದಿಗಳಲ್ಲಿ ಯಾವನೊ ಒಬ್ಬನು ಬಹಳ ಅಪರೂಪವಾಗಿ ಸ್ವರ್ಗಲೋಕವನ್ನು ಸೇರಲು ಪ್ರಯತ್ನ ಮಾಡುವನು. ಆದುದರಿಂದಲೇ ಲೋಕದಲ್ಲಿ ಯಜ್ಞಯಾಗಾದಿ ವೈದಿಕ ಸತ್ಕರ್ಮಗಳು ನಡೆಯುತ್ತಿರುವುವು. ಇವು ಬಹು ಪ್ರಯತ್ನಸಾಧ್ಯಗಳಾಗಿರುವುವು. ಮೋಕ್ಷವನ್ನು ಮಾತ್ರ ಪ್ರಾಯಶಃ ಯಾವ ಮನುಷ್ಯನೂ ಉಪಾಸನೆ ಮಾಡುವುದಿಲ್ಲ. ಜನರೆಲ್ಲರೂ ನೀಚಾಭಿಲಾಷೆಯುಳ್ಳವರಾಗಿ ಮಹತ್ತರಗಳಾದ ಪ್ರಯತ್ನಗಳಿಂದ ಕಾಮ್ಯಕರ್ಮಗಳನ್ನೇ ಸೇವಿಸುವರು.

೯. ಆದುದರಿಂದಲೇ ರಾಜಸಧರ್ಮಗಳೂ, ತಾಮಸೋಪಾಸನೆಗಳೂ ಭೂಮಂಡಲದಲ್ಲಿ ಪ್ರಖ್ಯಾತಗಳಾಗಿರುವುವು. ಶ್ರೀಮನ್ನಾರಾಯಣನಿಗೆ ಪ್ರೀತಿಯನ್ನುಂಟುಮಾಡುವ ವೈಶಾಖವ್ರತವೇ ಮುಂತಾದ ಸಾತ್ವಿಕಧರ್ಮಗಳು ಬಹಳವಾಗಿ ಪ್ರಚಾರಕ್ಕೆ ಬರುವುದಿಲ್ಲ.

ನಿಷ್ಕಾಮಿಕಾ ಇಮೇ ಧರ್ಮಾ ಹ್ಯೈಹಿಕಾಮುಷ್ಮಿಕಪ್ರದಾಃ ।
ನ ಜಾನಂತಿ ಜನಾ ಮೂಢಾ ಮೋಹಿತಾ ದೇವಮಾಯಯಾ ॥ ೧೦ ॥
ಯಥಾಽಧಿಪತ್ಯೇ ಸಂಪ್ರಾಪ್ತೇ ಸರ್ವಸ್ಸಿದ್ಧ್ಯೇ ಮನೋರಥಃ ।
ಮೋಹನಾರ್ಥಂ ಸ್ಥಲಂ ಪ್ರಾಪ್ತಮಾಧಿಪತ್ಯೇನ ಹೀಯತೇ ॥ ೧೧ ॥
ಕಾರಣಂ ಚ ಪ್ರವಕ್ಷ್ಯಾಮಿ ಗೋಪನೇ ಭೂತಲೇಽಂಜಸಾ ।
ಯದ್ವೈಶಾಖೋಕ್ತಧರ್ಮಾಣಾಂ ಸಾತ್ವಿಕಾನಾಂ ನೃಣಾಮಿಹ ॥ ೧೨ ॥
ಸಾರ್ವಭೌಮಃ ಪುರಾ ಕಾಶ್ಯಾಮಿಕ್ಷ್ವಾಕುಕುಲಭೂಷಣಃ ।
ಕೀರ್ತಿಮಾನಿತಿ ವಿಖ್ಯಾತೋ ನೃಗಪುತ್ರೋ ಮಹಾರಥಃ ॥ ೧೩ ॥
ಜಿತೇಂದ್ರಿಯೋ ಜಿತಕ್ರೋಧೋ ಬ್ರಹ್ಮಣ್ಯೋ ರಾಜಸತ್ತಮಃ ।
ಏಕದಾ ಮೃಗಯಾಸಕ್ತೋ ವಸಿಷ್ಠಾಶ್ರಮಮಾಯಯೌ ॥ ೧೪ ॥

೧೦. ಈ ಧರ್ಮಗಳೆಲ್ಲವೂ ನಿಷ್ಕಾಮಬುದ್ಧಿಯಿಂದ ಮಾಡಲ್ಪಡಬೇಕಾದುವು. ಇಹಪರಲೋಕಗಳೆರಡರಲ್ಲಿಯೂ ಸೌಖ್ಯಗಳನ್ನು ಕೊಡುವುವು. ಆದರೂ ಲೋಕೇಶ್ವರನ ಮಾಯಾಪಾಶಕ್ಕೆ ಸಿಲುಕಿದ ಮೂಢಜನರು ಈ ರಹಸ್ಯವನ್ನು ಸರಿಯಾಗಿ ತಿಳಿಯಲಾರರು.

೧೧. ಮನುಷ್ಯನಿಗೆ ರಾಜ್ಯಾಧಿಪತ್ಯವು ದೊರಕಲು ಇತರ ಕ್ಷುಪ್ರ ಮನೋರಥಗಳು ಅಧಿಕಾರಬಲದಿಂದಲೇ ಹೇಗೆ ಪ್ರಾಪ್ತಗಳಾಗುವುವೋ, ಹಾಗೆಯೇ ವೈಶಾಖಮಾಸಧರ್ಮವನ್ನು ಆಚರಿಸಲು ಅನ್ಯವ್ರತಗಳಿಂದ ಹೇಳಿರುವ ಫಲಗಳು ಅನಾಯಾಸವಾಗಿಯೇ ಲಭಿಸುವುವು. ಮಿಕ್ಕ ಧರ್ಮಗಳೆಲ್ಲವೂ ಜನರನ್ನು ಮೋಹಗೊಳಿಸುವುದಕ್ಕಾಗಿಯೇ ಹೇಳಲ್ಪಟ್ಟಿರುವುವು. ಅವುಗಳ ಫಲವಾಗಿ ಲಭಿಸುವ ಪದವಿಯು ಸರ್ವಾಧಿಪತ್ಯರಹಿತವಾಗಿರುವುದು.

೧೨. ಮಹಾರಾಜನೆ! ಸತ್ತ್ವಗುಣಸಂಪನ್ನರಾದ ಮಾನವರಿಗೆ ಮಾತ್ರ ಬುದ್ಧಿಗೆತೋರುವ ಈ ವೈಶಾಖಧರ್ಮಗಳು ಭೂಮಂಡಲದಲ್ಲಿ ಬಹಳವಾಗಿ ಪ್ರಚಾರಕ್ಕೆ ಬರದೆ ಗೋಪ್ಯವಾಗಿರುವುದಕ್ಕೆ ಕಾರಣವನ್ನೂ ನಿನಗೆ ಹೇಳುವೆನು.

೧೩. ಪೂರ್ವದಲ್ಲಿ ಕಾಶೀನಗರದಲ್ಲಿ ಇಕ್ಷ್ವಾಕುಕುಲಸಂಭೂತನೂ ನೃಗ ಮಹಾರಾಜನ ಪುತ್ರನೂ ಆದ ಕೀರ್ತಿಮಂತನೆಂಬ ಮಹಾ ಭಾಗ್ಯಶಾಲಿಯು ಪ್ರಖ್ಯಾತಿಯನ್ನು ಪಡೆದು ಭೂಮಂಡಲವನ್ನೆಲ್ಲ ಏಕಚ್ಛತ್ರದಿಂದ ಆಳುತ್ತಿದ್ದನು.

೧೪. ಆತನು ಜಿತೇಂದ್ರಿಯನೂ, ಕ್ರೋಧಾದಿ ಅರಿಷಡ್ವರ್ಗಗಳನ್ನು ಜಯಿಸಿದವನೂ, ಬ್ರಾಹ್ಮಣಪ್ರಿಯನೂ, ರಾಜಶ್ರೇಷ್ಠನೂ ಆಗಿದ್ದನು. ಒಮ್ಮೆ ಆತನು ಕಾಡಿನಲ್ಲಿ ಬೇಟೆಯಾಡುತ್ತ ಕ್ರಮವಾಗಿ ವಸಿಷ್ಠಮಹರ್ಷಿಯ ಆಶ್ರಮವಿದ್ದೆಡೆಗೆ ಬಂದನು.

ಗಚ್ಛನ್ ಮಾರ್ಗೇ ದದರ್ಶಾಸೌ ವೈಶಾಖೇ ಘರ್ಮನಿಷ್ಠುರೇ ।
ಭೂಯೋ ಭೂಯಃ ಕಾರ್ಯಮಾಣಾಂಚ್ಛಿಷ್ಯಾಂಸ್ತಸ್ಯ ಮಹಾತ್ಮನಃ ॥
ಕ್ವಚಿತ್ ಪ್ರಪಾಂ ಪ್ರಕುರ್ವಂತಿ ಚ್ಛಾಯಾಮಂಡಪಮೇವ ಚ ।
ತಟಿಪ್ರಪಾತಂ ವಿಸ್ತೀರ್ಯ ವಾಪೀಂ ಕುರ್ವಂತಿ ನಿರ್ಮಲಾಂ ॥ ೧೬ ॥
ಸೂಪವಿಷ್ಟಾನ್ ಕ್ವಚಿತ್ ವೃಕ್ಷೇ ವ್ಯಜನೈರ್ವೀಜಯಂತಿ ಚ ।
ಕ್ವಚಿದ್ದದ್ಯುರ್ಹೀಕ್ಷುದಂಡಾನ್ ಕ್ವಚಿದ್ಗಂಧಾನ್ ಕ್ವಚಿತ್ಫಲಂ ॥ ೧೭ ॥
ಮಧ್ಯಾಹ್ನೇ ಛತ್ರದಾನಂ ಚ ಸಾಯಾಹ್ನೇ ಪಾನಕಸ್ಯ ಚ ।
ಕ್ವಚಿತ್ ಯಚ್ಛಂತಿ ತಾಂಬೂಲಂ ನೇತ್ರೇ ಕರ್ಪೂರಲೇಪನಂ ॥ ೧೮ ॥
ಸುಚ್ಛಾಯೇ ಚ ವನೇ ಕೇಚಿತ್ ಸುಸಂಮೃಷ್ಟಾಂಗಣೇಷು ಚ ।
ಕೇಚಿದಾಸ್ತರಯಂತ್ಯದ್ಧಾ ವಾಲುಕಾನಿ ಹಿತಾನಿ ಚ ॥ ೧೯ ॥
ಕುರ್ವಂತ್ಯಾಂದೋಲಿಕಾಂ ರಾಜನ್ ವೃಕ್ಷಶಾಖಾವಲಂಬಿನೀಂ ।
ಕೇ ಯೂಯಮಿತಿ ಪಪ್ರಚ್ಛ ವಾಸಿಷ್ಠಾ ಇತಿತೇಽಬ್ರುವನ್ ॥ ೨೦ ॥

---

೧೫. ಇಂತು ನಡೆದುಬರುತ್ತ ಆ ಮಹಾರಾಜನು ದಾರಿಯಲ್ಲಿ ಆ ಮಹಾತ್ಮನ ಅನೇಕ ಶಿಷ್ಯರು ಬಿಸಿಲಿನ ಝಳದಿಂದ ಕ್ರೂರವಾದ ವೈಶಾಖಮಾಸದಲ್ಲಿ ಅತಿಥಿ ಅಭ್ಯಾಗತರ ಸಪರ್ಯೆಗಳಿಗೆ ಅನುಕೂಲಗಳಾಗುವ ಅನೇಕ ಕೆಲಸಗಳಲ್ಲಿ ತೊಡಗಿದ್ದುದನ್ನು ಬಹು ದೂರದವರೆಗೂ ನೋಡಿಕೊಂಡು ಬಂದನು.

೧೬. ಕೆಲವರು ಹಲವೆಡೆಗಳಲ್ಲಿ ಅರವಟ್ಟಿಗೆಯ ಚಪ್ಪರಗಳನ್ನು ಹಾಕುತ್ತಲಿದ್ದರು. ಕೆಲವರು ನೆರಳಿಗಾಗಿ ಚಪ್ಪರಗಳನ್ನು ಮಾಡುತ್ತಿದ್ದರು. ಮತ್ತೆ ಕೆಲವರು ಬಾವಿಗಳ ತಳಗಳನ್ನು ವಿಸ್ತಾರಗೊಳಿಸಿ ಕಶ್ಮಲರಹಿತಗಳನ್ನಾಗಿ ಮಾಡಿ ನಿರ್ಮಲವಾದ ಜಲವು ಸಿಕ್ಕುವ ಪ್ರಯತ್ನಗಳನ್ನು ಮಾಡುವುದರಲ್ಲಿದ್ದರು.

೧೭. ಕೆಲವರು ಬಿಸಿಲಿನಿಂದ ಬಳಲಿ ಮರಗಳ ನೆರಳುಗಳಲ್ಲಿ ಸುಖಾಸೀನರಾಗಿದ್ದ ಪಾಂಥರಿಗೆ ಬೀಸಣಿಗೆಗಳನ್ನು ಹಾಕುತ್ತಿದ್ದರು. ಕೆಲವರು ಕಬ್ಬಿನ ಜಲ್ಲೆಗಳನ್ನು ಕೇಳಿದವರಿಗೆ ಕೊಡುತ್ತಿದ್ದರು. ಕೆಲವರು ಗಂಧಾನುಲೇಪನಗಳನ್ನೂ ಕೆಲವರು ಫಲಗಳನ್ನೂ ಹಂಚುತ್ತಲಿದ್ದರು.

೧೮. ಮಧ್ಯಾಹ್ನಕಾಲದಲ್ಲಿ ಪ್ರಯಾಣೋನ್ಮುಖರಾದವರಿಗೆ ಕೆಲವರು ಛತ್ರಿಗಳನ್ನು ಕೊಡುತ್ತಿದ್ದರು. ಕೆಲವರು ಸಾಯಂಕಾಲದಲ್ಲಿ ಪಾನಕಗಳನ್ನು ನೀಡುತ್ತಿದ್ದರು. ಮತ್ತೆ ಕೆಲವರು ತಾಂಬೂಲಗಳನ್ನೂ ಕಣ್ಣುಗಳಿಗೆ ಪಚ್ಚಕರ್ಪೂರದ ಲೇಪನಗಳನ್ನೂ ಒದಗಿಸುತ್ತಿದ್ದರು.

೧೯. ಕೆಲವರು ತಂಪಾಗಿ ದಟ್ಟವಾದ ನೆರಳುಳ್ಳ ಮರಗಳ ಕೆಳಗೆಯೂ, ಸಾರಿಸಿ ಗುಡಿಸಿದ ನಿರ್ಮಲಗಳಾದ ಚಾವಡಿಗಳಲ್ಲಿಯೂ ತಣ್ಣಗಿರುವ ಹಿತಕರವಾದ ಮರಳನ್ನು ಚೆಲ್ಲುತ್ತಿದ್ದರು.

೨೦. ಹಲವರು ಮರಗಳ ಶಾಖೆಗಳಿಗೆ ಹಗ್ಗಗಳನ್ನು ಕಟ್ಟಿ ಉಯ್ಯಾಲೆ

ಕಿಮೇತದಿತಿ ಪಪ್ರಚ್ಛ ಧರ್ಮಾ ವೈಶಾಖಚೋದಿತಾಃ ।
ಪುಮರ್ಥಹೇತವ ಇಮೇ ಕ್ರಿಯಂತೇಽಸ್ಮಾಭಿರಂಜಸಾ ॥ ೨೧ ॥
ವಸಿಷ್ಠಸ್ಯಾಽಜ್ಞಯಾ ಚೇತಿ ತೇಽಬ್ರುವನ್ ನೃಪಸತ್ತಮಂ ।
ಏತದಾಚರಣೇ ಪುಂಸಾಂ ಕಿಂ ಫಲಂ ಕಸ್ತು ತುಷ್ಯತಿ ॥ ೨೨ ॥
ಏತದ್ವಿಸ್ತಾರ್ಯ ಮೇ ಬ್ರೂತ ಯೂಯಂ ಸಮ್ಯಗ್ಯಥಾ ಶ್ರುತಂ ।
ಇತಿ ರಾಜ್ಞಾ ತು ಸಂಪೃಷ್ಟಾಃ ಪ್ರತ್ಯೂಚುಸ್ತೇ ಮಹೀಪತಿಂ ॥ ೨೩ ॥
ಗುರೋರಾಜ್ಞಾಕ್ರಮೇಣೈವ ಕುರ್ವತಾಂ ಪಥಿ ಸತ್ಕ್ರಿಯಾಃ ।
ನಾಸ್ಮಾಕಮವಕಾಶೋಽತ್ರ ಗುರುಂ ಪೃಚ್ಛ ಯಥೋಚಿತಂ ॥ ೨೪ ॥
ಸ ವೇತ್ತಿ ತತ್ತ್ವತೋ ನೂನಂ ಧರ್ಮಾನೇತಾನ್ ಮಹಾಯಶಾಃ ।
ಇತಿ ಶಿಷ್ಯೈರ್ವಸಿಷ್ಠಸ್ಯ ಪ್ರತ್ಯುಕ್ತಸ್ತು ದ್ರುತಂ ಯಯೌ ॥ ೨೫ ॥

ಗಳನ್ನು ನಿರ್ಮಿಸುತ್ತಿದ್ದರು. ಎಲೈ ರಾಜನೆ! ಇಂತು ಕಾರ್ಯಾಸಕ್ತರಾಗಿದ್ದ ಶಿಷ್ಯರನ್ನು ಕುರಿತು ಕೀರ್ತಿಮಂತನು "ನೀವು ಯಾರು?" ಎಂದು ಪ್ರಶ್ನೆ ಮಾಡಲು ಅವರು "ನಾವು ವಸಿಷ್ಠಮಹರ್ಷಿಯ ಆಶ್ರಮದಲ್ಲಿ ವಾಸಮಾಡುವ ಶಿಷ್ಯರು" ಎಂದು ಉತ್ತರವನ್ನಿತ್ತರು.

೨೧. "ನೀವು ಮಾಡುತ್ತಿರುವ ಈ ಕೆಲಸವೇನು" ಎಂಬುದಾಗಿ ಆತನು ಕೇಳಿದನು. "ಇವುಗಳೆಲ್ಲವೂ ಶಾಸ್ತ್ರಚೋದಿತಗಳಾಗಿ ವೈಶಾಖಮಾಸದಲ್ಲಿ ಮಾಡಬೇಕಾಗಿರುವ ಧರ್ಮಗಳು. ಧರ್ಮಾದಿ ಪುರುಷಾರ್ಥಗಳನ್ನು ಪಡೆಯುವ ಸಲುವಾಗಿ ಇವುಗಳನ್ನು ನಾವು ಶ್ರದ್ಧೆಯಿಂದ ನಡೆಸಿಕೊಂಡು ಬರುತ್ತಿರುವೆವು.

೨೨. ಇವನ್ನು ವಸಿಷ್ಠಮಹರ್ಷಿಗಳ ಆಜ್ಞಾನುಸಾರವಾಗಿಯೇ ನಾವು ಮಾಡುತ್ತಿರುವೆವು" ಎಂಬುದಾಗಿ ಆ ಶಿಷ್ಯರೆಲ್ಲರೂ ಮಹಾರಾಜನಿಗೆ ಹೇಳಿದರು. "ಈ ನಿಯಮಗಳ ಆಚರಣೆಯಿಂದ ಮನುಷ್ಯರಿಗೆ ಯಾವ ಫಲವು ಲಭಿಸುವುದು? ಯಾವ ದೇವತೆಯು ಇದರಿಂದ ಸಂತೋಷಗೊಳ್ಳುವನು?

೨೩–೨೪. "ಇದೆಲ್ಲವನ್ನೂ ನೀವು ಗುರುಮುಖದಿಂದ ಕೇಳಿರುವಂತೆ ಸ್ಪಷ್ಟವಾಗಿಯೂ ವಿಸ್ತಾರವಾಗಿಯೂ ನನಗೆ ಹೇಳಿರಿ." ಇಂತೆಂದು ಮಹಾರಾಜನಿಂದ ಕೇಳಲ್ಪಟ್ಟ ಆ ಶಿಷ್ಯರು ಪೃಥ್ವೀವಲ್ಲಭನಾದ ಆತನಿಗೆ ಪ್ರತ್ಯುತ್ತರವನ್ನು ಹೇಳಿದರು. "ಗುರುವಿನ ಅಪ್ಪಣೆಯನ್ನು ಅನುಸರಿಸಿಯೇ ಮಾರ್ಗದಲ್ಲಿ ಅತಿಥಿಗಳಿಗೆ ಸತ್ಕಾರಗಳನ್ನು ಮಾಡುತ್ತಿರುವ ನಮಗೆ ನಿನ್ನ ಪ್ರಶ್ನೆಗಳಿಗೆ ಉತ್ತರಗಳನ್ನು ಕೊಡಲು ಅವಕಾಶವೆಲ್ಲಿಯದು? ನಮ್ಮ ಗುರುವಿನಲ್ಲಿಯೇ ಈ ನಿನ್ನ ಪ್ರಶ್ನೆಗಳೆಲ್ಲವನ್ನೂ ಮಾಡುವವನಾಗು.

೨೫. ಮಹಾಯಶೋವಂತನಾದ ಆತನೇ ಈ ಧರ್ಮಗಳೆಲ್ಲವನ್ನೂ ನಿಜವಾಗಿಯೂ ಕೂಲಂಕಷವಾಗಿ ತಿಳಿದಿರುವನು." ಇಂತೆಂದು ವಸಿಷ್ಠನ ಶಿಷ್ಯ

ವಸಿಷ್ಠಸ್ಯಾಽಶ್ರಮಂ ಪುಣ್ಯಂ ವಿದ್ಯಾಯೋಗೋಪಬೃಂಹಿತಂ ।
ಸಮಾಯಾಂತಂ ನೃಪಂ ವೀಕ್ಷ್ಯ ವಸಿಷ್ಠಃ ಪ್ರೀತಮಾನಸಃ ॥ ೨೬ ॥
ಆತಿಥ್ಯಂ ವಿಧಿವಚ್ಚಕ್ರೇ ಸಾನುಗಸ್ಯ ಮಹಾತ್ಮನಃ ।
ಸೂಪವಿಷ್ಟಃ ಕೃತಾಽತಿಥ್ಯಃ ಪ್ರೀತಃ ಪಪ್ರಚ್ಛ ತಂ ಗುರುಂ ॥ ೨೭ ॥

ರಾಜೋವಾಚ :—

ಮಾರ್ಗೇ ದೃಷ್ಟಂ ಮಹಾಶ್ಚರ್ಯಂ ತ್ವಚ್ಛಿಷ್ಯೈಶ್ಚ ಕೃತಂ ಶುಭಂ ।
ಮಯಾ ಪೃಷ್ಟಂ ಚ ತೈರ್ನೋಕ್ತಂ ಕ್ರಿಯಮಾಣಂ ಶುಭಾವಹಂ ॥ ೨೮ ॥
ನಾಸ್ಮಾಕಮವಕಾಶೋಽತ್ರ ಹ್ಯೇತದ್ಧರ್ಮಪ್ರಶಂಸನೇ ।
ಕರ್ತವ್ಯಾ ಚ ಕ್ರಿಯಾಽಸ್ಮಾಭಿಃ ಗುರುಣಾ ಯಾಚ ಚೋದಿತಾ ॥ ೨೯ ॥
ಗುರುಂ ಗಚ್ಛೇತಿ ತೈರುಕ್ತ ಆಗತೋಽಹಂ ತವಾಂತಿಕಂ ।
ಮೃಗಯಾಽಽಸಕ್ತಚಿತ್ತೇನ ಶ್ರಾಂತೇನಾತಿಥ್ಯಮಿಚ್ಛತಾ ॥ ೩೦ ॥

---

ಮಂಡಲಿಯಿಂದ ಪ್ರತ್ಯುತ್ತರವನ್ನು ಪಡೆದವನಾಗಿ ಕೀರ್ತಿಮಂತನು ಶೀಘ್ರವಾಗಿ ಆಶ್ರಮ ಸ್ಥಾನವನ್ನು ಕುರಿತು ನಡೆದುಬರುತ್ತಿದ್ದನು.

೨೬–೨೭. ಆ ಆಶ್ರಮವು ಪರಮಪಾವನವೂ, ವಿದ್ಯಾಭ್ಯಾಸ, ಯೋಗಾಭ್ಯಾಸಗಳ ರೂಪವಾದ ತಪಸ್ಸಿನ ಮಹಿಮೆಯಿಂದ ಕೂಡಿದುದೂ ಆಗಿದ್ದಿತು. ಆ ಪ್ರದೇಶಕ್ಕೆ ಅಧಿಪತಿಯಾದ ಮಹಾರಾಜನು ಬರುತ್ತಿರುವುದನ್ನು ಕಂಡು ವಸಿಷ್ಠಮಹರ್ಷಿಯು ಸಂತೋಷವು ತುಂಬಿದ ಹೃದಯವುಳ್ಳವನಾಗಿ ಮಹಾತ್ಮನಾದ ರಾಜನಿಗೂ ಅತನ ಪರಿವಾರದವರಿಗೂ ವಿಧ್ಯುಕ್ತರೀತಿಯಿಂದ ಯಥೋಚಿತಗಳಾದ ಆತಿಥಿಸತ್ಕಾರಗಳನ್ನು ಮಾಡಿದನು. ಆಗ ರಾಜನು ಸುಖಾಸನದಲ್ಲಿ ಕುಳಿತುಕೊಂಡು ಮಹರ್ಷಿಯು ಮಾಡಿದ ಆತಿಥ್ಯದಿಂದ ಸುಪ್ರೀತನಾಗಿ ಕುಲಗುರುವಾದ ಆತನನ್ನು ಪ್ರಶ್ನೆಮಾಡತೊಡಗಿದನು.

೨೮. ರಾಜನು ಕೇಳುತ್ತಾನೆ:—"ನಾನು ಮಾರ್ಗಮಧ್ಯದಲ್ಲಿ ಆಶ್ಚರ್ಯಕರವಾದ ಪ್ರಸಂಗವೊಂದನ್ನು ಕಂಡೆನು. ನಿನ್ನ ಶಿಷ್ಯರು ಅನೇಕ ಶುಭಕಾರ್ಯಗಳನ್ನು ಮಾಡುತ್ತಿದ್ದರು. ನಾನು ಪ್ರಶ್ನೆಮಾಡಿದರೂ ಅವರು ತಾವು ಮಾಡುತ್ತಿದ್ದ ಧರ್ಮಕಾರ್ಯಗಳ ವಿಷಯವಾಗಿ ಏನನ್ನೂ ಹೇಳಲಪೇಕ್ಷಿಸಲಿಲ್ಲ.

೨೯. 'ಈ ಧರ್ಮಗಳ ಯುಕ್ತಾಯುಕ್ತತೆಗಳ ವಿಚಾರದಲ್ಲಿ ವಿಮರ್ಶೆಯನ್ನು ಮಾಡಲು ನಮಗೆ ಈಗ ಅವಕಾಶವಿಲ್ಲ. ನಮ್ಮ ಗುರುಗಳು ಹೇಗೆ ಅಪ್ಪಣೆಯನ್ನು ಮಾಡಿರುವರೊ, ಆ ವಿಧವಾಗಿಯೇ ನಾವು ನಮ್ಮ ಕೆಲಸಗಳನ್ನು ನೆರವೇರಿಸುವುದೇ ಸದ್ಯಃಕರ್ತವ್ಯವು.

೩೦. ಆದುದರಿಂದ ನೀನು ಗುರುಗಳನ್ನೇ ನೋಡಿ ಪ್ರಶ್ನೆಮಾಡು' ಎಂಬುದಾಗಿ ಅವರಿಂದ ಕಳುಹಿಸಲ್ಪಟ್ಟ ನಾನು ನಿನ್ನ ಸಮೀಪಕ್ಕೆ ಬಂದಿರುವೆನು.

ದೃಷ್ಟಂ ಮಾರ್ಗೇ ತ್ವಿದಂ ಪುಣ್ಯಂ ತವ ಶಿಷ್ಯೈಸ್ತು ಕಾರಿತಂ ।
ಜಿಜ್ಞಾಸಾಽಽಸೀತ್ತತಃ ಶ್ರೋತುಂ ಧರ್ಮಾನೇತಾನ್ ಮುನೀಶ್ವರ ॥ ೩೦ ॥
ತ್ವಮಾದಿರಾದಿಮಾನ್ ಧರ್ಮಾನ್ ಸಮಾಚರಸಿ ನೈ ಯತಃ ।
ತಾನ್ ಧರ್ಮಾಂಚ್ಛ್ರೋತುಕಾಮಾಯ ಶಿಷ್ಯಾಯ ಪ್ರಣತಾಯ ಚ ।
ಶ್ರದ್ದಧಾನಾಯ ಮೇ ಬ್ರೂಹಿ ವಿಸ್ತರಾನ್ ಮುನಿಪುಂಗವ ॥ ೩೩ ॥
ಇತೀಕ್ಷ್ವಾಕುಕುಲೀನೇನ ರಾಜ್ಞಾ ಪೃಷ್ಟೋ ಮಹಾಯಶಾಃ ।
ಮನಸಾ ತೋಷಮಾಪೇದೇ ಸಮ್ಯಕ್ ಪೃಷ್ಟೋಽಧುನಾಽಮುನಾ ॥ ೩೪ ॥
ಅಹೋ ವ್ಯವಸಿತಾ ಬುದ್ಧೀ ರಾಜಂಸ್ತೇಽದ್ಯ ಸುಶಿಕ್ಷಿತಾ ।
ಯಸ್ಮಾದ್ವಿಷ್ಣುಕಥಾಯಾಂ ಚ ತದ್ಧರ್ಮಾಚರಣೇಽಪಿ ಚ ।
ಮತಿರಾತ್ಯಂತಿಕೀ ಜಾತಾ ಸುಕೃತಂ ಫಲಿತಂ ತವ ॥ ೩೫ ॥
ಇತಿ ಸಂಭಾಷ್ಯ ರಾಜಾನಂ ಜಾತಹರ್ಷಸ್ತಮಬ್ರವೀತ್ ॥ ೩೬ ॥

ನಾನು ಜೇಟೆಯಲ್ಲಿಯೇ ನಿರತವಾದ ಮನಸ್ಸುಳ್ಳವನಾಗಿ ಆಯಾಸಗೊಂಡು ಆತಿಥ್ಯವನ್ನಪೇಕ್ಷಿಸಿ ತಿರುಗುತ್ತಿದ್ದೆನು.

೩೦. ಆಗ ನಿನ್ನ ಶಿಷ್ಯರು ಮಾಡುತ್ತಿದ್ದ ಈ ಪುಣ್ಯಕಾರ್ಯವು ಮಾರ್ಗದಲ್ಲಿ ನನ್ನ ಕಣ್ಣುಗಳಿಗೆ ಬಿದ್ದಿತು. ಎಲೈ ಮುನೀಶ್ವರನೆ! ಬಳಿಕ ಈ ಧರ್ಮಗಳೆಲ್ಲವನ್ನೂ ಕೇಳಬೇಕೆಂಬ ಇಚ್ಛೆಯು ನನ್ನಲ್ಲಿ ಉತ್ಪನ್ನವಾಯಿತು.

೩೧–೩೩. ಪ್ರಪಂಚದ ಆದಿಯಿಂದ ನಡೆದುಬಂದಿರುವ ಧರ್ಮಗಳನ್ನೆಲ್ಲ ಸರಿಯಾಗಿ ಅನುಷ್ಠಿಸುತ್ತಿರುವುದರಿಂದ ನೀನೇ ಆದಿಗುರುವಾಗಿರುವೆ. ಈ ಧರ್ಮಗಳೆಲ್ಲವನ್ನೂ ತಿಳಿಯಲಪೇಕ್ಷಿಸುವವನೂ, ನಿನ್ನ ಶಿಷ್ಯನೂ, ಪ್ರಣಾಮವನ್ನು ಮಾಡುತ್ತಿರುವವನೂ, ಶ್ರದ್ಧಾಳುವಾಗಿರುವವನೂ, ಆದ ನನಗೆ ಮುನಿಶ್ರೇಷ್ಠನಾದ ನೀನು ಅವುಗಳನ್ನು ವಿಸ್ತಾರವಾಗಿ ಹೇಳುವವನಾಗು."

೩೪. ಇಂತೆಂದು ಇಕ್ಷ್ವಾಕುಕುಲತಿಲಕನಾದ ಕೀರ್ತಿಮಂತ ಮಹಾರಾಜನಿಂದ ಕೇಳಲ್ಪಟ್ಟ ವಸಿಷ್ಠ ಮಹರ್ಷಿಯು, ಆತನು ಮಾಡಿದ ಸಮೀಚೀನವಾದ ಪ್ರಶ್ನೆಯನ್ನು ಕೇಳಿ ಮನಸ್ಸಿನಲ್ಲಿಯೇ ಆನಂದವನ್ನು ಹೊಂದಿ ಹೇಳತೊಡಗಿದನು.

೩೫. "ವಿಷ್ಣು ಕಥೆಗಳನ್ನು ಕೇಳುವುದರಲ್ಲಿಯೂ ಆತನಿಗೆ ಪ್ರೀತಿಕರಗಳಾದ ವ್ರತಗಳನ್ನು ಆಚರಿಸುವುದರಲ್ಲಿಯೂ ನಿನಗೆ ಅನನ್ಯವಾದ ಶ್ರದ್ಧೆಯುಂಟಾಗಿರುವುದರಿಂದ ನಿನ್ನ ಸುಕೃತವು ಫಲದಾಯಕವಾಯಿತೆಂದು ತಿಳಿಯುವೆನು."

೩೬. ಇಂತೆಂದು ರಾಜನಿಗೆ ಪ್ರತ್ಯುತ್ತರವನ್ನು ಕೊಟ್ಟು ವಸಿಷ್ಠ ಮುನಿವರ್ಯನು ಸಂತೋಷಗೊಂಡು ಆತನಿಗೆ ಹೇಳತೊಡಗಿದನು.

**ಶೃಣು ಭೂಪ ಪ್ರವಕ್ಷ್ಯಾಮಿ ಯತ್ಪೃಷ್ಟೋಽಹಂ ತ್ವಯಾಽಧುನಾ ।**
**ಯಸ್ಯ ಶ್ರವಣಮಾತ್ರೇಣ ಮುಚ್ಯತೇ ಸರ್ವಕಿಲ್ಬಿಷೈಃ ॥ ೩೭ ॥**
**ಸರ್ವಧರ್ಮಾನ್ ಪರಿತ್ಯಜ್ಯ ವರ್ತತೇ ವಿಷಯಾತ್ಮಕಃ ।**
**ವೈಶಾಖಸ್ನಾನನಿರತಃ ಸ ಪ್ರಿಯೋ ಮಧುವಿದ್ವಿಷಃ ॥ ೩೮ ॥**
**ಸಾಂಗಾನ್ ಧರ್ಮಾನನುಷ್ಠಾಯ ವೈಶಾಖೋ ಯೇನ ನಾದೃತಃ ।**
**ಸ್ನಾನದಾನಾರ್ಚನೈಃ ಪುಣ್ಯೈಸ್ತಸ್ಯ ದೂರತರೋ ಹರಿಃ ॥ ೩೯ ॥**
**ಅಸ್ನಾಪ್ಯ ಚಾಽಪ್ಯದತ್ವಾ ಚ ವೈಶಾಖೋ ಯೇನ ನೀಯತೇ ।**
**ಕರ್ಮಣಾ ಸ ತು ಚಂಡಾಲೋ ನಾಽತ್ರ ಕಾರ್ಯಾ ವಿಚಾರಣಾ ॥ ೪೦ ॥**
**ವೈಶಾಖೋಕ್ತೈರ್ಮಹಾಧರ್ಮೈರ್ಯೇನ ಚಾಽಽರಾಧಿತೋ ಹರಿಃ**
**ತೈಶ್ಚ ತೇಷಾಂ ಸಮಾಯಾತಿ ಪ್ರದದಾತಿ ಸಮೀಹಿತಂ ॥ ೪೧ ॥**

೩೭. "ಎಲೈ ಚಕ್ರವರ್ತಿಯೆ! ನೀನು ಈಗ ಕೇಳಿದ ಪ್ರಶ್ನೆಗೆ ನಾನು ಉತ್ತರವನ್ನು ಹೇಳುವೆನು, ಶ್ರದ್ಧಾಳುವಾಗಿ ಕೇಳು. ಅದನ್ನು ಕೇಳುವ ಮಾತ್ರದಿಂದಲೇ ಮನುಷ್ಯನಿಗೆ ಸಮಸ್ತ ಪಾತಕಗಳೂ ನಿರ್ಮೂಲವಾಗುವುವು.

೩೮. ಯಾವ ಮನುಷ್ಯನು ಸಕಲ ಧರ್ಮಗಳ ಆಚರಣೆಯನ್ನೂ ಪರಿತ್ಯಜಿಸಿ ಕೇವಲ ವಿಷಯಭೋಗಗಳನ್ನೇ ಅಪೇಕ್ಷಿಸುತ್ತಿದ್ದರೂ ವೈಶಾಖಮಾಸದಲ್ಲಿ ಬಹಿಸ್ತೀರ್ಥಗಳಲ್ಲಿ ಸ್ನಾನವನ್ನು ಮಾಡುವನೊ ಅವನೇ ಮಧುಸೂದನನಿಗೆ ಪರಮಪ್ರಿಯನಾದ ಭಕ್ತನು.

೩೯. ಸಕಲ ಧರ್ಮಗಳನ್ನೂ ನಿಷ್ಕಲ್ಮಷವಾಗಿಯೂ, ಸಮಗ್ರವಾಗಿಯೂ ಅನುಷ್ಠಾನಮಾಡಿದರೂ ಯಾವ ಮಾನವನು ವೈಶಾಖನಿಯಮಗಳನ್ನು ಪಾಲಿಸುವುದಿಲ್ಲವೊ, ಪ್ರಾತಃಸ್ನಾನ, ದಾನ, ವಿಷ್ಣುಪೂಜಾದಿ ಪುಣ್ಯ ಕಾರ್ಯಗಳನ್ನು ಮಾಡುವುದಿಲ್ಲವೊ ಅವನಿಗೆ ಶ್ರೀ ಹರಿಯು ಬಹಳ ದೂರ ದಲ್ಲಿಯೇ ನಿಲ್ಲುವನು.

೪೦. ಪ್ರಾತಃಕಾಲದ ಸ್ನಾನವನ್ನೂ ಯಥಾಶಕ್ತಿಯಾದ ದಾನವನ್ನೂ ಮಾಡದೆ ಯಾವನು ವೈಶಾಖಮಾಸವನ್ನು ವ್ಯರ್ಥವಾಗಿ ಕಳೆಯುವನೊ, ಆತನು ಕರ್ಮಚಂಡಾಲನೆಂದು ತಿಳಿಯಬೇಕು. ಈ ವಿಷಯದಲ್ಲಿ ಸಂದೇಹಕ್ಕೆ ಡೆಯಿಲ್ಲವು.

೪೧. ವೈಶಾಖಮಾಸನಿಯಮಗಳೆಂಬ ಉತ್ತಮ ಧರ್ಮಗಳನ್ನಾಚರಿಸಿ ಯಾವನು ಶ್ರೀ ಹರಿಯನ್ನು ಆರಾಧಿಸುವನೊ, ಅವನ ಧರ್ಮಾಚರಣೆಗಳಿಂದಲೇ ಸ್ವಾಮಿಯು ಸಂತೋಷವನ್ನು ಹೊಂದುವನು ಮತ್ತು ಅವನ ಅಪೇಕ್ಷೆಗಳನ್ನೆಲ್ಲ ಸಂಪೂರ್ಣಗೊಳಿಸುವನು.

ಲಕ್ಷ್ಮೀಭರ್ತಾ ಜಗನ್ನಾಥೋ ಹೃಷೀಕೇಶೋಽಘನಾಶನಃ ।
ಧರ್ಮೈಃ ಸೂಕ್ಷ್ಮೈಶ್ಚ ಪ್ರೀಣಾತಿ ನ ಪ್ರಯಾಸೈರ್ಧನೈರಪಿ ॥ ೪೨ ॥
ಭಕ್ತ್ಯಾ ಸಂಪೂಜಿತೋ ವಿಷ್ಣುಃ ಪ್ರದದಾತಿ ಸಮೀಹಿತಂ ।
ತಸ್ಮಾದ್ರಾಜನ್ ಸದಾ ಭಕ್ತಿಃ ಕರ್ತವ್ಯಾ ಮಧುವಿದ್ವಿಷಃ ॥ ೪೩ ॥
ಜಲೇನಾಽಪಿ ಜಗನ್ನಾಥಃ ಪೂಜಿತಃ ಕ್ಲೇಶಹಾ ಹರಿಃ ।
ಪರಿತೋಷಂ ವ್ರಜತ್ಯಾಶು ತೃಷಾರ್ತಃ ಸಲಿಲೈರ್ಯಥಾ ॥ ೪೪ ॥
ಮಹದಪ್ಯಲ್ಪದಂ ಕರ್ಮ ತಥಾ ಹ್ಯಲ್ಪಂ ಚ ಭೂರಿದಂ ।
ಕರ್ಮಣೋಽಲ್ಪತ್ವ ಭೂರಿತ್ವೇ ನ ಹೇತೂ ಮಹದಲ್ಪಕೇ ॥ ೪೫ ॥
ಕಿಂ ತು ಕರ್ಮಸ್ವರೂಪಂ ಚ ಗಹನಾ ಕರ್ಮಣೋ ಗತಿಃ ।
ವೈಶಾಖೋಕ್ತಾ ಇಮೇ ಧರ್ಮಾಃ ಸ್ವಲ್ಪಾಽಽಯಾಸಕೃತಾ ಅಪಿ ।
ಬಹುವ್ಯಯವಿನಾಶಾಶ್ಚ ವಿಷ್ಣೋಃ ಪ್ರೀತಿಕರಾಃ ಶುಭಾಃ ॥ ೪೬ ॥

---

೪೨. ಲಕ್ಷ್ಮೀರಮಣನೂ, ಜಗದೀಶ್ವರನೂ, ಸಕಲ ಪಾತಕಗಳನ್ನು ನಿರ್ಮೂಲಗೊಳಿಸುವವನೂ ಆದ ಶ್ರೀಹರಿಯು ಸೂಕ್ಷ್ಮ ಧರ್ಮಗಳ ಆಚರಣೆಯಿಂದ ಸಂತೋಷಗೊಳ್ಳುವನೇ ಹೊರತು ಭಕ್ತಿಯಿಲ್ಲವರ ಕ್ಲೇಶಗಳಿಂದಲೂ ಧನವ್ಯಯದಿಂದಲೂ ತೃಪ್ತಿಪಡಲಾರನು.

೪೩. ಭಕ್ತಿಯುಕ್ತನಾಗಿ ಪೂಜೆಯನ್ನು ನೆರವೇರಿಸಲು ಮಹಾವಿಷ್ಣುವು ಬೇಕಾದ ಅಭೀಪ್ಸಿತಗಳನ್ನೆಲ್ಲ ಕೈಗೂಡಿಸಿಕೊಡುವನು. ಎಲೈ ರಾಜನೆ! ಆದುದರಿಂದ ಸರ್ವ ಕಾಲಗಳಲ್ಲಿಯೂ ಮಧುಸೂದನನಲ್ಲಿಯೇ ಅವ್ಯಾಜವಾದ ಭಕ್ತಿಯನ್ನು ಮಾಡಬೇಕು.

೪೪. ಜಗನ್ನಾಥನೂ, ಭಕ್ತಾರ್ತಿಭಂಜನನೂ ಆದ ಶ್ರೀ ಹರಿಯು ಬಾಯಾರಿದ ಪಾಂಥನು ಕೇವಲಜಲದಿಂದಲೇ ಅಪರಿಮಿತಾನಂದವನ್ನು ಹೊಂದುವಂತೆ ಭಕ್ತನು ಮಾಡುವ ಜಲಸಮರ್ಪಣೆಯ ರೂಪವಾದ ಪೂಜೆಯಿಂದಲೇ ಸಂತೋಷವನ್ನು ಹೊಂದುವನು.

೪೫. ಕಷ್ಟಸಾಧ್ಯವಾದ ಮಹತ್ಕಾರ್ಯವೂ ಸ್ವಲ್ಪವಾದ ಫಲವನ್ನೇ ಕೊಡಬಹುದು. ಹಾಗೆಯೇ ಅತ್ಯಲ್ಪವಾದ ಧರ್ಮಾಚರಣೆಯೂ ಅಪರಿಮಿತ ಫಲವನ್ನು ಕೊಡಬಹುದು. ಕ್ಲೇಶಸೌಲಭ್ಯಾದಿಗಳು ಕರ್ಮಗಳ ಮಹತ್ತ್ವ ಲಘುತ್ವಗಳಿಗೆ ಎಂದಿಗೂ ಕಾರಣಗಳಾಗಲಾರವು.

೪೬. ಆದರೆ ಕರ್ಮಗಳ ಸ್ವರೂಪಗಳೇ ಅವುಗಳಿಗೆ ಹೇತುಗಳು. ಕರ್ಮ ಮಾರ್ಗದ ಗತಿಯನ್ನು ತಿಳಿಯುವುದು ಬಹಳ ಕಠಿನವಾಗಿರುವುದು. ವೈಶಾಖ ಮಾಸದಲ್ಲಿ ಕರ್ತವ್ಯಗಳೆಂದು ಹೇಳಲ್ಪಟ್ಟಿರುವ ಈ ಧರ್ಮಗಳೆಲ್ಲ ಬಹಳ ಅಲ್ಪ ಪ್ರಯಾಸ ಸಾಧ್ಯಗಳಾಗಿದ್ದರೂ, ಹೆಚ್ಚಿನ ಧನವ್ಯಯಕ್ಕೆ ಕಾರಣಗಳಾಗದಿದ್ದರೂ

ತಸ್ಮಾತ್ತ್ವಮಪಿ ಭೂಪಾಲ ವೈಶಾಖೋಕ್ತಾನ್ ಸಮಾಚರ ।
ತ್ವದ್ರಾಷ್ಟ್ರೀಯೈರ್ಜನೈಃ ಸರ್ವೈಃ ಕಾರಯೇಮಾಂಶ್ಚುಭಾವಹಾನ್॥ ೪೭ ॥
ನ ಕರೋತಿ ಚ ಯೋ ಧರ್ಮಾನ್ ವೈಶಾಖೋಕ್ತಾನ್ನರಾಧಮಃ ।
ಬಹುಧಾ ಶಿಷ್ಯಮಾಣೋಽಪಿ ಸ ದಂಡ್ಯಸ್ತವ ಭೂಪತೇ ॥ ೪೮ ॥
ಇತ್ಯಾವಶ್ಯಕತಾಂ ಸಮ್ಯಕ್ ಶಾಸ್ತ್ರೈರ್ಯುಕ್ತ್ಯಾದ್ಯ ತಸ್ಯ ಚ ।
ಪಶ್ಚಾದ್ವೈಶಾಖನಿರ್ದಿಷ್ಟಾನ್ ಧರ್ಮಾನ್ ಪ್ರೋವಾಚ ಸರ್ವಶಃ ॥ ೪೯ ॥
ಶ್ರುತ್ವಾ ತಾನ್ ಸಕಲಾನ್ ಧರ್ಮಾನ್ ಗುರುಂ ಸಂಪೂಜ್ಯ ಭಕ್ತಿತಃ ।
ಸ ರಾಜಾಗೃಹಮಾಗತ್ಯ ಸರ್ವಾನ್ ಧರ್ಮಾಂಶ್ಚಕಾರ ಹ ॥ ೫೦ ॥
ಭಕ್ತಿಮಾನ್ ಕೇಶವೇ ರಾಜನ್ ದೇವದೇವೇ ನಿರಂಜನೇ ।
ನಾಽನ್ಯಂ ಪಶ್ಯತಿ ದೇವೇಶಾತ್ ಪದ್ಮನಾಭಾತ್ ಮಹೀಪತಿಃ ॥ ೫೧ ॥

ಪರಮಮಂಗಳಕರಗಳಾಗಿ ಮಹಾವಿಷ್ಣುವಿಗೆ ಭಕ್ತನಲ್ಲಿ ಅನುರಾಗವನ್ನುಂಟು ಮಾಡುವಂತಹ ಕಾರ್ಯಗಳಾಗಿರುವುವು.

೪೭. ಎಲೈ ಭೂಪಾಲಕನೆ! ಆದುದರಿಂದ ನೀನೂ ಕೂಡ ಈ ವೈಶಾಖ ಧರ್ಮಗಳನ್ನು ಆಚರಣೆಮಾಡುವವನಾಗು. ಮಂಗಳಸಂಪಾದಕಗಳಾದ ಈ ಆಚರಣೆಗಳನ್ನು ನಿನ್ನ ರಾಜ್ಯದಲ್ಲಿರುವ ಸಮಸ್ತಪ್ರಜೆಗಳಿಂದಲೂ ಮಾಡಿಸು.

೪೮. ಯಾವ ಮನುಷ್ಯಾಧಮನು ವೈಶಾಖಮಾಸದ ಧರ್ಮಗಳನ್ನು ಚೆನ್ನಾಗಿ ಅನುಷ್ಠಾನಮಾಡುವುದಿಲ್ಲವೋ, ಅವನು ಎಷ್ಟೇ ಗುರುಶುಶ್ರೂಷಾದಿ ಗಳನ್ನು ಮಾಡಿ ವಿದ್ಯೆಗಳನ್ನು ಕಲಿತಿದ್ದರೂ ನಿನ್ನ ದಂಡನೆಗೆ ಅರ್ಹನಾಗುವನು."

೪೯. ಇಂತು ವಸಿಷ್ಠಮಹರ್ಷಿಯು ಕೀರ್ತಿಮಂತನಿಗೆ ವೈಶಾಖ ಧರ್ಮಗಳ ಆವಶ್ಯಕತೆಯ ವಿಚಾರವನ್ನು ಚೆನ್ನಾಗಿ ಶಾಸ್ತ್ರಪ್ರಮಾಣಗಳಿಂದ ಬೋಧಿಸಿ ಬಳಿಕ ಆ ಮಾಸದಲ್ಲಿ ಕರ್ತವ್ಯಗಳಾದ ಧರ್ಮಗಳನ್ನು ಆಮೂಲಾಗ್ರ ವಾಗಿ ವಿಸ್ತರಿಸಿದನು.

೫೦. ಆ ಮಹಾರಾಜನೂ ಆ ಧರ್ಮಗಳೆಲ್ಲವನ್ನೂ ಏಕಾಗ್ರಚಿತ್ತನಾಗಿ ಕೇಳಿದವನಾಗಿ ಭಕ್ತಿಭಾವದಿಂದ ಕುಲಗುರುವಿಗೆ ಪೂಜೆಯನ್ನು ಮಾಡಿ ಅಪ್ಪಣೆಯನ್ನು ತೆಗೆದುಕೊಂಡು ತನ್ನ ಅರಮನೆಗೆ ಹಿಂದಿರುಗಿ ಸಕಲ ಧರ್ಮಗಳನ್ನೂ ಸಾಂಗವಾಗಿ ಆಚರಿಸುತ್ತಿದ್ದನು.

೫೧. ದೇವದೇವನೂ, ಸಕಲದೋಷವರ್ಜಿತನೂ ಆದ ಕೇಶವನಲ್ಲಿಯೇ ಏಕಾಂತ ಭಕ್ತಿಯನ್ನಿಟ್ಟಿದ್ದನು. ಎಲೈ ಶ್ರುತಕೀರ್ತಿಯೆ! ಆ ಕೀರ್ತಿಮಂತ ಮಹಾರಾಜನು ದೇವೋತ್ತಮನಾದ ಪದ್ಮನಾಭನಿಗಿಂತ ಅನ್ಯದೈವವನ್ನೇ ನೋಡುತ್ತಿರಲಿಲ್ಲ.

ಭೇರೀಮುದ್ಘಾಟ್ಯ ಮಾತಂಗಂ ಸ್ವರಾಷ್ಟ್ರೇಽಘೋಷಯದ್ಭಟೈಃ ।
ಅಷ್ಟವರ್ಷಾಧಿಕೋ ಮರ್ತ್ಯೋ ಹ್ಯಶೀತಿರ್ನ ಹಿ ಪೂರ್ಯತೇ ॥ ೫೨ ॥
ಪ್ರಾತರ್ನ ಸ್ನಾತಿ ಮೇಷಸ್ಥೇ ಸೂರ್ಯೇ ಸರ್ವೋಽಪಿ ಯೋ ಜನಃ ।
ಸ ಮೇ ದಂಡ್ಯಶ್ಚ ವಧ್ಯಶ್ಚ ನಿರ್ಯಾಸ್ಯೋ ವಿಷಯಾದ್ಧ್ರುವಂ ॥ ೫೩ ॥
ಪಿತಾ ವಾ ಯದಿ ವಾ ಪುತ್ರೋ ಭಾರ್ಯಾ ವಾಽಥ ಸುಹೃಜ್ಜನಃ ।
ವೈಶಾಖಧರ್ಮಹೀನಶ್ಚ ನಿಗ್ರಾಹ್ಯೋ ದಸ್ಯುವನ್ಮಯಾ ॥ ೫೪ ॥
ದಾತವ್ಯಂ ವಿಪ್ರಮುಖ್ಯೇಭ್ಯಃ ಸ್ನಾತ್ವಾ ಪ್ರಾತರ್ಜಲೇ ಶುಭೇ ।
ಪ್ರಪಾದಾನಾದಿಧರ್ಮಾಂಶ್ಚ ಕುರುಧ್ವಂ ಶಕ್ತಿತೋಽಖಿಲಾಃ ॥ ೫೫ ॥
ವಿಪ್ರಂ ಚ ಧರ್ಮವಕ್ತಾರಂ ಗ್ರಾಮೇ ಗ್ರಾಮೇ ನ್ಯವೇಶಯತ್ ।
ಪಂಚಾನಾಮಪಿ ಗ್ರಾಮಾಣಾಮಕರೋದಧಿಕಾರಿಣಂ ॥ ೫೬ ॥

೫೨–೫೩. ಒಂದು ಆನೆಯ ಮೇಲೆ ಭೇರಿಯನ್ನು ಕಟ್ಟಿಸಿ ತನ್ನ ರಾಷ್ಟ್ರದ ಆದ್ಯಂತದಲ್ಲೆಲ್ಲ ಭಟರನ್ನು ಕಳಿಸಿ ಡಂಗುರವನ್ನು ಸಾರಿಸಿದನು. "ಎಂಟು ವರ್ಷದ ವಯಸ್ಸು ಮೀರಿದ ಎಂಬತ್ತನೆಯ ವರ್ಷವು ಪೂರ್ತಿಯಾಗದೆ ಇರುವ ರಾಷ್ಟ್ರದ ಪ್ರಜೆಗಳೆಲ್ಲ ಕೇಳಿರಿ. ನಿಮ್ಮಲ್ಲಿ ಯಾವ ವರ್ಣಾಶ್ರಮದ ಯಾವ ಮನುಷ್ಯನೇ ಆಗಲಿ ಸೂರ್ಯನು ಮೇಷರಾಶಿಯಲ್ಲಿ ಸಂಚರಿಸುತ್ತಿರಲು ಪ್ರಾತಃಕಾಲದಲ್ಲಿ ಬಹಿಸ್ತೀರ್ಥಗಳಲ್ಲಿ ಸ್ನಾನವನ್ನು ಮಾಡದಿದ್ದಲ್ಲಿ ಅವನು ನನ್ನ ದಂಡನೆಗೆ ಗುರಿಯಾಗುವನು. ಅಂತಹನು ನನ್ನ ಭಟರಿಂದ ವಧ್ಯನಾಗಬಹುದು. ಅಥವಾ ಬಹಳ ಕಡಿಮೆಯಾದ ಶಿಕ್ಷೆಯೆಂದರೆ ದೇಶದಿಂದ ಹೊರಗೆ ಹಾಕಲ್ಪಡಬಹುದು.

೫೪. ತಂದೆಯೇ ಆಗಲಿ, ಅಥವ ಮಗನೇ ಆಗಲಿ, ಹೆಂಡತಿಯೇ ಆಗಲಿ, ಸ್ನೇಹಿತನೇ ಆಗಲಿ, ಯಾವ ಮನುಷ್ಯನು ವೈಶಾಖಮಾಸದ ನಿಯಮಗಳನ್ನನುಸರಿಸುವುದಿಲ್ಲವೊ, ಅವನು ರಾಕ್ಷಸನೆಂದೆಣಿಸಲ್ಪಡುವನು. ಅವನು ನನ್ನಿಂದ ಎಂದಿಗೂ ಪರಿಗ್ರಹೀತನಾಗಲಾರನು.

೫೫. ಪ್ರಾತಃಕಾಲದಲ್ಲಿ ಪವಿತ್ರವಾದ ನಿರ್ಮಲಜಲದಲ್ಲಿ ಸ್ನಾನವನ್ನು ಮಾಡಿಕೊಂಡು ಬ್ರಾಹ್ಮಣೋತ್ತಮರಿಗೆ ದಾನಗಳನ್ನು ಕೊಡಿರಿ. ಇಂತು ನಿಮ್ಮ ಪಾತಕಗಳೆಲ್ಲವನ್ನೂ ಕಳೆದುಕೊಂಡು ಅರವಟ್ಟಿಗೆಗಳೇ ಮೊದಲಾದ ಧರ್ಮಗಳನ್ನು ನಿಮ್ಮ ಶಕ್ತಿಗಳಿಗನುಸಾರವಾಗಿ ನಡೆಸಿಕೊಂಡು ಬನ್ನಿರಿ."

೫೬. ಇಂತೆಂದು ಕಟ್ಟಪ್ಪಣೆಯನ್ನು ಮಾಡಿ ಪ್ರತಿಯೊಂದು ಗ್ರಾಮದಲ್ಲಿಯೂ ಧರ್ಮಗಳನ್ನು ಬೋಧಿಸುವುದಕ್ಕಾಗಿ ಒಬ್ಬೊಬ್ಬ ಬ್ರಾಹ್ಮಣನನ್ನು ನೇಮಿಸಿದನು. ಐದು ಗ್ರಾಮಗಳ ಸಮೂಹದ ಮೇಲ್ವಿಚಾರಣೆಗಾಗಿ ಬೇರೆ ಅಧಿಕಾರಿಗಳನ್ನು ನೇಮಿಸಿದನು.

ತಸ್ಮಾತ್ತ್ವಮಪಿ ಭೂಪಾಲ ವೈಶಾಖೋಕ್ತಾನ್ ಸಮಾಚರ ।
ತ್ವದ್ರಾಷ್ಟ್ರೀಯೈರ್ಜನೈಃ ಸರ್ವೈಃ ಕಾರಯೇಮಾಂಚ್ಛುಭಾವಹಾನ್॥ ೪೭ ॥
ನ ಕರೋತಿ ಚ ಯೋ ಧರ್ಮಾನ್ ವೈಶಾಖೋಕ್ತಾನ್ನರಾಧಮಃ ।
ಬಹುಧಾ ಶಿಷ್ಯಮಾಣೋಽಪಿ ಸ ದಂಡ್ಯಸ್ತವ ಭೂಪತೇ ॥ ೪೮ ॥
ಇತ್ಯಾವಶ್ಯಕತಾಂ ಸಮ್ಯಕ್ ಶಾಸ್ತ್ರೈರ್ವ್ಯಕ್ತಾಪ್ಯ ತಸ್ಯ ಚ ।
ಪಶ್ಚಾದ್ವೈಶಾಖನಿರ್ದಿಷ್ಟಾನ್ ಧರ್ಮಾನ್ ಪ್ರೋವಾಚ ಸರ್ವಶಃ ॥ ೪೯ ॥
ಶ್ರುತ್ವಾ ತಾನ್ ಸಕಲಾನ್ ಧರ್ಮಾನ್ ಗುರುಂ ಸಂಪೂಜ್ಯ ಭಕ್ತಿತಃ ।
ಸ ರಾಜಾಗೃಹಮಾಗತ್ಯ ಸರ್ವಾನ್ ಧರ್ಮಾಂಶ್ಚಕಾರ ಹ ॥ ೫೦ ॥
ಭಕ್ತಿಮಾನ್ ಕೇಶವೇ ರಾಜನ್ ದೇವದೇವೇ ನಿರಂಜನೇ ।
ನಾಽನ್ಯಂ ಪಶ್ಯತಿ ದೇವೇಶಾತ್ ಪದ್ಮನಾಭಾತ್ ಮಹೀಪತಿಃ ॥ ೫೧ ॥

ಪರಮಮಂಗಳಕರಗಳಾಗಿ ಮಹಾವಿಷ್ಣುವಿಗೆ ಭಕ್ತನಲ್ಲಿ ಅನುರಾಗವನ್ನುಂಟು ಮಾಡುವಂತಹ ಕಾರ್ಯಗಳಾಗಿರುವುವು.

೪೭. ಎಲೈ ಭೂಪಾಲಕನೆ! ಆದುದರಿಂದ ನೀನೂ ಕೂಡ ಈ ವೈಶಾಖ ಧರ್ಮಗಳನ್ನು ಆಚರಣೆಮಾಡುವವನಾಗು. ಮಂಗಳಸಂಪಾದಕಗಳಾದ ಈ ಆಚರಣೆಗಳನ್ನು ನಿನ್ನ ರಾಜ್ಯದಲ್ಲಿರುವ ಸಮಸ್ತಪ್ರಜೆಗಳಿಂದಲೂ ಮಾಡಿಸು.

೪೮. ಯಾವ ಮನುಷ್ಯಾಧಮನು ವೈಶಾಖಮಾಸದ ಧರ್ಮಗಳನ್ನು ಚೆನ್ನಾಗಿ ಅನುಷ್ಠಾನಮಾಡುವುದಿಲ್ಲವೋ, ಅವನು ಎಷ್ಟೇ ಗುರುಶುಶ್ರೂಷಾದಿಗಳನ್ನು ಮಾಡಿ ವಿದ್ಯೆಗಳನ್ನು ಕಲಿತಿದ್ದರೂ ನಿನ್ನ ದಂಡನೆಗೆ ಅರ್ಹನಾಗುವನು."

೪೯. ಇಂತು ವಸಿಷ್ಠಮಹರ್ಷಿಯು ಕೀರ್ತಿಮಂತನಿಗೆ ವೈಶಾಖ ಧರ್ಮಗಳ ಆವಶ್ಯಕತೆಯ ವಿಚಾರವನ್ನು ಚೆನ್ನಾಗಿ ಶಾಸ್ತ್ರಪ್ರಮಾಣಗಳಿಂದ ಬೋಧಿಸಿ ಬಳಿಕ ಆ ಮಾಸದಲ್ಲಿ ಕರ್ತವ್ಯಗಳಾದ ಧರ್ಮಗಳನ್ನು ಆಮೂಲಾಗ್ರವಾಗಿ ವಿಸ್ತರಿಸಿದನು.

೫೦. ಆ ಮಹಾರಾಜನೂ ಆ ಧರ್ಮಗಳೆಲ್ಲವನ್ನೂ ಏಕಾಗ್ರಚಿತ್ತನಾಗಿ ಕೇಳಿದವನಾಗಿ ಭಕ್ತಿಭಾವದಿಂದ ಕುಲಗುರುವಿಗೆ ಪೂಜೆಯನ್ನು ಮಾಡಿ ಅಪ್ಪಣೆಯನ್ನು ತೆಗೆದುಕೊಂಡು ತನ್ನ ಅರಮನೆಗೆ ಹಿಂದಿರುಗಿ ಸಕಲ ಧರ್ಮಗಳನ್ನೂ ಸಾಂಗವಾಗಿ ಆಚರಿಸುತ್ತಿದ್ದನು.

೫೧. ದೇವದೇವನೂ, ಸಕಲದೋಷವರ್ಜಿತನೂ ಆದ ಕೇಶವನಲ್ಲಿಯೇ ಏಕಾಂತ ಭಕ್ತಿಯನ್ನಿಟ್ಟಿದ್ದನು. ಎಲೈ ಶ್ರುತಕೀರ್ತಿಯೆ! ಆ ಕೀರ್ತಿಮಂತ ಮಹಾರಾಜನು ದೇವೋತ್ತಮನಾದ ಪದ್ಮನಾಭನಿಗಿಂತ ಅನ್ಯದೈವವನ್ನೇ ನೋಡುತ್ತಿರಲಿಲ್ಲ.

ಭೇರೀಮುದ್ಘಾಟ್ಯ ಮಾತಂಗಂ ಸ್ವರಾಷ್ಟ್ರೇ ಘೋಷಯದ್ಭಟೈಃ ।
ಅಷ್ಟವರ್ಷಾಧಿಕೋ ಮರ್ತ್ಯೋ ಹ್ಯಶೀತಿರ್ನ ಹಿ ಪೂರ್ಯತೇ ॥ ೫೨ ॥
ಪ್ರಾತರ್ನ ಸ್ನಾತಿ ಮೇಷಸ್ಥೇ ಸೂರ್ಯೇ ಸರ್ವೋಽಪಿ ಯೋ ಜನಃ ।
ಸ ಮೇ ದಂಡ್ಯಶ್ಚ ವಧ್ಯಶ್ಚ ನಿರ್ಯಾಸ್ಯೋ ವಿಷಯಾದ್ಧ್ರುವಂ ॥ ೫೩ ॥
ಪಿತಾ ವಾ ಯದಿ ವಾ ಪುತ್ರೋ ಭಾರ್ಯಾ ವಾಽಥ ಸುಹೃಜ್ಜನಃ ।
ವೈಶಾಖಧರ್ಮಹೀನಶ್ಚ ನಿಗ್ರಾಹ್ಯೋ ದಸ್ಯುವನ್ಮಯಾ ॥ ೫೪ ॥
ದಾತವ್ಯಂ ವಿಪ್ರಮುಖ್ಯೇಭ್ಯಃ ಸ್ನಾತ್ವಾ ಪ್ರಾತರ್ಜಲೇ ಶುಭೇ ।
ಪ್ರಪಾದಾನಾದಿಧರ್ಮಾಂಶ್ಚ ಕುರುಧ್ವಂ ಶಕ್ತಿತೋಽನಘಾಃ ॥ ೫೫ ॥
ವಿಪ್ರಂ ಚ ಧರ್ಮವಕ್ತಾರಂ ಗ್ರಾಮೇ ಗ್ರಾಮೇ ನ್ಯವೇಶಯತ್ ।
ಪಂಚಾನಾಮಪಿ ಗ್ರಾಮಾಣಾಮಕರೋದಧಿಕಾರಿಣಂ ॥ ೫೬ ॥

೫೨–೫೩. ಒಂದು ಆನೆಯ ಮೇಲೆ ಭೇರಿಯನ್ನು ಕಟ್ಟಿಸಿ ತನ್ನ ರಾಷ್ಟ್ರದ ಆದ್ಯಂತದಲ್ಲೆಲ್ಲ ಭಟರನ್ನು ಕಳಿಸಿ ಡಂಗುರವನ್ನು ಸಾರಿಸಿದನು. "ಎಂಟು ವರ್ಷದ ವಯಸ್ಸು ಮುಗಿದು ಎಂಬತ್ತನೆಯ ವರ್ಷವು ಪೂರ್ತಿಯಾಗದೆ ಇರುವ ರಾಷ್ಟ್ರದ ಪ್ರಜೆಗಳೆಲ್ಲ ಕೇಳಿರಿ. ನಿಮ್ಮಲ್ಲಿ ಯಾವ ವರ್ಣಾಶ್ರಮದ ಯಾವ ಮನುಷ್ಯನೇ ಆಗಲಿ ಸೂರ್ಯನು ಮೇಷರಾಶಿಯಲ್ಲಿ ಸಂಚರಿಸುತ್ತಿರಲು ಪ್ರಾತಃಕಾಲದಲ್ಲಿ ಪುಣ್ಯತೀರ್ಥಗಳಲ್ಲಿ ಸ್ನಾನವನ್ನು ಮಾಡದಿದ್ದಲ್ಲಿ ಅವನು ನನ್ನ ದಂಡನೆಗೆ ಗುರಿಯಾಗುವನು. ಅಂತಹನು ನನ್ನ ಭಟರಿಂದ ವಧ್ಯನಾಗಬಹುದು. ಅಥವಾ ಬಹಳ ಕಡಿಮೆಯಾದ ಶಿಕ್ಷೆಯೆಂದರೆ ದೇಶದಿಂದ ಹೊರಗೆ ಹಾಕಲ್ಪಡಬಹುದು.

೫೪. ತಂದೆಯೇ ಆಗಲಿ, ಅಥವ ಮಗನೇ ಆಗಲಿ, ಹೆಂಡತಿಯೇ ಆಗಲಿ, ಸ್ನೇಹಿತನೇ ಆಗಲಿ, ಯಾವ ಮನುಷ್ಯನು ವೈಶಾಖಮಾಸದ ನಿಯಮಗಳನ್ನನುಸರಿಸುವುದಿಲ್ಲವೋ, ಅವನು ರಾಕ್ಷಸನೆಂದೆಣಿಸಲ್ಪಡುವನು. ಅವನು ನನ್ನಿಂದ ಎಂದಿಗೂ ಪರಿಗ್ರಹೀತನಾಗಲಾರನು.

೫೫. ಪ್ರಾತಃಕಾಲದಲ್ಲಿ ಪವಿತ್ರವಾದ ನಿರ್ಮಲಜಲದಲ್ಲಿ ಸ್ನಾನವನ್ನು ಮಾಡಿಕೊಂಡು ಬ್ರಾಹ್ಮಣೋತ್ತಮರಿಗೆ ದಾನಗಳನ್ನು ಕೊಡಿರಿ. ಇಂತು ನಿಮ್ಮ ಪಾತಕಗಳೆಲ್ಲವನ್ನೂ ಕಳೆದುಕೊಂಡು ಅರವಟ್ಟಿಗೆಗಳೇ ಮೊದಲಾದ ಧರ್ಮಗಳನ್ನು ನಿಮ್ಮ ಶಕ್ತಿಗಳಿಗನುಸಾರವಾಗಿ ನಡೆಸಿಕೊಂಡು ಬನ್ನಿರಿ."

೫೬. ಇಂತೆಂದು ಕಟ್ಟಪ್ಪಣೆಯನ್ನು ಮಾಡಿ ಪ್ರತಿಯೊಂದು ಗ್ರಾಮದಲ್ಲಿಯೂ ಧರ್ಮಗಳನ್ನು ಬೋಧಿಸುವುದಕ್ಕಾಗಿ ಒಬ್ಬೊಬ್ಬ ಬ್ರಾಹ್ಮಣನನ್ನು ನೇಮಿಸಿದನು. ಐದು ಗ್ರಾಮಗಳ ಸಮೂಹದ ಮೇಲ್ವಿಚಾರಣೆಗಾಗಿ ಬೇರೆ ಅಧಿಕಾರಿಗಳನ್ನು ನೇಮಿಸಿದನು.

ದಂಡಾರ್ಥಂ ತ್ಯಕ್ತಧರ್ಮಾಣಾಂ ದಶವಾಜಿನಿಷೇವಿತಂ ।
ಏವಂ ಪ್ರವೃತ್ತಃ ಸರ್ವತ್ರ ಸಾರ್ವಭೌಮಸ್ಯ ಶಾಸನಾತ್ ॥ ೫೭ ॥
ಪ್ರವೃದ್ಧೋ ಧರ್ಮರಕ್ಷೋಽಯಂ ಸರ್ವದೇಶೇಷು ವಿಸ್ತರಾತ್ ।
ಯೇ ಕೇಚಿನ್ನಿಧನಂ ಯಾಂತಿ ಭೂಪಾಲವಿಷಯೇ ನರಾಃ ॥ ೫೮ ॥
ಪ್ರಮಾದಾಚ್ಚ ನೃಪಶ್ರೇಷ್ಠ ತೇ ಯಾಂತಿ ಹರಿಮಂದಿರಂ ।
ಅವಶ್ಯಂ ವೈಷ್ಣವೋ ಲೋಕಃ ಪ್ರಾಪ್ಯತೇ ಮಾನವೈರ್ದ್ರುತಂ ॥ ೫೯ ॥
ವ್ಯಾಜೇನಾಽಪಿ ಸಕೃತ್ಸ್ನಾತಃ ಪ್ರಾತರ್ಮೇಷಗತೇ ರವೌ ।
ಸರ್ವಪಾಪವಿನಿರ್ಮುಕ್ತೋ ಯಾತಿ ವಿಷ್ಣೋಃ ಪರಂ ಪದಂ ॥ ೬೦ ॥
ನ ಪ್ರಾಪ್ನೋತಿ ಯಮಂ ಧರ್ಮಂ ಸಕೃತ್ ವೈಶಾಖಸ್ನಾನತಃ ।
ವೈಲೇಖ್ಯಮಗಮದ್ರಾಜಾ ರವಿಸೂನುಸ್ತದಾ ನೃಪ ॥ ೬೦ ॥
ಲೇಖ್ಯಕರ್ಮಣಿ ವಿಶ್ರಾಂತಶ್ಚಿತ್ರಗುಪ್ತೋಽಭವತ್ತದಾ ।
ಮಾರ್ಜಿತಾನಿ ಚ ಲೇಖ್ಯಾನಿ ಪುರಾ ಪಾಪೋದ್ಭವಾನಿ ಚ ॥ ೬೨ ॥

೫೭. ಧರ್ಮಮಾರ್ಗವನ್ನು ಬಿಟ್ಟು ಹೋಗುವವರನ್ನು ತಕ್ಕ ರೀತಿಯಲ್ಲಿ ದಂಡಿಸಲು ಒಬ್ಬೊಬ್ಬ ಅಧಿಕಾರಿಗೂ ಹತ್ತು ಜನ ಕುದುರೆಯಾಳುಗಳ ತಂಡವು ಅಧೀನವಾಗಿದ್ದಿತು. ಈ ವಿಧವಾಗಿ ಆ ಚಕ್ರವರ್ತಿಯ ರಾಜ್ಯದಲ್ಲಿ ಸರ್ವತ್ರವೂ ರಾಜಶಾಸನದಿಂದ ಧರ್ಮವು ನಡೆಯುತ್ತಿದ್ದಿತು.

೫೮-೫೯. ಸಮಸ್ತ ದೇಶಗಳಲ್ಲಿಯೂ ಈ ಧರ್ಮಗಳು ವಿಸ್ತಾರವನ್ನು ಹೊಂದಲಾಗಿ ಧರ್ಮವೆಂಬ ವೃಕ್ಷವು ಬಹಳ ಪ್ರವರ್ಧಮಾನಕ್ಕೆ ಬಂದಿತು. ರಾಜಶ್ರೇಷ್ಠನೆ! ಆ ಮಹಾರಾಜನ ದೇಶದಲ್ಲಿ ಪ್ರಮಾದದಿಂದಲೂ ಸಹ ಮರಣವನ್ನು ಹೊಂದಿದ ಹಲವಾರು ಮನುಷ್ಯರೂ ಕೂಡ ವಿಷ್ಣು ಮಂದಿರವನ್ನು ಸೇರಿದರು. ಆ ದೇಶದ ವಾಸಿಗಳಾದ ಮನುಜರಿಂದ ಕ್ಷಿಪ್ರವಾಗಿಯೇ ವಿಷ್ಣು ಲೋಕವು ಅಪ್ರಯತ್ನವಾಗಿ ಸಂಪಾದಿಸಲ್ಪಡುತ್ತಿದ್ದಿತು.

೬೦-೬೧. ಸೂರ್ಯಭಗವಂತನು ಮೇಷರಾಶಿಸ್ಥನಾಗಲು ಕಾರಣಾಂತರ ಗಳಿಂದಲೂ ಕೂಡ ಪ್ರಾತಃಕಾಲದಲ್ಲಿ ಸ್ನಾನ ಮಾಡಿದ ಮನುಷ್ಯನು ಸಕಲಪಾಪ ಗಳಿಂದಲೂ ಬಿಡುಗಡೆಯನ್ನು ಹೊಂದಿ ಪರಮಪದವಾದ ವಿಷ್ಣುಲೋಕವನ್ನು ಸೇರುವನು. ವೈಶಾಖಮಾಸದ ಪ್ರಾತಃಸ್ನಾನವನ್ನು ಒಮ್ಮೆ ಮಾಡಿದರೂ ಕೂಡ ಯಮಧರ್ಮರಾಜನ ದರ್ಶನವನ್ನು ಮನುಷ್ಯನೆಂದಿಗೂ ಮಾಡುವುದಿಲ್ಲ. ಎಲೈ ರಾಜನೆ! ಇಂತು ಕೀರ್ತಿಮಂತರಾಜನ ಸಕಲ ಪ್ರಜೆಗಳೂ ವೈಶಾಖವ್ರತ ನಿರತರಾಗಲು ಸೂರ್ಯಪುತ್ರನಾದ ಯಮನಿಗೆ ಧರ್ಮಾಧರ್ಮ ವಿಚಾರಣೆಯ ಕೆಲಸವೇ ಇಲ್ಲದಂತಾಯಿತು.

೬೨. ಆ ಕಾಲದಲ್ಲಿ ಜನರ ಪುಣ್ಯಪಾಪಗಳ ಪಟ್ಟಿಯನ್ನು ಬರೆಯುತ್ತಿದ್ದ

ಗಚ್ಛದ್ಭಿರ್ವೈಷ್ಣವಂ ಲೋಕಂ ಸ್ವಕರ್ಮಸ್ಥೈರ್ಜನೈಃ ಕ್ಷಣಾತ್ ।
ಶೂನ್ಯಾಸ್ತು ನರಕಾಃ ಸರ್ವೇ ಪಾಪಿಪ್ರಾಣಿವಿವರ್ಜಿತಾಃ ॥ ೬೩ ॥
ಭಗ್ನಂಯಾನೋಽಭವನ್ಮಾರ್ಗೋ ವೈಶಾಖಸ್ಯ ಪ್ರಭಾವತಃ ।
ಸರ್ವೇಽಪಿ ವಿಮಲಾಕಾರಾ ಜನಾ ಯಾಂತಿ ಹರೇಃ ಪದಂ ॥ ೬೪ ॥
ದಿವೌಕಸಾಂ ತು ಯೇ ಲೋಕಾಃ ಶೂನ್ಯಾಃ ಸರ್ವೇ ತಥಾಭವನ್ ।
ಶೂನ್ಯೇ ತ್ರಿಪಿಷ್ಟಪೇ ಜಾತೇ ಶೂನ್ಯೇಷು ನರಕೇಷು ಚ ॥ ೬೫ ॥
ನಾರದೋ ಧರ್ಮರಾಜಾನಂ ಗತ್ವಾ ಚೇದಮುವಾಚ ಹ ।
ನಾಕ್ರಂದಃ ಶ್ರೂಯತೇ ರಾಜನ್ ಪ್ರಾಕ್ಪೃತೋ ನರಕೇ ಯಥಾ ॥ ೬೬ ॥
ತಥಾ ನ ಕ್ರಿಯತೇ ಲೇಖ್ಯಂ ಕಿಂಚಿದ್ದುಷ್ಕೃತಕರ್ಮಣಾಂ ।
ಚಿತ್ರಗುಪ್ತೋ ಮುನಿರಿವ ಸ್ಥಿತೋಽಯಂ ಮೌನಸಂಸ್ಥಿತಃ ॥ ೬೭ ॥

ಚಿತ್ರಗುಪ್ತನಿಗೆ ಬರವಣಿಗೆಯ ಕೆಲಸವಿಲ್ಲದೆ ವಿಶ್ರಾಂತಿಯನ್ನು ಹೊಂದಿದನು. ಆ ದೇಶದ ನಿವಾಸಿಗಳು ಹಿಂದೆ ಮಾಡಿದ್ದ ಪಾಪಗಳ ಫಲವಾಗಿ ಆತನ ಪುಸ್ತಕದಲ್ಲಿ ಬರೆದಿದ್ದ ಲೇಖನಗಳೂ ಸಹ ಆ ವ್ರತದ ಪ್ರಭಾವದಿಂದ ತೊಡೆದು ಹಾಕಲ್ಪಟ್ಟುವು.

೬೩. ಜನರೆಲ್ಲರೂ ತಮ್ಮ ತಮ್ಮ ಕರ್ಮಗಳಲ್ಲಿ ನಿರತರಾಗಿ ಭಗವತ್ಪ್ರೀತಿಯನ್ನು ಪಡೆದು ನಿಮಿಷಮಾತ್ರದಲ್ಲಿ ವಿಷ್ಣುಲೋಕವನ್ನು ಸೇರಲು ಪಾಪಿಗಳಾದ ಪ್ರಾಣಿಗಳೇ ಇಲ್ಲದಂತಾಗಿ ಅಧೋಲೋಕದ ನರಕಗಳೆಲ್ಲವೂ ಜನಶೂನ್ಯಗಳಾದುವು.

೬೪. ವೈಶಾಖವ್ರತದ ಮಾಹಾತ್ಮ್ಯದಿಂದ ನರಕದ ದಾರಿಯು ಯಾನರಹಿತವಾಯಿತು. ಸಮಸ್ತ ಜನರೂ ಪರಿಶುದ್ಧಸ್ವರೂಪರಾಗಿ ಶ್ರೀ ಹರಿಯ ನಿವಾಸವಾದ ವೈಕುಂಠವನ್ನೇ ಸೇರುವವರಾದರು.

೬೫. ಸಕಲರೂ ಸ್ವರ್ಗಾದ್ಯಪೇಕ್ಷೆಗಳೇ ಇಲ್ಲದೆ ನಿಷ್ಕಾಮಕರ್ಮಗಳನ್ನು ಮಾಡುತ್ತಿದ್ದುದರಿಂದ ದೇವತೆಗಳ ಲೋಕಗಳೂ ಹಾಗೆಯೇ ಜನಶೂನ್ಯಗಳಾದುವು. ಅಂತು ಸ್ವರ್ಗಲೋಕವೂ ನರಕಲೋಕಗಳೂ ಏಕಕಾಲದಲ್ಲಿ ನಿರ್ಜನಗಳಾದವು.

೬೬. ಒಂದು ದಿನ ನಾರದಮುನಿಯು ಯಮಧರ್ಮರಾಜನ ಆಸ್ಥಾನಕ್ಕೆ ಹೋಗಿ ಇಂತು ಹೇಳತೊಡಗಿದನು. "ಯಮಧರ್ಮನೆ! ನಿನ್ನ ನರಕಲೋಕದಲ್ಲಿ ಹಿಂದೆ ಕೇಳಿಬರುತ್ತಿದ್ದ ಶಿಕ್ಷೆಗಳನ್ನನುಭವಿಸುತ್ತಿರುವ ಪಾಪಿಗಳ ಆಕ್ರಂದನವು ಈಗೇಕೆ ಕೇಳಿಬರುವುದಿಲ್ಲ?

೬೭. ದುಷ್ಕೃತ್ಯಕಾರಿಗಳಾದ ಜನರ ವಿಷಯವಾಗಿ ನಿನ್ನ ದೂತರು ಯಾವ

ಕಾರಣಂ ಬ್ರೂಹಿ ರಾಜೇಂದ್ರ ನ ಯಾಂತಿ ತವ ಮಂದಿರಂ ।
ಮನುಷ್ಯಾಃ ಪಾಪಕರ್ಮಾಣೋ ಮಾಯಾದಂಭವಿವರ್ಧಿತಾಃ ॥ ೬೮ ॥
ಏವಮುಕ್ತೇ ತು ವಚನೇ ನಾರದೇನ ಮಹಾತ್ಮನಾ ।
ಪ್ರಾಹ ವೈವಸ್ವತೋ ರಾಜಾ ಕಿಂಚಿದ್ದೈನ್ಯಸಮನ್ವಿತಃ ॥ ೬೯ ॥
ಯೋಽಯಂ ನಾರದ ಭೂಪಾಲಃ ಪೃಥಿವ್ಯಾಂ ಸಾಂಪ್ರತಂ ಸ್ಥಿತಃ ।
ಸೋಽತಿಭಕ್ತೋ ಹೃಷೀಕೇಶೇ ಪುರಾಣಪುರುಷೋತ್ತಮೇ ॥ ೭೦ ॥
ಪ್ರಬೋಧಯತಿ ವೈಶಾಖಧರ್ಮಾನ್ ಭೇರೀಸ್ವನೇನಚ ।
ಅಷ್ಟವರ್ಷಾಧಿಕೋ ಮರ್ತ್ಯೋ ಹ್ಯಶೀತಿರ್ನ ಹಿ ಪೂರ್ಯತೇ ॥ ೭೧ ॥
ಯೋ ವೈ ಹ್ಯಕೃತವೈಶಾಖಃ ಸ ಮೇ ದಂಡ್ಯೋ ನ ಸಂಶಯಃ ।
ತದ್ಭಯಾದ್ಧಿ ಜನಾಃ ಸರ್ವೇ ನೋಲ್ಲಂಘಂತಿ ಕದಾಚನ ॥ ೭೨ ॥

ವರದಿಗಳನ್ನೂ ತಂದು ಒಪ್ಪಿಸುತ್ತಲೇ ಇಲ್ಲವಲ್ಲ? ಈ ಚಿತ್ರಗುಪ್ತನು ಮಹಾಮುನಿಯಂತೆ ಮೌನವ್ರತವನ್ನವಲಂಬಿಸಿ ಕಾರ್ಯರಹಿತನಾಗಿ ಕುಳಿತಿರುವನು.

೬೮. ರಾಜೇಂದ್ರನೆ! ಪಾಪಕೃತ್ಯಗಳನ್ನು ಮಾಡಿದವರೂ, ಮಾಯಾಹಂಕಾರಗಳಿಂದ ಆವಿಷ್ಟರಾದವರೂ ಆದ ಮನುಷ್ಯರು ನಿನ್ನ ಅರಮನೆಗೆ ಬರದಿರುವುದಕ್ಕೆ ಕಾರಣವನ್ನು ನನಗೆ ಹೇಳು.''

೬೯. ಇಂತು ಮಹಾತ್ಮನಾದ ನಾರದನು ಪ್ರಶ್ನೆಮಾಡಲು ಸೂರ್ಯಸುತನಾದ ಯಮರಾಜನು ದೈನ್ಯದಿಂದ ತಲೆಯನ್ನು ಬಗ್ಗಿಸಿಕೊಂಡು ಆತನಿಗೆ ಹೇಳತೊಡಗಿದನು.

೭೦. ''ಎಲೈ ನಾರದನೆ! ಈ ಸಮಯದಲ್ಲಿ ಭೂಲೋಕವಲ್ಲಿ ಹುಟ್ಟಿ ರಾಜ್ಯಭಾರವನ್ನು ಮಾಡುತ್ತಿರುವ ಕೀರ್ತಿಮಂತನೆಂಬ ಇಕ್ಷ್ವಾಕು ಕುಲದ ಮಹಾರಾಜನು ಅನಾದಿಯೂ, ಪುರುಷೋತ್ತಮನೂ ಆದ ಶ್ರೀಮನ್ನಾರಾಯಣನಲ್ಲಿ ಅಸದೃಶವಾದ ಭಕ್ತಿಯುಳ್ಳವನಾಗಿರುವನು.

೭೧. ಅವನು ತನ್ನ ರಾಜ್ಯದಲ್ಲಿ ರಾಜಬೀದಿಗಳಲ್ಲಿ ಡಂಗುರವನ್ನು ಹೊಡೆಸಿ ಎಂಟುವರ್ಷಕ್ಕೆ ಹೆಚ್ಚಿ ಎಂಬತ್ತು ವರ್ಷಗಳ ವಯಸ್ಸು ಕಳೆಯದಿರುವ ಸಕಲ ಪ್ರಜೆಗಳನ್ನೂ ವೈಶಾಖ ಧರ್ಮಗಳನ್ನು ನಿಯಮದಿಂದ ಪಾಲಿಸುವಂತೆ ಎಚ್ಚರಿಸುತ್ತಿರುವನು.

೭೨. 'ಯಾವನು ವೈಶಾಖ ವ್ರತವನ್ನು ಅನುಷ್ಠಾನಮಾಡುವುದಿಲ್ಲವೋ, ಅವನು ನನ್ನ ದಂಡನೆಗೆ ಗುರಿಯಾಗುವನು' ಎಂಬುದಾಗಿ ಶಾಸನವನ್ನೂ ಮಾಡಿರುವನು. ಆತನ ಭಯದಿಂದ ಸಕಲ ಪ್ರಜೆಗಳೂ ಎಂದೂ ಆ ವ್ರತ ನಿಯಮವನ್ನು ಉಲ್ಲಂಘಿಸುವುದಿಲ್ಲ.

ಗಚ್ಛಂತಿ ವೈಷ್ಣವಂ ಧಾಮ ಕರ್ಮಣಾ ತೇನ ನಾರದ ।
ವೈಶಾಖಸೇವನಾಲ್ಲೋಕಾ ಯಾಸ್ಯಂತಿ ಹರಿಮಂದಿರಂ ॥ ೭೩ ॥
ತೇನ ರಾಜ್ಞಾ ಮುನಿಶ್ರೇಷ್ಠ ಮಾರ್ಗೋ ಲುಪ್ತೋ ಮಮಾಽಧುನಾ ।
ಕೃತಾ ಹಿ ನರಕಾಃ ಶೂನ್ಯಾ ಲೋಕಾಶ್ಚಾಪಿ ದಿವೌಕಸಾಂ ॥ ೭೪ ॥
ವಿಶ್ರಾಂತೋ ಲೇಖಕೋ ಲೇಖೇ ಲಿಖಿತಂ ಮಾರ್ಜಿತಂ ಜನೈಃ ।
ವೈಶಾಖಮಾಸಧರ್ಮಸ್ಯ ಮಾಹಾತ್ಮ್ಯಂ ತ್ವೀದೃಶಂ ಮುನೇ ॥ ೭೫ ॥
ಬ್ರಹ್ಮಹತ್ಯಾದಿ ಪಾಪಾನಿ ವಿಮುಕ್ತಾನಿ ಜನೈರ್ದ್ವಿಜ ।
ಕೃತ್ವಾ ವೈಶಾಖಕೃತ್ಯಾನಿ ಯಾಂತಿ ವಿಷ್ಣೋಃ ಪರಂ ಪದಂ ॥ ೭೬ ॥
ಸೋಽಹಂ ಕಾಷ್ಠಸಮೋ ಜಾತೋ ನ ಕಶ್ಚಿನ್ಮಮ ಗೋಚರಃ ।
ಯುದ್ಧಂ ಕೃತ್ವಾ ತು ತಂ ಹನ್ಮಿ ಸರ್ವಥಾಽದ್ಯ ಮಹಾಬಲಂ ॥ ೭೭ ॥

---

೭೩. ಎಲೈ ನಾರದನೆ! ಆ ಪುಣ್ಯಕರ್ಮದ ಫಲವಾಗಿ ಮಹಾವಿಷ್ಣುವಿನ ಪರಂಧಾಮವನ್ನು ಸಕಲರೂ ಸೇರುತ್ತಿರುವರು. ವೈಶಾಖಮಾಸದ ವ್ರತವನ್ನು ಸೇವಿಸುವುದರಿಂದ ಜನರು ಶ್ರೀ ಹರಿಯ ನಿವಾಸವನ್ನು ಸೇರುವರಷ್ಟೆ.

೭೪. ಎಲೈ ಮುನಿವರ್ಯನೆ! ಆತನಿಂದಲೇ ನನ್ನ ಲೋಕದ ಮಾರ್ಗವು ಈ ವಿಧವಾಗಿ ಜನಶೂನ್ಯವಾಗಿರುವುದು. ಕೇವಲ ನರಕಲೋಕಗಳೇ ಅಲ್ಲದೆ ದೇವತೆಗಳ ಸ್ವರ್ಗಾದಿ ಲೋಕಗಳೂ ಸಹ ನಿರ್ಮಾನುಷಗಳಾಗಿ ಮಾಡಲ್ಪಟ್ಟಿರುವುವು.

೭೫. ಪಾಪಪುಣ್ಯಗಳ ಲೆಕ್ಕವನ್ನಿಡುವ ಚಿತ್ರಗುಪ್ತನು ತನ್ನ ಲೇಖನ ಕಾರ್ಯದಿಂದ ವಿಶ್ರಾಂತಿಯನ್ನು ಪಡೆದಿರುವನು. ಹಿಂದೆ ಆತನು ಬರೆದಿದ್ದುದನ್ನೂ ಕೂಡ ಜನರು ತಮ್ಮ ಸುಕೃತದಿಂದ ತೊಡೆದುಹಾಕಿರುವರು. ಮಹಾ ಮುನಿಯೆ! ವೈಶಾಖಮಾಸದ ಧರ್ಮಾಚರಣೆಯ ಮಹಾತ್ಮ್ಯವು ಇಂತಹ ಪ್ರಭಾವವುಳ್ಳದಾಗಿರುವುದು.

೭೬. ಎಲೈ ಬ್ರಾಹ್ಮಣ ಶ್ರೇಷ್ಠನೆ! ಭೂಲೋಕದ ಜನರು ಬ್ರಹ್ಮಹತ್ಯೆಯೇ ಮೊದಲಾದ ಮಹಾಪಾತಕಗಳನ್ನೂ ಸಹ ಕಳೆದುಕೊಂಡಿರುವರು. ವೈಶಾಖ ಮಾಸದಲ್ಲಿ ಮಾಡಬೇಕಾದ ಕಾರ್ಯಗಳನ್ನೆಲ್ಲ ಸಮಗ್ರವಾಗಿ ಮಾಡಿದ ಮನುಷ್ಯರು ಜರಾಮರಣಾದಿ ದುಃಖವರ್ಜಿತವಾದ ವಿಷ್ಣು ಲೋಕಕ್ಕೆ ಹೋಗುವರು.

೭೭. ಆದುದರಿಂದ ನಾನು ನಿಗ್ರಹಾನುಗ್ರಹ ಶಕ್ತಿಯಿಲ್ಲದ ನಿರ್ಜೀವವಾದ ಕಾಷ್ಠಕ್ಕೆ ಸಮವೆನಿಸಿರುವೆನು. ನನ್ನ ದಂಡನೆಗೆ ಸಿಕ್ಕುವವನೊಬ್ಬನೂ ಕಾಣಿಸುವುದಿಲ್ಲ. ಆದುದರಿಂದ ಮಹಾ ಬಲಶಾಲಿಯಾದ ಆ ಕೀರ್ತಿಮಂತನನ್ನು ಈಗ ಯುದ್ಧರಂಗದಲ್ಲಿ ಸರ್ವಪ್ರಯತ್ನದಿಂದಾದರೂ ಸೋಲಿಸಿ ಕೊಲ್ಲುವೆನು.

ಅಕೃತ್ವಾ ಸ್ವಾಮಿಕಾರ್ಯಂ ತು ನಿರ್ವ್ಯಾಪಾರೋ ಯದಿ ಸ್ಥಿತಃ ।
ತ್ರಸ್ತವಿತ್ತಂ ಸಮಶ್ನಾತಿ ಸ ಯಾತಿ ನರಕಂ ಧ್ರುವಂ ॥ ೭೮ ॥
ಯದಿ ದೇವಾದವಧ್ಯೋಽಯಂ ತದಾ ಬ್ರಹ್ಮಾಣಮೇತ್ಯ ಚ ।
ನಿವೇದ್ಯ ತಸ್ಮೈ ತತ್ಸರ್ವಂ ಪಶ್ಚಾತ್ಸ್ವಸ್ಥಿತಿರ್ಧ್ರುವಂ ॥ ೭೯ ॥
ಇತ್ಯುಕ್ತ್ವಾ ದ್ವಿಜಮಾಮಂತ್ರ್ಯ ಸಾನುಗಃ ಪ್ರಯಯೌ ಭುವಂ ।
ಸಕಾಲೋ ಮಹಿಷಾರೂಢೋ ದಂಡಮುದ್ಯಮ್ಯ ಭೀಷಣಂ ॥ ೮೦ ॥
ಮೃತ್ಯುರೋಗಜರಾದ್ಯೈಶ್ಚ ಪಾರ್ಷದೈಶ್ಚ ಮಹೋತ್ಕಟೈಃ ।
ಪಂಚಾಶತ್ಕೋಟಿಸಂಖ್ಯಾಕೈರ್ಯಮದೂತೈರ್ವೃತಸ್ತತಃ ॥ ೮೧ ॥
ಸ ತೂರ್ಣಂ ತಸ್ಯ ರಾಜರ್ಷೇ ರುರೋಧ ಸಕಲಾಂ ಪುರೀಂ ।
ಶಂಖಂ ದಧ್ಮೌ ಮಹಾಘೋರಂ ಸರ್ವಲೋಕಭಯಂಕರಂ ॥ ೮೨ ॥
ತಚ್ಛ್ರುತ್ವಾ ಸತು ರಾಜರ್ಷಿರ್ಜ್ಞಾತ್ವಾ ವೈವಸ್ವತಂ ಯಮಂ ।
ಸ ಸಜ್ಜೀಕೃತಸರ್ವಸ್ವಃ ಪತ್ತನಾನ್ನಿರ್ಯಯೌ ರುಷಾ ॥ ೮೩ ॥

---

೭೮. ಭೃತ್ಯನಾದವನು ತನ್ನ ಯಜಮಾನನ ಕಾರ್ಯವನ್ನು ನೆರವೇರಿಸದೆ ನಿಷ್ಕಾರಣವಾಗಿ ಸುಮ್ಮನೆ ಕುಳಿತಿದ್ದರೆ ಸ್ವಾಮಿಯ ವೇತನವನ್ನು ವ್ಯರ್ಥವಾಗಿಯೇ ತಿನ್ನುತ್ತಿರುವನು. ಅಂತಹ ಸೇವಕನು ನಿಜವಾಗಿಯೂ ನರಕಕ್ಕೆ ಭಾಗಿಯಾಗುವನು.

೭೯. ಒಂದುವೇಳೆ ದೈವಬಲದಿಂದ ಆತನು ನನ್ನ ಕೈಯಿಂದ ಮರಣವನ್ನು ಹೊಂದದಿದ್ದರೆ, ಆಗ ನಾನು ಲೋಕಸೃಷ್ಟಿಕರ್ತನಾದ ಬ್ರಹ್ಮದೇವನಲ್ಲಿಗೆ ಹೋಗಿ ನಡೆದುದೆಲ್ಲವನ್ನೂ ಆತನಲ್ಲಿ ನಿವೇದಿಸಿ ನಿಶ್ಚಿಂತೆಯಾಗಿರುವೆನು.”

೮೦. ಇಂತೆಂದು ನಾರದ ಮಹಾಮುನಿಯನ್ನು ಬೀಳ್ಕೊಟ್ಟು ಯಮನು ಭಯಂಕರವಾದ ತನ್ನ ಕಾಲದಂಡವನ್ನೆತ್ತಿ ಹಿಡಿದು ಮಹಿಷವಾಹನನಾಗಿ ಕಾಲಮೃತ್ಯುವಿನ ರೂಪವನ್ನು ತಾಳಿ ಪರಿವಾರಸಮೇತನಾಗಿ ಭೂಲೋಕಕ್ಕೆ ಇಳಿದುಬಂದನು.

೮೧. ಆತನು ಮೃತ್ಯು, ರೋಗ, ಜರೆಗಳೇ ಮುಂತಾದ ಮಹಾ ಪರಾಕ್ರಮಿಗಳಾದ ಪಾರ್ಷದರಿಂದಲೂ, ಐವತ್ತು ಕೋಟಿ ಸಂಖ್ಯೆಯುಳ್ಳ ಯಮದೂತರಿಂದಲೂ ಪರಿವೃತನಾಗಿದ್ದನು.

೮೨. ಇಂತು ಅಪರಿಮಿತ ಸೇನೆಯಿಂದೊಡಗೂಡಿ ಯಮನು ವೇಗವಾಗಿ ಬಂದು ರಾಜರ್ಷಿಯಾದ ಕೀರ್ತಿಮಂತನ ರಾಜಧಾನಿಯನ್ನೆಲ್ಲ ಸುತ್ತಲೂ ಮುತ್ತಿಕೊಂಡು ನಿಂತನು. ಆಗ ಅವನು ಮಹಾ ಘೋರವೂ, ಸಕಲ ಲೋಕಗಳಿಗೆ ಭಯವನ್ನುಂಟುಮಾಡುವುದೂ ಆದ ತನ್ನ ಶಂಖವನ್ನು ಧ್ವನಿಗೈದನು.

೮೩. ಆ ಶಂಖಧ್ವನಿಯನ್ನು ಕೇಳಿ ಮಹಾರಾಜನು ಸೂರ್ಯಕುಮಾರನಾದ

ತಯೋರ್ಯುದ್ಧಮಭೂತ್ತತ್ರ ಭೀಷಣಂ ರೋಮಹರ್ಷಣಂ ।
ಮೃತ್ಯುಂ ಕಾಲಂ ತಥಾ ರೋಗಂ ಯಮಂ ದೂತಪತಿಂ ತಥಾ ।
ಜಿತ್ವಾ ಕ್ಷಣೇನ ರಾಜರ್ಷಿರ್ದ್ರಾವಯಾಮಾಸ ರೋಷತಃ ॥ ೮೪ ॥
ತತಃ ಕ್ರುದ್ಧೋ ಯಮೋ ರಾಜಾ ಸ್ವಯಮಭ್ಯೇತ್ಯ ತಂ ರುಷಾ ।
ಯುಯೋಧ ಬಹುಭಿರ್ಬಾಣೈಃ ಸಿಂಹನಾದಂ ಚಕಾರ ಹ ॥ ೮೫ ॥
ಚಕರ್ತ ರಾಜಾ ತಸ್ಯಾಽಪಿ ಕಾರ್ಮುಕಂ ವಿಶಿಖೈಸ್ತ್ರಿಭಿಃ ।
ಪುನಶ್ಚರ್ಮಾಸಿಮಾದಾಯ ಯಮೋಽಹಂತುಮಥಾಽಗಮತ್ ॥ ೮೬ ॥
ತಂ ದೃಷ್ಟ್ವಾ ತು ನೃಪಃ ಕ್ರುದ್ಧಃ ಪುನಶ್ಛಿತ್ವಾಽಸಿಚರ್ಮಣೀ ।
ವಿಜಘಾನ ಲಲಾಟೇ ಚ ಶರಂ ಕಾಲೋರಗಪ್ರಭಂ ॥ ೮೭ ॥
ಯಮಸ್ತೇನಾಽಽಹತಃ ಕ್ರುದ್ಧಸ್ತತೋ ದಂಡಮುಪಾದದೇ ।
ಬ್ರಹ್ಮಾಸ್ತ್ರೇಣ ಚ ಸಂಮಂತ್ರ್ಯ ದಂಡಂ ತಸ್ಮೈ ಮುಮೋಚ ಹ ॥ ೮೮ ॥

ಯಮನೇ ಯುದ್ಧಕ್ಕೆ ಬಂದಿರುವನೆಂಬುದನ್ನು ತಿಳಿದು ತನ್ನ ಸೈನ್ಯಾದಿಪರಿಕರವನ್ನೆಲ್ಲ ಕ್ಷಣಮಾತ್ರದಲ್ಲಿ ಸಿದ್ಧಗೊಳಿಸಿಕೊಂಡು ಕೋಪದಿಂದ ಪಟ್ಟಣವನ್ನು ಬಿಟ್ಟು ಹೊರಕ್ಕೆ ಸಂಗ್ರಾಮಾಕಾಂಕ್ಷೆಯಿಂದ ಹೊರಟನು.

೮೪. ಬಳಿಕ ಅವರಿಬ್ಬರಿಗೂ ಭಯಂಕರವೂ, ರೋಮಾಂಚವನ್ನುಂಟು ಮಾಡುವಂತಹುದೂ ಆದ ಯುದ್ಧವು ಪ್ರಾರಂಭಿಸಿತು. ರಾಜರ್ಷಿಯಾದ ಕೀರ್ತಿಮಂತನು ಮೃತ್ಯು, ಕಾಲ, ರೋಗ, ಮತ್ತು ಸೈನ್ಯಾಧಿಪತಿಯಾದ ಯಮ ಮುಂತಾದವರನ್ನೆಲ್ಲ ನಿಮಿಷಮಾತ್ರದಲ್ಲಿಯೇ ಜಯಿಸಿ ಅತ್ಯಂತ ಕೋಪದಿಂದ ಅವರನ್ನು ರಣರಂಗದಿಂದ ಓಡಿಸಿಬಿಟ್ಟನು.

೮೫. ಇದನ್ನು ಕಂಡು ಕೋಪಗೊಂಡ ಮಹಾರಾಜನಾದ ಯಮನೇ ಮುಂದಕ್ಕೆ ಬಂದು ನಿಂತು ರೋಷದಿಂದ ಅನೇಕ ಬಾಣಗಳನ್ನು ಕೀರ್ತಿಮಂತನ ಮೇಲೆ ಮಳೆಗರೆದು ಸಿಂಹನಾದವನ್ನು ಮಾಡಿದನು.

೮೬. ರಾಜನೂ ಮೂರು ಬಾಣಗಳನ್ನು ಬಿಟ್ಟು ಯಮನ ಬಿಲ್ಲನ್ನು ಚೂರು ಮಾಡಿದನು. ಯಮನೂ ಪುನಃ ಚರ್ಮದ ಗುರಾಣಿಯನ್ನೂ, ಕತ್ತಿಯನ್ನೂ ಹಿಡಿದುಕೊಂಡು ಶತ್ರುವನ್ನು ಕೊಲ್ಲಲು ಓಡಿಬಂದನು.

೮೭. ಅವನನ್ನು ಕಂಡು ಮತ್ತೂ ರೋಷಗೊಂಡ ರಾಜನು ಪುನಃ ಆತನ ಕತ್ತಿ ಗುರಾಣಿಗಳನ್ನು ಕತ್ತರಿಸಿಕೆಡವಿ ಕಾಲಸರ್ಪಕ್ಕೆ ಸಮಾನವಾದ ಬಾಣವೊಂದನ್ನು ಯಮನ ಹಣೆಗೆ ಗುರಿಯಿಟ್ಟು ಹೊಡೆದನು.

೮೮. ಆ ಪೆಟ್ಟಿನಿಂದ ದಂಡಾಹತನಾದ ಸರ್ಪದಂತೆ ಕ್ರುದ್ಧನಾಗಿ ಯಮನು ತನ್ನ ದಿವ್ಯದಂಡವನ್ನು ಕೈಗೆ ತೆಗೆದುಕೊಂಡನು. ಮತ್ತು ಮಹೇಂದ್ರನ

ಹಾಹಾಕಾರೋ ಮಹಾನಾಸೀಜ್ಜನಾನಾಂ ಪಶ್ಯತಾಂ ತದಾ ।
ತದಾ ವಿಷ್ಣುಃ ಸ್ವಭಕ್ತಸ್ಯ ರಕ್ಷಾಯೈ ಪ್ರಾಹಿಣೋದರಿಂ ॥ ೮೯ ॥
ವಿಷ್ಣುಮುಕ್ತಂ ತದಾಚಕ್ರಂ ಶೀಘ್ರಮಾಗತ್ಯ ತದ್ರಣೇ ।
ಯಮದಂಡೇನ ಸಂಯುಧ್ಯ ತತ್ ಬ್ರಹ್ಮಾಸ್ತ್ರಂ ನಿವಾರ್ಯ ಚ ॥ ೯೦ ॥
ಯಮಂ ಹಂತುಮಥಾರೇಭೇ ಸಹಸ್ರಾರಂ ಮಹಾದ್ಭುತಂ ।
ದೇವಭಕ್ತಸ್ತತೋ ಭೀತಸ್ತದಾಽಸ್ತೌಚ್ಚಕ್ರಮಂಜಸಾ ॥ ೯೧ ॥
ಸಹಸ್ರಾರ ನಮಸ್ತೇಽಸ್ತು ವಿಷ್ಣುಪಾಣಿವಿಭೂಷಣ ।
ತ್ವಂ ಸರ್ವಲೋಕರಕ್ಷಾಯೈ ಹರಿಣಾ ಚ ಧೃತಂ ಪುರಾ ॥ ೯೨ ॥
ತ್ವಾಂ ಯಾಚೇಽದ್ಯ ಯಮಂ ತ್ರಾತುಂ ವಿಷ್ಣುಭಕ್ತಂ ಮಹಾಬಲಂ ॥ ೯೩ ॥
ನೃಣಾಂ ದೇವದ್ರುಹಾಂ ಕಾಲಃ ತ್ವಮೇವ ಹಿ ನಚಾಽಪರಃ ।
ತಸ್ಮಾದೇನಂ ಯಮಂ ರಕ್ಷ ಕೃಪಾಂ ಕುರು ಜಗತ್ಪತೇ ॥ ೯೪ ॥

---

ವಜ್ರಾಸ್ತ್ರವನ್ನು ಅಭಿಮಂತ್ರಣಮಾಡಿ ಆ ದಂಡದಲ್ಲಿ ನಿಯೋಜಿಸಿ ರಾಜನಿಗೆ ಸರಿಯಾಗಿ ಬೀಳುವಂತೆ ಪ್ರಯೋಗಿಸಿದನು.

೮೯. ಈ ಮಹಾ ಸಂಗ್ರಾಮವನ್ನು ನೋಡುತ್ತಿದ್ದ ಜನರೆಲ್ಲರಲ್ಲಿಯೂ ಹೃದಯವಿದ್ರಾವಕವೂ ಮಹತ್ತರವೂ ಆದ ಹಾಹಾಕಾರವುಂಟಾಯಿತು. ಆಗ ಮಹಾ ವಿಷ್ಣುವು ತನ್ನ ಪರಮಭಕ್ತನನ್ನು ಸಂರಕ್ಷಿಸಲು ತನ್ನ ಚಕ್ರಾಯುಧವನ್ನು ಕಳುಹಿಸಿಕೊಟ್ಟನು.

೯೦-೯೧. ಶ್ರೀಮನ್ನಾರಾಯಣನ ಕೈಯಿಂದ ಬಿಡಲ್ಪಟ್ಟ ಆ ಚಕ್ರರಾಜವು ವೇಗವಾಗಿ ಬಂದು ರಣರಂಗವನ್ನು ಪ್ರವೇಶಮಾಡಿ ಯಮದಂಡದೊಡನೆ ಯುದ್ಧವನ್ನು ಮಾಡಿ ಆ ಬ್ರಹ್ಮಾಸ್ತ್ರವನ್ನು ನಿಸ್ತೇಜಸ್ಕವನ್ನಾಗಿ ಮಾಡಿ ನಿವಾರಿಸಿತು. ಮತ್ತು ಒಂದು ಸಾವಿರ ಅರಗಳುಳ್ಳ ಅತ್ಯಂತ ಅದ್ಭುತಾಕಾರವಾದ ಆ ಚಕ್ರವು ಯಮನನ್ನೂ ಕೊಲ್ಲಲು ಉದ್ಯುಕ್ತವಾಯಿತು. ವಿಷ್ಣುಭಕ್ತನಾದ ಕೀರ್ತಿಮಂತಮಹಾರಾಜನು ಆ ವಧೆಯಿಂದ ಭಯಗೊಂಡು ಆಗ ಭಕ್ತಿಯುಕ್ತನಾಗಿ ಆ ಚಕ್ರವನ್ನು ಸ್ತೋತ್ರಮಾಡತೊಡಗಿದನು.

೯೨. "ಎಲೈ ಸಹಸ್ರಾರವಾದ ಸುದರ್ಶನವೆ! ನಿನಗೆ ನಮಸ್ಕಾರವನ್ನು ಮಾಡುವೆನು. ನೀನು ಶ್ರೀ ಮಹಾವಿಷ್ಣುವಿನ ಕರಕಮಲಕ್ಕೆ ಅಲಂಕಾರಪ್ರಾಯವಾಗಿರುವೆ. ಪೂರ್ವದಲ್ಲಿ ನೀನು ಸಕಲ ಲೋಕಗಳ ರಕ್ಷಣೆಯ ನಿಮಿತ್ತವಾಗಿಯೇ ಆತನಿಂದ ಧರಿಸಲ್ಪಟ್ಟಿಯಲ್ಲವೆ.

೯೩. ಪರಮಾತ್ಮನ ಆಜ್ಞಾಧಾರಕನೂ, ಮಹಾ ಬಲಶಾಲಿಯೂ ಆದ ಯಮಧರ್ಮನನ್ನು ಕಾಪಾಡಬೇಕೆಂದು ಈಗ ನಿನ್ನನ್ನು ಬೇಡಿಕೊಳ್ಳುವೆನು.

೯೪. ದೇವತೆಗಳಿಗೆ ದ್ರೋಹವನ್ನೆಣಿಸುವ ಮನುಷ್ಯರಿಗೆಲ್ಲ ನೀನೇ ಮೃತ್ಯು

ನೃಪೇಣೈವಂ ಸ್ತುತಂ ಚಕ್ರಂ ಯಮಂ ಹಿತ್ವಾ ನೃಪಾಂತಿಕಂ ।
ಪುನರ್ಯಯೌ ಮಹಾರಾಜ ದೇವಾನಾಂ ಪಶ್ಯತಾಂ ದಿವಿ ॥ ೯೫ ॥
ತತೋ ಯಮೋಽತಿನಿರ್ವಿಣ್ಣೋ ಬ್ರಹ್ಮಣಃ ಸದನಂ ಯಯೌ ।
ಸ ದದರ್ಶ ಸಮಾಸೀನಂ ಮೂರ್ತಾಮೂರ್ತಜನೈರ್ವೃತಂ ॥ ೯೬ ॥
ಧ್ರುವಾಶ್ರಯಂ ಜಗದ್ಬೀಜಂ ಸರ್ವಲೋಕಪಿತಾಮಹಂ ।
ಉಪಾಸ್ಯಮಾನಂ ವಿಬುಧೈರ್ಲೋಕಪಾಲೈರ್ದಿಗೀಶ್ವರೈಃ ॥ ೯೭ ॥
ಇತಿಹಾಸಪುರಾಣಾದ್ಯೈರ್ದೇವೈರ್ವಿಗ್ರಹಸಂಸ್ಥಿತೈಃ ।
ಮೂರ್ತಿಮದ್ಭಿಃ ಸಮುದ್ರೈಶ್ಚ ನದೀಭಿಶ್ಚ ಸರೋವರೈಃ ॥ ೯೮ ॥
ದೇಹವದ್ಭಿಸ್ತಥಾ ವೃಕ್ಷೈರಶ್ವತ್ಥಾದ್ಯೈರಶೇಷಿತೈಃ ।
ವಾಪೀಕೂಪತಟಾಗೈಶ್ಚ ಮೂರ್ತಿಮದ್ಭಿಶ್ಚ ಪರ್ವತೈಃ ॥ ೯೯ ॥

ಸ್ವರೂಪಿಯಾಗಿರುವೆ. ಎಲೈ ಲೋಕನಾಯಕನೆ! ಆದುದರಿಂದ ಈ ಯಮನನ್ನು ಕಾಪಾಡು. ನನ್ನಲ್ಲಿ ದಯೆಯನ್ನು ತೋರು."

೯೫. ಶ್ರುತಕೀರ್ತಿಮಹಾರಾಜನೆ! ಇಂತು ಮಹಾರಾಜನಿಂದ ಸ್ತೋತ್ರವನ್ನು ಕೇಳಿದ ಚಕ್ರವು ಯಮನನ್ನು ಸಜೀವನನ್ನಾಗಿಯೇ ಬಿಟ್ಟು ಸ್ವರ್ಗದಲ್ಲಿ ದೇವತೆಗಳೆಲ್ಲ ನೋಡಿ ಜಯಕಾರಗಳನ್ನು ಮಾಡುತ್ತಿರಲು ಮತ್ತೆ ರಾಜನ ಸಮೀಪವನ್ನು ಸೇರಿತು.

೯೬. ಬಳಿಕ ಯಮಧರ್ಮರಾಜನು ಬಹಳ ಕಳೆಗುಂದಿ ಬೇಸರಗೊಂಡು ಬ್ರಹ್ಮನ ಆವಾಸವನ್ನು ಸೇರಿದನು. ಆ ಚತುರ್ಮುಖನು ಬ್ರಹ್ಮೋಪಾಸಕರಿಂದಲೂ ಅವ್ಯಕ್ತೋಪಾಸಕರಾದ ಜೀವನ್ಮುಕ್ತರಿಂದಲೂ ಪರಿವೃತನಾಗಿ ಸಭೆಯಲ್ಲಿ ಕುಳಿತಿದ್ದನು.

೯೭. ಆ ಬ್ರಹ್ಮನು ಶಾಶ್ವತನಾದ ಆಶ್ರಯನೂ, ಬ್ರಹ್ಮಾಂಡಕ್ಕೆ ಬೀಜಭೂತನೂ, ಸಕಲ ಲೋಕಗಳಿಗೂ ಪಿತಾಮಹನೂ ಆಗಿರುವವನೆನಿಸಿ ದೇವತೆಗಳಿಂದಲೂ, ಲೋಕಪಾಲಕರಿಂದಲೂ ದಿಕ್ಪಾಲಕರಿಂದಲೂ ಸೇವೆಗಳನ್ನು ಕೈಕೊಳ್ಳುತ್ತಿದ್ದನು.

೯೮. ದೇಹಗಳನ್ನು ಧರಿಸಿದ ಇತಿಹಾಸ ಪುರಾಣಾದಿ ಗ್ರಂಥಗಳ ಅಭಿಮಾನಿದೇವತೆಗಳಿಂದಲೂ ಸಾಕಾರರಾದ ಸಮುದ್ರಗಳು. ನದಿಗಳು ಮತ್ತು ಸರೋವರಗಳಿಂದಲೂ ಆ ದೇವದೇವನು ಪರಿವಾರಿತನಾಗಿದ್ದನು.

೯೯. ಮತ್ತು ದೇಹಗಳನ್ನು ಧರಿಸಿದ ಅಶ್ವತ್ಥವೇ ಮುಂತಾದ ಸಕಲ ವೃಕ್ಷಗಳಿಂದಲೂ. ಕೊಳಗಳಿಂದಲೂ, ಬಾವಿಗಳಿಂದಲೂ, ಕೆರೆಗಳಿಂದಲೂ, ಪರ್ವತೋತ್ತಮಗಳಿಂದಲೂ ಒಡ್ಡೋಲಗದಲ್ಲಿದ್ದನು.

ಅಹೋರಾತ್ರೈಸ್ತಥಾ ಪಕ್ಷೈರ್ಮಾಸೈಸ್ಸಂವತ್ಸರೈಸ್ತಥಾ ।
ಕಲಾಕಾಷ್ಠಾನಿಮೇಷೈಶ್ಚ ಋತುಭಿಶ್ಚಾಽಯನೈರ್ಯುಗೈಃ ॥ ೧೦೦ ॥
ಸಂಕಲ್ಪೈಶ್ಚ ವಿಕಲ್ಪೈಶ್ಚ ನಿಮಿಷೋನ್ಮೇಷಣೈಸ್ತಥಾ ।
ಋಕ್ಷೈರ್ಯೋಗೈಶ್ಚ ಕರಣೈಃ ಪೂರ್ಣಿಮಾಭಿಃ ಸುಸಂಕ್ಷಯೈಃ ॥ ೧೦೧ ॥
ಸುಖೈರ್ದುಃಖೈರ್ಭಯಶ್ಚೈವ ಲಾಭಾಽಲಾಭೈರ್ಜಯಾಜಯೈಃ ।
ಸತ್ತ್ವೇನ ರಜಸಾ ಚೈವ ತಮಸಾ ಚ ಸಮನ್ವಿತಂ ॥ ೧೦೨ ॥
ಶಾಂತಮೂಢಾಽತಿಪ್ರೌಢೈಶ್ಚ ವಿಕಾರೈಃ ಪ್ರಾಕೃತೈರಪಿ ।
ವಾಯುನಾ ದೇವದೇವೇನ ಶ್ಲೇಷ್ಮಪಿತ್ತಾದಿಭಿರ್ವೃತಂ ॥ ೧೦೩ ॥
ತೇಷಾಂ ಮಧ್ಯೇಽವಿಶತ್ ಸೌರಿಃ ಸವ್ರೀಡಾಚ ವಧೂರ್ಯಥಾ ।
ವಿಲೋಕಯನ್ ಧರಾಪೃಷ್ಠಂ ಮ್ಲಾನವಕ್ತ್ರಂ ವ್ಯದರ್ಶಯತ್ ॥ ೧೦೪ ॥
ಸಂಪ್ರವಿಷ್ಟಂ ಯಮಂ ದೃಷ್ಟ್ವಾ ಸಕಾಶಸ್ಥಂ ಸಹಾನುಗಂ ।
ವಿಸ್ಮಿತಾಸ್ತೇ ಮಿಥಃ ಪ್ರೋಚುಃ ಕಿಮರ್ಥಂ ಭಾಸ್ಕರಿಸ್ತ್ವಿಹ ॥ ೧೦೫ ॥

---

೧೦೦. ಹಾಗೆಯೇ ಹಗಲು ರಾತ್ರಿಗಳೂ, ಪಕ್ಷಗಳೂ, ಮಾಸಗಳೂ, ಸಂವತ್ಸರಗಳೂ, ಕಲೆಗಳೂ, ಕಾಷ್ಠಗಳೂ, ನಿಮಿಷಗಳೂ, ಋತುಗಳೂ, ಅಯನದ್ವಯಗಳೂ, ಚತುರ್ಯುಗಗಳೂ ಕಾಲದ ರೂಪದಿಂದ ಆತನನ್ನು ಸೇವಿಸುತ್ತಿದ್ದವು.

೧೦೧. ಸಂಕಲ್ಪವಿಕಲ್ಪಗಳಿಂದಲೂ, ನಿಮೇಷ ಉನ್ಮೇಷಗಳಿಂದಲೂ, ನಕ್ಷತ್ರಗಳಿಂದಲೂ, ಯೋಗಗಳಿಂದಲೂ, ಕರಣಗಳಿಂದಲೂ, ಪೂರ್ಣಿಮೆ ಅಮಾವಾಸ್ಯೆಗಳಿಂದಲೂ, ಆ ಬ್ರಹ್ಮದೇವನ ಸಭೆಯು ರಂಜಿಸುತ್ತಿತ್ತು.

೧೦೨. ಸುಖಗಳೂ, ದುಃಖಗಳೂ, ಭಯಗಳೂ, ಲಾಭನಷ್ಟಗಳೂ, ಜಯಾಪಜಯಗಳೂ, ಸತ್ತ್ವರಜಸ್ತಮೋಗುಣಗಳೂ ಆ ಸಭೆಯಲ್ಲಿ ಉಚಿತ ಸ್ಥಾನಗಳನ್ನು ಪಡೆದು ಕುಳಿತಿದ್ದವು.

೧೦೩. ಶಾಂತರಿಂದಲೂ, ಅತಿಮೂರ್ಖರಿಂದಲೂ, ಅತಿಪ್ರಾಜ್ಞರಿಂದಲೂ, ಪ್ರಕೃತಿಯ ತ್ರಿಗುಣಗಳ ವಿಕಾರಗಳಿಂದಲೂ, ದೇವೋತ್ತಮನಾದ ವಾಯುವಿನಿಂದಲೂ, ಶ್ಲೇಷ್ಮಪಿತ್ತಗಳೇ ಮುಂತಾದ ವಾಯುವಿಕಾರಗಳಿಂದಲೂ ಆ ಸಭೆಯು ಕೂಡಿದ್ದಿತು.

೧೦೪. ಅವರೆಲ್ಲರ ಮಧ್ಯದಲ್ಲಿ ಯಮಧರ್ಮರಾಜನು ಭೂಮಿಯನ್ನೇ ನೋಡುತ್ತ, ಬಾಡಿದ ತನ್ನ ಮುಖವನ್ನು ಎಲ್ಲರಿಗೂ ತೋರಿಸುತ್ತ ನಾಚಿಕೆಯಿಂದ ತಲೆಬಾಗಿರುವ ಮದವಣಿಗಿತ್ತಿಯಂತೆ ಮೌನವಾಗಿ ಕುಳಿತುಕೊಂಡಿದ್ದನು.

೧೦೫. ಇಂತು ಯಮದೇವನು ತನ್ನ ಸಹಚರರೊಡನೆ ಬ್ರಹ್ಮಸಭೆಯನ್ನು ಪ್ರವೇಶಿಸಿ ಆತನ ಸಮೀಪದಲ್ಲಿಯೇ ಕುಳಿತಿದ್ದುದನ್ನು ಕಂಡು ಸಭಾಸದರೆಲ್ಲರೂ

**ಸಂಪ್ರಾಪ್ತೋ ಲೋಕಕರ್ತಾರಂ ದ್ರಷ್ಟುಂ ದೇವಂ ಪಿತಾಮಹಂ ।**
**ನಿರ್ವ್ಯಾಪಾರಃ ಕ್ಷಣಮಪಿ ಯೋಽಯಂ ನಾಸ್ತಿ ರವೇಃ ಸುತಃ ॥ ೧೦೬ ॥**
**ಸೋಽಯಮಭ್ಯಾಗತಃ ಕಸ್ಮಾತ್ ಕಚ್ಚಿತ್ ಕ್ಷೇಮಂ ದಿವೌಕಸಾಂ ।**
**ಆಶ್ಚರ್ಯಾತಿಶಯೋಽಯಂಚ ಸಂಮಾರ್ಜಿತಪಟಸ್ತ್ವಯಂ ॥ ೧೦೭ ॥**
**ಲೇಖಕಸ್ತಮನುಪ್ರಾಪ್ತೋ ದೈನ್ಯೇನ ಮಹತಾಽನ್ವಿತಃ ।**
**ನ ಕದಾಚಿತ್ಪಟೋ ಹ್ಯಸ್ಯ ಮಾರ್ಜಿತೋ ಧರ್ಮಭೀರುಣಾ ॥ ೧೦೮ ॥**
**ಯನ್ನ ದೃಷ್ಟಂ ಶ್ರುತಂ ವಾಽಪಿ ತದಿಹಾಽದ್ಯ ಪ್ರಪದ್ಯತೇ ।**
**ಏವಮುಚ್ಚರತಾಂ ತೇಷಾಂ ಭೂತಾನಾಂ ಭೂತಶಾಸನಃ ।**
**ನಿಪಪಾತಾಽಗ್ರತೋ ಭೂಮೌ ಬ್ರಹ್ಮಣೋ ರವಿನಂದನಃ ॥ ೧೦೯ ॥**
**ಕೃತ್ತಮೂಲೋ ಯಥಾಶಾಖೀ ತ್ರಾಹಿ ತ್ರಾಹೀತಿ ವೈ ರುದನ್ ।**
**ಪರಿಭೂತೋಽಸ್ಮಿ ದೇವೇಶ ಸಂಮಾರ್ಜಿತ ಪಟಃ ಕೃತಃ ॥ ೧೧೦ ॥**

ವಿಸ್ಮಯಗೊಂಡು ತಮ್ಮ ತಮ್ಮಲ್ಲಿಯೇ ಮಾತನಾಡಿಕೊಂಡರು. "ಈ ಸೂರ್ಯ ಪುತ್ರನಾದ ಯಮನು ಇಲ್ಲಿಗೇತಕ್ಕೆ ಬಂದಿರುವನು?

೧೦೬. ದೇವದೇವನೂ, ಪಿತಾಮಹನೂ, ಲೋಕಜನಕನೂ ಆದ ಬ್ರಹ್ಮನನ್ನು ನೋಡಲು ಬಂದಿರುವನಲ್ಲವೆ. ಈ ಸೂರ್ಯಪುತ್ರನು ಒಂದು ಕ್ಷಣಮಾತ್ರವೂ ಅವಕಾಶವಿಲ್ಲದೆ ತನ್ನ ವ್ಯಾಪಾರಗಳಲ್ಲಿಯೇ ನಿರತನಾಗಿರುವವನು.

೧೦೭. ಇಂತಹ ಸಂತತವ್ಯಾಪಾರಿಯಾದ ಈತನು ಏತಕ್ಕಾಗಿ ಇಲ್ಲಿಗೆ ಬಂದಿರುವನು? ಇದರಿಂದ ದೇವತೆಗಳಿಗೇನಾದರೂ ಅಶುಭವಾಗಿರುವುದಿಲ್ಲವಷ್ಟೆ. ಅಲ್ಲದೆ ಯಾವಾಗಲೂ ರಕ್ತವರ್ಣರಂಜಿತವಾದ ವಸ್ತ್ರವನ್ನು ಧರಿಸಿರುವ ಈ ಯಮನು ಈಗ ಶುಭ್ರವಾದ ಶ್ವೇತವಸ್ತ್ರವನ್ನುಟ್ಟುಕೊಂಡು ಬಂದಿರುವುದು ಮತ್ತೂ ಆಶ್ಚರ್ಯಕರವಾಗಿರುವುದು.

೧೦೮. ಈತನ ಹಿಂದೆಯೇ ಲೇಖಕನಾದ ಚಿತ್ರಗುಪ್ತನೂ ಅತಿಶಯಿತವಾದ ದೈನ್ಯದಿಂದ ಕೂಡಿದವನಾಗಿ ಯಜಮಾನನನ್ನೇ ಹಿಂಬಾಲಿಸಿ ಬಂದಿರುವನು. ಧರ್ಮಭೀರುವಾದ ಇವನ ಲೇಖನಪಟವು ಹಿಂದೆಂದೂ ಈ ವಿಧವಾಗಿ ಶುಭ್ರವಾಗಿರಲಿಲ್ಲ.

೧೦೯. ಹಿಂದೆ ಎಂದೂ ಎಲ್ಲಿಯೂ ನಾವು ನೋಡದಿರುವ ಕೇಳದಿರುವ ಆಶ್ಚರ್ಯವೊಂದು ಈಗ ನಡೆಯುತ್ತಿದೆ." ಇಂತೆಂದು ಸಭೆಯಲ್ಲಿ ಕುಳಿತಿದ್ದ ಸಕಲರೂ ಹೇಳಿಕೊಳ್ಳುತ್ತಿರಲು ಸಕಲಪ್ರಾಣಿಗಳಿಗೂ ಶಾಸನಮಾಡುವ ಅಧಿಕಾರಿಯಾದ ಯಮನು ಬ್ರಹ್ಮದೇವನ ಇದಿರಿನಲ್ಲಿ ಭೂಮಿಯಲ್ಲಿ ಬಿದ್ದು ನಮಸ್ಕಾರವನ್ನು ಮಾಡಿದನು.

೧೧೦. ಬುಡವನ್ನು ಕತ್ತರಿಸಲು ಮಹಾವೃಕ್ಷವು ಭೂಮಿಗೆರಗುವಂತೆ

ತ್ವಯಿ ನಾಥೇನ ವಿಫಲಂ ಪಶ್ಯಾಮಿ ಕಮಲಾಸನ ॥ ೧೧೧ ॥
ಏವಮುಕ್ತ್ವಾ ಹಿ ನಿಶ್ಚೇಷ್ಟೋ ಬಭೂವ ನೃಪಸತ್ತಮ ।
ತತಃ ಕೋಲಾಹಲಃ ಶಬ್ದಃ ಸಭಾಯಾಂ ಸಮಜಾಯತ ॥ ೧೧೨ ॥
ಯೋ ಹಿ ಖೇದಯತೇ ಮರ್ತ್ಯಾನ್ ಸರ್ವಾನ್ ಸ್ಥಾವರಜಂಗಮಾನ್ ।
ಸನ್ವೈ ರುದತಿ ದುಃಖಾರ್ತಃ ಕಸ್ಮಾದ್ವೈವಸ್ವತೋ ಯಮಃ ॥ ೧೧೩ ॥
ಜನಸಂತಾಪಕರ್ತಾ ಯಃ ಸೋಚಿರಾದ್ಯಾತ್ಯಶೋಭನಂ ।
ನ ಹಿ ದುಷ್ಕೃತಕರ್ತಾ ಹಿ ನರಃ ಪ್ರಾಪ್ನೋತಿ ಶೋಭನಂ ॥ ೧೧೪ ॥
ತತೋ ನಿವಾರಯಾಮಾಸ ವಾಯುಸ್ತೇಷಾಂ ವಚಸ್ತದಾ ।
ಲೋಕಾನಾಂ ಸಮವೇತಾನಾಂ ಮತಂ ಜ್ಞಾತ್ವಾ ಸ ವೇಧಸಃ ॥ ೧೧೫ ॥
ನಿವಾರ್ಯ ಲೋಕಾನ್ ಮಾರ್ತಂಡಿಂ ಶನೈರುತ್ಥಾಪಯನ್‌ಮರುತ್ ।
ಭುಜಾಭ್ಯಾಂ ಶಾಲಪೀನಾಭ್ಯಾಂ ಲೋಕಸೂತ್ರ ಉದಾರಧೀಃ ॥ ೧೧೬ ॥
ವಿಹ್ವಲಂತಂ ಪರಾಯತ್ತಮಾಸನೇ ಸಂನ್ಯವೇಶಯತ್ ।
ಆಸನಸ್ಥಮುವಾಚೇದಂ ವ್ಯೋಮಸೂನೂ ರವೇಃ ಸುತಂ ॥ ೧೧೭ ॥

---

ನೆಲದಲ್ಲಿ ಬಿದ್ದು ಅಳುತ್ತ ಬಿನ್ನವಿಸತೊಡಗಿದನು. "ಎಲೈ ದೇವದೇವನೇ! ನನ್ನನ್ನು ಕಾಪಾಡು. ನಾನು ಕೇವಲನಾದ ಒಬ್ಬ ಮಾನವನಿಂದ ಪರಾಜಯವನ್ನು ಹೊಂದಿರುವೆನು. ಈ ನನ್ನ ವಸ್ತ್ರವು ಶುಭ್ರವಾಗಲು ಕಾರಣವೇನು?

೧೧೧. ಕಮಲಾಸನನೆ! ನೀನು ಜಗನ್ನಾಯಕನಾಗಿರಲು ಯಾವ ಕಾರ್ಯವೂ ವಿಫಲವಾದುದನ್ನು ನಾನು ಕಾಣೆನು."

೧೧೨. ಇಂತೆಂದು ಹೇಳಿ ಯಮನು ಭೂಮಿಯಲ್ಲಿ ಬಿದ್ದು ಮೂರ್ಛೆ ಗೊಂಡನು. ಎಲೈ ಮಹಾರಾಜನೆ! ಈಗ ಬ್ರಹ್ಮಸಭೆಯಲ್ಲಿ ಅನಂತವಾದ ಕೋಲಾಹಲದ ಧ್ವನಿಯುಂಟಾಗಿ ಸರ್ವತ್ರದಲ್ಲಿಯೂ ವ್ಯಾಪ್ತವಾಯಿತು.

೧೧೩. "ಯಾವ ದೇವನು ಮರ್ತ್ಯಲೋಕದ ಸ್ಥಾವರ ಜಂಗಮ ಪ್ರಾಣಿಗಳ ನ್ನೆಲ್ಲ ದುಃಖಗೊಳಿಸುವನೊ, ಅಂತಹ ವೈವಸ್ವತಯಮನೇ ಈಗ ಯಾವ ಕಾರಣ ದಿಂದ ದುಃಖಗೊಂಡವನಾಗಿ ತಾನೇ ರೋದಿಸುತ್ತಿರುವನೊ.?

೧೧೪. ಯಾವನು ಅನೇಕ ಜನರನ್ನು ಸಂತಾಪಗೊಳಿಸುವನೊ, ಅವನು ಶೀಘ್ರವಾಗಿಯೇ ಅಮಂಗಳವನ್ನು ಪಡೆಯುವನು. ದುಷ್ಕೃತ್ಯಗಳನ್ನು ಮಾಡಿದ ಯಾವ ಮನುಷ್ಯನೂ ಎಂದಿಗೂ ಶುಭಫಲವನ್ನು ಹೊಂದಲಾರನಷ್ಟೆ."

೧೧೫. ಆ ಸಮಯದಲ್ಲಿ ಅಲ್ಲಿ ನೆರದಿದ್ದ ಸಕಲ ಸಭಾಸದರ ಮಾತು ಗಳನ್ನೂ ವಾಯುದೇವನು ಬ್ರಹ್ಮನ ಇಂಗಿತವನ್ನರಿತು ನಿಲ್ಲಿಸಿದನು.

೧೧೬-೧೧೭. ಇಂತು ಜನರ ವಾದಗಳನ್ನು ನಿವಾರಿಸಿ ಆಕಾಶಜನ್ಯನಾದ ವಾಯುದೇವನು ಪ್ರಾಣಿಗಳ ಪ್ರಾಣಸ್ವರೂಪನೂ, ಉದಾರ ಬುದ್ಧಿಯೂ ಆದ

ಕೇನ ತ್ವಮಭಿಭೂತೋಽಸಿ ಕೇನ ಸ್ಥಾನಾನ್ನಿವಾರಿತಃ ।
ಕೇನಾಯಂ ಮಾರ್ಜಿತೋ ದೇವ ಪಟೋ ಲೇಖಪಟಿಸ್ತ್ವವ ॥ ೧೧೮ ॥
ಬ್ರೂಹಿ ಸರ್ವಮಶೇಷೇಣ ಕುತೋ ಹೇತೋಸ್ತ್ವಮಾಗತಃ ।
ಯಃ ಪ್ರಭುಸ್ತಾತ ಸರ್ವೇಷಾಂ ಸ ತೇ ಕರ್ತಾ ಮಮಾಪಿ ಚ ।
ಅಪಿ ಕಸ್ಮಾಚ್ಚ ಮಾರ್ತಂಡೇ ದುಃಖಂ ಹೃದಯ ಸಂಸ್ಥಿತಂ ॥ ೧೧೯ ॥

ಸ ಏವಮುಕ್ತಃ ಶ್ವಸನೇನ ಸತ್ಯ
ಮಾದಿತ್ಯಸೂನುರ್ವಚನಂ ಬಭಾಷೇ ।
ವಿಲೋಕ್ಯ ವಕ್ತ್ರಂ ಶತಕೇತುಸೂನೋಃ
ಸಗದ್ಗದಂ ಚೇದಮತೋಽತಿದೀನಂ ॥ ೧೨೦ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ದ್ವಿತೀಯೇ ವೈಷ್ಣವಖಂಡೇ ವೈಶಾಖಮಾಸಮಾಹಾತ್ಮ್ಯೇ ನಾರದಾಂಬರೀಷಸಂವಾದೇ "ಕೀರ್ತಿಮದ್ದ್ವಿಜಯವರ್ಣನಂ" ನಾಮೈಕಾದಶೋಽಧ್ಯಾಯಃ

ದಳಿಂದ ಸಾಲವೃಕ್ಷಗಳಂತೆ ದುಂಡಾಗಿ ಬಲಿಷ್ಠಗಳಾದ ತನ್ನ ಬಾಹುಗಳಿಂದ ಮೆಲ್ಲಗೆ ಯಮಧರ್ಮನನ್ನು ಮೇಲಕ್ಕೆತ್ತಿ ಭಯವಿಹ್ವಲನಾಗಿ ಬುದ್ಧಿಮಾಂದ್ಯದಿಂದ ಕೂಡಿದ ಆತನನ್ನು ಒಂದು ಆಸನದಲ್ಲಿ ಕುಳ್ಳಿರಿಸಿದನು. ಮತ್ತು ಆ ಸೂರ್ಯಸುತನನ್ನು ಕುರಿತು ಇಂತೆಂದು ಪ್ರಶ್ನಿಸತೊಡಗಿದನು.

೧೧೮. "ನೀನು ಯಾರಿಂದ ಪರಾಜಯವನ್ನು ಹೊಂದಿರುವೆ? ಯಾರು ನಿನ್ನನ್ನು ಸ್ಥಾನದಿಂದ ಚ್ಯುತನನ್ನಾಗಿ ಮಾಡಿದರು? ಅಯ್ಯಾ ಮುನೇ! ನಿನ್ನ ವಸ್ತ್ರವೂ ಜನರ ಪಾಪಪುಣ್ಯಗಳನ್ನು ಲೇಖಿಸುವ ಈ ಚಿತ್ರಗುಪ್ತನ ಪಟವೂ ಯಾರಿಂದ ಹೀಗೆ ನಿರ್ಮಲವಾದುವು?

೧೧೯. ಇವುಗಳೆಲ್ಲವನ್ನೂ ನಿಶ್ಶೇಷವಾಗಿ ನೀನು ಹೇಳುವವನಾಗು. ಯಾವ ಕಾರಣದಿಂದ ನೀನು ಇಲ್ಲಿಗೆ ಬಂದೆ? ಅಯ್ಯಾ! ಸಕಲ ಪ್ರಾಣಿಗಳಿಗೂ ಪ್ರಭುವಾದವನು ಯಾವನೊ, ಅವನೇ ನಿನಗೂ ನನಗೂ ನಿಯಾಮಕನಾಗಿರುವನಲ್ಲವೆ."

೧೨೦. ಇಂತೆಂದು ವಾಯುದೇವನಿಂದ ಪ್ರಶ್ನಿಸಲ್ಪಟ್ಟ ಯಮನು ಆ ಚತುರ್ಮುಖಬ್ರಹ್ಮನ ಮುಖವನ್ನು ನೋಡುತ್ತ ಕಂಠವು ಗದ್ಗದಿತವಾಗುತ್ತಿರಲು ಅತ್ಯಂತ ದೀನಸ್ವರದಿಂದ ನಡೆದುದೆಲ್ಲವನ್ನೂ ಯಥಾರ್ಥವಾಗಿ ವಿವರಿಸಲುಪಕ್ರಮಿಸಿದನು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀಸ್ಕಾಂದಮಹಾಪುರಾಣದ ಎರಡನೆಯ ವೈಷ್ಣವಖಂಡದ ವೈಶಾಖಮಾಸ ಮಹಾತ್ಮ್ಯದ ನಾರದಾಂಬರೀಷ ಸಂವಾದದಲ್ಲಿ "ಕೀರ್ತಿಮದ್ದ್ವಿಜಯವರ್ಣನ"ವೆಂಬ ಹನ್ನೊಂದನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

# ಅಥ ದ್ವಾದಶೋಽಧ್ಯಾಯಃ

## ಯಮದುಃಖ ನಿರೂಪಣಂ

ಯಮ ಉವಾಚ :—

ಶೃಣು ಮೇ ವಚನಂ ನಾಥ ಲೋಪಿತೋಽಹಂ ಪಿತಾಮಹ ।
ಮರಣಾದಧಿಕಂ ಮನ್ಯೇ ಮತ್ಪದಸ್ಯ ಚ ಖಂಡನಂ ॥ ೧ ॥
ನಿಯೋಗೇನ ನಿಯೋಗಂ ಹಿ ಕರೋತಿ ಕಮಲಾಸನ ।
ಪ್ರಭೋರ್ವಿತ್ತಂ ಸಮಶ್ನಾತಿ ಸಭವೇತ್ಕಾಷ್ಠಕೀಟಕಃ ॥ ೨ ॥
ಯೋಽಶ್ನಾತಿ ಲೋಭಾದ್ವಿತ್ತಾನಿ ಪ್ರಜ್ಞಾವಾಂಶ್ಚ ಮಹೀಪತೇ ।
ಸ ತಿರ್ಯಗ್ಯೋನಿ ನರಕೇ ಯಾತಿ ಕಲ್ಪಶತತ್ರಯಂ ॥ ೩ ॥
ನಿಃಸ್ಪೃಹೋ ನಾಽಽಚರೇದ್ಯಸ್ತು ನಿಯೋಗಂ ಪದ್ಮಸಂಭವ ।
ಭುಕ್ತ್ವಾ ತು ನರಕಾನ್ ಘೋರಾನ್ ಸಪುಮಾನ್ವಾಯಸೋ ಭವೇತ್ ॥ ೪ ॥

---

## ಕನ್ನಡದ ಅನುವಾದ

### ಯಮದುಃಖನಿರೂಪಣವು

೧. ಯಮನು ಹೇಳುತ್ತಾನೆ:—ಸ್ವಾಮಿಯಾದ ಎಲೈ ಪಿತಾಮಹನೇ! ನನ್ನ ವಿಜ್ಞಾಪನೆಯನ್ನು ಲಾಲಿಸು. ನಾನು ನನ್ನ ಅಧಿಕಾರವನ್ನು ನಡೆಸುವುದರಲ್ಲಿ ಪ್ರಬಲವಾದ ಪ್ರತಿಬಂಧಕವನ್ನು ಎದುರುಗೊಂಡು ಕರ್ತವ್ಯಲೋಪವನ್ನು ಮಾಡಿರುವೆನು. ನನ್ನ ಅಧಿಕಾರದ ಖಂಡನೆಯನ್ನು ಮರಣಕ್ಕಿಂತಲೂ ಅಧಿಕವಾದ ಅವಮಾನವೆಂಬುದಾಗಿ ತಿಳಿಯುತ್ತೇನೆ.

೨. ಎಲೈ ಕಮಲಭವನೇ! ಯಾವ ಸೇವಕನು ಯಜಮಾನನ ಅಪ್ಪಣೆಯಂತೆ ನಡೆದುಕೊಳ್ಳದೆ ಆತನ ವೇತನವನ್ನು ಮಾತ್ರ ತೆಗೆದುಕೊಂಡು ದೇಹ ಪೋಷಣೆಯನ್ನು ಮಾಡಿಕೊಳ್ಳುವನೊ, ಅವನು ಕಾಷ್ಠಕೀಟದ ಜನ್ಮವನ್ನು ಪಡೆಯುವನು.

೩. ಲೋಕೇಶ್ವರನೇ! ಯಾವನು ಪ್ರಜ್ಞಾಶಾಲಿಯಾದರೂ ಧನಲೋಭದಿಂದ ಪರರ ವಿತ್ತವನ್ನು ಅಪಹರಿಸಿ ತಿನ್ನುವನೊ, ಅವನು ಮುನ್ನೂರು ಕಲ್ಪಗಳವರೆಗೂ ತಿರ್ಯಗ್ಜಂತುವಿನ ರೂಪವಾದ ನರಕದಲ್ಲಿ ಕ್ಲೇಶಪಡುವನು.

೪. ಬ್ರಹ್ಮದೇವನೇ! ಯಾವನು ನಿಃಸ್ಪೃಹನಾಗಿ ಸ್ವಾಮಿಯ ಕಾರ್ಯಗೌರವವನ್ನು ನೆರವೇರಿಸದಿರುವನೊ, ಆ ಭೃತ್ಯನು ಘೋರಗಳಾದ ಅನೇಕ ನರಕಗಳನ್ನನುಭವಿಸಿ ಕಡೆಗೆ ಕಾಗೆಯಾಗಿ ಭೂಲೋಕದಲ್ಲಿ ಜನಿಸುವನು.

ಆತ್ಮಕಾರ್ಯಪರೋ ಯಸ್ತು ಸ್ವಾಮಿಕಾರ್ಯಂ ವಿಲುಂಪತಿ ।
ಭವೇದ್ವೇಶ್ಮನಿ ಪಾಪಾತ್ಮಾ ಆಖುಃ ಕಲ್ಪಶತತ್ರಯಂ ॥ ೫ ॥
ನಿಯೋಗೀ ಯಸ್ತು ಭೂತ್ವಾ ವೈ ತಿಷ್ಠನ್ನಿತ್ಯಂ ಭವೇತ್ಮನಿ ।
ಶಕ್ತಸ್ತು ಕಾರ್ಯಕರಣೇ ಮಾರ್ಜಾರೋ ಜಾಯತೇ ನರಃ ॥ ೬ ॥
ಸೋಽಹಂ ದೇವ ತವಾದೇಶಾತ್ ಪ್ರಜಾಧರ್ಮೇಣ ಸಾಧಯೇ ।
ಪುಣ್ಯೇನ ಪುಣ್ಯಕರ್ತಾರಂ ಪಾಪಂ ಪಾಪೇನ ಕರ್ಮಣಾ ॥ ೭ ॥
ಸಮ್ಯಗ್ ವಿಚಾರ್ಯ ಮುನಿಭಿರ್ಧರ್ಮಶಾಸ್ತ್ರನಿಶ್ಚಿತೈಃ ಪ್ರಭೋ ।
ಕಲ್ಪಾದೌ ವರ್ತಮಾನಸ್ಯ ಯಾತನಾದಾಪ ಯನ್ಮಮ ॥ ೮ ॥
ಕರ್ತುಂ ನಿಯೋಗಮೇವಂ ಹಿ ತ್ವದೀಯೋ ನೈವ ಶಕ್ನುಯಾಂ ।
ರಾಜ್ಞಾ ಕೀರ್ತಿಮತಾ ಭಗ್ನೋ ನಿಯೋಗಸ್ತು ಚ ಕ್ಷಿತೌ ॥ ೯ ॥
ಭಯಾದಸ್ಯ ಜಗನ್ನಾಥ ಪೃಥಿವೀಂ ಸಾಗರಾಂಬರಾಂ ।
ವೈಶಾಖಧರ್ಮಸಹಿತಾಂ ಪಾಲಯನ್ವರ್ತತೇ ಕ್ವಚಿತ್ ॥ ೧೦ ॥

೫. ಯಾವ ಸೇವಕನು ತನ್ನ ಕಾರ್ಯಗಳಲ್ಲಿಯೇ ಮಗ್ನನಾಗಿದ್ದುಕೊಂಡು ಸ್ವಾಮಿಕಾರ್ಯಗಳನ್ನು ಹಾಳುಗೆಡಿಸುವನೋ, ಆ ಪಾಪಿಯು ಮುನ್ನೂರು ಕಲ್ಪಗಳ ವರೆಗೂ ಮನೆಗಳಲ್ಲಿ ಇಲಿಯಾಗಿ ಜನಿಸುವನು.

೬. ಯಾವ ಮಾನವನು ಸೇವಕತನವನ್ನು ಸ್ವೀಕರಿಸಿ ಯಾವಾಗಲೂ ತನ್ನ ಮನೆಯಲ್ಲಿಯೇ ಇದ್ದುಕೊಂಡು ಕಾರ್ಯವಾಡಲು ಶಕ್ತನಾಗಿದ್ದರೂ ಸ್ವಾಮಿಯ ನಿಯೋಗವನ್ನು ಸಾಧಿಸುವುದಿಲ್ಲವೋ, ಅವನು ಬೆಕ್ಕಿನ ಜನ್ಮವನ್ನು ತಾಳುವನು.

೭. ಎಲೈ ದೇವೋತ್ತಮನೆ! ಅಂತೆಯೇ ನಾನೂ ಒಬ್ಬ ಸೇವಕನು. ನಿನ್ನ ಅಪ್ಪಣೆಯನ್ನನುಸರಿಸಿ ಸಕಲ ಪ್ರಜೆಗಳನ್ನೂ ಧರ್ಮದಿಂದ ಪಾಲಿಸುತ್ತಿರುವೆನು. ಪುಣ್ಯವನ್ನು ಮಾಡುವವರಿಗೆ ಪುಣ್ಯಫಲಗಳನ್ನೂ, ಪಾಪಕರ್ಮ ನಿರತರಾದವರಿಗೆ ನರಕಾದಿ ಕ್ಲೇಶಗಳನ್ನೂ ಕೊಡುತ್ತಿರುವೆನು.

೮. ಓ ಲೋಕನಾಥ! ಕಲ್ಪದ ಆದಿಯಲ್ಲಿ ನೀನು ಧರ್ಮಶಾಸ್ತ್ರಗಳಲ್ಲಿ ನಿಷ್ಣಾತರಾದ ಮಹಾಮುನಿಗಳೊಡನೆ ಚೆನ್ನಾಗಿ ಆಲೋಚನೆಯನ್ನುಮಾಡಿ ಈಗ ನಡೆಯುತ್ತಿರುವ ಕಲ್ಪದಲ್ಲಿ ಈ ದಂಡಧಾರಣೆಯ ಕರ್ತವ್ಯವನ್ನೂ, ಶಿಕ್ಷೆಯನ್ನು ವಿಧಿಸುವ ಅಧಿಕಾರವನ್ನೂ ನನಗೆ ಅನುಗ್ರಹಿಸಿರುವೆ.

೯. ಆದರೆ ಇಂತು ನಿನ್ನಿಂದ ಹೊಂದಿರುವ ಈ ಅಪ್ಪಣೆಯನ್ನು ಸಮಗ್ರ ವಾಗಿ ನೆರವೇರಿಸಲು ಈಗ ನಾನು ಕೇವಲ ಅಶಕ್ತನಾಗಿರುವೆನು. ನಿನ್ನ ನಿಗ್ರಹಾನು ಗ್ರಹರೂಪವಾದ ನಿಯೋಗವು ಭೂಲೋಕದಲ್ಲಿ ಕೀರ್ತಿಮಂತನೆಂಬ ಮಹಾ ರಾಜನಿಂದ ಭಗ್ನಪ್ರಾಯವಾಗಿ ಮಾಡಲ್ಪಟ್ಟಿರುವುದು.

೧೦. ಎಲೈ ಲೋಕನಾಥನೆ! ಈ ಯಮದಂಡದ ಭಯದಿಂದಲೇ ಆ ಮಹಾ

॥ ಶ್ರೀಃ ॥

# ಅಥ ದ್ವಾದಶೋಽಧ್ಯಾಯಃ

### ಯಮದುಃಖ ನಿರೂಪಣಂ

ಯಮ ಉವಾಚ :—

ಶೃಣು ಮೇ ವಚನಂ ನಾಥ ಲೋಕೇಶೋಽಹಂ ಪಿತಾಮಹ ।
ಮರಣಾದಧಿಕಂ ಮನ್ಯೇ ಮತ್ಪದಸ್ಯ ಚ ಖಂಡನಂ ॥ ೧ ॥
ನಿಯೋಗೇನ ನಿಯೋಗಂ ಹಿ ಕರೋತಿ ಕಮಲಾಸನ ।
ಪ್ರಭೋರ್ವಿತ್ತಂ ಸಮಶ್ನಾತಿ ಸಭವೇತ್ಕಾಷ್ಠಕೀಟಕಃ ॥ ೨ ॥
ಯೋಽಶ್ನಾತಿ ಲೋಭಾದ್ವಿತ್ತಾನಿ ಪ್ರಜ್ಞಾವಾಂಶ್ಚ ಮಹೀಪತೇ ।
ಸ ತಿರ್ಯಗ್ಯೋನಿ ನರಕೇ ಯಾತಿ ಕಲ್ಪಶತತ್ರಯಂ ॥ ೩ ॥
ನಿಃಸ್ಪೃಹೋ ನಾಽಽಚರೇದ್ಯಸ್ತು ನಿಯೋಗಂ ಪದ್ಮಸಂಭವ ।
ಭುಕ್ತ್ವಾ ತು ನರಕಾನ್ಘೋರಾನ್ ಸಪುಮಾನ್ವಾಯಸೋ ಭವೇತ್ ॥೪॥

---

### ಕನ್ನಡದ ಅನುವಾದ

#### ಯಮದುಃಖನಿರೂಪಣವು

೧. ಯಮನು ಹೇಳುತ್ತಾನೆ:—ಸ್ವಾಮಿಯಾದ ಎಲೈ ಪಿತಾಮಹನೆ! ನನ್ನ ವಿಜ್ಞಾಪನೆಯನ್ನು ಲಾಲಿಸು. ನಾನು ನನ್ನ ಅಧಿಕಾರವನ್ನು ನಡೆಸುವುದರಲ್ಲಿ ಪ್ರಬಲವಾದ ಪ್ರತಿಬಂಧಕವನ್ನು ಎದುರುಗೊಂಡು ಕರ್ತವ್ಯಲೋಪವನ್ನು ಮಾಡಿರುವೆನು. ನನ್ನ ಅಧಿಕಾರದ ಖಂಡನೆಯನ್ನು ಮರಣಕ್ಕಿಂತಲೂ ಅಧಿಕವಾದ ಅವಮಾನವೆಂಬುದಾಗಿ ತಿಳಿಯುತ್ತೇನೆ.

೨. ಎಲೈ ಕಮಲಭವನೆ! ಯಾವ ಸೇವಕನು ಯಜಮಾನನ ಅಪ್ಪಣೆಯಂತೆ ನಡೆದುಕೊಳ್ಳದೆ ಆತನ ವೇತನವನ್ನು ಮಾತ್ರ ತೆಗೆದುಕೊಂಡು ದೇಹಪೋಷಣೆಯನ್ನು ಮಾಡಿಕೊಳ್ಳುವನೊ, ಅವನು ಕಾಷ್ಠಕೀಟದ ಜನ್ಮವನ್ನು ಪಡೆಯುವನು.

೩. ಲೋಕೇಶ್ವರನೆ! ಯಾವನು ಪ್ರಜ್ಞಾಶಾಲಿಯಾದರೂ ಧನಲೋಭದಿಂದ ಪರರ ವಿತ್ತವನ್ನು ಅಪಹರಿಸಿ ತಿನ್ನುವನೊ, ಅವನು ಮುನ್ನೂರು ಕಲ್ಪಗಳವರೆಗೂ ತಿರ್ಯಗ್ಜಂತುವಿನ ರೂಪವಾದ ನರಕದಲ್ಲಿ ಕ್ಲೇಶಪಡುವನು.

೪. ಬ್ರಹ್ಮದೇವನೆ! ಯಾವನು ನಿಃಸ್ಪೃಹನಾಗಿ ಸ್ವಾಮಿಯ ಕಾರ್ಯಗೌರವವನ್ನು ನೆರವೇರಿಸದಿರುವನೊ, ಆ ಭೃತ್ಯನು ಘೋರಗಳಾದ ಅನೇಕ ನರಕಗಳನ್ನನುಭವಿಸಿ ಕಡೆಗೆ ಕಾಗೆಯಾಗಿ ಭೂಲೋಕದಲ್ಲಿ ಜನಿಸುವನು.

ಆತ್ಮಕಾರ್ಯಪರೋ ಯಸ್ತು ಸ್ವಾಮಿಕಾರ್ಯಂ ವಿಲುಂಪತಿ ।
ಭವೇದ್ವೇಶ್ಮನಿ ಪಾಪಾತ್ಮಾ ಆಖುಃ ಕಲ್ಪಶತತ್ರಯಂ ॥ ೫ ॥
ನಿಯೋಗೀ ಯಶ್ಚ ಭುಕ್ತ್ವಾ ವೈ ತಿಷ್ಠನ್ನಿತ್ಯಂ ಭವೇಶ್ಮನಿ ।
ಶಕ್ತಸ್ತು ಕಾರ್ಯಕರಣೇ ಮಾರ್ಜಾರೋ ಜಾಯತೇ ನರಃ ॥ ೬ ॥
ಸೋಽಹಂ ದೇವ ತವಾದೇಶಾತ್ ಪ್ರಜಾಧರ್ಮೇಣ ಪಾಲಯೇ ।
ಪುಣ್ಯೇನ ಪುಣ್ಯಕರ್ತಾರಂ ಪಾಪಂ ಪಾಪೇನ ಕರ್ಮಣಾ ॥ ೭ ॥
ಸಮ್ಯಗ್ ವಿಚಾರ್ಯ ಮುನಿಭಿರ್ಧರ್ಮಶಾಸ್ತ್ರಾನ್ವಿತೈಃ ಪ್ರಭೋ ।
ಕಲ್ಪಾದೌ ವರ್ತಮಾನಸ್ಯ ಯಾತನಾದಾಪ ಯನ್ಮನು ॥ ೮ ॥
ಕರ್ತುಂ ನಿಯೋಗಮೇವಂ ಹಿ ತ್ವದೀಯೋ ನೈವ ಶಕ್ನುಯಾಂ ।
ರಾಜ್ಞಾ ಕೀರ್ತಿಮತಾ ಭಗ್ನೋ ನಿಯೋಗಸ್ತ್ವ ಚ ಕ್ಷಿತೌ ॥ ೯ ॥
ಭಯಾದಸ್ಯ ಜಗನ್ನಾಥ ಪೃಥಿವೀಂ ಸಾಗರಾಂಬರಾಂ ।
ವೈಶಾಖಧರ್ಮಸಹಿತಾಂ ಪಾಲಯನ್ವರ್ತತೇ ಕ್ವಚಿತ್ ॥ ೧೦ ॥

೫. ಯಾವ ಸೇವಕನು ತನ್ನ ಕಾರ್ಯಗಳಲ್ಲಿಯೇ ಮಗ್ನನಾಗಿದ್ದುಕೊಂಡು ಸ್ವಾಮಿಕಾರ್ಯಗಳನ್ನು ಹದಗೆಡಿಸುವನೊ, ಆ ಪಾಪಿಯು ಮುನ್ನೂರು ಕಲ್ಪಗಳವರೆಗೂ ಮನೆಗಳಲ್ಲಿ ಇಲಿಯಾಗಿ ಜನಿಸುವನು.

೬. ಯಾವ ಮಾನವನು ಸೇವಕತನವನ್ನು ಸ್ವೀಕರಿಸಿ ಸದಾವಾಗಲೂ ತನ್ನ ಮನೆಯಲ್ಲಿಯೇ ಇದ್ದುಕೊಂಡು ಕಾರ್ಯಮಾಡಲು ಶಕ್ತನಾಗಿದ್ದರೂ ಸ್ವಾಮಿಯ ನಿಯೋಗವನ್ನು ಸಾಧಿಸುವುದಿಲ್ಲವೊ, ಅವನು ಬೆಕ್ಕಿನ ಜನ್ಮವನ್ನು ತಾಳುವನು.

೭. ಎಲೈ ದೇವೋತ್ತಮನೆ! ಅಂತೆಯೇ ನಾನೂ ಒಬ್ಬ ಸೇವಕನು. ನಿನ್ನ ಅಪ್ಪಣೆಯನ್ನನುಸರಿಸಿ ಸಕಲ ಪ್ರಜೆಗಳನ್ನೂ ಧರ್ಮದಿಂದ ಪಾಲಿಸುತ್ತಿರುವೆನು. ಪುಣ್ಯವನ್ನು ಮಾಡುವವರಿಗೆ ಪುಣ್ಯಫಲಗಳನ್ನೂ, ಪಾಪಕರ್ಮ ನಿರತರಾದವರಿಗೆ ನರಕಾದಿ ಕ್ಲೇಶಗಳನ್ನೂ ಕೊಡುತ್ತಿರುವೆನು.

೮. ಓ ಲೋಕನಾಥ! ಕಲ್ಪದ ಆದಿಯಲ್ಲಿ ನೀನು ಧರ್ಮಶಾಸ್ತ್ರಗಳಲ್ಲಿ ನಿಷ್ಣಾತರಾದ ಮಹಾಮುನಿಗಳೊಡನೆ ಚೆನ್ನಾಗಿ ಆಲೋಚನೆಯನ್ನುಮಾಡಿ ಈಗ ನಡೆಯುತ್ತಿರುವ ಕಲ್ಪದಲ್ಲಿ ಈ ದಂಡಧಾರಣೆಯ ಕರ್ತವ್ಯವನ್ನೂ, ಶಿಕ್ಷೆಯನ್ನು ವಿಧಿಸುವ ಅಧಿಕಾರವನ್ನೂ ನನಗೆ ಅನುಗ್ರಹಿಸಿರುವೆ.

೯. ಆದರೆ ಇಂತು ನಿನ್ನಿಂದ ಹೊಂದಿರುವ ಈ ಅಪ್ಪಣೆಯನ್ನು ಸಮಗ್ರವಾಗಿ ನೆರವೇರಿಸಲು ಈಗ ನಾನು ಕೇವಲ ಅಶಕ್ತನಾಗಿರುವೆನು. ನಿನ್ನ ನಿಗ್ರಹಾನುಗ್ರಹರೂಪವಾದ ನಿಯೋಗವು ಭೂಲೋಕದಲ್ಲಿ ಕೀರ್ತಿಮಂತನೆಂಬ ಮಹಾರಾಜನಿಂದ ಭಗ್ನಪ್ರಾಯವಾಗಿ ಮಾಡಲ್ಪಟ್ಟಿರುವುದು.

೧೦. ಎಲೈ ಲೋಕನಾಥನೆ! ಈ ಯಮದಂಡದ ಭಯದಿಂದಲೇ ಆ ಮಹಾ

ವಿಹಾಯ ಸರ್ವಧರ್ಮಾಂಶ್ಚ ವಿಹಾಯ ಪಿತೃಪೂಜನಂ ।
ವಿಹಾಯಾಽಗ್ನಿಸಪರ್ಯಾಂ ತು ತೀರ್ಥಯಾತ್ರಾದಿ ಸತ್ಕ್ರಿಯಾಃ ॥ ೧೧ ॥
ಯೋಗಸಾಂಖ್ಯಾವುಭೌ ತ್ಯಕ್ತ್ವಾ ತ್ಯಕ್ತ್ವಾ ಪ್ರಾಣನಿರೋಧನಂ ।
ತ್ಯಕ್ತ್ವಾ ಹೋಮಂ ಚ ಸ್ವಾಧ್ಯಾಯಂ ಕೃತ್ವಾ ಪಾಪಾನಿ ಭೂರಿಶಃ ॥೧೨॥
ಪ್ರಯಾಂತಿ ವೈಷ್ಣವಂ ಲೋಕಂ ಕೃತ್ವಾ ವೈಶಾಖಸತ್ಕ್ರಿಯಾಃ ।
ಮನುಜಾಃ ಪಿತೃಭಿಃ ಸಾರ್ಧಂ ತಥೈವ ಚ ಪಿತಾಮಹೈಃ ॥ ೧೩ ॥
ತೇಷಾಮತೀತಪಿತರಃ ಪಿತೄಣಾಂ ಪಿತರಸ್ತಥಾ ।
ತಥಾ ಮಾತಾ ಸಹಾಯಾಂತಿ ತೇಷಾಂ ವೈಜನಕಾದಯಃ ॥ ೧೪ ॥
ತೇಷಾಮಪಿ ಚ ನೇತಾರೋ ಜನಿತ್ರೀಣಾಂ ಚ ಪೂರ್ವಜಾಃ ।
ಏತದ್ದುಃಖಂ ಪುನರ್ದೇವ ಮಮ ಮಸ್ತಕಭೇದನಂ ॥ ೧೫ ॥
ಪ್ರಿಯಾಯಾಃ ಪಿತರೋ ಯಾಂತಿ ಮಾರ್ಜಯಿತ್ವಾ ಲಿಪಿಂ ಮಮ ।
ಪಿತೄಣಾಂ ಬೀಜಜೋ ಯಸ್ತು ಧಾತ್ರ್ಯಾ ಕುಕ್ಷೌ ಧೃತೋ ವಿಭೋ ॥

---

ರಾಜನು ಸಮುದ್ರಪರಿವೇಷ್ಟಿತವಾದ ಭೂಮಂಡಲವನ್ನೆಲ್ಲ ವೈಶಾಖಧರ್ಮ ಸಹಿತವನ್ನಾಗಿ ಮಾಡಿ ಏಕಛತ್ರದಿಂದ ಪಾಲಿಸುತ್ತಲಿರುವನು.

೧೧–೧೩. ಸಕಲ ಧರ್ಮಕಾರ್ಯಗಳನ್ನೂ ಬಿಟ್ಟು, ಪಿತೃದೇವತೆಗಳ ಶ್ರಾದ್ಧಾದಿಗಳನ್ನೂ ತ್ಯಜಿಸಿ, ಅಗ್ನಿಸೇವೆಯನ್ನೂ ತೀರ್ಥಯಾತ್ರೆಯೇ ಮೊದಲಾದ ಧರ್ಮಗಳನ್ನೂ ಮೂಲೆಗೊತ್ತರಿಸಿ, ಕರ್ಮಯೋಗ ಜ್ಞಾನಯೋಗಗಳೆಂಬ ಎರಡು ಮೋಕ್ಷಮಾರ್ಗಗಳನ್ನೂ ಅವಲಂಬಿಸದೆ, ಪ್ರಾಣವಾಯುಗಳ ನಿರೋಧಯುಕ್ತವಾದ ಅಷ್ಟಾಂಗಯೋಗವನ್ನೂ ಅನುಸರಿಸದೆ, ಯಜ್ಞಯಾಗಾದಿಗಳನ್ನೂ, ವೇದಾಧ್ಯಯನಾದಿಗಳನ್ನೂ ಕೈಬಿಟ್ಟು, ಅನಂತಗಳಾದ ಪಾಪಗಳನ್ನುಮಾಡಿದ್ದರೂ ಕೂಡ ಭೂಲೋಕದ ಜನರೆಲ್ಲರೂ ವೈಶಾಖಮಾಸದ ಸತ್ಕ್ರಿಯೆಗಳನ್ನು ಮಾಡುವ ಮಾತ್ರದಿಂದಲೇ ತಮ್ಮ ಪಿತೃಪಿತಾಮಹರೊಂದಿಗೆ ಕೂಡಿಕೊಂಡು ವಿಷ್ಣುಲೋಕವಾದ ವೈಕುಂಠಕ್ಕೆ ಪ್ರಯಾಣಮಾಡುತ್ತಿರುವರು.

೧೪. ಅವರ ಅತೀತ ಪಿತೃಗಳೂ, ಆ ಆಪಿತೃಗಳ ಪಿತೃಗಳೂ, ಮಾತಾಮಹರೂ, ಆ ಮಾತಾಮಹರ ತಾಯಿತಂದೆಗಳೂ ಎಲ್ಲರೂ ವೈಕುಂಠವಾಸಿಗಳಾಗುತ್ತಿರುವರು.

೧೫. ಅವರ ಜನಕಜನನಿಯರೂ, ಜನನಿಯರ ಪೂರ್ವಜರೂ ಸಹ ಮುಕ್ತರಾಗಿ ವೈಕುಂಠವನ್ನು ಸೇರುತ್ತಿರುವರು. ಎಲೈ ಸ್ವಾಮಿಯೆ! ಈ ದುಃಖವೊಂದೇ ನನ್ನ ತಲೆಯನ್ನು ಒಡೆದುಹಾಕುತ್ತಿರುವುದು.

೧೬. ಹಾಗೆಯೇ ವೈಶಾಖವ್ರತಕರ್ತೃಗಳ ಪತ್ನಿಯರ ಪಿತೃಗಳೂ ನನ್ನ ಪುಣ್ಯಾಪಾಪಗಳ ಗಣನೆಯನ್ನೆಲ್ಲ ತೊಡೆದುಹಾಕಿ ವೈಕುಂಠಕ್ಕೆ ಹೋಗುವರು.

ಯದಂಶೇನ ಕೃತಂ ಕರ್ಮ ತದಂಶೇನೈವ ಭುಜ್ಯತೇ ।
ತನ್ನಿರಸ್ಯ ಕೃತಂ ಸರ್ವಂ ಜಾನಂಸ್ತ್ವೇಕಃ ಕುಲೇ ತು ಯಃ ॥ ೧೭ ॥
ತಾರಯೇತ್ತಾನ್ಪೃಥಕ್ ಪಕ್ಷಾನ್ ಷಡ್ವಿಂಶೋಽಪ್ಯರ್ಯಲಂ ವಿಭೋ ।
ಪ್ರಿಯಾಯಾಶ್ಚಾಪಿ ವೈ ತಾತ ಸರ್ವೇ ವೈ ಕುಕ್ಷಿಸಂಭವಾಃ ॥ ೧೮ ॥
ತೇಽಪಿ ಸರ್ವೇ ಜಗನ್ನಾಥ ಯಾಂತಿ ವಿಷ್ಣೋಃ ಪರಂ ಪದಂ ।
ನ ಮೇ ಪ್ರಯೋಜನಂ ದೇವ ನಿಯೋಗೇನೇದೃಶೇನ ವೈ ॥ ೧೯ ॥
ವೈಶಾಖಧರ್ಮನಿರತಃ ಸಮಾಂ ತ್ಯಕ್ತ್ವಾ ವ್ರಜೇದ್ಧರಿಂ ।
ತ್ರಿಃಸಪ್ತಕುಲಮುದ್ಧೃತ್ಯ ತ್ಯಕ್ತಪಾಪೋಽತಿಶೋಭನಃ ॥ ೨೦ ॥
ಸ ತ್ಯಕ್ತ್ವಾ ಮಮ ಮಾರ್ಗಂ ಹಿ ಪ್ರಯಾತಿ ಹರಿಮಂದಿರಂ ।
ನಯಜ್ಞೈಸ್ತಾದೃಶೈರ್ದೇವ ಗತಿಂ ಪ್ರಾಪ್ನೋತಿ ಮಾನವಃ ॥ ೨೧ ॥

ಪಿತೃಗಳ ಬೀಜದಿಂದ ಹೆಂಡತಿಯ ಗರ್ಭದಲ್ಲಿ ಬೆಳೆಯುತ್ತಿರುವ ಶಿಶುವೂ ಕೂಡ ಮೋಕ್ಷಪದವಿಯನ್ನು ಹೊಂದುವುದು.

೧೭–೧೯. ಯಾವ ನಿಯಮದಿಂದ ಕಾರ್ಯಗಳನ್ನು ಮಾಡುವನೊ, ಮನುಷ್ಯನು ಆ ನಿಯಮಗಳಿಂದಲೇ ಕರ್ಮಫಲಗಳನ್ನು ಅನುಭವಿಸಬೇಕೆಂಬುದು ಸಾಮಾನ್ಯ ನಿಯಮವಾಗಿರುವುದು. ಈಗ ಭೂಮಿಯಲ್ಲಿ ನಡೆಯುತ್ತಿರುವ ವ್ಯಾಪಾರವೆಲ್ಲವೂ ಈ ನಿಯಮಕ್ಕೆ ಕೇವಲ ವಿರುದ್ಧವಾಗಿಯೇ ಇರುವುದು. ಒಂದು ಕುಲದಲ್ಲಿ ಯಾವ ಒಬ್ಬನಾದರೂ ವೈಶಾಖಧರ್ಮಗಳನ್ನು ತಿಳಿದು ಆಚರಿಸಿದರೆ ಅವನು ಉಭಯ ಕುಲಗಳಲ್ಲಿಯೂ ಇಪ್ಪತ್ತಾರು ತಲೆಗಳಿಗಿಂತ ಹೆಚ್ಚಾಗಿಯೇ ಪೂರ್ವಜರನ್ನು ಸಂಸಾರಬಂಧನದಿಂದ ಬಿಡಿಸುವನು. ಸರ್ವವ್ಯಾಪಕನಾದ ಎಲೈ ಸ್ವಾಮಿಯೇ! ಓ ಜಗನ್ನಾಯಕನೇ! ಅವನ ಹೆಂಡತಿಯ ಗರ್ಭದಿಂದ ಮುಂದಕ್ಕೆ ಬೆಳೆಯುವ ಸಂತಾನದಲ್ಲಿರುವವರೂ ಕೂಡ ವಿಷ್ಣುವಿನ ಜರಾಶೋಕವರ್ಜಿತವಾದ ಪರಮಪದವನ್ನು ಸೇರುವರು. ಆದುದರಿಂದ ಈಗ ನನಗೆ ಯಾವ ಕೆಲಸವೂ ಇಲ್ಲದಂತಾಗಿದೆ. ನೀನು ಕೊಟ್ಟಿರುವ ಶಾಸನಾಧಿಕಾರದಿಂದ ನನಗೆ ಯಾವ ಪ್ರಯೋಜನವೂ ಇಲ್ಲವಾಗಿದೆ.

೨೦. ವೈಶಾಖಮಾಸದ ಧರ್ಮಗಳಲ್ಲಿ ನಿರತನಾಗಿರುವ ಮನುಷ್ಯನು ಸಮಸ್ತಪಾಪಗಳನ್ನೂ ಕಳೆದುಕೊಂಡು ದಿವ್ಯತೇಜಸ್ಸಿನಿಂದ ಕೂಡಿದವನಾಗಿ ನನ್ನನ್ನು ದೂರದಲ್ಲಿಯೇ ಬಿಟ್ಟು ಇಪ್ಪತ್ತೊಂದು ಕುಲಗಳನ್ನೂ ಉದ್ಧರಿಸಿ ತಾನೂ ವಿಷ್ಣುಲೋಕಕ್ಕೆ ಹೊರಟುಹೋಗುವನು.

೨೧. ನರಕದ ಮಾರ್ಗವನ್ನೇ ಬಿಟ್ಟು ಆ ಪುಣ್ಯಶಾಲಿಯು ಶ್ರೀಹರಿಯ ನಿವಾಸವಾದ ವೈಕುಂಠಕ್ಕೆ ಹೋಗುವನು. ಎಲೈ ದೇವದೇವನೆ! ಯಾಗ ಯಜ್ಞ

ಸರ್ವತೀರ್ಥೈರ್ನ ದಾನಾದ್ಯೈರ್ನ ತಪೋಭಿಶ್ಚ ನ ವ್ರತೈಃ ।
ಅಪಿ ವಾ ಸಕಲೈರ್ಧರ್ಮೈರ್ಯರ್ಯುಕ್ತೋ ನಾಽಽಪ್ನೋತಿ ತಾಂ ಗತಿಂ ॥೨೨॥

ಪ್ರಯಾಗಪಾತಾದ್ರಣಮಧ್ಯಪಾತಾ
ದ್ಭೃಗೋಶ್ಚ ಪಾತಾನ್ಮರಣಾಚ್ಚ ಕಾಶ್ಯಾಂ ।
ನತಾಂ ಗತಿಂ ಯಾಂತಿ ಜನಾಶ್ಚ ಸರ್ವೇ
ವೈಶಾಖನಿಷ್ಠೇನ ಚ ಯಾ ಪ್ರಪದ್ಯತೇ ॥ ೨೩ ॥

ಪ್ರಾತಃ ಸ್ನಾತ್ವಾ ದೇವಪೂಜಾಂ ಚ ಕೃತ್ವಾ
ಶೃತ್ವಾ ಕಥಾಂ ಮಾಸಮಾಹಾತ್ಮ್ಯಸಂಜ್ಞಾಂ ।
ಧರ್ಮಾನ್ಕೃತ್ವಾ ಚೋಚಿತಾನ್ವೈಷ್ಣವಾಂಶ್ಚ
ಸ ವೈ ಭವೇದ್ವಿಷ್ಣುಲೋಕೈಕನಾಥಃ ॥ ೨೪ ॥

ಅಪ್ರಮಾಣಮಹಂ ಮನ್ಯೇ ಲೋಕಂ ವಿಷ್ಣೋರ್ಜಗತ್ಪತೇಃ ।
ಯೇನ ಪೂರ್ಯೇತ ಕೋಟ್ಯೋಘೈಃ ಸರ್ವತಃ ಕಮಲಾಸನ ॥ ೨೫ ॥

ಗಳನ್ನು ಮಾಡಿದರೂ ಮನುಷ್ಯನು ಅಂತಹ ಉತ್ತಮ ಗತಿಯನ್ನು ಎಂದಿಗೂ ಹೊಂದಲಾರನು.

೨೨. ಸಕಲತೀರ್ಥಗಳ ಸೇವನೆಯಿಂದಲೂ, ಸಮಸ್ತದಾನಾದಿ ಸತ್ಕ್ರಿಯೆಗಳಿಂದಲೂ, ಉಗ್ರತಪಸ್ಸುಗಳಿಂದಲೂ, ವ್ರತಾಚರಣೆಗಳಿಂದಲೂ, ಅಥವಾ ಇವುಗಳೆಲ್ಲವನ್ನೂ ಸಾಂಗವಾಗಿ ನೆರವೇರಿಸುವ ಸಮಗ್ರಪುಣ್ಯದಿಂದಲೂ ಕೂಡ ಇಂತಹ ಸದ್ಗತಿಯನ್ನು ಪಡೆಯಲಾರನು.

೨೩. ವೈಶಾಖಮಾಸಧರ್ಮದಲ್ಲಿ ಸಕಲಜನರೂ ನಿಷ್ಠರಾಗಿ ಯಾವ ಗತಿಯನ್ನು ಪಡೆಯುವರೊ, ಅದನ್ನು ಮತ್ತೊಬ್ಬನು ಪ್ರಯಾಗದಲ್ಲಿ ದೇಹವನ್ನು ಬಿಡುವುದರಿಂದಾಗಲಿ, ಯುದ್ಧರಂಗದಲ್ಲಿ ವೀರನಾಗಿ ಸಾಯುವುದರಿಂದಾಗಲಿ, ಪರ್ವತಶಿಖರದಿಂದ ಹಾರುವುದರಿಂದಾಗಲಿ, ಕಾಶೀಕ್ಷೇತ್ರದಲ್ಲಿ ಮೃತಿಯನ್ನು ಹೊಂದುವುದರಿಂದಾಗಲಿ ಎಂದಿಗೂ ಪಡೆಯಲಾರನು.

೨೪. ವೈಶಾಖಮಾಸದಲ್ಲಿ ಪ್ರಾತಃಕಾಲದಲ್ಲಿ ಬಹಿಸ್ತೀರ್ಥಗಳಲ್ಲಿ ಸ್ನಾನವನ್ನು ಮಾಡಿಕೊಂಡು ಶ್ರೀಮನ್ನಾರಾಯಣನ ಪೂಜೆಯನ್ನು ನೆರವೇರಿಸಿ ಮಾಸಮಾಹಾತ್ಮ್ಯೆಯ ಚರಿತ್ರೆಯನ್ನು ಶ್ರದ್ಧೆಯಿಂದ ಕೇಳಿ ವಿಷ್ಣುಭಕ್ತರಿಗೆ ಸಮಯೋಚಿತಗಳಾದ ಧರ್ಮಕಾರ್ಯಗಳನ್ನು ಯಾವನು ನೆರವೇರಿಸುತ್ತಿರುವನೊ ಅವನು ವೈಕುಂಠ ಲೋಕದಲ್ಲಿ ಯಾಜಮಾನ್ಯವನ್ನು ಪಡೆಯುವನು.

೨೫. ಎಲೈ ಕಮಲಸಂಭವನೆ! ಜಗನ್ನಾಯಕನಾದ ಮಹಾವಿಷ್ಣುವಿನ ಲೋಕವು ಪ್ರಮಾಣರಹಿತವಾಗಿರುವುದೆಂದು ತಿಳಿಯುತ್ತೇನೆ. ಸಮಸ್ತ

ಮಾಧವಾವಸಥೇನೇಹ ಸಮುಕ್ತೇನ ಪಿತಾಮಹ ।
ವಿಕರ್ಮಸ್ಥಾಽವಿಕರ್ಮಸ್ಥಾಃ ಶುಚಯೋಽಶುಚಯಸ್ತಥಾ ।
ಕೃತ್ವಾ ವೈಶಾಖಕೃತ್ಯಾನಿ ಲೋಕಾ ಯಾಂತಿ ನೃಪಾಽಽಜ್ಞಯಾ ॥ ೩೬ ॥
ಯೋಽಸ್ಮಾಕಂ ಹಿ ಮಹಚ್ಛತ್ರುರ್ಭವತಾಂ ಚ ವಿಶೇಷತಃ ।
ನಿಗ್ರಾಹ್ಯೋ ಜಗತಾಂ ನಾಥ ಭವತಾಽಸೌ ಮಹೀಪತಿಃ ॥ ೩೭ ॥
ಹಿತ್ವಾ ಹಿ ಸಕಲಾನ್ ಧರ್ಮಾನ್ ಸಕೃದ್ವೈಶಾಖಸ್ನಾನತಃ ।
ಅಸಂಸ್ಕೃತಜನಾ ಯಾಂತಿ ವೈಕುಂಠಂ ಹರಿಮಂದಿರಂ ॥ ೩೮ ॥
ಅಸ್ಮಾಭಿಸ್ತು ಕೃತೋಪೇಕ್ಷೋ ವಿಷ್ಣುಪಾದೈಕಸಂಶ್ರಯಃ ।
ಸಮಸ್ತಂ ನೇಷ್ಯತೇ ಲೋಕಂ ಪಾರ್ಥಿವೋ ನಾತ್ರ ಸಂಶಯಃ ॥ ೩೯ ॥
ವಿಷದಂಡಪಟೋ ಹ್ಯದ್ಯ ತವ ಪದ್ಭ್ಯಾಂ ನಿವೇದಿತಃ ।
ಲೋಕಪಾಲತ್ವಮತುಲಮಾರ್ಜಿತಂ ತೇನ ಭೂಭುಜಾ ॥ ೪೦ ॥

---

ಭೂಮಂಡಲದಿಂದಲೂ ಕೋಟಿಗಟ್ಟಲೆಯಾಗಿ ಜನರು ಅಲ್ಲಿಗೆ ಹೋಗುತ್ತಿದ್ದರೂ ಆ ಪ್ರದೇಶವು ಎಂದಿಗೂ ಜನಪೂರಿತವಾಗುವುದಿಲ್ಲವಷ್ಟೆ.

೩೬. ಸಕಲವೈಕುಂಠವೂ ಶ್ರೀಮನ್ನಾರಾಯಣನಿಗೆ ನಿವಾಸವಾಗಿರುವುದರಿಂದ ಜಗತ್ಸೃಷ್ಟಿಕಾರಣನಾದ ಆತನನ್ನೇ ನಿಷಿದ್ಧಕರ್ಮಕರ್ತರೂ, ವಿಹಿತ ಕರ್ಮಾನುಸಾರಿಗಳೂ, ಶುಚಿಯಾದವರೂ, ಅಶುಚಿಪುರುಷರೂ—ಎಲ್ಲರೂ ಈ ವೈಶಾಖವ್ರತವೊಂದನ್ನು ಮಾತ್ರ ಮಾಡಿ ಆ ಮಹಾರಾಜನ ಆಜ್ಞೆಯಂತೆ ವೈಕುಂಠವನ್ನು ಸೇರುವವರಾಗಿರುವರು.

೩೭. ಯಾವನು ನಮಗೂ ಪ್ರಬಲನಾದ ಶತ್ರುವಾಗಿರುವನೋ, ವಿಶೇಷವಾಗಿ ಸ್ವರ್ಗವಾಸಿಗಳಾದ ನಿಮಗೂ ಶತ್ರುವಾಗಿರುವನೋ, ಅಂತಹ ಕೀರ್ತಿಮಂತ ಮಹಾರಾಜನನ್ನು ಲೋಕನಾಥನಾದ ನೀನೇ ನಿಗ್ರಹಿಸಬೇಕಾಗಿರುವುದು.

೩೮. ವೇದಗಳಲ್ಲಿಯೂ, ಶಾಸ್ತ್ರಗಳಲ್ಲಿಯೂ ಹೇಳಿರುವ ಸಮಸ್ತಧರ್ಮಗಳನ್ನು ಬಿಟ್ಟ ಮನುಷ್ಯರೂ, ಸಂಸ್ಕಾರರಹಿತರೂ ಒಂದುಸಲ ಮಾತ್ರವಾದರೂ ವೈಶಾಖಮಾಸದಲ್ಲಿ ಪ್ರಾತಃಸ್ನಾನವನ್ನು ಮಾಡುವುದರಿಂದ ವಿಷ್ಣುನಿವಾಸವಾದ ವೈಕುಂಠವನ್ನು ಹೊಂದಿ ಸುಖಿಸುವರು.

೩೯–೪೦. ಈ ಸಮಯದಲ್ಲಿ ನಾವು ಆತನ ವಿಷಯವಾಗಿ ಉದಾಸೀನತೆಯನ್ನು ತಾಳಿದೆವಾದರೆ, ಶ್ರೀಹರಿಯ ಪಾದಗಳಲ್ಲಿಯೇ ಏಕಾಗ್ರಭಕ್ತಿಯುಳ್ಳ ಆ ರಾಜನು ನಿಸ್ಸಂದೇಹವಾಗಿಯೂ ಭೂಲೋಕದ ಸಕಲ ಜನರನ್ನೂ ವೈಕುಂಠಕ್ಕೆ ಕಳುಹಿಸಿಕೊಡುವನೆಂಬುದು ನಿಶ್ಚಯವು. ಇಗೋ! ನಿನ್ನಿಂದ ಪಡೆದ ಅಧಿಕಾರದ ಚಿಹ್ನೆಗಳಾದ ದಂಡವನ್ನೂ ಪಟವನ್ನೂ ನಿನ್ನ ಪಾದಕಮಲಗಳಲ್ಲಿ ಸಮರ್ಪಿಸುತ್ತಿರುವೆನು. ಆ ಮಹಾರಾಜನೇ ಸಕಲ ಲೋಕಪಾಲಕರ ಅಸಮಾನವಾದ ಅಧಿಕಾರವನ್ನೂ ಸಂಪಾದಿಸಿಕೊಂಡಿರುವನು.

**ಕಿಮಪತ್ಯೇನ ಜಾತೇನ ಮಾತುಃ ಕ್ಲೇಶಕರೇಣ ವೈ ।**
**ಯೋ ನ ಪಾತಯತೇ ಶತ್ರುಂ ಜ್ಯೇಷ್ಠಮಾಸೀವ ಭಾಸ್ಕರಃ ॥ ೩೧ ॥**
**ವೃಥಾ ಸತಾ ಹಿ ಯುವತಿರ್ಜಾತಾ ಚೇದ್ಧಿ ಕುಪುತ್ರಿಣೀ ।**
**ನ ತಸ್ಯಾಃ ಸ್ಫುರತೇ ಕೀರ್ತಿರ್ಘನಸ್ಯೇವ ಶತಹ್ರದಾ ॥ ೩೨ ॥**
**ಯತ್ಪಿತುರ್ನೋದ್ಧರೇತ್ಪಾಪಾದ್ವಿದ್ಯಯಾ ವಾ ಬಲೇನ ವಾ ।**
**ಮಾತುರ್ಜಠರಜೋ ರೋಗಃ ಸಪ್ರಸೂತೋ ಧರಾತಲೇ ॥ ೩೩ ॥**
**ಧರ್ಮೋ ಚಾರ್ಥೋ ಚ ಕಾಮೋ ಚ ಯತ್ರ್ರೀತೀಪ್ರೋ ಭವೇತ್ಸುತಃ ।**
**ಮಾತೃಹಾ ಹ್ಯುಚ್ಯತೇ ಸದ್ಭಿಃ ಸಪುತ್ರಃ ಪುರುಷಾಧಮಃ ॥ ೩೪ ॥**
**ತನ್ಮಾತಾ ನೃಪಪತ್ನೀ ಚ ಲೋಕವಿಖ್ಯಾತಸತ್ಕ್ರಿಯಾ ॥ ೩೫ ॥**
**ಏಕೈವ ವೀರಸೂರ್ಲೋಕೇ ವೀರಃ ಸನ್ನಾತ್ರಸಂಶಯಃ ।**
**ಯಥಾ ವೈ ಕೀರ್ತಿಮಾನ್‌ಜಾತೋ ಮಲ್ಲಿಷೇರ್ಮಾರ್ಜನಾಯ ವೈ ॥ ೩೬ ॥**

---

೩೧. ಜ್ಯೇಷ್ಠಮಾಸದ ಮಧ್ಯಾಹ್ನಸೂರ್ಯನು ತನ್ನ ಬಿಸಿಲಿನ ಬೇಗೆಯಿಂದ ಜನರನ್ನು ನೆಲಕ್ಕೆ ಬೀಳಿಸುವಂತೆ ಯಾವನು ಶತ್ರುಗಳನ್ನು ನಿಗ್ರಹಿಸಲಾರನೊ, ಅಂತಹ ಮನುಷ್ಯನು ಹುಟ್ಟುವುದರಿಂದ ಪ್ರಯೋಜನವೇನು? ನಿಜವಾಗಿಯೂ ಆತನು ತಾಯಿಗೆ ಪ್ರಸವವೇದನೆಯನ್ನು ಮಾತ್ರ ಕೊಡುವವನೇ ಸರಿ.

೩೨. ನೀಚಪುತ್ರನನ್ನು ಪಡೆದ ಯುವತಿಯು ಸಂತತಿಹೀನಳಾದ ಸ್ತ್ರೀಯೊಡನೆಯೇ ಗಣಿಸಲ್ಪಡುವಳಲ್ಲವೆ. ಅವಳ ಕೀರ್ತಿಯು ಮೇಘಜಾಲದಿಂದ ಮರೆಮಾಚಲ್ಪಟ್ಟ ಮಿಂಚಿನ ಬಳ್ಳಿಯಂತೆ ಪ್ರಸಿದ್ಧಿಯನ್ನು ಹೊಂದಲಾರದು.

೩೩. ಯಾವನು ವಿದ್ಯೆಯಿಂದಾಗಲಿ ಪರಾಕ್ರಮದಿಂದಾಗಲಿ ತಂದೆಯನ್ನು ನರಕದಿಂದ ಉದ್ಧಾರಮಾಡಲಾರನೊ, ಅವನು ಭೂಲೋಕದಲ್ಲಿ ನಿಶ್ಚಯವಾಗಿಯೂ ತಾಯಿಯ ಹೊಟ್ಟೆಯೊಳಗಿನ ರೋಗವೇ ರೂಪುಗೊಂಡು ಹುಟ್ಟಿರುವವನು.

೩೪. ಯಾವ ಪುತ್ರನು ಧರ್ಮ, ಅರ್ಥ ಮತ್ತು ಕಾಮಗಳೆಂಬ ಮೂರು ಪುರುಷಾರ್ಥಗಳನ್ನು ಮೊದಲು ಸಾಧಿಸದೆ ಪರಾಙ್ಮುಖನಾಗುವನೊ, ಅಂತಹನನ್ನು ಸಜ್ಜನರು ಮಾತೃಘಾತಕನೆಂದು ಕರೆಯುವರು. ಅವನು ನಿಜವಾಗಿಯೂ ಮನುಷ್ಯಾಧಮನು.

**೩೫–೩೬. ಎಲೈ ಬ್ರಹ್ಮದೇವನೇ! ಆ ಮಹಾರಾಜನ ತಾಯಿಯು ಮಹಾರಾಣಿಯಾಗಿರುವಳು. ಆಕೆಯು ಲೋಕದಲ್ಲಿ ಪ್ರಖ್ಯಾತಗಳಾದ ಸತ್ಕಾರ್ಯಗಳನ್ನು ಮಾಡಿರುವಳು. ಆಕೆಯೊಬ್ಬಳೇ ಇಂದು ಭೂಲೋಕದಲ್ಲಿ ವೀರಮಾತೆಯಾಗಿರುವಳು. ಆತನೊಬ್ಬನೇ ವೀರನೆಂಬುದರಲ್ಲಿ ಸಂದೇಹವಿಲ್ಲ. ಪೂರ್ವಕರ್ಮಾನು**

ನೇದಂ ವ್ಯವಸಿತಂ ದೇವ ಕೇನಚಿತ್ ಕ್ಷತ್ರಿಯೇಣ ಹಿ ।
ಪುರಾಣೇಷು ಜಗನ್ನಾಥ ನ ಶ್ರುತಂ ಪಟಿಮಾರ್ಜನಂ ॥ ೩೭ ॥

ಸೋಽಹಂ ನ ಜಾನಾಮಿ ಜಗತ್ಪತೀಶ
ಋತೇ ಕ್ಷಿತೀಶಂ ಹರಿತತ್ಪರಂ ತಂ ।
ಪ್ರಬೋಧಯಂತಂ ಪಟಿಹಂ ಸುಘೋಷಾ
ದ್ವಿಲೋಪಯಾನಂ ಮಮ ವೇಶ್ಮಮಾರ್ಗಂ ॥ ೩೮ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ದ್ವಿತೀಯೇ ವೈಷ್ಣವಖಂಡೇ ವೈಶಾಖಮಾಸಮಾಹಾತ್ಮ್ಯೇ ನಾರದಾಂಬರೀಷಸಂವಾದೇ
"ಯಮದುಃಖನಿರೂಪಣಂ" ನಾಮ ದ್ವಾದಶೋಽಧ್ಯಾಯಃ

ಸಾರವಾಗಿ ಬರೆದಿಟ್ಟ ನನ್ನ ಲಿಪಿಯನ್ನು ಕೂಡ ಆತನು ತೊಡೆದುಹಾಕಿ ಸತ್ಕೀರ್ತಿಯನ್ನು ಪಡೆದಿರುವನು.

೩೭. ಈ ವಿಧವಾದ ಕಾರ್ಯವು ಹಿಂದೆ ಯಾವ ಕ್ಷತ್ರಿಯನಿಂದಲೂ ಮಾಡಲ್ಪಟ್ಟಿರಲಿಲ್ಲ. ಲೋಕೇಶ್ವರನೆ! ಯಾವ ಪುರಾಣಗಳಲ್ಲಿಯೂ ಈ ಪ್ರಕಾರವಾಗಿ ಯಮಧರ್ಮರಾಜನ ಕರ್ಮಲಿಪಿಯನ್ನು ಯಾರೂ ತೊಡೆದುಹಾಕಿದಂತೆ ಕಥೆಗಳನ್ನು ಈವರೆಗೆ ಕೇಳಿಯೂ ಇರುವುದಿಲ್ಲವು.

೩೮. ಎಲೈ ಲೋಕಪಾಲಕನಾಯಕನೆ! ಹೀಗೆ ಸನಾತನವೆಂಬ ಶ್ರೀಹರಿ ತತ್ಪರನಾದ ಆ ಮಹಾರಾಜನೊಬ್ಬನನ್ನು ಬಿಟ್ಟು ಮತ್ತೊಬ್ಬನನ್ನು ನಾನು ಕಂಡು ಕೇಳಿಲ್ಲವು. ತನ್ನ ಭೇರಿಯ ನಾದದಿಂದ ವೈಶಾಖಧರ್ಮಗಳನ್ನು ದೇಶದ ಆದ್ಯಂತದಲ್ಲಿಯೂ ಪ್ರಖ್ಯಾತಿಗೊಳಿಸಿ ನನ್ನ ನಿವಾಸವಾದ ನರಕಲೋಕದ ಮಾರ್ಗವೇ ಅಳಿಸಿಹೋಗುವಂತೆ ಆತನು ಮಾಡುತ್ತಿರುವನು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಎರಡನೆಯ ವೈಷ್ಣವಖಂಡದ ವೈಶಾಖಮಾಸಮಾಹಾತ್ಮ್ಯದ
ನಾರದಾಂಬರೀಷ ಸಂವಾದದಲ್ಲಿ "ಯಮದುಃಖನಿರೂಪಣ"ವೆಂಬ
ಹನ್ನೆರಡನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥ ತ್ರಯೋದಶೋಽಧ್ಯಾಯಃ

### ಯಮುದುಃಖಸಾಂತ್ವನಂ

ಬ್ರಹ್ಮೋವಾಚ :—

ಕಿಮಾಶ್ಚರ್ಯಂ ತ್ವಯಾ ದೃಷ್ಟಂ ಕಿಮರ್ಥಂ ಖಿದ್ಯತೇ ಭವಾನ್ ।
ಸದ್ಗುಣೇಷು ಕೃತಸ್ತ್ವಾಪಃ ಸ ತಾಪೋ ಮರಣಾಂತಿಕಃ ॥ ೧ ॥
ತಸ್ಯೋಚ್ಚಾರಣಮಾತ್ರೇಣ ಪ್ರಾಪ್ಯತೇ ಪರಮಂ ಪದಂ ।
ನ ಗಚ್ಛಂತಿ ಹರೇರ್ಲೋಕಂ ಕಥಂ ಭೂಪಸ್ಯ ಶಾಸನಾತ್ ॥ ೨ ॥

ಏಕೋಽಪಿ ಗೋವಿಂದ ಕೃತಃ ಪ್ರಣಾಮಃ
ಶತಾಶ್ವಮೇಧಾವಭೃಥೇನ ತುಲ್ಯಃ ।
ಯದಸ್ಯ ಕರ್ತಾ ಪುನರೇತಿ ಜನ್ಮ
ಕೃತಪ್ರಣಾಮೋ ನ ಪುನರ್ಭವಾಯ ॥ ೩ ॥

ಕುರುಕ್ಷೇತ್ರೇಣ ಕಿಂ ತಸ್ಯ ಸರಸ್ವತ್ಯಾ ಚ ಕಿಂ ತಥಾ ।
ಜಿಹ್ವಾಗ್ರೇ ವರ್ತತೇ ಯಸ್ಯ ಹರಿರಿತ್ಯಕ್ಷರದ್ವಯಂ ॥ ೪ ॥

### ಕನ್ನಡದ ಅನುವಾದ

#### ಯಮುದುಃಖಸಾಂತ್ವನ

೧. ಬ್ರಹ್ಮದೇವನು ಹೇಳುತ್ತಾನೆ :—ಅಯ್ಯಾ ಯಮನೇ ! ನೀನು ನೋಡಿದುದರಲ್ಲಿ ಆಶ್ಚರ್ಯಕರವಾದುದೇನಿರುವುದು? ಈ ವಿಧವಾಗಿ ನೀನು ಏತಕ್ಕೆ ದುಃಖಪಡುತ್ತಿರುವೆ? ಸಜ್ಜನರ ಸಮೂಹದಲ್ಲಿ ಮಾಡಿದ ಅಪರಾಧವು ಆಮರಣಾಂತವೂ ಮನುಷ್ಯನಿಗೆ ದುಃಖವನ್ನುಂಟುಮಾಡುತ್ತಿರುವುದು.

೨. ಆ ಪರಮಾತ್ಮನ ನಾಮವನ್ನು ಉಚ್ಚರಿಸುವ ಮಾತ್ರದಿಂದಲೇ ಪರಮಪದವು ಮನುಷ್ಯರಿಗೆ ಲಭಿಸುವುದು ಎಂದಮೇಲೆ ಮಹಾರಾಜನ ಅಪ್ಪಣೆಯನ್ನನುಸರಿಸಿ ವೈಶಾಖಮಾಸಧರ್ಮಗಳನ್ನಾಚರಿಸಿದವರು ಹೇಗೆ ತಾನೆ ವಿಷ್ಣುಲೋಕವನ್ನು ಪಡೆಯದಿದ್ದಾರು ?

೩. ಪರಮಾತ್ಮನಿಗೆ ಮಾಡಿದ ಒಂದೊಂದು ನಮಸ್ಕಾರವೂ ನೂರು ಅಶ್ವಮೇಧಯಜ್ಞಗಳನ್ನುಮಾಡಿ ಅವಭೃಥಸ್ನಾನವನ್ನಾಚರಿಸಿದ ಪುಣ್ಯಕ್ಕೆಣೆಯಾಗಿರುವುದು. ಅಂತಹ ಯಜ್ಞಗಳನ್ನು ಮಾಡಿದ ಮನುಷ್ಯನೂ ಪುನರ್ಜನ್ಮವನ್ನು ಪುಣ್ಯಕ್ಷಯವಾದೊಡನೆ ಪಡೆಯುವನು. ಆದರೆ ಶ್ರೀಕೃಷ್ಣನಿಗೆ ಮಾಡಿದ ಪ್ರಣಾಮವು ಜನನರೂಪವಾದ ಸಂಸಾರವನ್ನೇ ನಾಶಗೊಳಿಸುವುದು.

೪. ಯಾವನ ನಾಲಿಗೆಯ ಕೊನೆಯಲ್ಲಿ ಹರಿಯೆಂಬ ಎರಡು ಅಕ್ಷರಗಳು

ಬ್ರಾಹ್ಮಣಃ ಶ್ವಪಚೀಂ ಭುಂಜನ್ ವಿಶೇಷೇಣ ರಜಸ್ವಲಾಂ ।
ಯದಿ ವಿಷ್ಣುಂ ಸ ಮರಣೇ ಸ್ಮರೇನ್ನಾಪ್ನೋತಿ ತತ್ಪದಂ ॥ ೫ ॥
ಅಭಕ್ಷ್ಯಭಕ್ಷಣಾಜ್ಜಾತಂ ವಿಹಾಯಾಘಸ್ಯ ಸಂಚಯಂ ।
ಪ್ರಯಾತಿ ವಿಷ್ಣುಸಾಯುಜ್ಯಂ ಯತೋ ವಿಷ್ಣುಪ್ರಿಯಾ ಸ್ಮೃತಿಃ ।
ಏವಂ ವಿಷ್ಣುಪ್ರಿಯೋ ಮಾಸೋ ವೈಶಾಖೋ ನಾಮ ವೈ ಯಮ ॥ ೬ ॥
ಯದ್ಧರ್ಮಶ್ರವಣಾದೇವ ಮುಚ್ಯತೇ ಸರ್ವಕಿಲ್ಬಿಷೈಃ ।
ಯಾತೀತಿ ಕಿಮು ವಕ್ತವ್ಯಂ ತಸ್ಯಾನುಷ್ಠಾನತತ್ಪರಃ ॥ ೭ ॥
ಯಸ್ಮಿನ್ ಸಂಗೀಯತೇ ಯೋ ಹಿ ಪ್ರೀಯತೇ ಪುರುಷೋತ್ತಮಃ ।
ಕಥಂ ನ ಯಾತಿ ಚ ಗತಿಂ ತಸ್ಯಾನುಷ್ಠಾನತತ್ಪರಃ ॥ ೮ ॥
ಅಸ್ಮಾಕಂ ಜಗತಾಂ ನಾಥೋ ಜನಿತಾ ಪುರುಷೋತ್ತಮಃ ।
ತಸ್ಯೇಷ್ಟಾನ್ ಮಾಧವೇ ಮಾಸಿ ಧರ್ಮಾನೇತಾನ್ ಕರೋತ್ಯಯಂ ॥ ೯ ॥

---

ನಲಿದಾಡುತ್ತಿರುವುದೊ ಅವನಿಗೆ ಕುರುಕ್ಷೇತ್ರದ ಸೇವನೆಯಿಂದಲೂ, ಸರಸ್ವತೀ ನದಿಯ ತೀರ್ಥಸ್ನಾನದಿಂದಲೂ ಲಭಿಸುವುದೇನು?

೫–೬. ಬ್ರಾಹ್ಮಣನಾಗಿ ಜನಿಸಿ ಚಂಡಾಲಸ್ತ್ರೀಯನ್ನು, ಅದರಲ್ಲಿಯೂ ರಜಸ್ವಲೆಯಾದವಳನ್ನು ಕೂಡಿದ್ದರೂ, ಮರಣಕಾಲದಲ್ಲಿ ನಾರಾಯಣನ ಸ್ಮರಣೆಯನ್ನು ಮಾಡದಿದ್ದರೂ, ಈ ವೈಶಾಖವ್ರತಾಚರಣೆಯಿಂದ ಅವನೂ ವೈಕುಂಠವನ್ನು ಸೇರುವನು. ನಿಷಿದ್ಧಪದಾರ್ಥಗಳ ಭಕ್ಷಣದಿಂದುಂಟಾದ ಸಮಸ್ತ ಪಾಪಗಳ ಸಮೂಹಗಳನ್ನೂ ಕಳೆದುಕೊಂಡು ಆ ಮಾನವನು ವಿಷ್ಣುಸಾಯುಜ್ಯರೂಪವಾದ ಮೋಕ್ಷವನ್ನು ಪಡೆಯುವನು. ವ್ರತೋಪವಾಸಾದಿಗಳನ್ನು ಬೋಧಿಸುವ ಸ್ಮೃತಿಗಳೂ ಮಹಾವಿಷ್ಣುವಿನ ಅಧ್ಯಾಯರೂಪಗಳಾಗಿ ಆತನಿಗೆ ಪ್ರಿಯಂಗಳಾಗಿರುವುವು. ಎಲೈ ಯಮನೆ! ಇಂತು ವೈಶಾಖನಾಮಕವಾದ ಈ ಮಾಸವು ವಿಷ್ಣುವಿನ ಅಭಿಮಾನಕ್ಕೆ ಪಾತ್ರವಾಗಿರುವುದು.

೭. ಯಾವ ಧರ್ಮಗಳನ್ನು ಕೇಳುವ ಮಾತ್ರದಿಂದಲೇ ಸಕಲ ಪಾತಕಗಳಿಂದಲೂ ಮಾನವನು ಮುಕ್ತನಾಗುವನೊ, ಅಂತಹ ಧರ್ಮಗಳನ್ನೇ ಅನುಷ್ಠಾನಮಾಡುವುದರಲ್ಲಿ ನಿರತನಾದವನು ವೈಕುಂಠವನ್ನು ಸೇರುವನೆಂಬುದನ್ನು ಬೇರೆ ವಿಸ್ತರಿಸಿ ಹೇಳಲೇಕೆ?

೮. ಯಾವ ಮಾಸದ ಮಾಹಾತ್ಮ್ಯದಲ್ಲಿ ಮಹಾವಿಷ್ಣುವು ಕೀರ್ತಿಸಲ್ಪಡುವನೊ, ಯಾವುದರಿಂದ ಆತನು ಸಂತೋಷಗೊಳ್ಳುವನೊ, ಅಂತಹ ಮಾಸದಲ್ಲಿ ವ್ರತಗಳನ್ನು ಅನುಷ್ಠಾನಮಾಡುವುದರಿಂದ ಮನುಷ್ಯನು ಹೇಗೆ ಉತ್ತಮಗತಿಯನ್ನು ಪಡೆಯದಿರುವನು?

೯. ಆ ಪುರುಷೋತ್ತಮನೇ ನಮಗೂ, ಸಕಲಲೋಕಗಳಿಗೂ ಸ್ವಾಮಿಯೂ

ತಸ್ಯ ವಿಷ್ಣುಃ ಪ್ರಸನ್ನಾತ್ಮಾ ಸಹಾಯೋ ಸರ್ವದಾ ಸ್ಥಿತಃ ।
ನ ತಸ್ಯ ಭೂಪತೇಃ ಸೌರೇ ಸಮರ್ಥಸ್ತ್ವಂ ಚ ಶಿಕ್ಷಣೇ ॥ ೧೦ ॥
ನ ವಾಸುದೇವಭಕ್ತಾನಾಮಶುಭಂ ವಿದ್ಯತೇ ಕ್ವಚಿತ್ ।
ಜನ್ಮಮೃತ್ಯುಜರಾವ್ಯಾಧಿಭಯಂ ನೈವೋಪಜಾಯತೇ ॥ ೧೧ ॥
ನಿಯೋಗೀ ಸ್ವಾಮಿಕಾರ್ಯೇಷು ಯಾವಚ್ಛಕ್ತಿಸಮಾಹಿತೇ ।
ತಾವತಾ ಸ ಕೃತಾರ್ಥಃ ಸ್ಯಾನ್ನಾರಕಾನ್ನೈವ ಗಚ್ಛತಿ ॥ ೧೨ ॥
ಕಾರ್ಯೇ ಶಕ್ತಿವಿನಿಷ್ಕ್ರಾಂತೇ ಸ್ವಾಮಿನೇ ಚ ನಿವೇದಯೇತ್ ।
ಅನೃಣಸ್ತಾವತಾ ಭೃತ್ಯೋ ನಿಯೋಗೀ ಸುಖಮಶ್ನುತೇ ॥ ೧೩ ॥
ತಸ್ಮಾನ್ನಿವೇದಿತಾರ್ಥಸ್ಯ ನ ಋಣಂ ನ ಚ ಪಾತಕಂ ।
ಯತ್ನೇ ಕೃತೇ ಸ್ವಕರ್ತವ್ಯೇ ನಾಪರಾಧೋಽಸ್ತಿ ದೇಹಿನಃ ॥ ೧೪ ॥

ಸೃಷ್ಟಿಕರ್ತನೂ ಆಗಿರುವನು. ಈ ಕೀರ್ತಿಮಂತಮಹಾರಾಜನಾದರೋ, ವೈಶಾಖ ಮಾಸದಲ್ಲಿ ಆತನಿಗೆ ಪ್ರೀತಿಯನ್ನುಂಟುಮಾಡುವ ವ್ರತಗಳೆಲ್ಲವನ್ನೂ ಸರಿಯಾಗಿ ನಡೆಸಿಕೊಂಡು ಬರುತ್ತಿರುವನು.

೧೦. ಆತನಿಗೆ ಮಹಾವಿಷ್ಣುವೇ ಪ್ರಸನ್ನಾಂತಃಕರಣವುಳ್ಳವನಾಗಿ ಯಾವಾಗಲೂ ಸಹಾಯಕ್ಕಾಗಿ ನಿಂತಿರುವನು. ಎಲೈ ಯಮನೆ! ಅಂತಹ ಮಹಾರಾಜನಿಗೆ ಶಿಕ್ಷೆಯನ್ನು ಮಾಡಲು ನೀನು ಯಾವ ವಿಧದಿಂದಲೂ ಸಮರ್ಥನಾಗಲಾರೆ.

೧೧. ವಾಸುದೇವನ ಭಕ್ತರಿಗೆ ಯಾವ ವಿಧವಾದ ಪಾಪವೂ ಎಂದಿಗೂ ಹತ್ತಿಕೊಳ್ಳಲಾರದು. ಜನನ, ಮರಣ, ಮುಪ್ಪು, ರೋಗ ಮುಂತಾದ ಸಂಸಾರ ದುಃಖಗಳು ಅವರಿಗೆಂದಿಗೂ ಉಂಟಾಗಲಾರವು.

೧೨. ಭೃತ್ಯನಾದವನು ತನ್ನ ಶಕ್ತಿಯಿರುವ ಪರ್ಯಂತವೂ ಸ್ವಾಮಿಯ ಕಾರ್ಯಗಳಲ್ಲಿ ಪ್ರಯತ್ನಪಡಬೇಕು. ಅಷ್ಟರಿಂದಲೇ ಅವನು ಕೃತಕೃತ್ಯನಾಗುವನು. ಅವನಿಗೆ ಎಂದಿಗೂ ನರಕಗಳು ಪ್ರಾಪ್ತವಾಗಲಾರವು.

೧೩–೧೪. ತನಗೆ ಒಪ್ಪಿಸಿದ ಕಾರ್ಯವು ಯಾವುದಾದರೂ ತನ್ನ ಶಕ್ತಿಗೆ ಮೀರಿದುದಾದರೆ ಅದನ್ನು ಯಜಮಾನನಿಗೆ ನಿವೇದಿಸಬೇಕು. ಅಷ್ಟು ಮಾತ್ರದಿಂದಲೇ ಭೃತ್ಯನು ಯಜಮಾನನ ಋಣದಿಂದ ಮುಕ್ತನಾಗುವನು. ಇಂತು ನಡೆದುಕೊಳ್ಳುವುದರಿಂದ ಕಾರ್ಯಾಸಕ್ತನಾದ ಸೇವಕನು ಸಂತೋಷಗೊಳ್ಳುವನು. ಆದುದರಿಂದ ಯಜಮಾನನಿಗೆ ಸಾಧ್ಯಾಸಾಧ್ಯಗಳನ್ನು ನಿವೇದಿಸುವ ಭೃತ್ಯನಿಗೆ ಋಣವಾಗಲಿ ಪಾತಕವಾಗಲಿ ಇರಲಾರದು. ಯಾವ ಮನುಷ್ಯನಾದರೂ ತನ್ನ ಕರ್ತವ್ಯವನ್ನು ಮಾಡಲು ಮನಃಪೂರ್ವಕವಾಗಿ ಪ್ರಯತ್ನಪಟ್ಟು ಆ ಕಾರ್ಯವು ವಿಫಲವಾದರೂ ಇದರಲ್ಲಿ ಕರ್ತೃವಿನ ಅಪರಾಧವೇನೂ ಇಲ್ಲವಷ್ಟೆ.

ತಸ್ಮಾದಶಕ್ಯಕಾರ್ಯೇಽಸ್ಮಿನ್ನ ವಿಶೋಚಿತುಮರ್ಹಸಿ ॥ ೧೫ ॥
ಇತ್ಯುಕ್ತೋ ಬ್ರಹ್ಮಣಾ ಶೌರಿಃ ಪುನರತ್ಯಂತಖಿನ್ನಧೀಃ ।
ಉವಾಚ ದೀನಯಾ ವಾಚಾ ಗಲದ್ಬಾಷ್ಪಾಕುಲೇಕ್ಷಣಃ ॥ ೧೬ ॥
ಪ್ರಾಪ್ತಂ ತಾತ ಮಯಾ ಸರ್ವಂ ತ್ವದಂಘ್ರಿಭಜನೇನ ವೈ ।
ನಾಹಂ ಯಾಸ್ಯೇ ಪುನಃ ಕರ್ತುಂ ನಿಯೋಗಂ ಪದ್ಮಸಂಭವ ॥ ೧೭ ॥
ಪ್ರಶಾಸತಿ ಮಹಾವೀರ್ಯೇ ಭೂಪೇಽಸ್ಮಿನ್ ಭೂಮಿಮಂಡಲೇ ।
ಚಾಲಯಿತ್ವಾ ಸ್ವಧರ್ಮಾಂಶ್ಚ ತಮೇಕಂ ಭೂಪತಿಂ ವಿಭೋ ।
ಕೃತಕೃತ್ಯೋಽಸ್ಮಿ ತನಯೋ ಗಯಾಯಾಂ ಪಿಂಡದೋ ಯಥಾ ॥ ೧೮ ॥
ಕೃಪಾಲೋ ತದಿದಂ ಕಾರ್ಯಂ ಸಾಧಯಸ್ವ ಮಮಾವ್ಯಯಂ ।
ವಿಜ್ವರಸ್ತು ತತೋ ಭೂಯಃ ಶಾಸನಂ ತೇ ಕರೋಮ್ಯಹಂ ॥ ೧೯ ॥
ಶ್ರುತ್ವಾ ಬ್ರಹ್ಮಾ ಯಮೇನೋಕ್ತಂ ಮುನಿಶ್ರೇಷ್ಠ ಕೃಪಾಪರಾಯಣಃ ।
ತಮುವಾಚ ಪುನರ್ಬ್ರಹ್ಮಾ ಸಾಂತ್ವಯನ್ ಬಹುಧಾ ಯಮಂ ॥ ೨೦ ॥

೧೫. ಆದುದರಿಂದ ನಿನಗೆ ಅಸಾಧ್ಯವಾದ ಈ ಕಾರ್ಯದ ವಿಷಯದಲ್ಲಿ ನೀನು ದುಃಖಪಡಬೇಕಾದ ಅವಸರವಿಲ್ಲ."

೧೬. ಇಂತೆಂದ ಬ್ರಹ್ಮನ ಮಾತುಗಳನ್ನು ಕೇಳಿದರೂ ಯಮಧರ್ಮರಾಜನು ಅತ್ಯಂತ ಖೇದಗೊಂಡ ಮನಸ್ಸಿನಿಂದಲೂ, ಧಾರಾಕಾರವಾಗಿ ಸುರಿಯುತ್ತಿರುವ ಕಣ್ಣೀರಿನಿಂದ ತುಂಬಿದ ಕಣ್ಣುಗಳಿಂದಲೂ ಕೂಡಿದವನಾಗಿ ದೀನವಾದ ಧ್ವನಿಯಿಂದಲೂ ಹೇಳಿದನು.

೧೭–೧೮. "ಎಲೈ ಲೋಕಪಿತಾಮಹನೆ! ನಿನ್ನ ಪಾದಕಮಲಗಳನ್ನು ಭಜನೆ ಮಾಡಿದ ಪುಣ್ಯದ ಬಲದಿಂದ ನನಗೆ ಸಕಲೈಶ್ವರ್ಯಗಳೂ ಪ್ರಾಪ್ತಗಳಾಗಿರುವುವು. ಓ ಪದ್ಮಾಸನನೆ! ಇನ್ನು ಪುನಃ ನಿನ್ನ ಅನುಜ್ಞೆಯನ್ನು ಸ್ವೀಕರಿಸಿ ಆ ಸ್ಥಾನಕ್ಕೆ ಹೋಗಲಾರೆನು. ಮಹಾಪರಾಕ್ರಮಶಾಲಿಯಾದ ಈ ಕೀರ್ತಿಮಂತಮಹಾರಾಜನು ಏಕಚ್ಛತ್ರದಿಂದ ಭೂಮಂಡಲವನ್ನೆಲ್ಲ ಶಾಸನಮಾಡುತ್ತಿರುವನಾದುದರಿಂದ ಆ ರಾಜನೊಬ್ಬನನ್ನೂ, ಆತನ ಧರ್ಮಗಳನ್ನೂ ಭೂಮಿಯಿಂದ ಹೊರಡಿಸಬೇಕು. ಸರ್ವವ್ಯಾಪಿಯಾದ ಸ್ವಾಮಿಯೆ! ಈ ಕಾರ್ಯವೊಂದು ನಡೆದರೆ ಗಯಾ ಕ್ಷೇತ್ರದಲ್ಲಿ ಪಿತೃದೇವತೆಗಳಿಗೆ ಪಿಂಡಪ್ರದಾನವನ್ನು ಮಾಡಿದ ಸುಪುತ್ರನಂತೆ ನಾನೂ ಕೃತಕೃತ್ಯನೆನಿಸುವೆನು.

೧೯. ಎಲೈ ಕೃಪಾಸಮುದ್ರನೆ! ನನಗಾಗಿ ಪ್ರಸ್ತುತವಾದ ಈ ಕಾರ್ಯವೊಂದನ್ನು ಸಾಧಿಸಿಕೊಡುವವನಾಗು. ಬಳಿಕ ನಿರಾತಂಕವಾಗಿ ನಿನ್ನ ಅಪ್ಪಣೆಯಂತೆಯೇ ಕೆಲಸಗಳೆಲ್ಲವನ್ನೂ ನಡೆಸಿಕೊಂಡು ಬರುವೆನು."

೨೦. ಇಂತು ಯಮನು ಹೇಳಿದುದನ್ನು ಕೇಳಿ ಬ್ರಹ್ಮದೇವನು ಮತ್ತೆ

ಬ್ರಹ್ಮೋವಾಚ :—

ನ ನಿಗ್ರಾಹ್ಯಸ್ತ್ವಯಾ ರಾಜಾ ವಿಷ್ಣುಧರ್ಮಪರಾಯಣಃ ।
ಯದಿ ಚ್ಯಾಲಯಸೇ ಕೋಪಾತ್ ಗಚ್ಛಾವೋ ಹ್ಯಂತಿಕಂ ಹರೇಃ ॥ ೨೦ ॥
ನಿವೇದ್ಯ ಸಕಲಂ ತಸ್ಮೈ ಕರ್ಮ ಪಶ್ಚಾತ್ತ್ವದೀರಿತಂ ।
ಸ ಏವ ಕರ್ತಾ ಲೋಕಸ್ಯ ಧರ್ಮಸ್ಯ ಪರಿಪಾಲಕಃ ॥ ೨೧ ॥
ಸ ಚ ದಂಡಧರೋಽಸ್ಮಾಕಂ ಶಾಸ್ತಾ ಕರ್ತಾ ನಿಯಾಮಕಃ ।
ನ ತದುಕ್ತೋಽಸ್ತಿ ಪ್ರತ್ಯುಕ್ತಿರಸ್ಮಾಕಂ ವಿಹಿತಾ ನೃಪ ॥ ೨೨ ॥
ನ ರಾಜೋಕ್ತೇಽಸ್ತು ಪ್ರತ್ಯುಕ್ತಿರ್ದೃಶ್ಯತೇ ಕ್ವಾಽಪಿ ಭೂತಲೇ ।
ಇತ್ಯಾಶ್ವಾಸ್ಯ ಯಮಂ ತೇನ ಸಾಕಂ ಕ್ಷೀರಾಂಬುಧಿಂ ಯಯೌ ॥ ೨೪ ॥
ಬ್ರಹ್ಮಾ ತುಷ್ಟಾವ ಚಿನ್ಮಾತ್ರಂ ನಿರ್ಗುಣಂ ಪರಮೇಶ್ವರಂ ॥ ೨೫ ॥

ಚಿಂತಾಪರಾಯಣನಾಗಿ ಆತನಿಗೆ ಸಮಾಧಾನಮಾಡುವ ಅಭಿಲಾಷೆಯಿಂದ ಬಹು ವಿಧವಾಗಿ ಉಪದೇಶಮಾಡಿದನು.

೨೦. ಬ್ರಹ್ಮದೇವನು ಹೇಳುತ್ತಾನೆ:—"ವೈಷ್ಣವಧರ್ಮಪರಾಯಣನಾದ ಆ ಮಹಾರಾಜನೆಂದಿಗೂ ನಿನ್ನ ಶಾಸನಕ್ಕೆ ಸಿಕ್ಕಲಾರನು. ಹಾಗೂ ನಿನ್ನ ಕೋಪವನ್ನು ಬಿಡಲಾರದೆ ಆಗ್ರಹವನ್ನೇ ಮಾಡುವೆಯಾದರೆ ನಾವಿಬ್ಬರೂ ಶ್ರೀಮನ್ನಾರಾಯಣನ ಸಮೀಪಕ್ಕೆ ಹೋಗೋಣ.

೨೧. ನಡೆದ ವಿಚಾರವೆಲ್ಲವನ್ನೂ ಆತನಲ್ಲಿ ನಿವೇದಿಸಿಕೊಂಡು ಬಳಿಕ ಆತನು ಅಪ್ಪಣೆ ಮಾಡಿದಂತೆ ನಡೆದುಕೊಳ್ಳೋಣ. ಆತನೇ ಸಕಲ ಬ್ರಹ್ಮಾಂಡಕ್ಕೂ ಕರ್ತೃವಾಗಿರುವನು. ಧರ್ಮದ ರಕ್ಷಕನೂ ಆತನೇ.

೨೨. ಆತನೇ ನಮಗೆಲ್ಲ ದಂಡಧರನೂ, ಅಪ್ಪಣೆಮಾಡುವವನೂ, ಲೋಕದ ಸ್ವತಂತ್ರ ಕರ್ತೃವೂ, ನಿಯಾಮಕನೂ ಆಗಿರುವನು. ಅಯ್ಯಾ! ಯಮನೆ! ಆತನು ಅಪ್ಪಣೆಮಾಡಿದುದಕ್ಕೆ ವಿರುದ್ಧವಾಗಿ ಮಾತನಾಡುವುದಕ್ಕೆ ನಮಗೆ ಯಾವ ವಿಧವಾದ ಸ್ವಾತಂತ್ರ್ಯವೂ ಇರುವುದಿಲ್ಲ.

೨೪–೨೫. ರಾಜನು ಶಾಸನಮಾಡಿರುವ ವಿಷಯಗಳಲ್ಲಿ ಎದುರು ಮಾತನ್ನಾಡುವ ಸ್ವಾತಂತ್ರ್ಯವು ಭೂಮಂಡಲದಲ್ಲಿ ಯಾವ ಪ್ರಜೆಗೂ ಇಲ್ಲವಷ್ಟೆ." ಇಂತೆಂದು ಬ್ರಹ್ಮದೇವನು ಯಮನಿಗೆ ಸಮಾಧಾನವನ್ನು ಹೇಳಿ ಆತನೊಡನೆ ಕ್ಷೀರಸಮುದ್ರದ ತೀರವನ್ನು ಸೇರಿ, ಚೈತನ್ಯಮಾತ್ರಸ್ವರೂಪನೂ, ತ್ರಿಗುಣಾತೀತನೂ ಸರ್ವಸ್ವತಂತ್ರನೂ ಆದ ಶ್ರೀಮನ್ನಾರಾಯಣನನ್ನು ಸ್ತೋತ್ರ ಮಾಡಿದನು.

ಸಾಂಖ್ಯಯೋಗೈರದೃಶ್ಯೋಽಯಮೇಕಂ ತಂ ಪುರುಷೋತ್ತಮಂ ।
ಆವಿರಾಸೀತ್ತದಾ ವಿಷ್ಣುರ್ಬ್ರಹ್ಮಣಾ ಸಂಸ್ತುತೋ ಹರಿಃ ॥ ೨೬ ॥
ಪ್ರಣಾಮಂ ಚಕ್ರತುಸ್ತಸ್ಮೈ ಯಮೋ ಬ್ರಹ್ಮಾ ಚ ಸತ್ವರಂ ।
ತಾವುವಾಚ ಮಹಾವಿಷ್ಣುರ್ಮೇಘಗಂಭೀರಯಾ ಗಿರಾ ॥ ೨೭ ॥
ಕಸ್ಮಾದ್ಯುವಾಮಿಹಾಯಾತೌ ಕಿಂ ದುಃಖಂ ದನುಜೈರಭೂತ್ ।
ಮ್ಲಾನಂ ಯಮಮುಖಂ ಕಸ್ಮಾತ್ ಕೇನ ವಾ ನತಕಂಧರಃ ॥ ೨೮ ॥
ಏತದ್ವದಸ್ವ ಮೇ ಬ್ರಹ್ಮನ್ನಿತ್ಯುಕ್ತಸ್ತ್ವಾಹ ಕಂಜಜಃ ।
ತ್ವದ್ದಾಸವರ್ಯೋ ಭೂಪಾಲೋ ಭೂಮಿಂ ಶಾಸತಿ ವೈ ನರಾಃ ॥ ೨೯ ॥
ವೈಶಾಖಧರ್ಮನಿರತಾ ಯಾಂತಿ ತೇ ಪರಮವ್ಯಯಂ ।
ತತೋ ಯಮಪುರೀ ಶೂನ್ಯಾ ತೇನ ಜಾತೋಽಯಂ ದುಃಖಿತಃ ॥ ೩೦ ॥

೨೬. ಆ ಪರಮಾತ್ಮನು ಜ್ಞಾನಯೋಗ ಕರ್ಮಯೋಗಗಳೆರಡಕ್ಕೂ ಅಗಮ್ಯವಾದ ಮಹಿಮೆಯುಳ್ಳವನೂ, ಸಮಾಧಿಕರಹಿತನೂ, ಯಾವಾಗಲೂ ಒಂದೇಬಗೆಯಾಗಿರುವನೂ ಪುರುಷೋತ್ತಮನೂ ಆಗಿರುವನು. ಭಕ್ತರ ಸಕಲ ತಾಪಗಳನ್ನೂ ಪರಿಹರಿಸುವ ಬಿರುದುಳ್ಳ ಮಹಾವಿಷ್ಣುವು ಬ್ರಹ್ಮನ ಸ್ತೋತ್ರಕ್ಕೆ ಮನಸೋತು ಅವರಿಗೆ ಪ್ರತ್ಯಕ್ಷನಾದನು.

೨೭. ಆಗ ಯಮಧರ್ಮರಾಜನೂ, ಬ್ರಹ್ಮದೇವನೂ ಸಂಭ್ರಮದಿಂದ ಆತನಿಗೆ ಸಾಷ್ಟಾಂಗನಮಸ್ಕಾರಗಳನ್ನು ಮಾಡಿದರು. ಅವರನ್ನು ಕುರಿತು ಮಹಾವಿಷ್ಣುವು ಮೇಘಗರ್ಜನೆಯಂತೆ ಗಂಭೀರವಾದ ಧ್ವನಿಯಿಂದ ಪ್ರಶ್ನೆ ಮಾಡಿದನು.

೨೮. "ನೀವಿಬ್ಬರೂ ಇಲ್ಲಿಗೆ ಯಾವ ಕಾರಣದಿಂದ ಬಂದಿರಿ? ರಾಕ್ಷಸರಿಂದ ನಿಮಗೆ ಯಾವ ಉಪದ್ರವವುಂಟಾಯಿತು? ಈ ಯಮನ ಮುಖವು ಬಾಡಿರುವುದಕ್ಕೆ ಕಾರಣವೇನು? ಏತಕ್ಕಾಗಿ ಈತನು ತಲೆಯನ್ನು ಬಗ್ಗಿಸಿ ನಿಂತಿರುವನು?

೨೯-೩೦. ಎಲೈ ಬ್ರಹ್ಮನೆ! ಇವುಗಳನ್ನೆಲ್ಲ ನನಗೆ ತಿಳಿಸು." ಇಂತೆಂದು ಅಪ್ಪಣೆಯನ್ನು ಮಾಡಲು ಪದ್ಮಸಂಭವನಾದ ಬ್ರಹ್ಮನು ಹೇಳಿದನು. "ನಿನ್ನ ದಾಸರಲ್ಲಿ ಸರ್ವೋತ್ತಮನಾದ ಕೀರ್ತಿಮಂತಮಹಾರಾಜನು ಸಮಸ್ತ ಭೂಮಂಡಲವನ್ನೂ ಪಾಲಿಸುತ್ತಿರುವುದರಿಂದ ಪ್ರಜೆಗಳೆಲ್ಲರೂ ವೈಶಾಖ ಮಾಸದ ಧರ್ಮಗಳಲ್ಲಿ ನಿರತರಾಗಿ ನಾಶರಹಿತವಾದ ನಿನ್ನ ಲೋಕವನ್ನು ಹೊಂದುತ್ತಿರುವರು. ಆದುದರಿಂದ ಯಮನ ನಗರವು ಜನಶೂನ್ಯವಾಗಿರುವುದು. ಆ ಕಾರಣದಿಂದಲೇ ಈ ಯಮಧರ್ಮರಾಜನು ಅತ್ಯಂತ ದುಃಖಭರಿತನಾಗಿರುವನು.

ತೇನ ಯುದ್ಧಂ ಚಕಾರಾಽಸೌ ಹಂತುಂ ದಂಡಮಥಾಽದದೇ ।
ತ್ವಚ್ಚಕ್ರೇಣ ಪರಾಭೂತೋ ಯಯಾವದ್ಯ ಮಮಾಂತಿಕಂ ॥ ೩೧ ॥
ನ ಚ ಶಕ್ತೋ ಯಮಂ ದಂಡಂ ತ್ವದ್ಭಕ್ತಾನಾಂ ಮಹಾತ್ಮನಾಂ ।
ತಸ್ಮಾತ್ತ್ವಾಮೇವ ಶರಣಂ ಯಮಃ ಪ್ರಾಪ್ತೋ ಮಹಾವಿಭೋ ॥ ೩೨ ॥
ತಸ್ಮಾದ್ಭೂಪಂ ದಂಡಯಿತ್ವಾ ಪಾಲಯೈನಂ ಯಮಂ ಸ್ವಕಂ ।
ಇತ್ಯುಕ್ತಃ ಪ್ರಹಸನ್ ಪ್ರಾಹ ಬ್ರಹ್ಮಾಣಂ ಯಮಮೇವ ಚ ॥ ೩೩ ॥
ಲಕ್ಷ್ಮೀಂ ವಾಽಪಿ ಪರಿತ್ಯಜ್ಯೇ ಪ್ರಾಣಾನ್ ದೇಹಮಥಾಽಪಿವಾ ।
ಶ್ರೀವತ್ಸಂ ಕೌಸ್ತುಭಂ ಮಾಲಾಂ ವೈಜಯಂತೀಮಥಾಽಪಿವಾ ॥ ೩೪ ॥
ಶ್ವೇತದ್ವೀಪಂ ಚ ವೈಕುಂಠಂ ಕ್ಷೀರಸಾಗರಮೇವ ಚ ।
ಶೇಷಂ ಚ ಗರುಡಂ ಚೈವ ನ ಭಕ್ತಂ ತ್ಯಕ್ತುಮುತ್ಸಹೇ ॥ ೩೫ ॥
ವಿಸೃಜ್ಯ ಸಕಲಾನ್ ಭೋಗಾನ್ ಮದರ್ಥೇ ತ್ಯಕ್ತಜೀವಿತಾನ್ ।
ಮದಾತ್ಮಕಾನ್ ಮಹಾಭಾಗಾನ್ ಕಥಂ ತಾಂಸ್ತ್ಯಕ್ತುಮುತ್ಸಹೇ ॥ ೩೬ ॥

---

೩೧–೩೨. ಈತನು ಆ ಮಹಾರಾಜನೊಡನೆ ಮಹಾ ಯುದ್ಧವನ್ನು ಮಾಡಿದನು. ಮತ್ತು ಆತನನ್ನು ನಿಗ್ರಹಿಸಲು ತನ್ನ ದಂಡಾಯುಧವನ್ನು ಪ್ರಯೋಗಿಸಿದನು. ಆದರೆ ನಿನ್ನ ಚಕ್ರಾಯುಧವು ಅದನ್ನು ನಿಗ್ರಹಿಸಲು ಪರಾಭವವನ್ನು ಹೊಂದಿ ನನ್ನ ಬಳಿಗೆ ಬಂದನು. ನಿನ್ನ ಭಕ್ತೋತ್ತಮರಾದ ಮಹಾತ್ಮರನ್ನು ದಂಡನೆ ಮಾಡಲು ನಾವು ಎಂದಿಗೂ ಶಕ್ತರಾಗಿಲ್ಲ. ಎಲೈ ಮಹಾಸ್ವಾಮಿಯೆ! ಆದಕಾರಣ ನಾವು ನಿನ್ನನ್ನೇ ಶರಣುಹೊಂದಲು ಇಲ್ಲಿಗೆ ಬಂದಿರುವೆವು.

೩೩. ಆದುದರಿಂದ ಆ ಮಹಾರಾಜನನ್ನು ನೀನೇ ಸೂಕ್ತರೀತಿಯಿಂದ ಶಿಕ್ಷಿಸಿ ನಿನ್ನ ಆಜ್ಞಾಧಾರಕನಾದ ಈ ಯಮನನ್ನು ರಕ್ಷಿಸು.'' ಇಂತೆಂದು ಪ್ರಾರ್ಥಿತನಾದ ಮಹಾವಿಷ್ಣುವು ಬ್ರಹ್ಮನಿಗೂ, ಯಮನಿಗೂ ಪ್ರತ್ಯುತ್ತರವನ್ನು ಹೇಳಿದನು.

೩೪. "ಅನಪಾಯಿನಿಯೆನಿಸಿದ ಮಹಾಲಕ್ಷ್ಮಿಯನ್ನಾದರೂ ತ್ಯಜಿಸುವೆನು. ಪ್ರಾಣಗಳನ್ನಾಗಲಿ ದೇಹವನ್ನಾಗಲಿ ಬಿಡಬಲ್ಲೆನು. ಶ್ರೀವತ್ಸವೆಂಬ ಲಾಂಛನವನ್ನೂ, ಕೌಸ್ತುಭಮಣಿಯನ್ನೂ, ವೈಜಯಂತಿಯೆಂಬ ವನಮಾಲೆಯನ್ನೂ ತ್ಯಾಗಮಾಡುವುದಕ್ಕೆ ಸಿದ್ಧನಾಗಿರುವೆನು.

೩೫. ನನಗೆ ನಿತ್ಯನಿವಾಸಗಳೆನಿಸಿದ ಶ್ವೇತದ್ವೀಪವನ್ನೂ, ವೈಕುಂಠವನ್ನೂ ಕ್ಷೀರಸಮುದ್ರವನ್ನೂ ಕೂಡ ಪ್ರಸಂಗವಶದಿಂದ ಬಿಡಲು ಹಿಂಜರಿಯುವುದಿಲ್ಲ. ವಾಹನಗಳಾದ ಶೇಷಗರುಡರನ್ನೂ ತ್ಯಜಿಸಿದರೂ ತ್ಯಜಿಸಬಹುದು. ಆದರೆ ಎಂದಿಗೂ ನನ್ನ ಭಕ್ತನನ್ನು ಕೈಬಿಡಲು ಒಡಂಬಡಲಾರೆನು.

೩೬. ಆ ಭಕ್ತರು ನನಗಾಗಿಯೇ ಐಹಿಕಾಮುಷ್ಮಿಕ ಸಕಲ ಭೋಗಗಳನ್ನೂ

ತಸ್ಮಾತ್ ತ್ವದ್ದುಃಖಶಮನೇ ಹ್ಯುಪಾಯಂ ಕಲ್ಪಯಾಮ್ಯಹಂ ।
ತಸ್ಯ ಚಾಯುರ್ಮಯಾ ದತ್ತಮಯುತಂ ಭೂಪತೇರ್ಭುವಿ ॥ ೩೭ ॥
ಗತಾನ್ಯಷ್ಟೌ ಸಹಸ್ರಾಣಿ ತತ್ರೇದಾನೀಂ ನರಾಂತಕ ।
ಆಯುಃಶೇಷೇ ತೇನ ನೀತೇ ಮತ್ಸಾಯುಜ್ಯಗತೇಽಪಿ ಚ ॥ ೩೮ ॥
ಭವಿಷ್ಯತಿ ತತೋ ರಾಜಾ ವೇನೋ ನಾಮ ದುರಾತ್ಮವಾನ್ ।
ಸ ಲುಂಪತಿ ಮಹಾಧರ್ಮಾನ್ ಸರ್ವಾನೇತಾಂಛ್ರುತೀರಿತಾನ್ ॥ ೩೯ ॥
ತದಾ ವೈಶಾಖಧರ್ಮಾಶ್ಚ ವಿಚ್ಛಿನ್ನಾಃ ಸ್ಯುರ್ನಸಂಶಯಃ ।
ಸ್ವಕೃತೇನೈವ ಪಾಪೇನ ವೇನೋ ದಗ್ಧೋ ಭವಿಷ್ಯತಿ ॥ ೪೦ ॥
ಪಶ್ಚಾದಹಂ ಪೃಥುರ್ಭೂತ್ವಾ ಪುನರ್ಧರ್ಮಾನ್ ಪ್ರವರ್ತಯೇ ।
ತದಾ ಜನೇಷು ಪ್ರಖ್ಯಾತಾನ್ ವೈಶಾಖೋಕ್ತಾನ್ ಕರೋಮ್ಯಹಂ ॥ ೪೧ ॥

ದೂರವಾಗಿ, ಪ್ರಾಣಿಗಳ ಮೇಲಿನ ಆಸೆಯನ್ನು ತೊರೆದು ನನ್ನಲ್ಲಿಯೇ ನಟ್ಟಮನಸ್ಸುಳ್ಳ ಮಹಾತ್ಮರಾಗಿರುವರು. ಅಂತಹ ಭಕ್ತೋತ್ತಮನನ್ನು ತ್ಯಜಿಸುವುದಕ್ಕೆ ಹೇಗೆತಾನೆ ಉತ್ಸಾಹಗೊಳ್ಳಲಿ?

೩೭. ಆದುದರಿಂದ ನಿಮ್ಮ ದುಃಖವನ್ನು ಕಳೆಯುವುದಕ್ಕಾಗಿ ಯಾವುದಾದರೂ ಒಂದು ಉಪಾಯವನ್ನು ಯೋಚಿಸಿ ಹೇಳುವೆನು. ಅಲ್ಲದೆ ಆ ಮಹಾರಾಜನಿಗೆ ಭೂಲೋಕದಲ್ಲಿ ಹತ್ತು ಸಾವಿರ ವರ್ಷಗಳು ರಾಜ್ಯಭಾರವನ್ನು ಮಾಡುವಂತೆ ನಾನೇ ಆಯುರ್ದಾಯವನ್ನು ಕೊಟ್ಟಿರುವೆನು.

೩೮. ಮನುಷ್ಯರ ಆಯುಸ್ಸನ್ನು ಕಳೆಯುವ ಆಯ್ಯಾ ಯಮನೇ! ಇಂದಿಗೆ ಆ ಕೀರ್ತಿಮಂತನ ಆಯುಸ್ಸಿನಲ್ಲಿ ಎಂಟುಸಾವಿರ ವರ್ಷಗಳು ಕಳೆದು ಹೋಗಿರುವುವು. ಉಳಿದ ಸಮಯವು ಕಳೆಯಲು ಆತನು ನನ್ನ ಸಾಯುಜ್ಯವನ್ನು ಪಡೆದು ದೇಹವನ್ನು ಬಿಡುವನು.

೩೯. ಆತನ ಬಳಿಕ ದುರಾತ್ಮನಾದ ವೇನನೆಂಬೊಬ್ಬ ಮಹಾರಾಜನು ಹುಟ್ಟುವನು. ಅವನು ಶ್ರುತಿಸ್ಮೃತಿಗಳಲ್ಲಿ ಪ್ರತಿಪಾದಿತಗಳಾಗಿರುವ ಈ ಮಹಾಧರ್ಮಗಳೆಲ್ಲವನ್ನೂ ಕುಬುದ್ಧಿಯುಳ್ಳವನಾಗಿ ನಾಶಗೊಳಿಸುವನು.

೪೦. ಆಗ ಈ ವೈಶಾಖಧರ್ಮಗಳೆಲ್ಲವೂ ವಿಚ್ಛಿತ್ತಿಯನ್ನು ಹೊಂದುವುವೆಂಬುದರಲ್ಲಿ ಸಂದೇಹವೇ ಇಲ್ಲವು. ಪಾಪಿಷ್ಠನಾದ ಆ ವೇನನೂ ಕೂಡ ತಾನು ಮಾಡಿದ ಪಾಪಗಳ ಫಲವಾಗಿಯೇ ಭಸ್ಮೀಭೂತನಾಗುವನು.

೪೧. ಆತನಾದ ಮೇಲೆ ನಾನೇ ಪೃಥುಮಹಾರಾಜನಾಗಿ ಅವತರಿಸಿ ಪುನಃ ಈ ಧರ್ಮಗಳೆಲ್ಲವನ್ನೂ ಸ್ಥಾಪಿಸುವೆನು. ಆಗ ವೈಶಾಖಮಾಸಧರ್ಮಗಳನ್ನೂ ಪ್ರಜೆಗಳೆಲ್ಲರಲ್ಲಿಯೂ ಪ್ರಸಿದ್ಧಿಗೊಳಿಸುವೆನು.

ಮದ್ಭಕ್ತೋ ಮದ್ಗತಪ್ರಾಣೋ ಯಸ್ತು ವಿನ್ಯಸ್ತಸಂಗ್ರಹಃ ।
ಏಕಃ ಸಹಸ್ರೇ ಭವಿತಾ ತಸ್ಯ ಪ್ರಖ್ಯಾಪಯೇದ್ಧಿತಾನ್ ॥ ೪೨ ॥
ಕಶ್ಚಿದೇವ ಹಿ ಜಾನಾತು ಧರ್ಮಾನೇತಾನ್ ಕ್ಷಿತೌ ಮಮ ।
ತತಸ್ತೇ ಭವಿತಾ ಕಾರ್ಯಂ ಮಾ ವಿಷೀದ ನರಾಂತಕ ॥ ೪೩ ॥
ದಾಪಾಯಿಷ್ಯಾಮಿ ತೇ ಭಾಗಂ ಮಾಸೇಽಸ್ಮಿನ್ ಮಾಧವೇಽಪಿ ಚ ।
ಸರ್ವೈಃ ಸರ್ವೈಶ್ಚ ವೈಶಾಖಧರ್ಮನಿಷ್ಠೈರ್ಮಹಾತ್ಮಭಿಃ ॥ ೪೪ ॥
ಭೂಪೇನಾಽಪಿ ಚ ಕಾಲೇನ ಖೇದಂ ಶಮಯ ತೇನ ಚ ।
ವೀರ್ಯಶುಲ್ಕಂ ತು ತೇ ಭಾಗಂ ಶತ್ರೋರ್ಭುಂಕ್ತೇ ಬಲಾಧಿಕಾತ್ ॥ ೪೫ ॥
ಗೃಹ್ಣನ್ ಗೃಹ್ಣನ್ ಸ್ವಕಂ ಭಾಗಂ ನ ಭಾಗೀ ದುಃಖಮರ್ಹತಿ ।
ತ್ವಾಮುದ್ದಿಶ್ಯ ನ ಕುರ್ವಂತಿ ಪ್ರತ್ಯಹಂ ಯೇ ನರಾ ಭುವಿ ॥ ೪೬ ॥
ಸ್ನಾನಂ ಚಾರ್ಘ್ಯಂ ಸೋದಕುಂಭಂ ದಧ್ಯನ್ನಂ ಚಾಂತಿಮೇ ದಿನೇ ।
ವೈಶಾಖೇ ಸಕಲಂ ಕರ್ಮ ತೇಷಾಂ ಚ ವಿಫಲಂ ಭವೇತ್ ॥ ೪೭ ॥

---

೪೨. ನನ್ನ ಏಕಾಂತಭಕ್ತನೂ ನನ್ನಲ್ಲಿಯೇ ಪ್ರಾಣಗಳನ್ನರ್ಪಿಸಿದವನೂ, ಲೋಭಾದಿ ದುರ್ಗುಣಗಳಿಂದ ವರ್ಜಿತನೂ ಆದ ಮಹಾಪುರುಷನು ಒಂದು ಸಾವಿರ ಜನರಲ್ಲಿ ಒಬ್ಬನು ಸಿಕ್ಕಬಹುದು. ಆತನಿಗೆ ಮಾತ್ರ ಈ ವೈಶಾಖ ಧರ್ಮಗಳನ್ನು ವಿಸ್ತಾರವಾಗಿ ತಿಳಿಸಬೇಕು.

೪೩. ಎಲೈ ಯಮಧರ್ಮನೆ! ಇನ್ನು ಮೇಲೆ ಭೂಲೋಕದಲ್ಲಿ ಬಹಳ ವಿರಳ ವಾಗಿ ಈ ಧರ್ಮಗಳನ್ನು ತಿಳಿದು ಆಚರಿಸುವ ಒಬ್ಬೊಬ್ಬನೇ ಹುಟ್ಟುವಂತಾಗಲಿ. ಆದುದರಿಂದ ನಿನ್ನ ಕಾರ್ಯವೂ ಕೈಗೂಡುವುದು; ದುಃಖಪಡಬೇಡ.

೪೪. ಉತ್ತಮವಾದ ಈ ವೈಶಾಖಮಾಸದಲ್ಲಿ ವೈಶಾಖಧರ್ಮನಿರತರೂ ಮಹಾತ್ಮರೂ ಆದ ಸಮಸ್ತಜನರಿಂದಲೂ ನಿನಗೂ ಉಚಿತವಾದ ಭಾಗವನ್ನು ಕೊಡಿಸುವೆನು.

೪೫. ಕೀರ್ತಿಮಂತಮಹಾರಾಜನಿಂದಲೂ, ನಿನಗೆ ಉಪಹಾರವನ್ನು ಕೊಡಿಸುವೆನು. ಆದುದರಿಂದ ಆತನ ಆಯುಃಪರಿಮಾಣದ ಕಾಲವನ್ನು ನಿರೀಕ್ಷಿಸುತ್ತ ನಿನ್ನ ದುಃಖವನ್ನು ಶಮನಮಾಡಿಕೊ. ಈಗ ನಿನ್ನ ಶತ್ರುವು ಅಧಿಕ ಪರಾಕ್ರಮಿಯಾದುದರಿಂದ ನಿನ್ನ ಭಾಗವನ್ನು ವೀರ್ಯಶುಲ್ಕವಾಗಿ ನಿಶ್ಚಯಿಸಿ ಆತನೇ ಅನುಭವಿಸುತ್ತಿರುವನು.

೪೬–೪೭. ತಮ್ಮ ತಮ್ಮ ಭಾಗಗಳನ್ನು ಸ್ವೀಕರಿಸಿದ ಮೇಲೆ ಯಾವಭಾಗಿ ಯಾದ ಮನುಷ್ಯನೂ ದುಃಖಪಡಬೇಕಾದುದಿಲ್ಲ. ಭೂಲೋಕದಲ್ಲಿ ಯಾವ ಮನುಷ್ಯರು ನಿನ್ನನ್ನುದ್ದೇಶಿಸಿ ಪ್ರತಿದಿನವೂ ಪ್ರಾತಃಸ್ನಾನವನ್ನೂ, ಅರ್ಘ್ಯ ಪ್ರದಾನವನ್ನೂ, ಉದಕುಂಭದಾನವನ್ನೂ ಮಾಡದೆ ಕಡೆಯ ದಿನದಲ್ಲಿ

ತಸ್ಮಾತ್ ಕ್ರೋಧಂ ತ್ಯಜ ನೃಪೇ ಭಾಗದೇ ಮತ್ಪರಾಯಣೇ ।
ಯೇ ಕೇ ಚಾಪಿ ಚ ಕುರ್ವಂತಿ ಲೋಕೇ ತೇ ಭಾಗದಾ ನರಾಃ ॥ ೪೮ ॥
ವೈಶಾಖೋಕ್ತೇ ಮಹಾಧರ್ಮೇ ತೇಷಾಂ ವಿಘ್ನಂ ಚ ಮಾ ಕುರು ।
ಮಾಮೇವ ಯೇ ಯಜಂತ್ಯದ್ಧಾ ತ್ವಾಂ ಹಿತ್ವಾ ಧರ್ಮಪಾಲಕಂ ।
ಮದಾಜ್ಞಯಾ ಮಹಾಭಾಗ ತದಾ ದಂಡಂ ಚ ತ್ವಂ ಕುರು ॥ ೪೯ ॥
ನೃಪಾದ್ಭಾಗಂ ದಾಪಯಿತುಂ ಸುನಂದಂ ಪ್ರೇಷಯಾಮಿ ಚ ।
ಮಚ್ಛಾಸನಾತ್ಸ ವೈ ಗತ್ವಾ ಭಾಗಂ ತೇ ದಾಪಯಿಷ್ಯತಿ ॥ ೫೦ ॥
ತಿಷ್ಠತ್ಯೇವಂ ಯಮೇ ಸ್ವಸ್ಯ ಸನ್ನಿಧೌ ಗರುಡಾಸನಃ ।
ಸುನಂದಂ ಪ್ರೇಷಯಾಮಾಸ ನೃಪಂ ಬೋಧಯಿತುಂ ವಿಭುಃ ॥ ೫೧ ॥
ಸೋಽಪಿ ಗತ್ವಾ ಬೋಧಯಿತ್ವಾ ಪಾರ್ಶ್ವಂ ಚ ಪುನರಾಗಮತ್ ।
ಇತ್ಯಾಶ್ವಾಸ್ಯ ಯಮಂ ವಿಷ್ಣುಸ್ತತ್ರೈವಾಂತರಧೀಯತ ॥ ೫೨ ॥

---

ಪಕ್ವಾನ್ನದ ನಿವೇದನೆಯನ್ನು ಮಾಡುವುದಿಲ್ಲವೋ, ಅವರು ವೈಶಾಖಮಾಸದಲ್ಲಿ ಮಾಡಿದ ಸಮಸ್ತ ಕರ್ಮವೂ ಕೇವಲ ನಿಷ್ಫಲವೆನಿಸುವುದು.

೪೮. ಆದುದರಿಂದ ನನ್ನನ್ನಾಶ್ರಯಿಸಿದವನೂ, ನಿನಗೆ ಉಚಿತ ಭಾಗವನ್ನು ಕೊಡುವವನೂ ಆದ ಮಹಾರಾಜನಲ್ಲಿ ಕೋಪವನ್ನು ಬಿಟ್ಟುಬಿಡು. ಲೋಕದಲ್ಲಿ ಯಾವ ಯಾವ ಮನುಷ್ಯರು ಈ ಮಾಸಧರ್ಮವನ್ನು ನೆರವೇರಿಸುವರೊ, ಅವರೆಲ್ಲರೂ ನಿನಗೆ ಭಾಗವನ್ನು ಕೊಡುವರು.

೪೯. ಅಂತಹ ಭಕ್ತರಿಗೆ ಶಾಸ್ತ್ರೋಕ್ತಗಳಾದ ವೈಶಾಖಮಾಸದ ಮಹಾ ಧರ್ಮಗಳನ್ನಾಚರಿಸುವುದರಲ್ಲಿ ಎಂದಿಗೂ ವಿಘ್ನವನ್ನುಂಟುಮಾಡಬೇಡ. ಎಲೈ ಮಹಾಭಾಗನೆ! ಆದರೆ ಧರ್ಮರಕ್ಷಣೆಗಾಗಿ ನಿಯಮಿಸಲ್ಪಟ್ಟಿರುವ ನಿನ್ನನ್ನು ಮರೆತು ನನಗೆ ಮಾತ್ರ ಯಾರು ಪೂಜಾದಿಗಳನ್ನು ಮಾಡುವರೊ, ಅವರಿಗೆ ಮಾತ್ರ ನನ್ನ ಆಜ್ಞೆಯನ್ನನುಸರಿಸಿ ನೀನು ಶಿಕ್ಷೆಯನ್ನು ಮಾಡು.

೫೦. ಕೀರ್ತಿಮಂತಮಹಾರಾಜನಿಂದ ನಿನಗೆ ಭಾಗವನ್ನು ಕೊಡಿಸಲು ನನ್ನ ಭಕ್ತನಾದ ಸುನಂದನನ್ನು ಆತನಲ್ಲಿಗೆ ಈಗಲೇ ಕಳುಹಿಸಿಕೊಡುವೆನು. ನನ್ನ ಅಪ್ಪಣೆಯಂತೆ ಅದು ಹೋಗಿ ನಿನಗೆ ಉಚಿತ ಭಾಗವನ್ನು ಆತನಿಂದ ಕೊಡಿಸಿಕೊಡುವುದು.”

೫೧. ಇಂತು ಯಮನು ತನ್ನ ಸಮೀಪದಲ್ಲಿಯೇ ನಿಂತಿರುವಷ್ಟರಲ್ಲಿಯೇ ಸರ್ವವ್ಯಾಪಿಯಾದ ಮಹಾವಿಷ್ಣುವು ರಾಜನಿಗೆ ಎಚ್ಚರಿಕೆಯನ್ನು ಕೊಡಲು ಸುನಂದಕನನ್ನು ಕಳುಹಿಸಿದನು.

೫೨. ಆ ಸುನಂದಕನೂ ನಿಮಿಷಮಾತ್ರದಲ್ಲಿಯೇ ರಾಜನ ಹತ್ತಿರಕ್ಕೆ ಹೋಗಿ ಆತನಿಗೆ ವಿಷಯವನ್ನು ತಿಳಿಸಿ ಪುನಃ ಮಹಾವಿಷ್ಣುವಿನ ಪಾರ್ಶ್ವದಲ್ಲಿ

ಯಮಂ ಸ್ವಯಂ ಸಾಂತ್ವಯಿತ್ವಾ ಸಮನುಜ್ಞಾಪ್ಯ ವೇಗತಃ ।
ಅತಿವಿಸ್ಮಯಮಾಪನ್ನೋ ಯಯೌ ಧಾಮ ಸಹಾನುಗೈಃ ॥ ೫೩ ॥
ಯಮೋಽಪಿ ಸ್ವಪುರೀಂ ಪ್ರಾಯಾತ್ಕಿಂಚಿತ್ ಸಂ ಹೃಷ್ಟಮಾನಸಃ ॥ ೫೪ ॥
ಪಶ್ಚಾದ್ವಿಷ್ಣೋರ್ನಿದೇಶೇನ ಸುನಂದಪರಿಬೋಧಿತಃ ।
ಭಾಗದಾಃ ಸಕಲಾ ಲೋಕಾ ಯೇ ವೈಶಾಖಪರಾಯಣಾಃ ॥ ೫೫ ॥
ಧರ್ಮರಾಜಂ ಪುರಸ್ಕೃತ್ಯ ಯೇ ನ ಕುರ್ವಂತಿ ಮಾನವಾಃ ।
ತೇಷಾಂ ಹಿ ಸ್ವಯಮಾದತ್ತೇ ಪುಣ್ಯಂ ವೈಶಾಖಸಂಭವಂ ॥ ೫೬ ॥
ಕುರ್ಯಾಚ್ಚ ಪ್ರತ್ಯಹಂ ಸ್ನಾನಂ ದದ್ಯಾದರ್ಘ್ಯಂ ಯಮಾಯ ವೈ ।
ವೈಶಾಖೇ ಸಕಲಂ ಪುಣ್ಯಮನ್ಯಥಾ ವಿಫಲಂ ಭವೇತ್ ॥ ೫೭ ॥
ಸೋದಕುಂಭಂ ಚ ದಧ್ಯನ್ನಂ ಪೌರ್ಣಮಾಸ್ಯಾಂ ಚ ಮಾಧವೇ ।
ಧರ್ಮರಾಜಂ ಸಮುದ್ದಿಶ್ಯ ದಾತವ್ಯಂ ಪ್ರಥಮಂ ಜನೈಃ ॥ ೫೮ ॥

---

ಬಂದು ನಿಂತಿತು. ಇಂತು ಪರಮಾತ್ಮನು ಯಮನಿಗೆ ಸಮಾಧಾನ ವಚನಗಳನ್ನು ಹೇಳಿ ಅಲ್ಲಿಯೇ ಅಂತರ್ಧಾನವನ್ನು ಹೊಂದಿದನು.

೫೩. ಬ್ರಹ್ಮದೇವನೂ ವಿಸ್ಮಿತನಾಗಿ ಯಮಧರ್ಮರಾಜನನ್ನು ಪ್ರಶಾಂತನನ್ನಾಗಿ ಮಾಡಿ ಕ್ಷಿಪ್ರದಲ್ಲಿಯೇ ಆತನ ಅನುಜ್ಞೆಯನ್ನು ಪಡೆದು ತನ್ನ ಪರಿವಾರದಿಂದಾವೃತನಾಗಿ ಸತ್ಯಲೋಕವನ್ನು ಕುರಿತು ಹೊರಟುಹೋದನು.

೫೪. ಯಮಧರ್ಮರಾಜನೂ ಸ್ವಲ್ಪ ಸಂತೋಷದಿಂದ ಕೂಡಿದ ಮನಸ್ಸುಳ್ಳವನಾಗಿ ತನ್ನ ರಾಜಧಾನಿಗೆ ಹಿಂದಿರುಗಿದನು.

೫೫–೫೬. ಬಳಿಕ ಸುನಂದವೆಂಬ ವಿಷ್ಣುಖಡ್ಗದ ಸಂದೇಶದಿಂದ ತಿಳುವಳಿಕೆಗೊಂಡ ಸಕಲಜನರೂ ಮಹಾವಿಷ್ಣುವಿನ ಅಪ್ಪಣೆಯನ್ನನುಸರಿಸಿ ವೈಶಾಖಮಾಸ ವ್ರತವನ್ನಾಚರಿಸುವಾಗ ಯಮಧರ್ಮರಾಯನಿಗೆ ಭಾಗವನ್ನು ಕೊಡುವವರಾದರು. ಯಾವ ಮಾನವರು ಧರ್ಮರಾಜನನ್ನು ಮೊದಲು ಸಂತೋಷಗೊಳಿಸಿ ಬಳಿಕ ವೈಶಾಖವ್ರತವನ್ನಾಚರಿಸುವುದಿಲ್ಲವೊ, ಅವರ ವೈಶಾಖವ್ರತದಿಂದುಂಟಾದ ಪುಣ್ಯವನ್ನೆಲ್ಲ ಯಮನು ತಾನೇ ಸೆಳೆದುಕೊಳ್ಳುವನು

೫೭. ಆದುದರಿಂದ ಯಮಧರ್ಮನಿಗಾಗಿ ಆ ಮಾಸದಲ್ಲಿ ಪ್ರತಿಪ್ರಾತಃಕಾಲದಲ್ಲಿಯೂ ಒಂದು ಸ್ನಾನವನ್ನು ಮಾಡಬೇಕು. ಮತ್ತು ಆತನಿಗೆ ಒಂದು ಅರ್ಘ್ಯವನ್ನು ಕೊಡಬೇಕು. ಇಲ್ಲದಿದ್ದರೆ ವೈಶಾಖಮಾಸದಲ್ಲಿ ಮಾಡಿದ ಪುಣ್ಯಕಾರ್ಯವೆಲ್ಲವೂ ನಿಷ್ಫಲವಾಗುವುದು.

೫೮. ಮತ್ತು ವೈಶಾಖಮಾಸದ ಪೌರ್ಣಮಿಯ ದಿನದಲ್ಲಿ ಧರ್ಮರಾಜನನ್ನೇ ಉದ್ದೇಶಮಾಡಿಕೊಂಡು ಉದಕಪೂರಿತಕುಂಭವನ್ನೂ ದಧ್ಯನ್ನವನ್ನೂ ಪ್ರಥಮದಲ್ಲಿಯೇ ಜನರು ನಿವೇದನಮಾಡಬೇಕು.

ಪಶ್ಚಾತ್ ಪಿತೄನ್ ಸಮುದ್ದಿಶ್ಯ ಗುರುಮುದ್ದಿಶ್ಯ ವೈ ನರಃ ।
ಮಧುಸೂದನಮುದ್ದಿಶ್ಯ ಪಶ್ಚಾದ್ದೇವಂ ಜನಾರ್ದನಂ ॥ ೫೯ ॥
ಶೀತಲೋದಕದಧ್ಯನ್ನಂ ತಾಂಬೂಲಂ ಚ ಸದಕ್ಷಿಣಂ ।
ಸಫಲಂ ಕಾಂಸ್ಯಪಾತ್ರಸ್ಥಂ ಬ್ರಾಹ್ಮಣಾಯ ನಿವೇದಯೇತ್ ॥ ೬೦ ॥
ದದ್ಯಾಚ್ಚ ಪ್ರತಿಮಾಂ ದಿವ್ಯಾಂ ಮಧುಸೂದನದೇವತಾಂ ।
ಮಾಸಧರ್ಮಪ್ರವಕ್ತ್ರೇ ಚ ದದ್ಯಾದ್ವಿಪ್ರಾಯ ಸೀದತೇ ॥ ೬೧ ॥
ತಮೇವ ಧರ್ಮವಕ್ತಾರಂ ಪೂಜಯೇದ್ವಿಭವೈಃ ಸ್ವಕೈಃ ।
ಇತ್ಯಾದಿಷ್ಟಃ ಸುನಂದೇನ ತಥಾ ರಾಜಾ ಚಕಾರ ಹ ॥ ೬೨ ॥
ಸ ನೀತ್ವಾ ಚಾಯುಷಃ ಶೇಷಂ ಭುಂಕ್ತ್ವಾ ಭೋಗಾನ್ ಯಥೇಪ್ಸಿತಾನ್ ।
ಪುತ್ರಪೌತ್ರಾದಿಭಿರ್ಯುಕ್ತೋ ಜಗಾಮ ಹರಿಮಂದಿರಂ ॥ ೬೩ ॥
ವೈಕುಂಠಸ್ಥೇ ನೃಪೇ ತಸ್ಮಿನ್ ವೇನೋ ರಾಜಾಧನೋಽಭವತ್ ।
ಸರ್ವೇ ಧರ್ಮಾಶ್ಚ ವೈಶಾಖಧರ್ಮಾ ಅಪಿ ವಿಶೇಷತಃ ॥ ೬೪ ॥

೫೯–೬೦. ಆಮೇಲೆ ಪಿತೃದೇವತೆಗಳನ್ನೂ, ಗುರುವನ್ನೂ, ಮಾಸ ದೇವತೆಯಾದ ಮಧುಸೂದನನನ್ನೂ, ಬಳಿಕ ಸರ್ವೇಶ್ವರನಾದ ಮಹಾ ವಿಷ್ಣುವನ್ನೂ ಉದ್ದೇಶಿಸಿ ತಂಪಾದ ಪಾನೀಯವನ್ನೂ, ದಧ್ಯೋದನವನ್ನೂ, ದಕ್ಷಿಣೆಯೊಡಗೂಡಿದ ತಾಂಬೂಲವನ್ನೂ, ಫಲಸಹಿತವಾದ ಕಂಚಿನ ಪಾತ್ರೆಯ ಕಳಶವನ್ನೂ ಬ್ರಾಹ್ಮಣೋತ್ತಮನಿಗೆ ದಾನಮಾಡಬೇಕು.

೬೧. ವೃತ್ತಿಹೀನನಾದ ಬ್ರಾಹ್ಮಣನ ಕಡೆಯಿಂದ ಈ ಮಾಸಮಾಹಾತ್ಮ್ಯದ ಚರಿತ್ರೆಯನ್ನು ಪುರಾಣರೂಪವಾಗಿ ಹೇಳಿಸಿ ಆತನಿಗೆ ಮಧುಸೂದನನ ಪ್ರತಿಮೆ ಯೊಂದನ್ನು ಸಮರ್ಪಿಸಬೇಕು.

೬೨–೬೩. ಧರ್ಮಗಳನ್ನುಪದೇಶಿಸುವ ಆ ಬ್ರಾಹ್ಮಣೋತ್ತಮನನ್ನೇ ಪ್ರತಿ ಯೊಬ್ಬನೂ ತನ್ನ ಐಶ್ವರ್ಯಕ್ಕನುಗುಣವಾಗಿ ಪೂಜಿಸಬೇಕು." ಇಂತೆಂದು ಸುನಂದನಿಂದ ಅಪ್ಪಣೆಯನ್ನು ಪಡೆದ ಮಹಾರಾಜನು ಹಾಗೆಯೇ ನಡೆಸಿಕೊಂಡು ಬರುತ್ತಿದ್ದನು. ಆ ಕೀರ್ತಿಮಂತಮಹಾರಾಜನು ಉಳಿದ ತನ್ನ ಆಯುಷ್ಯವನ್ನು ಸುಖವಾಗಿ ಕಳೆಯುತ್ತ, ಮನಸ್ಸಿನಲ್ಲಿ ಅಪೇಕ್ಷಿಸಿದ ಸಕಲ ಭೋಗಭಾಗ್ಯಗಳನ್ನೂ ಅನುಭವಿಸಿ, ಅಂತ್ಯದಲ್ಲಿ ಪುತ್ರಪೌತ್ರಸಂತಾನದೊಡನೆ ವಿಷ್ಣುಮಂದಿರವನ್ನು ಕುರಿತು ಪ್ರಯಾಣಮಾಡಿದನು.

೬೪–೬೫. ಇಂತು ಆ ರಾಜನು ವೈಕುಂಠವನ್ನು ಸೇರಲು ಆತನ ಮಗನಾದ ವೇನನು ರಾಜನಾದನು. ಈತನು ಬಹಳ ನೀಚನು. ದುಷ್ಟಬುದ್ಧಿಯಾದ ಈತನ ಆಗ್ರಹದಿಂದ ಸಕಲ ವೈದಿಕಧರ್ಮಗಳೂ, ವಿಶೇಷವಾಗಿ ವೈಶಾಖ

ದುರಾತ್ಮನಾ ಚ ತೇನೈವ ಲುಪ್ತಾ ಏವ ಬಭೂವಿರೇ ।
ನ ಪ್ರಖ್ಯಾತಾಃ ಪುನರ್ಭೂಮೌ ಭೂರಿಶೋ ಮೋಕ್ಷಹೇತವಃ ॥ ೬೫ ॥
ಯಃ ಕಶ್ಚಿನ್ನೈವ ಜಾನಾತಿ ವೈಶಾಖೋಕ್ತಾನಿಮಾಂಚ್ಛುಭಾನ್ ।
ಬಹುಜನ್ಮಾರ್ಜಿತೇ ಪುಣ್ಯಪರಿಪಾಕ ಉಪಾಗತೇ ।
ವೈಶಾಖೋಕ್ತೇಷು ಧರ್ಮೇಷು ಮತಿರಾತ್ಯಂತಿಕೀ ಭವೇತ್ ॥ ೬೬ ॥
ಮೈಥಿಲ ಉವಾಚ:—
ಪೂರ್ವಮನ್ವಂತರಸ್ಥೋ ಹಿ ವೇನೋ ರಾಜಾ ದುರಾತ್ಮವಾನ್ ॥ ೬೭ ॥
ಅಯಂ ವೈವಸ್ವತಸ್ಥೋ ಹಿ ರಾಜಾ ಚೇಕ್ಷ್ವಾಕುನಂದನಃ ।
ಇತಿ ಶ್ರುತಂ ಮಯಾ ಪೂರ್ವಮಿದಾನೀಂ ಚೋಚ್ಯತೇ ತ್ವಯಾ ॥ ೬೮ ॥
ಅಯಂ ವೈಕುಂಠಗಃ ಪಶ್ಚಾದ್ವೇನೋ ರಾಜಾ ಭವಿಷ್ಯತಿ ।
ಇತ್ಯೇತಂ ಸಂಶಯಂ ಛಿಂಧಿ ಶ್ರುತದೇವ ಮಹಾಮತೇ ॥ ೬೯ ॥

ಧರ್ಮಗಳೂ ಆಚರಣೆಗೆ ಬರದೆ ತಿರೋಹಿತಗಳಾದವು. ಮೋಕ್ಷಕ್ಕೆ ಹೇತುಗಳೆನಿಸಿದ ಸಕಲಧರ್ಮಗಳೂ ಭೂಲೋಕದಲ್ಲಿ ಬಹುವಾಗಿ ಪ್ರಖ್ಯಾತಿಯನ್ನು ಪಡೆಯಲಿಲ್ಲ.

೬೬. ಶುಭಾವಹಗಳಾದ ಈ ವೈಶಾಖಧರ್ಮಗಳನ್ನು ಸಾಮಾನ್ಯನಾದ ಯಾವ ಮನುಷ್ಯನೂ ತಿಳಿಯಲಾರನು. ಅನೇಕಜನ್ಮಗಳಲ್ಲಿ ಸಂಪಾದಿಸಿದ ಪುಣ್ಯದ ಫಲೋತ್ಪತ್ತಿಯ ಕಾಲವೊದಗಿದಾಗ ಮಾತ್ರವೇ ಈ ವೈಶಾಖಮಾಸ ಧರ್ಮಗಳಲ್ಲಿ ಸರ್ವೋತ್ಕರ್ಷಬುದ್ಧಿಯುಂಟಾಗುವುದು.

೬೭. ಶ್ರುತಕೀರ್ತಿಯು ಹೇಳುತ್ತಾನೆ:—ದುರಾತ್ಮನಾದ ಈ ವೇನ ಮಹಾರಾಜನು ಹಿಂದಿನ ಸ್ವಾಯಂಭುವಮನ್ವಂತರದಲ್ಲಿ ರಾಜ್ಯಭಾರವನ್ನು ಮಾಡಿದನೆಂದು ನಾವು ಕೇಳಿರುವೆವು.

೬೮. ಇಕ್ಷ್ವಾಕು ಕುಲಸಂಭೂತನಾದ ಕೀರ್ತಿಮಂತ ಮಹಾರಾಜನು ಈಗ ನಡೆಯುತ್ತಿರುವ ವೈವಸ್ವತಮನ್ವಂತರದಲ್ಲಿ ಹುಟ್ಟಿದವನಲ್ಲವೆ. ಹೀಗೆಂದೇ ನಾನು ಮುನ್ನ ಕೇಳಿರುವೆನು. ಆದರೆ ನೀನು ಈಗ ಇದಕ್ಕೆ ವಿಪರೀತವಾಗಿ ಹೇಳುತ್ತಿರುವೆ.

೬೯. ಈ ಕೀರ್ತಿಮಂತನು ವೈಕುಂಠಕ್ಕೆ ಹೊರಟುಹೋದನೆಂದೂ ಬಳಿಕಲೇ ವೇನನು ಮಹಾರಾಜನಾದನೆಂದೂ ಈಗ ನಿರೂಪಿಸುತ್ತಿರುವೆ. ಮಹಾಪ್ರಾಜ್ಞನಾದ ಶ್ರುತದೇವನೆ! ನನ್ನ ಮನಸ್ಸಿನಲ್ಲಿ ಉಂಟಾಗಿರುವ ಈ ಸಂದೇಹವನ್ನು ನೀನೇ ಹೋಗಲಾಡಿಸಬೇಕು.

ಶ್ರುತದೇವ ಉವಾಚ :—

ಪುರಾಣೇಷು ಚ ವೈಷಮ್ಯಂ ಯುಗಕಲ್ಪವ್ಯವಸ್ಥಯಾ ।
ನ ಚಾಪ್ರಾಮಾಣ್ಯ ಶಂಕಾ ತೇ ಕಥಾಯಾ ವ್ಯತ್ಯಯೇ ಕ್ವಚಿತ್ ॥ ೭೦ ॥
ಗತೇ ದೈನಂದಿನೇ ಕಲ್ಪೇ ಯಥೈಷಾ ಶಾಶ್ವತೀ ಶುಭಾ ।
ಮಾರ್ಕಂಡೇಯೇನ ಮೇ ಪ್ರೋಕ್ತಾ ಸಾ ಚೋಕ್ತಾ ತವ ಭೂಪತೇ ॥೭೧॥
ತಸ್ಮಾನ್ನಖ್ಯಾತಿಮಾಯಾಂತಿ ಧರ್ಮಾ ವೈಶಾಖಸಂಭವಾಃ ।
ಕಶ್ಚಿದೇವ ಹಿ ಜಾನಾತಿ ವಿರಕ್ತೋ ವಿಷ್ಣುತತ್ಪರಃ ॥ ೭೨ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ದ್ವಿತೀಯೇ ವೈಷ್ಣವಖಂಡೇ ವೈಶಾಖಮಾಸಮಾಹಾತ್ಮ್ಯೇ ನಾರದಾಂಬರೀಷಸಂವಾದೇ "ಯಮದುಃಖಸಾಂತ್ವನಂ" ನಾಮ ತ್ರಯೋದಶೋಽಧ್ಯಾಯಃ

೭೦. ಶ್ರುತದೇವನು ಹೇಳುತ್ತಾನೆ:—ಮಹಾರಾಜನೆ! ಯುಗಗಳ ಮತ್ತು ಕಲ್ಪಗಳ ಭೇದದ ದೃಷ್ಟಿಯಿಂದ ಪುರಾಣಗಳಲ್ಲಿ ಪರಸ್ಪರ ವಿರೋಧಗಳು ಬಹುವಾಗಿ ಕಾಣುತ್ತಿರುವುವು. ಅಷ್ಟರಮಾತ್ರದಿಂದಲೇ ಈ ಕಥೆಯ ವ್ಯತ್ಯಾಸವು ಅಪ್ರಮಾಣ್ಯಕ್ಕೆ ಕಾರಣವೆಂಬ ಸಂದೇಹವನ್ನು ನೀನು ಪಡಬೇಡ.

೭೧. ಕಳೆದುಹೋದ ಬ್ರಹ್ಮನ ದೈನಂದಿನ ಕಲ್ಪದಲ್ಲಿ ಶಾಶ್ವತವೂ, ಮಂಗಳಪ್ರದವೂ ಆದ ಈ ನಿಯಮವನ್ನು ಮಾರ್ಕಂಡೇಯ ಮಹಾಮುನಿಯು ನನಗೆ ಹೇಗೆ ಉಪದೇಶಿಸಿದನೋ, ಅದರಂತೆಯೇ ನಾನೂ ನಿನಗೆ ಮಾಸಮಾಹಾತ್ಮ್ಯೆಯನ್ನು ನಿರೂಪಿಸಿರುವೆನು.

೭೨. ಈ ಕಾರಣದಿಂದಲೇ ವೈಶಾಖಮಾಸದ ವ್ರತಪೂಜಾದಿ ಧರ್ಮಗಳು ಭೂಲೋಕದಲ್ಲಿ ವಿಶೇಷವಾಗಿ ಪ್ರಖ್ಯಾತಿಯನ್ನು ಪಡೆಯಲಿಲ್ಲವು. ಐಹಿಕಾಮುಷ್ಮಿಕ ಫಲಗಳಲ್ಲಿ ವಿರಕ್ತಿಯನ್ನು ಹೊಂದಿ ಮಹಾವಿಷ್ಣುವಿನಲ್ಲಿಯೇ ಅನನ್ಯಭಕ್ತಿಯನ್ನು ಹೊಂದಿರುವ ಮನುಷ್ಯನು ಮಾತ್ರ ಇವನ್ನು ತಿಳಿಯಲು ಅಧಿಕಾರಿಯಾಗುವನು.

ಇಲ್ಲಿಗೆ ಎಂಬತ್ತೊಂದು ಸಾವಿರ ಶ್ಲೋಕಗಳ ಸಂಹಿತೆಯಿಂದ ಪ್ರಸಿದ್ಧವಾದ ಶ್ರೀ ಸ್ಕಾಂದಮಹಾಪುರಾಣದ ಎರಡನೆಯ ವೈಷ್ಣವಖಂಡದ ವೈಶಾಖಮಾಸಮಾಹಾತ್ಮ್ಯದ ನಾರದಾಂಬರೀಷಸಂವಾದದಲ್ಲಿ "ಯಮದುಃಖಸಾಂತ್ವನ"ವೆಂಬ ಹದಿಮೂರನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥ ಚತುರ್ದಶೋಽಧ್ಯಾಯಃ

### ಕಥಾಪ್ರಶಂಸಾಯಾಂ ಪಿಶಾಚಮುಕ್ತಿಪ್ರಾಪ್ತಿವರ್ಣನಂ

ಶೃತದೇವ ಉವಾಚ :—

**ಯಃ ಪ್ರಾತಃ ಸ್ನಾತಿ ವೈಶಾಖೇ ಮೇಷಸಂಸ್ಥೇ ದಿವಾಕರೇ ।**
**ಮಧುಸೂದನಮಭ್ಯರ್ಚ್ಯ ಕಥಾಂ ಶೃತ್ವಾ ಹರೇರಿಮಾಂ ।**
**ಸ ತು ಪಾಪವಿನಿರ್ಮುಕ್ತೋ ಯಾತಿ ವಿಷ್ಣೋಃ ಪರಂ ಪದಂ ॥ ೧ ॥**
**ವಾಚ್ಯಮಾನಾಂ ಕಥಾಂ ಹಿತ್ವಾ ಯೋಽನ್ಯಾಂ ಸೇವೇತ ಮೂಢಧೀಃ ।**
**ರೌರವಂ ನರಕಂ ಪ್ರಾಪ್ಯ ಪೈಶಾಚೀಂ ಯೋನಿಮಾಪ್ನುಯಾತ್ ॥ ೨ ॥**
**ಅತ್ರೈವೋದಾಹರಂತೀಮಮಿತಿಹಾಸಂ ಪುರಾತನಂ ।**
**ಪಾಪಘ್ನಂ ಪಾವನಂ ಧರ್ಮ್ಯಂ ಸದ್ಭ್ಯೋಽವಂಧ್ಯಂ ಪುರಾತನಂ ॥ ೩ ॥**
**ಪುರಾ ಗೋದಾವರೀತೀರೇ ಕ್ಷೇತ್ರೇ ಬ್ರಹ್ಮೇಶ್ವರೇ ಶುಭೇ**
**ದುರ್ವಾಸಶಿಷ್ಯೌ ಪರಮಹಂಸೌ ಬ್ರಹ್ಮೈಕನಿಷ್ಠತೌ । ॥ ೪ ॥**

---

## ಕನ್ನಡದ ಅನುವಾದ

### ಪಿಶಾಚಮುಕ್ತಿಪ್ರಾಪ್ತಿವರ್ಣನ

೧. ಶ್ರುತದೇವನು ಹೇಳುತ್ತಾನೆ:—ಸೂರ್ಯನು ಮೇಷರಾಶಿಯಲ್ಲಿ ಸಂಚರಿಸುತ್ತಿರುವ ವೈಶಾಖಮಾಸದಲ್ಲಿ ಪ್ರಾತಃಕಾಲದಲ್ಲಿ ಸ್ನಾನವನ್ನು ಮಾಡಿಕೊಂಡು ಮಾಸಾಧಿನಾಯಕನಾದ ಮಧುಸೂದನನನ್ನು ಪೂಜಿಸಿ ಶ್ರೀಹರಿಗೆ ಸಂಬಂಧಿಸಿದ ಈ ಪುಣ್ಯ ಚರಿತ್ರೆಯನ್ನು ಕೇಳಲು ಪ್ರತಿಯೊಬ್ಬ ಮಾನವನೂ ಸಕಲಪಾತಕಗಳಿಂದಲೂ ಬಿಡುಗಡೆಯನ್ನು ಹೊಂದಿ ಮಹಾವಿಷ್ಣುವಿನ ಪರಮ ಪದವನ್ನು ಪಡೆಯುವನು.

೨. ಯಾವ ಮೂಢಮಾನವನು ಓದಲ್ಪಡುತ್ತಿರುವ ಈ ಪುಣ್ಯ ಚರಿತ್ರೆಯ ಶ್ರವಣವನ್ನು ಬಿಟ್ಟು ಇತರ ಧರ್ಮಗಳನ್ನಾಚರಿಸಲು ತೊಡಗುವನೊ, ಅವನು ರೌರವವೆಂಬ ನರಕವನ್ನು ಹೊಂದಿ ಕಡೆಗೆ ಪಿಶಾಚದ ಜನ್ಮವನ್ನು ತಾಳುವನು.

೩. ಈ ವಿಷಯದಲ್ಲಿ ಮುಂದೆ ಹೇಳುವ ಬಹಳ ಹಿಂದಿನ ಕಾಲದಲ್ಲಿ ನಡೆದ ಇತಿಹಾಸವೊಂದನ್ನು ಪುರಾಣಜ್ಞರು ಉದಾಹರಿಸುವರು. ಈ ಆಖ್ಯಾನಕವು ಪಾಪನಿವಾರಕವೂ, ಪುಣ್ಯಪ್ರದವೂ, ಧರ್ಮವರ್ಧಕವೂ, ಪುರಾತನವೂ ಸರ್ವಗ್ರಾಹ್ಯವೂ ಆಗಿರುವುದು.

೪. ಪೂರ್ವದಲ್ಲಿ ಗೋದಾವರೀನದಿಯ ದಡದಲ್ಲಿ ಬ್ರಹ್ಮೇಶ್ವರವೆಂಬ ಪವಿತ್ರವಾದ ಕ್ಷೇತ್ರವೊಂದಿದ್ದಿತು. ಅಲ್ಲಿ ದುರ್ವಾಸಮಹಾಮುನಿಯ ಶಿಷ್ಯರಾದ ಇಬ್ಬರು ಪರಮಹಂಸರು ಬ್ರಹ್ಮಚಿಂತನೆಯಲ್ಲಿಯೇ ಕಾಲವನ್ನು ಕಳೆಯುತ್ತಿದ್ದರು.

ಸದೈವೋಪನಿಷದ್ವಿದ್ಯಾನಿಷ್ಠತೌ ನಿರಪೇಕ್ಷಿತೌ ।
ಭಿಕ್ಷಾಮಾತ್ರಾಶಿನೌ ಪುಣ್ಯೌ ತೌ ಗುಹಾವಾಸಿನಾವುಭೌ ॥ ೫ ॥
ಸತ್ಯನಿಷ್ಠತಪೋನಿಷ್ಠಾವಿತಿ ಖ್ಯಾತೌ ಜಗತ್ರಯೇ ।
ತಯೋರ್ಮಧ್ಯೇ ಸತ್ಯನಿಷ್ಠಃ ಸದಾವಿಷ್ಣುಕಥಾಪರಃ ॥ ೬ ॥
ಶ್ರೋತೄಣಾಮಪ್ಯಭಾವೇ ಚ ವ್ಯಾಖ್ಯಾತೄಣಾಂ ತಥಾ ನೃಪ ।
ಸದಾ ಕರ್ಮಕಲಾ ನಿತ್ಯಾಃ ಕರೋತ್ಯದ್ಧಾ ಮುನೀಶ್ವರಃ ॥ ೭ ॥
ಶ್ರೋತಾ ಚೇದಸ್ತಿ ಯಃ ಕಶ್ಚಿತ್ತಸ್ಮೈ ವ್ಯಾಖ್ಯಾತ್ಯಹರ್ನಿಶಂ ।
ಯದಿ ವ್ಯಾಖ್ಯಾತಿ ಕಶ್ಚಿತ್ಪುಣ್ಯಾಂ ವಿಷ್ಣುಕಥಾಂ ಶುಭಾಂ ॥ ೮ ॥
ಸದಾ ಸಂಕುಚ್ಯ ಕರ್ಮಾಣಿ ಶೃಣೋತಿ ಶ್ರವಣೇ ರತಃ ।
ಅತಿ ದೂರಸ್ಥತೀರ್ಥಾನಿ ದೇವತಾಯತನಾನಿ ಚ ॥ ೯ ॥
ಹಿತ್ವಾ ಕಥಾವಿರೋಧೀನಿ ತಥಾ ಕರ್ಮಾಣಿ ಭೂರಿಶಃ ।
ಶೃಣೋತಿ ಚ ಕಥಾಂ ದಿವ್ಯಾಂ ಶ್ರೋತೃಭ್ಯೋ ವಕ್ತಿ ವೈ ಸ್ವಯಂ ॥ ೧೦ ॥

---

೫. ಅವರು ನಿರಂತರವೂ ಉಪನಿಷತ್ತುಗಳಲ್ಲಿ ಉಪದಿಷ್ಟಗಳಾದ ವಿದ್ಯೆಗಳಲ್ಲಿಯೇ ನಿರತರಾಗಿ ಯಾವ ವಿಧವಾದ ಅಪೇಕ್ಷೆಯನ್ನೂ ಮಾಡದೆ ಭಿಕ್ಷಾನ್ನಮಾತ್ರದಿಂದಲೇ ದೇಹವನ್ನು ಪೋಷಿಸಿಕೊಂಡು ಪುಣ್ಯಶಾಲಿಗಳಾಗಿ ಒಂದು ಗುಹೆಯಲ್ಲಿ ವಾಸಮಾಡಿಕೊಂಡಿದ್ದರು.

೬. ಅವರಿಬ್ಬರೂ ಸತ್ಯನಿಷ್ಠ, ತಪೋನಿಷ್ಠರೆಂಬ ಹೆಸರುಗಳಿಂದ ಮೂರು ಲೋಕಗಳಲ್ಲಿಯೂ ಪ್ರಸಿದ್ಧರಾಗಿದ್ದರು. ಅವರಲ್ಲಿ ಸತ್ಯನಿಷ್ಠನೆಂಬವನು ಯಾವಾಗಲೂ ಮಹಾವಿಷ್ಣುವಿನ ಚರಿತ್ರೆಗಳನ್ನು ಕೇಳುವುದರಲ್ಲಿಯೇ ಆಸಕ್ತನಾಗಿರುತ್ತಿದ್ದನು.

೭. ಎಲೈ ಮಹಾರಾಜನೆ! ಕೇಳುವವರಿಲ್ಲದಿದ್ದರೂ, ಅನುವಾದಮಾಡುವವರಿಲ್ಲದಿದ್ದರೂ ಆತನು ತನ್ನ ಪ್ರಸಂಗವನ್ನು ಬಿಡುತ್ತಿರಲಿಲ್ಲ. ಆ ಕಾಲದಲ್ಲಿ ಮುನಿಶ್ರೇಷ್ಠನಾದ ಆತನು ತನ್ನ ನಿತ್ಯಕರ್ಮಗಳನ್ನೂ ಸಹ ಸೂಕ್ಷ್ಮವಾಗಿಯೇ ಮಾಡಿ ಮುಗಿಸುತ್ತಿದ್ದನು.

೮–೧೦. ಯಾವನಾದರೂ ಭಕ್ತನಾದ ಶ್ರೋತೃವು ಸಿಕ್ಕಿದರೆ ಆತನಿಗೆ ಹಗಲಿರುಳೆನ್ನದೆ ವಿಷ್ಣುಲೀಲಾಪ್ರಸಂಗಗಳನ್ನು ವ್ಯಾಖ್ಯಾನಮಾಡಿಹೇಳುತ್ತಿದ್ದನು. ಪರಮಪುಣ್ಯವೂ, ಮಂಗಳಾವಹವೂ ಆದ ವಿಷ್ಣುಕಥೆಯನ್ನು ಯಾವನಾದರೂ ಅನುವಾದ ಮಾಡುತ್ತಿದ್ದುದನ್ನು ಕಂಡರೆ ಆತನು ತನ್ನ ಇತರ ಕಾರ್ಯವನ್ನು ಸಂಕೋಚಮಾಡಿಕೊಂಡು ಏಕಾಗ್ರಚಿತ್ತನಾಗಿ ಆ ಕಥೆಯನ್ನೇ ಕೇಳುತ್ತಿದ್ದನು. ಸತ್ಕಥೆಗಳನ್ನು ಕೇಳುವುದಕ್ಕೆ ಪ್ರತಿಬಂಧಕಗಳಾಗುವಂತಹ ಅತಿದೂರದ ತೀರ್ಥಯಾತ್ರೆಗಳನ್ನಾಗಲಿ, ದೇವಾಲಯದರ್ಶನಗಳನ್ನಾಗಲಿ,

**ವಿನಾ ಕಥಾಂ ನ ಜಾನಾತಿ ಸೇವ್ಯಮನ್ಯನ್ನರೇಶ್ವರ ।**
**ವ್ಯಾಖ್ಯಾತಿ ಚ ಗೃಹೇ ಸ್ವಸ್ಯ ವಕ್ತ್ರಾ ರೋಗಾದ್ಯುಪದ್ರುತಃ ॥ ೧೧ ॥**
**ಕೂಪಸ್ನಾನಪರೋ ಭೂತ್ವಾ ಶೃಣೋತ್ಯೇವ ಕಥಾಂ ಮುನಿಃ ।**
**ಕಥಾಯಾಶ್ಚ ವಿರಾಮೇ ತು ಸ್ವಕೃತ್ಯಂ ಸಾಧಯತ್ಯಲಂ ॥ ೧೨ ॥**
**ಕಥಾಂ ವೈ ಶೃಣ್ವತಃ ಪುಂಸೋ ಜನ್ಮಬಂಧೋ ನ ವಿದ್ಯತೇ ।**
**ಸತ್ವಶುದ್ಧಿಸ್ತತೋ ವಿಷ್ಣಾವರತಿಶ್ಚೈವ ಗಚ್ಛತಿ ॥ ೧೩ ॥**
**ರತಿಶ್ಚ ಜಾಯತೇ ವಿಷ್ಣೋಃ ಸ್ನೇಹೃದಂ ಚೈವ ಸಾಧುಷು ।**
**ನೀರಜಂ ನಿರ್ಗುಣಂ ಬ್ರಹ್ಮ ಸದ್ಯೋಹೃದ್ಯವರುಧ್ಯತೇ ॥ ೧೪ ॥**
**ಜ್ಞಾನಹೀನಸ್ಯ ವೈ ಪುಂಸಃ ಕರ್ಮ ವೈ ನಿಷ್ಫಲಂ ಭವೇತ್ ।**
**ಬಹುಧಾ ಚರಿತಂ ಚಾಽಪಿ ಯಥೈವಾಂಧಕದರ್ಪಣಂ ॥ ೧೫ ॥**

ಬಹು ಪ್ರಯಾಸಸಾಧ್ಯಗಳಾದ ಯಜ್ಞಯಾಗಾದಿ ಕರ್ಮಗಳನ್ನಾಗಲಿ ವಿಶೇಷವಾಗಿ ಮಾಡುವುದನ್ನು ಬಿಟ್ಟು ಪರಮಾತ್ಮನ ಲೀಲೆಗಳ ದಿವ್ಯಕಥೆಗಳನ್ನು ಮಾತ್ರ ಕೇಳುತ್ತಿದ್ದನು. ಅಲ್ಲದೆ ಕೇಳುವ ಕುತೂಹಲವುಳ್ಳವರಿಗೆ ವಿಸ್ತರಿಸಿ ಹೇಳುತ್ತಲೂ ಇದ್ದನು.

೧೧–೧೨. ಎಲೈ ಭೂಪಾಲಕನೆ! ಆತನಿಗೆ ವಿಷ್ಣುಕಥೆಯೊಂದನ್ನುಳಿದು ಮತ್ತೆ ಯಾವುದೂ ಸೇವಿಸಲರ್ಹವಾದುದಾಗಿ ಕಾಣುತ್ತಿರಲಿಲ್ಲ. ರೋಗಾದ್ಯುಪದ್ರವಗಳಿಂದ ಪೀಡಿತನಾದ ಪೌರಾಣಿಕನು ದೊರಕಿದರೆ ಆತನನ್ನು ತನ್ನ ಮನೆಯಲ್ಲಿಯೇ ಅನುವಾದಮಾಡುವಂತೆ ಏರ್ಪಡಿಸಿ ಮಹಾಮುನಿಯಾದ ಸತ್ಯನಿಷ್ಠನು ಬಾವಿಯಲ್ಲಿ ಪ್ರಾತಃಸ್ನಾನವನ್ನು ಮಾಡಿಕೊಂಡು ಅಲ್ಲಿಗೇ ಹೋಗಿ ಹರಿಚರಿತ್ರೆಯನ್ನು ಕೇಳುತ್ತಿದ್ದನು. ಆ ಕಥೆಯು ಮುಗಿದಮೇಲೆ ತನ್ನ ನಿತ್ಯನೈಮಿತ್ತಿಕ ಕಾರ್ಯಗಳನ್ನು ಅವಕಾಶವಿದ್ದಮಟ್ಟಿಗೆ ಸಾಧಿಸಿಕೊಳ್ಳುತ್ತಿದ್ದನು.

೧೩. ಹರಿಕಥೆಯನ್ನು ಕೇಳುವ ಮನುಷ್ಯನಿಗೆ ಜನನರೂಪವಾದ ಸಂಸಾರಬಂಧವಿರುವುದಿಲ್ಲ. ಸಂಸಾರದಲ್ಲಿ ಅಭಿರುಚಿಯಿಲ್ಲದುದರಿಂದ ಸತ್ತ್ವಗುಣದ ವೃದ್ಧಿಯುಂಟಾಗುವುದು. ಆದರಿಂದ ಮಹಾವಿಷ್ಣುವಿನ ವಿಷಯದಲ್ಲಿ ಅರುಚಿಯು ನಾಶವಾಗುವುದು.

೧೪. ಬಳಿಕ ಆತನಲ್ಲಿ ಭಕ್ತಿಭಾವವೂ, ಭಕ್ತರಾದ ಸಾಧುಜನರಲ್ಲಿ ಸ್ನೇಹವೂ ಉಂಟಾಗುವುವು. ಅವರ ಅನುಗ್ರಹದಿಂದ ರಜೋಗುಣರಹಿತವೂ ನಿರ್ಗುಣವೂ ಆದ ಬ್ರಹ್ಮವಸ್ತುವು ಕ್ಷಣಮಾತ್ರದಲ್ಲಿಯೇ ಹೃದಯದಲ್ಲಿ ಪ್ರಕಾಶಿತವಾಗುವುದು.

೧೫. ವಿಷ್ಣುವಿನ ಮಾಹಾತ್ಮ್ಯಜ್ಞಾನವಿಲ್ಲದಿರುವ ಮನುಷ್ಯನು ಮಾಡಿದ ಸಮಸ್ತ ಸತ್ಕರ್ಮವೂ ನಿಷ್ಫಲವಾಗುವುದು. ಆ ಕರ್ಮವು ಎಷ್ಟು ವಿಧವಾಗಿ

ಕರ್ಮಾಣಿ ಕ್ರಿಯಮಾಣಾನಿ ಬಹುಧಾ ಶೋಚಿತಾತ್ಮಭಿಃ ।
ಸತ್ತ್ವಶುಧ್ಯೈ ಭವಂತ್ಯೇವ ಸತ್ತ್ವಶುಧ್ಯಾ ಶ್ರುತಿಂ ವ್ರಜೇತ್ ॥ ೧೬ ॥
ಶ್ರುತೇಸ್ತು ಜ್ಞಾನಮಾಸಾದ್ಯ ಜ್ಞಾತ್ವಾ ಧ್ಯಾನಾಯ ಕಲ್ಪತೇ ।
ಬಹುಧಾ ಶ್ರವಣಂ ಧ್ಯಾನಂ ಮನನಂ ಶ್ರುತಿಚೋದಿತಂ ॥ ೧೭ ॥
ಯತ್ರ ವಿಷ್ಣುಕಥಾ ನಾಸ್ತಿ ಯತ್ರ ಸಾಧುಜನಾ ನ ಹಿ ।
ಸಾಕ್ಷಾದ್ಗಂಗಾತಟಂ ವಾಽಪಿ ತ್ಯಾಜ್ಯಮೇವ ನ ಸಂಶಯಃ ॥ ೧೮ ॥
ಯದ್ದೇಶೇ ತುಲಸೀ ನಾಸ್ತಿ ವೈಷ್ಣವಂ ಧಾಮ ವಾ ಶುಭಂ ।
ಯತ್ರ ವಿಷ್ಣುಕಥಾ ನಾಸ್ತಿ ಮೃತಸ್ತತ್ರ ತಮೋ ವ್ರಜೇತ್ ॥ ೧೯ ॥
ಯದ್ಗ್ರಾಮೇ ವೈಷ್ಣವಂ ಧಾಮ ನಾಸ್ತಿ ಕೃಷ್ಣಮೃಗೋಽಪಿ ವಾ ।
ಯತ್ರ ವಿಷ್ಣುಕಥಾ ನಾಸ್ತಿ ಸಾಧವೋ ವಾ ತದಾಶ್ರಯಾಃ ॥ ೨೦ ॥
ಮೃತಸ್ತತ್ರ ಪುಮಾನ್ ಕ್ಷಿಪ್ರಂ ಶ್ವಾನಯೋನಿಶತಂ ವ್ರಜೇತ್ ।
ವಿಚಾರ್ಯೋಪನಿಷದ್ವಿದ್ಯಾಮಿತಿ ನಿಶ್ಚಿತ್ಯ ವೈ ಮುನಿಃ ॥ ೨೧ ॥

ಎಷ್ಟು ಕಷ್ಟದಿಂದಾಚರಿಸಲ್ಪಟ್ಟರೂ ಕುರುಡನ ಕೈಯೊಳಗಿನ ಕನ್ನಡಿಯಂತೆಯೇ ಸರಿ.

೧೬–೧೭. ಸಂಸಾರದಲ್ಲಿ ಸಿಕ್ಕಿ ಬಹುವಿಧವಾಗಿ ಶೋಕಪಡುತ್ತಿರುವ ಜನರಿಂದ ಮಾಡಲ್ಪಟ್ಟ ಸಮಸ್ತ ಸತ್ಕರ್ಮಗಳೂ ಅವರ ಸತ್ತ್ವಶುದ್ಧಿಗೆ ಮಾತ್ರ ಕಾರಣಗಳಾಗಿರುವುವು. ಸತ್ತ್ವಶುದ್ಧಿಯ ಫಲವಾಗಿ ವೇದಾರ್ಥಗಳ ಜ್ಞಾನವುಂಟಾಗುವುದು. ಇದರಿಂದ ವೇದಪ್ರತಿಪಾದ್ಯನಾದ ಮಹಾವಿಷ್ಣುವಿನ ಜ್ಞಾನವುಂಟಾಗಿ ಕ್ರಮವಾಗಿ ಧ್ಯಾನಕ್ಕೆ ಅನುಕೂಲವುಂಟಾಗುವುದು. ವೇದಗಳಲ್ಲಿ ವಿಸ್ತರಿಸಲ್ಪಟ್ಟಿರುವ ಶ್ರವಣಗಳೂ, ಮನನಗಳೂ, ನಿದಿಧ್ಯಾಸಗಳೂ ಅನೇಕ ವಿಧಿಗಳಾಗಿರುವುವು.

೧೮. ಎಲ್ಲಿ ವಿಷ್ಣುಚರಿತ್ರೆಯು ಹೇಳಲ್ಪಡುವುದಿಲ್ಲವೊ, ಎಲ್ಲಿ ಸಾಧುಜನರ ಸಹವಾಸವಿಲ್ಲವೊ, ಆ ಪ್ರದೇಶವು ಸಾಕ್ಷಾತ್ತಾಗಿ ಗಂಗಾತೀರದ ಪ್ರದೇಶವಾದರೂ ಅದನ್ನು ಸಜ್ಜನರು ತ್ಯಜಿಸಬೇಕೆಂಬುದರಲ್ಲಿ ಸಂದೇಹವಿಲ್ಲವು.

೧೯. ಯಾವ ಪ್ರದೇಶದಲ್ಲಿ ತುಲಸೀವನಗಳಿಲ್ಲವೊ, ಎಲ್ಲಿ ಪವಿತ್ರಗಳಾದ ಮಹಾವಿಷ್ಣು ಮಂದಿರಗಳಿಲ್ಲವೊ, ಎಲ್ಲಿ ಹರಿಕಥೆಗಳು ನಡೆಯುವುದಿಲ್ಲವೊ, ಅಲ್ಲಿ ಮರಣವನ್ನು ಪಡೆದ ಮನುಷ್ಯನು ಅಂಧಂತಮಸ್ಸನ್ನು ಹೊಂದುವನು.

೨೦–೨೧. ಯಾವ ಊರಿನಲ್ಲಿ ವಿಷ್ಣುದೇವಾಲಯವೂ, ಕೃಷ್ಣಸಾರಮೃಗಗಳೂ ಇರುವುದಿಲ್ಲವೊ, ಎಲ್ಲಿ ವಿಷ್ಣುಲೀಲೆಗಳ ಚರಿತ್ರೆಗಳು ಅನುವಾದ ಮಾಡಲ್ಪಡುವುದಿಲ್ಲವೊ, ಅವುಗಳನ್ನು ಕೇಳಲು ಸಾಧುಜನರು ಎಲ್ಲಿ ಒಟ್ಟುಗೂಡುವುದಿಲ್ಲವೊ,

ಸದಾ ವಿಷ್ಣುಕಥಾಽಽಸಕ್ತೋ ವಿಷ್ಣುಭಕ್ತಿಪರಾಯಣಃ ।
ನ ಕಿಂಚಿದಧಿಕಂ ಜಾತು ಮನ್ಯತೇ ಶ್ರವಣಾತ್ಪರಂ ॥ ೨೨ ॥
ಇತರಸ್ತು ತಪೋನಿಷ್ಠಃ ಕರ್ಮನಿಷ್ಠೋ ದುರಾಗ್ರಹೀ ।
ನ ವ್ಯಾಖ್ಯಾತಿ ಸ್ವಯಂ ವಾಽಪಿ ನ ಶೃಣೋತಿ ಚ ಸತ್ಕಥಾಂ ॥ ೨೩ ॥
ವಾಚ್ಯಮಾನಾಂ ಕಥಾಂ ಹಿತ್ವಾ ತೀರ್ಥಸ್ನಾನಾಯ ಗಚ್ಛತಿ ।
ತೀರ್ಥೇಽಪಿ ಚ ಪ್ರವೃತ್ತಾಯಾಂ ಕಥಾಯಾಂ ಭೂಮಿಪಾಲಕ ॥ ೨೪ ॥
ಕರ್ಮಲೋಪಭಯಾದ್ದೂರಂ ಯಾತಿ ಚಾಂಚಲ್ಯಶಂಕಿತಃ ॥ ೨೫ ॥
ವ್ರಜಂತಿ ಗೃಹಕೃತ್ಯಾರ್ಥಸಂಗಮಾತ್ಪರತೋ ಜನಾಃ ।
ನ ಶ್ರೋತಾರೋ ನ ವಕ್ತಾರಸ್ತಸ್ಯ ಪಾರ್ಶ್ವೇ ತು ಕರ್ಮಿಣಃ ॥ ೨೬ ॥

ಅಲ್ಲಿ ಮೃತನಾದ ಮನುಷ್ಯನು ಶೀಘ್ರದಲ್ಲಿಯೇ ಒಂದುನೂರು ನಾಯಿಯ ಜನ್ಮಗಳನ್ನು ಪಡೆಯುವನು. ಇಂತೆಂದು ಆ ಸತ್ಯನಿಷ್ಠ ಮಹಾಮುನಿಯು ಸಮಸ್ತ ಉಪನಿಷತ್ತುಗಳ ಅರ್ಥವನ್ನೂ ವಿಚಾರಮಾಡಿ ತನ್ನ ಮನಸ್ಸಿನಲ್ಲಿಯೇ ದೃಢನಿಶ್ಚಯವನ್ನು ಮಾಡಿಕೊಂಡಿದ್ದನು.

೨೨. ಆತನು ಸರ್ವಕಾಲದಲ್ಲಿಯೂ ವಿಷ್ಣುಕಥೆಗಳ ಶ್ರವಣದಲ್ಲಿಯೇ ಆಸಕ್ತಿಯುಳ್ಳವನಾಗಿ ಮಹಾವಿಷ್ಣುವನ್ನೇ ನಿರಂತರವೂ ಸ್ಮರಿಸುತ್ತಿದ್ದನು. ವಿಷ್ಣುಮಾಹಾತ್ಮ್ಯದ ಶ್ರವಣಕ್ಕಿಂತ ಅಧಿಕವೂ ಉತ್ತಮವೂ ಆದುದು ಯಾವುದೂ ಇಲ್ಲವೆಂದೇ ಆತನು ತಿಳಿದಿದ್ದನು.

೨೩. ಈತನ ಸಹಾಧ್ಯಾಯಿಯಾದ ತಪೋನಿಷ್ಠನಾದರೋ, ಕೇವಲ ಕರ್ಮಗಳಲ್ಲಿಯೇ ನಿರತನಾಗಿ ತನ್ನ ರೀತಿಯೇ ಉತ್ತಮವೆಂಬ ದುರಾಗ್ರಹ ದಿಂದ ತಾನೂ ಹರಿಚರಿತ್ರೆಗಳನ್ನು ವ್ಯಾಖ್ಯಾನಮಾಡುತ್ತಿರಲಿಲ್ಲ. ಮತ್ತು ಇತರರು ನಿರೂಪಿಸುವ ಸತ್ಕಥೆಗಳನ್ನೂ ಕೇಳುತ್ತಿರಲಿಲ್ಲ.

೨೪–೨೫. ತನ್ನ ಆಶ್ರಮದಲ್ಲಿ ನಡೆಯುತ್ತಿರುವ ಸತ್ಕಥೆಗಳನ್ನು ಕೇಳ ಲಾರದೆ ಆತನು ತೀರ್ಥಸ್ನಾನಗಳ ವ್ಯಾಜದಿಂದ ಹೊರಟು ಹೋಗುತ್ತಿದ್ದನು. ಎಲೈ ಮಹಾರಾಜನೆ! ಆ ತೀರ್ಥಕ್ಷೇತ್ರಗಳಲ್ಲಿಯೂ ಹರಿಕಥೆಗಳು ನಡೆಯು ತ್ತಿರಲು ಮನಶ್ಚಾಂಚಲ್ಯವು ಪ್ರಬಲವಾಗಿದ್ದುದರಿಂದ ತನ್ನ ಆಹ್ನಿಕಾದಿ ಕ್ರಿಯೆ ಗಳಿಗೆ ಲೋಪವುಂಟಾಗುವುದೆಂಬ ಭಯದಿಂದ ದೂರದಲ್ಲಿಯೇ ತಿರುಗಾಡು ತ್ತಿದ್ದನು.

೨೬. ಇಂತಹ ಸತ್ಕಾಲಕ್ಷೇಪಗಳು ನಡೆಯುತ್ತಿರುವ ಸ್ಥಳಗಳನ್ನು ಬಿಟ್ಟು ಸಾಮಾನ್ಯಜನರು ತಮ್ಮ ಗೃಹಕಾರ್ಯಗಳ ನಿಮಿತ್ತವಾಗಿ ಇತರ ಸ್ಥಳಗಳಿಗೆ ಹೋಗುವರಲ್ಲವೆ. ಅವರು ಹರಿಕಥೆಗಳನ್ನು ಹೇಳುವುದೂ ಇಲ್ಲ, ಕೇಳುವುದೂ

ದುರಾತ್ಮನಸ್ತು ದುರ್ಬುದ್ಧೇಃ ಕಾಲ ಏವಂ ಕ್ಷಯಂ ಗತೇ ।
ಜಿಹ್ವಾಂ ಶ್ರುತಿಂ ಚ ನ ಕ್ವಾಪಿ ಸಂಪ್ರಾಪ್ತಾ ಹಿ ಕಥಾ ವಿಭೋಃ ॥ ೨೭ ॥
ಅಶ್ರೋತೃತ್ವಾದವಕ್ತೃತ್ವಾದ್ದುರ್ಬುದ್ಧಿತ್ವಾದ್ದುರಾಗ್ರಹಾತ್ ।
ಪಶ್ಚಾತ್ಪಂಚತ್ವಮಾಸಾದ್ಯ ಸದ್ಯೋ ಧರ್ಮೇಣ ವೈ ಮುನಿಃ ॥ ೨೮ ॥
ಪಿಶಾಚೋಽಭೂಚ್ಛಮೀವೃಕ್ಷೇ ಛಿನ್ನಕರ್ಣಾಹ್ವಯೋಽಬಲಃ ।
ನಿರಾಶ್ರಯೋ ನಿರಾಹಾರಃ ಶುಷ್ಕಕಂಠೋಷ್ಠತಾಲುಕಃ ॥ ೨೯ ॥
ಏವಂ ವೈ ಖಿದ್ಯಮಾನಸ್ಯ ಸಮಾ ದಿವ್ಯಾಯುತಾ ಗತಾಃ ।
ನಾಪಶ್ಯತ್ಸ್ವಸ್ಯ ತ್ರಾತಾರಂ ನಿರಾಹಾರೋಽತಿದುಃಖಿತಃ ॥ ೩೦ ॥
ಸ್ವಕೃತಂ ಚಿಂತಯಾನಶ್ಚ ಮತ್ತೋಽನ್ಮತ್ತ ಇವಾಭ್ರಮತ್ ।
ಕ್ಷುಧಯಾ ಪರ್ಯಟನ್ನಾಽಪಿ ನಿರ್ವೃತಿಂ ನಾಪ ಮೂಢಧೀಃ ॥ ೩೧ ॥

---

ಇಲ್ಲ. ಆದುದರಿಂದ ಆ ತಪೋನಿಷ್ಠನ ಸಂಗಡ ಯಾವಾಗಲೂ ಕೇವಲ ಕರ್ಮ ನಿಷ್ಠರೇ ಓಡಾಡುತ್ತಿದ್ದರು.

೨೭. ದುರಾತ್ಮನೂ ದುರ್ಬುದ್ಧಿಯೂ ಆದ ಈತನು ಇಂತು ಕಾಲವನ್ನು ಕರ್ಮಾನುಷ್ಠಾನಗಳಲ್ಲಿಯೇ ಕಳೆಯುತ್ತಿರಲು ಪರಮಾತ್ಮನ ಸಚ್ಚರಿತ್ರೆಯು ಆತನ ನಾಲಿಗೆಗಾಗಲಿ ಕಿವಿಗಾಗಲಿ ಒಮ್ಮೆಯೂ ಪ್ರಾಪ್ತವಾಗಲಿಲ್ಲ.

೨೮. ಹರಿಕಥೆಗಳನ್ನು ಕೇಳದಿದ್ದುದರಿಂದಲೂ, ಹೇಳದಿದ್ದುದರಿಂದಲೂ, ದುಷ್ಟಮನಸ್ಕನಾದುದರಿಂದಲೂ, ತನ್ನ ಮತವೇ ಸರಿಯೆಂಬ ದುರಾಗ್ರಹ ಯುಕ್ತನಾಗಿದ್ದುದರಿಂದಲೂ, ಆ ಮುನಿಯು ತನ್ನ ಧರ್ಮವನ್ನೇ ನಡೆಸಿಕೊಂಡು ಬರುತ್ತ ಕಾಲಕ್ರಮದಲ್ಲಿ ಮರಣವನ್ನೂ ಹೊಂದಿದನು.

೨೯. ಬಳಿಕ ಒಂದು ಶಮೀವೃಕ್ಷದಲ್ಲಿ ಛಿನ್ನಕರ್ಣನೆಂಬ ಹೆಸರಿನಿಂದ ಪಿಶಾಚಿಯಾಗಿ ವಾಸಿಸುತ್ತಿದ್ದನು. ಆತನು ನಿಶ್ಶಕ್ತನೂ, ಆಶ್ರಯಹೀನನೂ, ನಿರಾಹಾರನೂ, ಒಣಗಿದ ಗಂಟಲು, ತುಟಿ ಬಾಯಿಗಳುಳ್ಳವನೂ ಆಗಿ ಬಹಳವಾಗಿ ದುಃಖಪಡುತ್ತಿದ್ದನು.

೩೦. ಇಂತು ಆತನು ಕ್ಲೇಶಪಡುತ್ತಿರಲು, ದೇವಮಾನದಲ್ಲಿ ಹತ್ತುಸಾವಿರ ವರ್ಷಗಳು ಕಳೆದು ಹೋದುವು. ಆದರೂ ಆಹಾರವಿಲ್ಲದುದರಿಂದ ಬಹಳ ಕ್ಲೇಶಗೊಳ್ಳುತ್ತಿದ್ದ ಆತನು ತನ್ನ ಕಷ್ಟವನ್ನು ಕಳೆದು ಸಂರಕ್ಷಿಸುವ ಒಬ್ಬರನ್ನೂ ಕಾಣಲಿಲ್ಲ.

೩೧. ಆ ಮಂದಬುದ್ಧಿಯು ತಾನು ಹಿಂದೆ ಮಾಡಿದುದನ್ನೆಲ್ಲ ನೆನಸಿ ಕೊಂಡು ಮೈಮರೆತವನಂತೆಯೂ, ಹುಚ್ಚನಂತೆಯೂ ಅಲೆದಾಡುತ್ತಿದ್ದನು. ಹಸಿವಿನಿಂದ ಸಂಕಟಪಡುತ್ತ ತಿರುಗುತ್ತಿದ್ದರೂ ಆತನು ಎಂದಿಗೂ ಮನಶ್ಶಾಂತಿ ಯನ್ನೇ ಪಡೆಯಲಿಲ್ಲ.

ಕೃಶಾನುಸದೃಶೋ ವಾಯುರಂಗಂ ಸ್ಪೃಷ್ಟ್ವಾ ಕೃತಾತ್ಮನಃ ।
ಕಾಲಾಗ್ನಿತುಲ್ಯಾ ಆಪಶ್ಚ ಫಲಪುಷ್ಪಾದಿಕಂ ವಿಷಂ ।
ನ ಕ್ವಾಪಿ ಸುಖಮಾಪೇದೇ ಕರ್ಮಠೋ ದೀನಧೀರಯಂ ॥ ೩೨ ॥
ಏವಂ ವ್ಯವಸಿತೇ ತಸ್ಮಿನ್ನರಣ್ಯೇ ಜನವರ್ಜಿತೇ ।
ಕಥಯಾ ರಹಿತೇ ಕ್ಷೇತ್ರೇ ಸ್ವಾಶ್ರಯೇ ಸಾಧುವರ್ಜಿತೇ ॥ ೩೩ ॥
ದೈವಾದಾಯಾತ್ ಸತ್ಯನಿಷ್ಠಸ್ತದಾ ಪೈಠಿನಸೀಂ ಪುರೀಂ ।
ಗಚ್ಛನ್ಮಾರ್ಗೇ ದದರ್ಶಾಽಸೌ ಛಿನ್ನಕರ್ಣಂ ಬಹುವ್ಯಥಂ ॥ ೩೪ ॥
ದೃಷ್ಟ್ವಾಽಽತ್ಮಾನಂ ದ್ರಾವಯಂತಂ ರುದಂತಂ ಕ್ಷುಧಯಾಽಽತುರಂ ।
ಮಾಭೈಷೀರಿತಿ ಚಾಭಾಷ್ಯ ಕೋಽಸೀತ್ಯಾಹ ಮುನೀಶ್ವರಃ ॥ ೩೫ ॥
ದಶೇದೃಶೀ ಚ ಕಸ್ಮಾತ್ತೇ ನ ತೇ ದುಃಖಮತಃಪರಂ ।
ಇತ್ಯಾಶ್ವಸ್ತೋಽಮುನಾ ಛಿನ್ನಕರ್ಣಃ ಪ್ರಾಹಾತಿವಿಹ್ವಲಃ ॥ ೩೬ ॥

೩೨. ಅಕೃತಾತ್ಮನಾದ ಆತನಿಗೆ ಮೈಮೇಲೆ ಬೀಸುವ ಮಂದಮಾರುತವೂ ಬೆಂಕಿಯಂತೆ ತೋರುತ್ತಿದ್ದಿತು. ಮಳೆಯ ನೀರಿನ ಹನಿಗಳು ಪ್ರಳಯಕಾಲದ ಬೆಂಕಿಯ ಮಳೆಯ ಕೆಂಡಗಳಂತೆ ಕಾಣುತ್ತಿದ್ದುವು. ಫಲಗಳೂ ಪುಷ್ಪಗಳೂ ವಿಷಸಮಾನಗಳಾಗಿದ್ದುವು. ಇಂತು ಕೇವಲ ಕರ್ಮನಿಷ್ಠನಾಗಿದ್ದು ಮರಣ ವನ್ನು ಹೊಂದಿದ ದೀನಾತ್ಮನಾದ ತಪೋನಿಷ್ಠನು ಎಲ್ಲಿಯೂ ಸುಖವನ್ನು ಪಡೆಯಲಿಲ್ಲ.

೩೩. ಈ ವಿಧವಾದ ಪಿಶಾಚದ ನಿವಾಸವಾದುದರಿಂದ ಆ ಅರಣ್ಯವೆಲ್ಲವೂ ಜನರಹಿತವಾಯಿತು. ಆ ಪ್ರದೇಶವೂ ವಿಷ್ಣುಕಥಾಹೀನವಾಗಿ ಪಿಶಾಚಾಶ್ರಯ ವಾದುದರಿಂದ ಸಾಧುಗಳೂ ಸಹ ಅಲ್ಲಿಗೆ ಹೋಗುತ್ತಿರಲಿಲ್ಲ.

೩೪. ಹೀಗೆಯೇ ಕಾಲವು ಕಳೆಯುತ್ತಿರಲು ಒಮ್ಮೆ ಸತ್ಯನಿಷ್ಠನು ದೈವಾನು ಗ್ರಹದಿಂದಲೇ ಪೈಠನಗ್ರಾಮಕ್ಕೆ ಪ್ರಯಾಣಮಾಡುತ್ತ ಮಾರ್ಗಮಧ್ಯದಲ್ಲಿ ಬಹಳ ಕ್ಲೇಶಭರಿತನಾಗಿದ್ದ ಪಿಶಾಚಿಯಾದ ಛಿನ್ನಕರ್ಣನನ್ನು ಕಂಡನು.

೩೫. ತನ್ನನ್ನು ಕಂಡು ಓಡಿಹೋಗುತ್ತಲೂ, ಅಳುತ್ತಲೂ, ಹಸಿವಿನಿಂದ ಸಂಕಟಪಡುತ್ತಲೂ ಇದ್ದಂತಹ ಆ ಪಿಶಾಚವನ್ನು ನೋಡಿ ಸತ್ಯನಿಷ್ಠನು "ಭಯ ಪಡಬೇಡ"ವೆಂದು ಸಮಾಧಾನಗೊಳಿಸಿ, 'ನೀನು ಯಾರೆಂ'ದು ಪ್ರಶ್ನೆಮಾಡಿದನು.

೩೬. "ಇಂತಹ ದುರವಸ್ಥೆಯು ನಿನಗೆ ಏತಕ್ಕೆ ಪ್ರಾಪ್ತವಾಯಿತು? ಇದಕ್ಕಿಂತಲೂ ಹೆಚ್ಚಿನ ದುಃಖವು ನಿನಗೆ ಉಂಟಾಗಲಾರದಷ್ಟೆ." ಇಂತೆಂದು ಆ ಮುನಿವರ್ಯನಿಂದ ಆಶ್ವಾಸನವನ್ನು ಹೊಂದಿದವನಾಗಿ ಅತ್ಯಂತ ದುಃಖದಿಂದ ಛಿನ್ನಕರ್ಣನು ಹೇಳತೊಡಗಿದನು.

ತಪೋನಿಷ್ಠೋ ಯತಿರಹಂ ಶಿಷ್ಯೋ ದುರ್ವಾಸಸಃ ಪರಂ ।
ಬ್ರಹ್ಮೇಶ್ವರಕ್ಷೇತ್ರವಾಸೀ ಕರ್ಮನಿಷ್ಠೋ ದುರಾಗ್ರಹೀ ॥ ೩೭ ॥
ಕರ್ಮಲೋಪಭಯಾತ್ ಮೌಢ್ಯಾತ್ ಮಯಾ ದುರ್ಬುದ್ಧಿನಾ ಮುನೇ।
ಸಾಧುಭಿರ್ವಾಚ್ಯಮಾನಾಽಪಿ ನಾದೃತಾ ವಿಷ್ಣುಸತ್ಕಥಾ ॥ ೩೮ ॥
ನ ವ್ಯಾಖ್ಯಾತಾ ಚ ಶ್ರೋತೃಭ್ಯಃ ಕಥಾಕರ್ಮನಿಕೃಂತನೀ ।
ತೇನ ಕರ್ಮವಿಪಾಕೇನ ಮಹತಾಽಹಂ ಮೃತಿಂ ಗತಃ ॥ ೩೯ ॥
ಛಿನ್ನಕರ್ಣೋಽಭವಂ ನಾಮ್ನಾ ಪಿಶಾಚೋ ದುಃಖವಿಹ್ವಲಃ ।
ನ ಪಶ್ಯಾಮಿ ಚ ತ್ರಾತಾರಂ ದುಃಖಾದಸ್ಮಾತ್ಕಥಂಚನ ॥ ೪೦ ॥
ತವ ದೃಷ್ಟಿಪಥಂ ಯಾತೋ ದಿಷ್ಟ್ಯಾಽಹಂ ಗತಕಲ್ಮಷಃ ।
ಅದ್ಯಮೇ ದೇವತಾಸ್ತುಷ್ಟಾ ಗುರವಃ ಸಾಧವಶ್ಚ ಯೇ ॥ ೪೧ ॥
ಹರಿಶ್ಚಮೇ ಪ್ರಸನ್ನೋಽಭೂದ್ಯತಸ್ತೇ ದರ್ಶನಂ ಮಮ ।
ಪಪಾತ ಪಾದಯೋರ್ಭೂಮೌ ತ್ರಾಹಿ ತ್ರಾಹೀತಿ ವೈ ರುದನ್ ॥ ೪೨ ॥

೩೭. "ನಾನು ದುರ್ವಾಸಮಹರ್ಷಿಗಳಿಗೆ ಪರಮಪ್ರಿಯನಾದ ಶಿಷ್ಯನು. ತಪೋನಿಷ್ಠನೆಂಬ ಹೆಸರಿನ ಸಂನ್ಯಾಸಿಯು. ನಾನು ಬ್ರಹ್ಮೇಶ್ವರಕ್ಷೇತ್ರದಲ್ಲಿ ವಾಸಿಸುತ್ತ ಕೇವಲ ಕರ್ಮಗಳಲ್ಲಿಯೇ ನಿಷ್ಠೆಯುಳ್ಳವನಾಗಿ ಕರ್ಮವೇ ಸರ್ವಸ್ವವೆಂಬ ದುರಾಗ್ರಹವುಳ್ಳವನಾಗಿದ್ದೆನು.

೩೮. ಎಲೈ ಮಹಾಮುನಿಯೆ! ನನ್ನ ಕರ್ಮಗಳಿಗೆ ಲೋಪವುಂಟಾಗುವುದೆಂಬ ಭಯದಿಂದ ದುರ್ಬುದ್ಧಿಯುಳ್ಳವನಾಗಿ ನಾನು ಸಾಧುಗಳು ಕೀರ್ತನ ಮಾಡುತ್ತಿದ್ದ ವಿಷ್ಣುಸಚ್ಚರಿತ್ರೆಯನ್ನೂ ಕೇಳುವ ಆದರವುಳ್ಳವನಾಗಲಿಲ್ಲ.

೩೯. ಸಕಲ ಕರ್ಮಬಂಧಗಳನ್ನೂ ಕತ್ತರಿಸುವ ಹರಿಕಥೆಯನ್ನು ಕೇಳುವವರಿಗೂ ನಾನು ಅನುವಾದಮಾಡಿ ಹೇಳಲಿಲ್ಲ. ಮಹತ್ತರವಾದ ಈ ಕರ್ಮವಿಪಾಕದಿಂದಲೇ ನಾನು ದೇಹವನ್ನು ತ್ಯಜಿಸಿದೆನು.

೪೦. ಈಗ ಛಿನ್ನಕರ್ಣನೆಂಬ ಹೆಸರಿನಿಂದ ಪಿಶಾಚಿಯಾಗಿ ಅತ್ಯಂತ ದುಃಖದಿಂದ ದಿಕ್ಕೆಟ್ಟಿರುವೆನು. ಈ ದುಃಖ ಸಮುದ್ರದಿಂದ ಹೇಗಾದರೂ ನನ್ನನ್ನು ಉದ್ಧಾರಮಾಡಿ ರಕ್ಷಿಸುವ ಯಾವ ಪುಣ್ಯಾತ್ಮನನ್ನೂ ಕಾಣೆನು.

೪೧. ದೈವಾನುಗ್ರಹದಿಂದಲೇ ಇಂದು ನಾನು ನಿನ್ನ ದೃಷ್ಟಿಗೆ ಬೀಳುವವನಾದೆನು. ನನ್ನ ಪಾತಕಗಳೂ ನಾಶವನ್ನು ಹೊಂದಿದವು. ಇಂದು ನನ್ನ ದೇವತೆಗಳೂ ಗುರುಗಳೂ ಸಾಧುಗಳೂ ಸಂತುಷ್ಟರಾದರು.

೪೨. ನನಗೆ ನಿನ್ನ ದರ್ಶನವು ಆದ ಮಾತ್ರದಿಂದಲೇ ಮಹಾವಿಷ್ಣುವು ನನ್ನಲ್ಲಿ ಪ್ರಸನ್ನನಾಗಿರುವನೆಂದು ತಿಳಿಯುವೆನು." ಇಂತೆಂದು ಛಿನ್ನಕರ್ಣನು

ತತಸ್ತು ಕೃಪಯಾಽಽವಿಷ್ಟಃ ಸತ್ಯನಿಷ್ಠೋ ಮಹಾಯಶಾಃ ।
ದೋರ್ಭ್ಯಾಮುತ್ಥಾಪಯಾಮಾಸ ಶಂತಮಾಭ್ಯಾಂ ಮುನೀಶ್ವರಃ ॥ ೪೩ ॥
ತತಸ್ತ್ವಪ ಉಪಸ್ಪೃಸ್ಯ ದದೌ ಪುಣ್ಯಮನುತ್ತಮಂ ।
ವೈಶಾಖಮಾಸಮಾಹಾತ್ಮ್ಯಶ್ರವಣಸ್ಯಮುಹೂರ್ತಜಂ ॥ ೪೪ ॥
ತೇನ ಪುಣ್ಯಪ್ರಭಾವೇನ ಸದ್ಯೋ ಧ್ವಸ್ತಾಖಿಲಾಶುಭಃ ।
ಪಿಶಾಚದೇಹನಿರ್ಮುಕ್ತೋ ದಿವ್ಯದೇಹಧರೋಽಭವತ್ ॥ ೪೫ ॥
ದಿವ್ಯಂ ವಿಮಾನಮಾರುಹ್ಯ ತಂ ಪ್ರಣಮ್ಯ ಮಹಾಮುನಿಂ ।
ಆಮಂತ್ರ್ಯ ಚ ಪರಿಕ್ರಮ್ಯ ಯಯೌ ವಿಷ್ಣೋಃ ಪರಂ ಪದಂ ॥ ೪೬ ॥
ಸತ್ಯನಿಷ್ಠಸ್ತತೋ ಧೀಮಾನ್ ಯಯೌ ಪೈಠಿನಸೀಂ ಪುರೀಂ ।
ಮಾಹಾತ್ಮ್ಯಶ್ರವಣಸ್ಯೈವಂ ಚಿಂತಯಾನಃ ಪುನಃ ಪುನಃ ॥ ೪೭ ॥

---

"ಕಾಪಾಡು, ಕಾಪಾಡು" ಎಂದು ಕೂಗಿಕೊಂಡು ಅಳುತ್ತ ಸತ್ಯನಿಷ್ಠನ ಪಾದಗಳ ಬಳಿಯಲ್ಲಿ ಭೂಮಿಯ ಮೇಲೆ ಬಿದ್ದು ಹೊರಳಾಡುತ್ತಿದ್ದನು.

೪೩. ಇದನ್ನು ಕಂಡು, ಮುನೀಶ್ವರನೂ, ಮಹಾ ಕೀರ್ತಿವಂತನೂ ಆದ ಸತ್ಯನಿಷ್ಠನು ಕರುಣೆಯಿಂದ ಕೂಡಿದವನಾಗಿ ಸುಖಸ್ಪರ್ಶಗಳಾದ ತನ್ನ ಬಾಹುಗಳಿಂದ ಆತನನ್ನು ಮೇಲಕ್ಕೆಬ್ಬಿಸಿದನು.

೪೪. ಆತನು ಕೈಕಾಲುಗಳನ್ನು ತೊಳೆದುಕೊಂಡು ಶುದ್ಧಾಚಮನವನ್ನು ಮಾಡಿ ವೈಶಾಖಮಾಸದ ಮಹಾತ್ಮ್ಯೆಯನ್ನು ಒಂದು ಮುಹೂರ್ತ ಮಾತ್ರ ಕೇಳಿದುದರಿಂದ ಲಭಿಸಿದ ಅತ್ಯುತ್ತಮವಾದ ಪುಣ್ಯವನ್ನು ಆತನಿಗೆ ದಾನ ಮಾಡಿದನು.

೪೫. ಆ ಪುಣ್ಯದ ಪ್ರಭಾವದಿಂದಲೇ ಛಿನ್ನಕರ್ಣನು ತತ್‌ಕ್ಷಣದಲ್ಲಿಯೇ ತನ್ನ ಪಾತಕಗಳೆಲ್ಲವನ್ನೂ ಕಳೆದುಕೊಂಡು ಪಿಶಾಚಶರೀರವನ್ನು ತ್ಯಜಿಸಿ ದಿವ್ಯ ದೇಹವನ್ನು ಹೊಂದಿದನು.

೪೬. ಅವನು ಆ ಸತ್ಯನಿಷ್ಠಮಹಾಮುನಿಗೆ ನಮಸ್ಕರಿಸಿ, ಆತನ ಅಪ್ಪಣೆ ಯನ್ನು ಪಡೆದು, ಆತನಿಗೆ ಪ್ರದಕ್ಷಿಣೆಯನ್ನು ಮಾಡಿ, ತನಗಾಗಿ ಬಂದಿದ್ದ ದಿವ್ಯವಿಮಾನವನ್ನು ಏರಿಕೊಂಡು ಮಹಾವಿಷ್ಣುವಿನ ಪ್ರಿಯನಿವಾಸವಾದ ವೈಕುಂಠಲೋಕಕ್ಕೆ ಹೊರಟುಹೋದನು.

೪೭. ಮಹಾಪ್ರಾಜ್ಞನಾದ ಸತ್ಯನಿಷ್ಠನೂ ಹರಿಕಥಾಶ್ರವಣದ ಹಿರಿದಾದ ಈ ಮಾಹಾತ್ಮ್ಯವನ್ನೇ ಕುರಿತು ಪುನಃ ಪುನಃ ಯೋಚಿಸುತ್ತ ಪೈಠನಗ್ರಾಮವನ್ನು ಕುರಿತು ಹೊರಡುವವನಾದನು.

ಶ್ರುತದೇವ ಉವಾಚ :—

ಯತ್ರ ವಿಷ್ಣು ಕಥಾ ಪುಣ್ಯಾ ಶುಭಾ ಲೋಕಮಲಾಽಪಹಾ ॥ ೪೮ ॥
ತತ್ರ ಸರ್ವಾಣಿ ತೀರ್ಥಾನಿ ಕ್ಷೇತ್ರಾಣಿ ವಿವಿಧಾನಿ ಚ ।
ಯತ್ರ ಪ್ರವಹತೇ ಪುಣ್ಯಾ ಶುಭಾ ವಿಷ್ಣುಕಥಾಽಽಪಗಾ ॥ ೪೯ ॥
ತದ್ದೇಶವಾಸಿನಾಂ ಮುಕ್ತಿಃ ಕರಸಂಸ್ಥಾ ನ ಸಂಶಯಃ ॥ ೫೦ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ದ್ವಿತೀಯೇ ವೈಷ್ಣವಖಂಡೇ ವೈಶಾಖಮಾಸಮಾಹಾತ್ಮ್ಯೇ ನಾರದಾಂಬರೀಷಸಂವಾದೇ "ಪಿಶಾಚಮುಕ್ತಿಪ್ರಾಪ್ತಿವರ್ಣನಂ" ನಾಮ ಚತುರ್ದಶೋಽಧ್ಯಾಯಃ

೪೮. ಶ್ರುತದೇವನು ಹೇಳುತ್ತಾನೆ:—ಪುಣ್ಯಪ್ರದವೂ, ಶುಭವೂ, ಪ್ರಪಂಚದ ಕಲ್ಮಷಗಳನ್ನೆಲ್ಲ ನಾಶಮಾಡುವುದೂ ಆದ ಶ್ರೀಹರಿಯ ಚರಿತ್ರೆಯು ಎಲ್ಲಿ ಕೀರ್ತನೆಮಾಡಲ್ಪಡುತ್ತಿರುವುದೊ, ಅಲ್ಲಿಯೇ ಬಹು ವಿಧಗಳೂ ಅನೇಕಗಳೂ ಆದ ತೀರ್ಥಗಳೂ ಕ್ಷೇತ್ರಗಳೂ ಸನ್ನಿಹಿತಗಳಾಗಿರುವುವು.

೪೯-೫೦. ಯಾವ ಸ್ಥಳದಲ್ಲಿ ಪುಣ್ಯಪ್ರದವೂ ಪವಿತ್ರವೂ ಆದ ವಿಷ್ಣು ಕಥೆಯ ಅನುವಾದವೆಂಬ ನದಿಯು ಪ್ರವಹಿಸುತ್ತಿರುವುದೊ, ಆ ದೇಶದಲ್ಲಿ ವಾಸಮಾಡುವ ಮನುಷ್ಯರಿಗೆಲ್ಲ ಮೋಕ್ಷಪದವಿಯು ಕರತಲಗತವಾಗಿರುವುದು. ಈ ವಿಷಯದಲ್ಲಿ ಸಂದೇಹವೇ ಇಲ್ಲವು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀ ಸ್ಕಾಂದಮಹಾಪುರಾಣದ ಎರಡನೆಯ ವೈಷ್ಣವಖಂಡದ ವೈಶಾಖಮಾಸಮಾಹಾತ್ಮ್ಯದ ನಾರದಾಂಬರೀಷ ಸಂವಾದದಲ್ಲಿ "ಪಿಶಾಚಮುಕ್ತಿಪ್ರಾಪ್ತಿವರ್ಣನ"ವೆಂಬ ಹದಿನಾಲ್ಕನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

# ಅಥ ಪಂಚದಶೋಽಧ್ಯಾಯಃ

## ಪಾಂಚಾಲದೇಶಾಧಿಪತೇರ್ಜಯಪ್ರಾಪ್ತಿ—ದಾರಿದ್ರ್ಯನಾಶವರ್ಣನಂ

ಶ್ರುತದೇವ ಉವಾಚ :—

ಭೂಯಃ ಶೃಣುಷ್ವ ಭೂಪಾಲ ಮಾಹಾತ್ಮ್ಯಂ ಪಾಪನಾಶನಂ ।
ವೈಶಾಖಸ್ಯ ಚ ಮಾಸಸ್ಯ ವಲ್ಲಭಸ್ಯ ಮಧುದ್ವಿಷಃ ॥ ೧ ॥
ಪುರಾ ಪಾಂಚಾಲದೇಶೇ ತು ರಾಜಾ ಪುರುಯಶೋಽಭವತ್ ।
ತನಯೋ ಭೂರಿಯಶಸಃ ಪುಣ್ಯಶೀಲಸ್ಯ ಧೀಮತಃ ॥ ೨ ॥
ಪಿತುರ್ಯುರ್ಪರತೇ ಭೂಪ ರಾಜ್ಯಸ್ಥೋ ಧರ್ಮಲಾಲಸಃ ।
ಶೌರ್ಯೌದಾರ್ಯಗುಣೋಪೇತೋ ಧನುರ್ವಿದ್ಯಾವಿಶಾರದಃ ॥ ೩ ॥
ಶಶಾಸ ಪೃಥಿವೀಂ ಸರ್ವಾಂ ಸ್ವಧರ್ಮೇಣ ಮಹಾಮತಿಃ ।
ಪೂರ್ವಜನ್ಮಜಲಾದಾನಾದ್ದೋಷೇಣ ಮಹತಾವೃತಃ ।
ಸಂಪದ್ಧಾನಿಮವಾಪಾಽಸೌ ಕಾಲೇನ ಕಿಯತಾಽನಘ ॥ ೪ ॥

---

## ಕನ್ನಡದ ಅನುವಾದ

### ಪಾಂಚಾಲರಾಜನ ಜಯಪ್ರಾಪ್ತಿ—ದಾರಿದ್ರ್ಯನಾಶವರ್ಣನ

೧. ಶ್ರುತದೇವನು ಹೇಳುತ್ತಾನೆ :— ಎಲೈ ಶ್ರುತಕೀರ್ತಿಮಹಾರಾಜನೆ ! ಮಧುಸೂದನನಿಗೆ ಪರಮಪ್ರಿಯವಾದ ವೈಶಾಖಮಾಸದ ಮಾಹಾತ್ಮ್ಯವನ್ನು ಮತ್ತೆಯೂ ವಿವರಿಸುವೆನು. ಮಹಾ ಪಾತಕಗಳನ್ನೂ ನಾಶಗೊಳಿಸುವ ಈ ಆಖ್ಯಾನ ವನ್ನು ಶ್ರದ್ಧೆಯಿಂದ ಕೇಳು.

೨. ಪೂರ್ವದಲ್ಲಿ ಪಾಂಚಾಲದೇಶದಲ್ಲಿ ಪುರುಯಶನೆಂಬ ಮಹಾರಾಜನು ಆಳುತ್ತಿದ್ದನು. ಆತನು ಪುಣ್ಯಶೀಲನೂ, ಬುದ್ಧಿಮಂತನೂ ಆದ ಭೂರಿಯಶ ಸ್ಸೆಂಬುವನ ಪುತ್ರನಾಗಿದ್ದನು.

೩. ತಂದೆಯು ಸ್ವರ್ಗಸ್ಥನಾಗಲು ಆತನು ರಾಜ್ಯಾಭಿಷಿಕ್ತನಾಗಿ ಧರ್ಮ ಕಾರ್ಯಗಳನ್ನೇ ಆಸಕ್ತಿಯಿಂದ ಮಾಡುತ್ತ ಶೌರ್ಯ, ಔದಾರ್ಯಗಳೇ ಮುಂತಾದ ಸದ್ಗುಣಗಳಿಂದ ಕೂಡಿದವನಾಗಿ ಧನುರ್ವಿದ್ಯೆಯಲ್ಲಿ ಪಾರಂಗತ ನಾಗಿದ್ದನು.

೪. ಆತನು ಮಹಾ ಬುದ್ಧಿವಂತನಾಗಿ ತನ್ನ ಧರ್ಮದಲ್ಲಿಯೇ ನಡೆದು ಕೊಳ್ಳುತ್ತ ಸಕಲ ಭೂಮಂಡಲವನ್ನೂ ಶಾಸನಮಾಡುತ್ತಿದ್ದನು. ಆದರೆ ಪೂರ್ವ ಜನ್ಮದಲ್ಲಿ ವೈಶಾಖಮಾಸದಲ್ಲಿ ಜಲದಾನವನ್ನು ಮಾಡದಿದ್ದ ಒಂದು ಮಹತ್ತರ ವಾದ ದೋಷದಿಂದ ಆತನು ಕೂಡಿದ್ದನು. ಎಲೈ ನಿಷ್ಪಾಪನಾದ ರಾಜನೆ!

ಹಯಾ ಗಜಾ ಮೃತಿಂ ಯಾತಾ ಮಹದ್ರೋಗೇಣ ಪೀಡಿತಾಃ ।
ದುರ್ಭಿಕ್ಷಮತುಲಂ ಚಾಸೀನ್ನಿರ್ಮಾನುಷ್ಯವಿಧಾಯಕಂ ॥ ೫ ॥
ರಾಜ್ಯಂ ಕೋಶಂ ತದಾಚಾಽಽಸೀದ್ಗಜಭುಕ್ತಕಪಿತ್ಥವತ್ ।
ಬಲಹೀನಂ ನೃಪಂ ಜ್ಞಾತ್ವಾ ಕೋಶರಾಷ್ಟ್ರವಿವರ್ಜಿತಂ ॥ ೬ ॥
ತಂ ಜೇತುಮೇಷ ಸಮಯ ಇತಿ ನಿಶ್ಚಿತಮಾನಸಾಃ ।
ಆಜಗ್ಮುಃ ಶತಶೋ ಭೂಪಾ ರಿಪವಸ್ತಸ್ಯ ಭೂಪತೇಃ ॥ ೭ ॥
ಜಿಗ್ಯುರ್ಯುದ್ಧೇನ ತಂ ಭೂಪಂ ಪಾಂಚಾಲವಿಷಯಾಧಿಪಂ ।
ಪರಾಜಿತಸ್ತತೋ ರಾಜಾ ವಿವೇಶ ಗಿರಿಗಹ್ವರೇ ॥ ೮ ॥
ಶಿಖಿನ್ಯಾ ಭಾರ್ಯಯಾ ಸಾಕಂ ಧಾತ್ರ್ಯಾದಿಗಣಸಂಯುತಃ ।
ಅಜ್ಞಾತಪದ್ಧತಿಶ್ಚಾನ್ಯೈಃ ಬಹುದುಃಖಸಮಾಕುಲಃ ॥ ೯ ॥

---

ಕೆಲವುಕಾಲ ಕಳೆದ ಮೇಲೆ ಆತನು ಆ ಪಾಪದ ಫಲವಾಗಿ ತನ್ನ ಸಕಲೈಶ್ವರ್ಯ ವನ್ನೂ ಕಳೆದುಕೊಂಡನು.

೫. ಆತನ ಕುದುರೆಗಳೂ, ಆನೆಗಳೂ ಮಹಾ ರೋಗಗಳನ್ನನುಭವಿಸಿ ಮರಣವನ್ನು ಹೊಂದಿದುವು. ತನ್ನ ರಾಜ್ಯದ ಆದ್ಯಂತವನ್ನೂ ನಿರ್ಜನವಾಗಿ ಮಾಡುವಂತಹ, ಭಯಂಕರವೂ ಅಸಮಾನವೂ ಆದ ಕ್ಷಾಮವು ದೇಶವನ್ನು ವ್ಯಾಪಿಸಿಕೊಂಡಿತು.

೬–೭. ಆಗ ಆತನ ರಾಜ್ಯವೂ ಭಂಡಾರವೂ ಆನೆನುಂಗಿದ ಬೇಲದ ಹಣ್ಣಿನಂತೆ ನಿಸ್ಸತ್ತ್ವವಾದುವು. ಧನವೂ, ರಾಜ್ಯದಲ್ಲಿ ಪ್ರಜೆಗಳೂ ಇಲ್ಲದೆ ರಾಜನು ಬಲಹೀನನಾಗಿರುವುದನ್ನು ತಿಳಿದು ಆತನನ್ನು ಜಯಿಸಲು ಇದೇ ಸುಸಮಯವೆಂದು ಮನಸ್ಸಿನಲ್ಲಿ ನಿಶ್ಚಯವನ್ನು ಮಾಡಿಕೊಂಡು ಆತನಿಗೆ ಶತ್ರುಗಳಾದ ರಾಜರೆಲ್ಲ ಒಟ್ಟುಗೂಡಿ ನೂರಾರು ಸೈನ್ಯಗಳೊಡನೆ ಒಮ್ಮೆಯೇ ಪಾಂಚಾಲ ದೇಶದೊಳಕ್ಕೆ ನುಗ್ಗಿಬಂದರು.

೮–೯. ಅವರು ಆ ಪಾಂಚಾಲದೇಶಾಧಿಪತಿಯನ್ನು ಯುದ್ಧದಲ್ಲಿ ಜಯಿಸಿದರು. ಆ ಪುರುಯಶರಾಜನಾದರೊ ಇಂತು ಶತ್ರುಗಳಿಂದ ಪರಾಜಯವನ್ನು ಹೊಂದಿದವನಾಗಿ ದೇಶವನ್ನು ಬಿಟ್ಟು ಓಡಿಹೋಗಿ ಒಂದು ಪರ್ವತದ ಗುಹೆಯನ್ನು ಸೇರಿದನು. ಹೆಂಡತಿಯಾದ ಶಿಖಿನಿಯೆಂಬಾಕೆಯೂ ದಾದಿಯೇ ಮೊದಲಾದ ಅಲ್ಪಪರಿವಾರದವರೂ ಮಾತ್ರ ಆತನನ್ನು ಹಿಂಬಾಲಿಸಿದರು. ಇಂತು ಮಹಾರಾಜನಾಗಿದ್ದವನು ಸ್ವಲ್ಪಕಾಲದಲ್ಲಿಯೇ ಇತರರಿಗೆ ಕಾಣದಂತೆ ತಲೆಯನ್ನು ಮರೆಸಿಕೊಂಡು ಜೀವಿಸುತ್ತ ಅನೇಕ ದುಃಖಗಳಿಗೆ ಸಿಕ್ಕಿ ಸಂಕಟಪಡುತ್ತಿದ್ದನು.

ತ್ರಿಪಂಚಾಶತ್ಸಮಾಶ್ಚೈವ ನೀತಾಸ್ತೇನ ವಿಲೀಯತಾ ।
ಚಿಂತಯಾಮಾಸ ಭೂಪಾಲಃ ಕಿಮೇತದಿತಿಭೂರಿಶಃ ॥ ೧೦ ॥
ಕರ್ಮಣಾ ಜನ್ಮಶುದ್ಧೋಽಹಂ ಮಾತೃಪಿತೃಹಿತೇ ರತಃ ।
ಗುರುಭಕ್ತಃ ಸದಾಕ್ಷಿಣ್ಯೋ ಬ್ರಹ್ಮಣ್ಯೋ ಧರ್ಮತತ್ಪರಃ ॥ ೧೧ ॥
ದಯಾವಾನ್ ಸರ್ವಭೂತೇಷು ದೇವಭಕ್ತೋ ಜಿತೇಂದ್ರಿಯಃ ।
ನ ಭ್ರಾತಾ ಮೇ ನ ಪುತ್ರೋ ಮೇ ನ ಚ ಮೇ ಸುಹೃದೋ ಹಿತಾಃ ॥೧೨॥
ದಯಾಪೌರುಷವಿಖ್ಯಾತಾಃ ಕುಲೀನಸ್ಯಾಽಪಿ ಮೇ ಕುತಃ ।
ಕೇನ ವಾ ಕರ್ಮಣಾ ಚಾಪ್ತಂ ದಾರಿದ್ರ್ಯಂ ಭೂರಿದುಃಖದಂ ॥ ೧೩ ॥
ಕೇನ ವಾಽಪ ಜಯೋ ಮೇದ್ಯ ಕೇನ ವಾ ವನವಾಸತಾ ।
ಇತಿ ಚಿಂತಾಕುಲೋ ರಾಜಾ ಗುರುಂ ಸಸ್ಮಾರ ಖಿನ್ನಧೀಃ ॥ ೧೪ ॥

೧೦. ಇಂತು ಮರೆಮಾಚಿಕೊಂಡಿದ್ದ ಆ ರಾಜನಿಗೆ ಐವತ್ತುಮೂರು ವರ್ಷಗಳು ಕಳೆದುಹೋದುವು. ಆತನು ತನ್ನ ದುರ್ದಶೆಗೆ ಕಾರಣವನ್ನು ಕುರಿತು ಬಹಳ ಸಲ ಯೋಚಿಸಿದನು.

೧೧. "ಕರ್ಮಾಚರಣೆಯ ವಿಷಯದಲ್ಲಿ ಜನನದ ಮೊದಲುಗೊಂಡು ನಾನು ಪರಿಶುದ್ಧನಾಗಿರುವೆನು. ತಾಯಿತಂದೆಗಳ ಸೇವೆಯನ್ನೂ ಹಿತವನ್ನೂ ಮಾಡುವುದರಲ್ಲಿಯೇ ನಿರತನಾಗಿದ್ದೆನು. ಗುರುಭಕ್ತಿಯುಳ್ಳವನೂ, ಸ್ನೇಹಿತರಲ್ಲಿ ದಾಕ್ಷಿಣ್ಯವಂತನೂ, ಬ್ರಾಹ್ಮಣಸೇವಕನೂ, ಧರ್ಮಕಾರ್ಯತತ್ಪರನೂ ಆಗಿದ್ದೆನು.

೧೨-೧೩. ಸಕಲ ಪ್ರಾಣಿಗಳಲ್ಲಿಯೂ ದಯೆಯನ್ನು ತೋರುತ್ತಿದ್ದೆನು. ದೇವರಲ್ಲಿ ಭಕ್ತಿಯುಕ್ತನಾಗಿ ಜಿತೇಂದ್ರಿಯನಾಗಿದ್ದೆನು. ಇಂತಹ ಸತ್ಕುಲ ಪ್ರಸೂತನಾದ ನನಗೆ ಈಗ ಸಹೋದರರಿಲ್ಲದಂತಾಗಿರುವರು. ಮಕ್ಕಳಿಲ್ಲದವನಾಗಿರುವೆನು. ದಯೆ, ಪೌರುಷಗಳೇ ಮುಂತಾದ ಸದ್ಗುಣಗಳಿಂದ ಕೂಡಿ ನನಗೆ ಹಿತವನ್ನುಂಟುಮಾಡುವ ಸ್ನೇಹಿತರೂ ಸಹ ಈ ಸಮಯದಲ್ಲಿ ಇಲ್ಲದಂತಾಗಿರುವರಲ್ಲವೆ! ಇದಕ್ಕೆ ಕಾರಣವೇನು? ಅತ್ಯಂತ ದುಃಖವನ್ನುಂಟುಮಾಡುವ ಈ ದಾರಿದ್ರ್ಯವು ನನಗೆ ಯಾವ ಕರ್ಮದ ಫಲವಾಗಿ ಸಂಭವಿಸಿರುವುದು?

೧೪. ಯಾವುದರಿಂದ ನನಗೆ ಈಗ ಶತ್ರುಗಳಿಂದ ಪರಾಜಯವುಂಟಾಯಿತು? ನಾನು ವನವಾಸವನ್ನು ಮಾಡುತ್ತಿರುವುದಕ್ಕೆ ಕಾರಣವೇನು?" ಇಂತೆಂಬ ಮಹತ್ತರವಾದ ಚಿಂತೆಯಲ್ಲಿ ಮುಳುಗಿದವನಾಗಿ ಆ ಪುರುಯಶಮಹಾರಾಜನು ಖಿನ್ನಮನಸ್ಕನಾಗಿ ತನ್ನ ಗುರುಗಳನ್ನು ಸ್ಮರಿಸಿಕೊಂಡನು.

ಯಾಜೋಪಯಾಜಕೌ ನಾಮ ಸರ್ವಜ್ಞೌ ಮುನಿಸತ್ತಮೌ ।
ಆಜಗ್ಮತುರ್ಮುನೀಂದ್ರೌ ತೌ ರಾಜ್ಞಾಹೂತೌ ಮಹಾಮತೀ ॥ ೧೫ ॥
ತೌ ದೃಷ್ಟ್ವಾ ಸಹಸೋತ್ಥಾಯ ರಾಜಾ ಪಾಂಚಾಲವಲ್ಲಭಃ ।
ನನಾಮ ಶಿರಸಾ ಭಕ್ತ್ಯಾ ಪ್ರವಾಸೇನಾಽತಿಪೀಡಿತಃ ॥ ೧೬ ॥
ರಾಜಚಿಹ್ನವಿಹೀನಶ್ಚ ಕೇನಾಪ್ಯಜ್ಞಾತಪದ್ಧತಿಃ ।
ತೂಷ್ಣೀಂ ತಸ್ಥೌ ಮುಹೂರ್ತಂ ಹಿ ಪತಿತ್ವಾ ಭುವಿ ಪಾದಯೋಃ ॥ ೧೭ ॥
ದೋರ್ಭ್ಯಾಮುತ್ಥಾಪಿತಸ್ತಾಭ್ಯಾಂ ಪರಿಮೃಷ್ಟಾಽಶ್ರುಲೋಚನಃ ।
ವಿಧಿವತ್ಪೂಜಯಾಮಾಸ ವನ್ಯೈರೇವಾಽರ್ಹಣೈಃ ಶುಭೈಃ ॥ ೧೮ ॥
ಸೂಪವಿಷ್ಟೌ ತೌ ವಿಪ್ರೌ ಪಪ್ರಚ್ಛಾಽವನತ ಕಂಧರಃ ।
ಬ್ರಹ್ಮಣೌ ವದತಂ ದುಃಖಕಾರಣಂ ಚ ಕ್ಷಿತೀಶಿತುಃ ॥ ೧೯ ॥
ಕರ್ಮಣಾ ಜನ್ಮಶುದ್ಧಸ್ಯ ಪಿತೃದೇವಪ್ರಿಯಸ್ಯ ಚ ।
ಪಾಪಭೀರೋಃ ಕೃಪಾಲೋಶ್ಚ ಗುರುಭಕ್ತಸ್ಯ ಮೇ ಕುತಃ ॥ ೨೦ ॥

---

೧೫. ಸರ್ವಜ್ಞರೂ, ಮುನಿಶ್ರೇಷ್ಠರೂ ಆಗಿದ್ದ ಯಾಜ, ಉಪಯಾಜ ರೆಂಬೀರ್ವರೂ ಆತನಿಗೆ ಕುಲಗುರುಗಳಾಗಿದ್ದರು. ಮಹಾರಾಜನು ಮನಸ್ಸಿನಲ್ಲಿ ಸ್ಮರಿಸಿ ಕರೆದ ಮಾತ್ರದಿಂದಲೇ ಮಹಾ ಬುದ್ಧಿಶಾಲಿಗಳಾದ ಆ ಮುನೀಂದ್ರ ರಿಬ್ಬರೂ ರಾಜನಿದ್ದಲ್ಲಿಗೆ ಬಂದು ಸೇರಿದರು.

೧೬. ಅವರನ್ನು ಕಂಡು ಪಾಂಚಾಲದೇಶಾಧಿಪತಿಯಾದ ರಾಜನು ಸಂಭ್ರಮದಿಂದ ಮೇಲಕ್ಕೆದ್ದು ವನವಾಸದಿಂದ ಬಹಳ ಕೃಶನಾಗಿದ್ದರೂ ಭಕ್ತಿಯಿಂದ ತಲೆಬಾಗಿ ಅವರಿಗೆ ನಮಸ್ಕರಿಸಿದನು.

೧೭. ರಾಜಮರ್ಯಾದೆಗಳಾದ ಛತ್ರಚಾಮರಾದಿಗಳಿಂದ ಹೀನನಾಗಿದ್ದು ಯಾರಿಗೂ ತಿಳಿಯದಂತೆ ಪ್ರಚ್ಛನ್ನನಾಗಿ ಜೀವಿಸುತ್ತಿದ್ದ ಆ ರಾಜನು ಅವರ ಪಾದಗಳ ಸಮೀಪದಲ್ಲಿ ಭೂಮಿಯ ಮೇಲೆ ಮಾತನಾಡದೆ ಬಿದ್ದಿದ್ದನು.

೧೮. ಅವರಿಬ್ಬರೂ ಆತನನ್ನು ತಮ್ಮ ಕೈಗಳಿಂದ ಮೇಲಕ್ಕೆಬ್ಬಿಸಿದರು. ಬಳಿಕ ಆತನು ಕಣ್ಣೀರನ್ನು ಒರೆಸಿಕೊಂಡು ಪರಿಶುದ್ಧಗಳಾದ ವನ್ಯ ಪದಾರ್ಥಗಳಿಂದಲೇ ಅವರಿಬ್ಬರಿಗೂ ವಿಧ್ಯುಕ್ತರೀತಿಯಿಂದ ಅತಿಥಿ ಸತ್ಕಾರವನ್ನು ಮಾಡಿದನು.

೧೯. ಬಳಿಕ ಅವರನ್ನು ಉಚಿತಾಸನಗಳಲ್ಲಿ ಕುಳ್ಳಿರಿಸಿ ತಲೆಯನ್ನು ಬಗ್ಗಿಸಿ ಕೊಂಡು ಆ ಬ್ರಾಹ್ಮಣೋತ್ತಮರನ್ನು ಪ್ರಶ್ನೆಮಾಡತೊಡಗಿದನು. "ಎಲೈ ವಿಪ್ರ ಶ್ರೇಷ್ಠರಿರಾ! ಭೂಮಿಯನ್ನು ಆಳುತ್ತಿದ್ದ ಮಹಾರಾಜನಾದ ನನಗೆ ಈ ತೆರನಾದ ದುಃಖವುಂಟಾದುದಕ್ಕೆ ಕಾರಣವನ್ನು ತಿಳಿಸಿರಿ.

೨೦. ಕರ್ಮಾನುಷ್ಠಾನಗಳಲ್ಲಿ ಆಜನ್ಮಪರಿಶುದ್ಧನೂ, ಪಿತೃದೇವತೆ

ದಾರಿದ್ರ್ಯಂ ಕೋಶಹಾನಿಶ್ಚ ರಿಪುಭಿಶ್ಚ ಪರಾಭವಃ ।
ಕಸ್ಮಾದರಣ್ಯವಾಸಶ್ಚ ಕುತ ಏಕಾಕಿತಾ ಮಮ ॥ ೨೦ ॥
ನ ಪುತ್ರೋ ನ ಚ ಮೇ ಭ್ರಾತಾ ನ ಹಿತಾಃ ಸುಹೃದಶ್ಚ ಮೇ ।
ದುರ್ಭಿಕ್ಷಂ ವಾ ಕುತಶ್ಚಾಸೀದ್ದೇಶೇ ಮತ್ಪಾಲಿತೇಽನಘೇ ॥ ೨೨ ॥
ಏತದ್ವಿಸ್ತಾರ್ಯ ಮೇ ಬ್ರೂತಂ ಕಾರಣಂ ಮುನಿಪುಂಗವೌ ॥ ೨೩ ॥
ಇತ್ಯುಕ್ತೌ ತೌ ಮುನಿಶ್ರೇಷ್ಠೌ ಭೂಪೇನಾತ್ಯಂತದುಃಖಿನಾ ।
ಪ್ರತ್ಯೂಚತುರ್ಮಹಾತ್ಮಾನೌ ಕಿಂಚಿದ್ಧ್ಯಾನಪರಾಯಣೌ ॥ ೨೪ ॥

ಯಾಜೋಪಯಾಜಕಾವೂಚತುಃ:—

ಶೃಣು ಭೂಪ ಪ್ರವಕ್ಷ್ಯಾವಸ್ತವ ದುಃಖಸ್ಯ ಕಾರಣಂ ।
ಪುರಾ ಭೂಪ ಮಹಾಪಾಪೀ ವ್ಯಾಧಸ್ತ್ವಂ ದಶಜನ್ಮಸು ॥ ೨೫ ॥
ನಿಷ್ಠುರಃ ಸರ್ವಲೋಕಾನಾಂ ಸದಾ ಹಿಂಸಾಪರಾಯಣಃ ।
ಧರ್ಮಲೇಶಾಕರಃ ಕ್ವಾಪಿ ನ ದಮೋ ನ ಚ ವೈ ಶಮಃ ॥ ೨೬ ॥

ಗಳಿಗೆ ಪ್ರೀತಿಪಾತ್ರನೂ ಆಗಿದ್ದೆನು. ಪಾಪವನ್ನು ಮಾಡಲು ಹೆದರುತ್ತಿದ್ದೆನು. ಸಕಲ ಪ್ರಾಣಿಗಳಲ್ಲಿಯೂ ದಯೆಯುಳ್ಳವನಾಗಿದ್ದೆನು. ಗುರುಗಳಲ್ಲಿ ಅಮಿತವಾದ ಭಕ್ತಿಯನ್ನಿಟ್ಟಿದ್ದೆನು.

೨೦. ಹಾಗಾದರೂ ನನಗೆ ಈ ದಾರಿದ್ರ್ಯವೂ, ಧನಧಾನ್ಯನಾಶವೂ, ಶತ್ರುಗಳಿಂದ ಅಪಜಯವೂ, ಅರಣ್ಯದಲ್ಲಿ ಅಜ್ಞಾತವಾಸವೂ, ಬಂಧುಬಳಗಗಳಿಲ್ಲದ ಏಕಾಕಿಜೀವನವೂ ಯಾವ ಕಾರಣದಿಂದ ಸಂಭವಿಸಿದುವು?

೨೨–೨೩. ಈ ನನ್ನ ಕಷ್ಟಾವಸ್ಥೆಯಲ್ಲಿ ನನಗೆ ಸಹೋದರನಾಗಲಿ, ಮಗನಾಗಲಿ, ಸ್ನೇಹಿತರಾಗಲಿ ಹಿತವನ್ನುಮಾಡಲು ಮುಂದೆ ಬರಲಿಲ್ಲ. ನಿರುಪದ್ರವವಾಗಿ ನನ್ನಿಂದ ಪಾಲಿಸಲ್ಪಡುತ್ತಿದ್ದ ದೇಶಕ್ಕೆ ದುರ್ಭಿಕ್ಷವು ಏತಕ್ಕೆ ಉಂಟಾಯಿತು? ಮುನಿಪುಂಗವರಾದ ನೀವಿಬ್ಬರೂ ಈ ನನ್ನ ದುಃಖಕ್ಕೆ ಕಾರಣವೇನೆಂಬುದನ್ನು ವಿಸ್ತಾರವಾಗಿ ನನಗೆ ವರ್ಣಿಸಿರಿ."

೨೪. ಇಂತು ಅತ್ಯಂತ ದುಃಖಭರಿತನಾಗಿ ಆ ಪುರುಯಶಮಹಾರಾಜನು ಪ್ರಶ್ನೆಮಾಡುತ್ತಿರಲು ಸ್ವಲ್ಪಕಾಲದವರೆಗೂ ಧ್ಯಾನಾಸಕ್ತರಾಗಿದ್ದು ಮಹಾತ್ಮರಾದ ಆ ಮುನಿಶ್ರೇಷ್ಠರಿಬ್ಬರೂ ಆತನಿಗೆ ಪ್ರತ್ಯುತ್ತರವನ್ನು ಹೇಳತೊಡಗಿದರು.

೨೫. ಯಾಜೋಪಯಾಜಕರು ಹೇಳುತ್ತಾರೆ:—"ಎಲೈ ಮಹಾರಾಜನೆ! ನಿನ್ನ ದುಃಖಕ್ಕೆ ಕಾರಣವನ್ನು ಹೇಳುವೆವು. ಏಕಾಗ್ರಚಿತ್ತನಾಗಿ ಕೇಳು. ಪೂರ್ವದಲ್ಲಿ ನೀನು ಮಹಾಪಾಪಿಯಾದ ಬೇಡನಾಗಿ ಹತ್ತು ಜನ್ಮಗಳನ್ನು ಪಡೆದಿದ್ದೆ.

೨೬. ನಿಷ್ಠುರಹೃದಯನೂ, ಸಮಸ್ತ ಪ್ರಾಣಿಗಳಿಗೂ ನಿತ್ಯವೂ ಹಿಂಸೆ

ನ ಜಿಹ್ವಾ ವಕ್ತಿ ನಾಮಾನಿ ವಿಷ್ಣೋರ್ವಾಪಿ ಕಥಂಚನ ।
ಚೇತಸ್ಮರತಿ ಗೋವಿಂದಚರಣಾಂಬುರುಹದ್ವಯಂ ॥ ೨೭ ॥
ನ ಪ್ರಣಾಮಃ ಕೃತಃ ಕ್ವಾಪಿ ಶಿರಸಾ ಪರಮಾತ್ಮನೇ ।
ನವ ಜನ್ಮಾನಿ ತೇ ಭೂಪ ಗತಾನ್ಯೇವಂ ದುರಾತ್ಮನಃ ॥ ೨೮ ॥
ದಶಮೇ ಜನ್ಮನಿ ಪ್ರಾಪ್ತೇ ವ್ಯಾಧಸ್ತ್ವಂ ಸಹ್ಯಭೂಧರೇ ।
ನಿಷ್ಠುರಂ ಸರ್ವಲೋಕಾನಾಂ ನರಾಣಾಂ ತ್ವಂ ನರಾಂತಕಃ ॥ ೨೯ ॥
ದಯಾಹೀನಃ ಶಸ್ತ್ರಜೀವೀ ಸದಾ ಹಿಂಸಾಪರಾಯಣಃ ।
ನಿರ್ಗುಣಃ ಸಕಲತ್ರಸ್ತ್ವಂ ಮಾರ್ಗಪೀಡಾಕರಃ ಶಠಃ ॥ ೩೦ ॥
ಪ್ರಜಾನಾಂ ಗೌಡದೇಶ್ಯಾನಾಂ ರಾಕ್ಷಸೋ ಮನುಷಾಶನಃ ।
ಏವಂ ಚಾಬ್ದಾನ್ಯತೀತಾನಿ ನೈಜಂ ಹಿತಮಜಾನತಃ ॥ ೩೧ ॥

ಮಾಡುವುದರಲ್ಲಿಯೇ ನಿರತನಾಗಿರುವನೂ, ಆಗಿ ಲೇಶಮಾತ್ರದ ಧರ್ಮವನ್ನೂ ಮಾಡದೆ, ಕರ್ಮೇಂದ್ರಿಯಗಳನ್ನಾಗಲಿ, ಜ್ಞಾನೇಂದ್ರಿಯಗಳನ್ನಾಗಲಿ ನಿಗ್ರಹಿಸದೆ ಸ್ವೇಚ್ಛಾಚಾರಿಯಾಗಿದ್ದೆ.

೨೭. ನಿನ್ನ ನಾಲಿಗೆಯು ಪ್ರಮಾದದಿಂದಲೂ ಒಮ್ಮೆಯಾದರೂ ಮಹಾ ವಿಷ್ಣುವಿನ ದಿವ್ಯನಾಮುವನ್ನು ನುಡಿಯಲಿಲ್ಲ. ನಿನ್ನ ಮನಸ್ಸು ಗೋವಿಂದನ ಪಾದಕಮಲಗಳೆರಡನ್ನು ಎಂದೂ ಸ್ಮರಿಸಲಿಲ್ಲ.

೨೮. ಯಾವಾಗಲೂ ನೀನು ಪರಮಾತ್ಮನಿಗೆ ತಲೆಯನ್ನು ಬಾಗಿ ಪ್ರಣಾಮುವನ್ನು ಮಾಡಲಿಲ್ಲ. ಎಲೈ ರಾಜನೆ! ಇಂತು ನೀನು ದುರಾತ್ಮನಾಗಿ ಒಂಬತ್ತು ಜನ್ಮಗಳನ್ನು ವ್ಯರ್ಥವಾಗಿಯೇ ಕಳೆಯುವವನಾದೆ.

೨೯. ಹತ್ತನೆಯ ಜನ್ಮದಲ್ಲಿ ನೀನು ಸಹ್ಯಾದ್ರಿಯಲ್ಲಿ ಬೇಡನಾಗಿ ಹುಟ್ಟಿ ಕ್ರೂರಸ್ವಭಾವವುಳ್ಳವನಾಗಿ ಸಮಸ್ತ ಪ್ರಾಣಿಗಳಿಗೂ ಮನುಷ್ಯರಿಗೂ ಯಮ ಧರ್ಮರಾಜನಂತೆ ಭಯವನ್ನುಂಟುಮಾಡುತ್ತಿದ್ದೆ.

೩೦. ನೀನು ದಯಾದಾಕ್ಷಿಣ್ಯರಹಿತನಾಗಿ, ಆಯುಧಗಳಿಂದಲೇ ಜೀವನವನ್ನು ನಡೆಸುತ್ತ, ಯಾವಾಗಲೂ ಪರಹಿಂಸೆಯನ್ನೇ ಮಾಡುವವನೂ, ಸದ್ಗುಣಹೀನನೂ, ಶಠನೂ ಆಗಿ ಹೆಂಡತಿಯೊಡನೆ ದಾರಿಗಳನ್ನೇ ಕಾಯುತ್ತ ಲೋಕೋಪದ್ರವಕಾರಕನಾಗಿದ್ದೆ.

೩೧. ಮನುಷ್ಯಮಾಂಸಭಕ್ಷಕರಾದ ರಾಕ್ಷಸರಂತೆ ನೀನು ಗೌಡದೇಶದ ಪ್ರಜೆಗಳಿಗೆಲ್ಲ ಕಂಟಕನಾಗಿದ್ದೆ. ಇಂತು ನಿನ್ನ ಆತ್ಮಹಿತವನ್ನೇ ತಿಳಿಯದವನಾಗಿ ನೀನು ಆ ಜನ್ಮದಲ್ಲಿ ಅನೇಕ ವರ್ಷಗಳನ್ನು ಕಳೆದೆ.

ಬಾಲಾಪತ್ಯಮೃಗಾಣಾಂ ಚ ಪಕ್ಷಿಣಾಂ ಚ ವಧಾತ್ತ್ವ ।
ದಯಾಹೀನಸ್ಯ ದುರ್ಬುದ್ಧೇರ್ಜನ್ಮನ್ಯಸ್ಮಿನ್ನಪುತ್ರತಾ ॥ ೩೨ ॥
ವಿಶ್ವಾಸಘಾತಕತ್ವೇನ ಭ್ರಾತರೋ ನೈವ ಸೋದರಾಃ ।
ಮಾರ್ಗಪೀಡಾಕರತ್ವೇನ ಸುಹೃಜ್ಜನವಿವರ್ಜಿತಃ ॥ ೩೩ ॥
ಸಾಧೂನಾಂ ಚ ತಿರಸ್ಕಾರಾಚ್ಛತ್ರುಭಿಸ್ತೇ ಪರಾಜಯಃ ।
ಕದಾಪ್ಯದತ್ತದೋಷೇಣ ದಾರಿದ್ರ್ಯಂ ಪತಿತಂ ಗೃಹೇ ॥ ೩೪ ॥
ಸ ದೈವೋದ್ವೇಗಕಾರಿತ್ವಾತ್ತ್ವನಾಸಸ್ತೇ ದುರಾಸದಃ ।
ಸರ್ವೇಷಾಮಪ್ರಿಯತ್ವಾಚ್ಚ ದುಃಖಮತ್ಯಂತದುಃಸಹಂ ॥ ೩೫ ॥
ನಿರಾಹಾರೋಽಪ್ಯತಃ ಪೂರ್ವಂ ಸದಾ ಕ್ರೂರೇಣ ಕರ್ಮಣಾ ।
ತಸ್ಮಾದ್ರಾಜ್ಯಾಪಹಾರಸ್ತೇ ಜನ್ಮನ್ಯಸ್ಮಿನ್ಮಹಾಮತೇ ॥ ೩೬ ॥

೩೨. ಎಳೆಮರಿಗಳಾದ ಜಿಂಕೆಗಳನ್ನೂ ಪಕ್ಷಿಗಳನ್ನೂ ದಯಾರಹಿತನಾಗಿ ಕೊಂದುದರ ಫಲವಾಗಿ ದುರ್ಬುದ್ಧಿಯಾದ ನಿನಗೆ ಈ ಜನ್ಮದಲ್ಲಿ ಪುತ್ರಸಂತಾನ ವುಂಟಾಗಲಿಲ್ಲ.

೩೩. ವಿಶ್ವಾಸಘಾತಕನಾಗಿ ವರ್ತಿಸುತ್ತಿದ್ದುದರ ಫಲವಾಗಿ ನಿನಗೆ ತಾಯಿಯಲ್ಲಿ ಹುಟ್ಟಿದ ಅಣ್ಣತಮ್ಮಂದಿರೂ ಇಲ್ಲ. ದಾರಿಯನ್ನು ಕಾಯುತ್ತ ಪಾಂಥರಿಗೆ ಪೀಡೆಯನ್ನುಂಟುಮಾಡುತ್ತಿದ್ದುದರಿಂದ ಈಗ ನಿನ್ನನ್ನು ಸಕಲ ಸ್ನೇಹಿತರೂ ಕೈಬಿಡುವವರಾದರು.

೩೪. ಸಾಧುಸಜ್ಜನರನ್ನು ತಿರಸ್ಕಾರಮಾಡಿದುದರಿಂದ ನಿನಗೆ ಶತ್ರು ರಾಜರಿಂದ ಪರಾಭವವುಂಟಾಯಿತು. ಎಂದೂ ಸತ್ಪಾತ್ರರಲ್ಲಿ ಸ್ವಲ್ಪವನ್ನೂ ದಾನಮಾಡದೆ ಇದ್ದುದರ ಫಲವಾಗಿ ನಿನ್ನ ಮನೆಯಲ್ಲಿ ದಾರಿದ್ರ್ಯವುಂಟಾಗಿ ರುವುದು.

೩೫. ಸರ್ವಕಾಲದಲ್ಲಿಯೂ ಜನರಿಗೆ ಭಯಭರಿತಪಲಾಯನಕ್ಕೆ ನೀನು ಕಾರಣವಾಗಿದ್ದುದರಿಂದ ಈ ಜನ್ಮದಲ್ಲಿ ನಿನಗೆ ಸಹಿಸಲಸಾಧ್ಯವಾದ ವನವಾಸ ದುಃಖವು ಸಂಭವಿಸಿತು. ಸಕಲ ಮಾನವರಿಗೂ ಅಪ್ರಿಯನಾಗಿದ್ದುದರಿಂದ ಅತ್ಯಂತ ದುರ್ಭರವಾದ ದುಃಖವೂ ನಿನಗೆ ಒದಗಿರುವುದು.

೩೬. ಪೂರ್ವಜನ್ಮದಲ್ಲಿ ನೀನು ಯಾವಾಗಲೂ ಕ್ರೂರಕರ್ಮನಿರತನಾಗಿ ಒಂದು ದಿನವಾದರೂ ಒಬ್ಬರಿಗೂ ಆಹಾರವನ್ನು ನೀಡಲಿಲ್ಲ. ಎಲೈ ಮಹಾ ಪ್ರಾಜ್ಞನೆ! ಆದುದರಿಂದಲೇ ನಿನಗೆ ಈ ಜನ್ಮದಲ್ಲಿ ರಾಜ್ಯಾಪಹಾರದ ವ್ಯಸನ ವುಂಟಾಯಿತು.

ಅಥ ತೇ ಸತ್ಕುಲೀನತ್ವೇ ಹೇತೂಂಶ್ಚಾಪಿ ಬ್ರವೀಮ್ಯಹಂ ।
ಯದಾಽಭೂಗೌಡದೇಶೀಯೋ ಹ್ಯಂತಿಮೇ ವ್ಯಾಧಜನ್ಮನಿ ॥
ಸ್ವಕರ್ಮನಿರತೇ ಕ್ರೂರೇ ವಿಪಿನೇ ಕಂಟಕಾವಿಲೇ ॥ ೩೭ ॥
ತಿಷ್ಠತ್ಯೇವಂ ದಯಾಹೀನೇ ಸರ್ವಭೂತಾಂತಕೇ ಪಥಿ ।
ವೈಶ್ಯಾವಾಜಗ್ಮತುರ್ದಿವ್ಯೌ ಧನಾಢ್ಯೌ ಘರ್ಮಪೀಡಿತೌ ॥ ೩೮ ॥
ಮುನಿಶ್ಚ ಕರ್ಷಣೋ ನಾಮ ವೇದವೇದಾಂಗಪಾರಗಃ ।
ಜಟಾಚೀರಧರಃ ಪುಣ್ಯಃ ಕಮಂಡಲುಪರಿಗ್ರಹಃ ॥ ೩೯ ॥
ತಾನ್ ದೃಷ್ಟ್ವಾ ಧನುರಾದಾಯ ಮಾರ್ಗಂ ರುದ್ಧ್ವಾ ವ್ಯವಸ್ಥಿತಃ ।
ಅನುದ್ರೃತ್ಯ ಶರೀ ವೈಶ್ಯೌ ಕೃತ್ವಾ ಚ್ಛಿನ್ನಶರೀರಕೌ ॥ ೪೦ ॥
ತಯೋರೇಕಂ ಚ ತ್ವಂ ಹತ್ವಾ ಗೃಹೀತ್ವಾಽಖಿಲತತ್ಪಣಂ ।
ಅಪರಂ ಹಂತುಮುದ್ಯುಕ್ತೋ ಸ ದುದ್ರಾವ ಭಯಾದ್ದ್ರುತಂ ॥ ೪೧ ॥
ಪಣಂ ಗುಲ್ಮೇ ವಿನಿಕ್ಷಿಪ್ಯ ಭೀತಃ ಪ್ರಾಣಪರೀಪ್ಸಕಃ ।
ಕರ್ಷಣೋಽಪಿ ಮುನಿಃ ಶೀಘ್ರಂ ವಧಾತ್ ಮೃತಿವಿಶಂಕಯಾ ॥ ೪೨ ॥

---

೩೭. ಇನ್ನು ನೀನು ಮಹಾರಾಜರ ಸತ್ಕುಲದಲ್ಲಿ ಹುಟ್ಟಿದುದಕ್ಕೆ ಕಾರಣಗಳನ್ನು ಕೂಡ ನಿರೂಪಿಸುವೆನು. ನಿನ್ನ ಕೊನೆಯ ಬೇಡಜನ್ಮದಲ್ಲಿ ನೀನು ಗೌಡದೇಶದಲ್ಲಿ ಹುಟ್ಟಿ ಕ್ರೂರವೂ ಕಂಟಕಾನ್ವಿತವೂ ಆದ ಒಂದು ಅರಣ್ಯದಲ್ಲಿ ನಿನ್ನ ವರ್ಣೋಚಿತವಾದ ಹಿಂಸಾವೃತ್ತಿಯಲ್ಲಿಯೇ ನಿರತನಾಗಿದ್ದೆ.

೩೮. ಇಂತು, ಓಡಾಡಲೆಳಸಿದ ಸಮಸ್ತ ಪ್ರಾಣಿಗಳಿಗೂ ಪ್ರಾಣಾಂತಕರನಾಗಿ ಮಾರ್ಗದ ಮಧ್ಯದಲ್ಲಿ ದಯಾರಹಿತನಾಗಿ ನೀನು ಒಂದು ದಿವಸ ನಿಂತಿರಲು ಸುಂದರರೂಪವುಳ್ಳವರೂ, ಐಶ್ವರ್ಯವಂತರೂ ಆದ ಇಬ್ಬರು ವೈಶ್ಯರು ಬಿಸಿಲಿನ ತಾಪದಿಂದ ಸಂಕಟಪಡುತ್ತ ಆ ಮಾರ್ಗದಲ್ಲಿ ಬರುತ್ತಿದ್ದರು.

೩೯–೪೦. ಅವರ ಸಂಗಡಲೇ ಜಡೆಗಳನ್ನೂ, ನಾರುಬಟ್ಟೆಗಳನ್ನೂ ಧರಿಸಿ, ಕಮಂಡಲುವನ್ನು ಕೈಯಲ್ಲಿ ಹಿಡಿದು ಪುಣ್ಯಪುರುಷನೂ ವೇದವೇದಾಂಗ ಪಾರಂಗತನೂ ಆದ ಕರ್ಷಣನೆಂಬ ಹೆಸರಿನ ಮಹಾ ಮುನಿಯೊಬ್ಬನೂ ಬರುತ್ತಿದ್ದನು. ಅವರನ್ನು ಕಂಡು ನೀನು ಬಿಲ್ಲನ್ನು ತೆಗೆದುಕೊಂಡು ದಾರಿಯನ್ನಡ್ಡಗಟ್ಟಿ ನಿಂತು ಅವರನ್ನು ಓಡಿಸಿಕೊಂಡು ಹೋಗಿ ಆ ಇಬ್ಬರು ವೈಶ್ಯರನ್ನೂ ನಿನ್ನ ಬಾಣಗಳಿಂದ ಗಾಯಗೊಳಿಸುವವನಾದೆ.

೪೧. ಅವರಿಬ್ಬರಲ್ಲಿ ಒಬ್ಬನನ್ನು ಕೊಂದು ನೀನು ಆತನ ಹಣವನ್ನೆಲ್ಲ ಸುಲಿದುಕೊಂಡು ಮತ್ತೊಬ್ಬನನ್ನು ಕೊಲ್ಲಲು ಉದ್ಯುಕ್ತನಾದೆ. ಅಷ್ಟರಲ್ಲಿ ಆತನು ಭಯದಿಂದ ವೇಗವಾಗಿ ಓಡಿಹೋಗತೊಡಗಿದನು.

೪೨. ತನ್ನ ಹಣದ ಚೀಲವನ್ನು ಒಂದು ಪೊದೆಯಲ್ಲಿ ಬಚ್ಚಿಟ್ಟು ಭಯದಿಂದ

13

ಆತಪೇ ಧಾವಮಾನಃ ಸಂಸ್ತೃಷಾ ಘರ್ಮಪ್ರಪೀಡಿತಃ ।
ಮೂರ್ಛಾಮಾಪ ಗಲತ್ಸ್ವೇದಃ ಸಂಜ್ಞಾಮಾತ್ರಾವಶೇಷಿತಃ ॥ ೪೩ ॥
ನಿಹಾಯೈನಂ ದುದ್ರುವೇ ಚ ವೈಶ್ಯೋ ಜೀವನತತ್ಪರಃ ।
ತ್ವಂ ತಾವನುದ್ಧೃತೌ ದೃಷ್ಟ್ವಾ ಮೂರ್ಛಿತಂ ಪಥಿ ಭೂಸುರಂ ॥ ೪೪ ॥
ಪಣಂ ಕುತ್ರ ವಿನಿಕ್ಷಿಪ್ತಂ ಕಿಯದ್ದೂರಂ ಗತೋ ವಣಿಕ್ ।
ಇತಿ ಪೃಷ್ಟಂ ದ್ವಿಜಂ ಶ್ರಾಂತಮುಜ್ಜೀವಯಿತುಮುದ್ಯತಃ ॥ ೪೫ ॥
ಫೂತ್ಕೃತ್ವಾ ಕರ್ಣಯೋಸ್ತಸ್ಯ ನಾಗರಂ ಸ್ಮೃತಿಕಾರಣಂ ।
ಪಲ್ವಲಸ್ಥೋದಕೇನೈವ ಕೃಮಿಕರ್ದಮಸಂಯುಜಾ ॥ ೪೬ ॥
ನೇತ್ರೇ ಸಂಮೃಜ್ಯ ಶ್ರಾಂತಸ್ಯ ಪರ್ಣೈಃ ಸಂವೀಜ್ಯ ತನ್ಮುಖೇ ।
ಸಸಂಜ್ಞಂ ಚ ಮುನಿಂ ಕೃತ್ವಾ ತ್ವಮಾತ್ಥ ಸ್ವಸ್ಥಮಾನಸಃ ॥ ೪೭ ॥
ಮಾ ಶಂಕಾ ತೇ ಮುನೇ ಕಾರ್ಯಾ ಮತ್ತಃ ಶಸ್ತ್ರಭೃತೋ ವನೇ ।
ನಿಷ್ಕಿಂಚನಃ ಸುಖೀ ಲೋಕೇ ಕುತಸ್ತೇ ಭಯಮುಲ್ಬಣಂ ॥ ೪೮ ॥

---

ಪ್ರಾಣವನ್ನಾದರೂ ಕಾಪಾಡಿಕೊಳ್ಳಲು ಆತನು ಓಡಿದನು. ಮುನಿವರ್ಯನಾದ ಕರ್ಷಣನೂ ವ್ಯಾಧನಾದ ನಿನ್ನಿಂದ ಮರಣಭಯವುಳ್ಳವನಾಗಿ ವೇಗವಾಗಿ ಓಡಿಹೋದನು.

೪೩. ಇಂತು ಬಿಸಿಲಿನಲ್ಲಿ ಓಡುತ್ತ ಬಾಯಾರಿಕೆಯಿಂದಲೂ ಬಿಸಿಲಿನ ತಾಪದಿಂದಲೂ ಪೀಡಿತನಾಗಿ ಆ ಮುನಿಯು ಬೆವರನ್ನು ಸುರಿಸುತ್ತ ಮೂರ್ಛೆ ಗೊಂಡು ಬಿದ್ದು ಕೇವಲ ಪ್ರಾಣಾವಶೇಷಿತನಾದನು.

೪೪. ಆ ವೈಶ್ಯನಾದರೊ ತನ್ನ ಪ್ರಾಣಗಳನ್ನುಳಿಸಿಕೊಳ್ಳುವ ಆತುರದಿಂದ ಆ ಮುನಿಯನ್ನೂ ಅಲ್ಲಿಯೇ ಬಿಟ್ಟು ಓಡಿಹೋದನು. ಅವರಿಬ್ಬರೂ ಓಡಿ ಹೋದುದನ್ನೂ ಮುನಿಯು ಮೂರ್ಛೆಗೊಂಡು ನೆಲದ ಮೇಲೆ ಬಿದ್ದುದನ್ನೂ ನೀನು ನೋಡಿದೆ.

೪೫. ಹಣವು ಎಲ್ಲಿ ಬಚ್ಚಿಡಲ್ಪಟ್ಟಿತು! ಆ ವೈಶ್ಯನು ಎಷ್ಟು ದೂರ ಓಡಿ ಹೋದನು? ಮುಂತಾಗಿ ಕೇಳುವ ಅಭಿಲಾಷೆಯಿಂದ ಆಯಾಸಗೊಂಡಿದ್ದ ಆ ಬ್ರಾಹ್ಮಣನನ್ನು ಉಜ್ಜೀವಿಸಲು ಪ್ರಯತ್ನಮಾಡುವವನಾದೆ.

೪೬-೪೭. ದೇಹಸ್ಮರಣೆಯನ್ನುಂಟುಮಾಡುವ ಶುಂಠಿಯ ಚೂರ್ಣವನ್ನು ಆತನ ಕಿವಿಗಳಲ್ಲಿ ಊದಿ, ಕ್ರಿಮಿಗಳಿಂದಲೂ, ಕೆಸರಿನಿಂದಲೂ ಕೂಡಿದ ಒಂದು ಹೊಂಡದ ನೀರನ್ನು ತಂದು ಆತನ ಕಣ್ಣುಗಳನ್ನು ತೊಡೆದು, ಆಯಾಸಗೊಂಡ ಆತನ ಮುಖವನ್ನು ಮರದೆಲೆಗಳಿಂದ ಬೀಸಿ, ಮುನಿಯನ್ನು ಪ್ರಕೃತಿಸ್ಥನನ್ನಾಗಿ ಮಾಡಿ ಮನಸ್ಸಿಗೆ ಸಮಾಧಾನವನ್ನು ತಂದುಕೊಂಡು ಆತನನ್ನು ಕೇಳುವವನಾದೆ.

೪೮. "ಎಲೈ ಮಹಾಮುನಿಯೆ! ಅರಣ್ಯದಲ್ಲಿ ಶಸ್ತ್ರಗಳನ್ನು ಧರಿಸಿ

ಭಿನ್ನಪಾತ್ರೇಣ ಜೀರ್ಣೇನ ನ ಮೇ ಕಿಂಚಿದ್ಭವಿಷ್ಯತಿ ।
ಏತಾವದ್ವದ ಮೇ ವಿದ್ವನ್ ವಣಿಕ್ಕುತ್ರ ಪಲಾಯಿತಃ ॥ ೪೯ ॥
ಕುತ್ರ ಗುಲ್ಮೇ ಧನಂ ಕ್ಷಿಪ್ತಂ ತೇನ ಶೀಘ್ರಂ ಪಲಾಯತಾ ।
ಅನ್ಯಥಾ ತ್ವಾಂ ಹನಿಷ್ಯಾಮಿ ಯದಿ ಮಿಥ್ಯಾ ವದಿಷ್ಯಸಿ ॥ ೫೦ ॥

ಕರ್ಷಣ ಉವಾಚ:—

ಧನಂ ಗುಲ್ಮೇ ವಿನಿಕ್ಷಿಪ್ತಂ ಮಾರ್ಗಾದಸ್ಮಾತ್ಪಲಾಯಿತಃ ।
ಇತಿ ಪ್ರಾಹ ಭಯಾತ್ಸೋಽಪಿ ಪೃಷ್ಟಃ ಪ್ರಾಣಪರೀಪ್ಸಯಾ ॥ ೫೧ ॥
ಗಚ್ಛ ವಿಪ್ರ ಸುಖಂ ಮಾರ್ಗಂ ಮತ್ತೋ ಭೀತಿಂ ವಿಹಾಯ ಚ
ಇತೋ ವಿದೂರೇ ಸಲಿಲಂ ತಡಾಗೇ ವರ್ತತೇ ಶುಭಂ ॥ ೫೨ ॥
ತತ್ಪೀತ್ವಾ ಸಲಿಲಂ ಪುಣ್ಯಂ ಗಚ್ಛ ಗ್ರಾಮಂ ಗತಶ್ರಮಃ ।
ಅಧುನೈವಾಗಮಿಷ್ಯಂತಿ ರಾಜಕೀಯಾಃ ಪಥಾ ಜನಾಃ ॥ ೫೩ ॥

ತಿರುಗುತ್ತಿರುವ ನನ್ನಿಂದ ನಿನಗೆ ಯಾವ ಭಯವನ್ನು ಪಡುವ ಪ್ರಮೇಯವೂ ಇಲ್ಲ. ಲೋಕದಲ್ಲಿ ಸರ್ವಸ್ವವನ್ನೂ ತ್ಯಾಗಮಾಡಿದ ನೀನೇ ಸುಖಿಯಾದವನು. ನಿನಗೆ ಇಂತಹ ತೀವ್ರವಾದ ಭಯವೇಕೆ?

೪೯. ಕಮಂಡಲವನ್ನು ಒಡೆದುಕೊಂಡವನೂ, ವಯೋಧಿಕ್ಯದಿಂದ ಕೃಶಾಂಗನೂ ಆದ ನಿನ್ನಿಂದ ನನಗೆ ಯಾವ ಪ್ರಯೋಜನವೂ ಇಲ್ಲವು. ಆದರೆ ಆ ವೈಶ್ಯನು ಯಾವ ದಿಕ್ಕಿಗೆ ಓಡಿಹೋದನೆಂಬುದಿಷ್ಟನ್ನು ಮಾತ್ರ ನನಗೆ ತೋರಿಸಿಕೊಡು. ನೀನು ಆ ವಿಷಯವನ್ನು ತಿಳಿದೇ ಇರುವೆಯಲ್ಲವೆ.

೫೦. ಇಷ್ಟು ವೇಗವಾಗಿ ಓಡಿಹೋದವನು ಹಣದ ಗಂಟನ್ನು ತೆಗೆದು ಕೊಂಡು ಹೋಗಿರಲಾರನು. ಆತನು ಧನವನ್ನು ಯಾವ ಪೊದೆಯಲ್ಲಿ ಬಚ್ಚಿಟ್ಟಿರುವನು? ಈ ವಿಷಯದಲ್ಲಿ ನೀನೇನಾದರೂ ಸುಳ್ಳನ್ನು ಹೇಳುವೆಯಾದರೆ ಖಂಡಿತವಾಗಿಯೂ ನಿನ್ನನ್ನು ಸಂಹರಿಸುತ್ತೇನೆ.''

೫೧. ಕರ್ಷಣನು ಹೇಳುತ್ತಾನೆ:—"ಆ ವೈಶ್ಯನು ತನ್ನ ಧನವನ್ನು ಆ ಗುಲ್ಮದಲ್ಲಿ ಹಾಕಿರುವನು. ಮತ್ತು ಆ ಮಾರ್ಗದಿಂದ ಓಡಿಹೋದನು.'' ಇಂತೆಂದು ವ್ಯಾಧನಿಂದ ಪ್ರಶ್ನೆಮಾಡಲ್ಪಟ್ಟ ಆ ಬ್ರಾಹ್ಮಣನು ತನ್ನ ಪ್ರಾಣವನ್ನು ರಕ್ಷಿಸಿಕೊಳ್ಳಲು ಭಯದಿಂದ ಹೇಳಿ ತೋರಿಸಿದನು.

೫೨. "ಎಲೈ ಬ್ರಾಹ್ಮಣನೆ! ನನ್ನ ದೆಸೆಯಿಂದ ಭಯವನ್ನು ಬಿಟ್ಟು ನೀನು ಯಥಾಸುಖವಾಗಿ ನಿನ್ನ ಮಾರ್ಗದಲ್ಲಿ ಹೊರಟುಹೋಗು. ಇಲ್ಲಿಗೆ ಹತ್ತಿರದಲ್ಲಿಯೇ ಒಂದು ತಟಾಕವಿರುವುದು. ಅದರಲ್ಲಿ ನಿರ್ಮಲವಾದ ಜಲವಿರುವುದು.

೫೩. ಉತ್ತಮವಾದ ಆ ಜಲವನ್ನು ಕುಡಿದು ಶ್ರಮಪರಿಹಾರವನ್ನು

ಮತ್ಪದಾನ್ವೇಷಣೇ ಸಕ್ತಾಃ ಶ್ರುತ್ವಾ ರಾವಂ ವಣಿಕ್ಪತೇಃ ।
ತೃಷಾರ್ತಮನುಗಂತುಂ ಮೇ ನ ಶಕ್ಯಂ ತ್ವಾಂ ತತೋದ್ವಿಜ ॥ ೫೪ ॥
ವೀಜಯಾನೇನ ಪರ್ಣೇನ ಘರ್ಮಃ ಕಿಂಚಿದ್ಗಮಿಷ್ಯತಿ ।
ತಸ್ಮೈ ದತ್ವಾ ಪಲಾಶಂ ಚ ತ್ವಮಾಗಾ ವಿಪಿನಂ ಪುನಃ ॥ ೫೫ ॥
ತೇನ ಪುಣ್ಯಪ್ರಭಾವೇನ ವೈಶಾಖೇ ಘರ್ಮಘರ್ಘರೇ ॥ ೫೬ ॥
ಸ್ವಕಾರ್ಯಾರ್ಥಂ ಕೃತೇನಾಪಿ ಮುನೇಸ್ತ್ರಾಣಾಯ ಪದ್ಧತೌ ।
ಜನ್ಮಾಸೀತ್ತೇ ಮಹಾಪುಣ್ಯೇ ರಾಜವಂಶೇಽತಿವಿಸ್ತೃತೇ ॥ ೫೭ ॥
ಯದೀಚ್ಛಸಿ ಸುಖಂ ರಾಜ್ಯಂ ಧನಧಾನ್ಯಾದಿಸಂಪದಃ ।
ಸ್ವರ್ಗಾಪವರ್ಗೌ ಯದಿ ವಾ ಸಾಯುಜ್ಯಂ ವಾ ಹರೇಃ ಪದಂ ।
ಕುರು ವೈಶಾಖಧರ್ಮಾಂ ಸ್ತ್ವಂ ಸರ್ವಸೌಖ್ಯಮವಾಪ್ಸ್ಯಸಿ ॥ ೫೮ ॥
ಮಾಸೋಽಯಂ ಮಾಧವೋ ನಾಮ ತೃತೀಯಾ ಚಾಕ್ಷಯಾಹ್ವಯಾ ।
ಗಾಂ ಚ ಸಕೃತ್ಪ್ರಸೂತಾಖ್ಯಾಂ ದೇಹಿ ವಿಪ್ರಾಯ ಸೀದತೇ ॥ ೫೯ ॥

---

ಮಾಡಿಕೊಂಡು ನೀನು ಮುಂದಿನ ಗ್ರಾಮಕ್ಕೆ ಪ್ರಯಾಣಮಾಡು. ಇಷ್ಟರಲ್ಲಿಯೇ ಈ ದಾರಿಯಲ್ಲಿ ಮಹಾರಾಜನ ಭಟರಾದ ಜನರು ಬರುವರು.

೫೪. ಆ ವೈಶ್ಯಪುಂಗವನ ಆಕ್ರಂದನವನ್ನು ಕೇಳಿ ಅವರು ನನ್ನ ಗುರುತುಗಳನ್ನೇ ಹುಡುಕುತ್ತ ಬರುವರು. ಎಲೈ ಬ್ರಾಹ್ಮಣೋತ್ತಮನೆ! ಆದುದರಿಂದಲೇ ಬಾಯಾರಿ ಬಳಲಿರುವ ನಿನ್ನೊಡನೆ ಬರಲು ನನಗೆ ಸಾಧ್ಯವಾಗುವುದಿಲ್ಲ.

೫೫. ಈ ಎಲೆಯಿಂದ ಗಾಳಿಯನ್ನು ಹಾಕಿಕೊಳ್ಳಲು ನಿನಗೆ ಬಿಸಿಲಿನ ತಾಪವು ಸ್ವಲ್ಪಮಟ್ಟಿಗೆ ಶಮನವಾಗುವುದು.'' ಇಂತೆಂದು ಆತನಿಗೆ ಒಂದು ಪಲಾಶಪತ್ರವನ್ನು ಕೊಟ್ಟು ನೀನು ಪುನಃ ನಿನ್ನ ಅರಣ್ಯವನ್ನು ಸೇರುವವನಾದೆ.

೫೬–೫೭. ಬಿಸಿಲಿನ ತಾಪದಿಂದ ಭಯಂಕರವಾದ ಆ ವೈಶಾಖ ಮಾಸದಲ್ಲಿ ಮಾರ್ಗಮಧ್ಯದಲ್ಲಿ ಸ್ವಪ್ರಯೋಜನಕ್ಕಾಗಿಯೇ ಮಾಡಿದ ಮುನಿಯಸಂರಕ್ಷಣೆಯ ಪುಣ್ಯದ ಪ್ರಭಾವದಿಂದಲೇ ಈಗ ನಿನಗೆ ಮಹಾ ಪವಿತ್ರವೂ ಅತ್ಯಂತ ವಿಖ್ಯಾತವೂ ಆದ ಮಹಾರಾಜರ ವಂಶದಲ್ಲಿ ಜನ್ಮವುಂಟಾಗಿರುವುದು.

೫೮. ಸುಖವನ್ನೂ, ರಾಜ್ಯಾಧಿಕಾರವನ್ನೂ, ಧನಧಾನ್ಯಗಳೇ ಮೊದಲಾದ ಐಶ್ವರ್ಯವನ್ನೂ, ಸ್ವರ್ಗಲೋಕವನ್ನೂ, ಮೋಕ್ಷಪದವಿಯನ್ನೂ, ಮಹಾವಿಷ್ಣುವಿನ ಸಾಯುಜ್ಯರೂಪವಾದ ಪದವನ್ನೂ ಅಪೇಕ್ಷಿಸುವೆಯಾದರೆ ವೈಶಾಖ ಧರ್ಮಗಳನ್ನು ಶ್ರದ್ಧೆಯಿಂದ ನಡೆಸಿಕೊಂಡು ಬಾ. ಅದರಿಂದ ಸಕಲ ಸೌಖ್ಯಗಳನ್ನೂ ಪಡೆಯುವೆ.

೫೯. ಈ ಮಾಸವೇ ವೈಶಾಖಮಾಸವಾಗಿರುವುದು. ಇಂದಿನ ದಿವಸವೇ

ತೇನ ತೇ ಕೋಶಪೂರ್ತಿಃ ಸ್ಯಾಚ್ಛಯ್ಯಾಂದೇಹಿ ಸುಖಂ ಭವೇತ್ ।
ಕುರು ಛತ್ರಪ್ರದಾನಂ ಚ ಸಾಮ್ರಾಜ್ಯಂ ತೇ ಭವಿಷ್ಯತಿ ॥ ೬೦ ॥
ಸ್ನಾನಂ ಕುರು ಯಥಾನ್ಯಾಯಂ ತಥೈವಾರ್ಚಯ ಮಾಧವಂ ।
ದೇಹಿ ತ್ವಂ ಪ್ರತಿಮಾಂ ದಿವ್ಯಾಂ ಕೃತ್ವಾ ತೇನ ಜಯೋ ಭವೇತ್ ॥ ೬೧ ॥
ಆತ್ಮತುಲ್ಯಗುಣಾನ್ ಪುತ್ರಾನ್ ಯದಿ ಕಾಮಯಸೇ ನೃಪ ।
ಸರ್ವಭೂತಹಿತಾರ್ಥಾಯ ಪ್ರಪಾದಾನಂ ಚ ತ್ವಂ ಕುರು ॥ ೬೨ ॥
ವೈಶಾಖೋಕ್ತಾನಿಮಾನ್ ಧರ್ಮಾನ್ ಸಮ್ಯಗಾಚರ ಭೂಮಿಪ ।
ತೇನ ತೇ ಸಕಲಾ ಲೋಕಾ ವಶಂ ಯಾಂತಿ ನ ಸಂಶಯಃ ॥ ೬೩ ॥
ನಿಷ್ಕಾಮಕೇನ ಚಿತ್ತೇನ ಯದಿ ಧರ್ಮಾನ್ ಕರಿಷ್ಯಸಿ ।
ವೈಶಾಖೇ ಪುಣ್ಯಮಾಸೇಽಸ್ಮಿನ್ ಪ್ರೀತಯೇ ಮಧುಘಾತಿನಃ ॥ ೬೪ ॥

---

ಶುಕ್ಲಪಕ್ಷದ ತೃತೀಯಾತಿಥಿಯಾಗಿರುವುದು. ಇದಕ್ಕೆ ಅಕ್ಷಯತೃತೀಯೆಯೆಂದು ಹೇಳುವರು. ಈ ಶುಭದಿವಸದಲ್ಲಿ ಸಕೃತ್ಪ್ರಸೂತೆಯಾದ (ಒಂದೆರಡು ಕರುಗಳನ್ನು ಮಾತ್ರ ಹಾಕಿದ) ಹಸುವೊಂದನ್ನು ವೃತ್ತಿಹೀನನಾಗಿ ಕಷ್ಟಪಡುತ್ತಿರುವ ಬ್ರಾಹ್ಮಣನೊಬ್ಬನಿಗೆ ದಾನಮಾಡು.

೬೦–೬೧. ಅದರಿಂದ ನಿನಗೆ ಅಕ್ಷಯವಾದ ಭಂಡಾರವುಂಟಾಗುವುದು. ಶಯ್ಯಾದಾನವನ್ನು ಮಾಡಿದರೆ ನಿನಗೆ ಸರ್ವಸೌಖ್ಯವುಂಟಾಗುವುದು. ದಾರಿಗರಿಗೆ ಛತ್ರಗಳನ್ನು ದಾನಮಾಡುವುದರಿಂದ ನಿನಗೆ ನಿನ್ನ ಸಾಮ್ರಾಜ್ಯವು ಪುನಃ ಕೈಗೂಡುವುದು. ಶಾಸ್ತ್ರೋಕ್ತವಿಧಾನದಿಂದ ಪ್ರಾತಃಸ್ನಾನವನ್ನು ಮಾಡಿ ಮಧುಸೂದನನನ್ನು ಭಕ್ತಿಯಿಂದ ಪೂಜಿಸು. ದಿವ್ಯಸುಂದರವಾದ ವಿಷ್ಣುವಿನ ಪ್ರತಿಮೆಯನ್ನು ವಿಭವಾನುಗುಣವಾಗಿ ಮಾಡಿಸಿ ಆಚಾರ್ಯನಿಗೆ ಸಮರ್ಪಣೆ ಮಾಡಲು ನೀನು ಸಕಲ ಶತ್ರುಗಳನ್ನೂ ಜಯಿಸುವೆ.

೬೨. ಮಹಾರಾಜನೆ! ನಿನಗೆ ಸಮಾನರಾಗಿ ಸದ್ಗುಣಭರಿತರಾದ ಪುತ್ರರನ್ನು ಪಡೆಯಬೇಕೆಂಬ ಬಯಕೆಯಿದ್ದರೆ ಸಕಲ ಪ್ರಾಣಿಗಳಿಗೂ ಈ ಬೇಸಿಗೆಯಲ್ಲಿ ತಂಪಾದ ಪಾನೀಯವು ದೊರೆಯುವಂತೆ ಒಂದು ಅರವಟ್ಟಿಗೆಯನ್ನು ಕಟ್ಟಿಸುವವನಾಗು.

೬೩. ಭೂಪಾಲಕನೆ! ವೈಶಾಖವ್ರತದ ಅಂಗಗಳಾಗಿ ಹೇಳಲ್ಪಟ್ಟಿರುವ ಈ ಧರ್ಮಗಳನ್ನೆಲ್ಲ ನೀನು ಶ್ರದ್ಧೆಯಿಂದ ಆಚರಿಸು. ಅದರಿಂದ ಸಕಲ ಲೋಕಗಳೂ ನಿನಗೆ ವಶವರ್ತಿಗಳಾಗುವುವೆಂಬುದರಲ್ಲಿ ಸಂದೇಹವೇ ಇಲ್ಲವು.

೬೪–೬೬. ಪುಣ್ಯಪ್ರದವಾದ ಈ ವೈಶಾಖಮಾಸದಲ್ಲಿ ಮಧುಸೂದನನ ಪ್ರೀತಿಯನ್ನೇ ಉದ್ದೇಶಿಸಿ ಯಾವ ವಿಧವಾದ ಫಲಾಪೇಕ್ಷೆಯಿಲ್ಲದ ಶುದ್ಧ ಮನಸ್ಸಿನಿಂದ ನೀನು ಈ ಧರ್ಮಗಳನ್ನಾಚರಿಸಿದರೆ, ನಿಷ್ಕಲ್ಮಷವಾದ ಮನಸ್ಸುಳ್ಳ

ಪ್ರತ್ಯಕ್ಷೋ ಭವಿತಾ ವಿಷ್ಣುಸ್ತವ ನಿರ್ಮಲಚೇತಸಃ ।
ಯೇನ ಚಾಚರಿತಾಃ ಪುಂಸಾ ಧರ್ಮಾ ಹ್ಯೇತೇ ಶುಭಾವಹಾಃ ॥ ೬೫ ॥
ತೇಷಾಂ ಚ ಹ್ಯಕ್ಷಯಾ ಲೋಕಾಃ ಪುರಾಣೇ ಕವಯೋ ವಿದುಃ ।
ಏತತ್ಸರ್ವಂ ತವ ಪ್ರೋಕ್ತಂ ಯಥಾದೃಷ್ಟಂ ಯಥಾಶ್ರುತಂ ॥ ೬೬ ॥
ಇತಿ ರಾಜಾನಮಾಮಂತ್ರ್ಯ ಬ್ರಹ್ಮಾಣೌ ಚ ಪುರೋಧಸೌ ।
ಯಾಜೋಪಯಾಜಕೌ ನಾಮ ಜಗ್ಮತುಸ್ತೌ ಯಥಾಗತೌ ॥ ೬೭ ॥
ತತೋ ರಾಜಾ ಮಹಾವೀರ್ಯಃ ಪುರೋಧೋಭ್ಯಾಂ ಚ ಬೋಧಿತಃ ।
ವೈಶಾಖಧರ್ಮಾನ್ ಸಕಲಾಂಶ್ಚಕಾರ ಶ್ರದ್ಧಯಾಽನ್ವಿತಃ ॥ ೬೮ ॥
ಯಥೋಪದಿಷ್ಟಂ ಚ ತಥಾ ಮಧುಸೂದನಮರ್ಚಯತ್ ॥ ೬೯ ॥
ತತೋ ಲಬ್ಧಪ್ರಭಾವಃ ಸ ಬಂಧುಭಿಃ ಸಕಲೈರ್ವೃತಃ ।
ಪಾಂಚಾಲನಗರೀಂ ಪ್ರಾಪ ಹತಶೇಷಬಲಾನ್ವಿತಃ ॥ ೭೦ ॥

ನಿನಗೆ ಮಹಾವಿಷ್ಣುವು ಖಂಡಿತವಾಗಿಯೂ ಪ್ರತ್ಯಕ್ಷವಾಗಿ ದರ್ಶನವನ್ನು ಕೊಡುವನು. ಯಾವ ಮಾನವನು ಮಂಗಳಕರಗಳಾದ ಮೇಲೆ ಹೇಳಿದ ಧರ್ಮಗಳನ್ನೆಲ್ಲ ಸಮಗ್ರವಾಗಿ ಆಚರಿಸುವನೊ, ಅವನಿಗೆ ಅಕ್ಷಯ ಪುಣ್ಯ ಲೋಕಗಳು ಲಭಿಸುವುವೆಂದು ಪುರಾಣಜ್ಞರಾದ ಕವಿಗಳು ತಿಳಿದಿರುವರು. ಪುರುಯಶಮಹಾರಾಜನೆ! ಇಂತು ನಾವು ಜ್ಞಾನದೃಷ್ಟಿಯಿಂದ ತಿಳಿದ ನಿನ್ನ ಪೂರ್ವವೃತ್ತಾಂತವೆಲ್ಲವನ್ನೂ ನಾವು ಕೇಳಿರುವ ವೈಶಾಖಧರ್ಮಗಳೆಲ್ಲವನ್ನೂ ನಿನಗೆ ಸಂಪೂರ್ಣವಾಗಿ ವಿವರಿಸಿರುವೆವು.''

೬೭. ಇಂತೆಂದು ರಾಜನನ್ನು ಬೀಳ್ಕೊಟ್ಟು ಬ್ರಾಹ್ಮಣೋತ್ತಮರೂ ಕುಲ ಪುರೋಹಿತರೂ ಆದ ಯಾಜೋಪಯಾಜಕರೆಂಬ ಅವರೀರ್ವರೂ ಬಂದಂತೆಯೇ ಯಾದೃಚ್ಛಿಕವಾಗಿ ಹೊರಟುಹೋದರು.

೬೮. ಬಳಿಕ ಆ ಮಹಾರಾಜನು ಮಹಾಸತ್ತ್ವವಂತನಾದುದರಿಂದ ಪುರೋಹಿತರು ಕೊಟ್ಟ ಅಪ್ಪಣೆಯನ್ನು ಮನಸ್ಸಿಗೆ ತಂದುಕೊಂಡು ಶ್ರದ್ಧಾ ಭಕ್ತಿಗಳಿಂದ ಕೂಡಿದವನಾಗಿ ಸಮಸ್ತ ವೈಶಾಖಧರ್ಮಗಳನ್ನೂ ನಡೆಸಿಕೊಂಡು ಬರುತ್ತಿದ್ದನು.

೬೯–೭೦. ಅವರು ಉಪದೇಶಿಸಿದ ವಿಧಾನದಿಂದಲೇ ಮಧುಸೂದನ ಸ್ವಾಮಿಯನ್ನು ಪೂಜಿಸಿದನು. ಆ ಪೂಜೆಯ ಪ್ರಭಾವದಿಂದಲೇ ಸಕಲ ಬಂಧುಗಳಿಂದಲೂ ಒಡಗೂಡಿದವನಾಗಿ ಯುದ್ಧಗಳಲ್ಲಿ ಅಳಿದುಳಿದ ಸೈನ್ಯಗಳನ್ನು ಒಟ್ಟುಗೂಡಿಸಿ ಪರಿವಾರದೊಡನೆ ಪಾಂಚಾಲನಗರಿಯನ್ನು ಸಂಭ್ರಮದಿಂದ ಪ್ರವೇಶಿಸಿ ನೆಲಸಿದನು.

ತತಸ್ತು ಶತ್ರವೋ ಭೂಪಾ ಉಪಶ್ರುತ್ಯ ಚ ಭೂಪತೇಃ ।
ಪ್ರವೇಶಂ ಚ ಪುರಸ್ಯಾಽಥ ಪುನರಾಜಗ್ಮುರುದ್ಧತಾಃ ॥ ೭೧ ॥
ತದಾ ಪಾಂಚಾಲಭೂಪೇನ ನೃಪಾಣಾಮುಭವದ್ರಣಂ ।
ಜಿಗ್ಯೇ ಸರ್ವಾನ್ ಮಹಾಬಾಹೂನೇಕ ಏವ ಮಹಾರಥಃ ॥ ೭೨ ॥
ಪಲಾಯಿತೇಷು ಭೂಪೇಷು ನಾನಾದೇಶಪಥಿಷ್ವಪಿ ।
ರಾಜ್ಞಾಂ ಕೋಶಗಜಾನಶ್ವಾನ್ ಸ್ವಯಂ ಜಗ್ರಾಹ ವೀರ್ಯವಾನ್ ॥ ೭೩ ॥
ಅಶ್ವಾನಾಂ ನಿರ್ಬುದಂ ಚೈವ ಗಜಾನಾಂ ಚ ತ್ರಿಕೋಟಿಕಂ ।
ರಥಾನಾಮರ್ಬುದಂ ಚೈವ ದೀರ್ಘಗ್ರೀವಾಯುತಂ ತಥಾ ॥ ೭೪ ॥
ರಾಸಭಾಣಾಂ ತ್ರಿಲಕ್ಷಾಣಿ ಪ್ರಾಪಯಾಮಾಸ ತಾಂ ಪುರೀಂ ।
ವೈಶಾಖಧರ್ಮಮಾಹಾತ್ಮ್ಯಾತ್ಕ್ಷಣಾತ್ಸರ್ವೇ ಚ ಭೂಭೃತಃ ॥ ೭೫ ॥
ಕರದಾ ಭಗ್ನಸಂಕಲ್ಪಾಃ ಪಾದಾಕ್ರಾಂತಾ ಬಭೂವಿರೇ ।
ಸುಭಿಕ್ಷಮತುಲಂ ಚಾಸೀತ್ಪಾಂಚಾಲವಿಷಯೇಷು ಚ ॥ ೭೬ ॥

೭೧. ಇಂತು ಮಹಾರಾಜನು ಪುನಃ ರಾಜಧಾನಿಯನ್ನು ಪ್ರವೇಶ ಮಾಡಿದನೆಂಬ ಸಮಾಚಾರವನ್ನು ಕೇಳಿ ಶತ್ರುಗಳಾಗಿದ್ದ ರಾಜರೆಲ್ಲರೂ ಕೋಪಗೊಂಡವರಾಗಿ ಪುನಃ ತಮ್ಮ ಸೈನ್ಯಗಳೊಡನೆ ಯುದ್ಧಕ್ಕೆ ಸನ್ನದ್ಧರಾಗಿ ಬಂದರು.

೭೨. ಆಗ ಪಾಂಚಾಲರಾಜನಿಗೂ ಆ ಶತ್ರುರಾಜರಿಗೂ ಭಯಂಕರವಾದ ಸಂಗ್ರಾಮವುಂಟಾಯಿತು. ಮಹಾ ಪರಾಕ್ರಮಶಾಲಿಗಳಾಗಿದ್ದರೂ ಅವರನ್ನೆಲ್ಲ ಮಹಾರಥಿಯಾದ ಒಬ್ಬ ಮಹಾರಾಜನೇ ಜಯಿಸಿದನು.

೭೩. ಆಗ ಸಕಲ ರಾಜರೂ ತಮ್ಮ ತಮ್ಮ ದೇಶಗಳ ದಾರಿಗಳನ್ನು ಹಿಡಿದು ದಿಕ್ಕುಪಾಲಾಗಿ ಓಡಿಹೋದರು. ಅವರೆಲ್ಲರ ಧನವನ್ನೂ, ಆನೆಗಳನ್ನೂ, ಕುದುರೆಗಳನ್ನೂ ಪರಾಕ್ರಮಿಯಾದ ಪುರುಯಶಮಹಾರಾಜನೇ ಸೇರಿಸಿಕೊಂಡನು.

೭೪–೭೬. ನೂರುಕೋಟಿ ಸಂಖ್ಯೆಗಳ ಕುದುರೆಗಳನ್ನೂ, ಮೂರುಕೋಟಿ ಆನೆಗಳನ್ನೂ, ಹತ್ತುಕೋಟಿ ರಥಗಳನ್ನೂ, ಹತ್ತುಸಾವಿರ ಒಂಟೆಗಳನ್ನೂ, ಮೂರುಲಕ್ಷ ಕತ್ತೆಗಳನ್ನೂ ಶೇಖರಿಸಿ ತನ್ನ ಪಟ್ಟಣಕ್ಕೆ ಕಳುಹಿಸಿಕೊಟ್ಟನು. ವೈಶಾಖ ಧರ್ಮಗಳನ್ನಾಚರಿಸಿದುದರ ಮಾಹಾತ್ಮ್ಯದಿಂದ ಸ್ವಲ್ಪಕಾಲದಲ್ಲಿಯೇ ಸಕಲ ರಾಜರೂ ಭಗ್ನಮನೋರಥರಾಗಿ ಆತನ ಪಾದಗಳಲ್ಲಿ ಬಿದ್ದು ಕಪ್ಪಕಾಣಿಕೆಗಳನ್ನು ಕೊಡುವವರಾದರು. ಪಾಂಚಾಲದೇಶದಲ್ಲಿ ಅಪ್ರತಿಮವಾದ ಸುಭಿಕ್ಷವೂ ಉಂಟಾಗಿ ಜನರು ಸಂತೋಷಗೊಂಡರು.

ಏಕಚ್ಛತ್ರಮಭೂದ್ರಾಜ್ಯಂ ಪ್ರಸಾದಾನ್ಮಧುಘಾತಿನಃ ।
ಪುತ್ರಾಃ ಪಂಚಾಽಪಿ ತಸ್ಯಾಸನ್ ಶೌರ್ಯೌದಾರ್ಯಗುಣಾನ್ವಿತಾಃ ॥ ೭೭ ॥
ದೃಷ್ಟಕೀರ್ತಿರ್ಧೃಷ್ಟಕೇತುರ್ಧೃಷ್ಟದ್ಯುಮ್ನಸ್ತಥಾಽಪರೇ ।
ವಿಜಯಶ್ಚಿತ್ರಕೇತುಶ್ಚ ಮಯೂರಧ್ವಜಸನ್ನಿಭಾಃ ॥ ೭೮ ॥
ಅನುರಕ್ತಾಃ ಪ್ರಜಾಶ್ಚಾಸನ್ ಧರ್ಮೇಣ ಪ್ರತಿಪಾಲಿತಾಃ ।
ವೈಶಾಖಸ್ಯ ಪ್ರತಾಪೇನ ಪ್ರತ್ಯಯಸ್ತತ್ಕ್ಷಣಾದಭೂತ್ ॥ ೭೯ ॥
ಪುನಶ್ಚಕಾರ ತಾನ್ ಧರ್ಮಾನ್ ಪಾಂಚಾಲನಗರೀಶ್ವರಃ ।
ಅಕಾಮುಕೇನ ಚಿತ್ತೇನ ಪ್ರೀತಯೇ ಮಧುಘಾತಿನಃ ॥ ೮೦ ॥
ಧರ್ಮೇಣಾನೇನ ಸಂತುಷ್ಟೋ ಭಗವಾನ್ ಮಧುಸೂದನಃ ।
ಅಕ್ಷಯಾಯಾಂ ತೃತೀಯಾಯಾಂ ಪ್ರತ್ಯಕ್ಷಸ್ಸಮಜಾಯತ ॥ ೮೧ ॥
ತಂ ದೃಷ್ಟ್ವಾ ವಿಸ್ಮಿತೋ ಭೂತ್ವಾ ಪರಮಾತ್ಮಾನಮಚ್ಯುತಂ ।
ನಾರಾಯಣಂ ಚತುರ್ಬಾಹುಂ ಶಂಖಚಕ್ರಗದಾಧರಂ ॥ ೮೨ ॥

---

೭೭. ಮಧುಸೂದನನಾದ ಶ್ರೀಮನ್ನಾರಾಯಣನ ಅನುಗ್ರಹದಿಂದ ರಾಜ್ಯವೆಲ್ಲವೂ ಏಕಚ್ಛತ್ರಾಧಿಪತ್ಯಕ್ಕೆ ಒಳಪಟ್ಟಿತು. ಪರಾಕ್ರಮ ಔದಾರ್ಯಗಳೇ ಮುಂತಾದ ಸದ್ಗುಣಗಳಿಂದ ಭೂಷಿತರಾದ ಐದು ಜನ ಪುತ್ರರೂ ಆತನಿಗೆ ಜನಿಸಿದರು.

೭೮. ಧೃಷ್ಟಕೀರ್ತಿ, ಧೃಷ್ಟಕೇತು, ಧೃಷ್ಟದ್ಯುಮ್ನ, ವಿಜಯ ಮತ್ತು ಚಿತ್ರಕೇತು ಎಂಬಿವರೇ ಆ ಐದು ಮಂದಿ ಪುತ್ರರು. ಎಲ್ಲರೂ ಮಯೂರಧ್ವಜನಿಗೆ ಸಮಾನರೆನಿಸಿ ಪ್ರಖ್ಯಾತರಾಗಿದ್ದರು.

೭೯. ಧರ್ಮಮಾರ್ಗದಲ್ಲಿ ರಾಜ್ಯಪರಿಪಾಲನೆಯು ನಡೆಯುತ್ತಿರಲು ಪ್ರಜೆಗಳೂ ರಾಜನಲ್ಲಿ ಅನುರಾಗಸಹಿತರಾದರು. ವೈಶಾಖವ್ರತದ ಪುಣ್ಯದ ಫಲವಾಗಿ ರಾಜನಿಗೂ ಪ್ರಜೆಗಳಿಗೂ ಪರಸ್ಪರವಿಶ್ವಾಸವು ಪ್ರವೃದ್ಧವಾಯಿತು.

೮೦. ತನ್ನ ರಾಜ್ಯವು ಸುಸ್ಥಿರವಾಗಲು ಪಾಂಚಾಲಮಹಾರಾಜನು ಮತ್ತೆ ಸಕಲಕಾಮನಾರಹಿತನಾಗಿ ಶುದ್ಧ ಚಿತ್ತದಿಂದ ಶ್ರೀಮನ್ನಾರಾಯಣನ ಪ್ರೀತಿಗಾಗಿಯೇ ಆ ವೈಶಾಖಧರ್ಮಗಳನ್ನೆಲ್ಲ ಅನುಷ್ಠಾನ ಮಾಡುತ್ತಿದ್ದನು.

೮೧. ಈ ಧರ್ಮಾಚರಣೆಯಿಂದ ಸಂತೋಷಗೊಂಡು ಷಡ್ಗುಣೈಶ್ವರ್ಯ ಮಂಡಿತನಾದ ಶ್ರೀಮನ್ನಾರಾಯಣನು ಒಂದಾನೊಂದು ಅಕ್ಷಯ್ಯತೃತೀಯೆಯ ದಿನದಲ್ಲಿ ಆತನಿಗೆ ದೃಗ್ಗೋಚರನಾಗಿ ನಿಂತನು.

೮೨–೮೩. ಆತನನ್ನು ಕಂಡು ಮಹಾರಾಜನು ವಿಸ್ಮಯಗೊಂಡು ನಿಂತನು. ಪರಮಾತ್ಮನೂ, ಶಾಶ್ವತನೂ ಆದ ನಾರಾಯಣನು ನಾಲ್ಕು ತೋಳುಗಳಿಂದ ರಂಜಿಸುತ್ತ, ಶಂಖ, ಚಕ್ರ, ಗದೆಗಳನ್ನು ಧರಿಸಿ, ದಿವ್ಯ ಪೀತಾಂಬರವನ್ನುಟ್ಟು,

ಪೀತಾಂಬರಧರಂ ದೇವಂ ವನಮಾಲಾವಿಭೂಷಿತಂ ।
ಸಲಕ್ಷ್ಮೀಕಂ ಸಾನುಗಂ ಚ ಗರುಡೋಪರಿಸಂಸ್ಥಿತಂ ॥ ೮೩ ॥
ನಿರೀಕ್ಷ್ಯ ದುಃಸಹಂ ತೇಜಃ ಸದ್ಯೋ ಮೀಲಿತಲೋಚನಃ ।
ಉತ್ಪತನ್ಸಂಪತನ್ಹರ್ಷಾನ್ಮತ್ತೋನ್ಮತ್ತ ಇವ ಭ್ರಮನ್ ॥ ೮೪ ॥
ಪುಲಕಾಂಕಿತಸರ್ವಾಂಗೋ ಗಲದ್ಬಾಷ್ಪಾಕುಲೇಕ್ಷಣಃ ।
ತುಷ್ಟಾವ ಪರಯಾ ಭಕ್ತ್ಯಾ ಪ್ರಾಂಜಲಿಃ ಪ್ರಣತೋ ಭುವಿ ॥ ೮೫ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ದ್ವಿತೀಯೇ ವೈಷ್ಣವಖಂಡೇ ವೈಶಾಖಮಾಸಮಾಹಾತ್ಮ್ಯೇ ನಾರದಾಂಬರೀಷಸಂವಾದೇ "ಪಾಂಚಾಲದೇಶಾಧಿಪತೇಃ ಜಯಪ್ರಾಪ್ತಿ ದಾರಿದ್ರ್ಯನಾಶವರ್ಣನಂ" ನಾಮ ಪಂಚದಶೋಽಧ್ಯಾಯಃ

ಎಳೆಯ ತುಳಸೀದಳಗಳ ವನಮಾಲೆಯಿಂದ ವಿಭೂಷಿತನಾಗಿ, ನಿತ್ಯಾನಪಾಯಿನಿಯಾದ ಮಹಾಲಕ್ಷ್ಮಿಯೊಡನೆ ತನ್ನ ವಾಹನವಾದ ಗರುಡನನ್ನೇರಿಕೊಂಡು ತನ್ನ ಅನುಚರರೊಡನೆ ಪ್ರತ್ಯಕ್ಷನಾದನು.

೮೪. ಮಹಾರಾಜನಾದರೊ, ಪರಮಾತ್ಮನ ದುರ್ಭರವಾದ ತೇಜಸ್ಸನ್ನು ಕಂಡು ಕ್ಷಣಮಾತ್ರದಲ್ಲಿಯೇ ಕಣ್ಣುಗಳನ್ನು ಮುಚ್ಚಿಕೊಂಡು, ಸಂತೋಷದಿಂದ ಮೈಮರೆತು ಮೇಲಕ್ಕೇಳುತ್ತ ಬೀಳುತ್ತ ಮದ್ಯಪಾನಮಾಡಿದವನಂತೆಯೂ, ಹುಚ್ಚನಂತೆಯೂ ತಿರುಗುತ್ತಿದ್ದನು.

೮೫. ಸರ್ವಾವಯವಗಳಲ್ಲಿಯೂ ಮೈನವಿರೇಳುತ್ತಿರಲು ಧಾರೆಗಳಾಗಿ ಸುರಿಯುತ್ತಿರುವ ಹರ್ಷಾಶ್ರುಗಳಿಂದ ತುಂಬಿದ ಕಣ್ಣುಗಳುಳ್ಳವನಾಗಿ ಮಹಾರಾಜನು ಭೂಮಿಯಲ್ಲಿ ಸಾಷ್ಟಾಂಗನಮಸ್ಕಾರವನ್ನು ಮಾಡಿ ಎದ್ದು ಕೈಗಳನ್ನು ಮುಗಿದು ನಿಸ್ಸೀಮವಾದ ಭಕ್ತಿಯಿಂದ ಕೂಡಿದವನಾಗಿ ಸ್ತೋತ್ರ ಮಾಡತೊಡಗಿದನು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀಸ್ಕಾಂದಮಹಾಪುರಾಣದ ಎರಡನೆಯ ವೈಷ್ಣವಖಂಡದ ವೈಶಾಖಮಾಸಮಾಹಾತ್ಮ್ಯದ ನಾರದಾಂಬರೀಷ ಸಂವಾದದಲ್ಲಿ "ಪಾಂಚಾಲರಾಜನ ಜಯಪ್ರಾಪ್ತಿ–ದಾರಿದ್ರ್ಯನಾಶ ವರ್ಣನ"ವೆಂಬ ಹದಿನೈದನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

# ಅಥ ಷೋಡಶೋಽಧ್ಯಾಯಃ

## ಪಾಂಚಾಲಾಧಿಪತೇರ್ವಿಷ್ಣುಸಾಯುಜ್ಯಪ್ರಾಪ್ತಿವರ್ಣನಂ

ಶೃತದೇವ ಉವಾಚ :—

ತದ್ದರ್ಶನಾಹ್ಲಾದಪರಿಪ್ಲುತಾಶಯಃ
ಸದ್ಯಃ ಸಮುತ್ಥಾಯ ನನಾಮ ಮೂರ್ಧ್ನಾ ।
ಚಿರಂ ನಿರೀಕ್ಷ್ಯಾಽಽಕುಲಲೋಚನೋ ಹ್ಯಮುಂ
ವಿಶ್ವಾತ್ಮದೇವಂ ಜಗತಾಮಧೀಶಂ ॥ ೧ ॥

ದಧಾರ ಪಾದಾವವನಿಜ್ಯ ತಜ್ಜಲಂ
ಯತ್ಪಾದಜಾಽಽಬ್ರಹ್ಮಜಗತ್ಪುನಾತಿ ।
ಸಮರ್ಚಯಾಮಾಸ ಮಹಾವಿಭೂತಿಭಿಃ
ಮಹಾರ್ಘವಸ್ತ್ರಾಭರಣಾನುಲೇಪನೈಃ ॥ ೨ ॥

ಸ್ರಗ್ಧೂಪದೀಪಾಮೃತಭಕ್ಷಣಾದಿಭಿಃ
ತ್ವಗ್ಗಾತ್ರವಿತ್ತಾತ್ಮಸಮರ್ಪಣೇನ ।
ತುಷ್ಟಾವ ವಿಷ್ಣುಂ ಪುರುಷಂ ಪುರಾಣಂ
ನಾರಾಯಣಂ ನಿರ್ಗುಣಮದ್ವಿತೀಯಂ ॥ ೩ ॥

---

## ಕನ್ನಡದ ಅನುವಾದ

### ಪಾಂಚಾಲರಾಜನಿಗೆ ವಿಷ್ಣುಸಾಯುಜ್ಯವು ಲಭಿಸಿದುದು

೧. ಶ್ರುತದೇವನು ಹೇಳುತ್ತಾನೆ:—ಬ್ರಹ್ಮಾಂಡದಲ್ಲಿ ಅಂತರ್ಯಾಮಿಯಾಗಿ ದೇವೋತ್ತಮನೂ ಲೋಕಗಳಿಗೆಲ್ಲ ಅಧೀಶ್ವರನೂ ಆದ ಶ್ರೀಮನ್ನಾರಾಯಣನನ್ನು ಕಂಡು, ದರ್ಶನಲಾಭದಿಂದ ಸಂತೋಷಭರಿತವಾದ ಮನಸ್ಸುಳ್ಳವನಾಗಿ ಕಣ್ಣುಗಳಲ್ಲಿ ಹರ್ಷಾಶ್ರುಗಳು ಗಳಗಳನೆ ಸುರಿಯುತ್ತಿರಲು ತತ್ಕ್ಷಣದಲ್ಲಿಯೇ ಎದ್ದು ಪುರುಯಶಮಹಾರಾಜನು ತಲೆಯನ್ನು ಬಾಗಿಸಿ ಬಹುಕಾಲದವರೆಗೂ ಪ್ರಣಾಮವನ್ನು ಮಾಡಿದನು.

೨. ಯಾವನ ಪಾದದಲ್ಲಿ ಜನಿಸಿದ ಗಂಗೆಯು ಬ್ರಹ್ಮಾದಿಸ್ತಂಬಪರ್ಯಂತವಾದ ಸಕಲ ಜಗತ್ತನ್ನೂ ಪಾವನಗೊಳಿಸುತ್ತಿರುವುದೊ, ಅಂತಹ ಪರಮಾತ್ಮನ ಪಾದಗಳನ್ನು ತೊಳೆದು ಪಾದೋದಕವನ್ನು ತಲೆಯಲ್ಲಿ ಧರಿಸಿದನು. ಮತ್ತು ತನ್ನ ಮಹಾ ವಿಭವಕ್ಕನುಸಾರವಾಗಿ ಅನರ್ಘಗಳಾದ ವಸ್ತ್ರಗಳಿಂದಲೂ, ಆಭರಣಗಳಿಂದಲೂ, ಗಂಧಾದಿ ಅನುಲೇಪನಗಳಿಂದಲೂ ಪೂಜೆಯನ್ನು ಮಾಡಿದನು.

೩. ಪುಷ್ಪಗಳು, ಧೂಪ, ದೀಪ, ದಿವ್ಯಭಕ್ಷಣಗಳೇ ಮುಂತಾದುವು

ನಿರಂಜನಂ ವಿಶ್ವಸೃಜಾಮಧೀಶಂ
ವಂದೇ ಪರಂ ಪದ್ಮಭವಾದಿವಂದಿತಂ ।
ಯನ್ಮಾಯಯಾ ತತ್ತ್ವವಿದುತ್ತಮಾ ಜನಾ
ವಿಮೋಹಿತಾ ವಿಶ್ವಸೃಜಾಮಧೀಶ್ವರಂ ॥ ೪ ॥
ಮುಹ್ಯಂತಿ ಮಾಯಾಚರಿತೇಷು ಮೂಢಾ
ಗುಣೇಷು ಚಿತ್ರಂ ಭಗವದ್ವಿಚೇಷ್ಟಿತಂ ।
ಅನೀಹ ಏತದ್ಬಹುಧೈಕ ಆತ್ಮನಾ
ಸೃಜತ್ಯವತ್ಯತ್ತಿ ನ ಸಜ್ಜತೇಽಪ್ಯಥ ॥ ೫ ॥
ಸಮಸ್ತದೇವಾಸುರಸೌಖ್ಯ ದುಃಖ
ಪ್ರಾಪ್ತ್ಯೈ ಭವಾನ್ಪೂರ್ಣಮನೋರಥೋಽಪಿ ।
ತತ್ರಾಽಪಿ ಕಾಲೇ ಸ್ವಜನಾಭಿಗುಪ್ತ್ಯೈ
ಬಿಭರ್ಷಿ ಸತ್ತ್ವಂ ಖಲನಿಗ್ರಹಾಯ ॥ ೬ ॥

---

ಗಳಿಂದಲೂ, ದೇಹ, ಧನ, ಆತ್ಮಗಳ ಸಮರ್ಪಣೆಯಿಂದಲೂ, ಸಕಲ ದೇಹಗಳಲ್ಲಿ ಅಂತರ್ಯಾಮಿಯೂ, ಅನಾದಿನಿಧನನೂ, ಭಕ್ತರಿಗೆ ಮುಕ್ತಿಪ್ರದನೂ, ಗುಣ ರಹಿತನೂ, ಅದ್ವಿತೀಯನೂ ಆದ ಮಹಾವಿಷ್ಣುವನ್ನು ಸ್ತೋತ್ರಮಾಡ ತೊಡಗಿದನು.

೪. ಸಕಲದೋಷವರ್ಜಿತನೂ, ಲೋಕಸ್ರಷ್ಟೃಗಳಿಗೆ ಅಧೀಶ್ವರನೂ, ಪರಾತ್ಪರನೂ, ಬ್ರಹ್ಮಾದಿದೇವತೆಗಳಿಂದ ವಂದಿತನೂ ಆದ ನಿನಗೆ ನಮಸ್ಕರಿಸುವೆನು. ತತ್ತ್ವಜ್ಞಾನಿಗಳಲ್ಲಿ ಅಗ್ರೇಸರರೆನಿಸಿದ ಜನರೂ ಸಹ ಯಾವನ ಮಾಯೆಯೊಳಗೆ ಸಿಲುಕಿ ಮೋಹಗೊಳ್ಳುತ್ತಿರುವರೊ, ಅಂತಹ ದೇವತಾ ಸಾರ್ವಭೌಮನಾದ ನಿನಗೆ ಪ್ರಣಾಮವನ್ನು ಮಾಡುವೆನು.

೫. ಷಡ್ಗುಣೈಶ್ವರ್ಯಸಹಿತನೆ! ನಿನ್ನ ಶಕ್ತಿಯಾದ ಮಾಯೆಯಿಂದುಂಟಾದ ತ್ರಿಗುಣಗಳಲ್ಲಿಯೇ ಮೂಢರಾದ ಮಾನವರು ಸಮ್ಮೋಹಿತರಾಗುತ್ತಿರುವರು. ನಿನ್ನ ವ್ಯಾಪಾರವು ವಿಚಿತ್ರವೂ ಊಹಿಸಲಸಾಧ್ಯವೂ ಆಗಿರುವುದು. ಸರ್ವಾಪೇಕ್ಷಾರಹಿತನಾದರೂ, ಅದ್ವಿತೀಯನಾದ ನೀನು ಬಹುರೂಪವಾದ ಈ ಪ್ರಪಂಚವನ್ನು ನಿನ್ನ ಮಾಯೆಯಿಂದಲೇ ಸೃಷ್ಟಿಸಿರುವೆ, ಪಾಲಿಸುತ್ತಿರುವೆ ಮತ್ತು ಪ್ರಳಯದಲ್ಲಿ ಉಪಸಂಹಾರಮಾಡುವೆ. ಆದರೂ ಈ ಕಾರ್ಯಗಳಲ್ಲಿ ಸಂಗರಹಿತನಾಗಿರುವೆ.

೬. ಸಂಪೂರ್ಣಮನೋರಥನಾಗಿದ್ದರೂ ಸಕಲದೇವತೆಗಳಿಗೂ ಸೌಖ್ಯವನ್ನುಂಟುಮಾಡುವುದಕ್ಕೂ, ರಾಕ್ಷಸರಿಗೆ ದುಃಖವನ್ನು ಕೊಡುವುದಕ್ಕೂ, ನಿನ್ನ ಭಕ್ತರನ್ನು ಸಂರಕ್ಷಿಸುವುದಕ್ಕೂ, ದುಷ್ಟರನ್ನು ನಿಗ್ರಹಿಸುವುದಕ್ಕೂ, ನೀನು

ತಮೋಗುಣಂ ರಾಕ್ಷಸಬಂಧನಾಯ
ರಜೋಗುಣಂ ನಿರ್ಗುಣವಿಶ್ವಮೂರ್ತೇ ।
ದಿಷ್ಟ್ಯಾ ತ್ವದಂಘ್ರಿಃ ಪ್ರಣತಾಘನಾಶನಃ
ತೀರ್ಥಾಸ್ಪದಂ ಹೃದಿ ಧೃತಃ ಸುವಿಪಕ್ವಯೋಗ್ಯೈಃ ॥ ೭ ॥
ಉತ್ಸಿಕ್ತಭಕ್ತ್ಯುಪಹೃತಾಶಯಜೀವಭಾವಾಃ
ಪ್ರಾಪುರ್ಗತಿಂ ತವಪದಸ್ಮೃತಿಮಾತ್ರತೋ ಯೇ ।
ಭವಾಖ್ಯಕಾಲೋರಗಪಾಶಬಂಧಃ
ಪುನಃ ಪುನರ್ಜನ್ಮಜರಾದಿದುಃಖೈಃ ।
ಭ್ರಮಾಮಿ ಯೋನಿಷ್ವಹಮಾಖುಭಕ್ಷ್ಯವ
ತೃವೃದ್ಧತರ್ಷಸ್ತವ ಪಾದವಿಸ್ಮೃತೇಃ ॥ ೮ ॥
ನೂನಂ ನ ದತ್ತಂ ನ ಚ ತೇ ಕಥಾ ಶ್ರುತಾ
ನ ಸಾಧವೋ ಜಾತು ಮಯಾಽಪಿ ಸೇವಿತಾಃ

---

ಪ್ರಪಂಚದಲ್ಲಿ ಸಮಯಾನುಸಾರವಾಗಿ ಅನೇಕ ಅವತಾರಗಳನ್ನೆತ್ತಿ ಲೋಕ ವ್ಯಾಪಾರವನ್ನು ನಡೆಸುತ್ತಿರುವೆ.

೭. ರಾಕ್ಷಸರನ್ನು ಸಂಸಾರದಲ್ಲಿ ಬಂಧಿಸುವುದಕ್ಕಾಗಿಯೇ ತಮೋಗುಣವನ್ನೂ ರಜೋಗುಣವನ್ನೂ ಸೃಷ್ಟಿ ಮಾಡಿರುವೆ. ತ್ರಿಗುಣರಹಿತನಾದ ನಿನಗೆ ಬ್ರಹ್ಮಾಂಡವೇ ಸ್ವರೂಪವಾಗಿರುವುದು. ನಿನ್ನ ಅನುಗ್ರಹದಿಂದ ನಿನ್ನ ಪಾದಕಮಲವು ನಮಸ್ಕರಿಸುವ ಭಕ್ತರ ಸಕಲ ಪಾತಕಗಳನ್ನೂ ನಾಶಮಾಡುವುದು. ಲೋಕ ಪಾವನವೂ ತೀರ್ಥಾಸ್ಪದವೂ ಆದ ನಿನ್ನ ಪಾದವನ್ನು ನಿರಂತರಾಭ್ಯಾಸದಿಂದ ಪರಿಪಕ್ವವಾದ ಯೋಗದಲ್ಲಿ ನಿರತರಾದವರು ತಮ್ಮ ಹೃದಯಪದ್ಮಗಳಲ್ಲಿ ಧರಿಸಿಕೊಂಡಿರುವರು.

೮. ಕಾದಾಚಿತ್ಕವಾದ ಭಕ್ತಿಯಿಂದ ಉಪನೀತವಾದ ಬುದ್ಧಿಯುಳ್ಳವರಾದ ಜೀವಿಗಳೂ ಸಹ ನಿನ್ನ ಪಾದಗಳನ್ನು ಸ್ಮರಿಸಿದ ಮಾತ್ರದಿಂದಲೇ ಸಾಧನಾಂತರ ಗಳಿಲ್ಲದೆಯೇ ಉತ್ತಮಗತಿಯನ್ನು ಹೊಂದಿರುವರು. ಆದರೆ ನಾನು ಮಾತ್ರ ಸಂಸಾರವೆಂಬ ಕಾಳಸರ್ಪದ ಪಾಶದಿಂದ ಬಂಧಿಸಲ್ಪಟ್ಟು ಮತ್ತೆ ಮತ್ತೆ ಜನನ, ಮರಣ, ಜರಾದಿ ದುಃಖಗಳನ್ನನುಭವಿಸುತ್ತ ನಿನ್ನ ಪಾದಪದ್ಮಗಳ ಸ್ಮರಣೆಯನ್ನೇ ಮಾಡದೆ, ಅಡಿಗಡಿಗೂ ವೃದ್ಧಿಯನ್ನೇ ಹೊಂದುತ್ತಿರುವ ಆಶೆಗಳುಳ್ಳವನಾಗಿ ಇಲಿಯ ಕೈಯಲ್ಲಿ ಸಿಕ್ಕಿದ ಭಕ್ಷ್ಯಪದಾರ್ಥದಂತೆ ದಿಕ್ಕು ಕಾಣದೆ ಭ್ರಮಿಸು ತ್ತಿರುವೆನು.

೯. ನಿಜವಾಗಿಯೂ ನಾನು ದಾನಗಳನ್ನು ಹಿಂದೆ ಮಾಡಿದವನಲ್ಲ. ನಿನ್ನ ಸತ್ಕಥೆಗಳನ್ನೂ ಕೇಳಿದವನಲ್ಲ. ಯಾವಾಗಲೂ ನಿನ್ನ ಭಕ್ತರಾದ ಸಾಧುಪುರುಷರು

ತೇನಾರಿಭಿರ್ಧ್ವಸ್ತಪರಾರ್ಧ್ಯ ಲಕ್ಷ್ಮೀ
ರ್ವನಂಪ್ರವಿಷ್ಟಃ ಸ್ವಗುರು ಹ್ಯಘಂ ಸ್ಮರನ್ ॥ ೯ ॥
ಸ್ಮೃತೌ ಚ ತೌ ಮಾಂ ಸಮುಪೇತ್ಯ ದುಃಖಾತ್
ಸಂಬೋಧಯಾಂಚಕ್ರತುರಾರ್ತಬಂಧೂ ।
ವೈಶಾಖಧರ್ಮೈಃ ಶೃತಿಚೋದಿತೈಃ ಶುಭೈಃ
ಸ್ವರ್ಗಾಪವರ್ಗಾದಿಪುಮರ್ಥಹೇತುಭಿಃ ॥ ೧೦ ॥
ತಬ್ಬೋಧಿತೋಽಹಂ ಕೃತವಾನ್ಸಮಸ್ತಾನ್
ಶುಭಾವಹಾನ್ಮಾಧವಮಾಸಧರ್ಮಾನ್ ।
ತಸ್ಮಾದಭೂನ್ಮೇ ಪರಮಃ ಪ್ರಸಾದಃ
ತೇನಾಖಿಲಾಃ ಸಂಪದ ಊರ್ಜಿತಾ ಇಮಾಃ । ॥ ೧೧ ॥
ನಾಗ್ನಿರ್ನ ಸೂರ್ಯೋ ನ ಚ ಚಂದ್ರತಾರಕಾ ನ
ಭೂರ್ಜಲಂ ಖಂ ಶ್ವಸನೋಽಥ ವಾಙ್ಮನಃ ।

ನನ್ನಿಂದ ಸೇವೆಯನ್ನು ಸ್ವೀಕರಿಸಿಲ್ಲವು. ಆದುದರಿಂದಲೇ ನನ್ನ ಅಪರಿಮಿತವಾದ ಐಶ್ವರ್ಯವೂ ಶತ್ರುಗಳ ಆಕ್ರಮಣದಿಂದ ನಾಶವನ್ನು ಹೊಂದಿತು. ನಾನು ಗುರುತರಗಳಾದ ನನ್ನ ಪಾಪಕೃತ್ಯಗಳನ್ನೂ ಸ್ಮರಿಸಿಕೊಳ್ಳುತ್ತ ಅರಣ್ಯವನ್ನೂ ಪ್ರವೇಶಮಾಡಿದೆನು.

೧೦. ಸ್ಮರಿಸಿದ ಕ್ಷಣದಲ್ಲಿಯೇ ಆರ್ತತ್ರಾಣಪರಾಯಣರಾದ ಯಾಜೋಪ ಯಾಜಕರೀರ್ವರೂ ನನ್ನ ಸಮೀಪಕ್ಕೆ ಪ್ರಾಪ್ತರಾಗಿ ದುಃಖಸಂತತಿಗೆ ಕಾರಣವನ್ನು ತಿಳಿಸಿ, ಶ್ರುತಿಪ್ರತಿಪಾದಿತಗಳೂ, ಪವಿತ್ರಗಳೂ, ಸ್ವರ್ಗಮೋಕ್ಷಗಳೇ ಮೊದಲಾದ ಸಕಲ ಪುರುಷಾರ್ಥಗಳ ಪ್ರಾಪ್ತಿಗೆ ಕಾರಣಗಳೂ ಆದ ವೈಶಾಖಮಾಸದ ಧರ್ಮಗಳನ್ನು ಭೋಧಿಸಿ ನನಗೆ ಜ್ಞಾನೋಪದೇಶವನ್ನು ಮಾಡಿದರು.

೧೧. ಅವರ ಬೋಧೆಗಳನ್ನು ಕೇಳಿದ ನಾನು ಮಂಗಳಸಂಪಾದಕಗಳಾದ ಸಮಸ್ತ ವೈಶಾಖಮಾಸ ಧರ್ಮಗಳನ್ನೂ ಶಕ್ತ್ಯನುಸಾರವಾಗಿ ಆಚರಿಸಿದೆನು. ಆದುದರಿಂದ ನನಗೆ ನಿನ್ನ ಪರಮಾನುಗ್ರಹವುಂಟಾಯಿತು. ಮತ್ತು ಈ ನನ್ನ ಸಕಲೈಶ್ವರ್ಯಗಳೂ ಮತ್ತೆ ಕೈಗೂಡಿ ದಿನದಿನಕ್ಕೂ ಅಭಿವೃದ್ಧಿಯನ್ನು ಹೊಂದುತ್ತಲಿರುವುವು.

೧೨. ಅಗ್ನಿಯಾಗಲಿ, ಸೂರ್ಯನಾಗಲಿ, ಚಂದ್ರನಾಗಲಿ, ನಕ್ಷತ್ರಗಳಾಗಲಿ, ಭೂಮಿಯಾಗಲಿ, ಜಲವಾಗಲಿ, ಆಕಾಶವಾಗಲಿ, ವಾಯುವಾಗಲಿ, ವಾಗಭಿಮಾನಿ ದೇವತೆಯಾಗಲಿ, ಮನಸ್ಸಾಗಲಿ ಬಹುಕಾಲದವರೆಗೂ ಉಪಾಸನೆಮಾಡಿವರೂ ಮನುಷ್ಯನ ಪಾತಕಗಳನ್ನು ಕಳೆಯುವುದಿಲ್ಲ. ಆದರೆ ಜ್ಞಾನಿಗಳಾದ ಮಹಾತ್ಮರು

ಉಪಾಸತಾ ಸ್ತೇಽಪಿ ಹರಂತ್ಯಘಂ ಚಿರಾತ್
ವಿಪಶ್ಚಿತೋ ಘ್ನಂತಿ ಮುಹೂರ್ತಸೇವಯಾ ॥ ೧೨ ॥
ಯಾನ್ಮನ್ಯಸೇ ತ್ವಂ ಭವಿನೋಽಪಿ ಭೂರಿಶಃ
ತ್ಯಕ್ತೈಷಣಾಂಸ್ತ್ವತ್ಪದನ್ಯಸ್ತಚಿತ್ತಾನ್ ।
ನಮಃ ಸ್ವತಂತ್ರಾಯ ವಿಚಿತ್ರಕರ್ಮಣೇ
ನಮಃ ಪರಸ್ಮೈ ಸದನುಗ್ರಹಾಯ ॥ ೧೩ ॥
ತ್ವನ್ಮಾಯಯಾ ಮೋಹಿತೋಽಹಂ ಗುಣೇಷು ।
ದಾರಾರ್ಥರೂಪೇಷು ಭ್ರಮಾಮ್ಯನರ್ಥದೃಕ್ ॥ ೧೪ ॥
ತ್ವತ್ಪಾದಪದ್ಮೇ ಸತಿ ಮೂಲನಾಶನೇ
ಸಮಸ್ತಪಾಪಾಪಹರಂ ಸುನಿರ್ಮಲಂ ।
ಸುಖೇಚ್ಛಯಾನರ್ಥನಿದಾನಭೂತೈಃ
ಸುತಾತ್ಮದಾರೈಃ ಮಮತಾಭಿಯುಕ್ತಃ ॥ ೧೫ ॥
ನ ಕ್ವಾಪಿ ನಿದ್ರಾಂ ಲಭತೇ ನ ಶರ್ಮ
ಪ್ರವೃದ್ಧತರ್ಷಃ ಪುನರೇವ ತಸ್ಮಿನ್ ।
ಲಬ್ಧ್ವಾ ದುರಾಪಂ ನರದೇವಜನ್ಮ
ತ್ವಂ ಯತ್ನತಃ ಸರ್ವಪುಮರ್ಥ ಹೇತುಃ ॥ ೧೬ ॥

---

ಮುಹೂರ್ತಕಾಲದ ಸೇವೆಯಿಂದಲೇ ಸಮಸ್ತ ಪಾಪಗಳನ್ನೂ ನಾಶಮಾಡಲು ಶಕ್ತರಾಗಿರುವರು.

೧೩. ಯಾರು ಸಂಸಾರಿಗಳಾಗಿದ್ದರೂ ಸಂಸಾರದಲ್ಲಿ ವಿಶೇಷವಾದ ಆಶಾಭಿಮಾನಗಳನ್ನು ತ್ಯಜಿಸಿ ನಿನ್ನ ಪಾದಗಳಲ್ಲಿಯೇ ಮನಸ್ಸನ್ನು ಏಕಾಗ್ರಗೊಳಿಸಿರುವರೊ, ಅವರನ್ನೇ ನೀನು ಆದರದಿಂದ ಕಾಣುವೆ. ಅಂತಹ ಸರ್ವತಂತ್ರ ಸ್ವತಂತ್ರನೂ ವಿಚಿತ್ರವ್ಯಾಪಾರವುಳ್ಳವನೂ, ಪರಾತ್ಪರನೂ, ಭಕ್ತಾನುಗ್ರಹ ಪರನೂ ಆದ ನಿನಗೆ ನಮಸ್ಕರಿಸುವೆನು.

೧೪–೧೫. ನಿನ್ನ ಮಾಯೆಯಿಂದ ಭ್ರಾಂತನಾಗಿ, ಪತ್ನೀವಿತ್ತಾದಿ ರೂಪಗಳಾದ ಬಂಧನದಲ್ಲಿ ಸಿಲುಕಿ, ಎಲ್ಲೆಲ್ಲಿಯೂ ಅನರ್ಥಗಳನ್ನೇ ಕಾಣುತ್ತ, ದಿಕ್ಕು ತೋಚದಿರುವೆನು. ಸಂಸಾರಕ್ಕೆ ಮೂಲವಾದ ಅವಿದ್ಯೆಯನ್ನು ನಾಶಗೊಳಿಸುವುದೂ, ಸಕಲ ಪಾತಕಗಳನ್ನು ನಿರ್ಮೂಲ ಮಾಡುವುದೂ, ಪರಮಪಾವನವೂ ಆದ ನಿನ್ನ ಪಾದಕಮಲವು ಸುಲಭ್ಯವಾಗಿದ್ದರೂ ನಾನು ಸುಖಗಳನ್ನಪೇಕ್ಷಿಸುವವನಾಗಿ ಸಮಸ್ತ ಅನರ್ಥಗಳಿಗೂ ನಿದಾನಗಳಾಗಿರುವ ಪುತ್ರ ದೇಹ ಪತ್ನಿಗಳಲ್ಲಿ ಅಹಂಕಾರ ಮಮಕಾರ ರೂಪವಾದ ಅಭಿಮಾನದಿಂದ ಕೂಡಿದವನಾಗಿರುವೆನು.

೧೬–೧೭. ಸಂಸಾರದಲ್ಲಿ ಆನುಷಕ್ತನಾದ ಪುರುಷನು ಪುನಃ ಪುನಃ

ಪದಾರವಿಂದಂ ನ ಭಜಾಮಿ ದೇವ
ಸಂಮೂಢಚೇತಾ ವಿಷಯೇಷು ಲಾಲಸಃ ।
ಕರೋಮಿ ಕರ್ಮಾಣಿ ಸುನಿಶ್ಚಿತಃ ಸ
ನ್ಪೃವೃದ್ಧತರ್ಷಸ್ತದಪೇಕ್ಷಯಾ ದದತ್ ॥ ೧೭ ॥
ಪುನಶ್ಚ ಭೂಯಾಮಹಮದ್ಯ ಭೂಯಾಂ
ಇತ್ಯೇವ ಚಿಂತಾಶತಲೋಲಮಾನಸಃ ।
ತದೇವ ಜೀವಸ್ಯ ಭವೇತ್ಕೃಪಾ ವಿಭೋ
ದುರಂತಶಕ್ತೇಸ್ತವ ವಿಶ್ವಮೂರ್ತೇ ॥ ೧೮ ॥
ಸಮಾಗಮಃ ಸ್ಯಾನ್ಮಹತಾಂ ಹಿ ಪುಂಸಾಂ
ಭವಾಂಬುಧಿರ್ಯೇನಹಿ ಗೋಷ್ಪದಾಯತೇ ।
ಸತ್ಯಂ ಗನೋ ದೇವ ಯದೈವ ಭೂಯಾತ್
ತರ್ಹೀಶ ದೇವೇ ತ್ವಯಿ ಜಾಯತೇ ಮತಿಃ ॥ ೧೯ ॥

ಅದರಲ್ಲಿಯೇ ತೃಷ್ಣೆಯನ್ನು ದಿನೇ ದಿನೇ ಬೆಳಸಿಕೊಂಡು ಸುಖನಿದ್ರೆಯನ್ನಾಗಲಿ ಮನಶ್ಶಾಂತಿಯನ್ನಾಗಲಿ ಎಂದಿಗೂ ಪಡೆಯಲಾರೆನು. ದೇವೋತ್ತಮನೆ! ಸಕಲ ಪುರುಷಾರ್ಥಗಳನ್ನೂ ಈಡೇರಿಸಿಕೊಡುವ ನೀನು ಸುಮುಖನಾಗಿರಲು, ಅತ್ಯಂತ ದುರ್ಲಭವಾದ ಮಹಾರಾಜನ ಜನ್ಮವನ್ನು ಬಹಳ ಪ್ರಯತ್ನದಿಂದ ಸಂಪಾದಿಸಿದ್ದರೂ ನಾನು ಮೌಢ್ಯದಿಂದ ಕೂಡಿದ ಬುದ್ಧಿಯುಳ್ಳವನಾಗಿ ವಿಷಯಭೋಗಗಳಲ್ಲಿಯೇ ಲಾಲಸತೆಯಿಂದ ನಿನ್ನ ಪಾದಕಮಲಗಳನ್ನೆಂದೂ ಭಜಿಸಲಿಲ್ಲವು. ಶಾಸ್ತ್ರೋಕ್ತನಿಷ್ಠೆಯಿಂದಲೇ ಸಕಲ ಕರ್ಮಗಳನ್ನೂ ಮಾಡುತ್ತಿರುವೆನೆಂಬುದು ನಿಜವೆ. ಆದರೆ ಅವುಗಳಿಂದ ಆಶೆಯು ಅಭಿವೃದ್ಧಿಯನ್ನೇ ಹೊಂದುತ್ತ ಫಲಾಪೇಕ್ಷೆಯಿಂದಲೇ ದಾನಾದಿ ಸತ್ಕ್ರಿಯೆಗಳನ್ನು ಮಾಡುತ್ತಿರುವೆನು.

೧೮. "ಇನ್ನೂ ಹೆಚ್ಚಾಗಿ ಐಶ್ವರ್ಯವಂತನಾಗಬೇಕು; ಇಂದು ನಾನು ದೊಡ್ಡವನಾಗಬೇಕು" ಮುಂತಾದ ನೂರಾರು ಯೋಚನೆಗಳಿಂದ ತೂಗಾಡುತ್ತಿರುವ ಮನಸ್ಸುಳ್ಳವನಾಗಿರುವೆನು. ಸರ್ವಸ್ವಾಮಿಯೆ! ಬ್ರಹ್ಮಾಂಡವೇ ಶರೀರವಾಗಿ ಉಳ್ಳವನೆ! ಅನಂತ ಪರಾಕ್ರಮಿಯಾದ ನಿನ್ನ ಕೃಪಾಕಟಾಕ್ಷವು ಹೀಗೆ ಸಂಕಟಗೊಳ್ಳುತ್ತಿರುವ ಜೀವನ ಮೇಲೆಯೇ ಬೀಳುತ್ತಿರುವುದಲ್ಲವೆ.

೧೯. ನಿನ್ನ ಅನುಗ್ರಹವುಂಟಾದಾಗಲೇ ಮಹಾತ್ಮರಾದ ಸಾಧುಪುರುಷರ ಸಮಾಗಮವು ಲಭಿಸುವುದು. ಆ ಸಜ್ಜನಸಂಗದಿಂದ ಭಕ್ತನಿಗೆ ಸಂಸಾರವೆಂಬ ಅಗಾಧಸಮುದ್ರವೂ ಕೂಡ ಗೋಷ್ಪದೋದಕದಂತೆ ಸುಲಭೋತ್ತಾರ್ಯವಾಗುವುದು. ದೇವಾಧಿದೇವನೆ! ಯಾವಾಗ ಸತ್ಪುರುಷರ ಸಹವಾಸವುಂಟಾ

ಸಮಸ್ತರಾಜ್ಯಾಪಗಮಂ ಹಿ ಮನ್ಯೇ
ಹ್ಯನುಗ್ರಹಂ ತೇ ಮಯಿ ಜಾತಮಂಜಸಾ ।
ಯದರ್ಥಂ ತೇ ಬ್ರಹ್ಮಸುರಾಸುರಾದ್ಯೈಃ
ನಿವೃತ್ತತರ್ಷೈರಪಿ ಹಂಸಯೂಥೈಃ ॥ ೨೦ ॥
ಇತಃ ಸ್ಮರಾಮ್ಯಚ್ಯುತಮೇವ ಸಾದರಂ
ಭವಾಪಹಂ ಪಾದಸರೋರುಹಂ ವಿಭೋ ।
ಅಕಿಂಚನಪ್ರಾರ್ಥ್ಯಮಮಂದಭಾಗ್ಯದಂ
ನ ಕಾಮಯೇಽನ್ಯತ್ತವ ಪಾದಪದ್ಮಾತ್ ॥ ೨೧ ॥
ಅತೋ ನ ರಾಜ್ಯಂ ನ ಸುತಾದಿಕೋಶಂ
ದೇಹೇ ನ ಶಶ್ವತ್ಪತತಾ ರಜೋಭುವಾ ।
ಭಜಾಮಿ ನಿತ್ಯಂ ತದುಪಾಸಿತವ್ಯಂ
ಪಾದಾರವಿಂದಂ ಮುನಿಭಿರ್ವಿಚಿಂತ್ಯಂ ॥ ೨೨ ॥

ಗುವುದೊ, ಆಗಲೇ ಲೋಕೇಶ್ವರನಾದ ನಿನ್ನಲ್ಲಿ ಭಕ್ತಿಯನ್ನು ಮಾಡಬೇಕೆಂಬ ಬುದ್ಧಿಯು ಹುಟ್ಟುವುದು.

೨೦. ನನ್ನ ಸಕಲ ರಾಜ್ಯಾಧಿಕಾರವೂ ನಿನಗೆ ನನ್ನಲ್ಲಿ ಉಂಟಾದ ಶೀಘ್ರಾನುಗ್ರಹದ ಫಲವಾಗಿಯೇ ನಾಶವನ್ನು ಹೊಂದಿತೆಂದು ತಿಳಿಯುವೆನು. ಪುರಾಣ ಪುರುಷನೆ! ಬ್ರಹ್ಮದೇವನು, ದೇವತೆಗಳು, ರಾಕ್ಷಸರುಗಳೇ ಮೊದಲಾದ ಪರಮ ಹಂಸರ ಗುಂಪುಗಳೂ ಸಹ ಸಕಲ ಕಾಮವರ್ಜಿತರಾದುದರಿಂದಲೇ ನಿನ್ನ ಅನುಗ್ರಹಕ್ಕೆ ಪಾತ್ರರಾದರಲ್ಲವೆ.

೨೧. ಸ್ವಾಮಿಯೆ! ಇಂದು ಮೊದಲು ನಾಶರಹಿತನಾದ ನಿನ್ನನ್ನೇ ಸ್ಮರಿಸುವೆನು. ನಿನ್ನ ಪಾದಕಮಲವು ಸಂಸಾರವನ್ನು ನಿರ್ಮೂಲಗೊಳಿಸುವುದೂ, ಸರ್ವಸ್ವವನ್ನೂ ತ್ಯಾಗಮಾಡಿದ ಸನ್ಯಾಸಿಗಳಿಂದ ಪ್ರಾರ್ಥಿತವಾದುದೂ, ಅಪರಿಮಿತವಾದ ಭಾಗ್ಯವನ್ನು ಕೊಡುವುದೂ ಆಗಿರುವುದು. ಅಂತಹ ನಿನ್ನ ಪಾದಕಮಲದ ಸ್ಮರಣೆಯೊಂದನ್ನು ಬಿಟ್ಟು ಮತ್ತೆ ಯಾವುದನ್ನೂ ನಿನ್ನಲ್ಲಿ ಬೇಡಲಾರೆನು.

೨೨. ಆದುದರಿಂದ ಕ್ಷಣಕ್ಷಣಕ್ಕೂ ಕ್ಷೀಣವಾಗುತ್ತ ರಜೋಗುಣದಿಂದ ಹುಟ್ಟಿರುವ ಈ ಶರೀರದಿಂದ ರಾಜ್ಯವನ್ನಾಗಲಿ, ಪತ್ನೀಪುತ್ರಾದಿಗಳನ್ನಾಗಲಿ, ಕೋಶವನ್ನಾಗಲಿ ಅನುಭವಿಸುವುದಿಲ್ಲ. ಸಕಲ ಸಾಧುಗಳ ಉಪಾಸನೆಗೆ ಯೋಗ್ಯವಾದುದೂ, ಮಹಾಮುನಿಗಳ ತತ್ತ್ವಾನ್ವೇಷಣೆಗಳಿಗೆ ವಿಷಯವಾದುದೂ ಎನಿಸಿದ ನಿನ್ನ ಪಾದಪದ್ಮವನ್ನು ಮಾತ್ರ ನಿರಂತರದಲ್ಲಿಯೂ ಭಜಿಸುತ್ತಿರುವೆನು.

ಪ್ರಸೀದ ದೇವೇಶ ಜಗನ್ನಿವಾಸ
ಸ್ಮೃತಿರ್ಯಥಾ ಸ್ಯಾತ್ತವ ಪಾದಪದ್ಮೇ ।
ಸಕ್ತಿಃ ಸದಾ ಗಚ್ಛತು ದಾರಕೋಶ
ಪುತ್ರಾತ್ಮಚಿಹ್ನೇಷು ಗಣೇಷು ಮೇ ಪ್ರಭೋ ॥ ೨೩ ॥
ಭೂಯಾನ್ಮನಃ ಕೃಷ್ಣಪದಾರವಿಂದಯೋ
ರ್ವಚಾಂಸಿ ತೇ ದಿವ್ಯಕಥಾನುವರ್ಣನೇ ।
ನೇತ್ರೇ ಮಮೇಮೇ ತವ ವಿಗ್ರಹೇಕ್ಷಣೇ
ಶ್ರೋತ್ರೇ ಕಥಾಯಾಂ ರಸನಾ ತ್ವದರ್ಪಿತೇ ॥ ೨೪ ॥
ಘ್ರಾಣಂ ಚ ತ್ವತ್ಪಾದಸರೋಜಸೌರಭೇ
ತದ್ಭಕ್ತಗಂಧಾದಿವಿಲೇಪನೇ ಸಕೃತ್ ।
ಸ್ಯಾತಾಂ ಚ ಹಸ್ತೌ ತವ ಮಂದಿರೇ ವಿಭೋ
ಸಮಾರ್ಜ್ಜನಾದೌ ಮಮ ನಿತ್ಯದೈವ ॥ ೨೫ ॥
ಪಾದೌ ವಿಭೋಃ ಕ್ಷೇತ್ರಕಥಾಽನುಸರ್ಪಣೇ
ಮೂರ್ಧಾ ಚ ಮೇ ಸ್ಯಾತ್ತವ ವಂದನೇಽನಿಶಂ ।
ಕಾಮಾಶ್ಚ ಮೇ ಸ್ಯಾತ್ತವ ಸತ್ಕಥಾಯಾಂ
ಬುದ್ಧಿಶ್ಚ ಮೇ ಸ್ಯಾತ್ತವ ಚಿಂತನೇಽನಿಶಂ ॥ ೨೬ ॥

೨೩. ದೇವಾಧಿದೇವನೆ! ಜಗತ್ತಿಗೆ ಸ್ಥಿತಿಹೇತುವಾಗಿರುವ ಸ್ವಾಮಿಯೆ! ನಿನ್ನ ಪಾದಾರವಿಂದದಲ್ಲಿ ಅವ್ಯಾಹತವಾದ ಸ್ಮರಣೆಯುಂಟಾಗುವಂತೆ ನನ್ನನ್ನು ಅನುಗ್ರಹಿಸು. ಹೆಂಡತಿ, ಧನ, ಮಕ್ಕಳು, ಶರೀರಗಳಿಂದ ಉಪಲಕ್ಷಿತಗಳಾದ ಈ ಸಕಲ ಪರಿವಾರದಲ್ಲಿಯೂ ನಾನು ನನ್ನದು ಎಂಬ ಅಭಿಮಾನವು ಎಂದಿಗೂ ಉಂಟಾಗದಿರುವಂತೆ ಮಾಡಿ ಪ್ರಸನ್ನನಾಗು.

೨೪. ನನ್ನ ಮನಸ್ಸು ಶ್ರೀಕೃಷ್ಣನ ಪಾದಕಮಲಗಳಲ್ಲಿಯೇ ಏಕಾಗ್ರವಾಗಿ ನಿಲ್ಲಲಿ. ನಿನ್ನ ದಿವ್ಯಕಥೆಗಳನ್ನು ಅನುವಾದ ಮಾಡುವುದರಲ್ಲಿಯೇ ನನ್ನ ಮಾತುಗಳು ಪ್ರಕಾಶಿಸಲಿ. ಈ ನನ್ನ ಎರಡು ಕಣ್ಣುಗಳೂ ನಿನ್ನ ಸುಂದರ ರೂಪವನ್ನೇ ನೋಡುತ್ತಿರಲಿ. ಕಿವಿಗಳು ಸತ್ಕಥೆಗಳನ್ನು ಕೇಳುವುದರಲ್ಲಿಯೇ ಆಸಕ್ತಿಯನ್ನು ಹೊಂದಿರಲಿ. ನಾಲಿಗೆಯು ನಿನಗೆ ಅರ್ಪಿಸಿದ ನೈವೇದ್ಯವನ್ನೇ ಸವಿಯುವಂತೆ ಅನುಗ್ರಹಿಸು.

೨೫–೨೬. ಘ್ರಾಣೇಂದ್ರಿಯವು ನಿನ್ನ ಪಾದಕಮಲಗಳ ಸೌರಭವನ್ನೇ ಅಪೇಕ್ಷಿಸಲಿ. ಎಲೈ ನಾಥನೆ! ಈ ನನ್ನ ಕೈಗಳೆರಡೂ ಒಮ್ಮೊಮ್ಮೆ ನಿನ್ನ ಭಕ್ತರಿಗೆ ಗಂಧಾದಿ ವಾಸನಾದ್ರವ್ಯಗಳನ್ನು ಲೇಪಿಸುವುದರಲ್ಲಿಯೂ, ನಿರಂತರವೂ ನಿನ್ನ

ದಿನಾನಿ ಮೇ ಸ್ಯುಸ್ತ್ವವ ಸತ್ಕಥೋದಯೈಃ
ಉದ್ಗೀಯಮಾನೈರ್ಮುನಿಭಿರ್ಗೃಹಾಗತೈಃ ।
ಹೀನಃ ಪ್ರಸಂಗಸ್ತ್ವವ ಮೇ ನ ಭೂಯಾತ್
ಕ್ಷಣಂ ನಿಮೇಷಾರ್ಧಮಥಾಽಪಿ ವಿಷ್ಣೋ ॥ ೨೭ ॥
ನ ಪಾರಮೇಷ್ಠ್ಯಂ ನ ಚ ಸಾರ್ವಭೌಮಂ
ನ ಚಾಪವರ್ಗಂ ಸ್ಪೃಹಯಾಮಿ ವಿಷ್ಣೋ ।
ತ್ವತ್ಪಾದಸೇವಾಂ ಚ ಸದೈವ ಕಾಮಯೇ
ಪ್ರಾರ್ಥ್ಯಾಂ ಶ್ರಿಯಾ ಬ್ರಹ್ಮಭವಾದಿಭಿಃ ಸುರೈಃ ॥ ೨೮ ॥
ಇತಿ ರಾಜ್ಞಾ ಸ್ತುತೋ ವಿಷ್ಣುಃ ಪ್ರಸನ್ನಃ ಕಮಲೇಕ್ಷಣಃ ।
ಮೇಘಗಂಭೀರಯಾ ವಾಚಾ ತಮುವಾಚ ಕ್ಷಿತೀಶ್ವರಂ ॥ ೨೯ ॥

ಮಂದಿರಗಳಲ್ಲಿ ಸಾರಣೆ, ಕಾರಣೆ, ಸಮ್ಮಾರ್ಜನಾದಿ ಸೇವೆಗಳನ್ನು ಸಲ್ಲಿಸುವುದರಲ್ಲಿಯೂ ಅನುರಕ್ತಗಳಾಗಿರಲಿ. ನನ್ನ ಕಾಲುಗಳೆರಡೂ ಲೋಕೇಶ್ವರನಾದ ನಿನ್ನ ಕ್ಷೇತ್ರಗಳಿಗೆ ತಿರುಗುವುದರಲ್ಲಿಯೇ ನಿರತಗಳಾಗಿರಲಿ. ನನ್ನ ತಲೆಯು ಯಾವಾಗಲೂ ನಿನ್ನನ್ನೇ ನಮಸ್ಕರಿಸುತ್ತಿರಲಿ. ನನಗೆ ನಿನ್ನ ಸತ್ಕಥಾಶ್ರವಣದಲ್ಲಿಯೇ ಅಭಿಲಾಷೆಯುಂಟಾಗಲಿ. ಬುದ್ಧಿಯು ನಿರಂತರವೂ ನಿನ್ನ ಮಾಹಾತ್ಮ್ಯಾದಿ ಸದ್ಗುಣಗಳನ್ನೇ ಕುರಿತು ಚಿಂತಿಸುತ್ತಿರಲಿ.

೨೭. ಸರ್ವವ್ಯಾಪಿಯಾದ ಸ್ವಾಮಿಯೆ! ಮನೆಗೆ ಬಂದ ಮಹಾಮುನಿಗಳು ಉಚ್ಚಸ್ವರದಿಂದ ಗಾನಮಾಡುತ್ತಿರುವ ನಿನ್ನ ಸಚ್ಚರಿತ್ರೆಗಳನ್ನು ಕೇಳುವುದರಲ್ಲಿಯೇ ನನ್ನ ದಿನಗಳೆಲ್ಲವೂ ಕಳೆದುಹೋಗಲಿ. ನನ್ನ ಆಯುಃಪ್ರಮಾಣದ ಒಂದು ಕ್ಷಣವಾಗಲಿ ನಿಮಿಷಾರ್ಧವಾಗಲಿ ನಿನ್ನ ಕಥಾ ಪ್ರಸಂಗದಿಂದ ಯಾವಾಗಲೂ ರಹಿತವಾಗದಿರಲಿ.

೨೮. ಮಹಾವಿಷ್ಣುವೆ! ನಾನು ಬ್ರಹ್ಮಪದವಿಯನ್ನಾಗಲಿ, ಭೂಮಂಡಲದ ಏಕಚಕ್ರಾಧಿಪತ್ಯವನ್ನಾಗಲಿ, ಮೋಕ್ಷವನ್ನಾಗಲಿ ಅಪೇಕ್ಷಿಸುವುದಿಲ್ಲ. ಆದರೆ ಮಹಾಲಕ್ಷ್ಮಿಯು, ಬ್ರಹ್ಮದೇವನು, ಮಹೇಶ್ವರನೇ ಮೊದಲಾದ ದೇವತಾಗಣಗಳೂ ಪ್ರಾರ್ಥಿಸುತ್ತಿರುವ ನಿನ್ನ ಪಾದಕಮಲಗಳ ಸೇವೆಯೊಂದನ್ನು ಮಾತ್ರ ಸರ್ವಕಾಲದಲ್ಲಿಯೂ ಅನುಗ್ರಹಿಸು. ಅದನ್ನೇ ನಾನು ಅಪೇಕ್ಷಿಸುತ್ತಿರುವೆನು.

೨೯. ಇಂತೆಂದು ಭೂಪಾಲಕನಾದ ಪುರುಯಶಮಹಾರಾಜನು ಸ್ತೋತ್ರವನ್ನು ಮಾಡಲು ಕಮಲನೇತ್ರನಾದ ಮಹಾವಿಷ್ಣುವು ಪ್ರಸನ್ನನಾಗಿ ಮೇಘಘರ್ಜನೆಯಂತಿರುವ ಗಂಭೀರವಾದ ಧ್ವನಿಯಿಂದ ಆತನಿಗೆ ಹೇಳತೊಡಗಿದನು.

ಶ್ರೀ ಭಗವಾನುವಾಚ :—

ಜಾನೇ ತ್ವಾಂ ದಾಸವರ್ಯಂ ಮೇ ನಿಷ್ಕಾಮಕಮಕಲ್ಮಷಂ ।
ಅಥಾಽಪಿ ತೇ ಪ್ರದಾಸ್ಯಾಮಿ ವರಂ ದೈವತದುರ್ಲಭಂ ॥ ೩೦ ॥
ಆಯುಷ್ಯಂ ಚಾಯುತಂ ದಿವ್ಯಂ ಸಂಪದಕ್ಷ ನರೇಶ್ವರ ।
ಭಕ್ತಿರ್ಮಯಿ ದೃಢಾ ಭೂಯಾದಂತೇ ಸಾಯುಜ್ಯಮೇವ ಚ ॥ ೩೧ ॥
ತ್ವಯಾ ಕೃತೇನ ಸ್ತೋತ್ರೇಣ ಮಾಂ ಸ್ತುವಂತಿ ಚ ಯೇ ಭುವಿ ।
ತೇಷಾಂ ತುಷ್ಟಃ ಪ್ರದಾಸ್ಯಾಮಿ ಭುಕ್ತಿಂ ಮುಕ್ತಿಂ ನ ಸಂಶಯಃ ॥ ೩೨ ॥
ತೃತೀಯೈಷಾಽಕ್ಷಯಾನಾಮ ಭುವಿ ಖ್ಯಾತಾ ಭವಿಷ್ಯತಿ ।
ಯಸ್ಯಾಂ ತವ ಪ್ರಸನ್ನೋಽಹಂ ಭುಕ್ತಿಮುಕ್ತಿಫಲಪ್ರದಃ ॥ ೩೩ ॥
ಯೇ ಕುರ್ವಂತಿ ನರಾ ಮೂಢಾಃ ಸ್ನಾನದಾನಾದಿಕಾಃ ಕ್ರಿಯಾಃ ।
ವ್ಯಾಜೇನಾಽಪಿ ಸ್ವಭಾವಾದ್ವಾ ಯಾಂತಿ ಮತ್ಪದಮವ್ಯಯಂ ॥ ೩೪ ॥
ಯೇಚಾಽಕ್ಷಯತೃತೀಯಾಯಾಂ ಪಿತೄನುದ್ದಿಶ್ಯ ಮಾನವಾಃ ।
ಶ್ರಾದ್ಧಂ ಕುರ್ವಂತಿ ತೇಷಾಂ ವೈ ತದಾನಂತ್ಯಾಯ ಕಲ್ಪತೇ ॥ ೩೫ ॥

---

೩೦–೩೧. ಭಗವಂತನು ಹೇಳುತ್ತಾನೆ:—ನೀನು ನನ್ನ ದಾಸರಲ್ಲಿ ಉತ್ತಮನೂ, ನಿರಪೇಕ್ಷನೂ, ಪರಿಶುದ್ಧನೂ ಆಗಿರುವೆಯೆಂಬುದನ್ನು ನಾನು ತಿಳಿದಿರುವೆನು. ಆದರೂ ದೇವತೆಗಳಿಗೂ ದುರ್ಲಭವಾದಂತಹ ವರವೊಂದನ್ನು ನಿನಗೆ ಕೊಡುತ್ತಿರುವೆನು. ಮಹಾರಾಜನೆ! ನಿನಗೆ ಅಸಾಧಾರಣವಾದ ಹತ್ತುಸಾವಿರ ವರ್ಷಗಳ ಆಯುಷ್ಯವನ್ನು ಕೊಟ್ಟಿರುವೆನು. ನಿನ್ನ ಐಶ್ವರ್ಯವು ದಿನದಿನಕ್ಕೂ ಬೆಳೆಯುತ್ತಿರುವುದು. ನನ್ನಲ್ಲಿ ನಿನಗೆ ದೃಢವಾದ ಭಕ್ತಿಯುಂಟಾಗಿ ಕೊನೆಯಲ್ಲಿ ಸಾಯುಜ್ಯರೂಪವಾದ ಮೋಕ್ಷವು ಪ್ರಾಪ್ತವಾಗುವುದು.

೩೨. ನೀನು ಮಾಡಿದ ಈ ಸ್ತೋತ್ರದಿಂದ ಭೂಲೋಕದಲ್ಲಿ ಯಾವ ಮಾನವರು ನನ್ನನ್ನು ಸ್ತುತಿಸುವರೊ, ಅವರಲ್ಲಿ ನಾನು ಸಂತೋಷಗೊಂಡು ಭಕ್ತಿಯನ್ನೂ ಮೋಕ್ಷವನ್ನೂ ಕೊಡುವೆನೆಂಬುದರಲ್ಲಿ ಸಂದೇಹವಿಲ್ಲ.

೩೩. ನಾನು ನಿನಗೆ ಪ್ರಸನ್ನನಾಗಿ ಐಹಿಕಾಮುಷ್ಮಿಕ ಫಲಗಳೆಲ್ಲವನ್ನೂ ಕೊಟ್ಟ ಕಾರಣದಿಂದ ಅಕ್ಷಯತೃತೀಯೆಯೆಂಬ ಹೆಸರಿನಿಂದ ಈ ಶುಭದಿವಸವು ಭೂಲೋಕದಲ್ಲಿ ಪ್ರಖ್ಯಾತಿಯನ್ನು ಪಡೆಯುವುದು.

೩೪. ಮೂಢರಾದ ಯಾವ ಮಾನವರೂ ಕೂಡ ಈ ದಿವಸದಲ್ಲಿ ಕಾರಣಾಂತರದಿಂದಾಗಲಿ, ಬುದ್ಧಿಪೂರ್ವಕವಾಗಿಯಾಗಲಿ ಸ್ನಾನದಾನಗಳೇ ಮೊದಲಾದ ಸತ್ಕಾರ್ಯಗಳನ್ನು ಮಾಡುವರೊ, ಅವರು ನಾಶರಹಿತವಾದ ನನ್ನ ವೈಕುಂಠಲೋಕವನ್ನು ಸೇರುವರು.

೩೫. ಯಾರು ಈ ಅಕ್ಷಯತದಿಗೆಯ ದಿನದಲ್ಲಿ ಪಿತೃದೇವತೆ

**ನ ಚಾನಯಾ ತಿಥೇರ್ಲೋಕೇ ಸಮಾ ವಾ ನಾಧಿಕಾ ಭುವಿ ।**
**ಅಸ್ಯಾಂ ಕೃತಂ ಸ್ವಲ್ಪಮಪಿ ತದಕ್ಷಯ್ಯಫಲಂ ಭವೇತ್ ॥ ೩೬ ॥**
**ಯೋ ಗಾಂ ದದ್ಯಾನ್ನೃಪಶ್ರೇಷ್ಠ ಬ್ರಾಹ್ಮಣಾಯ ಕುಟುಂಬಿನೇ ।**
**ಸರ್ವಸಂಪತ್ಪ್ರವರ್ಷಾಖ್ಯಾ ಭುಕ್ತಿರ್ಮುಕ್ತಿಃ ಕರೇ ಸ್ಥಿತಾ ॥ ೩೭ ॥**
**ಯೋ ಹಿ ದದ್ಯಾದನಡ್ವಾಹಂ ಸರ್ವಪಾಪವಿನಾಶನಂ ।**
**ಕಾಲಮೃತ್ಯುವಿಮುಕ್ತಃ ಸನ್ ದೀರ್ಘಾಯುಷ್ಯಮವಾಪ್ನುಯಾತ್ ॥ ೩೮ ॥**
**ವೈಶಾಖಮಾಸೇ ಯೋ ಧರ್ಮಾನ್ ಕುರುತೇ ಮತ್ಪ್ರಿಯಾವಹಾನ್ ।**
**ತೇಷಾಂ ಮೃತ್ಯುಜರಾಜನ್ಮಭಯಂ ಪಾಪಂ ಹರಾಮ್ಯಹಂ ॥ ೩೯ ॥**
**ಯಥಾ ವೈಶಾಖಧರ್ಮೈಸ್ತು ತುಷ್ಟಃ ಸ್ಯಾಂ ಸಕಲೈರಪಿ ।**
**ಮಾಸಧರ್ಮೈರ್ನ ತುಷ್ಟಃ ಸ್ಯಾಂ ಮಾಸೋ ಮೇ ಮಾಧವಃ ಪ್ರಿಯಃ ॥**
**ಸರ್ವಧರ್ಮೋಜ್ಝಿತಾ ವಾಪಿ ಬ್ರಹ್ಮಚರ್ಯವಿವರ್ಜಿತಾಃ ।**
**ವೈಶಾಖಮಾಸನಿರತಾ ಯಾಂತಿ ಮತ್ಪದಮವ್ಯಯಂ ॥ ೪೧ ॥**

---

ಗಳನ್ನುದ್ದೇಶಿಸಿ ಶ್ರಾದ್ಧವನ್ನು ಮಾಡುವರೊ, ಆ ಮನುಷ್ಯರ ಕರ್ಮವು ಅನಂತಫಲದಾಯಕವಾಗುವುದು.

೩೬. ಭೂಲೋಕದಲ್ಲಿ ಈ ದಿವಸಕ್ಕೆ ಸಮಾನವಾದುದಾಗಲಿ ಅಧಿಕವಾದುದಾಗಲಿ ಬೇರೊಂದು ತಿಥಿಯಿಲ್ಲವು. ಇಂದು ಮಾಡಿದ ಅತ್ಯಲ್ಪಕಾರ್ಯವೂ ಸಹ ಅಕ್ಷಯ ಫಲವನ್ನು ಕೊಡುವುದು.

೩೭. ಎಲೈ ಭೂಪಾಲಕೋತ್ತಮನೆ! ಈ ದಿವಸದಲ್ಲಿ ಯಾವನು ಗೃಹಸ್ಥಾಶ್ರಮಿಯಾದ ಬ್ರಾಹ್ಮಣೋತ್ತಮನಿಗೆ ಗೋದಾನವನ್ನು ಮಾಡುವನೊ, ಅವನಿಗೆ ಸಕಲಸಂಪದಗಳನ್ನು ಮಳೆಗರೆಯುವ ಭೋಗಭಾಗ್ಯವೂ, ಮೋಕ್ಷವೂ ಕರತಲಾಮಲಕಗಳಾಗಿರುವುವು.

೩೮. ಯಾವನು ಸಮಸ್ತ ಪಾತಕವಿನಾಶಕವೆನಿಸಿದ ವೃಷಭವನ್ನು ದಾನ ಮಾಡುವನೊ, ಆತನು ಕಾಲಮೃತ್ಯುವಿನಿಂದಲೂ ಬಿಡುಗಡೆಯನ್ನು ಹೊಂದಿ ದೀರ್ಘಾಯುಷ್ಯವನ್ನು ಪಡೆಯುವನು.

೩೯. ವೈಶಾಖಮಾಸದಲ್ಲಿ ನನಗೆ ಸಂತೋಷವನ್ನುಂಟುಮಾಡುವ ಸಕಲ ಧರ್ಮಗಳನ್ನೂ ಯಾರು ಅನುಷ್ಠಾನಮಾಡುವರೊ, ಅವರಿಗೆ ಜನನ, ಮರಣ, ಮುಪ್ಪುಗಳ ಭಯವನ್ನೂ ಪಾಪಸಂಚಯವನ್ನೂ ನಾನು ನಾಶಮಾಡುವೆನು.

೪೦–೪೧. ವೈಶಾಖಮಾಸಧರ್ಮದಿಂದ ನಾನು ಎಷ್ಟು ಸಂತುಷ್ಟನಾಗುವೆನೊ, ಅಷ್ಟರ ಮಟ್ಟಿಗೆ ಇತರ ಮಾಸಗಳ ಸಕಲ ಧರ್ಮಾಚರಣೆಯಿಂದಲೂ ಸಂತೋಷಗೊಳ್ಳುವುದಿಲ್ಲ. ಈ ವೈಶಾಖಮಾಸವೇ ನನಗೆ ಅತ್ಯಂತ ಪ್ರಿಯತಮವಾಗಿರುವುದು. ಸಕಲ ವರ್ಣಾಶ್ರಮಧರ್ಮಗಳಿಂದ ರಹಿತರಾದರೂ, ಬ್ರಹ್ಮ

ಯದ್ದುರಾಪಂ ತಪೋಭಿಶ್ಚ ಸಾಂಖ್ಯಯೋಗೈರ್ಮಖೈರಪಿ ।
ತದ್ಧಾಮ ಪರಮಂ ಯಾಂತಿ ವೈಶಾಖನಿರತಾ ನರಾಃ ॥ ೪೨ ॥
ಅಪಿ ಪಾಪಸಹಸ್ರಂ ವಾ ಮಾಸೋಽಯಂ ಹರತೇಽನಘ ।
ಪ್ರಾಯಶ್ಚಿತ್ತವಿಹೀನಂ ವಾ ಮತ್ಪಾದಸ್ಮರಣಂ ಯಥಾ ॥ ೪೩ ॥
ಗುರೂಪದಿಷ್ಟಃ ಕಾಂತಾರೇ ವೈಶಾಖೇ ನಿರತೋ ಭವಾನ್ ।
ಸಮಾರಾಧ್ಯ ಜಗನ್ನಾಥಂ ತೇನಾಪ್ತಮಖಿಲಂ ನೃಪ ॥ ೪೪ ॥
ಧರ್ಮೇಣಾನೇನ ಸಂಪ್ರೀತಃ ಪ್ರತ್ಯಕ್ಷೋಽಯಂ ಭವಾಮಿ ತೇ ।
ಭುಕ್ತ್ವಾ ಭೋಗಾನ್ ಯಥಾ ಕಾಮಾನ್ ದೇವೈರಪಿ ಸುದುರ್ಲಭಾನ್ ॥
ಇತಿ ತಸ್ಮೈ ವರಂ ದತ್ವಾ ದೇವದೇವೋ ಜನಾರ್ದನಃ ।
ಪಶ್ಯತಾಮೇವ ಸರ್ವೇಷಾಂ ತತ್ರೈವಾಂತರಧೀಯತ ॥ ೪೬ ॥

ಚರ್ಯವನ್ನು ತ್ಯಜಿಸಿದವರಾದರೂ, ವೈಶಾಖಮಾಸ ಧರ್ಮವೊಂದನ್ನು ಮಾತ್ರ ಶ್ರದ್ಧೆಯಿಂದ ಆಚರಿಸಿದ ಮಾನವರು ಅವ್ಯಯವಾದ ನನ್ನ ವಾಸಸ್ಥಾನವನ್ನು ಹೊಂದುವರು.

೪೨. ಯಾವ ವೈಕುಂಠಪದವಿಯು ತಪಸ್ಸುಗಳಿಂದಲೂ, ಜ್ಞಾನಯೋಗ ದಿಂದಲೂ, ಕರ್ಮಯೋಗದಿಂದಲೂ, ಯಜ್ಞಯಾಗಾದಿಗಳಿಂದಲೂ ದುರ್ಲಭ ವಾಗಿರುವುದೊ, ಅಂತಹ ಪರಮಪದವನ್ನು ವೈಶಾಖಧರ್ಮನಿರತರಾದ ಜನರು ಸುಲಭವಾಗಿ ಪಡೆಯುವರು.

೪೩. ಎಲೈ ನಿಷ್ಕಲ್ಮಷನಾದ ರಾಜನೆ! ಸರ್ವಪ್ರಾಯಶ್ಚಿತ್ತರಹಿತನನ್ನೂ ನನ್ನ ಪಾದಗಳ ಸ್ಮರಣೆಯು ಹೇಗೆ ಪವಿತ್ರಗೊಳಿಸುವುದೊ, ಹಾಗೆಯೇ ಈ ವೈಶಾಖ ವ್ರತವೂ ಮನುಷ್ಯರ ಸಾವಿರಾರು ಪಾತಕಗಳನ್ನೂ ನಾಶ ಮಾಡುವುದು.

೪೪. ಗುರುಗಳಾದ ಯಾಜೋಪಯಾಜಕರಿಂದ ಉಪದೇಶವನ್ನು ಹೊಂದಿ ಲೋಕನಾಥನಾದ ನನ್ನನ್ನು ಚೆನ್ನಾಗಿ ಆರಾಧಿಸಿ ಅರಣ್ಯದಲ್ಲಿಯೂ ನೀನು ವೈಶಾಖ ವ್ರತವನ್ನು ನಡೆಸಿದೆಯಷ್ಟೆ. ಅದರ ಫಲವಾಗಿಯೇ ನಿನಗೆ ಪುನಃ ಸಕಲೈಶ್ವರ್ಯವೂ ಕೈಗೂಡಿರುವುದು.

೪೫. ಈ ಧರ್ಮದ ಆಚರಣೆಯಿಂದಲೇ ನಾನು ಸುಪ್ರೀತನಾಗಿ ನಿನಗೆ ಪ್ರತ್ಯಕ್ಷನಾಗಿ ಬಂದಿರುವೆನು. ದೇವತೆಗಳಿಗೂ ಅಲಭ್ಯಗಳಾದ ಸಕಲ ಕಾಮುಗಳನ್ನೂ ಯಥಾಪೇಕ್ಷಿತವಾಗಿ ನೀನು ಅನುಭವಿಸಿಕೊಂಡು ರಾಜ್ಯವನ್ನಾ ಳುತ್ತಿರು."

೪೬. ಇಂತೆಂದು ಪುರುಯಶಮಹಾರಾಜನಿಗೆ ವರವನ್ನು ಕೊಟ್ಟು ದೇವಾಧಿ

ತತೋ ಭೂಪಾಲವರ್ಯೋಽಸೌ ಬಭೂವಾತ್ಯಂತವಿಸ್ಮಿತಃ ।
ಹೃಷ್ಟಪುಷ್ಟತನುರ್ಭೂಪಃ ಲಬ್ಧನಷ್ಟಧನೋ ಯಥಾ ॥ ೪೭ ॥
ತತಃ ಶಶಾಸ ಪೃಥಿವೀಂ ತಚ್ಚಿತ್ತಸ್ತತ್ಪರಾಯಣಃ ।
ಮಹದ್ಭಿರ್ಬೋಧಿತೋ ನಿತ್ಯಂ ಗುರುಭಿಶ್ಚ ನಿರಂತರಂ ॥ ೪೮ ॥
ನಾನ್ಯಂ ಪ್ರಿಯತಮಂ ಮೇನೇ ವಾಸುದೇವಮೃತೇ ನೃಪಃ ।
ಯತ್ಸಂಪರ್ಕಾತ್ ಪ್ರಿಯಾ ಆಸನ್ ದಾರಾಮಾತ್ಯಸುತಾದಯಃ ॥ ೪೯ ॥
ಸರ್ವಾನ್ ಧರ್ಮಾಂಶ್ಚಕಾರಾಽಸೌ ವೈಶಾಖೋಕ್ತಾನ್ ಪುನಃ ಪುನಃ ।
ತೇನ ಪುಣ್ಯಪ್ರಭಾವೇನ ಪುತ್ರಪೌತ್ರಾದಿಭಿರ್ವೃತಃ ॥ ೫೦ ॥
ಭುಕ್ತ್ವಾ ಮನೋರಥಾನ್ ಸರ್ವಾನ್ ದೇವಾನಾಮಪಿ ದುರ್ಲಭಾನ್ ।
ಅಂತೇ ಜಗಾಮ ಸಾಯುಜ್ಯಂ ವಿಷ್ಣೋರ್ದೇವಸ್ಯ ಚಕ್ರಿಣಃ ॥ ೫೧ ॥

---

ದೇವನಾದ ಜನಾರ್ದನನು ಸಕಲರೂ ನೋಡುತ್ತಿದ್ದಂತೆಯೇ ಆ ಪ್ರದೇಶ ದಿಂದಲೇ ಅಂತರ್ಧಾನವನ್ನು ಹೊಂದಿದನು.

೪೭. ಮಹಾರಾಜರಲ್ಲಿ ಅಗ್ರೇಸರನಾದ ಆತನು ಅತ್ಯಂತವಾದ ಆಶ್ಚರ್ಯದಿಂದ ಕೂಡಿದವನಾದನು. ನಷ್ಟವಾದ ಧನವನ್ನು ಪುನಃ ಪಡೆದ ಮನುಷ್ಯನಂತೆ ಮಹಾರಾಜನು ಸಂತೋಷದಿಂದ ಉಬ್ಬಿದ ಮೈಯುಳ್ಳವ ನಾದನು.

೪೮. ಬಳಿಕ ಪರಮಾತ್ಮನಲ್ಲಿಯೇ ಮನಸ್ಸನ್ನು ನಿಲ್ಲಿಸಿ, ಆತನನ್ನೇ ಸದ್ಗತಿ ದಾಯಕನೆಂದು ನಂಬಿ, ನಿರಂತರವೂ ಮಹಾತ್ಮರಿಂದಲೂ, ಗುರುಗಳಿಂದಲೂ ಜ್ಞಾನೋಪದೇಶವನ್ನು ಪಡೆದು ಭೂಮಂಡಲವನ್ನಾಳುತ್ತಿದ್ದನು.

೪೯. ಆ ನೃಪತಿಯು ವಾಸುದೇವನನ್ನು ಬಿಟ್ಟು ಯಾರನ್ನೂ ಪ್ರೀತಿ ಪಾತ್ರರೆಂದು ತಿಳಿದಿರಲಿಲ್ಲ. ಆತನ ಅನುಗ್ರಹದಿಂದ ಲಭಿಸಿದರಾದ ಕಾರಣ ದಿಂದಲೇ ಹೆಂಡತಿಯೂ, ಮಂತ್ರಿಗಳೂ, ಪುತ್ರರೂ ಮುಂತಾದವರು ಪ್ರಿಯರಾಗಿದ್ದರು.

೫೦. ವೈಶಾಖಮಾಸದ ವಿಧಿಗಳಲ್ಲಿ ಹೇಳಿರುವ ಸಮಸ್ತ ಧರ್ಮಗಳನ್ನೂ ಆ ಮಹಾರಾಜನು ಅನೇಕ ವೇಳೆ ನೆರವೇರಿಸಿದನು. ಆ ಅನಂತಪುಣ್ಯದ ಪ್ರಭಾವದಿಂದ ಮಕ್ಕಳು, ಮೊಮ್ಮಕ್ಕಳುಗಳ ಸಂತತಿಯಿಂದ ಪರಿವೃತ ನಾಗಿದ್ದನು.

೫೧. ದೇವತೆಗಳಿಗೂ ದುರ್ಲಭಗಳೆನಿಸಿದ ಸಕಲ ಮನೋರಥಗಳನ್ನೂ ಆತನು ನಿರಭಿಮಾನದಿಂದ ಅನುಭವಿಸಿ ದೇಹಾವಸಾನಸಮಯದಲ್ಲಿ ದೇವ ದೇವನೂ, ಚಕ್ರಪಾಣಿಯೂ ಆದ ಮಹಾವಿಷ್ಣುವಿನ ಸಾಯುಜ್ಯಪದವಿಯನ್ನು ಸೇರುವವನಾದನು.

**ಯ ಇದಂ ಪರಮಾಖ್ಯಾನಂ ಶೃಣ್ವಂತಿ ಶ್ರಾವಯಂತಿ ಚ ।**
**ತೇ ಸರ್ವೇ ಪಾಪನಿರ್ಮುಕ್ತಾ ಯಾಂತಿ ವಿಷ್ಣೋಃ ಪರಂ ಪದಂ ॥ ೫೨ ॥**

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ದ್ವಿತೀಯೇ ವೈಷ್ಣವಖಂಡೇ ವೈಶಾಖಮಾಸಮಾಹಾತ್ಮ್ಯೇ ನಾರದಾಂಬರೀಷಸಂವಾದೇ
"ಪಾಂಚಾಲಧಿಪತೇರ್ವಿಷ್ಣುಸಾಯುಜ್ಯಪ್ರಾಪ್ತಿರ್ವರ್ಣನಂ"ನಾಮ
ಷೋಡಶೋಽಧ್ಯಾಯಃ

೫೨. ಯಾವ ಭಗವದ್ಭಕ್ತರು ಸರ್ವೋತ್ತಮವಾದ ಈ ಆಖ್ಯಾನವನ್ನು ಕೇಳುವರೊ, ಯಾರು ಇತರರಿಗೆ ಹೇಳುವರೊ ಮತ್ತು ಹೇಳಿಸುವರೊ, ಅವರೆಲ್ಲರೂ ಸಕಲ ಪಾತಕಗಳಿಂದಲೂ ನಿರ್ಮುಕ್ತರಾಗಿ ಶ್ರೀಮನ್ನಾರಾಯಣನ ಪರಮಸಾಯುಜ್ಯವನ್ನು ಹೊಂದುವರು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಎರಡನೆಯ ವೈಷ್ಣವಖಂಡದ ವೈಶಾಖಮಾಸಮಾಹಾತ್ಮ್ಯದ
ನಾರದಾಂಬರೀಷ ಸಂವಾದದಲ್ಲಿ "ಪಾಂಚಾಲರಾಜನಿಗೆ ವಿಷ್ಣುಸಾಯುಜ್ಯವು
ಲಭಿಸಿದುದು"ಎಂಬ ಹದಿನಾರನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥ ಸಪ್ತದಶೋಽಧ್ಯಾಯಃ

### ದಂತಿಲಕೋಹಲ ಮುಕ್ತಿಪ್ರಾಪ್ತಿ ವೃತ್ತಾಂತವರ್ಣನಂ

ಶೃತಕೀರ್ತಿರುವಾಚ :—

**ವೈಶಾಖಧರ್ಮಾನಖಿಲಾನಿಹಾಮುತ್ರ ಫಲಪ್ರದಾನ್ ।**
**ಭೂಯೋಽಪಿ ಶೃಣತಶ್ಚಾಸೀತ್ತೃಪ್ತಿರ್ನಾಽದ್ಯಾಪಿ ಮಾನದ ॥ ೧ ॥**
**ಯತ್ರ ಚಾಕೈತವೋ ಧರ್ಮೋ ಯತ್ರ ವಿಷ್ಣುಕಥಾಃ ಶುಭಾಃ ।**
**ತಚ್ಛಾಸ್ತ್ರಂ ಶೃಣ್ವತೋ ನೈವ ತೃಪ್ತಿಃ ಕರ್ಣರಸಾಯನಂ ॥ ೨ ॥**
**ಪೂರ್ವಜನ್ಮಕೃತಂ ಪುಣ್ಯಂ ದಿಷ್ಟ್ಯಾ ಪಾರಮುಪಾಗತಂ ।**
**ಆತಿಥ್ಯವ್ಯಪದೇಶೇನ ಯದ್ಭವಾನ್ ಗೃಹಮಾಗತಃ ॥ ೩ ॥**
**ವಚೋಽಮೃತಂ ಮುಖಾಂಭೋಜನಿಃಸೃತಂ ಪರಮಾದ್ಭುತಂ ।**
**ಪೀತ್ವಾ ತೃಪ್ತಃ ಪಾರಮೇಷ್ಠ್ಯಂ ಮೋಕ್ಷಂ ವಾ ನ ಚ ಕಾಮಯೇ ॥ ೪ ॥**

### ಕನ್ನಡದ ಅನುವಾದ

### ದಂತಿಲಕೋಹಲ ಮುಕ್ತಿಪ್ರಾಪ್ತಿ ವೃತ್ತಾಂತವರ್ಣನ

೧. ಶೃತಕೀರ್ತಿಯು ಹೇಳುತ್ತಾನೆ:—ಮಹಾತ್ಮನಾದ ಶ್ರುತದೇವನೆ! ಈ ಲೋಕದಲ್ಲಿಯೂ ಲೋಕಾಂತರಗಳಲ್ಲಿಯೂ ಸೌಖ್ಯಫಲಗಳನ್ನು ನೀಡುವ ಸಮಸ್ತ ವೈಶಾಖಧರ್ಮಗಳನ್ನೂ ಪುನಃ ಪುನಃ ಕೇಳುತ್ತಿದ್ದರೂ ನನ್ನ ಮನಸ್ಸಿಗೆ ಈಗಲೂ ಕೂಡ ತೃಪ್ತಿಯುಂಟಾಗಲಿಲ್ಲ.

೨. ಯಾವುದರಲ್ಲಿ ನಿಷ್ಕಲ್ಮಷವಾದ ಧರ್ಮವು ನಿರೂಪಿಸಲ್ಪಟ್ಟಿರುವುದೊ, ಯಾವುದರಲ್ಲಿ ಮಂಗಳಕರಗಳಾದ ವಿಷ್ಣುಲೀಲೆಗಳ ಕಥೆಗಳು ವಿವರಿಸಲ್ಪಟ್ಟಿರುವುವೊ, ಅಂತಹ ಕರ್ಣರಸಾಯನವೆನಿಸಿದ ಶಾಸ್ತ್ರವನ್ನು ಕೇಳುತ್ತಿರುವ ನನಗೆ ತೃಪ್ತಿಯೇ ಇಲ್ಲವು.

೩. ಅತಿಥಿಸತ್ಕಾರವನ್ನು ಸ್ವೀಕರಿಸುವ ವ್ಯಾಜದಿಂದ ನೀನು ನಮ್ಮ ಮನೆಗೆ ಪ್ರಾಪ್ತನಾದುದರಿಂದ ದೈವಾನುಗ್ರಹದಿಂದಲೇ ನನ್ನ ಪೂರ್ವಜನ್ಮಗಳಲ್ಲಿ ಸಂಪಾದಿಸಿದ ಪುಣ್ಯವೆಲ್ಲವೂ ಫಲಪ್ರದವಾಗುವ ಸಮಯವೊದಗಿರುವುದೆಂದು ತಿಳಿಯುವೆನು.

೪. ನಿನ್ನ ಮುಖಕಮಲದಿಂದ ಹೊರಟುಬರುತ್ತಿರುವ ವಾಣಿಯೆಂಬ ಪರಮಾದ್ಭುತವಾದ ಅಮೃತವನ್ನು ಪಾನಮಾಡಿ ಸಂತೋಷಗೊಳ್ಳುತ್ತಿರುವ ನಾನು ಬ್ರಹ್ಮಪದವಿಯನ್ನಾಗಲಿ, ಮೋಕ್ಷವನ್ನಾಗಲಿ ಎಂದಿಗೂ ಅಪೇಕ್ಷಿಸಲಾರೆನು.

ತಸ್ಮಾತ್ತಾನೇವ ಧರ್ಮಾನ್ಮೇ ಭುಕ್ತಿಮುಕ್ತಿಪ್ರದಾಯಕಾನ್ ।
ವಿಷ್ಣುಪ್ರೀತಿಕರಾನ್ ದಿವ್ಯಾನ್ ಭೂಯೋ ವಿಸ್ತರತೋ ವದ ॥ ೫ ॥
ಇತ್ಯುಕ್ತಸ್ತು ಪುರಾ ರಾಜ್ಞಾ ಶ್ರುತದೇವೋ ಮಹಾಯಶಾಃ ।
ಸಂಹೃಷ್ಟಾತ್ಮಾ ಶುಭಾನ್ ಧರ್ಮಾನ್ ಪುನರ್ವ್ಯಾಹರ್ತುಮಾರಭತ್ ॥
ಶ್ರುತದೇವ ಉವಾಚ:—
ಶೃಣು ರಾಜನ್ಪ್ರವಕ್ಷ್ಯಾಮಿ ಕಥಾಂ ಪಾಪಪ್ರಣಾಶಿನೀಂ ।
ವೈಶಾಖಧರ್ಮವಿಷಯಾಂ ಭಾವಿತಾಂ ಮುನಿಭಿರ್ಮುಹುಃ ॥ ೭ ॥
ಪಂಪಾತೀರೇ ದ್ವಿಜಃ ಕಶ್ಚಿಚ್ಛಂಖೋ ನಾಮ ಮಹಾಯಶಾಃ ।
ಗುರೌ ಸಿಂಹಗತೇ ಚಾಗಾನ್ನದೀಂ ಗೋದಾವರೀಂ ಶುಭಾಂ ॥ ೮ ॥
ತೀರ್ತ್ವಾ ಭೀಮರಥೀಂ ಪುಣ್ಯಾಂ ಕಾಂತಾರೇ ಕಂಟಕಾವಿಲೇ ।
ನಿರ್ಜಲೇ ನಿರ್ಜನೇ ಘೋರೇ ವೈಶಾಖೇ ತಾಪಕರ್ಷಿತಃ ॥ ೯ ॥

೫. ಆದುದರಿಂದ ಭೋಗಮೋಕ್ಷಗಳನ್ನು ಕೊಡುವುವೂ, ಮಹಾವಿಷ್ಣುವಿಗೆ ಪರಮಪ್ರಿಯಗಳಾಗಿರುವುವೂ, ಸರ್ವೋತ್ಕೃಷ್ಟಗಳಾಗಿರುವುವೂ ಎನಿಸಿದ ಆ ವೈಶಾಖಧರ್ಮಗಳನ್ನೇ ಮತ್ತೆ ವಿಸ್ತಾರವಾಗಿ ನಿರೂಪಿಸು.

೬. ಇಂತೆಂದು ಮುನ್ನು ಮಹಾರಾಜನಿಂದ ಕೇಳಲ್ಪಟ್ಟವನಾಗಿ ಮಹಾಕೀರ್ತಿವಂತನಾದ ಶ್ರುತದೇವನು ಮನಸ್ಸಿನಲ್ಲಿಯೇ ಹರ್ಷಗೊಂಡವನಾಗಿ ಪುನಃ ವೈಶಾಖಮಾಸದ ಧರ್ಮಗಳನ್ನು ವಿಸ್ತಾರವಾಗಿ ನಿರೂಪಿಸಲು ಪ್ರಾರಂಭ ಮಾಡಿದನು.

೭. ಶ್ರುತದೇವನು ಹೇಳುತ್ತಾನೆ:—ಮಹಾರಾಜನೆ! ವೈಶಾಖ ಧರ್ಮದ ವಿಷಯದಲ್ಲಿ ಸಕಲ ಪಾತಕಗಳನ್ನೂ ನಾಶಗೊಳಿಸುವ ಉತ್ತಮವಾದ ಕಥೆಯೊಂದನ್ನು ಹೇಳುವೆನು, ಕೇಳು. ಮಹಾ ಮುನಿಗಳೂ ಸಹ ಇದನ್ನು ಪುನಃ ಪುನಃ ತಮ್ಮ ಸ್ಮರಣೆಗೆ ತಂದುಕೊಳ್ಳುತ್ತಿರುವರು.

೮. ಪೂರ್ವದಲ್ಲಿ ಪಂಪಾತೀರಪ್ರದೇಶದಲ್ಲಿ ಮಹಾ ಪ್ರಖ್ಯಾತನಾದ ಶಂಖನೆಂಬೊಬ್ಬ ಬ್ರಾಹ್ಮಣೋತ್ತಮನಿದ್ದನು. ಒಮ್ಮೆ ಗುರುಗ್ರಹವು ಸಿಂಹರಾಶಿಯನ್ನು ಪ್ರವೇಶಿಸಲು ಆತನು ಪರ್ವಕಾಲದಲ್ಲಿ ನದೀಸ್ನಾನವನ್ನು ಮಾಡಲೆಳಸಿ ನಿರ್ಮಲವಾದ ಗೋದಾವರೀ ತೀರಕ್ಕೆ ಬಂದನು.

೯. ಬಳಿಕ ಅವನು ಪರಮಪಾವನೆಯಾದ ಭೀಮರಥಿಯನ್ನು ದಾಟಿಕೊಂಡು ಕಂಟಕಾನ್ವಿತವೂ, ಜಲರಹಿತವೂ, ಜನಶೂನ್ಯವೂ, ದುಷ್ಟಮೃಗಗಳಿಂದ ಭಯಂಕರವೂ ಆದ ಒಂದು ಅರಣ್ಯದಲ್ಲಿ ಬಿಸಿಲಿನ ತಾಪದಿಂದ ಬಸವಳಿದು ಬರುತ್ತಿದ್ದನು.

ವೃಕ್ಷೇ ಚೋಪನಿವೇಶಾಽಸೌ ಮಧ್ಯಾಹ್ನಸಮಯೇ ದ್ವಿಜಃ ।
ತದಾ ಕಶ್ಚಿದ್ದುರಾಚಾರೋ ವ್ಯಾಧಶ್ಚಾಪಧರಃ ಶಠಃ ॥ ೧೦ ॥
ನಿರ್ಘೃಣಃ ಸರ್ವಭೂತೇಷು ಕಾಲಾಂತಕ ಇವಾಽಪರಃ ।
ತಂ ಕುಂಡಲಧರಂ ವಿಪ್ರಂ ದೀಕ್ಷಿತಂ ಭಾಸ್ಕರೋಪಮಂ ॥ ೧೧ ॥
ದೃಷ್ಟ್ವಾ ಬದ್ಧ್ವಾ ಸ ಜಗ್ರಾಹ ಕುಂಡಲಾದಿಕಮುಗ್ರಧೀಃ ।
ಉಪಾನಹೌ ಚ ಛತ್ರಂ ಚ ಅಕ್ಷಮಾಲಾಂ ಕಮಂಡಲುಂ ॥ ೧೨ ॥
ಪಶ್ಚಾದ್ವಿಸೃಜ್ಯ ತಂ ವಿಪ್ರಂ ಗಚ್ಛೇತ್ಯಾಹ ವಿಮೂಢಧೀಃ ॥ ೧೩ ॥
ತತಃ ಸ ಗಚ್ಛನ್ ಪಥಿ ಶರ್ಕರಾಽಽವಿಲೇ
ಸೂರ್ಯಾಂಶುತಪ್ತೇ ಜಲವರ್ಜಿತೇ ಖರೇ ।
ಸಂತಪ್ತಪಾದಸ್ತೃಣಛಾದಿತೇ ಸ್ಥಲೇ
ಕ್ವಚಿಚ್ಚ ಚಾರೋಪವಸನ್ನೂರ್ಧ್ವರೇತಾಃ ॥ ೧೪ ॥
ಸ ವೈ ದ್ರುತಂ ಸಂಪತನ್ ಕ್ವಾಪಿ ತುಷ್ಯನ್
ಹಾಹೇತಿ ವಾದೀ ಸ ಜಗಾಮ ತೂರ್ಣಂ ।

೧೦-೧೨. ಆ ಬ್ರಾಹ್ಮಣನು ಮಧ್ಯಾಹ್ನಸಮಯದಲ್ಲಿ ಒಂದು ಮರದ ಡಿಯಲ್ಲಿ ಕುಳಿತುಕೊಂಡು ವಿಶ್ರಮಿಸಿಕೊಳ್ಳುತ್ತಿದ್ದನು. ಆಗ ಒಬ್ಬ ದುರಾಚಾರಿಯೂ ಶಠನೂ ಆದ ಬೇಡನೊಬ್ಬನು ಬಿಲ್ಲುಬಾಣಗಳನ್ನು ಧರಿಸಿ ಅಲ್ಲಿಗೆ ಬಂದನು. ಆತನು ಸಕಲಪ್ರಾಣಿಗಳಲ್ಲಿಯೂ ದಾಕ್ಷಿಣ್ಯರಹಿತನಾಗಿದ್ದು ಎರಡನೆಯ ಯಮನಂತೆಯೇ ಭಯಂಕರನಾಗಿದ್ದನು. ಸೂರ್ಯನನ್ನು ಹೋಲುವ ತೇಜಸ್ಸಿನಿಂದ ಕೂಡಿ ಸೋಮಯಾಗವನ್ನು ಮಾಡಿ ಕುಂಡಲಗಳನ್ನು ಧರಿಸಿದ್ದ ಆತನನ್ನು ಕಂಡು ಕ್ರೂರಕರ್ಮಿಯಾದ ಆ ಬೇಡನು ಆತನನ್ನು ಕಟ್ಟಿಹಾಕಿ ಆತನ ಕುಂಡಲಾದ್ಯಾಭರಣಗಳನ್ನೂ, ಪಾದುಕೆಗಳನ್ನೂ, ಛತ್ರಿಯನ್ನೂ ರುದ್ರಾಕ್ಷಗಳ ಜಪಮಾಲೆಯನ್ನೂ, ಕಮಂಡಲುವನ್ನೂ ಬಲಾತ್ಕಾರವಾಗಿ ಕಸಿದುಕೊಂಡನು.

೧೩. ಬಳಿಕ ಮೂಢಾತ್ಮನಾದ ಅವನು ಬ್ರಾಹ್ಮಣನ ಕಟ್ಟುಗಳನ್ನೆಲ್ಲ ಬಿಚ್ಚಿ ಆತನಿಗೆ ಹೊರಟುಹೋಗೆಂದು ಹೇಳಿದನು.

೧೪. ಆಗ ಜಿತೇಂದ್ರಿಯನಾದ ಆ ಬ್ರಾಹ್ಮಣನು ಮರಳಿನಿಂದ ಕೂಡಿದುದೂ, ಸೂರ್ಯನ ಬಿಸಿಲಿನಿಂದ ಕಾದಿರುವುದೂ, ಜಲವರ್ಜಿತವೂ, ನೊರಜುಕಲ್ಲುಗಳಿಂದ ತೀಕ್ಷ್ಣವೂ ಆದ ದಾರಿಯನ್ನು ನಡೆಯುತ್ತ, ಕಾಲುಗಳು ಸುಡುತ್ತಿರಲು ಉಪವಾಸದಿಂದ ಕೃಶನಾಗಿ ಅಲ್ಪಸ್ವಲ್ಪವಾಗಿ ಹುಲ್ಲು ಬೆಳೆದಿದ್ದ ಸ್ಥಳಗಳಲ್ಲಿಯೇ ಕಾಲುಗಳನ್ನಿಡಲು ಯತ್ನಿಸುತ್ತ ತಿರುಗಾಡುತ್ತಿದ್ದನು.

೧೫. ಆತನು ಕೆಲವೆಡೆಗಳಲ್ಲಿ ಬೇಗ ನಡೆದು ನೆಲಕ್ಕೆ ಬೀಳುತ್ತ ಕೆಲವೆಡೆ

ದೃಷ್ಟ್ವಾ ಮುನಿಂ ಖಿದ್ಯಮಾನಂ ಪೃಥಿವ್ಯಾಂ
ಮಧ್ಯಂಗತೇ ಪೂಷ್ಣಿ ದಯಾಬಭೂವ ॥ ೧೫ ॥
ವ್ಯಾಧಸ್ಯ ಧರ್ಮವಿಮುಖಸ್ಯ ಚ ಪಾಪಬುದ್ಧೇ
ಸ್ತಸ್ಮೈದದಾಮಿ ಸುಖದಾಂ ಖಲು ಪಾದರಕ್ಷಾಂ ।
ಚೌರ್ಯೇಣೈವ ಸ್ವಧರ್ಮೇಣ ಯಾ ಗೃಹಿತಾ ವನಾಂತರೇ ।
ತದೀಯಮೇವ ತತ್ಸರ್ವಂ ವ್ಯಾಧಾನಾಂ ಧರ್ಮನಿರ್ಣಯಃ ॥ ೧೬ ॥
ತಸ್ಮಾದುಪಾನಹೌ ದಾಸ್ಯೇ ಮುಹುದ್ದುಃಖಾಪನುತ್ತಯೇ
ತೇನ ಶ್ರೇಯೋ ಭವೇದ್ಯಚ್ಚ ತದ್ಭವೇನ್ಮಮ ಪಾಪಿನಃ ॥ ೧೭ ॥
ಜೀರ್ಣೇ ಚೋಪಾನಹೌ ದ್ವೇ ಚ ವರ್ತತೇ ಪಾದಯೋರ್ಮಮ ।
ನ ತಾಭ್ಯಾಮಸ್ತಿ ಮೇ ಕೃತ್ಯಂ ತಸ್ಮಾತ್ತೇ ವೈ ದದಾಮ್ಯಹಂ ॥ ೧೮ ॥
ಇತಿ ನಿಶ್ಚಿತ್ಯ ಮನಸಿ ತೂರ್ಣಂ ಗತ್ವಾ ದದೌ ಚ ತೇ ।
ಶರ್ಕರಾತಪ್ತಪಾದಾಯ ದ್ವಿಜವರ್ಯಾಯ ಸೀದತೇ ॥ ೧೯ ॥

ಗಳಲ್ಲಿ ಸ್ವಲ್ಪ ಸಂತೋಷಗೊಳ್ಳುತ್ತ, ಹಾಹಾಕಾರವನ್ನು ಮಾಡುತ್ತ ಮೆಲ್ಲಮೆಲ್ಲನೆ ನಡೆದು ಹೋಗುತ್ತಿದ್ದನು. ಸೂರ್ಯನು ಆಕಾಶ ಮಧ್ಯಗತನಾಗಲು ಅತ್ಯಂತ ಸಂಕಟದಿಂದ ಭೂಮಿಯಲ್ಲಿ ಬಿದ್ದ ಆ ಮಹಾ ಮುನಿಯನ್ನು ಕಂಡು ಆ ಬೇಡನಿಗೂ ದಯೆಯುಂಟಾಯಿತು.

೧೬. ಸಕಲ ಧರ್ಮವಿಮುಖನೂ, ದುಷ್ಟಬುದ್ಧಿಯೂ ಆದ ಆ ವ್ಯಾಧನು ಇಂತೆಂದು ಯೋಚಿಸತೊಡಗಿದನು. "ಆತನಿಗೆ ಸ್ವಲ್ಪಮಟ್ಟಿಗೆ ಸೌಖ್ಯವನ್ನು ಕೊಡುವ ಈ ಪಾದರಕ್ಷೆಗಳನ್ನು ಆತನಿಗೇತಕ್ಕೆ ಕೊಡಬಾರದು? ಅರಣ್ಯ ಪ್ರದೇಶದಲ್ಲಿ ವ್ಯಾಧರು ತಮ್ಮ ಧರ್ಮವಾದ ಚೌರ್ಯದಿಂದ ಯಾವ ಪದಾರ್ಥಗಳನ್ನು ಸಂಗ್ರಹಿಸುವರೊ, ಅವುಗಳೆಲ್ಲವೂ ಅವರಿಗೇ ಸೇರಿರುತ್ತವೆ. ಇದೇ ಅವರ ವೃತ್ತಿಧರ್ಮವೆಂದು ನಿಶ್ಚಯಿಸಲ್ಪಟ್ಟಿರುವುದು.

೧೭. ಆದುದರಿಂದ ಈ ಬ್ರಾಹ್ಮಣನ ಅಪಾರವಾದ ದುಃಖವನ್ನು ಸ್ವಲ್ಪ ಕಡಿಮೆ ಮಾಡಲು ಅವನಿಗೆ ಎರಡು ಪಾದರಕ್ಷೆಗಳನ್ನು ಮಾತ್ರ ಕೊಡುವೆನು. ಆ ದಾನದಿಂದ ಯಾವುದಾದರೂ ಶ್ರೇಯಸ್ಸುಂಟಾಗುವುದಾದರೆ ಪಾಪಿಯಾದ ನನಗೆ ಅದೂ ಲಭಿಸಲಿ.

೧೮. ನನ್ನ ಕಾಲುಗಳಲ್ಲಿರುವ ಎರಡು ಪಾದರಕ್ಷೆಗಳೂ ಜೀರ್ಣಗಳಾಗಿ ಉಪಯೋಗಕ್ಕೆ ಬಾರದಿರುವುವು. ಅವುಗಳಿಂದ ನನಗೆ ಮತ್ತೆ ಯಾವ ಪ್ರಯೋಜನವೂ ಇಲ್ಲ. ಆದುದರಿಂದ ಅವುಗಳನ್ನೇ ಆತನಿಗೆ ದಾನಮಾಡುವೆನು."

೧೯. ಇಂತೆಂದು ಮನಸ್ಸಿನಲ್ಲಿ ನಿಶ್ಚಯವನ್ನು ಮಾಡಿಕೊಂಡು ಮರಳಿನಿಂದ

ಉಪಾನಹೌ ಗೃಹೀತ್ವಾ ತೇ ನಿರ್ವೃತಿಂ ಚ ಪರಾಂ ಯಯೌ ।
ಸುಖೀಭವೇತಿ ತಂ ವ್ಯಾಧಮಾಶೀರ್ಭಿರಭಿನಂದ್ಯ ಚ ॥ ೨೦ ॥
ನೂನಂ ಸುಪಕ್ವಪುಣ್ಯೋಽಯಂ ವೈಶಾಖೇ ದತ್ತವಾನಮೂ ।
ವ್ಯಾಧಸ್ಯಾಪಿ ಚ ದುರ್ಬುದ್ಧೇಃ ಪ್ರಾಯೋವಿಷ್ಣುಃ ಪ್ರಸೀದತಿ ।
ಸರ್ವಸ್ಯಾಽಸ್ಯಾಚ ಭೂಯೋಽಪಿ ಯತ್ಸುಖಂ ತದಭೂನ್ಮಮ ॥ ೨೧ ॥
ತತೋಽಭಿಶ್ರುತ್ಯ ತದ್ವಾಕ್ಯಂ ಕಿಮೇತದಿತಿ ವಿಸ್ಮಿತಃ ।
ವ್ಯಾಜಹಾರ ಮುನಿರ್ವಿಪ್ರಂ ಬ್ರಹ್ಮಿಷ್ಠಂ ಬ್ರಹ್ಮವಾದಿನಂ ॥ ೨೨ ॥
ತ್ವದೀಯಂ ತು ಮಯಾ ದತ್ತಂ ಕಥಂ ಪುಣ್ಯಂ ಭವೇನ್ಮಮ ।
ಪ್ರಶಂಸಸಿ ಚ ವೈಶಾಖಂ ಹರಿಸ್ತುಷ್ಟೋ ಭವೇದಿತಿ ॥ ೨೩ ॥
ಏತದಾಚಕ್ಷ್ವ ನೋ ಬ್ರಹ್ಮನ್ ಕೋ ವೈಶಾಖಸ್ತು ಕೋ ಹರಿಃ ।
ಕೋ ಧರ್ಮಃ ಕಿಂ ಫಲಂ ತಸ್ಯ ಶುಶ್ರೂಷೋರ್ಮೇ ದಯಾನಿಧೇ ॥ ೨೪ ॥

---

ಕಾದ ಕಾಲುಗಳುಳ್ಳ ದುಃಖಿತನಾದ ಆ ಬ್ರಾಹ್ಮಣಶ್ರೇಷ್ಠನಿಗೆ ತ್ವರಿತವಾಗಿ ಬಂದು ತನ್ನ ಪಾದರಕ್ಷೆಗಳೆರಡನ್ನೂ ದಾನಮಾಡಿದನು.

೨೦. ಆ ವಿಪ್ರನು ಎರಡು ಪಾದರಕ್ಷೆಗಳನ್ನು ಸ್ವೀಕರಿಸಿ ಮೆಟ್ಟಿಕೊಂಡು ಅಮಿತವಾದ ಸೌಖ್ಯವನ್ನು ಹೊಂದಿದನು. ಬಹಳಕಾಲ ಸುಖಿಯಾಗಿಬಾಳೆಂದು ಆ ವ್ಯಾಧನನ್ನು ಅನೇಕ ವಚನಗಳಿಂದ ಆಶೀರ್ವದಿಸಿದನು.

೨೧. "ಈ ಬೇಡನು ನಿಜವಾಗಿಯೂ ಪರಿಪಾಕಗೊಂಡ ಪುಣ್ಯದಿಂದ ಕೂಡಿದವನಾಗಿರಬೇಕು. ವೈಶಾಖಮಾಸದಲ್ಲಿ ನನಗೆ ಈ ಪಾದರಕ್ಷೆಗಳನ್ನು ದಾನಮಾಡಿರುವನು. ದುರ್ಬುದ್ಧಿಯಾದ ಈ ವ್ಯಾಧನಿಗೂ ಪ್ರಾಯಶಃ ಮಹಾ ವಿಷ್ಣುವಿನ ಅನುಗ್ರಹವುಂಟಾಗಬಹುದು. ಈತನ ಪಾದರಕ್ಷೆಗಳಿಂದ ನನಗೆ ಸಕಲೈಶ್ವರ್ಯಗಳನ್ನೂ ಸಂಪಾದಿಸಿದುದಕ್ಕೆ ಸಮವಾದ ಸುಖವುಂಟಾಗುತ್ತಿರುವುದು."

೨೨. ಆ ವ್ಯಾಧನು ಬ್ರಾಹ್ಮಣನ ಮಾತುಗಳನ್ನು ಕೇಳಿ ಇದು ಏನೆಂದು ವಿಸ್ಮಯಗೊಂಡನು. ಮತ್ತು ಬ್ರಹ್ಮಜ್ಞಾನಿಯೂ ವೇದಶಾಸ್ತ್ರಸಂಪನ್ನನೂ ಆದ ಬ್ರಾಹ್ಮಣನನ್ನು ಕುರಿತು ಪ್ರಶ್ನೆಮಾಡಿದನು.

೨೩. "ನಿನ್ನಿಂದ ಕಿತ್ತುಕೊಂಡ ಪಾದರಕ್ಷೆಗಳಿಗೆ ಬದಲಾಗಿಯೇ ನಾನು ನಿನಗೆ ಈ ಸವೆದುಹೋದುವನ್ನು ಕೊಟ್ಟೆನು. ಆದರಿಂದ ನನಗೆ ಯಾವ ಪುಣ್ಯವುಂಟಾಗುವುದು? ಶ್ರೀಹರಿಯು ಸಂತೋಷಗೊಳ್ಳುವನೆಂದು ವೈಶಾಖಮಾಸದ ದಾನವನ್ನು ಬಹಳವಾಗಿ ಪ್ರಶಂಸೆಮಾಡುತ್ತಿರುವೆ.

೨೪. ಎಲೈ ಬ್ರಾಹ್ಮಣೋತ್ತಮನೆ! ಇದನ್ನೆಲ್ಲ ನನಗೆ ವಿಸ್ತಾರವಾಗಿ ಹೇಳು. ವೈಶಾಖಮಾಸವೆಂಬುದು ಯಾವುದು! ಶ್ರೀ ಹರಿಯೆಂಬುವನು

ಇತಿ ವ್ಯಾಧವಚಃ ಶ್ರುತ್ವಾ ಶಂಖಸ್ತುಷ್ಟಮನಾ ಅಭೂತ್ ।
ಪ್ರಶಂಸನ್ನ ಚ ವೈಶಾಖಂ ಪುನರ್ವಿಸ್ಮಿತಮಾನಸಃ ॥ ೨೫ ॥
ಇದಾನೀಂ ದತ್ತವಾನ್ ಪಾದತ್ರಾಣೇ ಮೇ ಲುಬ್ಧಕಃ ಶಠಃ ।
ಯದ್ದುರ್ಬುದ್ಧೇಶ್ಚ ವೈಷಮ್ಯಂ ಜಾತಂ ಚಿತ್ರಮಹೋ ಬತ ॥ ೨೬ ॥
ಸರ್ವೇಷಾಮೇವ ಧರ್ಮಾಣಾಂ ಫಲಂ ಜನ್ಮಾಂತರೇಷು ವೈ ।
ವೈಶಾಖಮಾಸಧರ್ಮಾಣಾಂ ಫಲಂ ಸದ್ಯಃ ಕ್ಷಣೇ ನೃಣಾಂ ॥ ೨೭ ॥
ಪಾಪಾಚಾರಸ್ಯ ದುರ್ಬುದ್ಧೇರ್ವ್ಯಾಧಸ್ಯಾಪಿ ದುರಾತ್ಮನಃ ।
ದೈವಾದುಪಾನಹೋರ್ದಾನಾತ್ಸತ್ತ್ವಶುದ್ಧಿರಭೂದಹೋ ॥ ೨೮ ॥
ಯಚ್ಚ ವಿಷ್ಣೋಃ ಪ್ರಿಯಂ ಕರ್ಮ ಯತ್ತತ್ಸಂತೋಷನಿರ್ಮಲಂ ।
ತದೇವ ಧರ್ಮಮಿತ್ಯಾಹುರ್ಮನ್ವಾದ್ಯಾ ಧರ್ಮವಿತ್ತಮಾಃ ॥ ೨೯ ॥

---

ಯಾರು? ಧರ್ಮವೆಂಬುದು ಯಾವುದು? ಅದನ್ನು ಆಚರಿಸಿದುದರಿಂದ ಲಭಿಸುವ ಫಲವು ಯಾವುದು? ದಯಾಸಮುದ್ರನಾದ ನೀನು ಕೇಳಲಿಚ್ಛಿಸುತ್ತಿರುವ ನನಗೆ ಎಲ್ಲವನ್ನೂ ತಿಳಿಸು.''

೨೫. ಇಂತೆಂದ ಆ ವ್ಯಾಧನ ಮಾತುಗಳನ್ನು ಕೇಳಿ ಶಂಖಬ್ರಾಹ್ಮಣನು ಸಂತುಷ್ಟಾಂತರಂಗನಾದನು. ಮತ್ತು ಅವನಿಗೂ ಈ ಸದ್ಬುದ್ಧಿಯುಂಟಾದುದಕ್ಕಾಗಿ ಮನಸ್ಸಿನಲ್ಲಿಯೇ ಆಶ್ಚರ್ಯಗೊಳ್ಳುತ್ತ ವೈಶಾಖ ವ್ರತವನ್ನು ಬಹು ವಿಧವಾಗಿ ಹೊಗಳಿಕೊಂಡನು.

೨೬. "ಶಠನಾದ ಈ ವ್ಯಾಧನು ಈಗತಾನೆ ನನಗೆ ಪಾದರಕ್ಷೆಗಳನ್ನುಕೊಟ್ಟನು. ಅದರ ಫಲವಾಗಿ ಈ ದುಷ್ಟಬುದ್ಧಿಗೂ ಸಹ ಆಗಲೇ ಧರ್ಮಾಧರ್ಮಗಳ ವೈಷಮ್ಯ ಭಾವವು ಮನಸ್ಸಿನಲ್ಲಿ ಉಂಟಾಗುತ್ತಿರುವುದು. ಇದಕ್ಕಿಂತಲೂ ಆಶ್ಚರ್ಯಕರವಾದುದೇನು?

೨೭. ಇತರ ಧರ್ಮಗಳೆಲ್ಲವನ್ನೂ ಆಚರಿಸಲು ಜನ್ಮಾಂತರಗಳಲ್ಲಿ ಫಲವು ಲಭಿಸುವುದು. ಆದರೆ ವೈಶಾಖಮಾಸದ ನಿಯಮಗಳನ್ನು ಪಾಲಿಸುವ ಮನುಷ್ಯರಿಗೆ ಉತ್ತರ ಕ್ಷಣದಲ್ಲಿಯೇ ಫಲಗಳು ಕೈಗೂಡುವುವಲ್ಲವೆ.

೨೮. ಪಾಪಕೃತ್ಯನಿರತನೂ, ದುಷ್ಟಬುದ್ಧಿಯೂ, ದುರಾತ್ಮನೂ ಆದ ಈ ವ್ಯಾಧನಿಗೂ ಕೂಡ ಯಾದೃಚ್ಛಿಕವಾದ ಪಾದರಕ್ಷೆಗಳ ದಾನದ ಫಲವಾಗಿ ಸತ್ತ್ವ ಗುಣೋದಯವುಂಟಾಯಿತು. ಇದು ಅತ್ಯಾಶ್ಚರ್ಯಕರವೇ ಸರಿ.

೨೯. ಯಾವ ಕಾರ್ಯವು ಶ್ರೀಮನ್ನಾರಾಯಣನಿಗೆ ಪ್ರೀತಿಕರವೊ, ಯಾವುದು ಪರಿಶುದ್ಧವಾಗಿ ಆತನಿಗೆ ಸಂತೋಷವನ್ನುಂಟುಮಾಡುವುದೊ, ಅದೇ ಧರ್ಮಕಾರ್ಯವೆಂದು ಧರ್ಮಶಾಸ್ತ್ರಸೂಕ್ಷ್ಮಗಳನ್ನು ತಿಳಿದವರಲ್ಲಿ ಶ್ರೇಷ್ಠರಾದ ಮನುವೇ ಮೊದಲಾದವರು ಹೇಳಿರುವರು.

ಧರ್ಮಾ ಮಾಧವಮಾಸೀಯಾಃ ಪ್ರಿಯಾ ವಿಷ್ಣೋರತೀವ ತೇ ॥ ೩೦ ॥
ಧರ್ಮೈರ್ಮಾಧವಮಾಸೀಯೈರ್ಯಥಾ ತುಷ್ಯತಿ ಕೇಶವಃ ।
ನ ತಥಾ ಸರ್ವದಾನೈಶ್ಚ ತಪೋಭಿಶ್ಚ ಮಹಾಮಖೈಃ ॥ ೩೧ ॥
ನಾನೇನ ಸದೃಶೋ ಧರ್ಮಃ ಸರ್ವಧರ್ಮೇಷು ವಿದ್ಯತೇ ।
ಮಾ ಗಯಾಂ ಯಾಂತು ಮಾ ಗಂಗಾಂ ಮಾ ಪ್ರಯಾಗಂ ತು ಪುಷ್ಕರಂ ॥
ಮಾ ಕೇದಾರಂ ಕುರುಕ್ಷೇತ್ರಂ ಮಾ ಪ್ರಭಾಸಂ ಸ್ಯಮಂತಕಂ ।
ಮಾ ಗೋದಾಂ ಮಾ ಚ ಕೃಷ್ಣಾಂ ಚ ಮಾ ಸೇತುಂ ಮಾ ಮರುದ್ವೃಧಾಂ॥
ವೈಶಾಖಧರ್ಮಮಾಹಾತ್ಮ್ಯಂ ಶಂಸಂತೀ ಚ ಯಥಾಪಗಾ ।
ತತ್ರ ಸ್ನಾತಸ್ಯ ವೈ ವಿಷ್ಣುಃ ಸದ್ಯೋ ಹೃದ್ಯವರುಧ್ಯತೇ ॥ ೩೪ ॥
ಮಾಸೇ ಮಾಧವಸಂಜ್ಞೇಽಸ್ಮಿನ್ ಯತ್ಸ್ವಲ್ಪೇನೈವ ಸಾಧ್ಯತೇ ।
ನ ತದ್ಬಹುವ್ಯಯೈರ್ದಾನೈರ್ನ ಧರ್ಮೈರ್ವಾಽಪಿ ವೈ ಮಖೈಃ ॥ ೩೫ ॥

೩೦. ವೈಶಾಖಮಾಸದಲ್ಲಿ ಮಾಡಬೇಕಾದ ಧರ್ಮಗಳೇ ಮಹಾವಿಷ್ಣುವಿಗೆ ಅತ್ಯಂತ ಪ್ರೀತಿಕರವಾದುವುಗಳು.

೩೧. ಈ ವೈಶಾಖಮಾಸಧರ್ಮಗಳಿಂದ ಕೇಶವನು ಎಷ್ಟುಮಟ್ಟಿಗೆ ಸಂತೋಷಗೊಳ್ಳುವನೊ, ಅಷ್ಟುಮಟ್ಟಿಗೆ ಸಕಲದಾನಗಳಿಂದಲೂ, ತಪಸ್ಸುಗಳಿಂದಲೂ, ಮಹಾಯಜ್ಞಗಳಿಂದಲೂ ಸುಪ್ರೀತವಾಗಲಾರನಷ್ಟೆ.

೩೨. ಸಮಸ್ತ ಧರ್ಮಗಳಲ್ಲಿಯೂ ಇದನ್ನು ಸರಿಹೋಲುವ ಧರ್ಮವು ಎಲ್ಲಿಯೂ ಕಾಣುವುದಿಲ್ಲ. ಇದನ್ನನುಸರಿಸುವ ಜನರು ಗಯಾಕ್ಷೇತ್ರಕ್ಕಾಗಲಿ, ಗಂಗೆಗಾಗಲಿ, ಪುಷ್ಕರಕ್ಕಾಗಲಿ, ಪ್ರಯಾಗಕ್ಕಾಗಲಿ ಹೋಗಿ ಸೇವಿಸಬೇಕಾದುದಿಲ್ಲ.

೩೩. ಕೇದಾರ, ಕುರುಕ್ಷೇತ್ರ, ಪ್ರಭಾಸ, ಸ್ಯಮಂತಪಂಚಕ, ಗೋದಾವರಿ, ಕೃಷ್ಣಾ, ಸೇತುಬಂಧ ರಾಮೇಶ್ವರ, ಮರುದ್ವೃಧ ಮುಂತಾದ ತೀರ್ಥಕ್ಷೇತ್ರಗಳಿಗೂ ಯಾತ್ರೆಗಳನ್ನು ಮಾಡಬೇಕಾದ ಆವಶ್ಯಕತೆಯಿರುವುದಿಲ್ಲ.

೩೪–೩೫. ವೈಶಾಖಮಾಸದಲ್ಲಿ ನಡೆಸಬೇಕಾದ ಧರ್ಮಗಳನ್ನು ಬೋಧಿಸುತ್ತಿರುವ ಸತ್ಕಥೆಯೇ ದಿವ್ಯನದಿಯು. ಅದರಲ್ಲಿ ಸ್ನಾನವನ್ನು ಮಾಡಿದವನಿಗೆ ಮಹಾವಿಷ್ಣುವು ಕ್ಷಿಪ್ರವಾಗಿಯೇ ಹೃದಯದಲ್ಲಿ ತನ್ನ ಸ್ವರೂಪವನ್ನು ತೋರಿಸುತ್ತಾನೆ. ವೈಶಾಖನಾಮಕವಾದ ಈ ಮಾಸದಲ್ಲಿ ಅತಿಸ್ವಲ್ಪ ಧರ್ಮದಿಂದಲೂ ಯಾವ ಪುಣ್ಯವು ಲಭಿಸುವುದೊ, ಅದನ್ನು ಇತರ ಸಮಯಗಳಲ್ಲಿ ಅಪಾರವಾದ ವ್ಯಯದಿಂದಲೂ, ದಾನಗಳಿಂದಲೂ, ಧರ್ಮಕಾರ್ಯಗಳಿಂದಲೂ, ಯಜ್ಞಯಾಗಾದಿಗಳಿಂದಲೂ, ಪಡೆಯಲು ಅಸಾಧ್ಯವಾಗುವುದು.”

ಮಾಸೋಽಯಂ ಮಾಧವೋ ನಾಮ ವ್ಯಾಧಪುಣ್ಯವಿವರ್ಧನಃ ।
ತಸ್ಮಿನ್ ಮಹ್ಯಂ ತ್ವಯಾ ದತ್ತೇ ಪಾದುಕೇಽತಾಪನಾಶನೇ ॥ ೩೬ ॥
ತೇನ ತೇ ಪೂರ್ವಕಾಲೀನಂ ಪುಣ್ಯಂ ಪಾಪಮುಪಾಗತಂ ।
ತುಷ್ಟಸ್ತು ಭಗವಾನ್ ಪ್ರಾಯಃ ಶ್ರೇಯೋ ವ್ಯಾಧ ವಿಧಾಸ್ಯತಿ ॥ ೩೭ ॥
ಅನ್ಯಥಾ ತೇ ಕಥಂ ಭೂಯಾತ್ ಬುದ್ಧಿರೇತಾದೃಶೀ ಶುಭಾ ।
ಮುನಾವೇವಂ ಬ್ರುವಾಣೇ ಚ ಮೃತ್ಯುನಾ ಪ್ರೇರಿತೋ ಬಲೀ ।
ಸಿಂಹೋ ವ್ಯಾಘ್ರವಧಾರ್ಥಾಯ ಪ್ರಾದ್ರವತ್ಕ್ರೋಧವಿಹ್ವಲಃ ॥ ೩೮ ॥
ಮಧ್ಯೇ ದೃಷ್ಟ್ವಾ ಚ ಮಾತಂಗಂ ದೈವಾದ್ದೇವೇನ ಕಲ್ಪಿತಂ ।
ತಂ ಹಂತುಮುದ್ಯತೋಽಗಚ್ಛತ್ ಪದಾಕ್ರಾಂತಂ ವ್ಯವಸ್ಥಿತಂ ॥ ೩೯ ॥
ತಯೋರ್ಯುದ್ಧಮಭೂದ್ರಾಜನ್ ಸಿಂಹಮಾತಂಗಯೋರ್ವನೇ ।
ಶ್ರಾಂತೌ ಯುದ್ಧಾಚ್ಚ ವಿರತೌ ನಿರೀಕ್ಷಂತೌ ಚ ತಸ್ಥತುಃ ॥೪೦॥
ವ್ಯಾಧಮುದ್ದಿಶ್ಯ ಯಚ್ಚೋಕ್ತಂ ಮುನಿನಾ ಚ ಮಹಾತ್ಮನಾ ।
ಸಮಸ್ತಪಾತಕಧ್ವಂಸಿ ದೈವಾಚ್ಛುಶ್ರುವತುಶ್ಚ ತೌ ॥ ೪೧ ॥

---

೩೬–೩೭. "ಎಲೈ ವ್ಯಾಧನೆ! ಈ ಮಾಸವೇ ವೈಶಾಖವೆಂಬ ಹೆಸರಿನಿಂದ ಕೂಡಿ ಸಕಲ ಪುಣ್ಯಕಾರ್ಯಗಳನ್ನೂ ಅಭಿವೃದ್ಧಿಗೊಳಿಸುವುದು. ಅಂತಹ ಸಮಯದಲ್ಲಿ ನನ್ನ ತಾಪವನ್ನು ಪರಿಹರಿಸುವಂತಹ ಪಾದರಕ್ಷೆಗಳನ್ನು ನೀನು ನನಗೆ ದಾನಮಾಡಿರುವೆ. ಆದರಿಂದ ಪೂರ್ವಜನ್ಮಗಳಲ್ಲಿ ನೀನು ಮಾಡಿದ ಪುಣ್ಯವು ಇಂದು ಪರಿಪಕ್ವದಶೆಗೆ ಬಂದಿತು. ಅಯ್ಯಾ ಬೇಡನೆ! ಭಗವಂತನು ಖಂಡಿತವಾಗಿಯೂ ನಿನ್ನಲ್ಲಿ ಸಂತೋಷಗೊಂಡು ನಿನಗೆ ಶ್ರೇಯಸ್ಸನ್ನುಂಟುಮಾಡುವನು.

೩೮. ಇಲ್ಲದಿದ್ದರೆ ನಿನಗೆ ಇಂತಹ ಪರಿಶುದ್ಧವಾದ ಬುದ್ಧಿಯು ಉಂಟಾಗಲು ಕಾರಣವೇನು?" ಇಂತು ಮಹಾಮುನಿಯಾದ ಶಂಖನು ಹೇಳುತ್ತಿರುವಂತೆಯೇ ಅವರ ಸಮೀಪದಲ್ಲಿ ಮೃತ್ಯುದೇವತೆಯಿಂದ ಪ್ರೇರಿತವಾದುದೊ ಎಂಬಂತೆ ಕಾಣುತ್ತಿರುವ ಮಹಾಪರಾಕ್ರಮಿಯಾದ ಸಿಂಹವೊಂದು ಕ್ರೋಧದಿಂದ ಕಿಡಿಕಿಡಿಯಾಗಿ ಒಂದು ಹುಲಿಯನ್ನು ಕೊಲ್ಲುವುದಕ್ಕಾಗಿ ಅಟ್ಟಿಸಿಕೊಂಡು ಬಂದಿತು.

೩೯–೪೦. ದೈವಯೋಗದಿಂದ ಅದಕ್ಕೆ ಆಹಾರವಾಗಿ ಕಲ್ಪಿತವಾಗಿದ್ದ ಆನೆಯೊಂದನ್ನು ಆ ಸಿಂಹವು ಕಂಡು ನಾಲ್ಕು ಪಾದಗಳನ್ನೂ ಬಲವಾಗಿ ನೆಲದಲ್ಲಿ ಊರಿಕೊಂಡು ನಿಂತಿದ್ದ ಅದನ್ನು ಕೊಲ್ಲಲು ಪ್ರಯತ್ನಿಸುತ್ತಿತ್ತು. ಎಲೈ ಮಹಾರಾಜನೆ! ಆ ಅರಣ್ಯದಲ್ಲಿ ಎರಡು ದುಷ್ಟಮೃಗಗಳಾದ ಸಿಂಹ ಮಾತಂಗಗಳಿಗೆ ಭಯಂಕರವಾದ ಯುದ್ಧವು ನಡೆಯಿತು. ಕೆಲವು ಕಾಲದ ಮೇಲೆ ಎರಡೂ ಬಳಲಿ ಯುದ್ಧವನ್ನು ನಿಲ್ಲಿಸಿ ಒಂದನ್ನೊಂದು ನೋಡುತ್ತ ನಿಂತುಕೊಂಡುವು.

೪೧. ಮತ್ತು ಆ ಮಹಾತ್ಮನಾದ ಮುನಿಯು ವ್ಯಾಧನನ್ನು ಕುರಿತು ಹೇಳು

ತೇನೈವ ಮಾಸಮಾಹಾತ್ಮ್ಯಶ್ರವಣೇನಾಮಲಾಶಯೌ ।
ಶಾಪಾನ್ಮುಕ್ತೌ ಚ ತೌ ದೇಹಾತ್ ಸದ್ಯೋಮುಕ್ತೌ ದಿವಂಗತೌ ॥ ೪೨ ॥
ದಿವ್ಯರೂಪಧರೌ ದಿವ್ಯೌ ದಿವ್ಯಗಂಧಾನುಲೇಪನೌ ।
ದಿವ್ಯಂ ವಿಮಾನಮಾರೂಢೌ ದಿವ್ಯನಾರೀನಿಷೇವಿತೌ ॥ ೪೩ ॥
ಸದ್ಯೋವನತಮೂರ್ಧಾನೌ ಪ್ರಾಂಜಲೀ ಚೋಪತಸ್ಥತುಃ ।
ಮುನೀಂದ್ರೋ ಧರ್ಮವಕ್ತಾ ಚ ವ್ಯಾಧಮುದ್ದಿಶ್ಯ ವೈ ಪಥಿ ॥ ೪೪ ॥
ತೌ ದೃಷ್ಟ್ವಾ ವಿಸ್ಮಿತಃ ಪ್ರಾಹ ಕೌ ಯುವಾಮಿತಿ ನಿಶ್ಚಲಃ ।
ದುರ್ಯೋನೌ ತು ಕುತೋ ಜನ್ಮ ಯುವಯೋರ್ವಾ ಕಥಂ ಮೃತಿಃ ॥೪೫॥
ಅಹೇತೋರ್ವಿಪಿನೇ ಚಾಸ್ಮಿನ್ ಪರಸ್ಪರವಧೋದ್ಯತೌ ।
ಏತತ್ಸರ್ವಂ ಸುವಿಸ್ತಾರ್ಯ ಸಮ್ಯಗ್ವದತ ಮೇಽನಘೌ ॥ ೪೬ ॥
ಇತ್ಯುಕ್ತೌ ಮುನಿನಾ ತೇನ ವಚಃ ಪ್ರತ್ಯೂಚತುಃ ಪುನಃ
ಮತಂಗಸ್ಯ ಮುನೇಃ ಪುತ್ರೌ ದಂತಿಲಃ ಕೋಹಲೋಽಪರಃ ॥ ೪೭ ॥

---

ತ್ತಿದ್ದ ಸಕಲಪಾತಕಗಳನ್ನು ನಾಶಮಾಡುವ ವೈಶಾಖಧರ್ಮದ ರಹಸ್ಯಗಳನ್ನೆಲ್ಲ ದೈವಯೋಗದಿಂದ ಆ ಮೃಗಗಳೆರಡೂ ಕಿವಿಗೊಟ್ಟು ಕೇಳಿದುವು.

೪೨. ಆ ಮಾಸಮಾಹಾತ್ಮ್ಯದ ಶ್ರವಣದಿಂದಲೇ ಅವುಗಳು ನಿರ್ಮಲಾಂತಃ ಕರಣವುಳ್ಳವುಗಳಾಗಿ ತಮ್ಮ ಶಾಪದಿಂದ ಬಿಡುಗಡೆಯನ್ನು ಹೊಂದಿ ಆ ಕ್ಷಣ ದಲ್ಲಿಯೇ ದೇಹಗಳನ್ನು ತ್ಯಜಿಸಿ ಸ್ವರ್ಗವನ್ನು ಕುರಿತು ಹೊರಟವು.

೪೩. ಆ ಮೃಗದೇಹಗಳಲ್ಲಿದ್ದ ಪುರುಷರು ಸುಂದರರೂಪಗಳನ್ನು ಧರಿಸಿ, ಸ್ವರ್ಗಯೋಗ್ಯರಾಗಿ, ಉತ್ತಮಪರಿಮಳ ಗಂಧಗಳನ್ನು ಮೈಗಳಿಗೆ ಲೇಪಿಸಿ ಕೊಂಡು, ತಮಗಾಗಿ ಸ್ವರ್ಗದಿಂದ ಇಳಿದು ಬಂದ ವಿಮಾನವನ್ನು ಹತ್ತಿ ಕುಳಿತು ಸ್ವರ್ಗಲೋಕದ ಸ್ತ್ರೀಯರಿಂದ ಪರಿಚರ್ಯೆಯನ್ನು ಸ್ವೀಕರಿಸುತ್ತಿದ್ದರು.

೪೪. ಅವರಿಬ್ಬರೂ ಕ್ಷಣಮಾತ್ರದಲ್ಲಿಯೇ ತಲೆಗಳನ್ನು ಬಾಗಿಸಿ, ಕೈಗಳನ್ನು ಜೋಡಿಸಿಕೊಂಡು, ಮುನಿವರ್ಯನಾದ ಶಂಖನು ವ್ಯಾಧನಿಗೆ ವೈಶಾಖಧರ್ಮ ಗಳನ್ನು ಬೋಧಿಸುತ್ತಿದ್ದ ಸ್ಥಳದ ಮಾರ್ಗದಲ್ಲಿ ನಿಂತಿದ್ದರು.

೪೫. ಅವರನ್ನು ಕಂಡು ಆತನು ಆಶ್ಚರ್ಯಚಕಿತನಾಗಿ ಪ್ರಶ್ನಿಸಿದನು. ನೀವಿಬ್ಬರೂ ಯಾರು? ನಿಮಗೆ ಈ ನೀಚ ಯೋನಿಗಳಲ್ಲಿ ಜನ್ಮಗಳು ಬರಲು ಕಾರಣವೇನು? ನಿಮಗೆ ಮರಣವು ಹೇಗೆ ಸಂಭವಿಸಿತು?

೪೬. ನಿಷ್ಕಾರಣವಾಗಿ ಈ ಅರಣ್ಯದಲ್ಲಿ ಒಬ್ಬರನ್ನೊಬ್ಬರು ವಧಿಸಲು ಹೇಗೆ ಉದ್ಯುಕ್ತರಾದಿರಿ? ಎಲೌ ಪಾಪರಹಿತರಿರಾ! ಇವುಗಳೆಲ್ಲವನ್ನೂ ವಿಸ್ತಾರ ವಾಗಿ ನಮಗೆ ತಿಳಿಯುವಂತೆ ನಿರೂಪಿಸಿರಿ.

೪೭. ಇಂತೆಂದು ಪ್ರಶ್ನೆಮಾಡಲ್ಪಟ್ಟ ಅವರು ಆ ಮಹಾಮುನಿಗೆ ಪ್ರತ್ಯು

**ಶಾಪದೋಷೇಣ ತೌ ಜಾತೌ ನಾಮ್ನಾದಂತಿಲಕೋಹಲೌ ।**
**ರೂಪಯೌವನಸಂಪನ್ನೌ ಸರ್ವವಿದ್ಯಾವಿಶಾರದೌ ॥ ೪೮ ॥**
**ಆವಾಮುದ್ದಿಶ್ಯ ಪ್ರೋವಾಚ ಪಿತಾ ಧರ್ಮಾರ್ಥಕೋವಿದಃ ।**
**ಮತಂಗೋ ನಾಮ ಬ್ರಹ್ಮರ್ಷಿಃ ಸರ್ವಧರ್ಮವಿದುತ್ತಮಃ ॥ ೪೯ ॥**
**ವೈಶಾಖೇ ಮಾಸಿ ತನಯೌ ಮಧುಸೂದನವಲ್ಲಭೇ ।**
**ಪ್ರಪಾಂ ಕುರುತ ಮಾರ್ಗೇ ಚ ಜನಾನ್ವೀಜಯತಂ ಕ್ಷಣಂ ॥ ೫೦ ॥**
**ಮಾರ್ಗೇ ಛಾಯಾಂ ವಿಧತ್ತಾಂ ಚ ಭೂರ್ಯನ್ನಂ ಶೀತಲಾಂಬು ಚ ।**
**ಕುರುತಂ ಸ್ನಾನಮುಷಸಿ ತಥೈವಾರ್ಚಯತಂ ವಿಭುಂ ॥ ೫೧ ॥**
**ಕಥಾಂ ಚ ಶೃಣುತಂ ನಿತ್ಯಂ ಯಯಾ ಬಂಧೋ ನಿವರ್ತತೇ ॥ ೫೨ ॥**
**ಏವಂ ಚ ಬಹುಭಿರ್ವಾಕ್ಯೈಃ ಬೋಧಿತಾವಪಿ ದುರ್ಮತೀ ।**
**ಕ್ರುದ್ಧೋಽಭವಂ ದಂತಿಲೋಽಹಂ ಮತ್ತೋಽಹಂ ಕೋಹಲಾಹ್ವಯಃ ॥**

ತ್ತರವನ್ನು ಹೇಳತೊಡಗಿದನು. ನಾವಿಬ್ಬರೂ ಮತಂಗಮಹರ್ಷಿಯ ಪುತ್ರರು. ನಾನು ದಂತಿಲನೆಂಬುವನು. ಈತನ ಹೆಸರು ಕೋಹಲನು.

೪೮. ದಂತಿಲಕೋಹಲರೆಂಬ ನಾವೀರ್ವರೂ ಶಾಪವನ್ನು ಪಡೆದ ದೋಷದ ಫಲವಾಗಿ ಸಿಂಹ ಮತ್ತು ಆನೆಗಳಾಗಿ ನೀಚಯೋನಿಗಳಲ್ಲಿ ಜನ್ಮಗಳನ್ನು ಪಡೆದೆವು. ಪೂರ್ವದಲ್ಲಿ ನಾವಿಬ್ಬರೂ ಸುಂದರರೂಪದಿಂದಲೂ ಯೌವನದಿಂದಲೂ ಕೂಡಿದವರಾಗಿ ಸಕಲ ವಿದ್ಯೆಗಳಲ್ಲಿಯೂ ಪಾರಂಗತರಾಗಿದ್ದೆವು.

೪೯. ಒಮ್ಮೆ ಧರ್ಮಾರ್ಥಗಳಲ್ಲಿ ನಿಷ್ಣಾತನೂ, ಬ್ರಹ್ಮಜ್ಞಾನಿಯೂ, ಸಕಲ ಧರ್ಮಜ್ಞರಲ್ಲಿ ಉತ್ತಮನೂ ಎನಿಸಿದ ಮತಂಗನೆಂಬ ನಮ್ಮ ತಂದೆಯು ನಮ್ಮಿಬ್ಬರನ್ನೂ ಸಮೀಪಕ್ಕೆ ಕರೆದು ಅಪ್ಪಣೆಮಾಡಿದನು.

೫೦. ಪುತ್ರರಿರಾ! ಮಧುಸೂದನನಿಗೆ ಪರಮಪ್ರಿಯವಾದ ವೈಶಾಖ ಮಾಸದಲ್ಲಿ ನೀವು ದಾರಿಗರಿಗಾಗಿ ಅರವಟ್ಟಿಗೆಯನ್ನು ನಿರ್ಮಿಸಿರಿ. ಜನರಿಗೆ ಒಂದು ಕ್ಷಣವಾದರೂ ಬೀಸಣಿಗೆಯನ್ನಿಟ್ಟು ಆಯಾಸಪರಿಹಾರವನ್ನು ಮಾಡಿರಿ.

೫೧. ದಾರಿಯಲ್ಲಿ ನೆರಳಿನ ಚಪ್ಪರಗಳನ್ನು ಹಾಕಿಸಿರಿ. ಮೃಷ್ಟಾನ್ನಗಳನ್ನೂ ತಂಪಾದ ಪಾನೀಯಗಳನ್ನೂ ಸಿದ್ಧಗೊಳಿಸಿರಿ. ಪ್ರಾತಃಕಾಲಕ್ಕೆ ಸರಿಯಾಗಿ ಬಹಿಸ್ತೀರ್ಥಗಳಲ್ಲಿ ಸ್ನಾನವನ್ನುಮಾಡಿ ಸರ್ವವ್ಯಾಪಿಯಾದ ಶ್ರೀಹರಿಯನ್ನು ವಿಧಿವಿಹಿತರೀತಿಯಿಂದ ಪೂಜಿಸಿರಿ.

೫೨. ಸಂಸಾರಬಂಧನದಿಂದ ಬಿಡುಗಡೆಯನ್ನು ಹೊಂದಲು ಸಾಧನವಾಗಿರುವ ಹರಿಕಥೆಗಳನ್ನು ನಿರಂತರದಲ್ಲಿಯೂ ಕೇಳುತ್ತಿರಿ.

೫೩. ಈ ವಿಧವಾಗಿ ಅನೇಕ ವಾಕ್ಯಗಳಿಂದ ತಂದೆಯು ನಮಗೆ ಉಪದೇಶ

ಕ್ರುದ್ಧಃ ಶಶಾಪ ತೌ ಸದ್ಯಃ ಪಿತಾ ಧರ್ಮೇಷು ಲಾಲಸಃ ॥ ೫೪ ॥
ಪುತ್ರಂ ಚ ಧರ್ಮವಿಮುಖಂ ಭಾರ್ಯಾಂ ಚಾಪ್ರಿಯವಾದಿನೀಂ ।
ಅಬ್ರಹ್ಮಣ್ಯಂ ಚ ರಾಜಾನಂ ತ್ಯಜೇತ್ಸದ್ಯೋ ನ ಚೇತ್ಪತೇತ್ ॥ ೫೫ ॥
ದಾಕ್ಷಿಣ್ಯಾದರ್ಥಲೋಭಾದ್ವಾ ಸಂಸರ್ಗಂ ಯೇ ಪ್ರಕುರ್ವತೇ ।
ತೇ ಸರ್ವೇ ನರಕಂ ಯಾಂತಿ ಯಾವದಿಂದ್ರಾಶ್ಚತುರ್ದಶ ।
ಇತಿ ಜ್ಞಾತ್ವಾ ಶಶಾಪಾವಾಂ ಮದಕ್ರೋಧಪರಿಪ್ಲುತೌ ॥ ೫೬ ॥
ಕ್ರುದ್ಧೋಽಯಂ ದಂತಿಲೋ ಭೂಯಾತ್ ಸಿಂಹಃ ಕ್ರೋಧಪರಿಪ್ಲುತಃ ।
ಮತ್ತಸ್ತು ಕೋಹಲೋ ಭೂಯಾತ್ ಮತ್ತೋ ಮಾತಂಗಯೂಥಪಃ ॥
ಕೃತಾನುತಾಪೌ ಪಶ್ಚಾತ್ತು ಪ್ರಾರ್ಥಯಾವೋ ವಿಮೋಚನಂ ।
ಆವಾಭ್ಯಾಂ ಪ್ರಾರ್ಥಿತೋ ಭೂಯೋ ವಿಶಾಪಂ ಚ ದದೌ ಪಿತಾ ॥ ೫೮ ॥

ವನ್ನು ಮಾಡಿದರೂ ನಾವು ದುರ್ಬುದ್ಧಿಯುಳ್ಳವರಾದೆವು. ದಂತಿಲನಾದ ನಾನು ಕೋಪಗೊಂಡೆನು. ಕೋಹಲನಾಮಕನಾದ ನಾನು ಉನ್ಮತ್ತನಾಗಿದ್ದೆನು.

೫೪. ಇದನ್ನು ಕಂಡು ಧರ್ಮಕಾರ್ಯಗಳಲ್ಲಿಯೇ ನಿರತನಾಗಿದ್ದ ನಮ್ಮ ತಂದೆಯು ಕ್ರೋಧಾವಿಷ್ಟನಾಗಿ ನಮ್ಮಿಬ್ಬರಿಗೂ ಶಾಪವನ್ನು ಕೊಡುವವನಾದನು.

೫೫. ವ್ಯವಹಾರಜ್ಞನಾದವನು ಧರ್ಮವಿಮುಖನಾದ ಪುತ್ರನನ್ನೂ, ಅಪ್ರಿಯಗಳನ್ನಾಡುವ ಹೆಂಡತಿಯನ್ನೂ, ಬ್ರಾಹ್ಮಣಪರಿಪಾಲಕನಲ್ಲದ ರಾಜನನ್ನೂ ತತ್‌ಕ್ಷಣದಲ್ಲಿಯೇ ತ್ಯಾಗಮಾಡಬೇಕು. ಇಲ್ಲದಿದ್ದಲ್ಲಿ ತಾನೇ ಧರ್ಮಭ್ರಷ್ಟನಾಗುವ ಸಂಭವವುಂಟು.

೫೬. ಪತ್ನೀಪುತ್ರರೆಂಬ ಅಭಿಮಾನದಿಂದಾಗಲಿ, ಐಶ್ವರ್ಯವಂತನಾದ ದೊರೆಯೆಂದು ಅರ್ಥಲೋಭದಿಂದಾಗಲಿ ಯಾರು ಅವರೊಡನೆ ಸಹವಾಸವನ್ನು ಬೆಳೆಸುವರೊ, ಅವರೆಲ್ಲರೂ ಹದಿನಾಲ್ಕು ಮಹೇಂದ್ರರಾಗುವ ಪರ್ಯಂತವೂ ನರಕಯಾತನೆಗಳನ್ನನುಭವಿಸುವರು. ಇದನ್ನು ತಿಳಿದೇ ಮತಂಗಮಹರ್ಷಿಯು ಕೋಪಮದಗಳಿಂದ ಉದ್ಧತರಾಗಿರುವ ನಮ್ಮಿಬ್ಬರಿಗೂ ಶಾಪಗಳನ್ನು ಕೊಟ್ಟನು.

೫೭. ಕೋಪಗೊಂಡ ಈ ದಂತಿಲನು ಅಮಿತಕ್ರೋಧಾವಿಷ್ಟವಾದ ಸಿಂಹದ ಜನ್ಮವನ್ನು ಪಡೆಯಲಿ. ಉನ್ಮತ್ತನಾದ ಕೋಹಲನು ಮದೋದಕವನ್ನು ಸ್ರವಿಸುತ್ತ ಆನೆಗಳ ಹಿಂಡಿಗೆ ಕಾವಲುಗಾರನಾದ ಸಲಗನಾಗಿ ಹುಟ್ಟಲಿ.

೫೮. ಈ ಶಾಪಗಳಿಂದ ನಾವು ಪಶ್ಚಾತ್ತಾಪಗೊಂಡವರಾಗಿ ಶಾಪವಿಮೋಚನವನ್ನು ಅನುಗ್ರಹಿಸಬೇಕೆಂದು ಆತನನ್ನು ಬಹುವಿಧವಾಗಿ ಬೇಡಿಕೊಂಡೆವು. ಆಗ ತಂದೆಯಾದ ಮತಂಗಮಹರ್ಷಿಯು ನಮ್ಮ ಪ್ರಾರ್ಥನೆಯನ್ನಂಗೀಕರಿಸಿ ವಿಶಾಪವನ್ನೂ ನಿರೂಪಿಸಿದನು.

ಯುವಾಂ ಪ್ರಾಪ್ಯ ಚ ದುರ್ಯೋನೀ ಕಿಯತ್ಕಾಲಾಂತರೇಽಪಿ ಚ ।
ಸಂಗಮೋ ಭವಿತಾ ತತ್ರ ಪರಸ್ಪರವಧೈಷಿಣೋಃ ॥ ೪೯ ॥
ತಸ್ಮಿನ್ನೇವ ಹಿ ಸಮಯೇ ಸಂವಾದೋ ವ್ಯಾಧಶಂಖಯೋಃ ।
ವೈಶಾಖಧರ್ಮವಿಷಯೋ ದೈವಾದ್ವಾಂ ಶ್ರವಣೇಽಪಿ ಚ ॥ ೬೦ ॥
ಗಮಿಷ್ಯತಿ ಕ್ಷಣಾದೇವ ತಸ್ಮಾನ್ಮುಕ್ತಿರ್ಭವಿಷ್ಯತಿ ।
ಶಾಪಾನ್ಮುಕ್ತೌ ಪೂರ್ವಮೇವ ರೂಪಮಾಸ್ಥಾಯ ಪುತ್ರಕೌ ॥ ೬೧ ॥
ಮಾಮೇವ ಪ್ರಾಪ್ಯ ವಸತಂ ನಾನ್ಯಥಾ ಮೇ ವಚೋ ಭವೇತ್ ।
ಇತಿ ಶಪ್ತೌ ಚ ಗುರುಣಾ ದುರ್ಯೋನಿಂ ಪ್ರಾಪ್ಯ ದುರ್ಮತೀ ॥ ೬೨ ॥
ಪ್ರಾಪ್ಯ ದೈವಾತ್ಸಂಗತಿಂ ಚ ಪರಸ್ಪರವಧೈಷಿಣೌ ।
ಸಂವಾದಂ ಯುವಯೋರ್ದಿವ್ಯಂ ಶುಭಂ ತಂ ಶುಶ್ರುವಾವಹೇ ॥ ೬೩ ॥
ತೇನ ಸದ್ಯೋವಿಮುಕ್ತಿಶ್ಚ ಕ್ಷಣಾದೇವಾಽವಯೋರಭೂತ್ ।
ಇತಿ ಸರ್ವಂ ಸಮಾಖ್ಯಾಯ ಪ್ರಣಮ್ಯ ಚ ಮುನೀಶ್ವರಂ ॥ ೬೪ ॥

೫೯. ನೀವಿಬ್ಬರೂ ನೀಚಯೋನಿಯನ್ನು ಪಡೆಯುವುದರಲ್ಲಿ ಸಂದೇಹವಿಲ್ಲ. ಕೆಲವು ಕಾಲವು ಕಳೆದ ಮೇಲೆ ನಿಮಗೆ ಸಂಗಮವುಂಟಾಗಿ ಸಹಜವೈರವುಳ್ಳ ನಿಮ್ಮಿಬ್ಬರಿಗೂ ಪರಸ್ಪರವಧೆಯ ಅಭಿಲಾಷೆಯಿಂದ ಕಾಳಗವುಂಟಾಗುವುದು.

೬೦–೬೧. ಆ ಸಮಯದಲ್ಲಿಯೇ ನಿಮ್ಮ ಸಮೀಪದಲ್ಲಿ ಶಂಖಬ್ರಾಹ್ಮಣನಿಗೂ, ಒಬ್ಬ ವ್ಯಾಧನಿಗೂ ವೈಶಾಖಮಾಸ ಧರ್ಮಗಳ ವಿಷಯವಾದ ಸಂವಾದವು ನಡೆಯುತ್ತಿರುವುದು. ಅವರ ಮಾತುಗಳು ದೈವಯೋಗದಿಂದ ನಿಮ್ಮ ಕಿವಿಗಳಲ್ಲಿ ಬೀಳುವುವು. ಆ ಶ್ರವಣದಿಂದ ಕ್ಷಣಮಾತ್ರದಲ್ಲಿಯೇ ನಿಮಗೆ ಮೋಕ್ಷವುಂಟಾಗುವುದು. ಮಕ್ಕಳಿರಾ! ಇಂತು ನೀವು ಶಾಪದಿಂದ ಮುಕ್ತರಾಗಿ ನಿಮ್ಮ ಈಗಿನ ರೂಪಗಳನ್ನೇ ಪುನಃ ಪಡೆಯುವಿರಿ.

೬೨. ಬಳಿಕ ನನ್ನ ಸಮೀಪವನ್ನೇ ಸೇರಿ ವಾಸಮಾಡಿಕೊಂಡಿರುವಿರಿ. ಈ ನನ್ನ ಮಾತುಗಳು ಎಂದಿಗೂ ಸುಳ್ಳಾಗುವುದಿಲ್ಲವು. ಇಂತೆಂದು ಪೂಜ್ಯನಾದ ತಂದೆಯಿಂದ ಶಾಪವನ್ನು ಪಡೆದು ದುರ್ಬುದ್ಧಿಗಳಾದ ನಾವಿಬ್ಬರೂ ನೀಚಜನ್ಮಗಳನ್ನು ಪಡೆದೆವು.

೬೩. ಅದೃಷ್ಟವಶದಿಂದ ಇಲ್ಲಿ ನಾವಿಬ್ಬರೂ ಸಂಧಿಸಿ ಒಬ್ಬರನ್ನೊಬ್ಬರು ಕೊಲ್ಲಲು ಉದ್ಯುಕ್ತರಾಗಿದ್ದ ನಾವು ಸರ್ವೋತ್ತಮವೂ ಮಂಗಳಪ್ರದವೂ ಆದ ನಿಮ್ಮಿಬ್ಬರ ಸಂವಾದವನ್ನು ಶ್ರವಣಮಾಡುವವರಾದೆವು.

೬೪. ಆ ವೈಶಾಖಮಾಸಮಾಹಾತ್ಮ್ಯದ ಶ್ರವಣದಿಂದ ಕ್ಷಣಮಾತ್ರದಲ್ಲಿಯೇ ನಮಗೆ ಸದ್ಯೋಮುಕ್ತಿಯುಂಟಾಯಿತು. ಇಂತೆಂದು ದಂತಿಲಕೋಹಲ

ಸಮಾಮಂತ್ರ್ಯಾಭ್ಯನುಜ್ಞಾ ತೌ ಜಗ್ಮತುಃ ಪಿತುರಂತಿಕಂ ।
ತದೇವಂ ಸಂಪ್ರದೃಶ್ಯಾಹ ಮುನಿರ್ವ್ಯಾಧಂ ದಯಾನಿಧಿಃ ॥ ೬೫ ॥
ಪಶ್ಯ ವೈಶಾಖಮಾಹಾತ್ಮ್ಯಶ್ರವಣಸ್ಯ ಫಲಂ ಮಹತ್ ।
ಮುಹೂರ್ತಶ್ರವಣಾದೇವ ತಯೋರ್ಮುಕ್ತಿಃ ಕರೇ ಸ್ಥಿತಾ ॥ ೬೬ ॥
ಇತಿ ಬ್ರುವಾಣಂ ಮುನಿಪುಂಗವಂ ತಂ
ದಯಾನಿಧಿಂ ನಿಸ್ಪೃಹಮುಗ್ರ್ಯಬುದ್ಧಿಂ ।
ವಿಶುದ್ಧಸತ್ವಂ ಸುಕೃತೈಕಪಾತ್ರಂ
ಸ ನ್ಯಸ್ತಶಸ್ತ್ರಃ ಪುನರಾಹ ವ್ಯಾಧಃ ॥ ೬೭ ॥

**ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ದ್ವಿತೀಯೇ ವೈಷ್ಣವಖಂಡೇ ವೈಶಾಖಮಾಸಮಾಹಾತ್ಮ್ಯೇ ನಾರದಾಂಬರೀಷಸಂವಾದೇ "ದಂತಿಲಕೋಹಲ ಮುಕ್ತಿಪ್ರಾಪ್ತಿ ವೃತ್ತಾಂತವರ್ಣನಂ" ನಾಮ ಸಪ್ತದಶೋಽಧ್ಯಾಯಃ**

ರೀರ್ವರೂ ತಮ್ಮ ವೃತ್ತಾಂತವೆಲ್ಲವನ್ನೂ ಆದ್ಯಂತವಾಗಿ ತಿಳಿಸಿ ಆ ಶಂಖಮುನಿಗೆ ಸಾಷ್ಟಾಂಗಪ್ರಣಾಮವನ್ನು ಮಾಡಿದರು.

೬೫. ಬಳಿಕ ಆತನನ್ನು ಶ್ಲಾಘನೆಮಾಡಿ ಆತನ ಅನುಜ್ಞೆಯನ್ನು ಪಡೆದು ತಮ್ಮ ತಂದೆಯಾದ ಮತಂಗಮಹರ್ಷಿಯಿದ್ದೆಡೆಗೆ ಹೊರಟುಹೋದರು. ಇದೆಲ್ಲವನ್ನೂ ನೋಡುತ್ತಿದ್ದ ಶಂಖನು ಕೃಪಾಸಮುದ್ರನಾಗಿ ವ್ಯಾಧನನ್ನು ಕುರಿತು ಹೇಳತೊಡಗಿದನು.

೬೬. ವ್ಯಾಧನೆ! ವೈಶಾಖಮಾಸಮಾಹಾತ್ಮ್ಯವನ್ನು ಕೇವಲ ಶ್ರವಣಮಾಡುವುದರಿಂದಲೇ ಎಂತಹ ಮಹತ್ತರವಾದ ಪುಣ್ಯವು ಲಭಿಸುವುದೆಂಬುದನ್ನು ನೋಡಿದೆಯಾ! ಒಂದು ಮುಹೂರ್ತಕಾಲಮಾತ್ರ ಅದನ್ನು ಶ್ರವಣಮಾಡಿದುದರಿಂದಲೇ ದಂತಿಲಕೋಹಲರೀರ್ವರಿಗೂ ಮೋಕ್ಷವು ಕರತಲಗತವಾಯಿತು.

೬೭. ಮಹರ್ಷಿಶ್ರೇಷ್ಠನೂ, ದಯಾನಿಧಿಯೂ, ಸಕಲಾಶಾವರ್ಜಿತನೂ, ಕುಶಾಗ್ರಬುದ್ಧಿಯೂ, ಶುದ್ಧ ಸತ್ತ್ವಗುಣಪ್ರಾಧಾನ್ಯವುಳ್ಳವನೂ, ಸಮಸ್ತ ಪುಣ್ಯಗಳಿಗೆ ಏಕಾಶ್ರಯನೂ ಆದ ಶಂಖಮುನಿಯು ಇಂತು ನಿರೂಪಿಸುತ್ತಿರಲು ಆ ವ್ಯಾಧನು ತನ್ನ ಅಸ್ತ್ರಶಸ್ತ್ರಗಳೆಲ್ಲವನ್ನೂ ಬಿಸುಟು ಹೇಳತೊಡಗಿದನು.

**ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀ ಸ್ಕಾಂದಮಹಾಪುರಾಣದ ಎರಡನೆಯ ವೈಷ್ಣವಖಂಡದ ವೈಶಾಖಮಾಸಮಾಹಾತ್ಮ್ಯದ ನಾರದಾಂಬರೀಷಸಂವಾದದಲ್ಲಿ "ದಂತಿಲಕೋಹಲ ಮುಕ್ತಿಪ್ರಾಪ್ತಿ ವೃತ್ತಾಂತ ವರ್ಣನ"ವೆಂಬ ಹದಿನೇಳನೆಯ ಅಧ್ಯಾಯವು ಮುಗಿದುದು**

॥ ಶ್ರೀಃ ॥

# ಅಥ ಅಷ್ಟಾದಶೋऽಧ್ಯಾಯಃ

## ವ್ಯಾಧೋಪಾಖ್ಯಾನ–ವ್ಯಾಧಸ್ಯ ಪೂರ್ವಜನ್ಮಕಥನಂ

ವ್ಯಾಧ ಉವಾಚ :–

ಭವತಾನುಗ್ರಹೀತೋऽಸ್ಮಿ ಮುನೇ ಪಾಪೋऽತಿದುಷ್ಟಧೀಃ ।
ದಯಾಳವೋ ಮಹಾಂತೋ ಹಿ ಸ್ವಭಾವಾದೇವ ಸಾಧವಃ ॥ ೧ ॥
ಕ್ವ ವ್ಯಾಧಶ್ಚಾಕುಲೀನೋऽಹಂ ಕ್ವ ಚ ವಾ ಮತಿರೀದೃಶೀ ।
ಕೇವಲಂ ಭವತಾಮೇವ ಮನ್ಯೇऽನುಗ್ರಹಮುತ್ತಮಂ ॥ ೨ ॥
ಅಥ ಸಾಧೋ ಚ ಶಿಷ್ಯೋऽಸ್ಮಿ ಕೃಪಾಪಾತ್ರೋऽಸ್ಮಿ ಮಾನದ ।
ಅನುಗ್ರಾಹ್ಯೋऽಸ್ಮಿ ಪುತ್ರೋऽಸ್ಮಿ ಕೃಪಾಂ ಕುರು ದಯಾನಿಧೇ ॥ ೩ ॥
ಯಥಾ ಮೇ ನ ಪುನರ್ಭೂಯಾತ್ ಅಸನ್ಮತಿರನರ್ಥದಾ ।
ಸದ್ಭಿಸ್ತು ಸಂಗತೇಃ ಕ್ವಾಪಿ ನ ಭೂಯೋ ದುಃಖಮಶ್ನುತೇ ॥ ೪ ॥
ತಸ್ಮಾದ್ಬೋಧಯ ಮಾಂ ವಿಪ್ರ ಸೂಕ್ತೈಸ್ತ್ವೈರ್ವೃಜಿನಾಪಹೈಃ ।
ಯೇನಾಧ್ವನಾ ತರಿಷ್ಯಂತಿ ಸಂಸಾರಾಬ್ಧಿಂ ಮುಮುಕ್ಷವಃ ॥ ೫ ॥

---

## ಕನ್ನಡದ ಅನುವಾದ

### ವ್ಯಾಧೋಪಾಖ್ಯಾನ— ಪೂರ್ವಜನ್ಮಕಥನವು

೧. ವ್ಯಾಧನು ಹೇಳುತ್ತಾನೆ:—ಮಹಾಮುನಿಯೆ! ನಿನ್ನಿಂದ ಅಪಾರವಾದ ಅನುಗ್ರಹವನ್ನು ಪಡೆದಿರುವೆನು. ನಾನು ಪಾಪಿಯು. ಅತ್ಯಂತ ದುಷ್ಟವಾದ ಬುದ್ಧಿಯುಳ್ಳವನು. ಮಹಾತ್ಮರು ದಯಾಳುಗಳೂ ಸ್ವಭಾವದಿಂದಲೇ ಸಾಧುಪುರುಷರೂ ಆಗಿರುವರಲ್ಲವೆ.

೨. ನೀಚಕುಲದಲ್ಲಿ ಜನಿಸಿರುವ ನಾನೆಷ್ಟರವನು? ಇಂತಹ ಸದ್ಧರ್ಮನಿರತವಾಗಿರುವ ಬುದ್ಧಿಯು ಎಷ್ಟರಮಟ್ಟಿನದು? ಈ ಜ್ಞಾನೋದಯವು ಕೇವಲ ನಿಮ್ಮ ಉತ್ತಮಾನುಗ್ರಹದಿಂದಲೇ ಉಂಟಾಗಿರುವುದೆಂದು ತಿಳಿಯುವೆನು.

೩. ಸಾಧುವೆ! ಸತ್ಪುರುಷನೆ! ದಯಾನಿಧಿಯೆ! ನಾನು ನಿನಗೆ ಶಿಷ್ಯನಾಗಿ ಬಂದಿರುವೆನು. ನಿನ್ನ ಕೃಪೆಗೆ ಪಾತ್ರನಾಗಿರುವೆನು. ನಿನ್ನ ಅನುಗ್ರಹವನ್ನಪೇಕ್ಷಿಸುತ್ತಿರುವೆನು. ನಿನ್ನ ಪುತ್ರನಿಗೆ ಸಮಾನವಾಗಿರುವ ನನ್ನಲ್ಲಿ ಕೃಪೆಯನ್ನು ತೋರುವವನಾಗು.

೪. ಸಕಲ ಅನರ್ಥಗಳಿಗೂ ಕಾರಣವಾದ ನೀಚಬುದ್ಧಿಯು ಪುನಃ ನನಗೆ ಎಂದೆಂದಿಗೂ ಉಂಟಾಗದಂತೆ ಅನುಗ್ರಹಿಸು. ಸಜ್ಜನರ ಸಹವಾಸವನ್ನು ಮಾಡಿದ ಮೇಲೆ ಯಾವಾಗಲೂ ಪುನಃ ದುಃಖವುಂಟಾಗುವುದಿಲ್ಲವಷ್ಟೆ.

೫. ಬ್ರಾಹ್ಮಣೋತ್ತಮನೆ! ಆದುದರಿಂದ ಮೋಕ್ಷಾಪೇಕ್ಷಿಗಳಾದವರು

ಸಾಧೂನಾಂ ಸಮಚಿತ್ತಾನಾಂ ತಥಾ ಭೂತದಯಾವತಾಂ ।
ನ ಚ ಹೀನೋತ್ತಮಃ ಕ್ವಾಪಿ ನಾತ್ಮೀಯೋ ಹಿ ಪರಸ್ತಥಾ ॥ ೬ ॥
ಏಕಾಗ್ರ್ಯೇಣ ವಿಚಿಂತ್ಯಾಥ ಚಿತ್ತಶುದ್ಧಿಂ ಚ ಪೃಚ್ಛತಿ ।
ಸರ್ವದೋಷಯುತೋ ವಾಪಿ ಸರ್ವಧರ್ಮೋಜ್ಝಿತೋಽಪಿ ವಾ ॥ ೭ ॥
ಕೃತಾನುತಾಪಶ್ಚ ಯದಾ ಯದಾ ಪೃಚ್ಛತಿ ವೈ ಗುರೂನ್ ।
ತದೈವೋಪದಿಶಂತ್ಯಾದ್ಯಾ ಜ್ಞಾನಂ ಸಂಸಾರಮೋಚಕಂ ॥ ೮ ॥
ಯಥಾ ಗಂಗಾ ಮನುಷ್ಯಾಣಾಂ ಪಾಪನಾಶಸ್ಯ ಭಾವಿನೀ ।
ತಥಾ ಮಂದಸಮುದ್ಧಾರಸ್ವಭಾವಾಃ ಸಾಧವಃ ಸ್ಮೃತಾಃ ॥ ೯ ॥
ಮಾ ವಿಚಾರಯ ಮಾಂ ಬೋದ್ಧುಂ ದಯಾಲೋ ಭಕ್ತವತ್ಸಲ ।
ಶುಶ್ರೂಷುತ್ವಾನ್ನತತ್ವಾಚ್ಚ ಶುದ್ಧತ್ವಾತ್ತವ ಸಂಗತೇಃ ॥ ೧೦ ॥

---

ಸಂಸಾರಸಾಗರವನ್ನು ಯಾವ ಉಪಾಯದಿಂದ ಕಡೆಹಾಯುವರೊ, ಅದನ್ನು ಕಲ್ಮಷನಾಶಕಗಳಾದ ನಿನ್ನ ಸವಿನುಡಿಗಳಿಂದ ನನಗೆ ಉಪದೇಶಮಾಡು.

೬. ಸಾಧುಗಳೂ, ಸಮಬುದ್ಧಿಯುಳ್ಳವರೂ, ಸರ್ವಭೂತದಯಾಪರರೂ ಆದ ನಿನ್ನಂತಹ ಮಹಾಪುರುಷರಿಗೆ ನೀಚರೆಂಬುವರಲ್ಲಿ ಅವಜ್ಞೆಯಾಗಲಿ, ಉತ್ತಮರಲ್ಲಿ ಪ್ರೀತಿಯಾಗಲಿ, ತಮ್ಮವರಲ್ಲಿ ಅಭಿಮಾನವಾಗಲಿ, ಪರರಲ್ಲಿ ದ್ವೇಷವಾಗಲಿ ಇರಲಾರದು.

೭. ಸಮಸ್ತ ದೋಷಗಳಿಂದ ಕೂಡಿದವನಾಗಲಿ, ಸಕಲಧರ್ಮಗಳಿಂದ ದೂರನಾದವನಾಗಲಿ, ತದೇಕನಿಷ್ಠವಾದ ಮನಸ್ಸಿನಿಂದ ಪೂರ್ವಾಪರಗಳನ್ನಾಲೋಚಿಸಿಯೇ ಚಿತ್ತಶುದ್ಧಿಯಾಗಬೇಕೆಂದು ಮಹಾತ್ಮರನ್ನು ಪ್ರಶ್ನೆಮಾಡುವನು.

೮. ಯಾವಾಗ ತನ್ನ ಪೂರ್ವವ್ಯಾಪಾರಗಳಿಗೆ ಪಶ್ಚಾತ್ತಾಪವನ್ನು ಪಡೆಯುವನೊ, ಆಗ ಮಾತ್ರ ಮನುಷ್ಯನು ಗುರುಗಳ ಬಳಿಗೆ ಹೋಗಿ ಮೋಕ್ಷೋಪಾಯಯವನ್ನು ಕುರಿತು ಕೇಳುವನು. ಅಂತಹವರಿಗೇ ಗುರುಗಳೂ ಕ್ಷಿಪ್ರವಾಗಿ ಸಂಸಾರಬಂಧವನ್ನು ನೀಗಿಸುವ ಪರಮಾತ್ಮಜ್ಞಾನವನ್ನು ಉಪದೇಶಿಸುವರು.

೯. ಗಂಗಾನದಿಯು ಸಕಲಮನುಷ್ಯರ ಪಾಪಗಳನ್ನೂ ನಾಶಗೊಳಿಸುವ ಸ್ವಭಾವವುಳ್ಳದಾಗಿರುವಂತೆಯೇ ಸಾಧುಗಳೂ ಸಹ ಮಂದಬುದ್ಧಿಗಳಾದ ನಮ್ಮಂತಹ ಜನರನ್ನು ಉದ್ಧಾರಮಾಡುವ ಸ್ವಭಾವವುಳ್ಳವರಾಗಿರುವರೆಂದು ಕೇಳಿರುವೆನು.

೧೦. ದಯಾಪರನೂ ಭಕ್ತವತ್ಸಲನೂ ಆದ ಬ್ರಾಹ್ಮಣೋತ್ತಮನೆ! ನಿನ್ನ ಉಪದೇಶಗಳನ್ನು ಕೇಳಿ, ನಿನಗೇ ಶರಣಾಗತನಾಗಿ, ನಿನ್ನ ಸಹವಾಸದಿಂದ ಪರಿಶುದ್ಧನಾಗಿರುವ ನನಗೆ ಈ ವಿಷಯಗಳನ್ನು ನಿರೂಪಿಸಲು ನೀನು ವಿಚಾರ ಮಾಡಬೇಕಾದುದಿಲ್ಲ.

**ಇತಿ ವ್ಯಾಧವಚಃ ಶ್ರುತ್ವಾ ಪುನರ್ವಿಸ್ಮಿತಮಾನಸಃ ।**
**ಸಾಧುಸಾಧ್ವಿತಿ ಸಂಭಾಷ್ಯ ಧರ್ಮಾನೇತಾನುವಾಚ ಹ ॥ ೧೧ ॥**

**ಶಂಖ ಉವಾಚ :—**

**ವಿಷ್ಣುಪ್ರೀತಿಕರಾನ್ ದಿವ್ಯಾನ್ ಸಂಸಾರಾಬ್ಧಿವಿಮೋಚಕಾನ್ ।**
**ಕುರು ಧರ್ಮಾಂಶ್ಚ ವೈಶಾಖೇ ಯದಿ ವ್ಯಾಧ ಶಮಿಚ್ಛಸಿ ॥ ೧೨ ॥**
**ಆತಪೋ ಬಾಧತೇ ಘೋರೋ ನ ಛಾಯಾ ನಾಂಬು ಚಾತ್ರ ಚ ।**
**ತಸ್ಮಾತ್ಸ್ಥಲಾಂತರಂ ಯಾವೋ ಯತ್ರ ಛಾಯಾ ತು ವರ್ತತೇ ॥ ೧೩ ॥**
**ತತ್ರ ಗತ್ವಾ ಜಲಂ ಪೀತ್ವಾ ಸುಚ್ಛಾಯಾಂ ಚ ಸಮಾಶ್ರಿತಃ ।**
**ತತ್ರ ತೇ ವರ್ಣಯಿಷ್ಯಾಮಿ ಮಾಹಾತ್ಮ್ಯಂ ಪಾಪನಾಶನಂ ।**
**ವಿಷ್ಣೋರ್ಮಾಧವಮಾಸಸ್ಯ ಯಥಾದೃಷ್ಟಂ ಯಥಾಶ್ರುತಂ ॥ ೧೪ ॥**
**ಇತ್ಯುಕ್ತೋ ಮುನಿನಾ ತೇನ ವ್ಯಾಧಃ ಪ್ರಾಹ ಕೃತಾಂಜಲಿಃ ।**
**ಇತೋ ವಿದೂರೇ ಸಲಿಲಂ ವರ್ತತೇ ಚ ಸರೋವರೇ ॥ ೧೫ ॥**

೧೧. ಇಂತೆಂದು ಹೇಳಿದ ವ್ಯಾಧನ ಮಾತುಗಳನ್ನು ಕೇಳಿ ಶಂಖಬ್ರಾಹ್ಮಣನು ಆತನ ಕುಶಲಬುದ್ಧಿಗಾಗಿ ತನ್ನಲ್ಲಿಯೇ ಆಶ್ಚರ್ಯಗೊಳ್ಳುತ್ತ ಸಾಧುಕಾರಗಳನ್ನು ಮಾಡಿ ವೈಶಾಖ ಧರ್ಮಗಳನ್ನು ಆತನಿಗೆ ನಿರೂಪಿಸತೊಡಗಿದನು.

೧೨. ಶಂಖನು ಹೇಳುತ್ತಾನೆ:—ಎಲೈ ವ್ಯಾಧನೆ! ನಿನಗೆ ಸುಖವನ್ನು ಪಡೆಯಬೇಕೆಂಬ ಅಭಿಲಾಷೆಯಿದ್ದರೆ ವಿಷ್ಣುಪ್ರೀತಿಕರಗಳೂ, ಸರ್ವಶ್ರೇಷ್ಠಗಳೂ, ಸಂಸಾರಸಾಗರದಿಂದ ಕಡೆಹಾಯಿಸುವುವುಗಳೂ ಎನಿಸಿದ ಧರ್ಮಕಾರ್ಯಗಳನ್ನು ವೈಶಾಖಮಾಸದಲ್ಲಿ ಆಚರಿಸು.

೧೩. ಈ ಪ್ರದೇಶದಲ್ಲಿ ಸಹಿಸಲಸಾಧ್ಯವಾದ ಬಿಸಿಲು ಬಾಧಿಸುತ್ತಿರುವುದು. ನೆರಳಾಗಲಿ ನೀರಾಗಲಿ ಕಾಣುವುದಿಲ್ಲ. ಆದುದರಿಂದ ತಂಪಾಗಿರುವ ಮರದ ನೆರಳಿರುವ ಮತ್ತೊಂದು ಸ್ಥಳಕ್ಕೆ ಹೋಗೋಣ.

೧೪. ಅಲ್ಲಿಗೆ ಹೋಗಿ ಶೀತಲೋದಕವನ್ನು ಕುಡಿದು ನೆರಳನ್ನಾಶ್ರಯಿಸಿ ಸ್ವಲ್ಪ ವಿಶ್ರಾಂತಿಯನ್ನು ಪಡೆದು ಬಳಿಕ ಸಕಲ ಪಾತಕಗಳನ್ನೂ ನಾಶಗೊಳಿಸುವ ವೈಶಾಖ ಮಾಹಾತ್ಮ್ಯವನ್ನು ನಿನಗೆ ಯಥಾಯೋಗ್ಯವಾಗಿ ವರ್ಣಿಸುವೆನು. ಮಹಾವಿಷ್ಣುವಿಗೆ ಪ್ರಿಯವಾದ ವೈಶಾಖಮಾಸದ ವಿಷಯದಲ್ಲಿ ನಾನು ಕಂಡುದನ್ನೂ ಕೇಳಿರುವುದನ್ನೂ ನಿನಗೆ ತಿಳಿಸುವೆನು.

೧೫. ಇಂತೆಂದು ಆ ಮಹಾಮುನಿಯು ಹೇಳಲು ವ್ಯಾಧನು ಅಂಜಲಿ ಬಂಧವನ್ನು ಮಾಡಿಕೊಂಡು ಬಿನ್ನವಿಸಿದನು. ಇಲ್ಲಿಗೆ ಸಮೀಪದಲ್ಲಿಯೇ ಒಂದು ಸರೋವರವಿರುವುದು. ಅದರಲ್ಲಿ ಪರಿಶುದ್ಧವಾದ ಉದಕವು ಲಭಿಸುವುದು.

ಕಪಿತ್ಥಾಸ್ತತ್ರ ವೈ ಸಂತಿ ಫಲಭಾರೇಣ ಪೀಡಿತಾಃ ।
ಗಚ್ಛಾವಸ್ತತ್ರ ಸಂತುಷ್ಟಿರ್ಭವಿತಾ ನಾತ್ರ ಸಂಶಯಃ ॥ ೧೬ ॥
ವ್ಯಾಧೇನೈವಂ ಸಮಾದಿಷ್ಟಸ್ತೇನ ಸಾಕಂ ಯಯೌ ಮುನಿಃ ।
ಕಿಯದ್ದೂರಂ ತತೋ ಗತ್ವಾ ದದರ್ಶಾಗ್ರೇ ಸರೋವರಂ ॥ ೧೭ ॥
ಬಕಕಾರಂಡವಾಕೀರ್ಣಂ ಚಕ್ರವಾಕೋಪಶೋಭಿತಂ ।
ಹಂಸಸಾರಸಕ್ರೌಂಚಾದ್ಯೈಃ ಸಮಂತಾತ್ಪರಿಶೋಭಿತಂ ॥ ೧೮ ॥
ಕೀಚಕೈಶ್ಚ ಸುಘೋಷೈಶ್ಚ ಕೂಜಿತಂ ಭ್ರಮರೈರಪಿ ।
ನಕ್ರಕಚ್ಛಪಮೀನಾದ್ಯೈರ್ವಿಗಾಹ್ಯಂ ಸುಮನೋಹರಂ ॥ ೧೯ ॥
ಕುಮುದೋತ್ಪಲಕಹ್ಲಾರಪುಂಡರೀಕಾದಿಭಿರ್ಮಹತ್ ।
ಶತಪತ್ರೈಃ ಕೋಕನದೈಃ ಸಮಂತಾತ್ಪರಿಶೋಭಿತಂ ॥ ೨೦ ॥
ಪಕ್ಷಿಣಾಂ ಚ ಕಲಾರಾವೈರ್ಮುಖರಂ ನಯನೋತ್ಸವಂ ।
ತಟೇ ಕೀಚಕಗುಲ್ಮೈಶ್ಚ ತಥಾ ವೃಕ್ಷೈಶ್ಚ ಶೋಭಿತಂ ॥ ೨೧ ॥

---

೧೬. ಹಣ್ಣುಗಳ ಭಾರದಿಂದ ನೆಲಕ್ಕೆ ಬಾಗಿರುವ ಬೇಲದ ಮರಗಳು ಅಲ್ಲಿ ಅನೇಕವಾಗಿ ಬೆಳೆದಿರುವುವು. ನಾವಿಬ್ಬರೂ ಅಲ್ಲಿಗೆ ಹೋಗೋಣ. ಅಲ್ಲಿ ನಿನಗೆ ಖಂಡಿತವಾಗಿಯೂ ಸಂತೋಷವಾಗುವುದು. ಸಂದೇಹವಿಲ್ಲ.

೧೭. ಇಂತು ವ್ಯಾಧನಿಂದ ವಿಜ್ಞಾಪನೆಯನ್ನು ಕೇಳಿದ ಆ ಮನಿವರ್ಯನು ಆತನೊಡನೆ ಹೊರಟನು. ಸ್ವಲ್ಪ ದೂರ ನಡೆದ ಮೇಲೆ ಮುಂದುಗಡೆಯಲ್ಲಿ ಉತ್ತಮವಾದ ಸರೋವರವೊಂದನ್ನು ಕಂಡು ಸಂತುಷ್ಟನಾದನು.

೧೮. ಬಕಪಕ್ಷಿಗಳು, ಕಾರಂಡವಗಳು, ಚಕ್ರವಾಕಗಳು, ಹಂಸಗಳು, ಸಾರಸಗಳು, ಕ್ರೌಂಚಗಳು ಮುಂತಾದ ಅನೇಕ ಜಾತಿಗಳ ಪಕ್ಷಿಗಳಿಂದ ಆ ಪ್ರದೇಶವೆಲ್ಲವೂ ಅತ್ಯಂತ ರಮಣೀಯವಾಗಿ ಕಾಣುತ್ತಿದ್ದಿತು.

೧೯. ಶಬ್ದಮಾಡುತ್ತಿರುವ ಬಿದಿರುಮೆಳೆಗಳಿಂದಲೂ, ಝೇಂಕರಿಸುತ್ತಿರುವ ದುಂಬಿಗಳಿಂದಲೂ ಕೂಡಿದುದಾಗಿ ನೀರಿನಲ್ಲಿ ಮುಳುಗಿ ತೇಲುತ್ತಿರುವ ಮೊಸಳೆಗಳು, ಆಮೆಗಳು, ಮೀನುಗಳೇ ಮುಂತಾದ ಜಲಜಂತುಗಳಿಂದ ಆ ಸರೋವರವು ಮನೋಹರವಾಗಿದ್ದಿತು.

೨೦. ಮತ್ತು ಕುಮುದ, ಉತ್ಪಲ, ಕಲ್ಹಾರ, ಕಮಲ, ನೂರೆಲೆಯ ಕೆಂದಾವರೆಗಳೇ ಮೊದಲಾದ ಪುಷ್ಪ ಸಮೂಹಗಳಿಂದ ಜಲವು ಕಾಣದಂತಾಗಿ ನೋಡುವವರಿಗೆ ಮಹದಾನಂದವನ್ನು ಉಂಟುಮಾಡುತ್ತಿದ್ದಿತು.

೨೧. ಜಲಚರಪಕ್ಷಿಗಳ ಕಲಕಲ ಧ್ವನಿಯಿಂದ ಕೂಡಿದ ಆ ಜಲಾಶಯವು ನೋಡುವವರ ಕಣ್ಣುಗಳಿಗೆ ಹಬ್ಬವನ್ನು ಮಾಡುತ್ತ ತೀರಗಳಲ್ಲಿ ಬೆಳೆದಿರುವ ಬಿದಿರುಮೆಳೆಗಳಿಂದಲೂ ಮಹಾ ವೃಕ್ಷಗಳಿಂದಲೂ ಶೋಭಿಸುತ್ತಿದ್ದಿತು.

ವಟೈಃ ಕರಂಜೈರ್ನೀಪೈಶ್ಚ ಚಿಂಚಿಣೀಭಿಸ್ತಥೈವ ಚ ।
ನಿಂಬಪ್ಲಕ್ಷಪ್ರಿಯಾಲೈಶ್ಚ ಚಂಪಕೈರ್ಬಕುಲೈಃ ಶುಭೈಃ ॥ ೨೨ ॥
ಪುನ್ನಾಗೈಸ್ತುಂಬರೈಶ್ಚೈವ ಕಪಿತ್ಥಾಮಲಕೈರಪಿ ।
ನಿಷ್ಪೇಷಣೈಶ್ಚ ಜಂಬೂಭಿಃ ಸಮಂತಾತ್ಪರಿಶೋಭಿತಂ ॥ ೨೩ ॥
ವನ್ಯಮಾತಂಗಸಾರಂಗವರಾಹಮಹಿಷಾದಿಭಿಃ ।
ಶಶೈಶ್ಚ ಶಲ್ಲಕೈಶ್ಚೈವ ಗವಯೈರುಪಶೋಭಿತಂ ॥ ೨೪ ॥
ಖಡ್ಗನಾಭಿಮೃಗಾದ್ಯೈಶ್ಚ ವ್ಯಾಘ್ರೈಃ ಸಿಂಹೈರ್ವೃಕೈರಪಿ ।
ಖರಾಂತಕೈಶ್ಚ ಶರಭೈಶ್ಚಮರೀಭಿಃ ಸುಮಂಡಿತಂ ॥ ೨೫ ॥
ಶಾಖಾಚ್ಛಾಖಾಂತರಂ ಶೀಘ್ರಂ ಪ್ಲವಮಾನೈಃ ಪ್ಲವಂಗಮೈಃ।
ಮಾರ್ಜಾರೈಶ್ಚೈವ ಭಲ್ಲೂಕೈರ್ಭೀಷಣಂ ರುರುಭಿಸ್ತಥಾ ॥ ೨೬ ॥
ಝಿಲ್ಲೀಶಬ್ದೈಶ್ಚ ಕ್ರೇಂಕಾರೈಃ ಕೀಚಕಾನಾಂ ರವೈಸ್ತಥಾ ।
ಘೋರವಾಯುವಿನಿರ್ಘಾತದಾರುಭಾರೈಃ ಸಮನ್ವಿತಂ ॥ ೨೭ ॥
ಏತಾದೃಶಂ ಸರೋ ದಿವ್ಯಂ ವ್ಯಾಧೇನೈವ ಪ್ರದರ್ಶಿತಂ ।
ದದರ್ಶ ಮುನಿಶಾರ್ದೂಲಸ್ತೃಷಯಾ ಬಾಧಿತೋ ಭೃಶಂ ॥ ೨೮ ॥

---

೨೨–೨೩. ಆಲ, ಕರಂಜ, ಕದಂಬ, ಹುಣಸೆ, ಬೇವು, ಅತ್ತಿ, ಪ್ರಿಯಾಲ, ಸಂಪಗೆ, ಬಕುಳ, ನಾಗಕೇಸರ, ತುಂಬರ, ಬೇಲ, ನೆಲ್ಲಿ, ನೇರಳೆ ಮುಂತಾದ ಬಗೆಬಗೆಯ ವೃಕ್ಷಗಳು ಆ ಸರೋವರದ ಸುತ್ತಲೂ ಬೆಳೆದು ರಂಜಿಸುತ್ತಿದ್ದುವು.

೨೪. ಕಾಡಿನಲ್ಲಿರುವ ಆನೆಗಳೂ, ಜಿಂಕೆಗಳೂ, ಕಾಡುಹಂದಿಗಳೂ, ಕಾಡೆಮ್ಮೆಗಳೂ, ಮೊಲಗಳೂ, ಮುಳ್ಳುಹಂದಿಗಳೂ, ಗವಯ ಮೃಗಗಳೂ ತಮ್ಮ ಬಾಯಾರಿಕೆಯನ್ನು ತೀರಿಸಿಕೊಳ್ಳಲು ಅಲ್ಲಿಗೆ ಬಂದು ಸೇರುತ್ತಿದ್ದವು.

೨೫. ಗೇಂಡಾಮೃಗಗಳು, ಕಸ್ತೂರಿ ಜಿಂಕೆಗಳು, ಹುಲಿಗಳು, ಸಿಂಹಗಳು, ತೋಳಗಳು, ಗರ್ದಭಗಳು, ಶರಭಗಳು, ಚಮರೀ ಮೃಗಗಳು ಮುಂತಾದುವುಗಳಿಂದ ಆ ಅರಣ್ಯಪ್ರದೇಶವೆಲ್ಲವೂ ಕಿಕ್ಕಿರಿದಿದ್ದಿತು.

೨೬. ಮರಗಳ ಕೊಂಬೆಗಳಿಂದ ಕೊಂಬೆಗಳಿಗೆ ಹಾರುತ್ತಿರುವ ಕೋತಿಗಳಿಂದಲೂ, ಬೆಕ್ಕುಗಳಿಂದಲೂ, ಕರಡಿಗಳಿಂದಲೂ, ರುರುಗಳೆಂಬ ಜಿಂಕೆಗಳಿಂದಲೂ ಅರಣ್ಯವು ಭಯವನ್ನುಂಟುಮಾಡುತ್ತಿದ್ದಿತು.

೨೭. ಝಿಲ್ಲೀಕೀಟಗಳ ಧ್ವನಿಯಿಂದಲೂ. ಆನೆಗಳ ಕ್ರೇಂಕಾರಗಳಿಂದಲೂ, ಬಿದಿರುಗಳು ಉಜ್ಜುವ ಧ್ವನಿಯಿಂದಲೂ, ಪ್ರಚಂಡವಾದ ಗಾಳಿಯ ಹೊಡೆತಕ್ಕೆ ಸಿಕ್ಕಿ ಮುರಿದು ಬೀಳುತ್ತಿರುವ ಮರಗಳ ಛಟಛಟಾಶಬ್ದದಿಂದಲೂ ಅರಣ್ಯವು ತುಂಬಿದ್ದಿತು.

೨೮. ವ್ಯಾಧನಿಂದ ತೋರಿಸಲ್ಪಟ್ಟ ಈ ವಿಧವಾದ ದಿವ್ಯ ಸರೋವರವನ್ನು

**ಸ್ನಾತ್ವಾ ಮಧ್ಯಾಹ್ನವೇಲಾಯಾಂ ಸರಸ್ಯಸ್ಮಿನ್ಮನೋರಮೇ ॥ ೨೯ ॥**
**ವಾಸಸೀ ಪರಿಧಾಯಾಥ ಕೃತ್ವಾ ಮಧ್ಯಾಹ್ನಕೀಃ ಕ್ರಿಯಾಃ ।**
**ದೇವಪೂಜಾಂ ತತಃ ಕೃತ್ವಾ ಭುಕ್ತ್ವಾ ಫಲಮತಂದ್ರಿತಃ ॥ ೩೦ ॥**
**ವ್ಯಾಧೋಪನೀತಂ ಸುಸ್ವಾದು ಕಪಿತ್ಥಂ ಶ್ರಮಹಾರಿ ಚ ।**
**ಸುಖೋಪವಿಷ್ಟಃ ಪಪ್ರಚ್ಛ ವ್ಯಾಧಂ ಧರ್ಮರತಂ ಪುನಃ ॥ ೩೧ ॥**
**ಕಿಂ ವಕ್ತವ್ಯಂ ಮಯಾ ಹ್ಯದ್ಯ ತವಾದೌ ಧರ್ಮತತ್ಪರ ।**
**ಧರ್ಮಾಶ್ಚ ಬಹವಃ ಸಂತಿ ನಾನಾಮಾರ್ಗಾಃ ಪೃಥಗ್ವಿಧಾಃ ॥ ೩೨ ॥**
**ತತ್ರ ವೈಶಾಖಮಾಸೋಕ್ತಾಃ ಸೂಕ್ಷ್ಮಾ ಅಪಿ ಮಹಾರ್ಥದಾಃ ।**
**ಸರ್ವೇಷಾಮೇವ ಜಂತೂನಾಮಿಹಾಮುತ್ರ ಫಲಪ್ರದಾಃ ॥ ೩೩ ॥**
**ಯತ್ಪ್ರಷ್ಟವ್ಯಂ ಮನಸಿ ತೇ ಯಚ್ಚಾದೌ ತಚ್ಛ ಪೃಚ್ಛ್ಯತಾಂ ।**
**ಇತ್ಯುಕ್ತೋ ಮುನಿನಾ ತೇನ ವ್ಯಾಧಃ ಪ್ರಾಂಜಲಿರಬ್ರವೀತ್ ॥ ೩೪ ॥**

---

ಬಾಯಾರಿಕೆಯಿಂದ ಬಹಳ ಬೇಗುದಿಗೊಂಡ ಆ ಬ್ರಾಹ್ಮಣೋತ್ತಮನು ನೋಡುವವನಾದನು.

೨೯–೩೧. ಬಳಿಕ ಮಧ್ಯಾಹ್ನ ಸಮಯದಲ್ಲಿ ಮನೋಹರವಾದ ಆ ಕೊಳದಲ್ಲಿ ಮಿಂದು, ಮಡಿಗಳನ್ನುಟ್ಟು, ಮಧ್ಯಾಹ್ನೋಚಿತಗಳಾದ ಆಹ್ನಿಕಕ್ರಿಯೆಗಳೆಲ್ಲವನ್ನೂ ಮುಗಿಸಿ, ಬಳಿಕ ದೇವರ ಪೂಜೆಯನ್ನೆಸಗಿ, ವ್ಯಾಧನು ಆರಿಸಿ ತಂದ ರುಚಿಕರಗಳೂ, ಆಯಾಸಹರಗಳೂ ಆದ ಬೇಲದ ಹಣ್ಣುಗಳನ್ನು ಸೇವನೆ ಮಾಡಿ, ಮರದ ನೆರಳಿನಲ್ಲಿ ಸುಖಾಸನಾಸೀನನಾಗಿ, ಧರ್ಮಕಾರ್ಯಗಳಲ್ಲಿ ನಿರತನಾಗಿದ್ದ ಆ ವ್ಯಾಧನನ್ನು ಕುರಿತು ಮತ್ತೆ ಹೇಳತೊಡಗಿದನು.

೩೨. ಅಯ್ಯಾ, ಧರ್ಮೈಕನಿರತನಾದ ಬೇಡನೆ! ಮೊದಲು ನಿನಗೆ ಹೇಳಬೇಕಾದುದೇನು? ನನಗೆ ತಿಳಿಸು. ಧರ್ಮಗಳು ಅನೇಕ ಮಾರ್ಗಗಳನ್ನನುಸರಿಸಿರುವುವು. ಅವುಗಳಿಂದ ಲಭಿಸುವ ಫಲಗಳೂ ಬಹು ವಿಧಗಳಾಗಿರುವುವು.

೩೩. ಅವುಗಳೆಲ್ಲವುಗಳಲ್ಲಿಯೂ ವೈಶಾಖಮಾಸಧರ್ಮಗಳೇ ಅತ್ಯಂತ ಸೂಕ್ಷ್ಮಗಳೂ ಸುಲಭಸಾಧ್ಯಗಳೂ ಆದರೂ ಮಹಾ ಪುಣ್ಯವನ್ನು ಸಂಪಾದಿಸಿ ಕೊಡುವುವು. ಸಕಲ ಪ್ರಾಣಿಗಳಿಗೂ ಈ ಲೋಕದಲ್ಲಿಯೂ ಪರಲೋಕಗಳಲ್ಲಿಯೂ ಫಲಪ್ರದಗಳಾಗಿರುವುವು.

೩೪. ನಿನ್ನ ಮನಸ್ಸಿನಲ್ಲಿ ಯಾವುದನ್ನು ಕೇಳಬೇಕೆಂಬ ಕುತೂಹಲವುಂಟಾಗಿರುವುದೊ, ಮೊದಲಿನಲ್ಲಿ ಯಾವುದನ್ನು ತಿಳಿಯಬಯಸುವೆಯೊ, ಅದನ್ನು ಕೇಳುವವನಾಗು. ಇಂತೆಂದು ಮುನಿವರ್ಯನಾದ ಶಂಖನು ಹೇಳಲು ವ್ಯಾಧನು ಅಂಜಲಿಬಂಧವನ್ನು ಮಾಡಿಕೊಂಡು ಪ್ರಶ್ನೆಮಾಡಿದನು.

ವ್ಯಾಧ ಉವಾಚ :—

ಕೇನ ವಾ ಕರ್ಮಣಾ ಜಾಽಸೀದ್ವ್ಯಾಧಜನ್ಮ ತಮೋಮಯಂ ।
ಕೇನ ವಾ ಚೇದೃಶೀ ಬುದ್ಧಿಃ ಸಂಗತಿರ್ವಾ ಮಹಾತ್ಮನಃ ॥ ೩೫ ॥
ಏತಚ್ಚಾನ್ಯತ್ಸಮಾಚಕ್ಷ್ವ ಯದಿ ಮಾಂ ಮನ್ಯಸೇ ಪ್ರಭೋ ।
ಇತ್ಯುಕ್ತಃ ಪುನರಪ್ಯಾಹ ಶಂಖೋನಾಮ ಮಹಾಮುನಿಃ ।
ಮೇಘಗಂಭೀರಯಾ ವಾಚಾ ಸ್ಮಯಮಾನಮುಖಾಂಬುಜಃ ॥ ೩೬ ॥

ಶಂಖ ಉವಾಚ :—

ಶಾಕಲೇ ನಗರೇ ಪೂರ್ವಂ ದ್ವಿಜಸ್ತ್ವಂ ವೇದಪಾರಗಃ ।
ಸ್ತಂಬೋನಾಮ ಮಹಾತೇಜಾಸ್ತಥಾ ಶ್ರೀವತ್ಸಗೋತ್ರಜಃ ॥ ೩೭ ॥
ತವೇಷ್ಟಾ ಗಣಿಕಾ ಕಾಚಿದಾಸೀತ್ತತ್ಸಂಗದೋಷತಃ ।
ತ್ಯಕ್ತ್ವಾ ನಿತ್ಯಕ್ರಿಯಾ ನಿತ್ಯಂ ಶೂದ್ರವದ್ಗೃಹಮಾಗತಃ ॥ ೩೮ ॥
ಶೂನ್ಯಾಚಾರಸ್ಯ ದುಷ್ಟಸ್ಯ ಪರಿತ್ಯಕ್ತಕ್ರಿಯಸ್ಯ ಚ ।
ಬ್ರಾಹ್ಮಣೀ ಚ ತದಾ ಚಾಸೀದ್ಭಾರ್ಯಾ ಕಾಂತಿಮತೀ ತವ ॥ ೩೯ ॥

---

೩೫. ವ್ಯಾಧನು ಕೇಳುತ್ತಾನೆ:—ತಮೋಗುಣ ಪ್ರಧಾನವಾದ ಈ ಬೇಡರ ಜನ್ಮವು ನನಗೆ ಯಾವ ದುಷ್ಕರ್ಮದ ಫಲವಾಗಿ ಲಭಿಸಿತು? ಈಗ ಈ ಸದ್ಬುದ್ಧಿಯುಂಟಾದುದು ಹೇಗೆ? ಯಾವ ಪುಣ್ಯದಿಂದ ಮಹಾತ್ಮನಾದ ನಿನ್ನ ದರ್ಶನ ಲಾಭವು ನನಗೆ ದೊರೆಯಿತು?

೩೬. ಸರ್ವಜ್ಞನೆ! ನಿನಗೆ ನನ್ನಲ್ಲಿ ಅನುಕಂಪವಿರುವುದಾದರೆ ಈ ವಿಷಯವನ್ನೂ ಇದಕ್ಕೆ ಸಂಬಂಧಿಸಿದ ಇತರ ಸಂದರ್ಭಗಳೆಲ್ಲವನ್ನೂ ವಿಸ್ತಾರವಾಗಿ ನನಗೆ ತಿಳಿಸು. ಈ ಮಾತುಗಳನ್ನು ಕೇಳಿ ಮಹಾ ಮುನಿಯಾದ ಶಂಖಬ್ರಾಹ್ಮಣನು ಮುಗುಳ್ನಗೆಯಿಂದ ಕೂಡಿದ ಮುಖವುಳ್ಳವನಾಗಿ ಮೇಘಗಂಭೀರವಾದ ವಾಣಿಯಿಂದ ಆ ವ್ಯಾಧನ ಪೂರ್ವಜನ್ಮದ ವೃತ್ತಾಂತವನ್ನು ಹೇಳತೊಡಗಿದನು.

೩೭. ಶಂಖನು ಹೇಳುತ್ತಾನೆ:—ಎಲೈ ಬೇಡನೆ! ನೀನು ಹಿಂದಿನ ಜನ್ಮದಲ್ಲಿ ಶಾಕಲನಗರದಲ್ಲಿ ಸಕಲ ವೇದವೇದಾಂತಪಾರಂಗತನಾದ ಬ್ರಾಹ್ಮಣನಾಗಿ ಜನಿಸಿದ್ದೆ. ಶ್ರೀವತ್ಸಗೋತ್ರೋದ್ಭವನಾಗಿ ಸ್ತಂಬನೆಂಬ ಹೆಸರಿನಿಂದ ನೀನು ಅಪಾರವಾದ ಬ್ರಹ್ಮತೇಜಸ್ಸಿನಿಂದ ಕೂಡಿದವನಾಗಿ ಪ್ರಖ್ಯಾತನಾಗಿದ್ದೆ.

೩೮. ಆದರೆ ಕಾಲಾಂತರದಲ್ಲಿ ನಿನಗೆ ಒಬ್ಬ ವೇಶ್ಯೆಯೊಡನೆ ಸಮಾಗಮವುಂಟಾಯಿತು. ಆಕೆಯಲ್ಲಿ ಅನುರಾಗವುಳ್ಳವನಾಗಿ ನೀನು ಆಕೆಯ ಸಂಸರ್ಗದ ದೋಷದಿಂದ ನಿತ್ಯವೂ ಮಾಡಬೇಕಾದ ಸ್ನಾನಾಹ್ನಿಕಾದಿಗಳನ್ನು ತ್ಯಜಿಸಿ ಶೂದ್ರನಂತೆ ಮನೆಗೆ ಪ್ರತಿ ಪ್ರಾತಃಕಾಲದಲ್ಲಿಯೂ ಹಿಂದಿರುಗುತ್ತಿದ್ದೆ.

೩೯. ಇಂತು ಆಚಾರವರ್ಜಿತನೂ, ದುಷ್ಟಸ್ವಭಾವದವನೂ, ಸ್ವಾಶ್ರಮವರ್ಣೋಚಿತಗಳಾದ ಕರ್ಮಗಳನ್ನು ತ್ಯಜಿಸಿದವನೂ ಆದ ನಿನಗೆ ಕಾಂತಿಮತಿ ನಾಮಕಳಾದ ಬ್ರಾಹ್ಮಣ ಸ್ತ್ರೀಯು ಪತ್ನಿಯಾಗಿದ್ದಳು.

ಸಾ ತ್ವಾಂ ಪರ್ಯಚರತ್ಸುಭ್ರೂಃ ಸವೇಶ್ಯಂ ಬ್ರಾಹ್ಮಣಾಧಮಮ್ ।
ಉಭಯೋಃ ಕ್ಷಾಲಯಂತೀ ಚ ಪಾದಾಂಸ್ತ್ವತ್ಪ್ರಿಯಕಾರಿಣೀ ॥ ೪೦ ॥
ಉಭಯೋರಪ್ಯಧಃ ಶೇತೇ ಉಭಯೋರ್ವಚನೇ ರತಾ ।
ವೇಶ್ಯಯಾ ವಾರ್ಯಮಾಣಾಽಪಿ ಪಾತಿವ್ರತ್ಯವ್ರತಸ್ಥಿತಾ ॥ ೪೧ ॥
ಏವಂ ಶುಶ್ರೂಷಯಂತ್ಯಾ ಹಿ ಭರ್ತಾರಂ ವೇಶ್ಯಯಾ ಸಹ ।
ಜಗಾಮ ಸುಮಹಾನ್ ಕಾಲೋ ದುಃಖಿತಾಯಾ ಮಹೀತಲೇ ॥ ೪೨ ॥
ಅಪರಸ್ಮಿನ್ ದಿನೇ ಭರ್ತಾ ಮಾಷಂ ಚ ಮೂಲಕಾನ್ವಿತಮ್ ।
ಅಭಕ್ಷಯಚ್ಛೂದ್ರಧರ್ಮಾನ್ನಿಷ್ಪಾವಾಂಸ್ತಿಲಮಿಶ್ರಿತಾನ್ ॥ ೪೩ ॥
ತದಪಥ್ಯಮಶಿತ್ವಾ ತು ವಮಂಶ್ಚೈವ ವಿರೇಚಯನ್ ।
ಅಪಥ್ಯಾದ್ದಾರುಣೋ ರೋಗೋ ವ್ಯಜಾಯತ ಭಗಂದರಃ ॥ ೪೪ ॥
ಸ ದಹ್ಯಮಾನೋ ರೋಗೇಣ ದಿವಾರಾತ್ರಂ ತು ಭೂರಿಶಃ ।
ಯಾವದಾಸ್ತೇ ಗೃಹೇ ವಿತ್ತಂ ತಾವದ್ವೇಶ್ಯಾ ಚ ಸಂಸ್ಥಿತಾ ॥ ೪೫ ॥

---

೪೦. ಆಕೆಯಾದರೊ ವೇಶ್ಯಾಲೋಲನಾದ ಬ್ರಾಹ್ಮಣಾಧಮನಾದ ನಿನ್ನನ್ನು ಭಕ್ತಿಭಾವದಿಂದ ಸೇವಿಸುತ್ತಿದ್ದಳು. ನಿನಗೆ ಸಂತೋಷವನ್ನುಂಟುಮಾಡುವುದಕ್ಕಾಗಿ ನಿಮ್ಮಿಬ್ಬರ ಪಾದಗಳನ್ನು ತೊಳೆಯುತ್ತಿದ್ದಳು.

೪೧. ನೀವಿಬ್ಬರೂ ಮಂಚದ ಮೇಲೆ ಮಲಗಿರಲು ಆಕೆಯು ಕೆಳಗೆ ನೆಲದಲ್ಲಿ ಮಲಗುವಳು. ನಿಮ್ಮಿಬ್ಬರ ಮಾತುಗಳನ್ನು ಮೀರದೆ ನಡೆದುಕೊಳ್ಳುವಳು. ವೇಶ್ಯೆಯು ಬೇಡವೆಂದರೂ ತಾನು ಮಾತ್ರ ತನ್ನ ಪಾತಿವ್ರತ್ಯದ ಧರ್ಮದಲ್ಲಿಯೇ ನಿರತಳಾಗಿದ್ದಳು.

೪೨. ಈ ರೀತಿಯಾಗಿ ಗಂಡನಿಗೂ ಆತನ ವೇಶ್ಯೆಗೂ ಶುಶ್ರೂಷೆಯನ್ನು ಮಾಡುತ್ತ ಭೂಮಿಯಲ್ಲಿ ಅತ್ಯಂತ ದುಃಖಿತಳಾಗಿ ಜೀವನವನ್ನು ನಡೆಸುತ್ತಿರಲು ಬಹಳ ಕಾಲವು ಕಳೆದುಹೋಯಿತು.

೪೩. ಒಂದಾನೊಂದು ದಿವಸ ನೀನು ಶೂದ್ರಧರ್ಮವನ್ನನುಸರಿಸಿ ಗಾಳಿಯಲ್ಲಿ ತೂರದೆ ಕಲ್ಮಷಯುಕ್ತವಾದ ಎಳ್ಳನ್ನೂ ಮೊಳಕೆ ಬಂದಿರುವ ಕಾಳನ್ನೂ ಬೆರಸಿ ಸೇವಿಸುವವನಾದೆ.

೪೪–೪೫. ಅಪಥ್ಯವಾದ ಈ ಪದಾರ್ಥವನ್ನು ತಿಂದು ನಿನಗೆ ವಾಂತಿಯೂ ವಿರೇಚನವೂ ಉಂಟಾದುವು. ಅಭಕ್ಷ್ಯಭಕ್ಷಣದ ಪರಿಣಾಮವಾಗಿ ನಿನ್ನ ದೇಹದಲ್ಲಿ ಭಯಂಕರವಾದ ಭಗಂದರವೆಂಬ ಮಹಾ ವ್ಯಾಧಿಯು ಕಾಣಿಸಿಕೊಂಡಿತು. ಬಳಿಕ ನೀನು ಆ ರೋಗದಿಂದ ಅಹೋರಾತ್ರಗಳಲ್ಲಿಯೂ ಬಹುವಾಗಿ ಪೀಡಿಸಲ್ಪಟ್ಟೆ. ನಿನ್ನ ಮನೆಯಲ್ಲಿ ಹಣವಿರುವವರೆವಿಗೂ ಆ ವೇಶ್ಯೆಯೂ ನಿನ್ನನ್ನು ಸೇವಿಸುತ್ತ ನಿಂತಿದ್ದಳು.

ಗೃಹೀತ್ವಾ ತಸ್ಯ ಸಾ ವಿತ್ತಂ ಪಶ್ಚಾನ್ನೋವಾಸ ಮಂದಿರೇ ।
ಅನ್ಯಸ್ಯ ಪಾರ್ಶ್ವಮಾಸಾದ್ಯ ಗತಾ ಘೋರಾ ಸುನಿರ್ಘೃಣಾ ॥ ೪೬ ॥
ತತಃ ಸ ದೀನವಚನೋ ವ್ಯಾಧಿಬಾಧಾಸುಪೀಡಿತಃ ।
ಉಕ್ತವಾನ್ ಸ ರುದನ್ ಭಾರ್ಯಾಂ ರುಜಾ ವ್ಯಾಕುಲಮಾನಸಃ ॥ ೪೭ ॥
ಪರಿಪಾಲಯ ಮಾಂ ದೇವಿ ವೇಶ್ಯಾಽಸಕ್ತಂ ಸುನಿಷ್ಠುರಂ ।
ನ ಮಯೋಪಕೃತಂ ಕಿಂಚಿತ್ತ್ವಯಿ ಸುಂದರಿ ಪಾವನಿ ॥ ೪೮ ॥
ಕೋ ಭಾರ್ಯಾಂ ಪ್ರಣತಾಂ ಪಾಪೋ ನಾನುಮನ್ಯೇತ ಗರ್ಹಿತಃ ।
ಸ ಷಂಡೋ ಭವಿತಾ ಭದ್ರೇ ದಶಪಂಚಸು ಜನ್ಮಸು ॥ ೪೯ ॥
ದಿವಾರಾತ್ರಂ ಮಹಾಭಾಗೇ ನಿಂದಿತಃ ಸಾಧುಭಿರ್ಜನೈಃ ।
ಪಾಪಯೋನಿಮವಾಪ್ಸ್ಯಾಮಿ ತ್ವಾಂ ಸಾಧ್ವೀಮವಮನ್ಯ ವೈ ॥ ೫೦ ॥
ಅಹಂ ಕ್ರೋಧೇನ ದಗ್ಧೋಽಸ್ಮಿ ತವಾಪಮಾನಜೇನ ವೈ ।
ಏವಂ ಬ್ರುವಾಣಂ ಭರ್ತಾರಂ ಕೃತಾಂಜಲಿಪುಟಾಽಬ್ರವೀತ್ ॥ ೫೧ ॥

---

೪೬. ಕೆಲವು ದಿವಸಗಳ ಮೇಲೆ ಬ್ರಾಹ್ಮಣನಾದ ನಿನ್ನ ಧನವನ್ನೆಲ್ಲ ಕೈಗೆ ಸಿಕ್ಕಿದಷ್ಟನ್ನು ಶೇಖರಿಸಿಕೊಂಡು ಪುನಃ ನಿನ್ನ ಮನೆಗೆ ಅವಳು ಬರಲಿಲ್ಲ. ಘೋರಳೂ ನಿರ್ದಯಳೂ ಆದ ವೇಶ್ಯೆಯು ಧನಿಕನಾದ ಮತ್ತೊಬ್ಬ ಪುರುಷನ ಸಹವಾಸವನ್ನು ಬೆಳಸಿಕೊಂಡು ಹೊರಟುಹೋದಳು.

೪೭. ಬಳಿಕ ನೀನು ಕಾಂತಿಗುಂದಿದ ಮುಖವುಳ್ಳವನಾಗಿ ರೋಗದ ಬಾಧೆಯಿಂದ ಸಂಕಟಪಡುತ್ತ ಮನಸ್ಸಿನಲ್ಲಿ ವ್ಯಾಕುಲಗೊಂಡು ರೋದನವನ್ನು ಮಾಡುತ್ತ ಪತಿಶುಶ್ರೂಷಾಪರಾಯಣೆಯಾದ ನಿನ್ನ ಹೆಂಡತಿಗೆ ನೀನು ಹೇಳತೊಡಗಿದೆ.

೪೮–೪೯. ದೇವಿಯೆ! ವೇಶ್ಯಾನುರಕ್ತನೂ ಅತ್ಯಂತ ಕಠಿನ ಹೃದಯನೂ ಆದ ನನ್ನನ್ನು ಈ ಕಷ್ಟಕಾಲದಲ್ಲಿ ಕಾಪಾಡು. ಪವಿತ್ರಳಾದ ಸುಂದರಿಯೆ! ನಿನಗೆ ನಾನು ಯಾವಾಗಲೂ ಯತ್ಕಿಂಚಿತ್ತಾದರೂ ಸಂತೋಷವನ್ನುಂಟುಮಾಡಿರುವುದಿಲ್ಲ. ಮಂಗಳಾಂಗಿಯೆ! ಎಂತಹ ಪಾಪಿಯೂ ನೀಚನೂ ಆದರೂ ಯಾವ ಮನುಷ್ಯನು ತಾನೆ ತನ್ನನ್ನೇ ನಂಬಿದ ಹೆಂಡತಿಯನ್ನು ಆದರಿಸುವುದಿಲ್ಲ? ಹಾಗೆ ಆದರಿಸದವನು ಮುಂದೆ ಹದಿನೈದು ಜನ್ಮಗಳಲ್ಲಿ ನಪುಂಸಕನಾಗಿ ಜನಿಸುವನು.

೫೦. ಮಹಾಭಾಗಳೆ! ಪತ್ನಿಯನ್ನು ತ್ಯಜಿಸಿದ ನಾನು ನಿರಂತರವೂ ಸಕಲ ಸಾಧು ಜನರ ದೂಷಣೆಗೆ ಪಾತ್ರನಾಗುವೆನು. ಪರಮ ಪತಿವ್ರತೆಯಾದ ನಿನ್ನನ್ನು ಅವಮಾನಮಾಡಿದುದರ ಫಲವಾಗಿ ನಾನು ನೀಚಜನ್ಮವನ್ನು ಪಡೆಯುವೆನೆಂಬುದರಲ್ಲಿ ಸಂದೇಹವಿಲ್ಲ.

೫೧. ನಿನ್ನನ್ನು ಅವಮಾನಮಾಡಿದುದರಿಂದುಂಟಾದ ಕ್ರೋಧದಿಂದ

ನ ದೈನ್ಯಂ ಭವತಾ ಕಾರ್ಯಂ ನ ವ್ರೀಡಾ ಕಾಂತ ಮಾಂ ಪ್ರತಿ ।
ನ ಚಾಽಪಿ ತ್ವಯಿ ಮೇ ಕ್ರೋಧೋ ಯೇನ ದಗ್ಧೋ ವದಸ್ಯಥ ॥ ೫೨ ॥
ಪುರಾಕೃತಾನಿ ಪಾಪಾನಿ ದುಃಖಾನೀಹ ಭವಂತಿ ಹಿ ।
ತಾನಿ ಯಾ ಕ್ಷಮತೇ ಸಾಧ್ವೀ ಪುರುಷೋ ವಾ ಸ ಉತ್ತಮಃ ॥ ೫೩ ॥
ಯನ್ಮಯಾ ಪಾಪಯಾ ಪಾಪಂ ಕೃತಂ ವೈ ಪೂರ್ವಜನ್ಮನಿ ।
ತದ್ಭುಂಜತ್ಯಾ ನ ಮೇ ದುಃಖಂ ನ ವಿಷಾದಃ ಕಥಂಚನ ॥ ೫೪ ॥
ಇತ್ಯೇವಮುಕ್ತ್ವಾ ಭರ್ತಾರಂ ಸಾ ಸುಭ್ರೂಸ್ತಮುಪಾಲಯತ್ ।
ಆನೀಯ ಜನಕಾದ್ವಿತ್ತಂ ಬಂಧುಭ್ಯೋ ವರವರ್ಣಿನೀ ॥ ೫೫ ॥
ಕ್ಷೀರೋದವಾಸಿನಂ ದೇವಂ ಭರ್ತಾರಂ ಸಾ ತ್ವಚಿಂತಯತ್ ।
ಶೋಧಯಂತೀ ದಿವಾರಾತ್ರೌ ಪುರೀಷಂ ಮೂತ್ರಮೇವ ಚ ॥ ೫೬ ॥

---

ನಾನು ದಹಿಸಲ್ಪಡುತ್ತಿರುವೆನು. ಇಂತೆಂದು ಹೇಳುತ್ತಿರುವ ಪತಿದೇವನನ್ನು ಕುರಿತು ಆ ಪತಿವ್ರತೆಯು ತನ್ನ ಕೈಗಳನ್ನು ಮುಗಿದು ಹೇಳತೊಡಗಿದಳು.

೫೨. ಪ್ರಾಣನಾಥನೆ! ನೀನು ಈ ವಿಧವಾದ ದೈನ್ಯವನ್ನು ಹೊಂದಬಾರದು. ನನ್ನ ವಿಷಯವಾಗಿ ನಾಚಿಕೆಪಡಬೇಕಾದ ಅವಶ್ಯಕತೆಯೂ ಇಲ್ಲವು. ಮತ್ತು ನನ್ನ ಕ್ರೋಧದಿಂದ ನೀನು ದಹಿಸಲ್ಪಡುತ್ತಿರುವೆಯೆಂದು ಹೇಳಿದೆಯಲ್ಲವೆ. ನಿನ್ನಲ್ಲಿ ನನಗೆ ಅಂತಹ ಕೋಪವು ಎಂದೂ ಉಂಟಾಗಲಿಲ್ಲವು.

೫೩. ಪೂರ್ವಜನ್ಮಗಳಲ್ಲಿ ಮಾಡಿದ ಪಾಪಗಳೇ ಈ ಜನ್ಮದಲ್ಲಿ ದುಃಖಗಳಾಗಿ ಒದಗುವುವೆಂದು ಬಲ್ಲವರು ಹೇಳುತ್ತಿರುವರು. ಅವುಗಳನ್ನೆಲ್ಲ ದೃಢಮನಸ್ಸಿನಿಂದ ಯಾವ ಪತಿವ್ರತೆಯರೂ ಪುರುಷರೂ ಸಹಿಸಿಕೊಂಡಿರುವರೊ, ಅವರೇ ಉತ್ತಮ ಮಾನವರು.

೫೪. ಪೂರ್ವಜನ್ಮದಲ್ಲಿ ನಾನು ಪಾಪನಿರತಳಾಗಿ ಯಾವ ಯಾವ ಪಾತಕಗಳನ್ನು ಮಾಡಿದ್ದೆನೊ, ಅವುಗಳ ಫಲಗಳನ್ನೇ ಈಗ ಅನುಭವಿಸುತ್ತಿರುವೆನಾದುದರಿಂದ ನನಗೆ ಯಾರಲ್ಲಿಯೂ ದುಃಖವಾಗಲಿ ವಿಷಾದವಾಗಲಿ ಎಂದಿಗೂ ಉಂಟಾಗಲಾರದು.

೫೫. ಇಂತೆಂದು ಪ್ರತ್ಯುತ್ತರವನ್ನಿತ್ತು ಮಹಾ ಪತಿವ್ರತೆಯಾದ ಆಕೆಯು ತನ್ನ ತಂದೆಯಿಂದಲೂ ಬಂಧುಗಳಿಂದಲೂ ಧನವನ್ನು ತರಿಸಿಕೊಂಡು ಗಂಡನನ್ನು ಪಾಲಿಸುತ್ತಿದ್ದಳು.

೫೬. ತನ್ನ ಪತಿಯೇ ಕ್ಷೀರಸಮುದ್ರದ ಶಾಯಿಯಾದ ಮಹಾ ವಿಷ್ಣುವೆಂದು ಆಕೆಯು ಚಿಂತಿಸುತ್ತಿದ್ದಳು. ಅಹೋರಾತ್ರಗಳಲ್ಲಿಯೂ ಮಲಗಿರುವ ಪತಿಯ ಮೂತ್ರಪುರೀಷಗಳನ್ನೂ ತಾನೇ ತೆಗೆದು ಶುದ್ಧಿಮಾಡುತ್ತಿದ್ದಳು.

ನಖೇನ ಕರ್ಷತೀ ಭರ್ತುಃ ಕ್ರಿಮೀನ್ಕಷ್ಟಾಚ್ಛನೈಃ ಶನೈಃ ।
ನ ಸಾ ಸ್ವಪಿತಿ ರಾತ್ರೌ ತು ನ ದಿವಾ ವರವರ್ಣಿನೀ ॥ ೫೭ ॥
ಭರ್ತುರ್ದುಃಖೇನ ಸಂತಪ್ತಾ ದುಃಖಿತೇದಮುವ್ರೋಚತ ।
ದೇವಾಶ್ಚ ಪಾಂತು ಭರ್ತಾರಂ ಪಿತರೋ ಯೇ ಚ ವಿಶ್ರುತಾಃ ॥ ೫೮ ॥
ಕುರ್ವಂತು ರೋಗಹೀನಂ ಮೇ ಭರ್ತಾರಂ ಗತಕಲ್ಮಷಂ ।
ಚಂಡಿಕಾಯೈ ಪ್ರದಾಸ್ಯಾಮಿ ರಕ್ತಮಾಂಸಸಮುದ್ಭವಂ ॥ ೫೯ ॥
ಸುಪಕ್ವಾನ್ನಂ ಮಾಹಿಷೋಪೇತಂ ಭರ್ತುರಾರೋಗ್ಯಹೇತವೇ ।
ಮೋದಕಾನ್ಕಾರಯಿಷ್ಯಾಮಿ ವಿಘ್ನೇಶಾಯ ಮಹಾತ್ಮನೇ ॥ ೬೦ ॥
ಮಂದವಾರೇ ಕರಿಷ್ಯಾಮಿ ಚೋಪವಾಸಾನ್ ದಶೈವ ತು ।
ನೋಪಭುಂಜಾಮಿ ಮಧುರಂ ನೋಪಭುಂಜಾಮಿ ವೈ ಘೃತಂ ॥ ೬೧ ॥
ತೈಲಾಭ್ಯಂಗವಿಹೀನಾಹಂ ಸ್ಥಾಸ್ಯೇ ನೈವಾತ್ರ ಸಂಶಯಃ ।
ಜೀವತಾದ್ರೋಗಹೀನೋಽಯಂ ಭರ್ತಾ ಮೇ ಶರದಾಂ ಶತಂ ॥ ೬೨ ॥

೫೭. ಆತನ ಹುಣ್ಣುಗಳಿಂದ ಕ್ರಿಮಿಗಳನ್ನು ಮೆಲ್ಲಮೆಲ್ಲಗೆ ತನ್ನ ನಖಗಳಿಂದಲೇ ಸೆಳೆಯುತ್ತಿದ್ದಳು. ಆ ಸಾಧ್ವೀಮಣಿಯು ಹಗಲಿನಲ್ಲಾಗಲಿ ರಾತ್ರಿಯಲ್ಲಾಗಲಿ ನಿದ್ದೆಯನ್ನೂ ಮಾಡುತ್ತಿರಲಿಲ್ಲ.

೫೮. ಗಂಡನ ಸಂಕಟದಿಂದ ಸಂತಪ್ತಳಾಗಿ ದುಃಖಗೊಂಡು ಹರಕೆಗಳನ್ನೂ ಮಾಡಿಕೊಂಡು ಹೇಳತೊಡಗಿದಳು. ನನ್ನ ಪತಿದೇವನನ್ನು ದೇವತೆಗಳೂ ಲೋಕವಿಖ್ಯಾತರಾದ ಪಿತೃಗಳೂ ಕಾಪಾಡಲಿ.

೫೯–೬೦. ನನ್ನ ಗಂಡನನ್ನು ಅವರು ರೋಗಹೀನನ್ನಾಗಿಯೂ ಪಾಪರಹಿತನನ್ನಾಗಿಯೂ ಮಾಡುವವರಾಗಲಿ. ಆತನಿಗೆ ಆರೋಗ್ಯವನ್ನುಂಟು ಮಾಡಿದರೆ ಚಂಡಿಕಾದೇವಿಗೆ ಎಮ್ಮೆಯ ರಕ್ತಮಾಂಸಗಳಿಂದ ಪಕ್ವಮಾಡಿದ ಉತ್ತಮಾನ್ನವನ್ನು ನಿವೇದನೆ ಮಾಡುತ್ತೇನೆ. ಮಹಾತ್ಮನಾದ ವಿಘ್ನೇಶ್ವರನಿಗೆ ಮೋದಕಗಳನ್ನು ಮಾಡಿಸುತ್ತೇನೆ.

೬೧. ಹತ್ತು ಶನಿವಾರಗಳಲ್ಲಿ ಉಪವಾಸ ವ್ರತವನ್ನು ನೆರವೇರಿಸುತ್ತೇನೆ. ಅಲ್ಲದೆ ಪತಿಗೆ ಆರೋಗ್ಯವಾಗುವವರೆವಿಗೂ ಸಿಹಿ ಪದಾರ್ಥಗಳನ್ನಾಗಲಿ ತುಪ್ಪವನ್ನಾಗಲಿ ಸೇವಿಸುವುದಿಲ್ಲ.

೬೨. ನಾನು ಎಣ್ಣೆಯ ನೀರನ್ನೇ ಹಾಕಿಕೊಳ್ಳದೆ ಇರುವೆನು. ಇದರಲ್ಲಿ ಸಂದೇಹವೇ ಇಲ್ಲ. ಈ ನನ್ನ ಪತಿಯು ರೋಗದಿಂದ ಗುಣವನ್ನು ಹೊಂದಿ ನೂರಾರು ವರ್ಷಗಳವರೆವಿಗೂ ಜೀವಂತನಾಗಿರಲಿ.

ಏವಂ ಸಾ ವ್ಯಾಹರದ್ದೇವೀ ವಾಸರೇ ವಾಸರೇ ಗತೇ ।
ತದಾ ಜಾಃಗಾನ್ಮುನಿಃ ಕಶ್ಚಿನ್ಮಹಾತ್ಮಾ ದೇವಲಾಹ್ವಯಃ ॥ ೬೩ ॥
ವೈಶಾಖೇ ಮಾಸಿ ಘರ್ಮಾರ್ತಃ ಸಾಯಾಹ್ನೇ ತಸ್ಯ ವೈ ಗೃಹಂ ।
ತದಾ ವೈ ಭಾರ್ಯಯಾ ಚೋಕ್ತಂ ಭಿಷಗ್ವೈ ಗೃಹಮಾಗತಃ ॥ ೬೪ ॥
ತೇನ ವೈ ರೋಗಹಾನಿಃ ಸ್ಯಾತ್ತಸ್ಯಾಽತಿಥ್ಯಂ ಕರೋಮ್ಯಹಂ ।
ಜ್ಞಾತ್ವಾ ತ್ವಾಂ ಧರ್ಮವಿಮುಖಂ ಭಿಷಗ್ವ್ಯಾಜೇನ ವಂಚಿತಃ ॥ ೬೫ ॥
ಪಾದಾವನೇಜನಂ ಕೃತ್ವಾ ತಜ್ಜಲಂ ಮೂರ್ಧ್ನಿ ಸಾಽಕ್ಷಿಪತ್ ।
ಪಾನಕಂ ಚ ದದೌ ತಸ್ಮೈ ಘರ್ಮಾರ್ತಾಯ ಮಹಾತ್ಮನೇ ॥ ೬೬ ॥
ತ್ವಯಾನುವೇದಿತಾ ಸಾಯಂ ಘರ್ಮತಾಪನಿವಾರಕಂ ।
ಸ ಪ್ರಾತರುದಿತೇ ಸೂರ್ಯೇ ಮುನಿಃ ಪ್ರಾಯಾದ್ಯಥಾಗತಃ ॥ ೬೭ ॥
ಅಥ ಚಾಲ್ಪೇನ ಕಾಲೇನ ಸನ್ನಿಪಾತೋಽಭವತ್ತವ ।
ತ್ರಿಕಟ್ವಾಂ ನೀಯಮಾನಾಯಾಂ ಭರ್ತಾಂಗುಲಿಮಖಂಡಯತ್ ॥ ೬೮ ॥

---

೬೩. ಈ ರೀತಿಯಾಗಿ ಆ ದೇವಿಯು ದಿವಸದಿವಸದಲ್ಲಿಯೂ ಪ್ರತಿಜ್ಞೆಗಳನ್ನು ಮಾಡುತ್ತಿದ್ದಳು. ಒಂದು ದಿನ ದೇವಲನೆಂಬ ಹೆಸರಿನ ಮಹಾತ್ಮನಾದ ಮುನಿಯೊಬ್ಬನು ನಿಮ್ಮ ಮನೆಗೆ ಪ್ರಾಪ್ತನಾದನು.

೬೪. ರೋಗಿಯಾದ ನಿನ್ನ ಮನೆಗೆ ಬಿಸಿಲಿನಿಂದ ಬಳಲಿದವನಾಗಿ ಆತನು ಒಂದು ವೈಶಾಖಮಾಸದ ದಿನದ ಸಾಯಂಕಾಲದಲ್ಲಿ ಬಂದನು. ಆಗ ನಿನ್ನ ಪತ್ನಿಯು ಹೇಳತೊಡಗಿದಳು. ಒಬ್ಬಾನೊಬ್ಬ ವೈದ್ಯನು ನಮ್ಮ ಮನೆಯಲ್ಲಿ ಬಂದಿರುವನು.

೬೫. ಆತನ ಅನುಗ್ರಹದಿಂದ ನಿನ್ನ ರೋಗವು ನಾಶವಾಗಬಹುದು. ಆದುದರಿಂದ ಆತನಿಗೆ ಅತಿಥಿಸತ್ಕಾರವನ್ನು ಮಾಡುತ್ತೇನೆ. ನೀನು ಧರ್ಮವಿಮುಖನಾಗಿರುವುದನ್ನು ತಿಳಿದೇ ಆಕೆಯು ಬಂದವನು ವೈದ್ಯನೆಂದು ಹೇಳಿ ನಿನ್ನನ್ನು ವಂಚಿಸಿದಳು.

೬೬. ಆ ಅತಿಥಿಯ ಪಾದಗಳನ್ನು ತೊಳೆದು ಆಕೆಯು ಪಾದತೀರ್ಥವನ್ನು ನಿನ್ನ ತಲೆಯ ಮೇಲೂ ಪ್ರೋಕ್ಷಿಸಿದಳು. ಬಿಸಿಲಿನ ತಾಪದಿಂದ ಬಸವಳಿದಿದ್ದ ಆ ಮಹಾತ್ಮನಿಗೆ ಪಾನಕವನ್ನೂ ಮಾಡಿ ಸಮರ್ಪಿಸಿದಳು.

೬೭. ಬಿಸಿಲಿನ ತಾಪವನ್ನು ನಿವಾರಿಸುವ ಸಾಯಂಕಾಲದ ಆ ಆತಿಥ್ಯವು ನಿನ್ನ ಅನುಮೋದನೆಯನ್ನೂ ಪಡೆಯಿತು. ಮಾರನೆಯ ದಿನ ಸೂರ್ಯೋದಯವಾಗಲು ಆ ಮಹರ್ಷಿಯು ಬಂದಂತೆಯೇ ಯಾದೃಚ್ಛಿಕವಾಗಿ ಹೊರಟು ಹೋದನು.

೬೮. ಬಳಿಕ ಕೆಲವು ಕಾಲದ ಮೇಲೆ ನಿನಗೆ ಸನ್ನಿಪಾತವು ಕಾಣಿಸಿ

ಉಭಯೋರ್ದಂತಯೋಃ ಶ್ಲೇಷಃ ಸಹಸಾ ಸಮುಪದ್ಯತ ।
ತತ್ಖಂಡಮಂಗುಲೇರ್ವಕ್ತ್ರೇ ಸ್ಥಿತಂ ಭರ್ತುಃ ಸುಕೋಮಲಂ ॥ ೧೯ ॥
ಖಂಡಯಿತ್ವಾಂಗುಲಿಂ ಭರ್ತಾ ಪಂಚತ್ವಮಗಮತ್ತದಾ ।
ಶಯ್ಯಾಯಾಂ ಸುಮನೋಜ್ಞಾಯಾಂ ಸ್ಮರಂಸ್ತಾಂ ಪುಂಶ್ಚಲೀಂ ಶುಭಾಂ॥
ಮೃತಂ ವಿಜ್ಞಾಯ ಭರ್ತಾರಂ ಭಾರ್ಯಾ ಕಾಂತಿಮತೀ ತವ ।
ವಿಕ್ರೀಯ ಚಾಽಪಿ ವಲಯಂ ಗೃಹೀತ್ವಾ ಚೇಂಧನಂ ಬಹು ॥ ೭೦ ॥
ಚಕ್ರೇ ಚಿತಿಂ ತೇನ ಸಾಧ್ವೀ ಮಧ್ಯೇ ಕೃತ್ವಾ ಪತಿಂ ತದಾ ।
ಅವಗೃಹ್ಯ ಭುಜಾಭ್ಯಾಂ ಚ ಪಾದೌ ಚಾಶ್ಲಿಷ್ಯ ಪಾದಯೋಃ ॥ ೭೧ ॥
ಮುಖೇ ಮುಖಂ ವಿನಿಕ್ಷಿಪ್ಯ ಹೃದಯಂ ಹೃದಯೇ ತಥಾ ।
ಜಘನೇ ಜಘನಂ ದೇವೀ ಹ್ಯಾತ್ಮಾನಂ ಸನ್ನಿವೇಶ್ಯ ಚ ॥ ೭೩ ॥
ದಾಹಯಾಮಾಸ ಕಲ್ಯಾಣೀ ಭರ್ತೃದೇಹಂ ರುಜಾನ್ವಿತಂ ।
ಆತ್ಮನಾ ಸಹ ಕಲ್ಯಾಣೀ ಜ್ವಲಿತೇ ಜಾತವೇದಸಿ ॥ ೭೪ ॥

---

ಕೊಂಡಿತು. ಮತ್ತು ನಿನ್ನ ಪತ್ನಿಯು ತ್ರಿಕಟುಕದ ಕಷಾಯವನ್ನು ಬಾಯಲ್ಲಿ ಹಾಕುತ್ತಿರಲು ಒಂದು ದಿನ ನೀನು ಆಕೆಯ ಕೈಬೆರಳನ್ನು ಕಡಿದೆ.

೬೯. ಆ ಕ್ಷಣದಲ್ಲಿಯೇ ನಿನ್ನ ಹಲ್ಲಿನ ಸಾಲುಗಳೆರಡೂ ಕೂಡಿ ನಿಶ್ಚಲ ಗಳಾದವು. ಕೋಮಲವಾದ ಆಕೆಯ ಬೆರಳಿನ ಖಂಡವೊಂದು ಪತಿಯಾದ ನಿನ್ನ ಬಾಯಿಯಲ್ಲಿಯೇ ಉಳಿದುಕೊಂಡಿತು.

೭೦. ಸುಖಾನ್ವಿತವಾದ ಹಾಸಿಗೆಯಲ್ಲಿ ಮಲಗಿದ್ದ ನೀನು ಇಂತು ಹೆಂಡತಿಯ ಕೈಯನ್ನು ಕಡಿದು ಶುಭಾಂಗಿಯಾದ ಆ ವೇಶ್ಯೆಯನ್ನೇ ಕುರಿತು ಚಿಂತಿಸುತ್ತ ಅಂದಿನ ದಿನವೇ ಮರಣವನ್ನು ಹೊಂದಿದೆ.

೭೧–೭೨. ಪತಿಯು ಮೃತನಾದನೆಂಬುದನ್ನು ತಿಳಿದ ಕೂಡಲೆ ನಿನ್ನ ಪತ್ನಿಯಾದ ಕಾಂತಿಮತಿಯು ತನ್ನ ನಡುವಿನಲ್ಲಿದ್ದ ಒಡ್ಯಾಣವನ್ನು ಮಾರಿ ಬಂದ ಹಣದಿಂದ ಹೆಚ್ಚಾಗಿ ಕಟ್ಟಿಗೆಗಳನ್ನು ಕೊಂಡು ಪತಿಯ ದೇಹವನ್ನು ಮಧ್ಯದಲ್ಲಿಟ್ಟು ಸುತ್ತಲೂ ಉತ್ತಮವಾದ ಚಿತಿಯನ್ನು ನಿರ್ಮಿಸಿದಳು. ಬಳಿಕ ಪತಿಯ ದೇಹವನ್ನು ತನ್ನ ಭುಜಗಳಿಂದ ಆಲಿಂಗನೆಮಾಡಿಕೊಂಡು ಪಾದಗಳಿಂದ ಆತನ ಪಾದಗಳನ್ನಾವರಿಸಿದಳು.

೭೩–೭೪. ಆತನ ಮುಖದಲ್ಲಿ ತನ್ನ ಮುಖವನ್ನೂ, ಎದೆಯಲ್ಲಿ ಎದೆಯನ್ನೂ, ತೊಡೆಗಳಲ್ಲಿ ತೊಡೆಗಳನ್ನೂ, ಸೇರಿಸಿ ತನ್ನ ಶರೀರವನ್ನೆಲ್ಲ ಆ ಮೃತದೇಹದೊಡನೆ ಒಂದು ಮಾಡಿಕೊಂಡು ಚಿತೆಯ ಮೇಲೆ ಮಲಗಿ ಬೆಂಕಿಯನ್ನೊಡ್ಡಿ ಆ ಪತಿವ್ರತಾ ಶಿರೋಮಣಿಯು ರೋಗಾವಿಷ್ಟವಾದ ಪತಿಯ ದೇಹವನ್ನೂ ತನ್ನ ದೇಹವನ್ನೂ ದಹನಮಾಡಿದಳು.

ವಿಮುಚ್ಯ ದೇಹಂ ಸಹಸಾ ಜಗಾಮ
ಪತಿಂ ಸಮಾಲಿಂಗ್ಯ ಮುರಾರಿಲೋಕಂ ।
ಪಾನೀಯದಾನೇನ ಚ ಮಾಧವೇಽಸ್ಮಿನ್
ಪಾದಾವನೇಜಾದಪಿ ಯೋಗಿಗಮ್ಯಂ ॥ ೭೫ ॥
ತ್ವಮಂತಕಾಲೇ ಗಣಿಕಾವಿಚಿಂತಯಾ
ದೇಹಂ ತ್ಯಕ್ತ್ವಾ ಮುಕ್ತಸಮಸ್ತಕಿಲ್ಬಿಷಃ ।
ಜನ್ಮ ವ್ಯಾಧ್ಯಂ ಪ್ರಾಪ್ಯಸೇ ಘೋರರೂಪಂ
ಹಿಂಸಾಸಕ್ತಃ ಸರ್ವದೋದ್ವೇಗಕಾರೀ ॥ ೭೬ ॥
ದತ್ತ್ವಾ ತ್ವಯಾ ಪಾನಕಸ್ಯಾಪಿ ದಾನೇ
ದತ್ತೇಽನುಜ್ಞಾ ಮಾಧವೇ ಸಾಧು ಜಾನೇ ।
ವ್ಯಾಧೋ ಜಾತಸ್ತೇನ ಜಾತಾ ಸುಬುದ್ಧಿ
ರ್ಧರ್ಮಾನ್ ಪ್ರಷ್ಟುಂ ಸರ್ವಸೌಖ್ಯೈಕಹೇತುಂ ॥ ೭೭ ॥
ಧೃತಂ ಮೂರ್ಧ್ನಾ ಪಾದಶೌಚಾವಶಿಷ್ಟಂ
ಜಲಂ ಮುನೇಃ ಸರ್ವಪಾಪಾಪಹಾರಿ ।

೭೫. ಇಂತು ಪತಿಯನ್ನೇ ಆಲಂಗಿಸಿಕೊಂಡು ದೇಹವನ್ನು ತ್ಯಜಿಸಿ ಆ ಸಾಧ್ವೀಮಣಿಯು ವೈಶಾಖಮಾಸದಲ್ಲಿ ಬ್ರಾಹ್ಮಣೋತ್ತಮನಿಗೆ ಪಾನೀಯವನ್ನು ಕೊಟ್ಟು ಆತನ ಪಾದಗಳನ್ನು ತೊಳೆದ ಪುಣ್ಯವಿಶೇಷದ ಫಲವಾಗಿ ಮಹಾಯೋಗಿಗಳಿಗೆ ಪ್ರಾಪ್ಯಸ್ಥಾನವೆನಿಸಿದ ವಿಷ್ಣುಲೋಕವನ್ನು ಕುರಿತು ಆ ಕ್ಷಣದಲ್ಲಿಯೇ ಹೊರಟುಹೋದಳು.

೭೬. ನೀನೂ ಸಹ ಆಕೆಯ ಧರ್ಮಕಾರ್ಯಕ್ಕೆ ಅನುಮೋದಿಸಿದವನಾದುದರಿಂದ ಸಕಲ ಪಾತಕಗಳನ್ನೂ ಕಳೆದುಕೊಂಡರೂ, ಕೊನೆಗಾಲದಲ್ಲಿ ಆ ವೇಶ್ಯೆಯನ್ನೇ ಸ್ಮರಿಸುತ್ತ ದೇಹವನ್ನು ಬಿಟ್ಟುದರಿಂದ ಹಿಂಸಕೃತ್ಯಾನಿರತನೂ ಯಾವಾಗಲೂ ಜನರಿಗೆ ದುಃಖವನ್ನುಂಟುಮಾಡುವವನೂ ಆಗಿ ಘೋರರೂಪನಾದ ಈ ವ್ಯಾಧನ ಜನ್ಮವನ್ನು ಪಡೆದಿರುವೆ.

೭೭. ಸಾಧ್ವೀಮಣಿಗೆ ಪತಿಯಾದ ನೀನು ವೈಶಾಖಮಾಸದಲ್ಲಿ ಒಬ್ಬ ಬ್ರಾಹ್ಮಣೋತ್ತಮನಿಗೆ ಪಾನೀಯವನ್ನು ಕೊಡಲು ಹೆಂಡತಿಗೆ ಅನುಜ್ಞೆಯನ್ನು ಕೊಟ್ಟದ್ದೆಯಾದ ಕಾರಣ ವ್ಯಾಧನಾಗಿ ಜನಿಸಿದ್ದರೂ ಸಕಲ ಸೌಖ್ಯಗಳಿಗೆ ಕಾರಣಗಳೆನಿಸಿದ ವೈಶಾಖಮಾಸಧರ್ಮಗಳನ್ನು ಕೇಳಿ ತಿಳಿದುಕೊಳ್ಳಬೇಕೆಂಬ ಸದ್ಬುದ್ಧಿಯು ಈಗ ನಿನಗೆ ಸಂಭವಿಸಿತು.

೭೮. ದೇವಲನೆಂಬ ಬ್ರಾಹ್ಮಣೋತ್ತಮನ ಪಾದಗಳನ್ನು ತೊಳೆದು ಸಕಲ ಪಾತಕಗಳನ್ನು ದೂರಮಾಡುವ ಆ ತೀರ್ಥೋದಕವನ್ನು ನೀನು ತಲೆಯಲ್ಲಿ ತಳೆದೆ.

ತೇನೇಯಂ ತೇ ಸಂಗತಿರ್ಮೇ ವನೇಽಸ್ಮಿನ್
ಯಯಾ ಭೂಯಃ ಸಂಪದಃ ಸಂತತಿಶ್ಚ ॥ ೭೮ ॥
ಇತ್ಯೇತತ್ಸರ್ವಮಾಖ್ಯಾತಂ ಪೂರ್ವಜನ್ಮನಿ ಯತ್ಕೃತಂ ।
ಕರ್ಮ ಪುಣ್ಯಂ ಪಾಪಕಂ ಚ ದೃಷ್ಟಂ ದಿವ್ಯೇನ ಚಕ್ಷುಷಾ ॥ ೭೯ ॥
ಗೋಪ್ಯಂ ವಾ ತೇ ಪ್ರವಕ್ಷ್ಯಾಮಿ ಯದ್ಭವಾಂಛ್ರೋತುಮಿಚ್ಛಸಿ ।
ಜಾತಾ ತೇ ಚಿತ್ತಶುದ್ಧಿರ್ವೈ ಸ್ವಸ್ತಿ ಭೂಯಾನ್ಮಹಾಮತೇ ॥ ೮೦ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ದ್ವಿತೀಯೇ ವೈಷ್ಣವಖಂಡೇ ವೈಶಾಖಮಾಸಮಾಹಾತ್ಮ್ಯೇ ನಾರದಾಂಬರೀಷಸಂವಾದೇ
"ವ್ಯಾಧೋಪಾಖ್ಯಾನೇ ವ್ಯಾಧಸ್ಯ ಪೂರ್ವಜನ್ಮಕಥನಂ" ನಾಮ
ಅಷ್ಟಾದಶೋಽಧ್ಯಾಯಃ

ಆದುದರಿಂದಲೇ ಈ ಅರಣ್ಯದಲ್ಲಿಯೂ ನಿನಗೆ ನನ್ನೊಡನೆ ಸಮಾಗಮವು ಸಂಭವಿಸಿತು. ಇದರಿಂದಲೂ ನಿನಗೆ ಉತ್ತರೋತ್ತರ ಸೌಖ್ಯಪರಂಪರೆಯೂ ಪುತ್ರಪೌತ್ರಾದಿ ಸಂತತಿಯ ಅಭಿವೃದ್ಧಿಯೂ ಉಂಟಾಗುವುವು.

೭೯. ಎಲೈ ವ್ಯಾಧನೆ! ಇಂತು ನೀನು ಪೂರ್ವಜನ್ಮದಲ್ಲಿ ಮಾಡಿದ ಪಾಪ ಪುಣ್ಯಾತ್ಮಕವಾದ ಕರ್ಮವೆಲ್ಲವನ್ನೂ ನಿನಗೆ ವಿವರಿಸಿರುವೆನು. ಇದೆಲ್ಲವನ್ನೂ ನಾನು ದಿವ್ಯದೃಷ್ಟಿಯಿಂದ ತಿಳಿದು ನಿನಗೆ ಹೇಳಿರುವೆನು.

೮೦. ಮಹಾಪ್ರಾಜ್ಞನೆ! ನೀನು ಕೇಳಬಯಸುವ ಪ್ರಶ್ನೆಯು ಯಾವ ರಹಸ್ಯ ವಿಷಯಕ್ಕೆ ಸಂಬಂಧಿಸಿದ್ದರೂ ನಿನಗೆ ನಿರೂಪಿಸುತ್ತೇನೆ. ನಿನಗೀಗ ನಿಜವಾಗಿಯೂ ಮನಸ್ಸಿನ ಅಂತಶ್ಶುದ್ಧಿಯುಂಟಾಗಿರುವುದು ಸಂತೋಷವೇ ಸರಿ. ಇದರಿಂದ ನಿನಗೆ ಶ್ರೇಯಸ್ಸುಂಟಾಗುವುದು.

ಇಲ್ಲಿಗೆ ಎಂಬತ್ತೊಂದು ಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಎರಡನೆಯ ವೈಷ್ಣವಖಂಡದ ವೈಶಾಖಮಾಸಮಾಹಾತ್ಮ್ಯದ
ನಾರದಾಂಬರೀಷಸಂವಾದದಲ್ಲಿ "ವ್ಯಾಧೋಪಾಖ್ಯಾನ— ಪೂರ್ವಜನ್ಮಕಥನ"ವೆಂಬ
ಹದಿನೆಂಟನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥೈಕೋನವಿಂಶೋಽಧ್ಯಾಯಃ

### ವಾಯುಶಾಪಕಥನಂ

ವ್ಯಾಧ ಉವಾಚ :—

ವಿಷ್ಣುಮುದ್ದಿಶ್ಯ ಕರ್ತವ್ಯಾ ಧರ್ಮಾ ಭಾಗವತಾಃ ಶುಭಾಃ ।
ತತ್ರಾಪಿ ಮಾಧವೀಯಾಶ್ಚ ಇತ್ಯುಕ್ತಂ ತು ತ್ವಯಾ ಪುರಾ ॥ ೧ ॥
ಸ ವಿಷ್ಣುಃ ಕೀದೃಶೋ ಬ್ರಹ್ಮನ್ ಕಿಂ ವಾ ತಸ್ಯ ಹಿ ಲಕ್ಷಣಂ ।
ಕಿಂ ಮಾನಂ ತಸ್ಯ ಸದ್ಭಾವೈಃ ಕೈರ್ಜ್ಞೇಯೋ ಭಗವಾನ್ ವಿಭುಃ ॥ ೨ ॥
ಕೀದೃಶಾ ವೈಷ್ಣವಾ ಧರ್ಮಾಃ ಕೇನಾಽಸೌ ಪ್ರೀಯತೇ ಹರಿಃ ।
ಏತದಾಚಕ್ಷ್ವ ಮೇ ಬ್ರಹ್ಮನ್ ಕಿಂಕರಾಯ ಮಹಾಮತೇ ॥ ೩ ॥
ಇತಿ ಪೃಷ್ಟಸ್ತು ವ್ಯಾಧೇನ ಪುನಃ ಪ್ರಾಹ ಸ ವೈ ದ್ವಿಜಃ ।
ಪ್ರಣಮ್ಯ ಜಗತಾಮೀಶಂ ನಾರಾಯಣಮನಾಮಯಂ ॥ ೪ ॥

## ಕನ್ನಡದ ಅನುವಾದ

### ವಾಯುಶಾಪಕಥನವು

೧. ವ್ಯಾಧನು ಪ್ರಶ್ನೆಮಾಡುತ್ತಾನೆ:—ವಿಪ್ರೋತ್ತಮನೆ! ಪರಮಮಂಗಳಕರಗಳಾದ ಭಾಗವತ ಧರ್ಮಗಳನ್ನು ಶ್ರೀಹರಿಯನ್ನುದ್ದೇಶಿಸಿ ಆತನ ಪ್ರೀತಿಗಾಗಿಯೇ ಮಾಡಬೇಕೆಂದು ಹಿಂದೆ ಹೇಳಿದೆಯಲ್ಲವೆ. ಅವುಗಳಲ್ಲಿಯೂ ವೈಶಾಖಮಾಸಧರ್ಮಗಳನ್ನು ವಿಶೇಷಕರ್ತವ್ಯಗಳನ್ನಾಗಿ ನಿರೂಪಿಸಿರುವೆ.

೨. ಬ್ರಾಹ್ಮಣನೆ! ಆ ಮಹಾವಿಷ್ಣುವು ಎಂತಹವನು? ಆತನ ಲಕ್ಷಣವೇನು? ಸದಾಚಾರಗಳಿಂದ ಆತನನ್ನು ತಿಳಿಯಲು ಯಾವ ಪ್ರಮಾಣಗಳಿರುವುವು? ಷಡ್ಗುಣೈಶ್ವರ್ಯಸಹಿತನೂ ಸರ್ವವ್ಯಾಪಿಯೂ ಆದ ಆತನು ಯಾವ ಸಾಧಕರ ತಿಳುವಳಿಕೆಗೆ ವಿಷಯನಾಗುವನು?

೩. ವಿಷ್ಣುಭಕ್ತರು ಆಚರಿಸಬೇಕಾದ ಧರ್ಮಗಳು ಯಾವ ವಿಧವಾದವುಗಳು? ಯಾವ ಧರ್ಮದಿಂದ ಶ್ರೀಹರಿಯು ಸುಪ್ರೀತನಾಗುವನು? ಮಹಾಮತಿಯಾದ ಬ್ರಾಹ್ಮಣನೆ! ಇದೆಲ್ಲವನ್ನೂ ನನಗೆ ತಿಳಿಯುವಂತೆ ವಿಸ್ತಾರವಾಗಿ ಹೇಳುವವನಾಗು.

೪. ಇಂತೆಂದು ಕೇಳಿದ ವ್ಯಾಧನನ್ನು ಕುರಿತು ಆ ಶಂಖಬ್ರಾಹ್ಮಣನು ಸಕಲ ಲೋಕಗಳಿಗೆ ಅಧೀಶ್ವರನೂ ಆದಿಮಧ್ಯಾಂತರಹಿತನೂ ಆದ ನಾರಾಯಣನಿಗೆ ಮನಸ್ಸಿನಲ್ಲಿಯೇ ವಂದಿಸಿ ಪುನಃ ನಿರೂಪಿಸತೊಡಗಿದನು.

ಶಂಖ ಉವಾಚ:—

ಶೃಣು ವ್ಯಾಧ ಪ್ರವಕ್ಷ್ಯಾಮಿ ವಿಷ್ಣುರೂಪಮಕಲ್ಮಷಂ ।
ಯದಚಿಂತ್ಯಂ ವಿರಿಂಚಾದ್ಯೈರ್ಮುನಿಭಿರ್ಭಾವಿತಾತ್ಮಭಿಃ ॥ ೫ ॥
ಪೂರ್ಣಶಕ್ತಿಃ ಪೂರ್ಣಗುಣೋ ನಿರ್ದಿಷ್ಟಃ ಸಕಲೇಶ್ವರಃ ।
ನಿರ್ಗುಣೋ ನಿಷ್ಕಲೋಽನಂತಃ ಸಚ್ಚಿದಾನಂದವಿಗ್ರಹಃ ॥ ೬ ॥
ಯದೇತದಖಿಲಂ ವಿಶ್ವಂ ಚರಾಚರಮನೀದೃಶಂ ।
ಸಾಧಿಶಂಸಾಽಽಶ್ರಯಂ ಯಚ್ಚ ಯದ್ವಶೇ ನಿಯತಂ ಸ್ಥಿತಂ ॥ ೭ ॥
ಅಥ ತೇ ಲಕ್ಷಣಂ ವಚ್ಮಿ ಬ್ರಹ್ಮಣಃ ಪರಮಾತ್ಮನಃ ।
ಉತ್ಪತ್ತಿಸ್ಥಿತಿಸಂಹಾರಾ ಹ್ಯಾವೃತ್ತಿರ್ನಿಯಮಸ್ತಥಾ ॥ ೮ ॥
ಪ್ರಕಾಶೋ ಬಂಧಮೋಕ್ಷೌ ಚ ವೃತ್ತಿರ್ಯಸ್ಮಾದ್ಭವಂತ್ಯಮೀ ।
ಸ ವಿಷ್ಣುಃ ಬ್ರಹ್ಮಸಂಜ್ಞೋಽಸೌ ಕವೀನಾಂ ಸಮ್ಮತೋ ವಿಭುಃ ॥ ೯ ॥

---

೫–೬. ಶಂಖನು ಹೇಳುತ್ತಾನೆ:—ಎಲೈ ವ್ಯಾಧನೆ! ನಿನ್ನ ಪ್ರಶ್ನೆಗಳಿಗೆ ಕ್ರಮವಾಗಿ ಉತ್ತರಗಳನ್ನು ಹೇಳುವೆನು, ಕೇಳು. ಆ ಮಹಾವಿಷ್ಣುವಿನ ರೂಪವು ನಿಷ್ಕಲ್ಮಷವಾಗಿರುವುದು. ಬ್ರಹ್ಮನೇ ಮೊದಲಾದ ದೇವತೆಗಳಿಗೂ, ತಮ್ಮಲ್ಲಿಯೇ ಆತ್ಮಾನುಸಂಧಾನವನ್ನು ಮಾಡುತ್ತಿರುವ ಮುನಿಗಳಿಗೂ ಸಹ ಅಚಿಂತ್ಯವಾಗಿರುವುದು. ಆತನು ಸರ್ವಶಕ್ತಿಯುಕ್ತನು. ಸಕಲ ಸದ್ಗುಣವಿಭೂಷಿತನು. ಸಮಸ್ತ ಬ್ರಹ್ಮಾಂಡಕ್ಕೂ ಸ್ವಾಮಿಯೆಂದು ಕರೆಯಲ್ಪಡುವನು. ಸತ್ವರಜಸ್ತಮಗಳೆಂಬ ಗುಣತ್ರಯಗಳಿಗೆ ಅತೀತನಾಗಿರುವನು. ಸಕಲ ದೋಷಗಳಿಂದಲೂ ವರ್ಜಿತನು. ಶಾಶ್ವತನು. ಸತ್ಯಜ್ಞಾನಾನಂದಾತ್ಮಕವಾದ ಶರೀರವುಳ್ಳವನು.

೭. ಚರಾಚರಾತ್ಮಕವಾಗಿ ಯಾವ ಬ್ರಹ್ಮಾಂಡವು ನಮಗೆ ಪ್ರತ್ಯಕ್ಷಗೋಚರವಾಗಿರುವುದೊ, ಇದಕ್ಕೆ ಆಶ್ರಯವಾದ ಪರಮಾತ್ಮನ ದೇಹವು ಪಾಂಚಭೌತಿಕ ಪ್ರಪಂಚಕ್ಕೆ ವಿಪರೀತಲಕ್ಷಣವುಳ್ಳದ್ದೆಂದು ಶಾಸ್ತ್ರಗಳಲ್ಲಿ ನಿರ್ಣಯಿಸಲ್ಪಟ್ಟಿದೆ. ಆತನ ವಶದಲ್ಲಿಯೇ ಈ ವ್ಯಾಪಾರವೆಲ್ಲವೂ ನಿಯತರೂಪದಿಂದ ನಡೆಯುತ್ತಿರುವುದು.

೮–೯. ಇನ್ನು ನಿನಗೆ ಸರ್ವವ್ಯಾಪಕನೂ ಸರ್ವಾಂತರಾತ್ಮನೂ ಆದ ಆತನ ಲಕ್ಷಣಗಳನ್ನು ತಿಳಿಸುವೆನು. ಹದಿನಾಲ್ಕು ಲೋಕಗಳ ಸೃಷ್ಟಿ, ಸ್ಥಿತಿ, ಸಂಹಾರ, ಜೀವರ ಲೋಕಾಂತರಗಮನಗಳು, ಅಜ್ಞಾನುವರ್ತಿತ್ವ, ಜ್ಞಾನವು, ಸಂಸಾರಬಂಧ ಮತ್ತು ಮೋಕ್ಷಗಳೆಂಬ ಎಂಟು ವಿಷಯಗಳಲ್ಲಿ ಆತನು ಸರ್ವಸ್ವತಂತ್ರನಾಗಿರುವನು. ಆತನಿಂದಲೇ ಇವುಗಳೆಲ್ಲವೂ ಉಂಟಾಗುತ್ತಿರುವುವು. ಆತನೇ ಮಹಾವಿಷ್ಣುವು. ಆತನನ್ನೇ ಬ್ರಹ್ಮಪದದ ಲಕ್ಷ್ಯಾರ್ಥವನ್ನಾಗಿ ಹೇಳುವರು. ಪ್ರಪಂಚದ ಗುಟ್ಟನ್ನು ತಿಳಿದ ಜ್ಞಾನಿಗಳಿಗೆ ಆತನು ಪರಮಪ್ರಿಯನಾಗಿರುವನು. ಸಕಲವನ್ನೂ ಆವರಿಸಿಕೊಂಡಿರುವನು.

ಸಾಕ್ಷಾದ್ಬ್ರಹ್ಮೇತಿ ತಂ ಪ್ರಾಹುಃ ಪಶ್ಚಾದ್ಬ್ರಹ್ಮಾದಿಕಾನಪಿ ।
ಬ್ರಹ್ಮಶಬ್ದಂ ಸೋಪಪದಂ ಬ್ರಹ್ಮಾದಿಷು ವಿದೋ ವಿದುಃ ॥ ೧೦ ॥
ನಾನ್ಯೇಷಾಂ ಬ್ರಹ್ಮತಾ ಕ್ವಾಪಿ ತಚ್ಛಕ್ತ್ಯೇಕಾಂಶಭಾಗಿನಾಂ ।
ತದೇತಚ್ಛಾಸ್ತ್ರಗಮ್ಯಂ ಹಿ ಜನ್ಮಾದ್ಯಸ್ಯ ಮಹಾವಿಭೋಃ ॥ ೧೧ ॥
ಶಾಸ್ತ್ರಂ ಚ ವೇದಾಃ ಸ್ಮೃತಯಃ ಪುರಾಣಂ ವೈ ತದಾತ್ಮಕಂ ।
ಇತಿಹಾಸಃ ಪಂಚರಾತ್ರಂ ಭಾರತಂ ಚ ಮಹಾಮತೇ ॥ ೧೨ ॥
ಏತೈರೇವ ಮಹಾವಿಷ್ಣುರ್ಜ್ಞೇಯೋ ನಾನ್ಯೈಃ ಕಥಂಚನ ।
ನಾವೇದವಿದಮುಂ ವಿಷ್ಣುಂ ಮನುತೇ ಚ ನರಃ ಕ್ವಚಿತ್ ॥ ೧೩ ॥
ನೇಂದ್ರಿಯೈರ್ನಾನುಮಾನೈಶ್ಚ ನ ತರ್ಕೈಃ ಶಕ್ಯತೇ ವಿಭುಂ ।
ಜ್ಞಾತುಂ ನಾರಾಯಣಂ ದೇವಂ ವೇದವೇದ್ಯಂ ಸನಾತನಂ ॥ ೧೪ ॥

೧೦. ಆತನನ್ನೇ ಬ್ರಹ್ಮಪದದಿಂದ ಸಾಕ್ಷಾತ್ತಾಗಿ ನಿರೂಪಿಸಿರುವರು. ಬಳಿಕ ಆತನ ಅನಂತ ಶಕ್ತಿಗಳಲ್ಲಿ ಒಂದೊಂದಂಶದಿಂದ ಕೂಡಿರುವ ಚತುರ್ಮುಖನೇ ಮೊದಲಾದವರಿಗೂ ಆ ಪದವು ಉಪಚರಿತಾರ್ಥವಾಯಿತು. ಆದುದರಿಂದ ಬ್ರಹ್ಮಾದಿ ದೇವತೆಗಳಲ್ಲಿ ಬ್ರಹ್ಮಶಬ್ದವು ಶಕ್ತ್ಯಂಶವನ್ನು ಸೂಚಿಸುವ ಉಪಪದವೆಂದೇ ಬಲ್ಲವರು ಹೇಳುವರು.

೧೧. ಆತನ ಶಕ್ತಿಯ ಏಕಾಂಶದಿಂದ ಕೂಡಿರುವ ಇತರರಿಗೆ ಯಾರಿಗೂ ಎಂದಿಗೂ ಬ್ರಹ್ಮಪದದ ಮುಖ್ಯಾರ್ಥವು ಅನ್ವಯಿಸುವುದಿಲ್ಲ. ಈ ಬ್ರಹ್ಮಾಂಡದ ಸೃಷ್ಟಿ, ಸ್ಥಿತಿ, ಲಯಗಳು ಸರ್ವಜ್ಞನೂ ಸರ್ವಶಕ್ತಿಸಹಿತನೂ ಆದ ಆತನಿಂದ ಹೇಗೆ ಉಂಟಾದುವೆಂಬ ವಿಷಯವು ಕೇವಲ ಶಾಸ್ತ್ರಗಳ ಬಲದಿಂದಲೇ ತಿಳಿಯ ಬೇಕಾಗಿರುವುದು.

೧೨. ಎಲೈ ಮಹಾಪ್ರಾಜ್ಞನೆ! ನಾಲ್ಕು ವೇದಗಳು, ಸ್ಮೃತಿಗ್ರಂಥಗಳು, ಅವುಗಳ ನಿರ್ಣೀತಾರ್ಥಗಳನ್ನು ವಿವರಿಸುವ ಪುರಾಣಗಳು, ಇತಿಹಾಸಗಳು, ಪಾಂಚರಾತ್ರಾಗಮವು ಮತ್ತು ಮಹಾಭಾರತವು— ಇವುಗಳನ್ನು ಮಾತ್ರ ಶಾಸ್ತ್ರಗಳೆಂದು ಕರೆಯಬೇಕು.

೧೩. ಇವುಗಳಿಂದ ಮಹಾವಿಷ್ಣುವು ತಿಳಿಯಲ್ಪಡುವನು. ಇತರ ಸಾಧನ ಗಳಿಂದ ಎಂದಿಗೂ ಜ್ಞೇಯನಾಗಲಾರನು. ಆದುದರಿಂದ ವೇದಗಳನ್ನು ಅರ್ಥ ಸಹಿತವಾಗಿ ತಿಳಿದ ಮಾನವನಲ್ಲದೆ ಮತ್ತೆ ಯಾವನೂ ಶ್ರೀಮಹಾವಿಷ್ಣುವನ್ನು ಯಥಾವತ್ತಾಗಿ ತಿಳಿಯಲಾರನು.

೧೪. ಸರ್ವಾಂತರ್ಯಾಮಿಯೂ, ದೇವದೇವನೂ, ವೇದಪ್ರತಿಪಾದ್ಯನೂ, ಸನಾತನನೂ ಆದ ನಾರಾಯಣನನ್ನು ಶಾಸ್ತ್ರಗಳಿಂದಲ್ಲದೆ ಜ್ಞಾನೇಂದ್ರಿಯ,

ಅಸ್ಯೈವ ಜನ್ಮಕರ್ಮಾಣಿ ಗುಣಾನ್ ಜ್ಞಾತ್ವಾ ಯಥಾಮತಿ ।
ಮುಚ್ಯಂತೇ ಜೀವಸಂಘಾಶ್ಚ ಸದಾ ತದ್ವಶವರ್ತಿನಃ ॥ ೧೫ ॥
ಕ್ರಮಾದ್ವಿಷ್ಣೋಶ್ಚ ಮಾಹಾತ್ಮ್ಯಂ ಯಥಾ ಸಾತಿಶಯಂ ಭವೇತ್ ।
ಏಕೈಕಸ್ಮಿನ್ ಸ್ಥಿತಾ ಶಕ್ತಿರ್ದೇವರ್ಷಿಪಿತೃಮಾತೃಕೇ ॥ ೧೬ ॥
ಪ್ರತ್ಯಕ್ಷೇಣಾಗಮೇನಾಪಿ ತಥೈವಾನುಮಯಾಪಿ ಚ ।
ಆದೌ ನರೋತ್ತಮಂ ವಿದ್ಯಾದ್ಬಲೇ ಜ್ಞಾನೇ ಸುಖೇ ತಥಾ ॥ ೧೭ ॥
ತಸ್ಮಾದ್ಭೂತಂ ಶತಗುಣಂ ವಿದ್ಯಾಜ್ಜ್ಞಾನಾದಿಭಿರ್ಯುತಂ ।
ಭೂತಾನ್ಮನುಷ್ಯಗಂಧರ್ವಾನ್ವಿದ್ಯಾಚ್ಛತಗುಣಾಧಿಕಾನ್ ॥ ೧೮ ॥
ತತ್ವಾಭಿಮಾನಿನೋ ದೇವಾನ್ತೇಭ್ಯೋ ವಿದ್ಯಾಚ್ಛತಾಧಿಕಾನ್ ।
ತತ್ವಾಭಿಮಾನಿದೇವೇಭ್ಯಃ ಸಪ್ತೈವ ಋಷಯೋ ವರಾಃ ॥ ೧೯ ॥

---

ಕರ್ಮೇಂದ್ರಿಯಗಳಿಂದಾಗಲಿ, ಊಹಾಪೋಹಗಳಿಂದಾಗಲಿ, ತರ್ಕದಿಂದಾಗಲಿ ತಿಳಿಯಲು ಎಂದಿಗೂ ಸಾಧ್ಯವಾಗುವುದಿಲ್ಲ.

೧೫. ಭೂಭಾರಹರಣಾರ್ಥವಾಗಿ ಅವತಾರಗಳನ್ನೆತ್ತಿದ ಆ ಪರಮಾತ್ಮನ ಜನ್ಮಕಥೆಗಳನ್ನೂ ಕರ್ಮವಿಶೇಷಗಳನ್ನೂ ಸದ್ಗುಣಗಳನ್ನೂ ಪುರಾಣಾದಿಗಳಿಂದ ಜೀವಕೋಟಿಗಳು ತಮ್ಮ ತಮ್ಮ ಯೋಗ್ಯತೆಗನುಸಾರವಾಗಿ ತಿಳಿದುಕೊಂಡು ಸರ್ವಸ್ವತಂತ್ರನಾದ ಆತನ ಅಧೀನದಲ್ಲಿಯೇ ವರ್ತಿಸುವವರಾಗಿ ಸಂಸಾರ ಬಂಧನದಿಂದ ಮುಕ್ತಿಯನ್ನು ಪಡೆಯುವರು.

೧೬. ಇನ್ನು ದೇವತೆಗಳು, ಮಹರ್ಷಿಗಳು, ಪಿತೃಗಳು, ಮಾತೃಗಳು ಮುಂತಾದವರಲ್ಲಿ ಒಬ್ಬರಿಗಿಂತ ಒಬ್ಬರಲ್ಲಿ ಯಾವ ಕ್ರಮದಿಂದ ವಿಷ್ಣುವಿನ ಶಕ್ತಿಯು ಅಧಿಕತರವಾಗಿ ನೆಲಸಿ ಆತನ ಮಾಹಾತ್ಮ್ಯವನ್ನು ಪ್ರಕಾಶಗೊಳಿಸುತ್ತಿರುವುದೆಂಬಂಶವನ್ನು ವಿವರಿಸುವೆನು.

೧೭. ಇವುಗಳಲ್ಲಿ ಕೆಲವು ವಿಷಯಗಳನ್ನು ಪ್ರತ್ಯಕ್ಷದಿಂದಲೂ, ಕೆಲವನ್ನು ವೇದಾದಿಶಾಸ್ತ್ರಗಳ ಪ್ರಮಾಣದಿಂದಲೂ, ಉಳಿದುವನ್ನು ತರ್ಕಾವಷ್ಟಂಭ ಸಹಿತವಾದ ಅನುಮಾನದಿಂದಲೂ ತಿಳಿದುಕೊಳ್ಳಬೇಕು. ಪ್ರಥಮದಲ್ಲಿ ಬಲದಿಂದಲೂ, ಜ್ಞಾನದಿಂದಲೂ, ಸೌಖ್ಯದಿಂದಲೂ ಸಕಲ ಮಾನವರಿಗಿಂತ ಮಹಾರಾಜನು ಉತ್ತಮನೆಂಬುದು ಪ್ರತ್ಯಕ್ಷಸಿದ್ಧವಾಗಿರುವುದು.

೧೮. ಆತನಿಗಿಂತಲೂ ಜ್ಞಾನಾದಿ ಸಕಲ ಸದ್ಗುಣಭರಿತನಾದ ಮಾನವನು ನೂರುಮಡಿ ಉತ್ತಮನೆಂದು ತಿಳಿಯಬೇಕು. ಆ ಜ್ಞಾನಿಗಿಂತಲೂ ಮನುಷ್ಯ ಗಂಧರ್ವರೆಂಬುವರು ನೂರುಮಡಿ ಅಧಿಕರಾಗಿರುವರು.

೧೯. ಆ ಮನುಷ್ಯಗಂಧರ್ವರಿಗಿಂತಲೂ ನೂರರಷ್ಟು ಆಧಿಕ್ಯವನ್ನು ತತ್ವಾಭಿಮಾನಿ ದೇವತೆಗಳು ಪಡೆದಿರುವರು. ಆ ತತ್ವಾಭಿಮಾನಿ ದೇವತೆ

ಸಪ್ತರ್ಷಿಭ್ಯೋ ವರೋ ಹ್ಯಗ್ನಿರಗ್ನೇಃ ಸೂರ್ಯಾದಯಸ್ತಥಾ ।
ಸೂರ್ಯಾದ್ಗುರುರ್ಗುರೋಃ ಪ್ರಾಣಃ ಪ್ರಾಣಾದಿಂದ್ರೋ ಮಹಾಬಲಃ ॥
ಇಂದ್ರಾಚ್ಚ ಗಿರಿಜಾ ದೇವೀ ದೇವ್ಯಾಃ ಶಂಭುರ್ಜಗದ್ಗುರುಃ ।
ಶಂಭೋರ್ಬುದ್ಧಿರ್ಮಹಾದೇವೀ ಬುದ್ಧೇಃ ಪ್ರಾಣೋ ಬಲಾಧಿಕಃ॥ ೨೧ ॥
ನ ಪ್ರಾಣಾತ್ಪರಮಂ ಕಿಂಚಿತ್ಪ್ರಾಣೇ ಸರ್ವಂ ಪ್ರತಿಷ್ಠಿತಂ ।
ಪ್ರಾಣಾಜ್ಜಾತಮಿದಂ ವಿಶ್ವಂ ಪ್ರಾಣಾತ್ಮಕಮಿದಂ ಜಗತ್ ॥ ೨೨ ॥
ಪ್ರಾಣೇ ಪ್ರೋತಮಿದಂ ಸರ್ವಂ ಪ್ರಾಣಾದೇವ ಹಿ ಚೇಷ್ಟತೇ ।
ಸರ್ವಾಧಾರಮಿಮಂ ಪ್ರಾಹುಃ ಸೂತ್ರಂ ನೀಲಾಂಬುದಪ್ರಭಂ ॥ ೨೩ ॥
ಲಕ್ಷ್ಮೀಕಟಾಕ್ಷಮಾತ್ರೇಣ ಪ್ರಾಣಸ್ಯಾಸ್ಯ ಸ್ಥಿತಿರ್ಭವೇತ್ ।
ಸಾ ಲಕ್ಷ್ಮೀರ್ದೇವದೇವಸ್ಯ ಕೃಪಾಲೇಶೈಕಭಾಜಿನೀ ॥ ೨೪ ॥

---

ಗಳಿಗಿಂತಲೂ ಮರೀಚಿ, ಅತ್ರಿ, ಅಂಗಿರ, ಪುಲಹ, ಪುಲಸ್ತ್ಯ, ಕ್ರತು ಮತ್ತು ವಸಿಷ್ಠರೆಂಬ ಸಪ್ತರ್ಷಿಗಳು ಉತ್ತಮರೆನಿಸಿರುವರು.

೨೦. ಸಪ್ತರ್ಷಿಗಳಿಗಿಂತಲೂ ಅಗ್ನಿಯು ಉತ್ತಮನು. ಹಾಗೆಯೇ ಅಗ್ನಿಗಿಂತಲೂ ಸೂರ್ಯದೇವನು ಶ್ರೇಷ್ಠನು. ಸೂರ್ಯನಿಗಿಂತ ಬೃಹಸ್ಪತಿಯು ದೊಡ್ಡವನು. ಆತನಿಗಿಂತ ವಾಯುವೂ, ವಾಯುವಿಗಿಂತ ಮಹಾ ಪರಾಕ್ರಮಿಯಾದ ಮಹೇಂದ್ರನೂ ಉತ್ತಮರಾಗಿರುವರು.

೨೧. ಇಂದ್ರನಿಗಿಂತಲೂ ಪಾರ್ವತೀದೇವಿಯು ಉತ್ತಮಳು. ದೇವಿಗಿಂತಲೂ ಲೋಕಗುರುವಾದ ಮಹೇಶ್ವರನು ಅಧಿಕನು. ಶಂಭುವಿಗಿಂತಲೂ ಬುದ್ಧ್ಯಭಿಮಾನಿದೇವತೆಯು ಶ್ರೇಷ್ಠಳು. ಬುದ್ಧಿಗಿಂತಲೂ ಮುಖ್ಯಪ್ರಾಣನು ಬಲದಲ್ಲಿ ಅಧಿಕನು.

೨೨. ಪ್ರಾಣಕ್ಕಿಂತಲೂ ಪ್ರಿಯವಾದುದು ಬೇರೆ ಯಾವುದೂ ಇಲ್ಲವು. ಪ್ರಾಣದಲ್ಲಿಯೇ ಸಕಲವೂ ನೆಲೆಯನ್ನು ಹೊಂದಿರುವುದು. ಈ ಬ್ರಹ್ಮಾಂಡವೆಲ್ಲವೂ ಪ್ರಾಣದಿಂದಲೇ ವ್ಯಾಕೃತವಾಗಿರುವುದು. ಜಗತ್ತೂ ಸಹ ಪ್ರಾಣಾತ್ಮಕವಾಗಿಯೇ ಇರುವುದು.

೨೩. ದೃಶ್ಯಮಾನ ಪ್ರಪಂಚವೆಲ್ಲವೂ ಪ್ರಾಣದಲ್ಲಿಯೇ ಅನುಸ್ಯೂತವಾಗಿರುವುದು. ಪ್ರಾಣಶಕ್ತಿಯಿಂದಲೇ ಚಲನವಲನವ್ಯಾಪಾರಗಳನ್ನು ನಡೆಸುತ್ತಿರುವುದು. ನೀಲಮೇಘದ ಕಾಂತಿಯೊಡಗೂಡಿದ ಈ ಪ್ರಾಣಶಕ್ತಿಯನ್ನೇ ಸಮಸ್ತಕ್ಕೂ ಆಧಾರವೆಂದೂ ಚೇಷ್ಟಾಪ್ರೇರಕವೆಂದೂ ಶಾಸ್ತ್ರಜ್ಞರು ಹೇಳುವರು.

೨೪. ಶ್ರೀಮಹಾಲಕ್ಷ್ಮಿಯ ಕಟಾಕ್ಷವೀಕ್ಷಣದಿಂದಲೇ ಈ ಪ್ರಾಣಕ್ಕೆ ಇಷ್ಟು ಪ್ರಾಮುಖ್ಯತೆಯುಂಟಾಗಿರುವುದು. ಆ ಲಕ್ಷ್ಮೀದೇವಿಯೂ ದೇವತಾ

ನ ವಿಷ್ಣೋಃ ಪರಮಂ ಕಿಂಚಿನ್ನ ಸಮೋ ವಾ ಕಥಂಚನ ।

ವ್ಯಾಧ ಉವಾಚ:—

ಕಥಂ ಜೀವೇಷ್ವಯಂ ಪ್ರಾಣಃ ಸೂತ್ರನಾಮಾಧಿಕೋಽಭವತ್ ॥ ೨೫ ॥

ನಿರ್ಣಯೋ ವಾ ಕಥಂ ಹ್ಯಸ್ಯ ಪ್ರಾಣಾಧಿಕ್ಯಂ ಕಥಂ ವಿಭೋಃ ।

ಏತದಾಚಕ್ಷ್ವ ಮೇ ಬ್ರಹ್ಮನ್ ಕಥಂ ಪ್ರಾಣಾದ್ವಿಭುಃ ಪರಃ ॥ ೨೬ ॥

ಶಂಖ ಉವಾಚ:—

ಶೃಣು ವ್ಯಾಧ ಪ್ರವಕ್ಷ್ಯಾಮಿ ಯತ್ಪೃಷ್ಟೋ ನಿರ್ಣಯಸ್ತ್ವಯಾ ।

ಪ್ರಾಣಾಧಿಕ್ಯಂ ಸಮುದ್ದಿಶ್ಯ ಜೀವೈಶ್ಚ ಸಕಲೈರಪಿ ॥ ೨೭ ॥

ಪುರಾ ನಾರಾಯಣೋ ದೇವಃ ಪದ್ಮಸೃಷ್ಟೌ ಸನಾತನಃ ।

ಸೃಷ್ಟ್ವಾ ಬ್ರಹ್ಮಾದಿಕಾನ್ ದೇವಾನಿದಂ ಪ್ರಾಹ ಜನಾರ್ದನಃ ॥ ೨೮ ॥

ಸಾಮ್ರಾಜ್ಯೇಽಹಂ ಸ್ಥಾಪಯೇಽಯಂ ಬ್ರಹ್ಮಾಣಂ ವಃ ಪತಿಂ ಪ್ರಭುಂ ।

ಯೋ ಯುಷ್ಮಾಸ್ವಧಿಕೋ ದೇವೋ ಯೌವರಾಜ್ಯೇ ಸುರೇಶ್ವರಾಃ ।

ತಂ ಸ್ಥಾಪಯತ ಶೀಲಾಢ್ಯಂ ಶೌರ್ಯೌದಾರ್ಯಗುಣಾನ್ವಿತಂ ॥ ೨೯ ॥

---

ಸಾರ್ವಭೌಮನಾದ ಶ್ರೀಮನ್ನಾರಾಯಣನ ಕೃಪಾವಲೋಕನದ ಒಂದಂಶಕ್ಕೆ ಮಾತ್ರ ಪಾತ್ರಳಾಗಿರುವಳು.

೨೫. ಮಹಾವಿಷ್ಣುವಿಗಿಂತಲೂ ಉತ್ತಮನೆನಿಸಿದುದಾಗಲಿ, ಆತನಿಗೆ ಸಮಾನವೆನಿಸಿದುದಾಗಲಿ ಯಾವುದೂ ಎಲ್ಲಿಯೂ ಇರುವುದಿಲ್ಲ. ವ್ಯಾಧನು ಪ್ರಶ್ನೆಮಾಡುತ್ತಾನೆ:—ಈ ಮುಖ್ಯಪ್ರಾಣನು ಸಕಲ ಜೀವರಲ್ಲಿಯೂ ಚೇಷ್ಟಾ ಪ್ರವರ್ತಕನಾಗಿ ಸರ್ವಾಧಿಕನೆನಿಸಿದುದು ಹೇಗೆ?

೨೬. ಈ ವಿಷಯವನ್ನು ಹೇಗೆ ತಾನೆ ನಿರ್ಣಯಮಾಡಲಾಯಿತು? ಪ್ರಾಣಕ್ಕೆ ಉತ್ತಮತ್ವವು ಬಂದುದು ಹೇಗೆ? ಎಲೈ ಸರ್ವಜ್ಞನಾದ ಬ್ರಾಹ್ಮಣೋತ್ತಮನೆ! ಪ್ರಾಣಕ್ಕಿಂತಲೂ ಸರ್ವೇಶ್ವರನಾದ ಶ್ರೀಹರಿಯು ಹೇಗೆ ಸರ್ವೋತ್ತಮನಾದನು? ಈ ವಿಷಯಗಳೆಲ್ಲವನ್ನೂ ನನಗೆ ತಿಳಿಯುವಂತೆ ನಿರೂಪಿಸುವವನಾಗು.

೨೭. ಶಂಖನು ಹೇಳುತ್ತಾನೆ:—ಎಲೈ ವ್ಯಾಧನೆ! ನೀನು ಕೇಳಿದ ಪ್ರಾಣಾಧಿಕ್ಯವಿಷಯಕವಾದ ಪ್ರಶ್ನೆಗಳಿಗೆ ಉತ್ತರವನ್ನು ಹೇಳುವೆನು, ಕೇಳು. ಸಕಲ ಜೀವರಲ್ಲಿಯೂ ಮುಖ್ಯಪ್ರಾಣನು ಉತ್ತಮನಾದುದನ್ನೂ ನಿರೂಪಿಸುವೆನು.

೨೮–೨೯. ಪದ್ಮಕಲ್ಪದಲ್ಲಿ ದೇವೋತ್ತಮನೂ, ಅನಾದಿನಿಧನನೂ, ಜನಾರ್ದನನೂ ಆದ ನಾರಾಯಣನು ಬ್ರಹ್ಮನೇ ಮೊದಲಾದ ಸಕಲ ದೇವತೆಗಳನ್ನೂ ಸೃಷ್ಟಿಮಾಡಿ ಅವರಿಗೆ ಮುಂದೆ ಹೇಳುವಂತೆ ಅಪ್ಪಣೆಯನ್ನು ಮಾಡಿದನು.ನಿಮಗೆಲ್ಲ ನಾಯಕನಾಗಿಯೂ ಪ್ರಭುವಾಗಿಯೂ ಈ ಚತುರ್ಮುಖ ಬ್ರಹ್ಮನನ್ನು ಅಧಿಕಾರದಲ್ಲಿ ಸ್ಥಾಪಿಸಿರುವೆನು. ಎಲೈ ದೇವತೆಗಳಿರಾ! ನಿಮ್ಮಲ್ಲಿ

ಇತ್ಯುಕ್ತ್ವಾ ವಿಭುನಾ ದೇವಾಃ ಸರ್ವೇ ಶಕ್ರಪುರೋಗಮಾಃ ।
ಏವಂ ವಿವದಿರೇಽನ್ಯೋನ್ಯಮಹಂ ಭೂಯಾಮಹಂ ತ್ವಿತಿ ॥ ೩೦ ॥
ಸರ್ವೇ ವಿವದಮಾನಾಶ್ಚ ಸೂರ್ಯಂ ಕೇಚಿತ್ಪರಂ ವಿದುಃ ।
ಶಕ್ರಂ ಕೇಚಿತ್ಪರಂ ಕಾಮಂ ಕೇಚಿತ್ತೂಷ್ಣೀಂ ತು ತಸ್ಥಿರೇ ॥ ೩೧ ॥
ತೇ ನಿರ್ಣಯಮಪಶ್ಯಂತಃ ಪ್ರಷ್ಟುಂ ನಾರಾಯಣಂ ಯಯುಃ ।
ನಮಸ್ಕೃತ್ಯ ಪುನಃ ಪ್ರಾಹುಃ ಸರ್ವೇ ಪ್ರಾಂಜಲಯೋಽಮರಾಃ ॥ ೩೨ ॥
ವಿಚಾರಿತಂ ಮಹಾವಿಷ್ಣೋ ಸರ್ವೈರಸ್ಮಾಭಿರಂಜಸಾ ।
ಅಸ್ಮಾಸು ದೇವಮಧಿಕಂ ನೈವ ವಿದ್ಮಃ ಕಥಂಚನ ॥ ೩೩ ॥
ತ್ವಮೇವ ನಿರ್ಣಯಂ ಬ್ರೂಹಿ ದೇವಾಃ ಸಂಶಯಿನಃ ಖಲು ।
ಇತಿ ಪೃಷ್ಟೋಽಮರೈಃ ಸರ್ವೈಃ ಪ್ರಹಸನ್ನಿದಮಬ್ರವೀತ್ ॥ ೩೪ ॥

---

ಯಾವನು ಬಲಾಧಿಕನೆಂದು ನೀವು ತಿಳಿದಿರುವಿರೊ, ಯಾವನು ಸೌಶೀಲ್ಯವಂತನೂ ಶೌರ್ಯ, ಔದಾರ್ಯಗಳೇ ಮುಂತಾದ ಸದ್ಗುಣಗಳುಳ್ಳವನೂ ಆಗಿರುವನೊ, ಅಂತಹ ಪುರುಷನನ್ನು ನೀವೇ ಯೌವರಾಜ್ಯಪದವಿಗೆ ಆರಿಸಿಕೊಳ್ಳಿರಿ.

೩೦. ಇಂತೆಂದು ಲೋಕೇಶ್ವರನು ಅಪ್ಪಣೆಯನ್ನು ಮಾಡಲು ಮಹೇಂದ್ರನೇ ಮೊದಲಾದ ದೇವತೆಗಳೆಲ್ಲರೂ "ನಾನೇ ಶ್ರೇಷ್ಠನು; ನಾನೇ ಉತ್ತಮನು" ಎಂಬುದಾಗಿ ತಮ್ಮತಮ್ಮಲ್ಲಿಯೇ ವಿವಾದಮಾಡಲಾರಂಭಿಸಿದರು.

೩೧. ಇಂತು ಎಲ್ಲರೂ ಜಗಳವನ್ನಾಡುವರಾಗಿ ಕೆಲವರು ಸೂರ್ಯನನ್ನು ಉತ್ತಮನೆಂದು ಕರೆದರು. ಮತ್ತೆ ಕೆಲವರು ತಮ್ಮ ಮನಸ್ಸಿಗೆ ಬಂದಂತೆ ಇಂದ್ರನೇ ಸರ್ವಶ್ರೇಷ್ಠನೆಂದು ಹೇಳಿದರು. ಹಲವರು ತಮಗೆ ಈ ಗೊಡವೆಯೇ ಬೇಡವೆಂದು ಮಾತನಾಡದೆ ಇದ್ದುಬಿಟ್ಟರು.

೩೨. ಈ ರೀತಿಯಾಗಿ ವಿವಾದವನ್ನು ಮಾಡುತ್ತ ತಮ್ಮಲ್ಲಿಯೇ ಯಾವ ನಿಶ್ಚಯವನ್ನೂ ಮಾಡಲಾರದವರಾಗಿ ಶ್ರೀಮನ್ನಾರಾಯಣನನ್ನೇ ಕೇಳಿ ತಿಳಿದುಕೊಳ್ಳಬೇಕೆಂದು ಅವರೆಲ್ಲರೂ ಹೊರಟರು. ಮತ್ತು ನಮಸ್ಕಾರವನ್ನು ಮಾಡಿ ಕೈಗಳನ್ನು ಮುಗಿದುಕೊಂಡು ಆ ದೇವತೆಗಳು ವಿಜ್ಞಾಪಿಸಿಕೊಂಡರು.

೩೩. ಮಹಾವಿಷ್ಣುವೆ! ನಿನ್ನ ಅಪ್ಪಣೆಯಂತೆ ನಾವೆಲ್ಲರೂ ಸೇರಿ ನಮ್ಮಲ್ಲಿ ಯಾವ ದೇವನು ಅಧಿಕನೆಂಬ ವಿಷಯವನ್ನು ಕುರಿತು ಬಹುವಾಗಿ ವಿಚಾರ ಮಾಡಿದೆವು. ಆದರೂ ಯಾರ ಸರ್ವೋತ್ತಮತ್ವವನ್ನೂ ತಿಳಿಯಲು ನಾವು ಶಕ್ತರಾಗಲಿಲ್ಲವು.

೩೪. ದೇವತೆಗಳಾದ ನಾವೆಲ್ಲರೂ ಈ ವಿಷಯದಲ್ಲಿ ಸಂಶಯಗ್ರಸ್ತರಾಗಿರುವೆವಾದುದರಿಂದ ನೀನೇ ನಿರ್ಣಯವನ್ನು ಹೇಳುವವನಾಗು. ಇಂತೆಂದು ಸಕಲ ದೇವತೆಗಳೂ ಕೇಳಲು ಶ್ರೀಹರಿಯು ನಗುತ್ತ ಅವರಿಗಿಂತೆಂದನು.

ದೇಹಾದಸ್ಮಾಚ್ಚ ವೈರಾಜಾದ್ಯಸ್ಮಿನ್ನಿಷ್ಕ್ರಾಮತಿ ಹ್ಯಯಂ ॥ ೩೫ ॥
ಪತಿಷ್ಯತಿ ಪ್ರವಿಷ್ಟೇ ತು ಯಸ್ಮಿನ್ನುತ್ಥಿತೋ ಭವೇತ್ ।
ಸ ದೇವೋ ಹ್ಯಧಿಕೋ ನೂನಂ ನಾಪರಸ್ತು ಕಥಂಚನ ॥ ೩೬ ॥
ಇತ್ಯುಕ್ತಾಸ್ತೇ ತತಃ ಸರ್ವೇ ತಥಾಸ್ತ್ವಿತಿ ವಚೋಽಬ್ರುವನ್ ।
ನಿಶ್ಚಕ್ರಾಮ ಜಯಂತಾಹ್ವಃ ಪಾದಾತ್ಪೂರ್ವಂ ಸುರೇಶ್ವರಃ ॥ ೩೭ ॥
ತದಾ ಪಂಗುಮಮುಂ ಪ್ರಾಹುರ್ನ ದೇಹಃ ಪತಿತಸ್ತದಾ ।
ಶೃಣ್ವನ್ ಪಿಬನ್ ವದಂಜಿಘ್ರನ್ ಪಶ್ಯನ್ನಾಸ್ತೇಽ ಚಲನ್ನಪಿ ॥ ೩೮ ॥
ಪಶ್ಚಾದ್ಗುಹ್ಯಾದ್ವಿನಿಷ್ಕ್ರಾಂತೋ ದಕ್ಷೋನಾಮ ಪ್ರಜಾಪತಿಃ ।
ತದಾ ಷಂಡಮಮುಂ ಪ್ರಾಹುರ್ನ ದೇಹಃ ಪತಿತಸ್ತದಾ ॥ ೩೯ ॥
ಶೃಣ್ವನ್ ಪಿಬನ್ವದನ್ ಜಿಘ್ರನ್ ಪಶ್ಯನ್ನಾಸ್ತೇ ಚಲನ್ನಪಿ ।
ಪಶ್ಚಾದ್ಧಸ್ತಾದ್ವಿನಿಷ್ಕ್ರಾಂತ ಇಂದ್ರಃ ಸರ್ವಾಮರೇಶ್ವರಃ ॥ ೪೦ ॥

೩೫–೩೬. ಈ ವಿರಾಡ್ದೇಹದಿಂದ ಯಾವ ದೇವತೆಯು ತನ್ನ ಸ್ಥಾನವನ್ನು ತ್ಯಜಿಸಿದರೆ ದೇಹವು ನಾಶವನ್ನು ಹೊಂದುವುದೊ, ಯಾವನು ಪ್ರವೇಶಮಾಡಲು ಶರೀರವು ಎದ್ದು ವ್ಯಾಪಾರವನ್ನು ನಡೆಸುವುದೊ, ಅವನೇ ನಿಜವಾಗಿಯೂ ನಿಮ್ಮೆಲ್ಲರಲ್ಲಿಯೂ ಸರ್ವಾಧಿಕನಾಗಿರುವವನು. ಮತ್ತೊಬ್ಬನು ಯಾವನೂ ಜೀವೋತ್ತಮನಾಗಲಾರನು.

೩೭. ಇಂತೆಂದು ಪರಮಾತ್ಮನು ನಿರೂಪಿಸಲು ಹಾಗೆಯೇ ನಿರ್ಣಯವನ್ನು ಮಾಡಿಕೊಳ್ಳುವೆವೆಂದು ಹೇಳಿ ದೇವತೆಗಳೆಲ್ಲರೂ ಹಿಂದಿರುಗಿದರು. ಮೊದಲು ಚಲನಕ್ರಿಯೆಗೆ ಅಧಿದೇವತೆಯಾದ ಜಯಂತನೆಂಬ ದೇವತೆಯು ಪಾದಗಳನ್ನು ಬಿಟ್ಟು ಹೊರಟನು.

೩೮. ಆದರೆ ಇದರಿಂದ ಮನುಷ್ಯನನ್ನು ಕುಂಟನೆಂದು ವ್ಯವಹರಿಸಿದರೇ ಹೊರತು ಆತನಿಗೆ ದೇಹಪಾತವಾಗಲಿಲ್ಲ. ಓಡಾಟವಿಲ್ಲದಿದ್ದರೂ ಮುನ್ನಿನಂತೆಯೇ ಆತನು ಕೇಳುತ್ತಲೂ, ಕುಡಿಯುತ್ತಲೂ, ಮಾತನಾಡುತ್ತಲೂ, ವಾಸನೆಯನ್ನು ನೊಡುತ್ತಲೂ, ನೋಟವುಳ್ಳವನಾಗಿಯೂ ಇರುತ್ತಿದ್ದನು.

೩೯. ದಕ್ಷನೆಂಬ ಪ್ರಜಾಪತಿಯು ಶಿಶ್ನಪ್ರದೇಶವನ್ನು ಬಿಟ್ಟು ಹೊರಟನು. ಆಗಲೂ ಆತನನ್ನು ಜನರು ನಪುಂಸಕನೆಂದು ಮಾತ್ರ ಕರೆಯುತ್ತಿದ್ದರು. ದೇಹವು ಮಾತ್ರ ಶಿಥಿಲವಾಗಲಿಲ್ಲವು.

೪೦. ಎಂದಿನಂತೆಯೇ ಆ ಮನುಷ್ಯನು ಕೇಳುತ್ತಲೂ, ಕುಡಿಯುತ್ತಲೂ, ಮಾತನಾಡುತ್ತಲೂ, ಮೂಸಿನೋಡುತ್ತಲೂ, ನೋಡುತ್ತಲೂ, ಓಡಾಡುತ್ತಲೂ

ಹಸ್ತಹೀನಮಮುಂ ಪ್ರಾಹುರ್ನ ದೇಹಃ ಪತಿತಸ್ತದಾ ।
ಶೃಣ್ವನ್ ಪಿಬನ್ವದನ್ ಜಿಘ್ರನ್ ಪಶ್ಯನ್ನಾಸ್ತೇ ಚಲನ್ನಪಿ ॥ ೪೧ ॥
ಲೋಚನಾಭ್ಯಾಂ ವಿನಿಷ್ಕ್ರಾಂತಃ ಸೂರ್ಯಸ್ತೇಜಸ್ವಿನಾಂ ವರಃ ।
ತದಾ ಕಾಣಮಮುಂ ಪ್ರಾಹುರ್ನ ದೇಹಃ ಪತಿತಸ್ತದಾ ॥ ೪೨ ॥
ಶೃಣ್ವನ್ ಪಿಬನ್ವದನ್ ಜಿಘ್ರನ್ಸ್ಪೃಶನ್ನಾಸ್ತೇ ಚಲನ್ನಪಿ ।
ಘ್ರಾಣಾತ್ಪಶ್ಚಾದ್ವಿನಿಷ್ಕ್ರಾಂತೌ ನಾಸತ್ಯೌ ವಿಶ್ವಭೇಷಜೌ ।
ಅಜಿಘ್ರಾಣಮಮುಂ ಪ್ರಾಹುರ್ನ ದೇಹಃ ಪತಿತಸ್ತದಾ ॥ ೪೩ ॥
ಶೃಣ್ವನ್ ಪಿಬನ್ವದನ್ನೇವಾಜಿಘ್ರನ್ನಾಸ್ತೇ ಚಲನ್ನಪಿ ।
ಶ್ರೋತ್ರಾದ್ದಿಶೋ ವಿನಿಷ್ಕ್ರಾಂತಾ ನ ದೇಹಃ ಪತಿತಸ್ತದಾ ।
ತದಾಮುಂ ಬಧಿರಂ ಪ್ರಾಹುರ್ವ್ಯೃತಂ ನೈವ ಕಥಂಚನ ॥ ೪೪ ॥

ವ್ಯವಹಾರಗಳನ್ನು ನಡೆಸುತ್ತಿದ್ದನು. ಬಳಿಕ ಸಕಲ ದೇವತೆಗಳಿಗೂ ಅಧಿಪತಿಯೆನಿಸಿದ ಇಂದ್ರನು ಕೈಗಳನ್ನು ಬಿಟ್ಟು ಹೊರಟುಹೋದನು.

೪೧. ಆದರಿಂದ ಮನುಷ್ಯನನ್ನು ಕೈಯಿಲ್ಲದವನೆಂದು ಹೇಳುತ್ತಿದ್ದರೇ ಹೊರತು ಆಗಲೂ ದೇಹಪಾತವು ಮಾತ್ರ ಆಗಲಿಲ್ಲ. ಹಿಂದಿನಂತೆಯೇ ಕೇಳುತ್ತಲೂ, ಕುಡಿಯುತ್ತಲೂ, ಮಾತನಾಡುತ್ತಲೂ, ವಾಸನೆನೋಡುತ್ತಲೂ, ನೋಡುತ್ತಲೂ, ಓಡಾಡುತ್ತಲೂ ಇರುತ್ತಿದ್ದನು.

೪೨. ಬಳಿಕ ತೇಜಸ್ವಿಗಳಲ್ಲಿ ಸರ್ವೋತ್ತಮನಾದ ಸೂರ್ಯದೇವನು ಕಣ್ಣುಗಳನ್ನು ತ್ಯಜಿಸಿ ಹೋದನು. ಆಗಲೂ ಮನುಷ್ಯನನ್ನು ಕುರುಡನೆಂದು ಕರೆಯುತ್ತಿದ್ದರೇ ಹೊರತು ದೇಹವು ಮಾತ್ರ ಪತಿತವಾಗಲಿಲ್ಲ.

೪೩. ಮುನ್ನಿನಂತೆಯೇ ಕೇಳುತ್ತಲೂ, ಕುಡಿಯುತ್ತಲೂ, ಮಾತನಾಡುತ್ತಲೂ, ವಾಸನೆಯನ್ನು ನೋಡುತ್ತಲೂ, ಪರಿಗ್ರಹಿಸುತ್ತಲೂ, ಓಡಾಡುತ್ತಲೂ ಆ ಮನುಷ್ಯನು ವ್ಯವಹರಿಸುತ್ತಿದ್ದನು. ಬಳಿಕ ಲೋಕವೈದ್ಯರೆನಿಸಿದ ಅಶ್ವಿನೀದೇವತೆಗಳು ಘ್ರಾಣೇಂದ್ರಿಯವನ್ನು ತ್ಯಜಿಸಿ ಹೊರಟುಹೋದರು. ಆಗ ಮನುಷ್ಯನನ್ನು ಮೂಗಿಲ್ಲದವನೆಂದು ಕರೆಯುತ್ತಿದ್ದರೇ ಹೊರತು ದೇಹವು ಮಾತ್ರ ಪತಿತವಾಗಲಿಲ್ಲ.

೪೪. ಮೊದಲಿನಂತೆಯೇ ಕೇಳುತ್ತಲೂ, ಕುಡಿಯುತ್ತಲೂ, ಓಡಾಡುತ್ತಿದ್ದನು. ವಾಸನೆಯನ್ನು ಮಾತ್ರ ಹಿಡಿಯಲಾರದೆ ಇರುತ್ತಿದ್ದನು. ಬಳಿಕ ಶ್ರೋತ್ರೇಂದ್ರಿಯವನ್ನು ಬಿಟ್ಟು ದಿಗಭಿಮಾನಿದೇವತೆಯರು ಹೊರಟರು. ಆಗಲೂ ದೇಹವು ಶಿಥಿಲವಾಗಲಿಲ್ಲ. ಆ ಮನುಷ್ಯನನ್ನು ಕಿವುಡನೆಂದು ಕರೆಯುತ್ತಿದ್ದರಲ್ಲದೆ ಯಾರೂ ಮೃತನೆಂದು ವ್ಯವಹರಿಸುತ್ತಿರಲಿಲ್ಲ.

ಪಿಬನ್ನದನ್ನಪಿ ತದಾ ಹ್ಯಶೃಣ್ವನ್ನಚಲನ್ನಪಿ ।
ವರುಣೋ ರಸನಾಯಾಸ್ತು ವಿನಿಷ್ಕ್ರಾಂತಸ್ತತಃ ಪರಂ ।
ತದಾಽರಸಜ್ಞಮೇವಾಹುರ್ನ ದೇಹಃ ಪತಿತಸ್ತದಾ ॥ ೪೫ ॥
ಜೀವಂಶ್ಚಲನ್ನದನ್ನಾಸ್ತೇ ತಥಾ ಜಾನನ್ ಶ್ವಸನ್ನಪಿ ।
ತತೋ ವಾಚೋ ವಿನಿಷ್ಕ್ರಾಂತೋ ವಹ್ನಿರ್ವಾಗೀಶ್ವರೋ ವಿಭುಃ ॥೪೬॥
ತದಾ ಮೂಕಮಮುಂ ಪ್ರಾಹುರ್ನ ದೇಹಃ ಪತಿತಸ್ತದಾ ।
ಜೀವಂಶ್ಚಲನ್ನದನ್ನಾಸ್ತೇ ತಥಾ ಜಾನನ್ ಶ್ವಸನ್ನಪಿ ॥ ೪೭ ॥
ಪಶ್ಚಾದ್ರುದ್ರೋ ವಿನಿಷ್ಕ್ರಾಂತೋ ಮನಸೋ ಬೋಧನಾತ್ಮಕಃ ।
ತದಾ ಜಡಮಮುಂ ಪ್ರಾಹುರ್ನ ದೇಹಃ ಪತಿತಸ್ತದಾ ॥ ೪೮ ॥
ಜೀವಂಶ್ಚಲನ್ನದನ್ನಾಸ್ತೇ ತಥಾ ಜಾನನ್ ಶ್ವಸನ್ನಪಿ ।
ಪಶ್ಚಾತ್ಪ್ರಾಣೋ ವಿನಿಷ್ಕ್ರಾಂತೋ ಮೃತಮೇನಂ ತದಾ ವಿದುಃ ।
ಪುನರೇವಂ ತದಾ ಪ್ರಾಹುರ್ದೇವಾ ವಿಸ್ಮಿತಮಾನಸಾಃ ॥ ೪೯ ॥

---

೪೫. ಮನುಷ್ಯನು ಕೇಳಲಾರದೆ ಚಲಿಸಲಾರದೆ ಇದ್ದರೂ ಕುಡಿಯುತ್ತಲೂ ಮಾತನಾಡುತ್ತಲೂ ಇರುತ್ತಿದ್ದನು. ಆಮೇಲೆ ವರುಣನು ಜಿಹ್ವೇಂದ್ರಿಯವನ್ನು ತ್ಯಜಿಸಿ ಹೊರಟುಹೋದನು. ಆಗ ಆತನು ಆಹಾರದಲ್ಲಿ ಅರುಚಿಯುಳ್ಳವನೆಂದು ಕರೆಯಲ್ಪಡುತ್ತಿದ್ದನೇ ವಿನಹ ದೇಹಪಾತವಾಯಿತೆಂದು ಹೇಳುವಂತಿರಲಿಲ್ಲ.

೪೬. ಉಚ್ಛ್ವಾಸ ನಿಶ್ವಾಸಗಳನ್ನು ಮಾಡುತ್ತ, ಓಡಾಡುತ್ತ, ತಿನ್ನುತ್ತ, ತಿಳಿಯುತ್ತ, ಜೀವಂತನಾಗಿಯೇ ಇರುತ್ತಿದ್ದನು. ಬಳಿಕ ವಾಗಭಿಮಾನಿ ದೇವತೆಯೂ, ಸರ್ವವ್ಯಾಪಕನೂ ಆದ ಅಗ್ನಿದೇವನು ವಾಗಿಂದ್ರಿಯದಿಂದ ಹೊರಹೊರಟನು.

೪೭. ಆಗ ಆತನನ್ನು ಮೂಗನೆಂದು ಕರೆಯುತ್ತಿದ್ದರು. ದೇಹವು ಮಾತ್ರ ಆಗಲೂ ಪತಿತವಾಗಲಿಲ್ಲ. ಆತನು ಜೀವಂತನಾಗಿ, ಓಡಾಡುತ್ತ, ತಿನ್ನುತ್ತ, ಬುದ್ಧಿಯುಳ್ಳವನಾಗಿ, ಉಸಿರಾಡುತ್ತ ಎಂದಿನಂತೆಯೇ ಇದ್ದನು.

೪೮. ಬಳಿಕ ಜ್ಞಾನಾಭಿಮಾನಿದೇವತೆಯಾದ ಮಹಾರುದ್ರನು ಮನಸ್ಸನ್ನು ಬಿಟ್ಟು ಹೋದನು. ಆದರೂ ಮನುಷ್ಯನನ್ನು ಮೂಢನೆಂದು ಕರೆಯುತ್ತಿದ್ದರಲ್ಲದೆ ಮೃತನಾದನೆಂದು ಜನರು ತಿಳಿಯಲಿಲ್ಲ.

೪೯. ಆತನು ಜೀವದಿಂದಿದ್ದು, ಓಡಾಡುತ್ತ, ತಿನ್ನುತ್ತ, ತಿಳಿಯುತ್ತ, ಉಸಿರಾಡುತ್ತಲೇ ಇದ್ದನು. ಕಡೆಯಲ್ಲಿ ಪ್ರಾಣವು ಹೊರಕ್ಕೆ ಹೊರಟಿತು. ಆಗ ಎಲ್ಲರೂ ಆ ಮನುಷ್ಯನು ಮೃತನಾದನೆಂದು ತಿಳಿದರು. ಇದರಿಂದ ವಿಸ್ಮಯಗೊಂಡ ಮನಸ್ಸುಳ್ಳವರಾಗಿ ದೇವತೆಗಳೆಲ್ಲರೂ ಪುನಃ ತಮ್ಮತಮ್ಮಲ್ಲಿಯೇ ಇಂತೆಂದು ನಿಶ್ಚಯವನ್ನು ಮಾಡಿಕೊಂಡರು.

ದೇಹಮುತ್ಥಾಪಯೇದ್ಯಸ್ತು ಪುನರೇವಂ ವ್ಯವಸ್ಥಿತಃ ।
ಸ ಏವ ಹ್ಯಧಿಕೋಽಸ್ಮಾಸು ಯುವರಾಜಾ ಭವಿಷ್ಯತಿ ॥ ೫೦ ॥
ಇತ್ಯೇವಂ ತಂ ಪ್ರತಿಶ್ರುತ್ಯ ವಿವಿಶುಶ್ಚ ಯಥಾಕ್ರಮಂ ।
ಜಯಂತಃ ಪ್ರಾವಿಶತ್ಪಾದೌ ನೋತ್ತಸ್ಥೌ ತತ್ಕಲೇವರಂ ॥ ೫೧ ॥
ಗುಹ್ಯಂ ಚ ಪ್ರಾವಿಶದ್ದಕ್ಷೋ ನೋತ್ತಸ್ಥೌ ತತ್ಕಲೇವರಂ ।
ಇಂದ್ರೋ ಹಸ್ತೌ ವಿವೇಶಾಥ ನೋತ್ತಸ್ಥೌ ತತ್ಕಲೇವರಂ ॥ ೫೨ ॥
ಚಕ್ಷುಃ ಸೂರ್ಯಃ ಪ್ರವಿಷ್ಟೋಽಭೂನ್ನೋತ್ತಸ್ಥೌ ತತ್ಕಲೇವರಂ ।
ದಿಶಃ ಶ್ರೋತ್ರೇ ಪ್ರವಿವಿಶುರ್ನೋತ್ತಸ್ಥೌ ತತ್ಕಲೇವರಂ ॥ ೫೩ ॥
ವರುಣಃ ಪ್ರಾವಿಶಜ್ಜಿಹ್ವಾಂ ನೋತ್ತಸ್ಥೌ ತತ್ಕಲೇವರಂ ।
ನಾಸಾಂ ವಿವಿಶತುರ್ದಸ್ರೌ ನೋತ್ತಸ್ಥೌ ತತ್ಕಲೇವರಂ ॥ ೫೪ ॥
ವಹ್ನಿಶ್ಚ ಪ್ರಾವಿಶದ್ವಾಚಂ ನೋತ್ತಸ್ಥೌ ತತ್ಕಲೇವರಂ ।
ಮನಶ್ಚ ಪ್ರಾವಿಶದ್ರುದ್ರೋ ನೋತ್ತಸ್ಥೌ ತತ್ಕಲೇವರಂ ॥ ೫೫ ॥
ಪಶ್ಚಾತ್ಪ್ರಾಣೋ ವಿವೇಶಾಸೌ ತದೋತ್ತಸ್ಥೌ ಕಲೇವರಂ ।
ತದಾ ದೇವಾ ವಿನಿಶ್ಚಿತ್ಯ ಪ್ರಾಣಂ ದೇಹಾಧಿಕಂ ವಿಭುಂ ॥ ೫೬ ॥

೫೦. ಪುನಃ ಈ ಶರೀರವನ್ನು ಪ್ರವೇಶಮಾಡಿ ಯಾವನು ಇದನ್ನು ಮೇಲಕ್ಕೆಬ್ಬಿಸುವನೊ, ಅವನೇ ನಮ್ಮಲ್ಲಿ ಸರ್ವಾಧಿಕನೆಂದು ನಿಶ್ಚಯವನ್ನು ಮಾಡೋಣ. ಆತನೇ ನಮಗೆ ಯುವರಾಜನಾಗಿ ಅಧಿಕಾರವನ್ನು ಪಡೆಯಲಿ.

೫೧. ಈ ವಿಧವಾದ ನಿಯಮವನ್ನು ಕೇಳಿ ದೇವತೆಗಳೆಲ್ಲರೂ ಪುನಃ ಮೃತ ಕಳೇಬರವನ್ನು ಪ್ರವೇಶಮಾಡಿದರು. ಜಯಂತನು ಪಾದಗಳಲ್ಲಿ ಸೇರಿಕೊಂಡನು. ದೇಹವು ಮಾತ್ರ ಎದ್ದು ಓಡಾಡಲಿಲ್ಲ.

೫೨. ದಕ್ಷಪ್ರಜಾಪತಿಯು ಗುಹ್ಯಪ್ರದೇಶವನ್ನು ಸೇರಿದನು. ಮಹೇಂದ್ರನು ಬಾಹುಗಳಲ್ಲಿ ಪ್ರವೇಶಿಸಿದನು. ಆದರೂ ದೇಹವು ಚೇತನಯುಕ್ತವಾಗಲಿಲ್ಲ.

೫೩. ಸೂರ್ಯನು ನೇತ್ರಗಳನ್ನು ಪ್ರವೇಶಿಸಿದನು. ದಿಗಭಿಮಾನಿ ದೇವತೆಗಳು ಕರ್ಣಗಳನ್ನು ಪ್ರವೇಶಿಸಿದರು. ದೇಹವು ಮಾತ್ರ ಸವ್ಯಾಪಾರ ವಾಗಲಿಲ್ಲ.

೫೪. ವರುಣದೇವನು ನಾಲಿಗೆಯನ್ನು ಕೂಡಿಕೊಂಡನು. ಅಶ್ವಿನೀ ದೇವತೆಯರು ನಾಸಿಕವನ್ನು ಸೇರಿದರು. ಕಳೇಬರವು ಮೇಲಕ್ಕೇಳಲಿಲ್ಲ.

೫೫. ಅಗ್ನಿಯು ವಾಗಿಂದ್ರಿಯವನ್ನುಪ್ರವೇಶಿಸಿದನು. ರುದ್ರನು ಮನಸ್ಸನ್ನು ಕೂಡಿದನು. ಆದರೂ ದೇಹವು ಮಾತ್ರ ಮೇಲಕ್ಕೇಳಲಿಲ್ಲ.

೫೬–೫೭. ಕಡೆಯಲ್ಲಿ ಮುಖ್ಯಪ್ರಾಣವು ದೇಹವನ್ನು ಪ್ರವೇಶಿಸಿತು. ಆಗ ಕಳೇಬರವು ಎದ್ದು ವ್ಯಾಪಾರಮಾಡತೊಡಗಿತು. ಆಗ ದೇವತೆಗಳೆಲ್ಲರೂ ಕೂಡಿ

ಬಲೇ ಜ್ಞಾನೇ ಚ ಧೈರ್ಯೇ ಚ ವೈರಾಗ್ಯೇ ಪ್ರಾಣನೇಽಪಿ ಚ ।
ತದಾಽಭಿಷೇಚಯಾಂಚಕ್ರುರ್ಯೌವರಾಜ್ಯೇ ಮಹಾಪ್ರಭುಂ ॥ ೫೭ ॥
ಉತ್ಕೃಷ್ಟಸ್ಥಿತಿಹೇತುತ್ವಾದುಕ್ಥಮೇಕಂ ತದಾ ಜಗುಃ ।
ತಸ್ಮಾತ್ಪ್ರಾಣಾತ್ಮಕಂ ವಿಶ್ವಂ ಸರ್ವಂ ಸ್ಥಾವರಜಂಗಮಂ ॥ ೫೮ ॥
ಅಂಶೈಃ ಪೂರ್ಣೈರ್ಬಲಾಢ್ಯೈಶ್ಚ ಪೂರ್ಣೋಽಯಂ ಜಗತಾಂ ಪತಿಃ ॥ ೫೯ ॥

ನ ಪ್ರಾಣಹೀನಂ ಜಗದಸ್ತಿ ಕಿಂಚಿ
ತ್ಪ್ರಾಣೇನ ಹೀನಂ ನ ಚ ವೈ ಸಮೇಧತೇ ।
ನ ಪ್ರಾಣಹೀನಂ ಸ್ಥಿತಮತ್ರ ಕಿಂಚಿ
ತ್ಪ್ರಾಣೇನ ಹೀನಂ ನ ಚ ಕಿಂಚಿದಸ್ತಿ ॥ ೬೦ ॥
ತಸ್ಮಾತ್ಪ್ರಾಣಃ ಸರ್ವಜೀವಾಧಿಕೋಽಭೂ-
ದ್ಬಲಾಧಿಕಃ ಸರ್ವಜೀವಾಂತರಾತ್ಮಾ ।
ಪ್ರಾಣಾತ್ಕೋಽಪಿ ಹ್ಯಧಿಕೋ ವಾ ಸಮೋ ವಾ
ಶಾಸ್ತ್ರೇ ದೃಷ್ಟಃ ಶ್ರುತಪೂರ್ವೋ ನ ಚಾಸ್ತೇ ॥ ೬೧ ॥

ಸರ್ವಾತ್ಮಕನಾದ ಮುಖ್ಯಪ್ರಾಣನೇ ಬಲದಲ್ಲಿಯೂ, ಜ್ಞಾನದಲ್ಲಿಯೂ, ಧೈರ್ಯದಲ್ಲಿಯೂ, ವೈರಾಗ್ಯದಲ್ಲಿಯೂ, ಸಂಜೀವನಶಕ್ತಿಯಲ್ಲಿಯೂ ದೇವೋತ್ತಮನೆಂದು ನಿಶ್ಚಯವನ್ನು ಮಾಡಿ ಮಹಾಪ್ರಭುವಾದ ಆತನನ್ನೇ ಯುವರಾಜಪದವಿಯಲ್ಲಿ ಅಭಿಷಿಕ್ತನನ್ನಾಗಿ ಮಾಡಿದರು.

೫೮. ಮತ್ತು ಉತ್ಕೃಷ್ಟವಾದ ದೇಹದ ಸ್ಥಿತಿಗೆ ಕಾರಣಭೂತನಾದುದರಿಂದ ಆತನನ್ನು ಕುರಿತು ಉಕ್ಥವೆಂಬ ಸಾಮವೇದ ಮಂತ್ರವೊಂದನ್ನು ಪಠಿಸಿದರು. ಆದುದರಿಂದ ಸ್ಥಾವರಜಂಗಮಾತ್ಮಕವಾದ ಈ ಬ್ರಹ್ಮಾಂಡವೆಲ್ಲವೂ ಪ್ರಾಣಾತ್ಮಕವಾಗಿರುವುದೆಂದು ತಿಳಿಯಬೇಕು.

೫೯. ಲೋಕಗಳಿಗೆಲ್ಲ ಅಧಿಪತಿಯಾದ ಮುಖ್ಯಪ್ರಾಣನು ಪರಿಪೂರ್ಣಗಳೂ, ಬಲಾನ್ವಿತಗಳೂ ಆದ ತನ್ನ ಅಂಶಗಳಿಂದ ನಿತ್ಯವೂ ಕೂಡಿಕೊಂಡಿರುವನು.

೬೦. ಪ್ರಾಣರಹಿತವಾದುದು ಜಗತ್ತಿನಲ್ಲಿ ಯಾವುದೂ ಇಲ್ಲವು. ಪ್ರಾಣವಿಲ್ಲದ ಯಾವ ವಸ್ತುವೂ ವೃದ್ಧಿಯನ್ನು ಹೊಂದುವುದಿಲ್ಲವಷ್ಟೆ. ಪ್ರಾಣಹೀನವಾದ ಯಾವುದೂ ಬ್ರಹ್ಮಾಂಡದಲ್ಲಿ ಅಸ್ತಿತ್ವವನ್ನು ಪಡೆಯಲಾರದು. ಹಾಗೆಯೇ ಪ್ರಾಣಹೀನವಾದುದು ಯಾವುದೂ ಇದೆಯೆಂದು ಹೇಳಲಾಗುವುದಿಲ್ಲ.

೬೧. ಆದುದರಿಂದಲೇ ಮುಖ್ಯಪ್ರಾಣನು ಸಕಲ ಜೀವರಲ್ಲಿ ಅಧಿಕನೂ, ಬಲದಲ್ಲಿ ಅಪ್ರತಿಮನೂ, ಸಕಲ ಪ್ರಾಣಿಗಳ ಅಂತರಾತ್ಮನೂ ಆಗಿರುವನು. ಪ್ರಾಣದೇವನಿಗಿಂತಲೂ ಅಧಿಕನಾದವನಾಗಲಿ, ಆತನಿಗೆ ಸಮಾನನಾದವನಾಗಲಿ

ತತಃ ಕಾರ್ಯಾನುಗಃ ಪ್ರಾಣೋ ಹ್ಯೇಕೋ ದೇವೋ ಹ್ಯನೇಕಧಾ ।
ತಸ್ಮಾತ್ಪ್ರಾಣಂ ವರಂ ಪ್ರಾಹುಃ ಪ್ರಾಣೋಪಾಸನತತ್ಪರಾಃ ।
ಲೀಲಯೈವ ಜಗತ್ಸ್ರಷ್ಟುಂ ಹಂತುಂ ಪಾಲಯಿತುಂ ಪ್ರಭುಃ ॥ ೬೨ ॥
ಶೇಷಾ ಹಿ ಶಿವಶಕ್ರಾದ್ಯಾಃ ಚೇತನಾಶ್ಚ ಜಡಾ ಅಪಿ ।
ವಾಸುದೇವಾದೃತೇ ಕೋಽಪಿ ನೈನಂ ಪರಿಭವಿಷ್ಯತಿ ॥ ೬೩ ॥
ಸರ್ವದೇವಾತ್ಮಕಃ ಪ್ರಾಣಃ ಸರ್ವದೇವಮಯೋ ವಿಭುಃ ।
ವಾಸುದೇವಾನುಗೋ ನಿತ್ಯಂ ತಥಾ ವಿಷ್ಣುವಶೇ ಸ್ಥಿತಃ ॥ ೬೪ ॥
ವಾಸುದೇವಪ್ರತೀಪಂ ತು ನ ಶೃಣೋತಿ ನ ಪಶ್ಯತಿ ।
ದೇವಾಃ ಪ್ರತೀಪಂ ಕುರ್ವಂತಿ ರುದ್ರೇಂದ್ರಾದ್ಯಾಃ ಸುರೇಶ್ವರಾಃ ॥ ೬೫ ॥
ಪ್ರತೀಪಂ ಕ್ವಾಪಿ ಕುರುತೇ ನ ಪ್ರಾಣಃ ಸರ್ವಗೋಚರಃ ।
ತಸ್ಮಾತ್ಪ್ರಾಣೋ ಮಹಾವಿಷ್ಣೋರ್ಬಲಮಾಹುರ್ಮನೀಷಿಣಃ ॥ ೬೬ ॥

---

ಇರುವುದನ್ನು ಯಾವ ಶಾಸ್ತ್ರದಲ್ಲಿಯೂ ನೋಡಿಲ್ಲ. ಮತ್ತೊಬ್ಬರಿಂದಲೂ ಕೇಳಿಲ್ಲ.

೬೨. ಮುಖ್ಯಪ್ರಾಣನು ಒಬ್ಬನೇ ದೇವನಾದರೂ ಅನೇಕ ವ್ಯಾಪಾರಗಳನ್ನು ನಡೆಸುತ್ತಿರುವುದರಿಂದ ಬಹು ವಿಧವಾಗಿ ತೋರುತ್ತಿರುವನು. ಆದುದರಿಂದ ಪ್ರಾಣೋಪಾಸನೆಯಲ್ಲಿ ತತ್ಪರರಾದ ಜನರು ಪ್ರಾಣವನ್ನೇ ಸರ್ವೋತ್ತಮವೆಂದು ಹೇಳುವರು. ಆತನು ಕೇವಲ ಲೀಲಾಮಾತ್ರದಿಂದಲೇ ಈ ಬ್ರಹ್ಮಾಂಡವನ್ನೆಲ್ಲ ಸೃಷ್ಟಿಮಾಡುವುದಕ್ಕೂ, ಸಂಹರಿಸುವುದಕ್ಕೂ, ಪಾಲಿಸುವುದಕ್ಕೂ ಸ್ವತಂತ್ರನಾಗಿರುವನು.

೬೩. ಆದಿಶೇಷನು, ಪರಮಶಿವನು, ಮಹೇಂದ್ರನೇ ಮೊದಲಾದ ಉತ್ತಮ ಜೀವರೂ, ಜಡರೂ ಕೂಡ ಆತನನ್ನು ಪರಾಭವಗೊಳಿಸಲಾರರು. ಆ ವಿಷಯದಲ್ಲಿ ವಾಸುದೇವನೊಬ್ಬನು ಮಾತ್ರ ಶಕ್ತನಾಗಿರುವನು.

೬೪. ಪ್ರಾಣದೇವನು ಸಕಲ ದೇವತೆಗಳ ಅಂತರಾತ್ಮನಾಗಿಯೂ, ಸರ್ವದೇವಮಯನಾಗಿಯೂ, ಸರ್ವತ್ರ ವ್ಯಾಪಕನಾಗಿಯೂ ಇದ್ದುಕೊಂಡು ಮಹಾವಿಷ್ಣುವಿನ ಅಪ್ಪಣೆಗಳನ್ನೇ ಪಾಲಿಸುತ್ತ ನಿತ್ಯವೂ ಆತನ ಅನುಚರನಾಗಿಯೇ ಇರುವನು.

೬೫. ಆತನು ಎಂದೂ ಶ್ರೀಮನ್ನಾರಾಯಣನ ವಿಪ್ರಿಯವನ್ನು ಕೇಳುವುದಿಲ್ಲ. ಮತ್ತು ನೋಡುವುದಿಲ್ಲ. ರುದ್ರ, ಮಹೇಂದ್ರನೇ ಮುಂತಾದ ದೇವತೆಗಳೆಲ್ಲರೂ ಒಂದೊಂದು ಸಮಯದಲ್ಲಿ ಸ್ವಾಮಿಗೆ ಅಪ್ರಿಯವನ್ನು ಆಚರಿಸುತ್ತಿರುವರು.

೬೬. ಸಕಲ ತತ್ತ್ವಾರ್ಥಗಳನ್ನೂ ತಿಳಿದ ಮುಖ್ಯಪ್ರಾಣನು ಮಾತ್ರ ಎಂದಿಗೂ ಭಗವಂತನಿಗೆ ವಿರೋಧವನ್ನು ಮಾಡುವುದಿಲ್ಲ. ಆ ಕಾರಣದಿಂದ

ಏವಂ ಜ್ಞಾತ್ವಾ ಮಹಾವಿಷ್ಣೋರ್ಮಾಹಾತ್ಮ್ಯಂ ಲಕ್ಷಣಂ ತಥಾ ।
ಪೂರ್ವಬಂಧಾನುಗಂ ಲಿಂಗಂ ಜೀರ್ಣಾಂ ತ್ವಚಮಿವೋರಗಃ ।
ವಿಸೃಜ್ಯ ಪರಮಂ ಯಾತಿ ನಾರಾಯಣಮನಾಮಯಂ ॥ ೬೭ ॥
ಶ್ರುತ್ವಾ ಶಂಖೋದಿತಂ ವಾಕ್ಯಂ ಪುನರ್ವ್ಯಾಧಃ ಪ್ರಸನ್ನಧೀಃ ।
ಪ್ರಶ್ರಯಾವನತೋ ಭೂತ್ವಾ ಪುನಃ ಪಪ್ರಚ್ಛ ತಂ ಮುನಿಂ ॥ ೬೮ ॥
ಬ್ರಹ್ಮನ್ಮಹಾನುಭಾವಸ್ಯ ಪ್ರಾಣಸ್ಯಾಸ್ಯ ಜಗದ್ಗುರೋಃ ।
ನ ಖ್ಯಾತೋ ಮಹಿಮಾ ಲೋಕೇ ಕಥಂ ಸರ್ವೇಶ್ವರಸ್ಯ ವೈ ॥ ೬೯ ॥
ದೇವಾನಾಂ ಚ ಮುನೀನಾಂ ಚ ಭೂಪಾನಾಂ ಚ ಮಹಾತ್ಮನಾಂ ।
ಮಹಿಮಾ ಶ್ರೂಯತೇ ಲೋಕೇ ಪುರಾಣೇಷು ಸಹಸ್ರಶಃ ॥ ೭೦ ॥
ಏತದಾಚಕ್ಷ್ವ ಮೇ ಬ್ರಹ್ಮನ್ ಶ್ರೋತುಂ ಕೌತೂಹಲಂ ಹಿ ಮೇ ॥ ೭೧ ॥

ಮುಖ್ಯಪ್ರಾಣನೇ ಮಹಾವಿಷ್ಣುವಿಗೆ ಉಪೋದ್ಬಲಕನೆಂದು ತಿಳಿದವರು ಹೇಳುವರು.

೬೭. ಮುಮುಕ್ಷುಗಳಾದವರು ಈ ರೀತಿಯಾಗಿ ಮಹಾವಿಷ್ಣುವಿನ ಮಾಹಾತ್ಮ್ಯವನ್ನೂ, ಲಕ್ಷಣಗಳನ್ನೂ ತಿಳಿದು ಸರ್ಪವು ಪೊರೆಯನ್ನು ತ್ಯಜಿಸುವಂತೆ ಅನಾದಿಯಾದ ಅವಿದ್ಯೆಯ ಬಲದಿಂದ ಅಂಟಿಕೊಂಡು ಬಂದಿರುವ ಲಿಂಗ ಶರೀರವನ್ನು ತ್ಯಜಿಸಿ ಪರಾತ್ಪರನೂ, ಶಶ್ವದೇಕಪ್ರಕಾರನೂ ಆದ ನಾರಾಯಣನ ವೈಕುಂಠಲೋಕವನ್ನು ಪಡೆಯುವರು.''

೬೮. ಇಂತು, ಶಂಖಬ್ರಾಹ್ಮಣನು ಹೇಳಿದ ಮಾತುಗಳನ್ನು ಕೇಳಿ ಆ ವ್ಯಾಧನು ನಿರ್ಮಲವಾದ ಅಂತಃಕರಣವುಳ್ಳವನಾಗಿ ವಿನಯದಿಂದ ನಮಸ್ಕಾರವನ್ನು ಮಾಡಿ ಮಹಾ ಮುನಿಯಾದ ಆತನನ್ನು ಕುರಿತು ಪುನಃ ಕೇಳತೊಡಗಿದನು.

೬೯. ''ಎಲೈ ಬ್ರಾಹ್ಮಣೋತ್ತಮನೆ! ಇಂತಹ ಮಾಹಾತ್ಮ್ಯವುಳ್ಳವನೂ, ಜಗದ್ಗುರುವೂ, ಸರ್ವೇಶ್ವರನೂ ಆಗಿದ್ದರೂ ಈ ಮುಖ್ಯಪ್ರಾಣನ ಮಹಿಮೆಯು ಲೋಕದಲ್ಲಿ ವಿಸ್ತಾರವಾಗಿ ಪ್ರಖ್ಯಾತಿಯನ್ನು ಪಡೆಯದಿರಲು ಕಾರಣವೇನು ?

೭೦. ಸಕಲ ಪುರಾಣಗಳಲ್ಲಿಯೂ ಸಾವಿರಗಟ್ಟಲೆಯಾಗಿ ದೇವತೆಗಳ, ಮಹಾ ಮುನಿಗಳ, ಮಹಾರಾಜರ ಮತ್ತು ಇತರ ಅನೇಕ ಮಹಾತ್ಮರ ಮಹಿಮೆಗಳನ್ನು ಕೀರ್ತಿಸುತ್ತಿರುವ ಉಪಾಖ್ಯಾನಗಳು ಕಿವಿಗಳಿಗೆ ಬೀಳುತ್ತಿರುವುವು.

೭೧. ವಿಪ್ರವರ್ಯನೆ! ಇದಕ್ಕೆ ಕಾರಣವನ್ನು ನನಗೆ ತಿಳಿಸು. ಕೇಳಲು ನನಗೆ ಕುತೂಹಲವುಂಟಾಗುತ್ತಿರುವುದು.''

ಶಂಖ ಉವಾಚ:—

ಪುರಾ ಪ್ರಾಣೋ ಹರಿಂ ದೇವಂ ನಾರಾಯಣಮನಾಮಯಂ ।
ಅಶ್ವಮೇಧೈರ್ಯಿಯಕ್ಷುಃ ಕಾಮೋ ಗಂಗಾತೀರಂ ಯಯೌ ಮುದಾ ॥ ೭೨ ॥
ಹಲೈಶ್ಚಕಾರ ಭೂಶುದ್ಧಿಂ ನಾನಾಮುನಿಗಣೈರ್ಯುತಃ ।
ಅಂತರ್ವಲ್ಮೀಕಲೀನಸ್ತು ಕಣ್ವೋ ನಾಮ ಸಮಾಧಿಗಃ ॥ ೭೩ ॥
ಹಲೋತ್ಕೃಷ್ಟೋ ವಿನಿಷ್ಕ್ರಾಂತಃ ಕ್ರೋಧಾದಿದಮುವಾಚ ಹ ।
ದೃಷ್ಟ್ವಾ ಪುರಃಸ್ಥಿತಂ ಪ್ರಾಣಂ ಶಶಾಪ ಹ ಮಹಾವಿಭುಂ ॥ ೭೪ ॥
ಅದ್ಯ ಪ್ರಭೃತಿ ನ ಖ್ಯಾತಂ ಮಹಿಮಾ ಭುವನತ್ರಯೇ ।
ತವ ಪ್ರಾಪ್ನೋತಿ ದೇವೇಶ ಭೂಲೋಕೇ ತು ವಿಶೇಷತಃ ॥ ೭೫ ॥
ಪ್ರಖ್ಯಾತಾಸ್ತೇ ಭವಿಷ್ಯಂತಿ ಹ್ಯವತಾರಾ ಜಗತ್ರಯೇ ।
ಇತ್ಯುಕ್ತೋ ಮುನಿನಾ ತೇನ ವಾಯುಃ ಕ್ರೋಧಾತ್ತಮಬ್ರವೀತ್ ॥ ೭೬ ॥

೭೨. ಶಂಖನು ಹೇಳುತ್ತಾನೆ:—ಹಿಂದೆ ಒಂದಾನೊಂದು ಕಾಲದಲ್ಲಿ ಪ್ರಾಣದೇವನು, ಶ್ರೀಹರಿಯೂ ದೇವೋತ್ತಮನೂ ಆದ್ಯಂತರಹಿತನೂ ಆದ ನಾರಾಯಣನನ್ನು ಸಂತೋಷಗೊಳಿಸಲು ಅಶ್ವಮೇಧಯಜ್ಞಗಳನ್ನು ಮಾಡಬೇಕೆಂಬ ಅಪೇಕ್ಷೆಯುಳ್ಳವನಾಗಿ ಸಂತೋಷದಿಂದ ಗಂಗಾನದಿಯ ತೀರವನ್ನು ಬಂದು ಸೇರಿದನು.

೭೩–೭೪. ಅನೇಕ ಮಹಾಮುನಿಗಳೊಡಗೂಡಿ ಭೂಶೋಧನೆಯನ್ನು ಮಾಡುತ್ತ ನೇಗಿಲುಗಳಿಂದ ಉಳುತ್ತಿರಲು ಒಂದೆಡೆಯಲ್ಲಿದ್ದ ಹುತ್ತದಲ್ಲಿ ಕಣ್ವನಾಮಕನಾದ ಮಹಾಮುನಿಯೊಬ್ಬನು ಸಮಾಧಿಸ್ಥನಾಗಿ ಬಾಹ್ಯಪ್ರಪಂಚವನ್ನೇ ತಿಳಿಯದೆ ಕುಳಿತಿದ್ದನು. ಮುಖ್ಯಪ್ರಾಣದೇವನ ನೇಗಿಲು ಭೂಮಿಯನ್ನು ಸೀಳುತ್ತ ಆ ಹುತ್ತವನ್ನು ಭೇದಿಸಿ ಒಳಗಿದ್ದಾತನನ್ನು ಸೆಳೆದುಕೊಂಡು ಬಂದಿತು. ಆಗ ಸಮಾಧಿಭಂಗವಾಗಲು ಆತನು ಹೊರಗೆ ಬಂದು ಕೋಪದಿಂದ ಮಾತನಾಡತೊಡಗಿದನು. ಮಹಾಮಹಿಮನಾದ ಮುಖ್ಯಪ್ರಾಣನು ಮುಂದೆ ನಿಂತಿರುವುದನ್ನು ಕಂಡೂ ಆತನು ಈರೀತಿ ಶಾಪವನ್ನು ಕೊಡುವವನಾದನು.

೭೫. "ಎಲೈ ದೇವಶ್ರೇಷ್ಠನೆ! ಇಂದು ಮೊದಲುಗೊಂಡು ನಿನ್ನ ಮಾಹಾತ್ಮ್ಯವು ಮೂರು ಲೋಕಗಳಲ್ಲಿಯೂ ಪ್ರಖ್ಯಾತಿಯನ್ನು ಪಡೆಯದಿರಲಿ. ವಿಶೇಷವಾಗಿ ಭೂಲೋಕದಲ್ಲಿ ನಿನ್ನ ಹೆಸರು ವ್ಯಾಪ್ತಿಯನ್ನು ಹೊಂದಿರಲಿ.

೭೬. ಆದರೆ ನಿನ್ನ ಅವತಾರಗಳು ಮಾತ್ರ ಮೂರು ಲೋಕಗಳಲ್ಲಿಯೂ ಪ್ರಖ್ಯಾತಗಳಾಗುವುವು." ಇಂತೆಂದು ಕಣ್ವಮುನಿಯು ಶಾಪವನ್ನು ಕೊಡಲು ಪ್ರಾಣದೇವನು ಕೋಪಗೊಂಡು ಆತನನ್ನು ಕುರಿತು ಈ ರೀತಿ ಹೇಳಿದನು.

ವಿನಾಪರಾಧಂ ಶಪ್ತೋಽಸ್ಮಿ ತಿತಿಕ್ಷುಂ ಮಾಂ ನಿರಾಗಸಂ ।
ತಸ್ಮಾತ್ಕಣ್ವ ಮಹಾಬಾಹೋ ಗುರುದ್ರೋಹೀ ಭವಾಽಶು ಚ ॥ ೭೭ ॥
ಲೋಕೇ ನಿಂದಿತವೃತ್ತಿಶ್ಚ ಭವೇತ್ಯಾಹ ಸದಾಗತಿಃ ।
ತತಃ ಪ್ರಭೃತಿ ಲೋಕೇಽಸ್ಮಿನ್ ಪ್ರಾಣಸ್ಯಾಸ್ಯ ಮಹಾಪ್ರಭೋ ॥ ೭೮ ॥
ನ ಖ್ಯಾತೋ ಮಹಿಮಾ ಲೋಕೇ ಭೂಲೋಕೇ ತು ವಿಶೇಷತಃ ।
ಶಾಪಾತ್ಕಣ್ವೋ ಗುರುಂ ಜಗ್ಧ್ವಾ ಸೂರ್ಯಶಿಷ್ಯೋಽಭವತ್ತದಾ ॥ ೭೯ ॥
ಇತ್ಯೇತತ್ಕಥಿತಂ ಸರ್ವಂ ಯತ್ಪೃಷ್ಟಂ ತತ್ತ್ವಯಾಽಧುನಾ ।
ಯಚ್ಛ್ರೋತವ್ಯಮಿತೋ ವ್ಯಾಧ ಪೃಚ್ಛ ಮಾಂ ಮಾ ವಿಚಾರಯ॥ ೮೦ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ದ್ವಿತೀಯೇ ವೈಷ್ಣವಖಂಡೇ ವೈಶಾಖಮಾಸಮಾಹಾತ್ಮ್ಯೇ ನಾರದಾಂಬರೀಷಸಂವಾದೇ "ವಾಯುಶಾಪಕಥನಂ" ನಾಮೈಕೋನವಿಂಶೋಽಧ್ಯಾಯಃ

---

೭೭. "ಮಹಾ ತಪಸ್ವಿಯಾದ ಎಲೈ ಕಣ್ವನೆ! ಸಹನಶೀಲನೂ, ನಿಷ್ಪಾಪನೂ ಆದ ನನ್ನನ್ನು ನೀನು ನಿಷ್ಕಾರಣವಾಗಿಯೇ ಶಪಿಸಿರುವೆ. ಆ ಕಾರಣದಿಂದ ಈ ಕ್ಷಣದಲ್ಲಿಯೇ ನೀನು ಗುರುದ್ರೋಹಿಯಾಗು.

೭೮–೭೯. ಲೋಕದಲ್ಲಿ ನೀಚವಾದ ವೃತ್ತಿಯಿಂದಲೇ ಜೀವಿಸುವವನಾಗು." ಎಂಬದಾಗಿ ವಾಯುದೇವನು ಪ್ರತಿಶಾಪವನ್ನು ಕೊಟ್ಟನು. ಎಲೈ ವ್ಯಾಧನೆ! ಆ ದಿನದಿಂದ ಭೂಲೋಕದಲ್ಲಿ ಪ್ರಾಣದೇವರ ಮಹಿಮೆಯು ವಿಶೇಷವಾಗಿ ಪ್ರಖ್ಯಾತಿಯನ್ನು ಪಡೆಯಲಿಲ್ಲ. ಕಣ್ವಮುನಿಯೂ ಸಹ ವಾಯುದೇವನ ಶಾಪದ ಫಲವಾಗಿ ತನ್ನ ಗುರುವನ್ನು ತಿರಸ್ಕರಿಸಿ, ಬಳಿಕ ಸೂರ್ಯದೇವನಿಗೆ ಶಿಷ್ಯನಾದನು.

೮೦. ಅಯ್ಯಾ ಬೇಡನೆ! ನೀನು ಕೇಳಿದ ಪ್ರಶ್ನೆಗಳೆಲ್ಲವುಗಳಿಗೂ ಸಮಗ್ರವಾದ ಉತ್ತರವನ್ನು ನಿರೂಪಿಸಿರುವೆನು. ಇನ್ನೂ ಈಗ ಕೇಳಬೇಕಾದ ವಿಷಯಗಳೇನಾದರೂ ನಿನ್ನ ಮನಸ್ಸಿನಲ್ಲಿದ್ದರೆ ವಿಚಾರಮಾಡದೆ ನನ್ನನ್ನು ಕೇಳುವವನಾಗು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀಸ್ಕಾಂದಮಹಾಪುರಾಣದ ಎರಡನೆಯ ವೈಷ್ಣವಖಂಡದ ವೈಶಾಖಮಾಸಮಾಹಾತ್ಮ್ಯದ ನಾರದಾಂಬರೀಷ ಸಂವಾದದಲ್ಲಿ "ವಾಯುಶಾಪಕಥನ"ವೆಂಬ ಹತ್ತೊಂಬತ್ತನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

# ಅಥ ವಿಂಶೋಽಧ್ಯಾಯಃ

## ಭಾಗವತಧರ್ಮಕಥನಂ

ವ್ಯಾಧ ಉವಾಚ:—

ಕಿಂ ಜೀವಾ ವಿಭುನಾ ಸೃಷ್ಟಾಃ ಕೋಟಿಶೋಽಥ ಸಹಸ್ರಶಃ ।
ದೃಶ್ಯಂತೇ ಭಿನ್ನಕರ್ಮಾಣೋ ನಾನಾಮಾರ್ಗಾಃ ಸನಾತನಾಃ ॥ ೧ ॥
ನೈಕಸ್ವಭಾವಾ ಏತೇ ಹಿ ಕುತ ಏವ ಮಹಾಮತೇ ।
ಸರ್ವಂ ತತ್ಪೃಚ್ಛತೇ ಮಹ್ಯಂ ವಿಸ್ತರಾತ್ತತ್ತ್ವತೋ ವದ ॥ ೨ ॥

ಶಂಖ ಉವಾಚ:—

ತ್ರಿವಿಧಾ ಜೀವಸಂಘಾ ಹಿ ರಜಃ ಸತ್ತ್ವತಮೋಗುಣಾಃ ।
ರಾಜಸಾ ರಾಜಸಂ ಕರ್ಮ ಕುರ್ವಂತಃ ಫಲಭಾಗಿನಃ ॥ ೩ ॥
ಸಾತ್ತ್ವಿಕಾಃ ಸಾತ್ತ್ವಿಕಂ ಕರ್ಮ ಕುರ್ವಂತ್ಯೇತೇ ಯಥಾಕ್ರಮಂ ।
ಕ್ವಚಿಚ್ಚ ಗುಣವೈಷಮ್ಯಂ ಏತೇಷಾಂ ಸಂಸೃತೌ ಭವೇತ್ ॥ ೪ ॥

---

## ಕನ್ನಡದ ಅನುವಾದ

### ಭಾಗವತಧರ್ಮಕಥನ

೧. ವ್ಯಾಧನು ಕೇಳುತ್ತಾನೆ:—"ಅನೇಕ ಕೋಟಿಗಳಿಂದಲೂ ಸಹಸ್ರಗಳಿಂದಲೂ ಸಂಖ್ಯೆಗೆ ಸಿಕ್ಕಲಾರದ ಈ ಜೀವರನ್ನೆಲ್ಲ ಮಹಾವಿಷ್ಣುವು ಏತಕ್ಕಾಗಿ ಸೃಷ್ಟಿಮಾಡಿದನು? ಅವರು ಅನೇಕ ಕರ್ಮಗಳಲ್ಲಿ ನಿರತರೂ, ಅನೇಕ ಸಾಧನಗಳನ್ನು ಮಾಡುವವರೂ, ಆದ್ಯಂತರಹಿತರೂ ಆಗಿರುವರಲ್ಲವೆ.

೨. ಎಲೈ ಮಹಾಬುದ್ಧಿಯೆ! ಇವರೆಲ್ಲರೂ ಒಂದೇ ಸ್ವಭಾವವುಳ್ಳವರಾಗದಿರಲು ಕಾರಣವೇನು? ಕೇಳುತ್ತಿರುವ ನನಗೆ ಈ ವಿಷಯವೆಲ್ಲವನ್ನೂ ವಿಸ್ತಾರವಾಗಿಯೂ ಯಥಾವತ್ತಾಗಿಯೂ ತಿಳಿಯುವಂತೆ ಹೇಳುವವನಾಗು."

೩–೪. ಶಂಖನು ಹೇಳುತ್ತಾನೆ:—ಜೀವಕೋಟಿಗಳೆಲ್ಲರೂ ಸಾತ್ತ್ವಿಕ, ರಾಜಸ, ತಾಮಸರೆಂದು ಗುಣಪ್ರಾಧಾನ್ಯವನ್ನನುಸರಿಸಿ ಮೂರು ವಿಧಗಳಾಗಿ ವಿಭಾಗಿಸಲ್ಪಟ್ಟಿರುವರು. ರಾಜಸ ಜೀವರು ರಾಜಸ ಕರ್ಮವನ್ನೂ, ತಾಮಸರು ತಮೋಗುಣಪ್ರಚುರ ಕರ್ಮಗಳನ್ನೂ, ಸಾತ್ತ್ವಿಕರು ಸತ್ತ್ವೋದ್ರಿಕ್ತಗಳಾದ ಕೆಲಸಗಳನ್ನೂ ತಮ್ಮ ತಮ್ಮ ಸ್ವಭಾವಗಳನ್ನನುಸರಿಸಿ ಮಾಡುತ್ತಿರುವರು. ಆದರೆ ಕೆಲವು ವೇಳೆ ಸಂಸಾರಚಕ್ರದಲ್ಲಿ ಭ್ರಮಿಸುತ್ತಿರುವ ಈ ಜೀವರ ಕರ್ಮಗಳಲ್ಲಿ ಗುಣವೈಷಮ್ಯವೂ ಉಂಟಾಗುತ್ತಿರುವುದು.

ತೇನೈವೋಚ್ಚಾವಚಂ ಕರ್ಮ ಕುರ್ವಂತಃ ಫಲಭಾಗಿನಃ ।
ಕ್ವಚಿತ್ಸುಖಂ ಕ್ವಚಿದ್ದುಃಖಂ ಕ್ವಚಿಚ್ಛೋಭಯಮೇವಚ ॥ ೫ ॥
ಗುಣಾನಾಮೇವ ವೈಷಮ್ಯಾತ್ ಪ್ರಾಪ್ನುವಂತಿ ನರಾ ಇಮೇ ।
ಪ್ರಕೃತಿಸ್ಥಾ ಇಮೇ ಜೀವಾ ಬದ್ಧಾ ಏತೈರ್ಗುಣಸ್ತ್ರಿಭಿಃ ॥ ೬ ॥
ಗುಣಕರ್ಮಾನುರೂಪೇಣ ಕರ್ಮಣಾಂ ವ್ಯತ್ಯಯಃ ಫಲಂ ।
ಗುಣಾನುಗುಣ್ಯಂ ಭೂಯಸ್ತೇ ಪ್ರಕೃತಿಂ ಯಾತ್ಯಮೀ ಜನಾಃ ॥ ೭ ॥
ಪ್ರಕೃತಿಸ್ಥಾಃ ಪ್ರಾಕೃತಿಕಾ ಗುಣಕರ್ಮಾಭಿಮೂರ್ಛಿತಾಃ ।
ಗತಿಂ ಪ್ರಾಕೃತಿಕೀಂ ಯಾಂತಿ ವ್ಯತ್ಯಯಃ ಪ್ರಕೃತೇರ್ನಹಿ ॥ ೮ ॥
ತಾಮಸಾ ದುಃಖಬಹುಲಾಃ ಸದಾ ತಾಮಸವೃತ್ತಯಃ ।
ನಿರ್ದಯಾ ನಿಷ್ಠುರಾ ಲೋಕೇ ಸದಾ ದ್ವೇಷೈಕಜೀವಿನಃ ॥ ೯ ॥

೫. ಇಂತು ಸತ್ಕರ್ಮದುಷ್ಕರ್ಮಗಳನ್ನು ಮಾಡುತ್ತ ಅವುಗಳ ಫಲಗಳನ್ನು ಅಪೇಕ್ಷಿಸುತ್ತಿರುವ ಜೀವನಿಗೆ ಕೆಲವು ವೇಳೆ ಸುಖವೂ, ಕೆಲವು ಸಮಯಗಳಲ್ಲಿ ದುಃಖವೂ, ಹಲವು ವೇಳೆ ಮಿಶ್ರಫಲವೂ ಲಭಿಸುತ್ತಿರುವುವು.

೬. ತ್ರಿಗುಣಗಳ ವೈಷಮ್ಯದ ಫಲವಾಗಿಯೇ ಮನುಷ್ಯರು ಈ ಸುಖ ದುಃಖಾದಿಗಳನ್ನು ಪಡೆಯುವರು. ಸಕಲಜೀವರೂ ಪ್ರಕೃತಿಯಲ್ಲಿಯೇ ನೆಲಸಿರುವರಾದುದರಿಂದ, ಪ್ರಕೃತಿಯಲ್ಲಿ ಅಡಗಿರುವ ಈ ಮೂರು ಗುಣಗಳ ಬಂಧನಕ್ಕೂ ಸಿಲುಕಿರುವರು.

೭. ಜೀವರ ಗುಣಕರ್ಮಗಳಿಗೆ ಅನುರೂಪವಾಗಿಯೇ ಕರ್ಮಗಳ ಫಲವೂ ವ್ಯತ್ಯಾಸವನ್ನು ಹೊಂದುವುದು. ಕರ್ಮಿಗಳಾದ ಜೀವರಾದರೊ, ಪುನಃ ಪುನಃ ಸಂಚಿತಕರ್ಮಗಳಿಗನುಗುಣವಾದ ಸ್ವಭಾವಗಳಿಂದಲೇ ಕೂಡಿ ಜನಿಸುವರು.

೮. ಈ ವಿಧವಾಗಿ ತಮ್ಮ ಸ್ವಭಾವದಲ್ಲಿಯೇ ತಾವು ನೆಲಸಿದವರಾಗಿ, ಗುಣ ಕರ್ಮಚಕ್ರದಲ್ಲಿಯೇ ಬಿದ್ದು ಮೂರ್ಛಿತರಾಗಿ, ಪ್ರಾಕೃತರೆನಿಸುವರು. ಅವರು ತಮ್ಮ ಪ್ರಕೃತಿಗೆ ಸಂಬಂಧಿಸಿದ ಗತಿಯನ್ನೇ ಪಡೆಯುವರು. ಸ್ವಭಾವದಲ್ಲಿ ಎಂದಿಗೂ ವ್ಯತ್ಯಾಸವುಂಟಾಗಲಾರದಷ್ಟೆ.

೯. ಆ ತ್ರಿವಿಧ ಜೀವರಲ್ಲಿ ತಾಮಸರು ಬಹಳ ದುಃಖಗಳಿಗೊಳಗಾಗುವರು. ಯಾವಾಗಲೂ ತಾಮಸಕಾರ್ಯಗಳಲ್ಲಿಯೇ ನಿರತರಾಗಿರುವರು. ದಯಾ ದಾಕ್ಷಿಣ್ಯವರ್ಜಿತರೂ, ಕ್ರೂರಕರ್ಮಿಗಳೂ ಪ್ರಪಂಚದಲ್ಲಿ ಯಾವಾಗಲೂ ದ್ವೇಷ ಸಾಧನೆಯಿಂದಲೂ, ಪರಸ್ಪರ ದ್ವೇಷಗಳನ್ನು ಇತರರಲ್ಲಿ ಉದ್ರೇಕಗೊಳಿಸು ವುದರಿಂದಲೂ ತಮ್ಮ ಜೀವನವನ್ನು ನಡೆಸಿಕೊಳ್ಳುವರು.

ರಾಕ್ಷಸಾದ್ಯಾ ಪಿಶಾಚಾಂತಾಃ ತಾಮಸೀಂ ಯಾಂತಿ ವೈ ಗತಿಂ ।
ರಾಜಸಾ ಮಿಶ್ರಮತಯಃ ಕರ್ತಾರಃ ಪುಣ್ಯಪಾಪಯೋಃ ॥ ೧೦ ॥
ಪುಣ್ಯಾತ್ಸ್ವರ್ಗಂ ಪ್ರಾಪ್ನುವಂತಿ ಕ್ವಚಿತ್ಪಾಪಾಚ್ಚ ಯಾತನಾಂ ।
ಅತ ಏತೇ ಮಂದಭಾಗ್ಯಾ ಆವರ್ತಂತೇ ಪುನಃ ಪುನಃ ॥ ೧೧ ॥
ಧರ್ಮಶೀಲಾ ದಯಾವಂತಃ ಶ್ರದ್ಧಾವಂತೋಽನಸೂಯಕಾಃ ।
ಸಾತ್ವಿಕಾಃ ಸಾತ್ವಿಕೀಂ ವೃತ್ತಿಂ ಅನುತಿಷ್ಠಂತ ಆಸತೇ ॥ ೧೨ ॥
ತೇ ಚೋರ್ಧ್ವಂ ಯಾಂತಿ ವಿಮಲಾ ಗುಣಾಪಾಯೇ ಮಹೌಜಸಃ ।
ವಿಭಿನ್ನಕರ್ಮಣಾಂ ಜಾತಃ ಪೃಥಗ್ಭಾವಾಃ ಪೃಥಗ್ವಿಧಾಃ ॥ ೧೩ ॥
ಗುಣಕರ್ಮಾನುರೂಪೇಣ ತೇಷಾಂ ವಿಷ್ಣುರ್ಮಹಾಪ್ರಭುಃ ।
ಕರ್ಮಾಣಿ ಕಾರಯತ್ಯಾದ್ಯಾ ಸ್ವಸ್ವರೂಪಾಪ್ತಯೇ ವಿಭುಃ ॥ ೧೪ ॥

೧೦. ರಾಕ್ಷಸರು ಮೊದಲುಗೊಂಡು ಪಿಶಾಚಗಳವರೆಗಿನ ಜೀವಿಗಳೆಲ್ಲರೂ ತಾಮಸಗತಿಯನ್ನೇ ಹೊಂದುವರು. ರಾಜಸಜೀವರು ಮಿಶ್ರಬುದ್ಧಿಯುಳ್ಳವರಾಗಿ ಪುಣ್ಯಪಾಪಗಳೆರಡನ್ನೂ ಮಾಡುತ್ತಿರುವರು.

೧೧. ಪುಣ್ಯದಿಂದ ಸ್ವರ್ಗಾದಿ ಉತ್ತಮ ಲೋಕಗಳನ್ನು ಪಡೆಯುವರು. ಕೆಲವು ವೇಳೆ ಪಾಪಗಳನ್ನು ಮಾಡಿ ನರಕಯಾತನೆಗಳನ್ನೂ ಅನುಭವಿಸುವರು. ಆದುದರಿಂದ ಅಲ್ಪಭಾಗ್ಯರಾದ ಇವರು ಮತ್ತೆ ಮತ್ತೆ ಈ ಮನುಷ್ಯ ಲೋಕದಲ್ಲಿ ಜನಿಸುತ್ತಿರುವರು.

೧೨. ಸಾತ್ವಿಕರಾದ ಜೀವರು ಧರ್ಮದಲ್ಲಿಯೇ ಆದರವುಳ್ಳವರಾಗಿಯೂ, ಸರ್ವಪ್ರಾಣಿಗಳಲ್ಲಿಯೂ ದಯೆಯುಳ್ಳವರಾಗಿಯೂ, ಕೈಹಿಡಿದ ಕಾರ್ಯಗಳಲ್ಲಿ ಶ್ರದ್ಧಾವಂತರಾಗಿಯೂ, ಇತರ ಭೋಗಭಾಗ್ಯಗಳಲ್ಲಿ ಅಸೂಯಾರಹಿತರಾಗಿಯೂ ಸತ್ವಗುಣದ ಅಭಿವೃದ್ಧಿಗೆ ಅನುಕೂಲವಾದ ಜೀವನೋಪಾಯವುಳ್ಳವರಾಗಿಯೂ ಕಾಣುತ್ತಿರುವರು.

೧೩. ಅವರು ಪರಿಶುದ್ಧರಾಗಿ ತ್ರಿಗುಣಾತ್ಮಿಕವಾದ ಪ್ರಕೃತಿಯ ಬಂಧವನ್ನು ಬಿಡಿಸಿಕೊಂಡು ಮಹಾತೇಜಸ್ವಿಗಳಾಗಿ ವೈಕುಂಠಾದಿ ಊರ್ಧ್ವಲೋಕಗಳನ್ನು ಹೊಂದುವರು. ಈ ವಿಧವಾಗಿ ಅನೇಕ ವಿಧಗಳಾದ ಕರ್ಮಗಳನ್ನು ಮಾಡುವುದರಿಂದ ಅನೇಕ ಬುದ್ಧಿಗಳುಳ್ಳವರೂ, ಅನೇಕ ಪ್ರಕಾರರೂ ಆಗಿರುವರು.

೧೪. ಸಕಲರಿಗೂ ಅಧೀಶ್ವರನಾದ ಮಹಾವಿಷ್ಣುವು ಎಲ್ಲರೂ ತನ್ನನ್ನೇ ಪಡೆಯಬೇಕೆಂಬ ಅಭಿಲಾಷೆಯುಳ್ಳವನಾಗಿ ಅಂತರ್ಯಾಮಿಯಾಗಿದ್ದುಕೊಂಡು ಆಯಾ ಜೀವರ ಗುಣಕರ್ಮಗಳಿಗನುಗುಣಗಳಾದ ಕಾರ್ಯಸಾಧನೆಗಳನ್ನೇ ಅವರವರಿಂದ ಮಾಡಿಸುತ್ತಿರುವನು.

ವಿಷ್ಣೋರ್ವೈಷಮ್ಯನೈರ್ಘೃಣ್ಯೇ ಪೂರ್ಣಕಾಮಸ್ಯ ವೈ ನ ಹಿ ।
ಸೃಷ್ಟಿಂ ಸ್ಥಿತಿಂ ಹೃತಿಂ ಚೈವ ಸಮಾಮೇವ ಕರೋತ್ಯಯಂ ॥ ೧೫ ॥
ಸ್ವಗುಣಾದೇವ ತೇ ಸರ್ವೇ ಕರ್ಮಣಃ ಫಲಭಾಗಿನಃ ।
ಆರಾಮೋಽಪ್ಯನ್ಯಥಾ ಸರ್ವಾನ್ ಸಮಂ ವರ್ಷಯತಿ ದ್ರುಮಾನ್ ॥೧೬॥
ಏಕಕುಲ್ಯಾ ಜಲಾಹ್ಯಂಗ ದ್ರುಮಾಶ್ಚ ಪ್ರಕೃತಿಂ ಗತಾಃ ।
ನಾರಾಮೋಽಪ್ಯರಿ ವೈಷಮ್ಯಂ ನೈರ್ಘೃಣ್ಯಂ ವಾ ಕಥಂಚನ ॥ ೧೭ ॥

ವ್ಯಾಧ ಉವಾಚ :—

ಜನಾನಾಂ ಪೂರ್ಣಭೋಗಾನಾಂ ಕದಾ ಮುಕ್ತಿರ್ಭವೇನ್ಮುನೇ ।
ಸೃಷ್ಟಿಕಾಲೇಽಥವಾ ಹ್ಯಂತಕಾಲೇ ವಾ ಸ್ಥಾಪನಸ್ಯ ಚ ॥ ೧೮ ॥
ಕ್ವಚಿಚ್ಚ ಸೃಷ್ಟಿಕಾಲಸ್ಯ ಸಂಹಾರಸ್ಯಾಪಿ ವೈ ಸ್ಥಿತೇಃ ।
ಏತದ್ವಿಸ್ತಾರ್ಯ ಮೇ ಬ್ರಹ್ಮನ್ ಭಗವಚ್ಚೇಷ್ಟಿತಂ ವದ ॥ ೧೯ ॥

---

೧೫. ಸಂಸಿದ್ಧಮನೋರಥನಾದ ಆತನಿಗೆ ಜೀವರಲ್ಲಿ ವೈಷಮ್ಯಭಾವವಾಗಲಿ ನಿಷ್ಕರುಣೆಯಾಗಲಿ ಎಂದಿಗೂ ಇಲ್ಲವಷ್ಟೆ. ಆತನು ಬ್ರಹ್ಮಾಂಡದ ಸೃಷ್ಟಿ, ಸ್ಥಿತಿ, ಲಯಗಳೆಲ್ಲವನ್ನೂ ಒಂದೇ ವಿಧವಾದ ಉದಾಸೀನಭಾವದಿಂದ ಜೀವರ ಉದ್ಧಾರಕ್ಕಾಗಿಯೇ ಮಾಡುತ್ತಿರುವನು.

೧೬. ಆ ಜೀವರೆಲ್ಲರೂ ತಮ್ಮ ಗುಣಗಳನ್ನನುಸರಿಸಿಯೇ ಕರ್ಮಗಳ ಫಲಗಳನ್ನನುಭವಿಸುವರು. ಒಂದು ತೋಟದಲ್ಲಿರುವ ಅನೇಕ ವಿಧಗಳಾದ ಗಿಡಗಳೆಲ್ಲವುಗಳಿಗೂ ಮೇಘವು ನಿಷ್ಪಕ್ಷಪಾತವಾಗಿಯೇ ಮಳೆಯನ್ನು ಸುರಿಸುತ್ತದೆಯಲ್ಲವೆ.

೧೭. ಪ್ರಿಯನಾದ ವ್ಯಾಧನೆ! ಒಂದೇ ಕಾಲುವೆಯಲ್ಲಿ ಹರಿಯುವ ನೀರು ತೋಟದಲ್ಲಿರಲು ಗಿಡಗಳು ತಮ್ಮ ತಮ್ಮ ಪ್ರಕೃತಿಗಳನ್ನನುಸರಿಸಿಯೇ ಬೆಳೆಯುವುವಲ್ಲವೆ. ಆ ತೋಟದಲ್ಲಿ ಸಿಹಿ ಕಹಿ ಹಣ್ಣುಗಳುಳ್ಳ ಗಿಡಗಳು ಬೆಳೆದರೆ ಅದರಲ್ಲಿ ತೋಟಗಾರನ ವೈಷಮ್ಯನೈರ್ಘೃಣ್ಯಗಳೇನೂ ಇಲ್ಲವಷ್ಟೆ.

೧೮. ವ್ಯಾಧನು ಪ್ರಶ್ನೆಮಾಡುತ್ತಾನೆ:—"ಎಲೈ ಮಹಾಮುನಿಯೆ! ಸಕಲ ಭೋಗಗಳನ್ನೂ ಅನುಭವಿಸಿರುವ ಜೀವರಿಗೆ ಯಾವಾಗ ಮೋಕ್ಷವು ಲಭಿಸುವುದು? ಬ್ರಹ್ಮಾಂಡದ ಸೃಷ್ಟಕಾಲದಲ್ಲಿಯೆ, ಅಥವಾ ಪ್ರಳಯದಲ್ಲಿಯೆ? ಅಲ್ಲದೆ ಸ್ಥಿತಿ ಕಾಲದಲ್ಲಿಯೂ ನಡೆಯುತ್ತಿರುವುದೊ?

೧೯. ಅಥವಾ ಕೆಲವುವೇಳೆ ಸೃಷ್ಟಿ, ಸ್ಥಿತಿ, ಸಂಹಾರಗಳ ಕಾಲದ ನಿಯಮವೇ ಇಲ್ಲದೆ ನಿರಂತರದಲ್ಲಿಯೂ ನಡೆಯುವುದೊ? ಎಲೈ ಬ್ರಾಹ್ಮಣೋತ್ತಮನೆ! ಈ ವಿಷಯದಲ್ಲಿ ಪರಮಾತ್ಮನ ಲೀಲೆಯು ಹೇಗಿರುವುದೆಂಬುದನ್ನು ನನಗೆ ವಿಸ್ತಾರವಾಗಿ ತಿಳಿಸು.

ಶಂಖ ಉವಾಚ:—

ಚತುರ್ಯುಗಸಹಸ್ರಾಣಿ ಬ್ರಹ್ಮಣೋ ದಿನಮುಚ್ಯತೇ ।
ರಾತ್ರಿಶ್ಚ ತಾವತೀ ತತ್ರ ಹ್ಯಹೋರಾತ್ರಂ ದಿನಂ ಭವೇತ್ ॥ ೨೦ ॥
ದಶಪಂಚದಿನಾನ್ಯಾಹುಃ ಪಕ್ಷಂ ಮಾಸೋ ದ್ವಯಾತ್ಮಕಃ ।
ಮಾಸದ್ವಯಮೃತುಂ ಪ್ರಾಹುಃ ಅಯನಂ ಚ ಋತುತ್ರಯಂ ॥ ೨೧ ॥
ಅಯನೇ ದ್ವೇ ವತ್ಸರಸ್ತಾದೃಕ್ಛತಸಮಾ ಯದಿ ।
ಗಚ್ಛಂತಿ ಬ್ರಹ್ಮಣೋ ಯಸ್ಯ ಬ್ರಹ್ಮಕಲ್ಪಂ ತದಾ ವಿದುಃ ॥ ೨೨ ॥
ತಾವಾನ್ ಹಿ ಪ್ರಲಯಃ ಕಾಲ ಇತಿ ವೇದವಿದಾಂ ಮತಂ ।
ಪ್ರಲಯಸ್ತ್ರಿವಿಧಃ ಪ್ರೋಕ್ತೋ ಮಾನವೋ ಮಾನವಾತ್ಯಯೇ ॥ ೨೩ ॥
ದೈನಂದಿನೋ ದ್ವಿತೀಯೋ ಹಿ ಬ್ರಹ್ಮಣೋ ದಿವಸಾತ್ಯಯೇ ।
ಬ್ರಹ್ಮಣೋಽಥ ಲಯೇ ಪಶ್ಚಾದ್ಬ್ರಾಹ್ಮಂ ಚ ಪ್ರಲಯಂ ವಿದುಃ ॥ ೨೪ ॥

---

೨೦. ಶಂಖನು ಹೇಳುತ್ತಾನೆ:—ನಮ್ಮ ಗಣನೆಯ ರೀತಿಯಿಂದ ಒಂದು ಸಾವಿರ ಮಹಾಯುಗಗಳು ಬ್ರಹ್ಮದೇವನಿಗೆ ಒಂದು ಹಗಲೆನಿಸುವುವು. ಆತನಿಗೆ ರಾತ್ರಿಯೂ ಆ ಪ್ರಮಾಣದ್ದೇ ಆಗಿರುವುದು. ಇವುಗಳೆರಡೂ ಸೇರಿದರೆ ಒಂದು ದಿವಸವಾಗುವುದು.

೨೧. ಇಂತಹ ಹದಿನೈದು ದಿನಗಳಾಗಲು ಒಂದು ಪಕ್ಷವೂ, ಎರಡು ಪಕ್ಷಗಳಾಗಲು ಒಂದು ಮಾಸವೂ ಆಗುವುವು. ಎರಡು ಮಾಸಗಳ ಅವಧಿಯನ್ನು ಒಂದು ಋತುವೆಂದು ಕರೆಯುವರು. ಮೂರು ಋತುಗಳಾಗಲು ಒಂದು ಅಯನವೆನಿಸುವುದು.

೨೨. ಉತ್ತರಾಯಣ ದಕ್ಷಿಣಾಯನಗಳೆರಡೂ ಕೂಡಿ ಒಂದು ಸಂವತ್ಸರವೆನಿಸುವುದು. ಈ ರೀತಿಯಾದ ಒಂದು ನೂರು ಸಂವತ್ಸರಗಳು ಕಳೆಯಲು ಒಬ್ಬ ಬ್ರಹ್ಮನ ಆಯುರ್ದಾಯವು ಕಳೆಯುವುದು. ಈ ಆಯುಃಪ್ರಮಾಣವನ್ನೇ ಬ್ರಹ್ಮಕಲ್ಪವೆಂದು ಪ್ರಾಜ್ಞರು ತಿಳಿಯುವರು.

೨೩. ಬಳಿಕ ಅದೇ ಪ್ರಮಾಣದ ಪ್ರಳಯಕಾಲವು ಸಂಭವಿಸುವುದೆಂಬುದು ವೇದಜ್ಞರ ಸಿದ್ಧಾಂತವಾಗಿರುವುದು. ಈ ಪ್ರಳಯವೆಂಬುದು ಮೂರು ವಿಧವಾಗಿರುವುದು. ಪ್ರತಿಯೊಂದು ಮನ್ವಂತರದ ಕೊನೆಯಲ್ಲಿ ಆಗುವ ಪ್ರಳಯಕ್ಕೆ ಮಾನವಪ್ರಳಯವೆಂದು ಹೆಸರು.

೨೪. ಎರಡನೆಯದು ದೈನಂದಿನ ಪ್ರಳಯವು. ಇದು ಚತುರ್ಮುಖನ ಪ್ರತಿಯೊಂದು ಹಗಲು ಕಳೆದು ರಾತ್ರಿಯಾಗುವ ಸಮಯದಲ್ಲಿ ಸಂಭವಿಸುವುದು. ಮೂರನೆಯದೇ ಬ್ರಹ್ಮನ ಆಯುರವಸಾನಕಾಲದಲ್ಲಿ ನಡೆಯುವುದು. ಇದಕ್ಕೆ ಬ್ರಾಹ್ಮಪ್ರಳಯವೆಂದು ಕಾಲಜ್ಞರು ಹೇಳುವರು.

**ಬ್ರಹ್ಮಣಸ್ತು ಮುಹೂರ್ತೇ ತು ಮನೋಸ್ತು ಪ್ರಲಯಂ ವಿದುಃ ।**
**ಪ್ರಲಯೇಷು ವ್ಯತೀತೇಷು ಚತುರ್ದಶಸು ವೈ ಕ್ರಮಾತ್ ॥ ೨೫ ॥**
**ದೈನಂದಿನಲಯಂ ಪ್ರಾಹುಃ ಪ್ರಲಯಾನಾಂ ಸ್ಥಿತಿಂ ಪುನಃ ।**
**ತ್ರಯಾಣಾಮೇವ ಲೋಕಾನಾಂ ಲಯೋ ಮನ್ವಂತರೇ ಭವೇತ್ ॥ ೨೬ ॥**
**ಚೇತನಾನಾಂ ತದಾ ನಾಶೋ ನ ಲೋಕಾನಾಂ ಕ್ಷಯೋ ಭವೇತ್ ।**
**ಉದಕೈರೇವ ಪೂರ್ತಿಶ್ಚ ಯಥಾ ಪೂರ್ವಂ ಯಥಾ ಪುನಃ ॥ ೨೭ ॥**
**ಮನ್ವಂತರಾಂತೇ ಭೂಯಾತ್ತು ಚೇತನಾನಾಂ ಪುನರ್ಭವಃ ।**
**ದೈನಂದಿನಲಯೇ ವ್ಯಾಧ ಸರ್ವಸ್ಯಾಪಕ್ಷಯೋ ಭವೇತ್ ॥ ೨೮ ॥**
**ಸತ್ಯಲೋಕಂ ವಿನಾ ಸರ್ವೇ ಲೋಕಾ ನಶ್ಯಂತಿ ಸಾಧಿಪಾಃ ।**
**ಸಚೇತನಾಃ ಸಾಧಿಭೂತಾಃ ಪ್ರಸುಪ್ತೇ ಚತುರಾನನೇ ॥ ೨೯ ॥**
**ತತ್ತ್ವಾಭಿಮಾನಿನೋ ದೇವಾಃ ಕೇಚಿಚ್ಚ ಮುನಯಸ್ತಥಾ ।**
**ಶಿಷ್ಯಂತಿ ಸುಪ್ತಾಃ ಸರ್ವೇಽಪಿ ಸತ್ಯಲೋಕವ್ಯವಸ್ಥಿತಾಃ ॥ ೩೦ ॥**

೨೫. ಬ್ರಹ್ಮನ ದಿವಸದ ಒಂದೊಂದು ಮುಹೂರ್ತದ ಕೊನೆಯಲ್ಲಿಯೂ ಒಂದೊಂದು ಮಾನವಪ್ರಳಯವಾಗುವುದು. ಈ ರೀತಿಯಾಗಿ ಹದಿನಾಲ್ಕುಮಾನವ ಪ್ರಳಯಗಳು ಕಳೆಯಲು ಬ್ರಹ್ಮನ ಒಂದು ದಿವಸವು ಮುಗಿದುಹೋಗುವುದು.

೨೬. ಆಗ ದೈನಂದಿನಪ್ರಳಯವುಂಟಾಗುವುದು. ಇನ್ನು ಆ ತ್ರಿವಿಧ ಪ್ರಳಯಗಳ ಸ್ವರೂಪಗಳನ್ನು ನಿರೂಪಿಸುವೆನು. ಮನ್ವಂತರದ ಕೊನೆಯ ಪ್ರಳಯಗಳಲ್ಲಿ ಸ್ವರ್ಗ, ಮರ್ತ್ಯ, ಪಾತಾಳಗಳೆಂಬ ಮೂರು ಲೋಕಗಳ ಲಯವು ಮಾತ್ರ ಉಂಟಾಗುವುದು.

೨೭. ಆಗ ಜೀವರ ನಾಶವಾಗಲಿ, ಇತರ ಲೋಕಗಳ ಕ್ಷಯವಾಗಲಿ ಆಗುವುದಿಲ್ಲ. ಲೋಕಗಳೆಲ್ಲವೂ ಜಲದಿಂದಾವೃತವಾಗಿರುವುವು. ಮತ್ತು ಪ್ರಳಯಾಂತ್ಯದಲ್ಲಿ ಮೊದಲಿದ್ದಂತೆಯೇ ಲೋಕವಿಭಾಗವು ನಡೆಯುವುದು.

೨೮. ಈ ರೀತಿಯಾಗಿ ಪ್ರತಿಯೊಂದು ಮನ್ವಂತರದ ಕೊನೆಯಲ್ಲಿಯೂ ಪುನಃ ಜೀವರ ಸೃಷ್ಟಿಯುಂಟಾಗುವುದು. (ಸಂಸಾರದಲ್ಲಿ ಗಮನಾಗಮನಗಳುಂಟಾಗುವುವು.) ಎಲೈ ವ್ಯಾಧನೆ! ದೈನಂದಿನಲಯದಲ್ಲಿಯಾದರೊ, ಸಕಲ ಬ್ರಹ್ಮಾಂಡದ ನಾಶವೂ ಉಂಟಾಗುವುದು.

೨೯. ಆಗ ಸತ್ಯಲೋಕವೊಂದನ್ನುಳಿದು ಸಕಲ ಲೋಕಗಳೂ ತಮ್ಮ ಅಧಿಪತಿಗಳೊಡನೆಯೂ, ಜೀವರೊಡನೆಯೂ, ಪಂಚಭೂತಗಳೊಡನೆಯೂ, ನಾಶವನ್ನು ಹೊಂದುವುವು. ಆಗ ಚತುರ್ಮುಖನು ನಿದ್ರೆಯನ್ನು ಮಾಡುವನು.

೩೦. ಆ ಸಮಯದಲ್ಲಿ ತತ್ತ್ವಾಭಿಮಾನಿಗಳಾದ ದೇವತೆಗಳೂ, ಮತ್ತು

ತಿಷ್ಠಂತಿ ಸುಪ್ತಿಮಾಪನ್ನಾ ಯಾವತ್ಕಲ್ಪಮತೀಂದ್ರಿಯಾಃ ।
ಪುನರ್ನಿಶಾತ್ಯಯೇ ಬ್ರಹ್ಮಾ ಯಥಾಪೂರ್ವಮಕಲ್ಪಯತ್ ॥ ೩೧ ॥
ಋಷೀನ್ ದೇವಾನ್ ಪಿತೄನ್ ಲೋಕಾನ್ ಧರ್ಮಾನ್ ವರ್ಣಾನ್ ಪೃಥಕ್ಪೃಥಕ್।
ಪುನರ್ದಶಾವತಾರಾ ಹಿ ವಿಷ್ಣೋರ್ದೇವಸ್ಯ ಚಕ್ರಿಣಃ ।
ನಿಯಮೇನ ಭವಂತ್ಯೇತೇ ಯಥಾನ್ಯೇ ಪಿ ಚ ಭೂರಿಶಃ ॥ ೩೨ ॥
ದೇವತಾ ಋಷಯಶ್ಚೈವ ಆಕಲ್ಪಂ ಚ ಗಿರಾಂಪತೇಃ ।
ಪುನರೇವಾಭಿವರ್ತಂತೇ ಬ್ರಹ್ಮಣಾ ಸಹ ಮುಕ್ತಿಗಾಃ ॥ ೩೩ ॥
ಭೂಪಾಶ್ಚ ಸಾಧವೋ ಯೇ ಚ ಸಿದ್ಧಿಂ ಪ್ರಾಪ್ತಾ ಪರಂಗತಾಃ ।
ತೇನೈವ ಚಾಭಿವರ್ತಂತೇ ಸತ್ಯಲೋಕಮ್ಯವಸ್ಥಿತಾಃ ॥ ೩೪ ॥
ತದ್ರಾಶಿಗಾಃ ಪುನರ್ಯಾಂತಿ ತನ್ನಾಮ್ನಾ ಶ್ರುತಿಸಂಸ್ಥಿತಾಃ ।
ತತ್ತದ್ಗೋತ್ರೇಷು ಜಾಯಂತೇ ತತ್ತತ್ಕರ್ಮರತಾಃ ಸದಾ ॥ ೩೫ ॥

---

ಕೆಲವು ಮಹಾಮುನಿಗಳೂ ಎಲ್ಲರೂ ಸತ್ಯಲೋಕದಲ್ಲಿಯೇ ನೆಲಸಿ ನಿದ್ರಿಸುತ್ತ ಪ್ರಳಯದಲ್ಲಿ ಅವಶೇಷರಾಗಿ ಉಳಿಯುವರು.

೩೧. ಇಂತು ಪ್ರಳಯವು ನಡೆಯುತ್ತಿರುವವರೆಗೂ ಇವರೆಲ್ಲರೂ ಇಂದ್ರಿಯವ್ಯಾಪಾರಗಳಿಲ್ಲದವರಾಗಿ ಗಾಢನಿದ್ರೆಯಿಂದಾವರಿಸಲ್ಪಟ್ಟಿರುವರು. ರಾತ್ರಿಯು ಕಳೆದು ಪ್ರಭಾತವಾಗಲು ಬ್ರಹ್ಮದೇವನು ಪುನಃ ಪೂರ್ವದಿನದಲ್ಲಿದ್ದಂತೆಯೇ ಸೃಷ್ಟಿಯನ್ನು ಹೊರಗೆಡಹುವನು.

೩೨. ಮಹರ್ಷಿಗಳನ್ನೂ, ದೇವತೆಗಳನ್ನೂ, ಪಿತೃಗಳನ್ನೂ, ಚತುರ್ದಶ ಲೋಕಗಳನ್ನೂ, ಧರ್ಮಗಳನ್ನೂ, ಚಾತುರ್ವರ್ಣ್ಯಗಳನ್ನೂ ಬೇರೆಬೇರೆಯಾಗಿ ಸೃಜಿಸುವನು. ಚಕ್ರಪಾಣಿಯಾದ ಮಹಾವಿಷ್ಣುವು ಪುನಃ ದಶಾವತಾರಗಳನ್ನೆತ್ತಿ ದುಷ್ಟನಿಗ್ರಹವನ್ನು ಮಾಡುತ್ತಿರುವನು. ಈ ಹತ್ತು ಅವತಾರಗಳು ನಿಯಮದಿಂದ ನಡೆಯುವುವು. ಇವುಗಳಲ್ಲದೆ ಕಾಲಾನುಗುಣವಾಗಿ ಇತರ ಅನೇಕ ಅವತಾರಗಳೂ ಆಗುತ್ತಿರುವುವು.

೩೩. ದೇವತೆಗಳೂ ಮಹರ್ಷಿಗಳೂ ಬ್ರಾಹ್ಮಕಲ್ಪದ ಸಮಯದಲ್ಲಿ ಬ್ರಹ್ಮನೊಡನೆ ವೈಕುಂಠಲೋಕವನ್ನು ಸೇರುವವರಾಗಿ ಪುನಃ ಸೃಷ್ಟಿಕಾಲ ವೊದಗಲು ತಮ್ಮ ತಮ್ಮ ಲೋಕಗಳಿಗೆ ಆತನೊಡನೆಯೇ ಹಿಂದಿರುಗುವರು.

೩೪. ಯಾವ ಭೂಪಾಲಕರೂ ಸಾಧುಗಳೂ ಸಿದ್ಧಿಯನ್ನು ಹೊಂದಿ ಪರಮ ಪದವನ್ನು ಸೇರಿರುವರೊ, ಅವರೂ ಸಹ ಚತುರ್ಮುಖನೊಡನೆಯೇ ಹಿಂದಕ್ಕೆ ಬಂದು ಸತ್ಯಲೋಕದಲ್ಲಿ ವಾಸಮಾಡುತ್ತಿರುವರು.

೩೫. ಅವರೆಲ್ಲರೂ ತಮ್ಮ ಹಿಂದಿನ ಜನ್ಮಗಳಲ್ಲಿ ಹುಟ್ಟಿದ್ದ ವರ್ಣಗಳಲ್ಲಿಯೇ ಜನಿಸಿ, ಆ ಹೆಸರುಗಳಿಂದಲೇ ಲೋಕಗಳಲ್ಲಿ ಪ್ರಖ್ಯಾತಿಯನ್ನು ಪಡೆದು, ತಮಗೆ

ದೈತ್ಯಾನಾಮಪಿ ಸರ್ವೇಷಾಂ ಯದಾ ಕಲಿಯುಗಾತ್ಯಯಃ ।
ಕಲಿನಾ ಸಹ ಗಚ್ಛಂತಿ ಸ್ವಾಂ ಗತಿಂ ನಿರಯಾಲಯಾಃ ॥ ೩೬ ॥
ತೇಷಾಂ ಚ ರಾಶಿಸಂಸ್ಥಾ ಯೇ ತನ್ನಾಮಾನೋಽಪರೇಽಪಿ ಚ ।
ಜಾಯಂತೇ ಕರ್ಮಣಾ ಸ್ವೇನ ತತ್ತತ್ಕರ್ಮವಿಧಾಯಕಾಃ ॥ ೩೭ ॥
ಸೃಷ್ಟಿಕಾಲಂ ಪ್ರವಕ್ಷ್ಯಾಮಿ ಮುಕ್ತಿಕಾಲಂ ತಥೈವ ಚ ।
ಬ್ರಹ್ಮಾದೀನಾಂ ಚ ದೇವಾನಾಂ ಸಮಾಹಿತಮನಾ ಭವ ॥ ೩೮ ॥
ನಿಮೇಷೋ ದೇವದೇವಸ್ಯ ಬ್ರಹ್ಮಕಲ್ಪಸಮೋ ಮತಃ ।
ತಸ್ಯಾವಸಾನೇ ಚೋನ್ಮೇಷೋ ದೇವದೇವಶಿಖಾಮಣೇಃ ॥ ೩೯ ॥
ನಿಮೇಷಾಂತೇ ಭವೇದಿಚ್ಛಾ ಸ್ರಷ್ಟುಂ ಲೋಕಾಂಶ್ಚ ಕುಕ್ಷಿಗಾನ್ ।
ಸೋಽಪಶ್ಯತ್ಸ್ವೋದರೇ ಸರ್ವಾನ್ ಜೀವಸಂಘಾನನೇಕಶಃ ॥ ೪೦ ॥
ಸೃಜ್ಯಾನ್ಮುಕ್ತಾನಮೂನ್ಸರ್ವಾನ್ ಲಿಂಗಭಂಗಮುಪಾಗತಾನ್ ।
ಸುಪ್ತಾಃ ಸ್ಥಿತಿಸ್ಥಾಃ ಸರ್ವೇ ಽಪಿ ತಮೋಗಾ ಅಪಿ ಸರ್ವಶಃ ॥ ೪೧ ॥

---

ಸ್ವಾಭಾವಿಕಗಳಾದ ಕರ್ಮಗಳಲ್ಲಿಯೇ ನಿರತರಾಗಿ ಆಯಾ ಗೋತ್ರಗಳಲ್ಲಿಯೇ ಜನ್ಮಗಳನ್ನು ಪಡೆಯುವರು.

೩೬. ಯಾವಾಗ ಕಲಿಯುಗವು ಕೊನೆಗಾಣುವುದೊ, ಆಗ ಸಮಸ್ತ ದೈತ್ಯರೂ ಕಲಿಪುರುಷರೊಡನೆಯೇ ಹೊರಟು ತಮಗೆ ಯೋಗ್ಯವಾದ ಗತಿಯನ್ನು ಪಡೆದು ನರಕಗಳಲ್ಲಿ ವಾಸಮಾಡುವರು.

೩೭. ಅವರೂ ಸಹ ಸೃಷ್ಟಿಕಾಲವೊದಗಲು ತಮ್ಮ ತಮ್ಮ ರಾಶಿಗಳಲ್ಲಿ ಹುಟ್ಟಿ, ತಮ್ಮ ಹೆಸರುಗಳಿಂದಲೇ ಪ್ರಸಿದ್ಧರಾಗಿ, ತಮ್ಮನ್ನು ಹೋಲುವ ಇತರ ಜೀವರೊಡನೆಯೇ ಸ್ವಭಾವನಿಯತಗಳಾದ ವ್ಯಾಪಾರಗಳನ್ನು ಮಾಡುತ್ತ, ತಮ್ಮ ಪೂರ್ವಕರ್ಮಗಳ ಫಲವಾಗಿ ಪುನಃ ಜನಿಸುವರು.

೩೮. ಇನ್ನು ಬ್ರಹ್ಮಾಂಡದ ಸೃಷ್ಟಿಕಾಲವನ್ನೂ ಬ್ರಹಾದಿದೇವತೆಗಳ ಮೋಕ್ಷಕಾಲವನ್ನೂ ನಿರೂಪಿಸುವೆನು. ಏಕಾಗ್ರಚಿತ್ತದಿಂದ ಕೇಳುವವನಾಗು.

೩೯. ದೇವಾಧಿದೇವನು ಕಣ್ಣುರೆಪ್ಪೆಗಳನ್ನು ಬಡಿಯುವ ಸಮಯವೇ ಜಗತ್ತಿನ ಬ್ರಹ್ಮಕಲ್ಪದ ಅವಕಾಶವಾಗಿರುವುದು. ಅದರ ಅವಸಾನದಲ್ಲಿಯೇ ಪರಮಪುರುಷನಾದ ಆತನು ಕಣ್ಣುಗಳನ್ನು ತೆರೆಯುವನು.

೪೦. ಕಣ್ಣು ಮುಚ್ಚುವ ಸಮಯದ ಅಂತ್ಯದಲ್ಲಿ ಪರಮಾತ್ಮನಿಗೆ ತನ್ನ ಹೊಟ್ಟೆಯೊಳಗೆ ಅಡಗಿರುವ ಲೋಕಗಳನ್ನೆಲ್ಲ ಅಭಿವ್ಯಕ್ತಗೊಳಿಸಬೇಕೆಂಬ ಇಚ್ಛೆಯುಂಟಾಗುವುದು. ಆಗ ಅನೇಕ ಜೀವಸಮೂಹಗಳು ಸಮಗ್ರವಾಗಿ ತನ್ನ ಉದರದಲ್ಲಿ ಸೂಕ್ಷ್ಮರೂಪಗಳಿಂದಿರುವುದನ್ನು ಆತನು ನೋಡುವನು.

೪೧. ಸಂಸಾರಿಗಳು, ಮುಕ್ತರು ಮೊದಲುಗೊಂಡು ಎಲ್ಲರೂ ಆಗ ಲಿಂಗ

ಪೂರ್ವಕಲ್ಪೇ ಲಿಂಗಭಂಗಂ ಪ್ರಾಪನ್ನಾ ವಿಧಿಪೂರ್ವಕಾಃ ।
ಮಾನವಾಂತಾ ಜೀವಕೋಶಾ ಜೀವನ್ಮುಕ್ತಾಶ್ಚ ಮುಕ್ತಿಗಾಃ ॥ ೪೨ ॥
ಪೂರ್ವಕಲ್ಪೇ ವಿಮುಕ್ತಾಶ್ಚ ಬ್ರಹ್ಮಾದ್ಯಾ ಮಾನವಾಂತಕಾಃ ।
ಧ್ಯಾನಸಂಸ್ಥಾ ಹಿ ತಿಷ್ಠಂತಿ ವಿಷ್ಣುಕುಕ್ಷಿಗತಾ ಅಪಿ ॥ ೪೩ ॥
ಉನ್ಮೇಷಸ್ಯಾದಿಮೇ ಭಾಗೇ ಚತುರ್ವ್ಯೂಹಾತ್ಮಕೋ ವಿಭುಃ ।
ಭೂತ್ವಾ ತು ಪೂರ್ವಸಾದ್ಗುಣ್ಯಾತ್ ವಾಸುದೇವಾಶ್ಚ ವ್ಯೂಹಗಾತ್ ॥೪೪॥
ದತ್ವಾ ತು ಬ್ರಹ್ಮಣೋ ಮುಕ್ತಿಂ ಸಾಯುಜ್ಯಾಖ್ಯಾಂ ಮಹಾವಿಭುಃ ।
ದತ್ವಾ ತದನು ಸಾಯುಜ್ಯಂ ತತ್ತ್ವಜ್ಞಾನಂ ಮಹಾತ್ಮನಾಂ ॥ ೪೫ ॥
ಸಾರೂಪ್ಯಂ ಚೈವ ಕೇಷಾಂಚಿತ್ ಸಾಮೀಪ್ಯಂ ಚ ತಥಾ ವಿಭುಃ ।
ಸಾಲೋಕ್ಯಂ ಚ ತಥಾನ್ಯೇಷಾಂ ದತ್ವಾ ದೇವೋ ಜನಾರ್ದನಃ ॥ ೪೬ ॥
ಅನಿರುದ್ಧವಶೇ ಸರ್ವಾನ್ ಸ್ಥಿತಾನ್ ಲೋಕಾನಲೋಕಯತ್ ।
ಪ್ರದ್ಯುಮ್ನಸ್ಯ ವಶೇ ದತ್ವಾ ಸೃಷ್ಟಿಂ ಕರ್ತುಂ ಮನೋ ದಧೇ ॥ ೪೭ ॥

---

ಶರೀರದಿಂದ ಬಿಡುಗಡೆಯನ್ನು ಪಡೆದಿರುವರು. ಅವರಲ್ಲಿ ಬದ್ಧಜೀವರೆಲ್ಲರೂ ತಮೋಗುಣದ ಪ್ರಾಚುರ್ಯದಿಂದ ಯಾವಾಗಲೂ ನಿದ್ರಾಸಕ್ತರಾಗಿರುವರು.

೪೨. ಚತುರ್ಮುಖಬ್ರಹ್ಮನೇ ಮೊದಲಾಗಿ ಮನುಷ್ಯರವರೆವಿಗಿನ ಉತ್ತಮಜೀವರೆಲ್ಲರೂ ಹಿಂದಿನ ಕಲ್ಪದಲ್ಲಿಯೇ ಲಿಂಗಶರೀರಗಳ ಭಂಗವನ್ನು ಪಡೆದಿರುವರು. ಇವರು ಜೀವನ್ಮುಕ್ತರೂ ವೈಕುಂಠಯೋಗ್ಯರೂ ಆಗಿರುವರು.

೪೩. ಪೂರ್ವಕಲ್ಪದಲ್ಲಿಯೇ ಸಂಸಾರಬಂಧನಗಳಿಂದ ಮುಕ್ತರಾದ ಬ್ರಹ್ಮಾದಿ ಮಾನವಾಂತ ಸಜ್ಜೀವರೆಲ್ಲರೂ ಪ್ರಳಯದಲ್ಲಿ ಮಹಾವಿಷ್ಣುವಿನ ಉದರದಲ್ಲಿ ಅಡಗಿಕೊಂಡಿದ್ದರೂ, ಆತನ ಧ್ಯಾನದಲ್ಲಿಯೇ ನಿರತರಾಗಿರುವರು.

೪೪–೪೭. ತನ್ನ ಉನ್ಮೇಷದ ಪ್ರಥಮದಲ್ಲಿ ಮಹಾವಿಷ್ಣುವು ವಾಸುದೇವ, ಪ್ರದ್ಯುಮ್ನ, ಅನಿರುದ್ಧ ಮತ್ತು ಸಂಕರ್ಷಣನಾಮಕರಾದ ಚತುರ್ಮೂರ್ತಿಗಳಾಗಿ ಕಾಣುತ್ತ, ವಾಸುದೇವನೆಂಬ ತನ್ನ ರೂಪದಿಂದ ಸರ್ವೇಶ್ವರನಾದ ಆತನು ಪೂರ್ವಕಲ್ಪದಲ್ಲಿ ಸದ್ಗುಣಭರಿತನಾಗಿದ್ದ ಬ್ರಹ್ಮದೇವನಿಗೆ ಸಾಯುಜ್ಯ ರೂಪವಾದ ಮೋಕ್ಷವನ್ನು ಅನುಗ್ರಹಿಸುವನು. ಬಳಿಕ ಮಹಾತ್ಮರಿಗೆ ಸಾಯುಜ್ಯವನ್ನೂ ತತ್ತ್ವಜ್ಞಾನವನ್ನೂ, ಕೆಲವು ಜೀವರಿಗೆ ಸಾರೂಪ್ಯವನ್ನೂ, ಹಲವರಿಗೆ ಸಾಮೀಪ್ಯವನ್ನೂ, ಇತರರಿಗೆ ಸಾಲೋಕ್ಯವನ್ನೂ ಅವರವರ ಯೋಗ್ಯತಾನುಸಾರವಾಗಿ ಕೊಟ್ಟು, ದೇವೇಶ್ವರನಾದ ಜನಾರ್ದನನು ಅನಿರುದ್ಧನ ವಶದಲ್ಲಿ ಸಕಲ ಲೋಕಗಳೂ ನೆಲಸಿರಬೇಕೆಂದು ನಿಶ್ಚಯವನ್ನು ಮಾಡುವನು. ಮತ್ತು ಪ್ರದ್ಯುಮ್ನನ ವಶದಲ್ಲಿ ಸೃಷ್ಟಿಕಾರ್ಯವನ್ನು ವಹಿಸಿಕೊಟ್ಟು ಬ್ರಹ್ಮಾಂಡವನ್ನು ವಿಸ್ತರಿಸಲು ಮನಸ್ಸು ಮಾಡುವನು.

ಮಾಯಾಂ ಜಯಾಂ ಕೃತಿಂ ಶಾಂತಿಂ ಉಪಯೇಮೇ ಸ್ವಯಂ ಹರಿಃ ।
ಚತುರ್ವ್ಯೂಹೈರ್ಹರೇಃ ಪೂರ್ಣಗುಣೈರ್ವಾಸುದೇವಾದಿಕೈಃ ಕ್ರಮಾತ್ ॥ ೪೮ ॥
ತಾಭಿರ್ಯುಕ್ತೋ ಮಹಾವಿಷ್ಣುಶ್ಚತುರ್ವ್ಯೂಹಾತ್ಮಕೋ ವಿಭುಃ ।
ಭಿನ್ನಕರ್ಮಾಶಯಂ ಲೋಕಂ ಪೂರ್ಣಕಾಮೋ ವ್ಯಜೀಜನತ್ ॥ ೪೯ ॥
ಉನ್ಮೇಷಾಂತೇ ಪುನರ್ವಿಷ್ಣುರ್ಯೋಗಮಾಯಾಂ ಸಮಾಶ್ರಿತಃ ।
ಸಂಕರ್ಷಣಾದ್ವ್ಯೂಹಗಾಚ್ಚ ಹರತ್ಯೇತಚ್ಚರಾಚರಂ ॥ ೫೦ ॥
ತದೇತತ್ಸರ್ವಮಾಖ್ಯಾತಂ ಕಾರ್ಯಂ ಚಿಂತ್ಯಂ ಮಹಾತ್ಮನಃ ।
ಯದಚಿಂತ್ಯಂ ದುರ್ವಿಭಾವ್ಯಂ ಬ್ರಹ್ಮಾದ್ಯೈರಪಿ ಯೋಗಿಭಿಃ ॥ ೫೧ ॥

ವ್ಯಾಧ ಉವಾಚ:—

ಕೇ ವಾ ಭಾವಗತಾ ಧರ್ಮಾಃ ಕೈರ್ವಿಷ್ಣುಶ್ಚ ಪ್ರಸೀದತಿ ।
ತಾನಹಂ ಶ್ರೋತುಮಿಚ್ಛಾಮಿ ಸಾಂಪ್ರತಂ ವದ ನೋ ಮುನೇ ॥ ೫೨ ॥

೪೮. ತನ್ನ ವಾಸುದೇವ, ಅನಿರುದ್ಧ, ಪ್ರದ್ಯುಮ್ನ ಮತ್ತು ಸಂಕರ್ಷಣ ರೂಪಗಳಿಂದ ಕ್ರಮವಾಗಿ ಸಕಲ ಸದ್ಗುಣಸಹಿತನಾದ ಶ್ರೀಹರಿಯು ಮಾಯಾ, ಜಯಾ, ಕೃತಿ ಮತ್ತು ಶಾಂತಿಯರನ್ನು ಪತ್ನಿಯರಾಗಿ ಸ್ವೀಕರಿಸಿರುವನು.

೪೯. ಇಂತು ನಾಲ್ಕು ರೂಪಗಳನ್ನು ತಾಳಿದ ಸರ್ವವ್ಯಾಪಕನು ಅವರಿಂದ ಕೂಡಿದವನಾಗಿ ಸಂಪೂರ್ಣಮನೋರಥನಾಗಿದ್ದರೂ ಆಯಾ ಜೀವರ ಪೂರ್ವ ಕರ್ಮಗಳ ಫಲಗಳನ್ನನುಭವಿಸಲು ಅನುಕೂಲವಾದ ಬ್ರಹ್ಮಾಂಡವನ್ನು ಸೃಷ್ಟಿ ಮಾಡುವನು.

೫೦. ಉನ್ಮೇಷದ ಕಾಲವು ಕೊನೆಗಾಣಲು ಮಹಾವಿಷ್ಣುವು ಪುನಃ ತನ್ನ ಯೋಗಮಾಯೆಯನ್ನು ಆಶ್ರಯಿಸಿಕೊಂಡು ಸಂಕರ್ಷಣಾತ್ಮಕವಾದ ತನ್ನ ದೇಹದೊಳಕ್ಕೆ ಚರಾಚರಾತ್ಮಕವಾದ ಬ್ರಹ್ಮಾಂಡವೆಲ್ಲವನ್ನೂ ಉಪಸಂಹರಿಸಿ ಕೊಳ್ಳುವನು.

೫೧. ಎಲೈ ವ್ಯಾಧನೆ! ಇಂತು ಮಹಾಮಹಿಮನಾದ ವಾಸುದೇವನು ಉದ್ದೇಶಪೂರ್ವಕವಾಗಿ ಮಾಡುವ ಕಾರ್ಯವೆಲ್ಲವನ್ನೂ ವಿಸ್ತರಿಸಿರುವೆನು. ಈ ವ್ಯಾಪಾರದ ಸಂಪೂರ್ಣತತ್ತ್ವವು ಬ್ರಹ್ಮಾದಿ ದೇವತೆಗಳಿಗೂ ಮಹಾ ಯೋಗಿಗಳಿಗೂ ಸಹ ಅಚಿಂತ್ಯವೂ ಊಹಿಸಲಸದಳವೂ ಆಗಿರುವುದು.

೫೨. ವ್ಯಾಧನು ಪ್ರಶ್ನೆಮಾಡುತ್ತಾನೆ:—ಮಹಾಮುನಿಯೆ! ಭಗವದ್ಭಕ್ತರು ಆಚರಿಸಬೇಕಾದ ಧರ್ಮಗಳು ಯಾವುವು? ಯಾವ ಧರ್ಮಗಳ ಆಚರಣೆಯಿಂದ ಮಹಾವಿಷ್ಣುವು ಪ್ರಸನ್ನನಾಗುವನು? ಅವುಗಳನ್ನೆಲ್ಲ ಈಗ ನಾನು ಕೇಳುವ ಇಚ್ಛೆಯುಳ್ಳವನಾಗಿರುವೆನು. ಅವುಗಳನ್ನು ನನಗೆ ವರ್ಣಿಸು.

ಶಂಖ ಉವಾಚ:—

**ಯೇನ ಚಿತ್ತವಿಶುದ್ಧಿಸ್ಸ್ಯಾತ್ ಯಃ ಸತಾಮುಪಕಾರಕಃ ।**
**ತಂ ವಿದ್ಧಿ ಸಾತ್ವಿಕಂ ಧರ್ಮಂ ಯಚ್ಚ ಕೇನಾಪ್ಯನಿಂದಿತಃ ॥ ೫೩ ॥**
**ಶ್ರುತಿಸ್ಮೃತ್ಯುದಿತೋ ಯಸ್ತು ಯದಿ ನಿಷ್ಕಾಮಿಕೋ ಭವೇತ್ ।**
**ಯಸ್ತು ಲೋಕಾವಿರುದ್ಧೋಽಪಿ ತಂ ಧರ್ಮಂ ಸಾತ್ವಿಕಂ ವಿದುಃ ॥ ೫೪ ॥**
**ಚತುರ್ವಿಧಾ ಹಿ ತೇ ಧರ್ಮಾಃ ವರ್ಣಾಶ್ರಮವಿಭಾಗತಃ ।**
**ನಿತ್ಯನೈಮಿತ್ತಿಕಾಃ ಕಾಮ್ಯಾ ಇತಿ ತೇ ಚ ತ್ರಿಧಾ ಮತಾಃ ॥ ೫೫ ॥**
**ತೇ ಸರ್ವೇ ಸ್ವಸ್ವಧರ್ಮಾಶ್ಚ ಯದಾ ವಿಷ್ಣೋಃ ಸಮರ್ಪಿತಾಃ ।**
**ತದಾ ವೈ ಸಾತ್ವಿಕಾ ಜ್ಞೇಯಾ ಧರ್ಮಾ ಭಾಗವತಾಃ ಶುಭಾಃ ॥ ೫೬ ॥**
**ದೇವತಾಂತರದೈವತ್ಯಾಃ ಸಕಾಮಾ ರಾಜಸಾ ಮತಾಃ ॥ ೫೭ ॥**
**ಯಕ್ಷರಕ್ಷಃಪಿಶಾಚಾದಿ ದೈವತ್ಯಾ ಲೋಕನಿಷ್ಠುರಾಃ ।**
**ಹಿಂಸಾತ್ಮಕಾ ನಿಂದಿತಾಶ್ಚ ಧರ್ಮಾಸ್ತೇ ತಾಮಸಾಃ ಸ್ಮೃತಾಃ ॥ ೫೮ ॥**

೫೩. ಶಂಖನು ಹೇಳುತ್ತಾನೆ:—ಯಾವುದರಿಂದ ಮನುಷ್ಯನಿಗೆ ಚಿತ್ತ ಶುದ್ಧಿಯುಂಟಾಗುವುದೊ, ಯಾವುದು ಸತ್ಪುರುಷರಿಗೆ ಉಪಕಾರಿಯಾಗಿ ರುವುದೊ, ಯಾವ ಧರ್ಮವು ಯಾರಿಂದಲೂ ನಿಂದಿತವಾಗಿರುವುದಿಲ್ಲವೊ, ಅದನ್ನು ಸಾತ್ವಿಕಧರ್ಮವೆಂದು ತಿಳಿಯಬೇಕು.

೫೪. ಯಾವುದು ಶ್ರುತಿ ಸ್ಮೃತಿಗಳ ವಾಕ್ಯಗಳಿಗನುಸಾರವಾಗಿರುವುದೊ, ಯಾವುದು ಫಲಾಪೇಕ್ಷೆಯಿಲ್ಲದೆ ಮಾಡಲ್ಪಡುವುದೊ, ಯಾವುದು ಲೌಕಿಕ ವ್ಯವಹಾರಕ್ಕೆ ವಿರುದ್ಧವಾಗಿರುವುದಿಲ್ಲವೊ, ಅದೇ ಸಾತ್ವಿಕ ಧರ್ಮವೆಂದು ಶಾಸ್ತ್ರಜ್ಞರು ತಿಳಿದು ಆಚರಿಸುವರು.

೫೫. ಆ ಧರ್ಮಗಳೆಲ್ಲವೂ ವರ್ಣಾಶ್ರಮಗಳ ವಿಭಾಗವನ್ನನುಸರಿಸಿ ನಾಲ್ಕು ವಿಧಗಳಾಗಿ ವಿಂಗಡಿಸಲ್ಪಟ್ಟಿರುವುವು. ಮತ್ತೊಂದು ರೀತಿಯಿಂದ ನಿತ್ಯ, ನೈಮಿತ್ತಿಕ ಮತ್ತು ಕಾಮ್ಯಗಳೆಂದು ಮೂರು ಭಾಗಗಳಾಗಿ ವಿಭಕ್ತಗಳಾಗಿ ರುವುವು.

೫೬. ಸಕಲ ಮಾನವರೂ ಯಾವಾಗ ತಮ್ಮ ತಮ್ಮ ವರ್ಣಾಶ್ರಮೋಚಿತ ಗಳಾದ ಧರ್ಮಗಳನ್ನು ನಡೆಸಿಕೊಂಡು ಫಲಗಳನ್ನು ಮಹಾವಿಷ್ಣುವಿಗೆ ಸಮರ್ಪಣೆ ಮಾಡುವರೊ, ಆಗ ಮಾತ್ರ ಅವು ಸಾತ್ವಿಕಗಳೆಂದು ತಿಳಿಯಬೇಕು. ಅಂತಹವು ಗಳೇ ಮಂಗಳಕರಗಳಾದ ಭಾಗವತ ಧರ್ಮಗಳು.

೫೭–೫೮. ಇತರ ದೇವತೆಗಳನ್ನುದ್ದೇಶಿಸಿ ಅವರ ಅನುಗ್ರಹದ ಅಪೇಕ್ಷೆ ಯಿಂದ ಮಾಡುವ ಕರ್ಮಗಳು ರಾಜಸಗಳೆನ್ನಲ್ಪಡುವುವು. ಯಕ್ಷರು, ರಾಕ್ಷಸರು,

ಸತ್ತ್ವಸ್ಥಾಃ ಸಾತ್ವಿಕಾನ್ ಧರ್ಮಾನ್ ವಿಷ್ಣು ಪ್ರೀತಿಕರಾಂಚ್ಛುಭಾನ್ ।
ಕುರ್ವಂತನೀಹಯಾ ನಿತ್ಯಂ ತೇ ವೈ ಭಾಗವತಾಃ ಸ್ಮೃತಾಃ ॥ ೫೯ ॥
ಯೇಷಾಂ ಚಿತ್ತಂ ಸದಾ ವಿಷ್ಣೌ ಜಿಹ್ವಾಯಾಂ ನಾಮ ವೈ ವಿಭೋಃ ।
ಪಾದೌ ಚ ಹೃದಯೇ ಯೇಷಾಂ ತೇ ವೈ ಭಾಗವತಾಃ ಸ್ಮೃತಾಃ ॥ ೬೦ ॥
ಸದಾಚಾರರತಾ ಯೇ ಚ ಸರ್ವೇಷಾಮುಪಕಾರಕಾಃ ।
ಸದೈವ ಮಮತಾಹೀನಾಃ ತೇ ವೈ ಭಾಗವತಾಃ ಸ್ಮೃತಾಃ ॥ ೬೧ ॥
ಯೇಷಾಂ ಚ ಶಾಸ್ತ್ರೇ ವಿಶ್ವಾಸೋ ಗುರೌ ಸಾಧುಷು ಕರ್ಮಸು ।
ಯೇ ವಿಷ್ಣುಭಕ್ತಾಃ ಸತತಂ ತೇ ವೈ ಭಾಗವತಾಃ ಸ್ಮೃತಾಃ ॥ ೬೨ ॥
ಯೇಷಾಂ ಹಿ ಸಮ್ಮತಾ ಧರ್ಮಾಃ ಶಾಶ್ವತಾ ವಿಷ್ಣುವಲ್ಲಭಾಃ ।
ಶ್ರುತಿಸ್ಮೃತ್ಯುದಿತಾ ಯೇ ಚ ತೇ ಧರ್ಮಾಃ ಶಾಶ್ವತಾ ಮತಾಃ ॥ ೬೩ ॥

---

ಪಿಶಾಚರು, ಮುಂತಾದವರನ್ನು ದೇವತೆಗಳನ್ನಾಗಿ ನೆನೆದು ಮಾಡಲ್ಪಡುವ ಲೋಕ ನಿಷ್ಠುರಗಳೂ, ಪ್ರಾಣಿಹಿಂಸೆಯಿಂದೊಡಗೂಡಿದವುಗಳೂ, ಸಜ್ಜನರಿಂದ ನಿಂದಿತಗಳೂ ಆದ ಧರ್ಮಗಳೆಲ್ಲವೂ ತಾಮಸಗಳೆಂದು ಶಾಸ್ತ್ರೋಕ್ತಗಳಾಗಿ ರುವುವು.

೫೯-೬೦. ಸಾತ್ವಿಕಜೀವರು ಮಹಾವಿಷ್ಣುವಿಗೆ ಪ್ರೀತಿಕರಗಳೂ, ಶುಭ ಕಾರಕಗಳೂ ಆದ ಸತ್ವೋದ್ರಿಕ್ತಗಳಾದ ಧರ್ಮಗಳನ್ನೇ ಫಲಾಪೇಕ್ಷೆಯಿಲ್ಲದೆ ನಿರಂತರವೂ ಆಚರಿಸುತ್ತಿರುವರು. ಅಂತಹರನ್ನೇ ಭಗವದ್ಭಕ್ತರೆಂದು ತಿಳಿಯಬೇಕು. ಯಾರ ಮನಸ್ಸು ತೈಲಧಾರೆಯಂತೆ ಅವಿಚ್ಛಿನ್ನವಾಗಿ ಮಹಾ ವಿಷ್ಣುವಿನಲ್ಲಿ ನೆಲಸಿರುವುದೊ, ಯಾರ ನಾಲಿಗೆಯು ಸರ್ವೇಶ್ವರನ ನಾಮಗಳನ್ನು ಜಪಿಸುತ್ತಿರುವುದೊ, ಯಾರ ಹೃದಯಕಮಲದಲ್ಲಿ ಪರಮಾತ್ಮನ ಪಾದದ್ವಂದ್ವ ಗಳು ಪೂಜಿಸಲ್ಪಡುತ್ತಿರುವುವೊ, ಅವರೇ ಭಾಗವತರೆಂದು ಸ್ಮೃತಿಗಳು ಉದ್ಘೋಷಿಸುತ್ತಿರುವುವು.

೬೧. ಯಾರು ಸರ್ವಕಾಲಗಳಲ್ಲಿಯೂ ಸದ್ಧರ್ಮಸದಾಚಾರಗಳಲ್ಲಿಯೇ ನಿರತರಾಗಿರುವರೊ, ಯಾರು ಸಕಲ ಜನರಿಗೂ ಉಪಕಾರಗಳನ್ನು ಮಾಡುತ್ತಿರುವರೊ, ಯಾರಿಗೆ ಯಾವ ಕ್ಷಣದಲ್ಲಿಯೂ ಮಮತಾಹಂಕಾರ ಗಳಿರುವುದಿಲ್ಲವೊ, ಅವರೇ ಭಾಗವತರು.

೬೨. ಯಾರಿಗೆ ಸಚ್ಛಾಸ್ತ್ರಗಳಲ್ಲಿಯೂ, ಆಚಾರ್ಯರಲ್ಲಿಯೂ, ಸಾಧು ಗಳಲ್ಲಿಯೂ, ಉಚಿತ ಕರ್ಮಗಳಲ್ಲಿಯೂ ವಿಶ್ವಾಸವಿರುವುದೊ, ಯಾರು ನಿರಂತರವೂ ಮಹಾವಿಷ್ಣುವಿನಲ್ಲಿಯೇ ಭಕ್ತಿಯುಕ್ತರಾಗಿರುವರೊ, ಅವರೇ ಭಾಗವತೋತ್ತಮರು.

೬೩. ಯಾರಿಗೆ ಶಾಶ್ವತಗಳೂ ವಿಷ್ಣು ಪ್ರೀತಿಕರಗಳೂ ಆದ ಧರ್ಮಗಳೇ

**ಅಟನಂ ಸರ್ವದೇಶೇಷು ವೀಕ್ಷಣಂ ಸರ್ವಕರ್ಮಣಾಂ ।**
**ಶ್ರವಣಂ ಸರ್ವಧರ್ಮಾಣಾಂ ವಿಷಯಾಸಕ್ತಚೇತಸಾಂ ॥ ೬೪ ॥**
**ಅಕಿಂಚಿತ್ಕರಮೇತೇಷಾಂ ಷಂಡಸ್ಯೇವ ವರಸ್ತ್ರಿಯಃ ।**
**ಸಾಧೂನಾಂ ದರ್ಶನೇನೈವ ಮನೋ ದ್ರವತಿ ವೈ ಸತಾಂ ॥ ೬೫ ॥**
**ಚಂದ್ರಸ್ಯ ಕೌಮುದೀಸಂಗಾಚ್ಚಂದ್ರಕಾಂತಶಿಲಾ ಯಥಾ ।**
**ಕ್ವಚಿತ್ಸಚ್ಛಾಸ್ತ್ರಶ್ರವಣಾತ್ ವಿಷಯೈ ರಹಿತಂ ಮನಃ ॥ ೬೬ ॥**
**ತಿಷ್ಠತ್ಯೇವ ಸತಾಂ ಪುಂಸಾಂ ತೇಜೋರೂಪಂ ಹ್ಯಕಲ್ಮಷಂ ।**
**ಪದ್ಮಬಂಧೋಃ ಪ್ರಭಾಸಂಘಾತ್ ಸೂರ್ಯಕಾಂತಶಿಲಾ ಯಥಾ ॥ ೬೭ ॥**
**ನಿಷ್ಕಾಮೈರ್ಹಿ ಜನೈರ್ಯೈಸ್ತು ಶ್ರದ್ಧಯಾ ಸಮುಪಾಶ್ರಿತಃ ।**
**ಯೋ ವಿಷ್ಣುವಲ್ಲಭೋ ನಿತ್ಯಂ ಧರ್ಮೋ ಭಾಗವತೋ ಮತಃ ॥ ೬೮ ॥**

ಯಾವಾಗಲೂ ಆಚರಣೀಯಗಳೊ, ಅವರೇ ಭಾಗವತರು. ಶೃತಿಸ್ಮೃತಿಗಳಲ್ಲಿ ಹೇಳಲ್ಪಟ್ಟಿರುವ ಯಾವ ಧರ್ಮಗಳಿರುವುವೊ, ಅವುಗಳೇ ಸನಾತನಗಳೆಂದು ಸಿದ್ಧಾಂತವು.

೬೪. ಸಕಲ ದೇಶಗಳಲ್ಲಿ ತೀರ್ಥಯಾತ್ರೆಗಳು, ಸಕಲ ಧರ್ಮಕರ್ಮಗಳನ್ನು ಮಾಡುವುದು, ಸಮಸ್ತ ಭಾಗವತ ಧರ್ಮಗಳನ್ನು ಶ್ರವಣಮಾಡುವುದು ಇವುಗಳೆಲ್ಲವೂ ವಿಷಯಾನುರಾಗದಿಂದ ಕೂಡಿದ ಮನಸ್ಸುಳ್ಳವರಿಗೆ ಹೇಳಲ್ಪಟ್ಟಿರುವ ಸಾಧನಗಳು.

೬೫. ಅವರಿಗೂ ಸಹ ಇವುಗಳೆಲ್ಲವೂ ನಪುಂಸಕನ ಮುಂದೆ ಸುಳಿದಾಡುವ ಯುವತಿಯರಂತೆ ಯಾವ ಪ್ರಯೋಜನಕ್ಕೂ ಬರುವುದಿಲ್ಲ. ಸತ್ಪುರುಷರಿಗಾದರೊ ಸಾಧುಗಳ ದರ್ಶನಮಾತ್ರದಿಂದಲೇ ಮನಸ್ಸು ಪರಮಾತ್ಮನ ಕಡೆಗೆ ಓಡಿ ಹೋಗುವುದು.

೬೬. ಹುಣ್ಣಿಮೆಯ ಚಂದ್ರನ ಬೆಳದಿಂಗಳಿನ ಪ್ರಭಾವದಿಂದ ಚಂದ್ರಕಾಂತ ಶಿಲೆಯು ಹೇಗೆ ಕರಗಿ ನೀರಾಗುವುದೊ, ಹಾಗೆಯೇ ಸಚ್ಚೇತನರ ಮನಸ್ಸೂ ಕೂಡ ಒಮ್ಮೆ ಸಚ್ಛಾಸ್ತ್ರಗಳನ್ನು ಶ್ರವಣಮಾಡಿದುದರಿಂದಲೇ ವಿಷಯಗಳಿಂದ ವಿಮುಖವಾಗುವುದು.

೬೭. ಸೂರ್ಯಕಿರಣಗಳಸಂಪರ್ಕದಿಂದ ಸೂರ್ಯಕಾಂತ ಶಿಲೆಯು ಹೇಗೆ ಕ್ಷಣಕ್ಷಣಕ್ಕೂ ಅಧಿಕತೇಜಸ್ಸನ್ನೊಳಕೊಂಡು ಪ್ರಕಾಶಿಸುವುದೊ, ಹಾಗೆಯೇ ಸತ್ಪುರುಷರ ತೇಜೋರೂಪವು ನಿಷ್ಕಲ್ಮಷವಾಗಿ ಭಾಗವತಧರ್ಮಗಳ ಆಚರಣೆಯಿಂದ ಉತ್ತರೋತ್ತರಾಭಿವೃದ್ಧಿಯನ್ನು ಹೊಂದುವುದು.

೬೮. ಫಲಾಭಿಸಂಧಿಯಿಲ್ಲದ ಭಕ್ತಜನರು ಶ್ರದ್ಧಾಭಕ್ತಿಗಳಿಂದೊಡಗೂಡಿ

ತೈರ್ದೃಷ್ಟಾ ಬಹವೋ ಧರ್ಮಾ ಇಹಾಮುತ್ರ ಫಲಪ್ರದಾಃ ।
ವಿಷ್ಣುಪ್ರೀತಿಕರಾಃ ಸೂಕ್ಷ್ಮಾಃ ಸರ್ವದುಃಖವಿಮೋಚಕಾಃ ॥ ೯ ॥
ದಧ್ನಃ ಸಾರಮಿವೋದ್ಧೃತ್ಯ ಧರ್ಮಂ ವೈಶಾಖಸಂಭವಂ ।
ರಮಾಯೈ ಭಗವಾನಾಹ ಕ್ಷೀರಾಬ್ಧೌ ಹಿತಕಾಮ್ಯಯಾ ॥ ೨೦ ॥
ಮಾರ್ಗಚ್ಛಾಯಾವಿನಿರ್ಮಾಣಂ ಪ್ರಪಾದಾನಂ ಚ ವೈ ತಥಾ ।
ವ್ಯಜನೈರ್ವ್ಯಜನಂ ಚೈವ ಪ್ರಶ್ರಯಾಣಾಂ ಸಮರ್ಪಣಂ ॥ ೨೧ ॥
ಛತ್ರಸ್ಯೋಪಾನಹೋರ್ದಾನಂ ದಾನಂ ಕರ್ಪೂರಗಂಧಯೋಃ ।
ವಾಪೀಕೂಪತಡಾಗಾನಾಂ ನಿರ್ಮಾಣಂ ವಿಭವೇ ಸತಿ ॥ ೨೨ ॥
ಸಾಯಾಹ್ನೇ ಪಾನಕಸ್ಯಾಪಿ ದಾನಂ ತು ಕುಸುಮಸ್ಯ ಚ ।
ತಾಂಬೂಲದಾನಂ ಪಾಪಘ್ನಂ ಗೋರಸಾನಾಂ ವಿಶೇಷತಃ ॥ ೨೩ ॥

ನಿತ್ಯದಲ್ಲಿಯೂ ಪರಮಾತ್ಮನಿಗೆ ಸಂತೋಷವನ್ನುಂಟುಮಾಡುವ ಯಾವ ಧರ್ಮವನ್ನು ಆಚರಿಸುವರೊ, ಅದೇ ಭಾಗವತಧರ್ಮವೆಂದು ತಿಳಿಯಬೇಕು.

೯. ಅಂತಹ ಮಹಾತ್ಮರು ಇಹಪರಲೋಕಗಳಲ್ಲಿ ಸೌಖ್ಯಪ್ರದಗಳೂ, ವಿಷ್ಣುಪ್ರೀತಿಕರಗಳೂ, ಸುಸೂಕ್ಷ್ಮಗಳೂ, ಸಕಲ ದುಃಖನಿವಾರಕಗಳೂ ಆದ ಅನೇಕ ಧರ್ಮಗಳನ್ನು ತಿಳಿದಿರುವರು.

೨೦. ಆ ಧರ್ಮಗಳಲ್ಲೆಲ್ಲ ವೈಶಾಖಮಾಸಕ್ಕೆ ಸಂಬಂಧಿಸಿದ ಧರ್ಮವು ಮಜ್ಜಿಗೆಯಲ್ಲಿ ಕಡೆದು ತೆಗೆದ ಬೆಣ್ಣೆಯಂತೆ ಸಾರಭೂತವಾಗಿರುವುದು. ಇದನ್ನು ಲೋಕಹಿತದ ದೃಷ್ಟಿಯಿಂದ ಭಗವಂತನೇ ಕ್ಷೀರಸಾಗರದಲ್ಲಿ ಮಲಗಿದ್ದ ವೇಳೆಯಲ್ಲಿ ಮಹಾಲಕ್ಷ್ಮಿಗೆ ನಿರೂಪಿಸಿದನು.

೨೧. ಅದರ ಮುಖ್ಯಾಂಶಗಳನ್ನು ನಿರೂಪಿಸುವೆನು. ಮಧ್ಯಮಾರ್ಗಗಳಲ್ಲಿ ನೆರಳಿನ ಚಾವಣಿಗಳನ್ನು ಹಾಕುವುದು, ಅರವಟ್ಟಿಗೆಗಳನ್ನು ನಡೆಸುವುದು, ಬಸವಳಿದು ಬಂದ ಪಾಂಥರಿಗೆ ಬೀಸಣಿಗೆಯಿಂದ ಬೀಸುವುದು, ನಮಸ್ಕಾರಾದಿ ಉಪಚಾರಗಳನ್ನು ಸಮರ್ಪಿಸುವುದು ;

೨೨. ಛತ್ರಿ ಮತ್ತು ಪಾದರಕ್ಷೆಗಳ ದಾನ, ಕರ್ಪೂರ, ಶ್ರೀಗಂಧಗಳೇ ಮೊದಲಾದ ಶೀತಲ ದ್ರವ್ಯಗಳ ದಾನ, ದ್ರವ್ಯಾನುಕೂಲವಿದ್ದಲ್ಲಿ ಬಾವಿಗಳು, ಕೊಳಗಳು ಮತ್ತು ಕೆರೆಗಳನ್ನು ಕಟ್ಟಿಸುವುದು ;

೨೩. ಸಾಯಂಕಾಲದಲ್ಲಿ ಪಾನಕ ಮತ್ತು ಪುಷ್ಪಗಳನ್ನು ದಾನಮಾಡುವುದು, ಸಕಲ ಪಾತಕಗಳನ್ನು ನಾಶಗೊಳಿಸುವ ತಾಂಬೂಲದ ದಾನ, ವಿಶೇಷವಾಗಿ ಗೋರಸಗಳಾದ ಹಾಲು, ಮೊಸರು, ಮಜ್ಜಿಗೆ, ಬೆಣ್ಣೆ, ತುಪ್ಪಗಳನ್ನು ದಾನ ಮಾಡುವುದು ;

ಲವಣಾನ್ವಿತತಕ್ರಸ್ಯ ದಾನಂ ಶ್ರಾಂತಾಯ ವೈ ಪಥಿ ।
ಅಭ್ಯಂಗಕರಣಂ ಚೈವ ದ್ವಿಜಪಾದಾವನೇಜನಾಂ ॥ ೭೪ ॥
ಕಟಿಕಂಬಲಪರ್ಯಂಕದಾನಂ ಗೋದಾನಮೇವ ಚ ।
ಮಧುಯುಕ್ತತಿಲಾನಾಂ ಚ ದಾನಂ ಪಾಪವಿನಾಶನಂ ॥ ೭೫ ॥
ಸಾಯಾಹ್ನೇ ಚೇಕ್ಷುದಂಡಾನಾಂ ದಾನಮುರ್ವಾರುಕಸ್ಯ ಚ ।
ರಸಾಯನಪ್ರದಾನಂ ಚ ಪಿತೃನಿರ್ವಾಪಣಂ ತಥಾ ॥ ೭೬ ॥
ಏತೇ ಧರ್ಮಾಹಿ ಶಿಷ್ಟ್ಯೋಕ್ತಾ ಮಾಸೇಽಸ್ಮಿನ್ಮಾಧವಪ್ರಿಯೇ ।
ಪ್ರಾತಃ ಸೂರ್ಯೋದಯೇ ಸ್ನಾತ್ವಾ ಶೃಣ್ವನ್ ದ್ವಿಜಕುಲೇರಿತಂ ॥ ೭೭ ॥
ನಿತ್ಯಕರ್ಮಾಣಿ ಕೃತ್ವೈವಂ ಮಧುಸೂದನಮರ್ಚಯೇತ್ ।
ಕಥಾಂ ಮಾಧವಮಾಸೀಯಾಂ ಶೃಣುಯಾಚ್ಚ ಸಮಾಹಿತಃ ॥ ೭೮ ॥
ತೈಲಾಭ್ಯಂಗಂ ವರ್ಜಯೇಚ್ಚ ಕಾಂಸ್ಯಪಾತ್ರೇ ತು ಭೋಜನಂ ।
ನಿಷಿದ್ಧಭಕ್ಷಣಂ ಚೈವ ವೃಥಾಲಾಪಂ ತು ವರ್ಜಯೇತ್ ॥ ೭೯ ॥

೭೪. ದಾರಿಯನ್ನು ನಡೆದು ಆಯಾಸಗೊಂಡವನಿಗೆ ಉಪ್ಪು ಹಾಕಿದ ಮಜ್ಜಿಗೆಯನ್ನು ಕೊಡುವುದು, ಬಂದವರಿಗೆ ಅಭ್ಯಂಜನವನ್ನು ಮಾಡಿಸುವುದು, ಬ್ರಾಹ್ಮಣೋತ್ತಮರ ಪಾದಗಳನ್ನು ತೊಳೆಯುವುದು ;

೭೫. ಚಾಪೆ, ಕಂಬಳಿ, ಹಾಸಿಗೆ, ಮಂಚಗಳ ದಾನಗಳು, ಗೋದಾನ, ಪಾಪನಿವಾರಕವಾದ ಜೇನುತುಪ್ಪದೊಡನೆ ಬೆರಸಿದ ಎಳ್ಳಿನ ದಾನ;

೭೬. ಸಾಯಂಕಾಲಗಳಲ್ಲಿ ಕಬ್ಬಿನ ಜಲ್ಲೆಗಳನ್ನೂ ಸೌತೆಕಾಯಿಗಳನ್ನೂ ದಾನಮಾಡುವುದು, ಸಕಲ ಪಿತೃದೇವತೆಗಳಿಗೂ ತೃಪ್ತಿಯನ್ನುಂಟುಮಾಡುವ ರಸಾಯನದ ದಾನ;

೭೭–೭೮. ಮಧುಸೂದನನಿಗೆ ಪರಮಪ್ರಿಯವಾದ ಈ ಮಾಸದಲ್ಲಿ ಈ ವಿಶೇಷ ಧರ್ಮಗಳನ್ನು ಅನುಸರಿಸಬೇಕೆಂದು ಶಾಸ್ತ್ರವು ಹೇಳುತ್ತಿರುವುದು. ಪ್ರಾತಃಕಾಲದಲ್ಲಿ ಪಕ್ಷಿಸಂಘಗಳ ಕಲಕಲಾರಾವವನ್ನು ಕೇಳಿ ಹಾಸಿಗೆಯಿಂದೆದ್ದು ಸೂರ್ಯೋದಯಕ್ಕೆ ಸರಿಯಾಗಿ ಬಹಿಸ್ತೀರ್ಥದಲ್ಲಿ ಸ್ನಾನವನ್ನು ಮಾಡಿಕೊಂಡು, ಆಹ್ನಿಕಾದಿ ನಿತ್ಯಕರ್ಮಗಳನ್ನೆಲ್ಲ ಮುಗಿಸಿಕೊಂಡು ಬಳಿಕ ಮಧುಸೂದನ ಸ್ವಾಮಿಯ ಪೂಜೆಯನ್ನು ನೆರವೇರಿಸಬೇಕು. ಬಳಿಕ ಸಮಾಧಾನಗೊಂಡ ಮನಸ್ಸಿನಿಂದ ವೈಶಾಖಮಾಸಮಾಹಾತ್ಮ್ಯೆಯನ್ನು ಶ್ರವಣಮಾಡಬೇಕು.

೭೯. ಆ ತಿಂಗಳಿನಲ್ಲಿ ತೈಲಾಭ್ಯಂಜನವನ್ನೂ, ಕಂಚಿನ ತಟ್ಟೆಯಲ್ಲಿ ಭೋಜನವನ್ನೂ, ನಿಷಿದ್ಧಪದಾರ್ಥಗಳ ಸೇವನೆಯನ್ನೂ, ಕಾಡುಹರಟೆಗಳನ್ನೂ ತ್ಯಜಿಸಬೇಕು.

ಅಲಾಬುಂ ಗೃಂಜರಂ ಚೈವ ಲಶುನಂ ತಿಲಪಿಷ್ಟಕಂ ।
ಆರನಾಲಂ ಭಿಸ್ಸಟಿಂಚ ಘೃತಕೋಶಾತಕೀಂ ತಥಾ ॥ ೮೦ ॥
ಉಪೋತಕಿಂ ಕಲಿಂಗಂ ಚ ಶಿಗ್ರುಶಾಕಂ ಚ ವರ್ಜಯೇತ್ ।
ನಿಷ್ಪಾಪಾನಿ ಕುಲಿತ್ಥಾನಿ ಮಸೂರಾಣಿ ಚ ವರ್ಜಯೇತ್ ॥ ೮೧ ॥
ವೃಂತಾಕಾನಿ ಕಲಿಂಗಾನಿ ಕೋದ್ರವಾಣಿ ಚ ವರ್ಜಯೇತ್ ।
ತಂದುಲೀಯಕಶಾಕಂ ಚ ಕೌಸುಂಭಂ ಮೂಲಕಂ ತಥಾ ॥ ೮೨ ॥
ಔದುಂಬರಂ ಬಿಲ್ವಫಲಂ ತಥಾ ಶ್ಲೇಷ್ಮಾತಕೀಫಲಂ ।
ಸರ್ವಥಾ ವರ್ಜಯೇದ್ವಿದ್ವಾನ್ ಮಾಸೇಽಸ್ಮಿನ್ ಮಾಧವಪ್ರಿಯೇ ॥ ೮೩ ॥
ಏತೇಷ್ವನ್ಯತಮಂ ಭುಕ್ತ್ವಾ ಸ ಚಾಂಡಾಲೋ ಭವೇದ್ಧ್ರುವಂ ।
ತಿರ್ಯಗ್ಯೋನಿಶತಂ ಯಾತಿ ನಾತ್ರ ಕಾರ್ಯಾ ವಿಚಾರಣಾ ॥ ೮೪ ॥
ಏವಂ ಮಾಸವ್ರತಂ ಕುರ್ಯಾತ್ ಪ್ರೀತಯೇ ಮಧುಘಾತಿನಃ ।
ಏವಂ ವ್ರತೇ ಸಮಾಪ್ತೇ ತು ಪ್ರತಿಮಾಂ ಕಾರಯೇದ್ವಿಭೋಃ ॥ ೮೫ ॥
ಮಧುಸೂಧನದೈವತ್ಯಾಂ ಸವಸ್ತ್ರಾಂ ಚ ಸದಕ್ಷಿಣಾಂ ।
ಸ್ವರ್ಚಿತಾಂ ವಿಭವೈಸರ್ವೈರ್ಬ್ರಾಹ್ಮಣಾಯ ನಿವೇದಯೇತ್ ॥ ೮೬ ॥

---

೮೦. ಸೋರೆಕಾಯಿ, ಕೆಂಪುಮೂಲಂಗಿ, ಬೆಳ್ಳುಳ್ಳಿ, ಎಳ್ಳಿನ ಪದಾರ್ಥಗಳು, ಅನ್ನದ ಗಂಜಿ, ಸೀದ ಅನ್ನ, ತುಪ್ಪದ ಹೀರೆ ಇವುಗಳ ಭೋಜನವನ್ನು ಮಾಡಬಾರದು.

೮೧. ಗರುಗದಸೊಪ್ಪು, ಕಳಿಂಗ ಮತ್ತು ನುಗ್ಗೆಯಸೊಪ್ಪುಗಳನ್ನೂ, ಗಾಳಿಯಲ್ಲಿ ತೂರಿ ಶುದ್ಧಿಗೊಳಿಸದ ಹೆಸರು, ಕಡಲೆಗಳನ್ನೂ ತ್ಯಜಿಸಬೇಕು.

೮೨. ಬದನೆಯಕಾಯಿ, ಕಲ್ಲಂಗಡಿಹಣ್ಣು, ನವಣೆ, ತಂಮುಲೀಯಕ, ಕೊತ್ತುಂಬರಿ, ಮೂಲಂಗಿಗಳನ್ನೂ ಈ ಮಾಸದಲ್ಲಿ ವರ್ಜಿಸಬೇಕು.

೮೩. ಮತ್ತು ಮಾಧವನಿಗೆ ಪ್ರಿಯವಾದ ಈ ತಿಂಗಳಿನಲ್ಲಿ ಅತ್ತಿಯಹಣ್ಣು, ಬಿಲ್ವಫಲ, ಶ್ಲೇಷ್ಮಾತಕಗಳನ್ನೂ ಪ್ರಾಜ್ಞನಾದವನು ಸರ್ವಪ್ರಕಾರದಿಂದಲೂ ತ್ಯಾಗಮಾಡಬೇಕು.

೮೪. ಇವುಗಳಲ್ಲಿ ಯಾವೊಂದನ್ನೂ ಸೇವಿಸಿದರೂ ಮನುಷ್ಯನು ಖಂಡಿತ ವಾಗಿಯೂ ಚಂಡಾಲನಾಗುವನು. ಮತ್ತು ತಿರ್ಯಗ್ಯೋನಿಗಳಲ್ಲಿ ಒಂದು ನೂರು ಜನ್ಮಗಳನ್ನು ಪಡೆಯುವುದರಲ್ಲಿ ಸಂದೇಹಪಡಬೇಕಾದುದಿಲ್ಲ.

೮೫. ಈ ವಿಧವಾಗಿ ಮಧುಸೂದನನ ಪ್ರೀತಿಯನ್ನು ಪಡೆಯಲು ವೈಶಾಖ ಮಾಸದ ವ್ರತವನ್ನು ಆಚರಿಸಬೇಕು. ಆ ವ್ರತವು ಸಮಾಪ್ತಿಯನ್ನು ಹೊಂದಿದ ಬಳಿಕ ಶ್ರೀಮನ್ನಾರಾಯಣನ ಪ್ರತಿಮೆಯೊಂದನ್ನು ಮಾಡಿಸಬೇಕು.

೮೬. ಮಧುಸೂದನಸ್ವಾಮಿಯ ಆ ವಿಗ್ರಹವನ್ನು ತನ್ನ ಸಕಲ ಸೌಭಾಗ್ಯ

ವೈಶಾಖಸಿತದ್ವಾದಶ್ಯಾಂ ದದ್ಯಾದ್ದಧ್ಯನ್ನಮಂಜಸಾ ।
ಸೋದಕುಂಭಂ ಸತಾಂಬೂಲಂ ಸಫಲಂ ಚ ಸದಕ್ಷಿಣಾಂ ॥ ೮೭ ॥
ದದಾಮಿ ಧರ್ಮರಾಜಾಯ ತೇನ ಪ್ರೀಣಾತು ವೈ ಯಮಃ ।
ಅಪಸವ್ಯಾತ್ಸಮುಚ್ಚಾರ್ಯ ನಾಮಗೋತ್ರೇ ಪಿತೃಸ್ತತಃ ॥ ೮೮ ॥
ದದ್ಯಾದ್ದಧ್ಯನ್ನಮಕ್ಷಯ್ಯಂ ಪಿತೄಣಾಂ ತೃಪ್ತಿಹೇತವೇ ।
ಗುರುಭ್ಯಶ್ಚ ತಥಾ ದದ್ಯಾತ್ಪಶ್ಚಾದ್ದದ್ಯಾಚ್ಚ ವಿಷ್ಣವೇ ॥ ೮೯ ॥
ಶೀತಲೋದಕದಧ್ಯನ್ನಂ ಕಾಂಸ್ಯಪಾತ್ರಸ್ಥಮುತ್ತಮಂ ।
ಸದಕ್ಷಿಣಂ ಸತಾಂಬೂಲಂ ಸಭಕ್ಷ್ಯಂ ಚ ಫಲಾನ್ವಿತಂ ॥ ೯೦ ॥
ದದಾಮಿ ವಿಷ್ಣವೇ ತುಭ್ಯಂ ವಿಷ್ಣುಲೋಕಜಿಗೀಷಯಾ ।
ಇತಿ ದತ್ವಾ ಯಥಾಶಕ್ತ್ಯಾ ಗಾಂ ಚ ದದ್ಯಾತ್ಕುಟುಂಬಿನೇ ॥ ೯೧ ॥
ಏವಂ ಮಾಸವ್ರತಂ ಕುರ್ಯಾತ್ ಯೋ ದಂಭೇನ ವಿವರ್ಜಿತಃ ।
ಸ ಸರ್ವೈಃ ಪಾತಕೈರ್ಹೀನಃ ಕುಲಮುದ್ಧೃತ್ಯ ವೈ ಶತಂ ॥ ೯೨ ॥

---

ದಿಂದಲೂ ಪೂಜಿಸಿ, ವಸ್ತ್ರ ಮತ್ತು ದಕ್ಷಿಣೆಗಳ ಸಹಿತವಾಗಿ ಬ್ರಾಹ್ಮಣೋತ್ತಮನಿಗೆ ಸಮರ್ಪಿಸಬೇಕು.

೮೭. ವೈಶಾಖಮಾಸದ ಶುಕ್ಲಪಕ್ಷದ ದ್ವಾದಶಿಯಲ್ಲಿ ಉದಕುಂಭ, ತಾಂಬೂಲ, ಫಲ ಮತ್ತು ದಕ್ಷಿಣೆಗಳೊಡನೆ ದಧ್ಯನ್ನವನ್ನು ಭಕ್ತಿಯಿಂದ ಬ್ರಾಹ್ಮಣರಿಗೆ ದಾನಮಾಡಬೇಕು.

೮೮–೮೯. ದಾನಮಾಡುವಾಗ ಈ ಮಂತ್ರವನ್ನುಚ್ಚರಿಸಬೇಕು. "ಈ ಪರಿಕರಗಳನ್ನು ಧರ್ಮರಾಜನ ಪ್ರೀತಿಯನ್ನಪೇಕ್ಷಿಸಿ ದಾನಮಾಡುವೆನು. ಅದರಿಂದ ಯಮನು ಸುಪ್ರೀತನಾಗಲಿ." ಬಳಿಕ ಅಪಸವ್ಯದಿಂದ ತಂದೆಯ ನಾಮಗೋತ್ರಗಳನ್ನುಚ್ಚರಿಸಿ ಪಿತೃದೇವತೆಗಳನ್ನು ತೃಪ್ತಿಗೊಳಿಸುವುದಕ್ಕಾಗಿ ಅಕ್ಷಯಫಲದಾಯಕವಾದ ದಧ್ಯನ್ನವನ್ನು ದಾನಮಾಡಬೇಕು. ತರುವಾಯ ಗುರುಗಳಿಗೂ ಆ ಮೇಲೆ ಮಹಾವಿಷ್ಣುವಿಗೂ ನಿವೇದನೆ ಮಾಡಬೇಕು.

೯೦–೯೧. ತಂಪಾದ ಉದಕವನ್ನೂ, ದಧ್ಯನ್ನವನ್ನೂ, ಉತ್ತಮವಾದ ಕಂಚಿನ ಪಾತ್ರೆಗಳಲ್ಲಿ ತಂದು, ದಕ್ಷಿಣೆ, ತಾಂಬೂಲ, ಭಕ್ಷ್ಯಗಳು, ಫಲಗಳೊಡನೆ "ವಿಷ್ಣುಸ್ವರೂಪನಾದ ನಿನಗೆ ವಿಷ್ಣುಲೋಕವನ್ನು ಪಡೆಯುವ ಅಭಿಲಾಷೆಯುಳ್ಳವನಾಗಿ ದಾನಮಾಡುವೆನು" ಎಂಬ ಈ ಮಂತ್ರದಿಂದ ಶಕ್ತ್ಯನುಸಾರವಾದ ದಾನವನ್ನು ಮಾಡಿ ಕುಟುಂಬಿಯಾದ ಬ್ರಾಹ್ಮಣನಿಗೆ ಗೋದಾನವನ್ನೂ ಮಾಡಬೇಕು.

೯೨–೯೩. ಈ ವಿಧವಾಗಿ ಯಾವ ಮಾನವನು ದಂಭಾಹಂಕಾರವರ್ಜಿತನಾಗಿ ವೈಶಾಖಮಾಸದ ವ್ರತವನ್ನು ಮಾಡುವನೊ, ಅವನು ಸಕಲ ಪಾತಕಗಳಿಂದಲೂ

ಪಶ್ಯತಾಮೇವ ಭೂತಾನಾಂ ಭಿತ್ವಾ ವೈ ಸೂರ್ಯಮಂಡಲಂ ।
ಯಾತಿ ವಿಷ್ಣೋಃ ಪರಂಧಾಮ ಯೋಗಿನಾಮಪಿ ದುರ್ಲಭಂ ॥ ೯೩ ॥

ವ್ಯಾಖ್ಯಾತ್ಯೇವಂ ದ್ವಿಜಕುಲವರೇ
ಮಾಧವೀಯಾಂಶ್ಚ ಧರ್ಮಾನ್
ವಿಷ್ಣ್ವಾದಿಷ್ಟಾನತಿಮಹಿತತರಾ
ನ್ವ್ಯಾಧಪೃಷ್ಟಾನ್ ಸಮಸ್ತಾನ್ ।
ವಟಃ ಸದ್ಯಃ ಪಶ್ಯತಾಮೇವ ಭೂಮೌ
ಪಪಾತಾಹೋ ಪಂಚಶಾಖೀ ದ್ರುಮೋಽಯಂ ॥ ೯೪ ॥

ವೃಕ್ಷಾತ್ತಸ್ಮಾತ್ಕೋಟರೇ ಸಂಸ್ಥಿತೋ ಹಿ
ವ್ಯಾಲಃ ಕಶ್ಚಿದ್ದೀರ್ಘದೇಹೀ ಕರಾಲಃ ।
ಹಿತ್ವಾದೇಹಂ ಪಾಪಯೋನಿಂ ಚ ಸದ್ಯಃ
ಸ ವೈ ತಸ್ಥೌ ಪ್ರಾಂಜಲಿರ್ನಮ್ರಮೂರ್ಧ್ನಾ ॥ ೯೫ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ದ್ವಿತೀಯೇ ವೈಷ್ಣವಖಂಡೇ ವೈಶಾಖಮಾಸಮಾಹಾತ್ಮ್ಯೇ ನಾರದಾಂಬರೀಷಸಂವಾದೇ "ಭಾಗವತಧರ್ಮಕಥನಂ" ನಾಮ ವಿಂಶೋಽಧ್ಯಾಯಃ

---

ಮುಕ್ತನಾಗಿ, ಒಂದು ನೂರು ಕುಲದವರನ್ನುದ್ಧರಿಸಿ, ಸಕಲ ಜನರೂ ನೋಡುತ್ತಿರುವಂತೆಯೇ ಸೂರ್ಯಮಂಡಲವನ್ನು ಭೇದಿಸಿಕೊಂಡು ಮಹಾಯೋಗಿಗಳಿಗೂ ಅತ್ಯಂತ ದುರ್ಲಭವೆನಿಸಿದ ವಿಷ್ಣುಲೋಕವಾದ ವೈಕುಂಠವನ್ನು ಹೊಂದುವನು."

೯೪–೯೫. ಇಂತು ವ್ಯಾಧನಿಂದ ಪ್ರಶ್ನಿಸಲ್ಪಟ್ಟ ಬ್ರಾಹ್ಮಣೋತ್ತಮನಾದ ಶಂಖನು ಮಹಾವಿಷ್ಣುವಿನಿಂದ ಆಜ್ಞಾಪಿಸಲ್ಪಟ್ಟ ಮಹಾ ಪುಣ್ಯಪ್ರದಗಳಾದ ಸಕಲ ವೈಶಾಖಮಾಸಧರ್ಮಗಳನ್ನೂ ವಿಸ್ತಾರವಾಗಿ ನಿರೂಪಿಸುತ್ತಿರಲು, ಅವರಿಬ್ಬರೂ ನೋಡುತ್ತಿರುವಂತೆಯೇ ಸಮೀಪದಲ್ಲಿದ್ದ ಐದು ಶಾಖೆಗಳುಳ್ಳ ವಿಶಾಲವಾದ ಆಲದ ಮರವೊಂದು ನಿಷ್ಕಾರಣವಾಗಿಯೇ ಮುರಿದು ಕ್ಷಣಮಾತ್ರದಲ್ಲಿ ನೆಲದಲ್ಲಿ ಬಿದ್ದಿತು. ಆ ಮರದ ಒಳಗಿನ ಪೊಟರೆಯಿಂದ ಅಲ್ಲಿ ನೆಲಸಿದ್ದ ದೀರ್ಘದೇಹವುಳ್ಳದುದೂ ಭಯಂಕರವೂ ಆದ ಸರ್ಪವೊಂದು ಹೊರಬಿದ್ದಿತು. ಬಳಿಕ ಆ ಕ್ಷಣದಲ್ಲಿಯೇ ನೀಚಯೋನಿಗೆ ಸಂಬಂಧಿಸಿದ ಆ ಸರ್ಪದೇಹವನ್ನು ತ್ಯಜಿಸಿ ಉತ್ತಮ ಪುರುಷನೊಬ್ಬನು ಅಂಜಲಿಬಂಧವನ್ನು ಮಾಡಿಕೊಂಡು ವಿನಯದಿಂದ ತಲೆಯನ್ನು ಬಾಗಿ ಅವರ ಮುಂದೆ ನಿಂತುಕೊಂಡನು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀ ಸ್ಕಾಂದಮಹಾಪುರಾಣದ ಎರಡನೆಯ ವೈಷ್ಣವಖಂಡದ ವೈಶಾಖಮಾಸಮಾಹಾತ್ಮ್ಯದ ನಾರದಾಂಬರೀಷಸಂವಾದದಲ್ಲಿ "ಭಾಗವತಧರ್ಮಕಥನ"ವೆಂಬ ಇಪ್ಪತ್ತನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಷ್ಟೈಕವಿಂಶೋಽಧ್ಯಾಯಃ

### ವಾಲ್ಮೀಕೇರ್ಜನ್ಮಕಥನಂ

ಶ್ರುತದೇವ ಉವಾಚ :–

ತತಃ ಸ ವಿಸ್ಮಿತೋ ಭೂತ್ವಾ ಶಂಖೋ ವ್ಯಾಧಸಮನ್ವಿತಃ ।
ಕೋ ಭವಾನಿತಿ ತಂ ಪ್ರಾಹ ದಶೈಷಾ ಚ ಕುತಸ್ತವ ॥ ೧ ॥
ಕೇನ ವಾ ಕರ್ಮಣಾ ಸೌಮ್ಯ ಮತಿಸ್ತವ ಶುಭಾವಹ ।
ಅಕಸ್ಮಾತ್ತೇ ಕಥಂ ಮುಕ್ತಿರೇತದಾಚಕ್ಷ್ವ ವಿಸ್ತರಾತ್ ॥ ೨ ॥
ಶಂಖೇನೈವ ತದಾ ಪೃಷ್ಟೋ ದಂಡವತ್ಪತಿತೋ ಭುವಿ ।
ಪ್ರಶ್ರಯಾಽವನತೋ ಭೂತ್ವಾ ಪ್ರಾಂಜಲಿರ್ವಾಕ್ಯಮಬ್ರವೀತ್ ॥ ೩ ॥
ಅಹಂ ಪುರಾ ದ್ವಿಜಃ ಕಶ್ಚಿತ್ ಪ್ರಯಾಗೇ ಬಹುಭಾಷಣಃ ।
ರೂಪಯೌವನಸಂಪನ್ನೋ ವಿದ್ಯಾಮದಸುಗರ್ವಿತಃ ॥ ೪ ॥

### ಕನ್ನಡದ ಅನುವಾದ

#### ವಾಲ್ಮೀಕಿಜನ್ಮಕಥನ

೧. ಶ್ರುತದೇವನು ಹೇಳುತ್ತಾನೆ :—ಎಲೈ ಶ್ರುತಕೀರ್ತಿರಾಜನೆ! ಲಾಲಿಸು. ಇಂತು ಆಕಸ್ಮಿಕವಾಗಿ ನಿಂತ ಪುರುಷನನ್ನು ಕಂಡು ವ್ಯಾಧನೊಡನಿದ್ದ ಶಂಖ ಬ್ರಾಹ್ಮಣನು ಪ್ರಶ್ನೆಮಾಡತೊಡಗಿದನು. "ಅಯ್ಯಾ! ನೀನು ಯಾರು? ಈ ನೀಚಜನ್ಮವು ನಿನಗೆ ಬರಲು ಕಾರಣವೇನು?

೨. ಎಲೈ ಪುಣ್ಯಪುರುಷನೆ! ಯಾವ ಕರ್ಮದ ಫಲವಾಗಿ ನಿನಗೆ ಮಂಗಳಕರವಾದ ಈ ಸದ್ಬುದ್ಧಿಯುಂಟಾಯಿತು? ನಿಷ್ಕಾರಣವಾಗಿಯೇ ಈಗ ನಿನಗೆ ಈ ನೀಚ ಶರೀರದಿಂದ ಹೇಗೆ ಬಿಡುಗಡೆಯುಂಟಾಯಿತು? ಇವುಗಳೆಲ್ಲವನ್ನೂ ನಮಗೆ ವಿಸ್ತಾರವಾಗಿ ತಿಳಿಯುವಂತೆ ಹೇಳು."

೩. ಇಂತು ಶಂಖನು ಪ್ರಶ್ನೆಮಾಡುತ್ತಿರಲು ಆತನು ಭೂಮಿಯಲ್ಲಿ ಬಿದ್ದು ದಂಡಪ್ರಣಾಮವನ್ನು ಮಾಡಿ ಎದ್ದು ವಿನಯದಿಂದ ಮೈಯನ್ನು ಸಂಕೋಚ ಮಾಡಿಕೊಂಡು ಕೈಗಳನ್ನು ಮುಗಿದು ಮಾತನಾಡತೊಡಗಿದನು.

೪. "ಹಿಂದೆ ನಾನು ಪ್ರಯಾಗಕ್ಷೇತ್ರದಲ್ಲಿ ಜನಿಸಿ ಬ್ರಾಹ್ಮಣನಾಗಿ ಬಹಳ ಮಾತಿನವನೂ, ರೂಪಯೌವನಗಳಿಂದ ಕೂಡಿದವನೂ, ವಿದ್ಯಾವಂತನೆಂಬ ಮದದಿಂದ ಅತ್ಯಂತ ಗರ್ವಿಷ್ಠನೂ ಆಗಿದ್ದೆನು.

ಧನಾಢ್ಯೋ ಬಹುಪುತ್ರಾಢ್ಯಃ ಸದಾಹಂಕಾರದೂಷಿತಃ ।
ಕುಸೀದಸ್ಯ ಮುನೇಃ ಪುತ್ರೋ ನಾಮ್ನಾ ರೋಚನ ಇತ್ಯಹಂ ॥ ೫ ॥
ಆಸನಂ ಶಯನಂ ನಿದ್ರಾ ವ್ಯವಯೋಽಕ್ಷಪರಿಕ್ರಿಯಾಃ ।
ಲೋಕವಾರ್ತಾ ಕುಸೀದಂ ವಾ ವ್ಯಾಪಾರಾಸ್ತೇ ಮಮಾಽಭವನ್ ॥ ೬ ॥
ತಂತುಮಾತ್ರಾಣಿ ಕರ್ಮಾಣಿ ಲೋಕನಿಂದಾವಿಶಂಕಿತಃ ।
ಸದಂಭಶ್ಚ ಸದಾ ಕುರ್ವೇ ನ ಶ್ರದ್ಧಾ ಮೇ ಕದಾಚನ ॥ ೭ ॥
ದುರ್ಬುದ್ಧೇರ್ಮಮ ದುಷ್ಟಸ್ಯ ಕಿಯತ್ಕಾಲೋ ಗತೋಽಭವತ್ ।
ತದಾ ವೈಶಾಖಮಾಸೇಽಸ್ಮಿನ್ ಜಯಂತೋ ನಾಮ ವೈ ದ್ವಿಜಃ ॥ ೮ ॥
ಶ್ರಾವಯಾಮಾಸ ತನ್ಮಾಸಧರ್ಮಾನ್ಭಾಗವತಪ್ರಿಯಾನ್ ।
ತತ್ಕ್ಷೇತ್ರೇ ವಾಸಿನಾಂ ಪುಣ್ಯಕರ್ಮಣಾಂ ಚ ದ್ವಿಜನ್ಮನಾಂ ॥ ೯ ॥
ನಾರೀನರಾಃ ಕ್ಷತ್ರಿಯಾಶ್ಚ ವೈಶ್ಯಾಃ ಶೂದ್ರಾಃ ಸಹಸ್ರಶಃ ।
ಪ್ರಾತಃ ಸ್ನಾತ್ವಾ ಸಮಭ್ಯರ್ಚ್ಯ ಮಧುಸೂದನಮವ್ಯಯಂ
ಕಥಾಂ ಶೃಣ್ವಂತಿ ಸತತಂ ಜಯಂತೇನ ಸಮೀರಿತಾಂ । ॥ ೧೦ ॥

೫. ನಾನು ಬಹಳ ಐಶ್ವರ್ಯವಂತನೂ, ಅನೇಕ ಪುತ್ರಪೌತ್ರ ಸಂತಾನವುಳ್ಳವನೂ, ನಿರಂತರವೂ ಅಹಂಕಾರದೋಷಸಹಿತನೂ ಆಗಿದ್ದೆನು. ಕುಸೀದನೆಂಬ ಮಹಾಮುನಿಗೆ ಪುತ್ರನಾದ ನಾನು ರೋಚನನೆಂಬ ಹೆಸರಿನಿಂದ ಪ್ರಖ್ಯಾತನಾಗಿದ್ದೆನು.

೬. ಕೂಡುವುದು, ಮಲಗುವುದು, ನಿದ್ರೆ, ಸ್ತ್ರೀಸಂಗ, ಜೂಜಾಟಗಳು, ಕೆಲಸಕ್ಕೆ ಬಾರದ ಲೋಕವಾರ್ತೆಗಳು ಮತ್ತು ಹಣದ ಲೇವಾದೇವಿಗಳೇ ನನಗೆ ನಿರಂತರ ವ್ಯಾಪಾರಗಳಾಗಿದ್ದುವು.

೭. ಜನರ ನಿಂದೆಗೆ ಭಯಗೊಂಡವನಾಗಿ ನಾನು ನೆಪಮಾತ್ರಕ್ಕೆ ವರ್ಣಾಶ್ರಮವಿಹಿತ ಕರ್ಮಗಳನ್ನು ಮಾಡುತ್ತ ಯಾವಾಗಲೂ ಅಹಂಕಾರದಿಂದ ಕೂಡಿದ್ದೆನು. ನನಗೆ ಯಾವ ವಿಷಯದಲ್ಲಿಯೂ ಶ್ರದ್ಧೆಯೇ ಇರಲಿಲ್ಲ.

೮–೧೦. ಇಂತು ನಾನು ದುಷ್ಟಬುದ್ಧಿಯೂ, ದುರಾಚಾರಿಯೂ ಆಗಿ ಬಹಳ ಕಾಲವನ್ನು ವ್ಯರ್ಥವಾಗಿ ಕಳೆದೆನು. ಒಮ್ಮೆ ವೈಶಾಖಮಾಸವು ಪ್ರಾಪ್ತವಾಗಲು ಜಯಂತನಾಮಕನಾದ ಬ್ರಾಹ್ಮಣೋತ್ತಮನೊಬ್ಬನು ಭಗವದ್ಭಕ್ತರಿಗೆ ಅತ್ಯಂತ ಪ್ರೀತಿಕರಗಳಾದ ಆ ಮಾಸದ ಧರ್ಮಗಳನ್ನು ಆ ಪುಣ್ಯಕ್ಷೇತ್ರದಲ್ಲಿ ವಾಸಮಾಡುತ್ತಿರುವ ಪುಣ್ಯಾತ್ಮರಾದ ಬ್ರಾಹ್ಮಣೋತ್ತಮರಿಗೆ ಶ್ರವಣಮಾಡಿಸುತ್ತಿದ್ದನು. ಆಗ ಕ್ಷತ್ರಿಯ, ವೈಶ್ಯ, ಶೂದ್ರರೆಂಬ ಇತರ ತ್ರೈವರ್ಣಿಕರ ಸ್ತ್ರೀಪುರುಷರೂ ಸಹ ಪ್ರತಿ ಪ್ರಾತಃಕಾಲದಲ್ಲಿಯೂ ಸ್ನಾನಗಳನ್ನು ಮಾಡಿಕೊಂಡು ಸನಾತನನಾದ

**ಶುಚಿಭೂರ್ತ್ವಾ ಮೌನಧರಾ ವಾಸುದೇವಕಥಾರತಾಃ ।**
**ವೈಶಾಖಧರ್ಮನಿರತಾ ದಂಭಾಲಸ್ಯವಿವರ್ಜಿತಾಃ ॥ ೧೧ ॥**
**ತಾಂ ಸಭಾಂ ಚ ಪ್ರವಿಷ್ಟೋಽಹಂ ಕೌತುಕಾಚ್ಚ ದಿದೃಕ್ಷಯಾ ।**
**ಸೋಷ್ಣೀಷೇಣ ಮಯಾ ಮೂರ್ಧ್ನಾ ನಮಸ್ಕಾರೋ ಪಿ ನ ಕೃತಃ ॥೧೨॥**
**ತಾಂಬೂಲಂ ಚ ಮುಖೇ ಕೃತ್ವಾ ಕಂಚುಕಂಚ ಮಯಾ ಧೃತಂ ।**
**ಕಥಾವಿಕ್ಷೇಪಮಚರಂ ಲೋಕವಾರ್ತಾಭಿರಂಜನಾತ್ ॥ ೧೩ ॥**
**ಸರ್ವೇಷಾಂ ಚಿತ್ತಚಾಂಚಲ್ಯಂ ಅಭೂದ್ವೈ ಲೋಕವಾರ್ತಯಾ ।**
**ಕ್ವಚಿದ್ವಾಸಃ ಪ್ರಸಾರ್ಯಾಹಂ ಕ್ವಚಿನ್ನಿಂದನ್ ಕ್ವಚಿದ್ಧಸನ್ ॥ ೧೪ ॥**
**ಏವಂ ಕಾಲೋ ಮಯಾ ನೀತಃ ಕಥಾ ಯಾವತ್ಸಮಾಪ್ಯತೇ ॥ ೧೫ ॥**
**ಪಶ್ಚಾತ್ತೇನೈವ ದೋಷೇಣ ಸದ್ಯೋಽಲ್ಪಾಯುರ್ವಿನಷ್ಟಧೀಃ ।**
**ಸನ್ನಿಪಾತೇನ ಪಂಚತ್ವಂ ಪ್ರಾಪ್ತೋಽಹಂ ಚ ಪರೇಽದಿನೇ ॥ ೧೬ ॥**

---

ಮಧುಸೂದನನ ಪೂಜೆಯನ್ನೆಸಗಿ ಆ ಜಯಂತನು ನಿರೂಪಿಸುತ್ತಿರುವ ಸತ್ಕಥೆಗಳನ್ನು ನಿರಂತರವೂ ಕೇಳುತ್ತಿದ್ದರು.

೧೧. ಅವರೆಲ್ಲರೂ ಶೌಚತತ್ಪರರು. ಕಥಾಶ್ರವಣಕಾಲದಲ್ಲಿ ಮೌನವನ್ನು ಧರಿಸಿರುವರು. ವಾಸುದೇವನ ಚರಿತ್ರೆಗಳಲ್ಲಿಯೇ ನಿರತರಾಗಿರುವರು. ವೈಶಾಖ ಮಾಸಧರ್ಮಗಳನ್ನು ಶ್ರದ್ಧೆಯಿಂದ ನಡೆಸುವವರು. ಅಹಂಕಾರ ಮತ್ತು ಆಲಸ್ಯಗಳೆಂಬ ದುರ್ಗುಣಗಳಿಲ್ಲದವರು.

೧೨–೧೩. ಒಂದು ದಿನ ಕುತೂಹಲದಿಂದ ಅಲ್ಲಿ ನಡೆಯುವುದನ್ನು ನೋಡಲೆಳಸಿ ಆ ಸಭಾಮಂಟಪವನ್ನು ನಾನು ಪ್ರವೇಶಮಾಡಿದೆನು. ರುಮಾಲನ್ನು ತಲೆಗೆ ಸುತ್ತಿದ್ದ ನಾನು ಪೌರಾಣಿಕನಾದ ಆ ಜಯಂತ ಬ್ರಾಹ್ಮಣನಿಗೆ ನಮಸ್ಕಾರವನ್ನೂ ಮಾಡಲಿಲ್ಲ. ನಾನು ತಾಂಬೂಲವನ್ನು ಬಾಯಿಯಲ್ಲಿ ಮೆಲ್ಲುತ್ತ ಅಂಗಿಯನ್ನು ಧರಿಸಿ ಕುಳಿತಿದ್ದೆನು. ಮತ್ತು ಲೋಕದ ಸಮಾಚಾರಗಳನ್ನೆಲ್ಲ ಚಿತ್ರವಿಚಿತ್ರವಾಗಿ ವರ್ಣಿಸುತ್ತ ಸತ್ಕಥಾಕಾಲಕ್ಷೇಪಕ್ಕೆ ವಿಘ್ನವನ್ನೂ ಉಂಟುಮಾಡುತ್ತಿದ್ದೆನು.

೧೪. ಈ ನನ್ನ ಲೋಕವಾರ್ತೆಗಳಿಂದ ಸಕಲರಿಗೂ ಮನಶ್ಚಾಂಚಲ್ಯವುಂಟಾಯಿತು. ನಾನೂ ವಸ್ತ್ರಗಳನ್ನೂ ಬೀಸುತ್ತ, ಪೌರಾಣಿಕನನ್ನು ನಿಂದಿಸುತ್ತ, ಆತನನ್ನು ಅಣಕಿಸಿ ನಗುತ್ತ ಕಾಲವನ್ನು ಕಳೆಯುತ್ತಿದ್ದೆನು.

೧೫–೧೬. ಈ ವಿಧವಾಗಿ ಕಥಾಕಾಲಕ್ಷೇಪವು ನಡೆಯುತ್ತಿರುವವರೆಗೂ ನಾನು ಕಾಲವನ್ನು ಕಳೆಯುತ್ತಿದ್ದೆನು. ಬಳಿಕ ಈ ದೋಷದ ಫಲವಾಗಿಯೇ ತತ್ಕ್ಷಣದಲ್ಲಿಯೇ ನಾನು ಅಲ್ಪಾಯುಷ್ಯವಂತನೂ, ನಷ್ಟಬುದ್ಧಿಯುಳ್ಳವನೂ ಆಗಿ ಒಂದಾನೊಂದು ದಿನದಲ್ಲಿ ಸನ್ನಿಪಾತಜ್ವರದಿಂದ ಪೀಡಿತನಾಗಿ ಮರಣವನ್ನು ಹೊಂದಿದೆನು.

ತಪ್ತಸೀಸಜಲೈಃ ಪೂರ್ಣಂ ನಿರಯಂ ಚ ಹಲಾಹಲಂ ।
ಪ್ರಾಪ್ಯ ಭುಕ್ತ್ವಾ ಯಾತನಾಂ ಚ ಮನ್ವಂತಾನಿ ಚತುರ್ದಶ ॥ ೧೭ ॥
ಯುಕ್ತೇಷ್ವಥ ಚ ಲಕ್ಷೇಷು ಯಥಾ ಚತುರಶೀತಿಭಿಃ ।
ಕ್ರಮಾದ್ಯೋನಿಷು ಜಾತೋಽಹಂ ಮಿದಾನೀಂ ಚಾವಸನ್ ದ್ರುಮೇ ॥೧೮॥
ದಶಯೋಜನವಿಸ್ತೀರ್ಣೇ ಶತಯೋಜನಮುನ್ನತೇ ।
ವ್ಯಾಲೋಽಹಂ ತಾಮಸಃ ಕ್ರೂರಃ ಸಪ್ತಯೋಜನಕೋಟರೇ ॥ ೧೯ ॥
ಭೂತ್ವಾ ವಸಾಮಿ ವಿಪ್ರರ್ಷೇ ಕರ್ಮಣಾ ಬಾಧಿತಃ ಪುರಾ ।
ಅಯುತಂ ಚ ಸಮಾಯಾತಾ ನಿರಾಹಾರಸ್ಯ ಕೋಟರೇ ॥ ೨೦ ॥
ದೈವಾತ್ತ್ವವ ಮುಖಾಂಭೋಜಸಮೀರಿತಕಥಾಮೃತಂ ।
ಶ್ರುತ್ವಾ ಚತುರ್ವರ್ಯೇನಾಹಂ ಸದ್ಯೋ ಧ್ವಸ್ತಾಶುಭೋ ಮುನೇ॥ ೨೧ ॥
ವ್ಯಾಲಯೋನಿಂ ವಿಸೃಜ್ಯಾಽಹಂ ದಿವ್ಯರೂಪಧರಃ ಪುಮಾನ್ ।
ಪ್ರಾಂಜಲಿಃ ಪ್ರಣತೋ ಭೂತ್ವಾ ಪಾದೌ ತೇ ಶರಣಂ ಗತಃ ॥ ೨೨ ॥

---

೧೭. ಯಮಲೋಕಕ್ಕೆ ಹೋಗಿ ಕಾದ ಸೀಸದ ದ್ರವದಿಂದ ತುಂಬಿದ ನರಕವನ್ನೂ, ಹಲಾಹಲವಿಷದ ನರಕವನ್ನೂ ಪಡೆದು ಹದಿನಾಲ್ಕು ಮನ್ವಂತರಗಳು ಕಳೆಯುವವರೆಗೂ ಅನೇಕ ಯಾತನೆಗಳನ್ನನುಭವಿಸಿದೆನು.

೧೮. ಬಳಿಕ ಭೂಲೋಕಕ್ಕೆ ಬಂದು ಕ್ರಮವಾಗಿ ಎಂಬತ್ತುನಾಲ್ಕು ಲಕ್ಷ ಪ್ರಕಾರಗಳಾದ ಯೋನಿಗಳಲ್ಲಿಯೂ ಜನ್ಮಗಳನ್ನು ಪಡೆದು ಈಗ ಈ ಆಲದ ಮರದಲ್ಲಿ ಸರ್ಪಶರೀರವನ್ನು ತಾಳಿ ವಾಸಮಾಡುತ್ತಿದ್ದೆನು.

೧೯. ಹತ್ತು ಯೋಜನಗಳ ಸುತ್ತಳತೆಯೂ ನೂರು ಯೋಜನಗಳ ಎತ್ತರವೂ ಉಳ್ಳ ಈ ವೃಕ್ಷದಲ್ಲಿ ಏಳು ಯೋಜನಗಳ ವಿಸ್ತಾರವಾದ ಪೊಟರೆ ಯೊಂದಿದ್ದಿತು. ಅಲ್ಲಿ ನಾನು ತಮೋಗುಣಪ್ರಧಾನವೂ, ಕ್ರೂರವೂ ಆದ ಸರ್ಪವಾಗಿ ವಾಸಮಾಡುತ್ತಿದ್ದೆನು.

೨೦. ಎಲೈ ಬ್ರಾಹ್ಮಣೋತ್ತಮನೆ! ಇಂತು ಪೂರ್ವಜನ್ಮದಲ್ಲಿ ಮಾಡಿದ ದುಷ್ಕರ್ಮದಿಂದ ಪೀಡಿತನಾಗಿ ಇಲ್ಲಿ ವಾಸಿಸುತ್ತಿರಲು, ತರುಕೋಟರದಲ್ಲಿ ಅನ್ನಾಹಾರಗಳಿಲ್ಲದೆ ಹತ್ತುಸಾವಿರ ವರ್ಷಗಳು ಕಳೆದುಹೋದುವು.

೨೧. ಎಲೈ ಮಹಾಮುನಿಯೆ! ದೈವಯೋಗದಿಂದ ನಿನ್ನ ಆಗಮನವಾಗಲು ನಿನ್ನ ಮುಖಕಮಲದಿಂದ ಹೊರಬಿದ್ದ ವೈಶಾಖಮಾಸದ ಕಥಾಮೃತವನ್ನು ಕೇಳಿದ ಕ್ಷಣದಲ್ಲಿಯೇ ನನ್ನ ಸಕಲ ಪಾತಕಗಳೂ ನಾಶವನ್ನು ಹೊಂದಿದುವು.

೨೨. ಆಗಲೇ ನಾನು ಸರ್ಪಶರೀರವನ್ನು ತ್ಯಜಿಸಿ ದಿವ್ಯರೂಪವನ್ನು ಧರಿಸಿದ ಮನುಷ್ಯನಾಗಿ ಕೈಗಳನ್ನು ಮುಗಿದು ನಮಸ್ಕರಿಸುತ್ತ ನಿನ್ನ ಪಾದಪದ್ಮಗಳಲ್ಲಿ ಶರಣಾಗತನಾಗಿ ಬಂದಿರುವೆನು.

ಕಸ್ಮಿನ್ ಜನ್ಮನಿ ತ್ವಂ ಬಂಧುರ್ನ ಜಾನೇ ಮುನಿಸತ್ತಮ ।
ನ ಮಯೋಪಕೃತಂ ಕ್ವಾಪಿ ಸಾನುಕಂಪಃ ಕುತಃ ಸತಾಂ ॥ ೨೩ ॥
ಸಾಧೂನಾಂ ಸಮಚಿತ್ತಾನಾಂ ಸದಾ ಭೂತದಯಾವತಾಂ ।
ಪರೋಪಕಾರಃ ಪ್ರಕೃತಿಃ ನ ಚೈಷಾಮನ್ಯಥಾ ಮತಿಃ ॥ ೨೪ ॥
ಮಾಮದ್ಯಾನುಗೃಹಾಣ ತ್ವಂ ಯಥಾ ಧರ್ಮೇ ಮತಿರ್ಭವೇತ್ ।
ನ ಭೂಯಾದ್ವಿಸ್ಮೃತಿಃ ಕ್ವಾಪಿ ವಿಷ್ಣೋರ್ದೇವಸ್ಯ ಚಕ್ರಿಣಃ ॥ ೨೫ ॥
ಮಹತಾಂ ಸಾಧುವೃತ್ತಾನಾಂ ಸಂಗತಿಶ್ಚ ಸದಾ ಭವೇತ್ ।
ದಾರಿದ್ರ್ಯಮೇಕಮೇವ ಸ್ಯಾನ್ಮದಾಂಧಪರಮಾಂಜನಂ ॥ ೨೬ ॥
ಇತಿ ತಂ ಬಹುಧಾ ಸ್ತುತ್ವಾ ಪ್ರಣಮ್ಯ ಚ ಪುನಃ ಪುನಃ ।
ಪ್ರಾಂಜಲಿಃ ಪ್ರಣತಸ್ತಸ್ಥೌ ತೂಷ್ಣೀಮೇವತದಗ್ರತಃ ॥ ೨೭ ॥
ಶಂಖೋ ದೋರ್ಭ್ಯಾಂ ಸಮುತ್ಥಾಪ್ಯ ಪೂರ್ಣಪ್ರೇಮಪರಿಪ್ಲುತಃ ।
ಪಸ್ಪರ್ಶ ಪಾಣಿನಾ ಚಾಂಗಂ ಶಂತಮೇನ ಗತಾಧ್ವಸಃ ॥ ೨೮ ॥

೨೩. ಮುನಿವರ್ಯನೆ! ಯಾವ ಜನ್ಮದಲ್ಲಿ ನೀನು ನನಗೆ ಬಂಧುವಾಗಿದ್ದೆ ಯೆಂಬುದನ್ನರಿಯೆನು. ನನ್ನಿಂದ ನಿನಗೆ ಸ್ವಲ್ಪವೂ ಉಪಕಾರವಾಗಲಿಲ್ಲ. ನಾನು ಯಾವ ಸತ್ಪುರುಷರಿಗೂ ಯಾವಾಗಲೂ ಕರುಣೆಯನ್ನು ತೋರಿದವನಲ್ಲ.

೨೪. ಸಾಧುಗಳೂ, ಸಮಾಹಿತಮನಸ್ಕರೂ, ಯಾವಾಗಲೂ ಭೂತದಯಾ ಪರರೂ ಆಗಿರುವ ಸಜ್ಜನರಿಗೆ ಪರೋಪಕಾರವನ್ನು ಮಾಡುವ ಬುದ್ಧಿಯು ಪ್ರಕೃತಿಸಿದ್ಧವೇ ಆಗಿರುವುದು. ಅವರಿಗೆ ವಿಪರೀತಬುದ್ಧಿಯೆಂದಿಗೂ ಉಂಟಾಗಲಾರದು.

೨೫. ಈಗ ನಾನು ನಿನ್ನನ್ನು ಪ್ರಾರ್ಥಿಸುವುದೇನೆಂದರೆ ನನಗೆ ಧರ್ಮ ಕಾರ್ಯಗಳಲ್ಲಿಯೇ ಬುದ್ಧಿಯು ನೆಲಸುವಂತೆ ಅನುಗ್ರಹವನ್ನು ಮಾಡು. ದೇವದೇವನೂ ಚಕ್ರಾಯುಧಪಾಣಿಯೂ ಆದ ಮಹಾವಿಷ್ಣುವಿನ ವಿಸ್ಮರಣೆಯು ನನಗೆ ಎಂದಿಗೂ ಉಂಟಾಗದಿರಲಿ.

೨೬. ಮಹಾತ್ಮರೂ ಸಾಧುಚರಿತರೂ ಆದವರ ಸಹವಾಸವೇ ನನಗೆ ನಿತ್ಯವೂ ಲಭಿಸುತ್ತಿರಲಿ. ಗರ್ವವೆಂಬ ಅಂಧತೆಯನ್ನು ಕಳೆಯುವ ಪರಮಾಂಜನ ರೂಪವಾದ ದಾರಿದ್ರ್ಯವೇ ನನಗೆ ನಿತ್ಯವಾಗಿರಲಿ.''

೨೭. ಇಂತೆಂದು ಆ ಶಂಖನನ್ನು ಬಹುವಿಧವಾಗಿ ಸ್ತೋತ್ರಮಾಡಿ ಮತ್ತೆ ಮತ್ತೆ ನಮಸ್ಕಾರಗಳನ್ನು ಮಾಡುತ್ತ ಅಂಜಲಿಬಂಧವನ್ನು ಮಾಡಿಕೊಂಡು ವಿನೀತನಾಗಿ ಸುಮ್ಮನೆ ಆತನ ಇದಿರಿನಲ್ಲಿ ನಿಂತುಕೊಂಡನು.

೨೮. ಶಂಖಬ್ರಾಹ್ಮಣನೂ ಅತ್ಯಂತ ಆದರದಿಂದ ತುಂಬಿದ ಹೃದಯ

ಚಕ್ರೇ ಸೋಽನುಗ್ರಹಂ ತಸ್ಮಿನ್ ದಿವ್ಯರೂಪಧರೇ ದ್ವಿಜೇ ।
ಪ್ರಾಹ ತಂ ಕೃಪಯಾವಿಷ್ಟೋ ಭಾವಿವೃತ್ತಾಂತಮಂಜಸಾ ॥ ೨೯ ॥
ದ್ವಿಜ ತ್ವಂ ಮಾಸಮಾಹಾತ್ಮ್ಯಶ್ರವಣಾಚ್ಚ ಹರೇರಪಿ ।
ಮಾಹಾತ್ಮ್ಯಶ್ರವಣಾತ್ಸದ್ಯೋ ವಿಧ್ವಸ್ತಾಖಿಲಬಂಧನಃ ॥ ೩೦ ॥
ಅತಿಹಾಯ ಕಲಂಕಂ ಚ ಕ್ರಮಾದ್ಗತ್ವಾ ಪುನರ್ಭುವಿ ।
ದಶಾರ್ಣೇ ವಿಷಯೇ ಪುಣ್ಯೇ ಭವಿತಾ ತ್ವಂ ದ್ವಿಜೋತ್ತಮಃ ॥ ೩೦ ॥
ವೇದಶರ್ಮೇತಿ ವಿಖ್ಯಾತಃ ಸರ್ವವೇದ ವಿಶಾರದಃ ।
ತತ್ರ ತೇ ಭವಿತಾ ಜಾತಿಸ್ಮೃತಿರಾತ್ಯಂತಿಕೀ ಶುಭಾ ॥ ೩೨ ॥
ತಥಾ ಸ್ಮೃತಾನುಬಂಧಸ್ತ್ವಂ ತ್ಯಕ್ತಸರ್ವೇಷಣಃ ಶುಭಃ ।
ಕರೋಷಿ ಸಕಲಾನ್ ಧರ್ಮಾನ್ ವೈಶಾಖೋಕ್ತಾನ್ ಹರಿಪ್ರಿಯಾನ್ ॥
ನಿರ್ದ್ವಂದ್ವೋ ನಿಃಸ್ಪೃಹೋಽಸಂಗೋ ಗುರುಭಕ್ತೋ ಜಿತೇಂದ್ರಿಯಃ ।
ಸದಾ ವಿಷ್ಣುಕಥಾಲಾಪೋ ಭವಿತಾ ತತ್ರ ಜನ್ಮನಿ ॥ ೩೪ ॥

ವುಳ್ಳವನಾಗಿ ತನ್ನ ಆಶ್ಚರ್ಯವನ್ನುಳಿದು ಸುಖಸ್ಪರ್ಶಗಳಾದ ತನ್ನ ಕೈಗಳಿಂದ ಆತನನ್ನು ಹಿಡಿದೆತ್ತಿ ಆತನ ಮೈಯನ್ನೆಲ್ಲ ತಡವಿದನು.

೨೯. ದಿವ್ಯರೂಪವನ್ನು ಧರಿಸಿದ್ದ ಆ ಬ್ರಾಹ್ಮಣೋತ್ತಮನಲ್ಲಿ ಅನುಗ್ರಹ ವನ್ನೂ ಮಾಡಿದನು. ಕೃಪೆಯಿಂದ ಕೂಡಿದವನಾಗಿ ಮುಂದೆ ನಡೆಯಬೇಕಾದ ಕಾರ್ಯಗೌರವವೆಲ್ಲವನ್ನೂ ಸಮಗ್ರವಾಗಿ ತಿಳಿಸಿದನು.

೩೦. "ಅಯ್ಯಾ ಬ್ರಾಹ್ಮಣೋತ್ತಮನೆ! ನೀನು ವೈಶಾಖಮಾಸಮಾಹಾತ್ಮ್ಯದ ಶ್ರವಣದಿಂದಲೂ, ಶ್ರೀ ಹರಿಯ ಚರಿತ್ರೆಯನ್ನು ಕೇಳಿದುದರಿಂದಲೂ ಕ್ಷಣಮಾತ್ರದಲ್ಲಿಯೇ ಸಕಲ ಭವಬಂಧನಗಳನ್ನೂ ಕಳೆದುಕೊಳ್ಳುವವನಾದೆ.

೩೧. ನೀನು ನೀಚಜನ್ಮದ ಕಳಂಕವನ್ನು ಕಳೆದುಕೊಂಡು ಕ್ರಮವಾಗಿ ಪುನಃ ಭೂಲೋಕದಲ್ಲಿ ಬಂದು ದಶಾರ್ಣವೆಂಬ ಪುಣ್ಯದೇಶದಲ್ಲಿ ಬ್ರಾಹ್ಮಣೋತ್ತಮನಾಗಿ ಜನ್ಮವನ್ನು ತಳೆಯುವೆ.

೩೨. ನೀನು ವೇದಶರ್ಮನೆಂಬ ಹೆಸರಿನಿಂದ ಪ್ರಖ್ಯಾತಿಯನ್ನು ಪಡೆದು ಸಕಲವೇದಗಳಲ್ಲಿಯೂ ವಿಶಾರದನಾಗಿರುವೆ. ಆಗಲೂ ನಿನಗೆ ಪವಿತ್ರವಾದ ಪೂರ್ವಜನ್ಮಗಳ ಸ್ಮರಣೆಯು ಸಾರ್ವಕಾಲಿಕವಾಗಿರುವುದು.

೩೩. ಇಂತು ಕರ್ಮಾನುಬಂಧವನ್ನು ಸ್ಮರಿಸುತ್ತ ನೀನು ಸಕಲವಿಷಯಾಭಿಲಾಷೆಗಳನ್ನು ದೂರಮಾಡಿ ಪರಿಶುದ್ಧನಾಗಿ ಶ್ರೀಹರಿಗೆ ಪ್ರೀತಿಕರಗಳಾದ ವೈಶಾಖಮಾಸದ ಧರ್ಮಗಳೆಲ್ಲವನ್ನೂ ಸಾಂಗವಾಗಿ ನೆರವೇರಿಸುವೆ.

೩೪. ಆ ಜನ್ಮದಲ್ಲಿ ನೀನು ದ್ವಂದ್ವರಹಿತನೂ, ನಿರಪೇಕ್ಷನೂ, ಸಂಗ

ಕಸ್ಮಿನ್ ಜನ್ಮನಿ ತ್ವಂ ಬಂಧುರ್ನ ಜಾನೇ ಮುನಿಸತ್ತಮ ।
ನ ಮಯೋಪಕೃತಂ ಕ್ವಾಪಿ ಸಾನುಕಂಪಃ ಕುತಃ ಸತಾಂ ॥ ೨೩ ॥
ಸಾಧೂನಾಂ ಸಮಚಿತ್ತಾನಾಂ ಸದಾ ಭೂತದಯಾವತಾಂ ।
ಪರೋಪಕಾರಃ ಪ್ರಕೃತಿಃ ನ ಚೈಷಾಮನ್ಯಥಾ ಮತಿಃ ॥ ೨೪ ॥
ಮಾಮದ್ಯಾನುಗೃಹಾಣ ತ್ವಂ ಯಥಾ ಧರ್ಮೇ ಮತಿರ್ಭವೇತ್ ।
ನ ಭೂಯಾದ್ವಿಸ್ಮೃತಿಃ ಕ್ವಾಪಿ ವಿಷ್ಣೋರ್ದೇವಸ್ಯ ಚಕ್ರಿಣಃ ॥ ೨೫ ॥
ಮಹತಾಂ ಸಾಧುವೃತ್ತಾನಾಂ ಸಂಗತಿಶ್ಚ ಸದಾ ಭವೇತ್ ।
ದಾರಿದ್ರ್ಯಮೇಕಮೇವ ಸ್ಯಾನ್ಮದಾಂಧಪರಮಾಂಜನಂ ॥ ೨೬ ॥
ಇತಿ ತಂ ಬಹುಧಾ ಸ್ತುತ್ವಾ ಪ್ರಣಮ್ಯ ಚ ಪುನಃ ಪುನಃ ।
ಪ್ರಾಂಜಲಿಃ ಪ್ರಣತಸ್ತಸ್ಥೌ ತೂಷ್ಣೀಮೇವತದಗ್ರತಃ ॥ ೨೭ ॥
ಶಂಖೋ ದೋರ್ಭ್ಯಾಂ ಸಮುತ್ಥಾಪ್ಯ ಪೂರ್ಣಪ್ರೇಮಪರಿಪ್ಲುತಃ ।
ಪಸ್ಪರ್ಶ ಪಾಣಿನಾ ಚಾಂಗಂ ಶಂತಮೇನ ಗತಾಧ್ವಸಃ ॥ ೨೮ ॥

೨೩. ಮುನಿವರ್ಯನೆ! ಯಾವ ಜನ್ಮದಲ್ಲಿ ನೀನು ನನಗೆ ಬಂಧುವಾಗಿದ್ದೆಯೆಂಬುದನ್ನರಿಯೆನು. ನನ್ನಿಂದ ನಿನಗೆ ಸ್ವಲ್ಪವೂ ಉಪಕಾರವಾಗಲಿಲ್ಲ. ನಾನು ಯಾವ ಸತ್ಪುರುಷರಿಗೂ ಯಾವಾಗಲೂ ಕರುಣೆಯನ್ನು ತೋರಿದವನಲ್ಲ.

೨೪. ಸಾಧುಗಳೂ, ಸಮಾಹಿತಮನಸ್ಕರೂ, ಯಾವಾಗಲೂ ಭೂತದಯಾಪರರೂ ಆಗಿರುವ ಸಜ್ಜನರಿಗೆ ಪರೋಪಕಾರವನ್ನು ಮಾಡುವ ಬುದ್ಧಿಯು ಪ್ರಕೃತಿಸಿದ್ಧವೇ ಆಗಿರುವುದು. ಅವರಿಗೆ ವಿಪರೀತಬುದ್ಧಿಯೆಂದಿಗೂ ಉಂಟಾಗಲಾರದು.

೨೫. ಈಗ ನಾನು ನಿನ್ನನ್ನು ಪ್ರಾರ್ಥಿಸುವುದೇನೆಂದರೆ ನನಗೆ ಧರ್ಮಕಾರ್ಯಗಳಲ್ಲಿಯೇ ಬುದ್ಧಿಯು ನೆಲಸುವಂತೆ ಅನುಗ್ರಹವನ್ನು ಮಾಡು. ದೇವದೇವನೂ ಚಕ್ರಾಯುಧಪಾಣಿಯೂ ಆದ ಮಹಾವಿಷ್ಣುವಿನ ವಿಸ್ಮರಣೆಯು ನನಗೆ ಎಂದಿಗೂ ಉಂಟಾಗದಿರಲಿ.

೨೬. ಮಹಾತ್ಮರೂ ಸಾಧುಚರಿತರೂ ಆದವರ ಸಹವಾಸವೇ ನನಗೆ ನಿತ್ಯವೂ ಲಭಿಸುತ್ತಿರಲಿ. ಗರ್ವವೆಂಬ ಅಂಧತೆಯನ್ನು ಕಳೆಯುವ ಪರಮಾಂಜನರೂಪವಾದ ದಾರಿದ್ರ್ಯವೇ ನನಗೆ ನಿತ್ಯವಾಗಿರಲಿ."

೨೭. ಇಂತೆಂದು ಆ ಶಂಖನನ್ನು ಬಹುವಿಧವಾಗಿ ಸ್ತೋತ್ರಮಾಡಿ ಮತ್ತೆ ಮತ್ತೆ ನಮಸ್ಕಾರಗಳನ್ನು ಮಾಡುತ್ತ ಅಂಜಲಿಬಂಧವನ್ನು ಮಾಡಿಕೊಂಡು ವಿನೀತನಾಗಿ ಸುಮ್ಮನೆ ಆತನ ಇದಿರಿನಲ್ಲಿ ನಿಂತುಕೊಂಡನು.

೨೮. ಶಂಖಬ್ರಾಹ್ಮಣನೂ ಅತ್ಯಂತ ಆದರದಿಂದ ತುಂಬಿದ ಹೃದಯ

ಚಕ್ರೇ ಸೋಽನುಗ್ರಹಂ ತಸ್ಮಿನ್ ದಿವ್ಯರೂಪಧರೇ ದ್ವಿಜೇ ।
ಪ್ರಾಹ ತಂ ಕೃಪಯಾವಿಷ್ಟೋ ಭಾವಿವೃತ್ತಾಂತಮಂಜಸಾ ॥ ೨೯ ॥
ದ್ವಿಜ ತ್ವಂ ಮಾಸಮಾಹಾತ್ಮ್ಯಶ್ರವಣಾಚ್ಚ ಹರೇರಪಿ ।
ಮಾಹಾತ್ಮ್ಯಶ್ರವಣಾತ್ಸದ್ಯೋ ವಿಧ್ವಸ್ತಾಖಿಲಬಂಧನಃ ॥ ೩೦ ॥
ಅತಿಹಾಯ ಕಲಂಕಂ ಚ ಕ್ರಮಾದ್ಗತ್ವಾ ಪುನರ್ಭುವಿ ।
ದಶಾರ್ಣೇ ವಿಷಯೇ ಪುಣ್ಯೇ ಭವಿತಾ ತ್ವಂ ದ್ವಿಜೋತ್ತಮಃ ॥ ೩೧ ॥
ವೇದಶರ್ಮೇತಿ ವಿಖ್ಯಾತಃ ಸರ್ವವೇದ ವಿಶಾರದಃ ।
ತತ್ರ ತೇ ಭವಿತಾ ಜಾತಿಸ್ಮೃತಿರಾತ್ಯಂತಿಕೀ ಶುಭಾ ॥ ೩೨ ॥
ತಥಾ ಸ್ಮೃತಾನುಬಂಧಸ್ತ್ವಂ ತ್ಯಕ್ತಸರ್ವೇಷಣಃ ಶುಭಃ ।
ಕರೋಷಿ ಸಕಲಾನ್ ಧರ್ಮಾನ್ ವೈಶಾಖೋಕ್ತಾನ್ ಹರಿಪ್ರಿಯಾನ್ ॥
ನಿರ್ದ್ವಂದ್ವೋ ನಿಃಸ್ಪೃಹೋಽಸಂಗೋ ಗುರುಭಕ್ತೋ ಜಿತೇಂದ್ರಿಯಃ ।
ಸದಾ ವಿಷ್ಣುಕಥಾಲಾಪೋ ಭವಿತಾ ತತ್ರ ಜನ್ಮನಿ ॥ ೩೪ ॥

ವುಳ್ಳವನಾಗಿ ತನ್ನ ಆಶ್ಚರ್ಯವನ್ನುಳಿದು ಸುಖಸ್ಪರ್ಶಗಳಾದ ತನ್ನ ಕೈಗಳಿಂದ ಆತನನ್ನು ಹಿಡಿದೆತ್ತಿ ಆತನ ಮೈಯನ್ನೆಲ್ಲ ತಡವಿದನು.

೨೯. ದಿವ್ಯರೂಪವನ್ನು ಧರಿಸಿದ್ದ ಆ ಬ್ರಾಹ್ಮಣೋತ್ತಮನಲ್ಲಿ ಅನುಗ್ರಹ ವನ್ನೂ ಮಾಡಿದನು. ಕೃಪೆಯಿಂದ ಕೂಡಿದವನಾಗಿ ಮುಂದೆ ನಡೆಯಬೇಕಾದ ಕಾರ್ಯಗೌರವವೆಲ್ಲವನ್ನೂ ಸಮಗ್ರವಾಗಿ ತಿಳಿಸಿದನು.

೩೦. "ಅಯ್ಯಾ ಬ್ರಾಹ್ಮಣೋತ್ತಮನೆ! ನೀನು ವೈಶಾಖಮಾಸಮಾಹಾತ್ಮ್ಯದ ಶ್ರವಣದಿಂದಲೂ, ಶ್ರೀ ಹರಿಯ ಚರಿತ್ರೆಯನ್ನು ಕೇಳಿದುದರಿಂದಲೂ ಕ್ಷಣಮಾತ್ರದಲ್ಲಿಯೇ ಸಕಲ ಭವಬಂಧನಗಳನ್ನೂ ಕಳೆದುಕೊಳ್ಳುವವನಾದೆ.

೩೧. ನೀನು ನೀಚಜನ್ಮದ ಕಳಂಕವನ್ನು ಕಳೆದುಕೊಂಡು ಕ್ರಮವಾಗಿ ಪುನಃ ಭೂಲೋಕದಲ್ಲಿ ಬಂದು ದಶಾರ್ಣವೆಂಬ ಪುಣ್ಯದೇಶದಲ್ಲಿ ಬ್ರಾಹ್ಮಣೋತ್ತಮನಾಗಿ ಜನ್ಮವನ್ನು ತಳೆಯುವೆ.

೩೨. ನೀನು ವೇದಶರ್ಮನೆಂಬ ಹೆಸರಿನಿಂದ ಪ್ರಖ್ಯಾತಿಯನ್ನು ಪಡೆದು ಸಕಲವೇದಗಳಲ್ಲಿಯೂ ವಿಶಾರದನಾಗಿರುವೆ. ಆಗಲೂ ನಿನಗೆ ಪವಿತ್ರವಾದ ಪೂರ್ವಜನ್ಮಗಳ ಸ್ಮರಣೆಯು ಸಾರ್ವಕಾಲಿಕವಾಗಿರುವುದು.

೩೩. ಇಂತು ಕರ್ಮಾನುಬಂಧವನ್ನು ಸ್ಮರಿಸುತ್ತ ನೀನು ಸಕಲವಿಷಯಾಭಿಲಾಷೆಗಳನ್ನು ದೂರಮಾಡಿ ಪರಿಶುದ್ಧನಾಗಿ ಶ್ರೀಹರಿಗೆ ಪ್ರೀತಿಕರಗಳಾದ ವೈಶಾಖಮಾಸದ ಧರ್ಮಗಳೆಲ್ಲವನ್ನೂ ಸಾಂಗವಾಗಿ ನೆರವೇರಿಸುವೆ.

೩೪. ಆ ಜನ್ಮದಲ್ಲಿ ನೀನು ದ್ವಂದ್ವರಹಿತನೂ, ನಿರಪೇಕ್ಷನೂ, ಸಂಗ

ತತಃ ಸಿದ್ಧಿಂ ಸಮಾಪ್ಯಾಥ ವಿಧ್ವಸ್ತಾಖಿಲಬಂಧನಃ ।
ಪ್ರಾಪ್ಸ್ಯೋಷಿ ಪರಮಂ ಧಾಮ ಯೋಗ್ಯೈರಪಿ ದುರಾಸದಂ ॥ ೩೫ ॥
ಮಾಭೈಷೀಃ ಪುತ್ರ ಭದ್ರಂ ತೇ ಭವಿತಾ ಮತ್ಪ್ರಸಾದತಃ ।
ಹಾಸ್ಯಾದ್ಭಯಾತ್ತಥಾ ಕ್ರೋಧಾದ್ದ್ವೇಷಾತ್ಕಾಮಾದಥಾಽಪಿವಾ ॥ ೩೬ ॥
ಸ್ನೇಹಾದ್ವಾ ಸಕೃದುಚ್ಚಾರ್ಯ ವಿಷ್ಣೋರ್ನಾಮಾಘಹಾರಿ ಚ ।
ಪಾಪಿಷ್ಠಾ ಅಪಿ ಗಚ್ಛಂತಿ ವಿಷ್ಣೋರ್ಧಾಮ ನಿರಾಮಯಂ ॥ ೩೭ ॥
ಕಿಮು ತಚ್ಛ್ರದ್ಧಯಾ ಯುಕ್ತಾ ಜಿತಕ್ರೋಧಾ ಜಿತೇಂದ್ರಿಯಾಃ ।
ದಯಾವಂತಃ ಕಥಾಂ ಶ್ರುತ್ವಾ ಗಚ್ಛಂತೀತಿ ದ್ವಿಜೋತ್ತಮ ॥ ೩೮ ॥
ಕೇಚಿತ್ಕೇವಲಯಾ ಭಕ್ತ್ಯಾ ಕಥಾಲಾಪೈಕತತ್ಪರಾಃ ।
ಸರ್ವಧರ್ಮೋಜ್ಝಿತಾ ವಾಪಿ ಯಾಂತಿ ವಿಷ್ಣೋಃ ಪರಂ ಪದಂ ॥ ೩೯ ॥
ದ್ವೇಷಾದಿನಾ ಚ ಭಕ್ತ್ಯಾ ವಾ ಕೇಚಿದ್ವಿಷ್ಣುಮುಪಾಸತೇ ।
ತೇಽಪಿ ಯಾಂತಿ ಪರಂಧಾಮ ಪೂತನೇವಾಸುಹಾರಿಣೇ ॥ ೪೦ ॥

---

ದೂರನೂ, ಗುರುಭಕ್ತನೂ, ಜಿತೇಂದ್ರಿಯನೂ, ನಿರಂತರದಲ್ಲಿಯೂ ಶ್ರೀಹರಿಯ ಲೀಲೆಗಳ ಚರಿತ್ರೆಗಳನ್ನೇ ಕೇಳುತ್ತಿರುವವನೂ ಆಗಿರುವೆ.

೩೫. ಬಳಿಕ ಕರ್ಮಸಿದ್ಧಿಯನ್ನು ಹೊಂದಿದವನಾಗಿ ಸಕಲಸಂಸಾರ ಬಂಧಗಳನ್ನೂ ಕಳೆದುಕೊಂಡು ಮಹಾಯೋಗಿಗಳಿಗೂ ಅತ್ಯಂತದುರ್ಲಭವೆನಿಸಿದ ವೈಕುಂಠಲೋಕವನ್ನು ಪಡೆಯುವೆ.

೩೬–೩೭. ವತ್ಸನೆ! ಭಯಗೊಳ್ಳಬೇಡ. ನನ್ನ ಅನುಗ್ರಹದಿಂದ ನಿನಗೆ ಮಂಗಳವುಂಟಾಗುವುದು. ಹಾಸ್ಯಕ್ಕಾಗಲಿ, ಭಯದಿಂದಾಗಲಿ, ಕೋಪದಿಂದಾಗಲಿ, ದ್ವೇಷದಿಂದಾಗಲಿ, ಕಾಮದಿಂದಲಾದರೂ ಆಗಲಿ, ಸ್ನೇಹದಿಂದಲೇ ಆಗಲಿ, ಸಕಲ ಪಾಪಗಳನ್ನೂ ಹದಗೆಡಿಸುವ ಮಹಾವಿಷ್ಣುವಿನ ನಾಮವನ್ನು ಒಮ್ಮೆ ಉಚ್ಚರಿಸಿದರೂ ಸಹ ಸಕಲಪಾಪಿಗಳೂ ದುಃಖರಹಿತವಾದ ವಿಷ್ಣು ಲೋಕವನ್ನು ಸೇರುವರು.

೩೮. ಬ್ರಾಹ್ಮಣಶ್ರೇಷ್ಠನೆ! ಇನ್ನು ಶ್ರದ್ಧಾವಂತರೂ, ಕ್ರೋಧಾದಿ ಅರಿಷಡ್ವರ್ಗಗಳನ್ನು ಜಯಿಸಿದವರೂ, ಜಿತೇಂದ್ರಿಯರೂ, ದಯಾದಾಕ್ಷಿಣ್ಯಯುಕ್ತರೂ ಆದವರು ಶ್ರೀಹರಿಯ ಚರಿತ್ರೆಯನ್ನು ಕೇಳಿ ವೈಕುಂಠವನ್ನು ಪಡೆಯುವರೆಂದು ಹೇಳಲೇಕೆ?

೩೯. ಕೆಲವರು ಸಕಲ ಧರ್ಮಗಳನ್ನೂ ತ್ಯಜಿಸಿ ಕೇವಲ ಭಕ್ತಿಯಿಂದಲೇ ಕೂಡಿ ಪರಮಾತ್ಮನ ದಿವ್ಯಚರಿತ್ರೆಗಳನ್ನು ಹೇಳಿ ಕೇಳುವುದರಲ್ಲಿಯೇ ಆಸಕ್ತರಾಗಿ ಪರಾತ್ಪರವಾದ ಮಹಾವಿಷ್ಣುವಿನ ಸ್ಥಾನವನ್ನು ಪಡೆಯುವರು.

೪೦. ಕೆಲವರು ದ್ವೇಷರೂಪವಾದ ಅನನ್ಯಭಾವದಿಂದಲೂ ವಿಷ್ಣುವನ್ನು

ಮಹದ್ಭಿಃ ಸಂಗತೋ ನಿತ್ಯಂ ವಾಗ್ವಿಸರ್ಗಸ್ತದಾಶ್ರಯಃ ।
ಮುಮುಕ್ಷೂಣಾಂ ಚ ಕರ್ತವ್ಯಃ ಸ ವಿಧಿಃ ಶ್ರುತಿಚೋದಿತಃ ॥ ೪೧ ॥
ಸ ವಾಗ್ವಿಸರ್ಗೋ ಜನತಾಘವಿಪ್ಲವೋ
ಯಸ್ಮಿನ್ ಪ್ರತಿಶ್ಲೋಕಮಬದ್ಧವತ್ಯಪಿ ।
ನಾಮಾನ್ಯನಂತಸ್ಯ ಯಶೋಽಂಕಿತಾನಿ
ಯಚ್ಛೃಣ್ವಂತಿ ಗಾಯಂತಿ ಗೃಣಂತಿ ಸಾಧವಃ ॥ ೪೨ ॥
ಯಃ ಕಷ್ಟಸೇವಾಂ ನ ಚ ಕಾಂಕ್ಷತೇ ವಿಭುಃ
ನ ವಾಸನಂ ಭೂರಿ ನ ರೂಪಯೌವನೇ ।
ಸ್ಮೃತಃ ಸಕೃದ್ಗಚ್ಛತಿ ಧಾಮ ಭಾಸ್ವರಂ
ಕಂ ವಾ ದಯಾಲುಂ ಶರಣಂ ವ್ರಜೇತ ॥ ೪೩ ॥
ತಮೇವ ಶರಣಂ ಯಾಹಿ ನಾರಾಯಣಮನಾಮಯಂ ।
ಭಕ್ತವತ್ಸಲಮವ್ಯಕ್ತಂ ಚೇತೋಗಮ್ಯಂ ದಯಾನಿಧಿಂ ॥ ೪೪ ॥

ಉಪಾಸನೆಮಾಡುವರು. ಅವರೂ ಸಹ ಶ್ರೀಕೃಷ್ಣನ ಪ್ರಾಣಗಳನ್ನಪಹರಿಸಲು ಪ್ರಾಪ್ತಳಾದ ಪೂತನೆಯಂತೆ ಪರಮಪದವನ್ನು ಪಡೆಯುವರು.

೪೧. ಮಹಾತ್ಮರೊಡನೆ ನಿತ್ಯವೂ ಸಹವಾಸವನ್ನು ಬೆಳಸುತ್ತ ಅವರ ಆಶ್ರಯದಲ್ಲಿಯೇ ಮಾತುಗಳನ್ನು ಕೇಳುತ್ತ ಕುಳಿತುಕೊಂಡು ಮುಮುಕ್ಷು ವಾದವನು ವೇದಗಳಲ್ಲಿ ಹೇಳಲ್ಪಟ್ಟಿರುವ ಧರ್ಮಗಳನ್ನೇ ಆಚರಿಸುತ್ತಿರಬೇಕು.

೪೨. ಯಾವ ಮಾತುಗಳಲ್ಲಿ ಪ್ರತಿಯೊಂದು ಮಾತೂ ಅಬದ್ಧಗಳಿಂದ ತುಂಬಿದ್ದರೂ ಅಚಿಂತ್ಯಮಹಿಮನಾದ ಪರಮಾತ್ಮನ ಲೀಲೆಗಳನ್ನು ಸೂಚಿಸುವ ನಾಮಗಳು ತುಂಬಿರುವುವೊ, ಯಾವ ಮಾತುಗಳನ್ನು ಸಾಧುಗಳು ಶ್ರದ್ಧೆಯಿಂದ ಕೇಳುವರೊ, ಕೀರ್ತನಮಾಡುವರೊ ಮತ್ತು ಸ್ತೋತ್ರಮಾಡುವರೊ, ಆ ಮಾತು ಗಳ ಧೋರಣೆಯೇ ಜನರ ಪಾತಕಗಳನ್ನು ನಿರ್ಮೂಲಗೊಳಿಸುವುದು.

೪೩. ಸರ್ವೇಶ್ವರನಾದ ಯಾವನು ಕಾಯಕ್ಲೇಶದಿಂದ ಕೂಡಿದ ಸೇವೆ ಯನ್ನಪೇಕ್ಷಿಸುವುದಿಲ್ಲವೊ, ಉತ್ತಮಾಸನವನ್ನಾಗಲಿ, ಭಕ್ತನಲ್ಲಿ ರೂಪಯೌವನ ಗಳನ್ನಾಗಲಿ ಅಪೇಕ್ಷಿಸನೊ, ಯಾವನನ್ನು ಒಮ್ಮೆ ಸ್ಮರಿಸಿದ ಮಾತ್ರದಿಂದಲೇ ಭಕ್ತನು ತೇಜೋಮಯವಾದ ಸ್ಥಾನವನ್ನು ಪಡೆಯುವನೊ, ಅಂತಹ ದಯಾಳು ವನ್ನಲ್ಲದೆ ಮತ್ತೆ ಯಾರನ್ನು ಶರಣುಹೊಂದಬೇಕು ?

೪೪. ನೀನೂ ಕೂಡ ಜರಾಮರಣವರ್ಜಿತನೂ, ಭಕ್ತವತ್ಸಲನೂ, ಸ್ಥೂಲ ದೃಷ್ಟಿಗೆ ಅಗೋಚರನೂ, ಕೇವಲ ಶುದ್ಧಮನಸ್ಸಿನಿಂದ ತಿಳಿಯಲ್ಪಡತಕ್ಕವನೂ, ದಯಾಸಮುದ್ರನೂ ಆದ ಆ ನಾರಾಯಣನನ್ನೇ ಶರಣುಹೊಂದುವವನಾಗು.

ಕುರು ಸರ್ವಾನಿಮಾನ್ ಧರ್ಮಾನ್ವೈಶಾಖೋಕ್ತಾನ್ಮಹಾಮತೇ ।
ತೇನ ತುಷ್ಟೋ ಜಗನ್ನಾಥಃ ಶರ್ಮ ತೇ ಚ ವಿಧಾಸ್ಯತಿ ॥ ೪೫ ॥
ಇತ್ಯುಕ್ತ್ವಾ ವಿರರಾಮಾಥ ವ್ಯಾಧಂ ದೃಷ್ಟ್ವಾ ಸುವಿಸ್ಮಿತಃ ।
ಸ ದಿವ್ಯಃ ಪುರುಷಃ ಪ್ರಾಹ ಪುನಸ್ತಂ ಮುನಿಪುಂಗವಂ ॥ ೪೬ ॥

ದಿವ್ಯಪುರುಷ ಉವಾಚ :—

ಧನ್ಯೋಽಸ್ಮ್ಯನುಗೃಹೀತೋಽಸ್ಮಿ ತ್ವಯಾ ಶಂಖ ದಯಾಲುನಾ ।
ದಿಷ್ಟ್ಯಾ ಗತಾ ಮೇ ದುರ್ಯೋನಿ ರ್ಯಾಮಿ ಚೈವ ಪರಾಂ ಗತಿಂ ॥ ೪೭ ॥
ಇತಿ ತಂ ಚ ಪರಿಕ್ರಮ್ಯ ಹ್ಯನುಜ್ಞಾತೋ ದಿವಂ ಯಯೌ ।
ತತಃ ಸಾಯಮಭೂದ್ರಾಜನ್ ಶಂಖೋ ವ್ಯಾಧೇನ ತೋಷಿತಃ ॥ ೪೮ ॥
ಸಂಧ್ಯಾಂ ಸಾಯಂತನೀಂ ಕೃತ್ವಾ ರಾತ್ರಿಶೇಷಂ ನಿನಾಯ ಚ ।
ನಾನಾಖ್ಯಾನೈಶ್ಚ ಭೂಪಾನಾಂ ದೇವನಾಂ ಚ ಮಹಾತ್ಮನಾಂ ॥ ೪೯ ॥
ಲೀಲಾಭಿರವತಾರಾಣಾಂ ದೃಷ್ಟಗೋಷ್ಠಿಭಿರೇವಚ ।
ಬ್ರಾಹ್ಮೇ ಮುಹೂರ್ತೇ ಚೋತ್ಥಾಯ ಪಾದೌ ಪ್ರಕ್ಷಾಲ್ಯ ವಾಗ್ಯತಃ ॥೫೦॥

---

೪೫. ಮಹಾಬುದ್ಧಿಯೇ! ವೈಶಾಖಮಾಸಕರ್ತವ್ಯಗಳೆಂದು ಹೇಳಲ್ಪಟ್ಟಿರುವ ಈ ಧರ್ಮಗಳೆಲ್ಲವನ್ನೂ ನೀನೂ ನೆರವೇರಿಸು. ಅವುಗಳಿಂದ ಸಂತೋಷಗೊಂಡ ಜಗನ್ನಾಥನು ನಿನಗೆ ಶ್ರೇಯಸ್ಸನ್ನು ಅನುಗ್ರಹಿಸುವನು.''

೪೬. ಇಂತೆಂದು ಶಂಖಬ್ರಾಹ್ಮಣನು ಹೇಳಿ ವಿಸ್ಮಿತಹೃದಯನಾಗಿ ವ್ಯಾಧನನ್ನು ನೋಡುತ್ತ ಸುಮ್ಮನಾದನು. ಆ ದಿವ್ಯಪುರುಷನಾದರೊ ಪುನಃ ಮುನಿಪುಂಗವನಾದ ಆತನನ್ನು ಕುರಿತು ಹೇಳತೊಡಗಿದನು.

೪೭. ದಿವ್ಯಪುರುಷನು ಹೇಳುತ್ತಾನೆ:—''ಶಂಖನೆ! ನಾನೇ ಧನ್ಯನು. ದಯಾಳುವಾದ ನಿನ್ನಿಂದ ಅನುಗ್ರಹೀತನಾಗಿರುವೆನು. ದೈವಯೋಗದಿಂದ ನನ್ನ ನೀಚಜನ್ಮವು ಕಳೆದುಹೋಯಿತು. ಇನ್ನು ಉತ್ತಮಗತಿಯನ್ನು ಪಡೆಯುವೆನು.''

೪೮. ಇಂತೆಂದು ಆತನಿಗೆ ಪ್ರದಕ್ಷಿಣೆಯನ್ನುಮಾಡಿ ಆತನ ಅನುಜ್ಞೆಯನ್ನು ಪಡೆದು ಸ್ವರ್ಗಲೋಕಕ್ಕೆ ಹೊರಟುಹೋದನು. ಎಲೈ ಶ್ರುತಕೀರ್ತಿಯೆ! ಬಳಿಕ ಸಾಯಂಕಾಲವಾಗಲು ಆ ಬ್ರಾಹ್ಮಣನು ವ್ಯಾಧನಿಂದ ಬಹುವಾಗಿ ಉಪಚರಿಸಲ್ಪಟ್ಟನು.

೪೯—೫೨. ಆತನು ಸಾಯಂಸಮಯದ ಸಂಧ್ಯಾವಂದನಾದಿಗಳನ್ನು ಮುಗಿಸಿಕೊಂಡು ತನ್ನನ್ನು ನೋಡಲು ಬಂದ ವ್ಯಾಧಸಮೂಹಗಳನ್ನು ನೋಡುತ್ತ, ರಾತ್ರಿಶೇಷವನ್ನೆಲ್ಲ ಭೂಪಾಲಕರ, ದೇವತೆಗಳ ಮತ್ತು ಮಹಾತ್ಮರ ಬಹುವಿಧ ಚರಿತ್ರೆಗಳಿಂದಲೂ, ಭಗವಂತನ ಅವತಾರಗಳ ಲೀಲಾಖ್ಯಾನಗಳಿಂದಲೂ ಕಳೆದು,

ಧ್ಯಾಯಂಶ್ಚ ತಾರಕಂ ಬ್ರಹ್ಮ ಕೃತ್ವಾ ಶೌಚಾದಿಸತ್ಕ್ರಿಯಾಂ ।
ವೈಶಾಖೇ ಮೇಷಗೇ ಸೂರ್ಯೇ ಸ್ನಾತ್ವಾ ಪ್ರಾಕ್ಚ ಭಗೋದಯಾತ್ ॥೫೦॥
ಕೃತ್ವಾ ಸಂಧ್ಯಾದಿಕಂ ಕರ್ಮ ಯಥಾ ಸಂತರ್ಪ್ಯ ಚಾಽಖಿಲಾನ್ ।
ವ್ಯಾಧಮಾಹೂಯ ಹೃಷ್ಟಾತ್ಮಾ ಮೂರ್ಧ್ನಿ ಪ್ರೋಕ್ಷ್ಯ ನಿರೀಕ್ಷ್ಯ ಚ ॥೫೨॥
ರಾಮೇತಿ ದ್ವ್ಯಕ್ಷರಂ ನಾಮ ದದೌ ವೇದಾಧಿಕಂ ಶುಭಂ ।
ವಿಷ್ಣೋರೇಕೈಕನಾಮಾಪಿ ಸರ್ವವೇದಾಧಿಕಂ ಮತಂ ॥ ೫೩ ॥
ತೇಭ್ಯಶ್ಚಾನಂತನಾಮಭ್ಯೋಽಧಿಕ ನಾಮ್ನಾಂ ಸಹಸ್ರಕಂ ।
ತಾದೃಙ್ನಾಮಸಹಸ್ರೇಣ ರಾಮನಾಮ ಸಮಂ ಮತಂ ॥ ೫೪ ॥
ತಸ್ಮಾದ್ರಾಮೇತಿ ತನ್ನಾಮ ಜಪ ವ್ಯಾಧ ನಿರಂತರಂ ।
ಧರ್ಮಾನೇತಾನ್ ಕುರು ವ್ಯಾಧ ಯಾವದಾಮರಣಾಂತಿಕಂ ॥ ೫೫ ॥
ತತಸ್ತೇ ಭವಿತಾ ಜನ್ಮ ವಲ್ಮೀಕಸ್ಯ ಋಷೇಃ ಕುಲೇ ।
ವಾಲ್ಮೀಕಿರಿತಿ ನಾಮ್ನಾ ಚ ಭೂಮೌ ಖ್ಯಾತಿಮವಾಪ್ಸ್ಯಸಿ ॥ ೫೬ ॥

ಬ್ರಾಹ್ಮಮುಹೂರ್ತವೆಂಬ ಉಷಃಕಾಲದಲ್ಲಿ ಎದ್ದು ಕೈ ಕಾಲುಗಳನ್ನು ತೊಳೆದು, ಮಾತುಗಳನ್ನು ನಿಲ್ಲಿಸಿ, ತಾರಕಬ್ರಹ್ಮವನ್ನು ಕುರಿತು ಚಿಂತನೆಯನ್ನುಮಾಡಿ, ಶೌಚವೇ ಮೊದಲಾದ ನಿತ್ಯಕರ್ಮಗಳನ್ನು ತೀರಿಸಿಕೊಂಡು, ವೈಶಾಖಮಾಸದಲ್ಲಿ ಸೂರ್ಯನು ಮೇಷರಾಶಿಗತನಾಗಿದ್ದುದರಿಂದ ಸೂರ್ಯೋದಯಕ್ಕೆ ಮುಂಚೆಯೇ ಸ್ನಾನವನ್ನು ಮುಗಿಸಿ, ಸಂಧ್ಯಾಗಾಯತ್ರ್ಯಾದಿಗಳನ್ನು ಮಾಡಿ, ದೇವರ್ಷಿಪಿತೃಗಳೇ ಮೊದಲಾದ ಎಲ್ಲರಿಗೂ ಉಚಿತರೀತಿಯಿಂದ ಸಂತೋಷಗೊಳಿಸಿ, ಸಂಹೃಷ್ಟಾಂತರಂಗನಾಗಿ ವ್ಯಾಧನನ್ನು ಸಮೀಪಕ್ಕೆ ಕರೆದು ತಲೆಯಲ್ಲಿ ತೀರ್ಥೋದಕವನ್ನು ಪ್ರೋಕ್ಷಿಸಿ ನೋಡುತ್ತ ವೇದವಾಕ್ಯಗಳಿಗಿಂತಲೂ ಉತ್ತಮವೂ ಮಂಗಳಪ್ರದವೂ ಆದ "ರಾಮ" ಎಂಬ ಎರಡಕ್ಷರದ ಮಂತ್ರವನ್ನು ಆತನಿಗೆ ಉಪದೇಶಿಸಿದನು. "ಮಹಾವಿಷ್ಣುವಿನ ಒಂದೊಂದು ನಾಮವೂ ಚತುರ್ವೇದಗಳಿಗೂ ಅಧಿಕವೆಂದು ಹೇಳಲ್ಪಟ್ಟಿರುವುದು.

೫೪. ಆತನ ಅನಂತಗಳಾದ ನಾಮಗಳಲ್ಲಿಯೂ ಸಹಸ್ರನಾಮ ಕದಂಬವು ಉತ್ತಮವು. ಶ್ರೀರಾಮನಾಮವಾದರೊ, ಅಂತಹ ಮಹಾಮಹಿಮಾನ್ವಿತವಾದ ಒಂದು ಸಹಸ್ರನಾಮಕ್ಕೆ ಸಮವೆನಿಸಿರುವುದು.

೫೫. ಎಲೈ ವ್ಯಾಧನೆ! ಆದುದರಿಂದ "ರಾಮ" ಎಂಬುವ ಸ್ವಾಮಿಯ ನಾಮವನ್ನೇ ಜಪಿಸುತ್ತಿರು. ಮತ್ತು ನಾನು ನಿರೂಪಿಸಿರುವ ವೈಶಾಖಧರ್ಮಗಳೆಲ್ಲವನ್ನೂ ಮರಣಕಾಲದ ಪರ್ಯಂತವೂ ಶ್ರದ್ಧೆಯಿಂದ ನಡೆಸುತ್ತಿರು.

೫೬. ಆದರ ಫಲವಾಗಿ ನಿನಗೆ ವಲ್ಮೀಕನೆಂಬ ಮಹರ್ಷಿಯ ಉತ್ತಮ

ಇತಿ ವ್ಯಾಧಂ ಸಮಾದಿಶ್ಯ ಪ್ರತಸ್ಥೇ ದಕ್ಷಿಣಾಂ ದಿಶಂ ।
ವ್ಯಾಧೋಽಪಿ ತಂ ಪರಿಕ್ರಮ್ಯ ಪ್ರಣಮ್ಯ ಚ ಪುನಃ ಪುನಃ ॥ ೫೭ ॥
ಕಿಂಚಿದ್ದೂರಾನುಗೋ ಭೂತ್ವಾ ಸ ರುದನ್ವಿರಹಾತುರಃ ।
ಯಾವದ್ದೃಷ್ಟಿಪಥಂ ತಾವತ್ ಪಶ್ಯಂಸ್ತಸ್ಯ ಗತಿಂ ಪುನಃ ॥ ೫೮ ॥
ಪುನರ್ನಿವವೃತೇ ಕೃಚ್ಛ್ರಾತ್ ತಮೇವ ಹೃದಿ ಚಿಂತಯನ್ ।
ವನಂ ನಿರ್ಮಾಯ ತನ್ಮಾರ್ಗೇ ಪ್ರಪಾಂ ಕೃತ್ವಾ ಸುನಿರ್ಮಲಾಂ ॥ ೫೯ ॥
ಅತಿಯೋಗ್ಯಾನಿಮಾನ್ ಧರ್ಮಾನ್ ವೈಶಾಖೋಕ್ತಾಂಶ್ಚಕಾರ ಹ ।
ವನ್ಯೈಃ ಕಪಿತ್ಥಪನಸೈರ್ಜಂಬೂಚೂತಾದಿಭಿಃ ಫಲೈಃ ॥ ೬೦ ॥
ಮಾರ್ಗಗಾನಾಂ ಶ್ರಮಾರ್ತಾನಾಂ ಆಹಾರಂ ಪರಿಕಲ್ಪಯನ್ ।
ಉಪಾನದ್ಭಿಶ್ಚಂದನೈಶ್ಚ ಛತ್ರೈಶ್ಚ ವ್ಯಜನೈರಪಿ ॥ ೬೧ ॥
ವಾಲುಕಾಸ್ತರಣೋಪೇತಚ್ಛಾಯಾಭಿಶ್ಚ ಕ್ವಚಿತ್ಕ್ವಚಿತ್ ।
ಅಜಹಾರಾಥ ಪಾಂಥಾನಾಂ ಶ್ರಮಂ ಸ್ವೇದೋದ್ಭವಂ ತಥಾ ॥ ೬೨ ॥

ಕುಲದಲ್ಲಿ ಜನ್ಮವುಂಟಾಗುವುದು. ನೀನು ವಾಲ್ಮೀಕಿಯೆಂಬ ಹೆಸರಿನಿಂದ ಭೂಮಂಡಲದಲ್ಲಿ ವಿಶೇಷವಾದ ಪ್ರಖ್ಯಾತಿಯನ್ನು ಪಡೆಯುವೆ."

೫೭. ಇಂತೆಂದು ವ್ಯಾಧನಿಗೆ ಅಪ್ಪಣೆಯನ್ನು ಮಾಡಿ ಆ ಶಂಖಬ್ರಾಹ್ಮಣನು ದಕ್ಷಿಣದಿಕ್ಕನ್ನು ಕುರಿತು ಪ್ರಯಾಣಮಾಡಿದನು. ವ್ಯಾಧನೂ ಸಹ ಆತನಿಗೆ ಪ್ರದಕ್ಷಿಣೆಯನ್ನುಮಾಡಿ ಪುನಃ ಪುನಃ ನಮಸ್ಕರಿಸಿದನು.

೫೮–೫೯. ಸ್ವಲ್ಪದೂರದವರೆವಿಗೂ ಆತನನ್ನು ಹಿಂಬಾಲಿಸಿ ಆತನ ಅಗಲಿಕೆಯಿಂದ ದುಃಖಗೊಂಡು ಅಳುತ್ತ, ಆತನು ಕಣ್ಣಿಗೆ ಬೀಳುವವರೆಗೂ ಆತನ ಮಾರ್ಗವನ್ನೇ ನೋಡುತ್ತಿರುವವನಾಗಿ, ಆತನನ್ನೇ ಕುರಿತು ಮನಸ್ಸಿನಲ್ಲಿ ಚಿಂತಿಸುತ್ತ ಬಹಳ ಕಷ್ಟದಿಂದ ತನ್ನ ಶಿಬಿರಕ್ಕೆ ಹಿಂದಿರುಗಿದನು. ಛಾಯಾರಹಿತವಾದ ಆ ಮಾರ್ಗದಲ್ಲಿ ಮರಗಳನ್ನು ನೆಡಿಸಿ ವನವನ್ನು ಬೆಳಸಿ ನಿರ್ಮಲವಾದ ಪಾನೀಯಶಾಲೆಯೊಂದನ್ನು ಅಲ್ಲಿ ನಿರ್ಮಾಣಮಾಡಿದನು.

೬೦. ಅರಣ್ಯದಲ್ಲಿ ಸಂಗ್ರಹಿಸಿದ ಬೇಲ, ಹಲಸು, ನೇರಿಳೆ, ಮಾವು ಮುಂತಾದ ವಿವಿಧ ಫಲಗಳಿಂದ ಸರ್ವೋತ್ಕೃಷ್ಟಗಳಾದ ಈ ವೈಶಾಖ ಧರ್ಮಗಳೆಲ್ಲವನ್ನೂ ಶ್ರದ್ಧಾನ್ವಿತನಾಗಿ ಮಾಡುತ್ತಿದ್ದನು.

೬೧. ಮಾರ್ಗದಲ್ಲಿ ನಡೆದು ಬಂದು ಆಯಾಸಗೊಂಡವರಿಗೆ ಆಹಾರವನ್ನು ಸಮರ್ಪಿಸುತ್ತ ಪಾದರಕ್ಷೆಗಳಿಂದಲೂ, ಚಂದನಗಳಿಂದಲೂ, ಛತ್ರದಾನಗಳಿಂದಲೂ, ಬೀಸಣಿಗೆಗಳಿಂದಲೂ ಅವರನ್ನುಪಚರಿಸುತ್ತಿದ್ದನು.

೬೨. ಕೆಲವೆಡೆಗಳಲ್ಲಿ ಮರಗಳ ನೆರಳುಗಳಲ್ಲಿ ತಂಪಾದ ಮರಳನ್ನು ಚೆಲ್ಲಿ

ಪ್ರಾತಃ ಸ್ನಾತ್ವಾ ದಿವಾರಾತ್ರಂ ಜಪನ್ಪ್ರಾಪ್ನೋತಿ ವೈ ಮನುಂ ।
ವ್ಯಾಧಜನ್ಮನಿ ನಾಮಾಸೌ ವಲ್ಮೀಕಸ್ಯ ಸುತೋಽಭವತ್ ॥ ೬೩ ॥
ಕೃಣುರ್ನಾಮಮುನಿಃ ಕಶ್ಚಿತ್ ತಸ್ಮಿನ್ನೇವ ಸರೋವರೇ ।
ತಪೋ ವೈ ದುಸ್ತರಂ ತೇಪೇ ಬಾಹ್ಯವ್ಯಾಪಾರವರ್ಜಿತಃ ॥ ೬೪ ॥
ವಲ್ಮೀಕಮಭವದ್ದೇಹೇ ತಸ್ಯ ಕಾಲೇನ ಭೂಯಸಾ ।
ವಲ್ಮೀಕ ಇತಿ ತಂ ಪ್ರಾಹುಃ ಅತೋ ವೈ ಮುನಿಪುಂಗವಂ ॥ ೬೫ ॥
ಪಶ್ಚಾತ್ತಪೋವಿರಾಮಾಂತೇ ಕೃಷ್ಣೌ ಸ್ಮೃತಿಪಥಂಗತೇ ।
ಸ್ತ್ರೀಯೋಽನುಸ್ಮರತೋ ರಾಜನ್ ಸ್ಖಲಿತಂ ಚೇಂದ್ರಿಯಂ ಮುನೇಃ ॥೬೬॥
ಜಗ್ರಾಹ ಶೈಲೂಷೀ ಕಾಚಿತ್ ತಸ್ಯಾಂ ಜಜ್ಞೇ ವನೇಚರಃ ।
ವಾಲ್ಮೀಕಿರಿತಿ ವಿಖ್ಯಾತೋ ಭುವನೇಷು ಮಹಾಯಶಾಃ ॥ ೬೭ ॥
ಯೋ ವೈ ರಾಮಕಥಾಂ ದಿವ್ಯಾಂ ಸ್ವೈಃ ಪ್ರಬಂಧೈರ್ಮನೋಹರೈಃ ।
ಲೋಕೇ ಪ್ರಖ್ಯಾಪಯಾಮಾಸ ಕರ್ಮಬಂಧನಿಕೃಂತನೀಂ ॥ ೬೮ ॥

---

ಅದರ ಮೇಲೆ ಚಾಪೆಗಳನ್ನುಹಾಸಿ ಪಥಿಕರ ವ್ಯೈಬೆವರಿನಿಂದಾಗುವ ಶ್ರಮವನ್ನು ಕಳೆಯುತ್ತಿದ್ದನು.

೬೩. ಪ್ರಾತಃಕಾಲದಲ್ಲಿ ಸ್ನಾನವನ್ನುಮಾಡಿ ಅಹೋರಾತ್ರಗಳಲ್ಲಿಯೂ ನಿರಂತರವಾಗಿ ಪರಮಾತ್ಮನ ರಾಮನಾಮವನ್ನೇ ಜಪಿಸುತ್ತ ವ್ಯಾಧನ ಜನ್ಮವನ್ನು ಉಚಿತಕಾಲದಲ್ಲಿ ಕಳೆದುಕೊಂಡು ವಲ್ಮೀಕಮಹರ್ಷಿಯ ಮಗನಾಗಿ ಹುಟ್ಟಿದನು.

೬೪. ಕೃಣುವೆಂಬ ಆ ಮಹಾಮುನಿಯು ಆ ಸರೋವರದ ಸಮೀಪ ದಲ್ಲಿಯೇ ದುಸ್ತರವಾದ ತಪಸ್ಸನ್ನುಮಾಡುತ್ತ ಬಾಹ್ಯಪ್ರಪಂಚದ ವ್ಯವಹಾ ಗಳನ್ನೇ ವರ್ಜಿಸಿದ್ದನು.

೬೫. ಇಂತು ಬಹಳವಾದ ಕಾಲವು ಕಳೆದುಹೋಗಲು ಆತನ ಸುತ್ತಲೂ ಒಂದು ಹುತ್ತವು ಬೆಳೆಯತೊಡಗಿತು. ಆದುದರಿಂದ ಅಲ್ಲಿನ ಜನರೆಲ್ಲರೂ ಆ ಮುನಿಶ್ರೇಷ್ಠನನ್ನು ವಲ್ಮೀಕನೆಂದೇ ಕರೆಯತೊಡಗಿದರು.

೬೬. ತನ್ನ ತಪಸ್ಸು ಪರಿಸಮಾಪ್ತಿಯನ್ನು ಹೊಂದಲು ಆ ಕೃಣು ಮಹರ್ಷಿಯು ಹೊರಗಿನ ಪ್ರಪಂಚದ ಸ್ಮರಣೆಯನ್ನು ತಂದುಕೊಂಡನು. ಆ ಸಮಯದಲ್ಲಿ ಆತನೆದುರಿನಲ್ಲಿ ಓಡಾಡುತ್ತಿದ್ದ ಹಲವು ಸ್ತ್ರೀಯರನ್ನು ಕುರಿತು ಚಿಂತಿಸುತ್ತಿದ್ದಂತೆಯೇ ಆ ಮಹಾಮುನಿಗೆ ಇಂದ್ರಿಯಸ್ಖಲನವಾಯಿತು.

೬೭. ಅದನ್ನು ಒಬ್ಬ ಗಂಧರ್ವಸ್ತ್ರೀಯಳು ಸ್ವೀಕರಿಸಿದಳು. ಆಕೆಯಲ್ಲಿ ಒಬ್ಬ ವನೇಚರನುದ್ಭವಿಸಿದನು. ಆತನೇ ವಾಲ್ಮೀಕಿಯೆಂಬ ಹೆಸರಿನಿಂದ ವಿಖ್ಯಾತ ನಾಗಿ ಮೂರುಲೋಕಗಳಲ್ಲಿಯೂ ವಿಶಾಲವಾದ ಯಶಸ್ಸನ್ನು ಪಡೆದನು.

೬೮. ಆತನೇ ಸಕಲ ಕರ್ಮಬಂಧಗಳನ್ನು ಕಡಿದುಹಾಕುವ ದಿವ್ಯವಾದ

**ಶ್ರುತದೇವ ಉವಾಚ :—**

**ಪಶ್ಯ ವೈಶಾಖಮಾಹಾತ್ಮ್ಯಂ ಭೂಪಾಲಾದ್ಯಾಪಿ ಭೂತಿದಂ ।**
**ವ್ಯಾಧೋಽಪ್ಯುಪಾನಹೌ ದತ್ವಾ ಋಷಿತ್ವಂ ಪ್ರಾಪ ದುರ್ಲಭಂ ॥ ೬೯ ॥**
**ಯ ಇದಂ ಪರಮಾಖ್ಯಾನಂ ಪಾಪಘ್ನಂ ರೋಮಹರ್ಷಣಂ ।**
**ಶೃಣುಯಾಚ್ಛ್ರಾವಯೇದ್ವಾಽಪಿ ನ ಭೂಯಃ ಸ್ತನಪೋ ಭವೇತ್ ॥೭೦॥**

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ದ್ವಿತೀಯೇ ವೈಷ್ಣವಖಂಡೇ ವೈಶಾಖಮಾಸಮಾಹಾತ್ಮ್ಯೇ ನಾರದಾಂಬರೀಷಸಂವಾದೇ "ವ್ಯಾಧೋಪಾಖ್ಯಾನೇ ವಾಲ್ಮೀಕೇರ್ಜನ್ಮಕಥನಂ" ನಾಮೈಕವಿಂಶೋಽಧ್ಯಾಯಃ

---

ರಾಮಕಥೆಯನ್ನು ತನ್ನ ಮನೋಹರಗಳಾದ ಪ್ರಬಂಧಗಳಿಂದ ಭೂಲೋಕದಲ್ಲಿ ಶಾಶ್ವತವಾಗಿರುವಂತೆ ಸ್ಥಾಪಿಸಿದನು.

೬೯. ಶ್ರುತದೇವನು ಹೇಳುತ್ತಾನೆ:—ಎಲೈ ಮಹಾರಾಜನೆ! ವೈಶಾಖ ಮಾಸದ ಮಾಹಾತ್ಮ್ಯವನ್ನು ನೋಡಿದೆಯಾ! ಇಂದಿಗೂ ಸಹ ಇದು ಸಕಲೈಶ್ವರ್ಯಗಳನ್ನೂ ಕೈಗೂಡಿಸುವುದು. ನೀಚನಾದ ವ್ಯಾಧನೂ ಸಹ ಪಾದರಕ್ಷೆಗಳನ್ನು ಬ್ರಾಹ್ಮಣನಿಗೆ ಕೊಟ್ಟುದರಿಂದ ಅತ್ಯಂತ ದುರ್ಲಭವಾದ ಮಹರ್ಷಿತ್ವವನ್ನು ಪಡೆದನು.

೭೦. ಸಕಲಕಲ್ಮಷನಾಶಕವೂ, ರೋಮಾಂಚವನ್ನುಂಟುಮಾಡುವುದೂ ಆದ ಈ ಅದ್ಭುತ ಚರಿತ್ರೆಯನ್ನು ಯಾವ ಮಾನವನು ಕೇಳುವನೊ, ಯಾವನು ಇತರರಿಗೆ ಶ್ರವಣಮಾಡಿಸುವನೊ, ಅವನು ಪುನಃ ತಾಯಿಯ ಸ್ತನ್ಯವನ್ನು ಪಾನ ಮಾಡುವುದಿಲ್ಲ.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀ ಸ್ಕಾಂದಮಹಾಪುರಾಣದ ಎರಡನೆಯ ವೈಷ್ಣವಖಂಡದ ವೈಶಾಖಮಾಸಮಹಾತ್ಮ್ಯದ ನಾರದಾಂಬರೀಷಸಂವಾದದಲ್ಲಿ "ವಾಲ್ಮೀಕಿಜನ್ಮಕಥನ"ವೆಂಬ ಇಪ್ಪತ್ತೊಂದನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

# ಅಥ ದ್ವಾವಿಂಶೋಽಧ್ಯಾಯಃ

## ಕಲಿಧರ್ಮನಿರೂಪಣೇ ಪಿತೃಮುಕ್ತಿವರ್ಣನಂ

**ಮೈಥಿಲೇಯ ಉವಾಚ :—**

**ಕಾ ಹ್ಯಸ್ಮಿನ್ತಿಥಯಃ ಪುಣ್ಯಾ ಮಾಸೇ ವೈಶಾಖಸಂಜ್ಞಕೇ ।**
**ಕಾನಿ ದಾನಾನಿ ಶಸ್ತಾನಿ ತಾಸು ತಾಸು ವಿಶೇಷತಃ**
**ಕಾಃ ಪ್ರಖ್ಯಾತಾಶ್ಚ ವೈ ಲೋಕ ಏತದಾಚಕ್ಷ್ವ ವಿಸ್ತರಾತ್ । ॥ ೧ ॥**

**ಶ್ರುತದೇವ ಉವಾಚ :—**

**ತ್ರಿಂಶಚ್ಚ ತಿಥಯಃ ಪುಣ್ಯಾ ವೈಶಾಖೇ ಮೇಷಗೇ ರವೌ ।**
**ಏಕಾದಶ್ಯಾಂ ಕೃತಂ ಪುಣ್ಯಂ ಕೋಟಿಕೋಟಿಗುಣಂ ಭವೇತ್ ॥ ೨ ॥**
**ಸರ್ವದಾನೇಷು ಯತ್ಪುಣ್ಯಂ ಸರ್ವತೀರ್ಥೇಷು ಯತ್ಫಲಂ ।**
**ಸಮವಾಪ್ನೋತಿ ವೈಶಾಖ ಏಕಾದಶ್ಯಾಂ ಜಲಾಪ್ಲುತಃ ॥ ೩ ॥**
**ಸ್ನಾನಂ ದಾನಂ ತಪೋ ಹೋಮೋ ದೇವತಾರ್ಚನ ಸತ್ಕ್ರಿಯಾಃ ।**
**ಕಥಾಯಾಃ ಶ್ರವಣಂ ಚೈವ ಸದ್ಯೋಮುಕ್ತಿವಿಧಾಯಕಂ ॥ ೪ ॥**

## ಕನ್ನಡದ ಅನುವಾದ

### ಕಲಿಮಾಹಾತ್ಮ್ಯನಿರೂಪಣ—ಪಿತೃಮುಕ್ತಿ ವರ್ಣನವು

೧. ಶ್ರುತಕೀರ್ತಿಯು ಹೇಳುತ್ತಾನೆ:—ವೈಶಾಖವೆಂದು ಪ್ರಸಿದ್ಧವಾದ ಈ ಮಾಸದಲ್ಲಿ ಯಾವ ಯಾವ ತಿಥಿಗಳು ಪುಣ್ಯಪ್ರದಗಳು? ಆಯಾ ತಿಥಿಗಳಲ್ಲಿ ಯಾವ ಯಾವ ದಾನಗಳು ವಿಶೇಷವಾಗಿ ಪ್ರಶಸ್ತಗಳಾಗಿರುವುವು? ಲೋಕದಲ್ಲಿ ಯಾವ ತಿಥಿಗಳು ಪ್ರಸಿದ್ಧಗಳಾಗಿರುವುವು? ಇದೆಲ್ಲವನ್ನೂ ನನಗೆ ವಿಸ್ತಾರವಾಗಿ ತಿಳಿಸು.

೨. ಶ್ರುತದೇವನು ಹೇಳುತ್ತಾನೆ:—ಸೂರ್ಯನು ಮೇಷರಾಶಿಯಲ್ಲಿರಲು ವೈಶಾಖಮಾಸದ ಮುವ್ವತ್ತು ತಿಥಿಗಳೂ ಪುಣ್ಯಕಾಲಗಳೇ ಆಗಿರುವುವು. ಆದರೆ ಏಕಾದಶಿಯಲ್ಲಿ ಮಾಡಿದ ಪುಣ್ಯಕರ್ಮವು ಕೋಟಿಕೋಟಿಗುಣಿತವಾದ ಪುಣ್ಯವನ್ನು ಕೊಡುವುದು.

೩. ಸಕಲ ದಾನಗಳಿಂದಲೂ ಯಾವ ಪುಣ್ಯವು ಲಭಿಸುವುದೊ, ಸಮಸ್ತ ತೀರ್ಥಗಳ ಸೇವೆಯಿಂದ ಯಾವ ಫಲವೊದಗುವುದೊ, ಅದೆಲ್ಲವನ್ನೂ ವೈಶಾಖ ಮಾಸದ ಏಕಾದಶಿಯ ದಿನದಲ್ಲಿ ಬಹಿಸ್ತೀರ್ಥದಲ್ಲಿ ಪ್ರಾತಃಸ್ನಾನವನ್ನು ಮಾಡಿದ ಪುರುಷನು ಪಡೆಯುವನು.

೪. ಆ ದಿವಸದ ಸ್ನಾನವು, ದಾನವು, ತಪಸ್ಸು, ಹೋಮ, ದೇವಪೂಜನವೇ

ರೋಗಾದ್ಯುಪಹತೋ ಯಸ್ತು ದಾರಿದ್ರ್ಯೇಣಾಪಿ ಪೀಡಿತಃ ।
ಶ್ರುತ್ವಾ ಕಥಾಮಿಮಾಂ ಪುಣ್ಯಾಂ ಕೃತಕೃತ್ಯೋ ಭವೇನ್ನರಃ ॥ ೫ ॥
ಅಸ್ನಾತ್ವಾ ಚಾಪ್ಯದತ್ವಾ ಚ ಯೇನ ನೀತಾ ಇಮಾ ಶುಭಾಃ ।
ಸ ಗೋಘ್ನಶ್ಚ ಕೃತಘ್ನಶ್ಚ ಪಿತೃಘ್ನಶ್ಚ ಮಹಾನ್ ಸ್ಮೃತಃ ॥ ೬ ॥
ಜಲಾಶಯಾಶ್ಚ ಸ್ವಾಧೀನಾಃ ಸ್ವಾಧೀನಂ ಚ ಕಲೇವರಂ ।
ಮಾಧವೋ ಮನಸಾ ಸೇವ್ಯಃ ಕಾಲಶ್ಚ ಸುಗುಣೋತ್ತಮಃ ॥ ೭ ॥
ಸಾಧವಶ್ಚ ದಯಾವಂತಃ ಕೋ ನ ಸೇವೇತ ಮಾಧವಂ ॥ ೮ ॥
ದರಿದ್ರೈಶ್ಚ ಧನಾಢ್ಯೈಶ್ಚ ಪಂಗುಭಿಶ್ಚಾಂಧಕೈಸ್ತಥಾ ।
ಷಂಡೈಶ್ಚ ವಿಧವಾಭಿಶ್ಚ ನಾರೀಭಿಶ್ಚ ನರೈಸ್ತಥಾ । ॥ ೯ ॥
ಕುಮಾರಯುವವೃದ್ಧೈಶ್ಚ ರೋಗಾರ್ತೈರಪಿ ಭೂಮಿಪ
ಅತೀವ ಸುಖಸಾಧ್ಯೋ ಹಿ ಧರ್ಮೋ ವೈಶಾಖಗೋಚರಃ ॥ ೧೦ ॥

ಮೊದಲಾದ ಸತ್ಕ್ರಿಯೆಗಳು, ಹರಿಕಥಾಶ್ರವಣವು ಮುಂತಾದುದೆಲ್ಲವೂ ತತ್‌ಕ್ಷಣದಲ್ಲಿಯೇ ಮುಕ್ತಿಯನ್ನು ಕೊಡುವ ಸಾಮರ್ಥ್ಯವುಳ್ಳದುದಾಗಿರುವುದು.

೫. ಯಾವನು ರೋಗಾದಿಗಳಿಂದ ಪೀಡಿತನಾಗಿರುವನೊ, ಯಾವನು ದಾರಿದ್ರ್ಯದುಃಖವನ್ನನುಭವಿಸುತ್ತಿರುವನೊ, ಅವನು ಈ ಪುಣ್ಯಚರಿತ್ರೆಯನ್ನು ಕೇಳಿ ಸಕಲ ಇಷ್ಟಾರ್ಥಗಳನ್ನೂ ಹೊಂದುವನು.

೬. ಸ್ನಾನವನ್ನು ಮಾಡದೆಯೂ ದಾನಗಳನ್ನು ನೀಡದೆಯೂ ಯಾವನು ಈ ಮುವ್ವತ್ತು ತಿಥಿಗಳನ್ನೂ ಕಳೆಯುವನೊ, ಅವನೇ ಗೋಹತ್ಯೆಯನ್ನು ಮಾಡಿದವನು, ಕೃತಘ್ನನು, ಪಿತೃಮಾತೃಗಳನ್ನು ಸಂಹರಿಸಿದವನೆಂದು ಸ್ಮೃತಿಗಳು ಹೇಳುವುವು.

೭. ಜಲಾಶಯಗಳು ಯಥೇಚ್ಛವಾಗಿರುವುವು. ಶರೀರವೂ ಸ್ವಾಧೀನದಲ್ಲಿರುವುದು. ಆದುದರಿಂದ ಸಕಲ ಸತ್ಫಲಗಳನ್ನು ಕೊಡುವ ಉತ್ತಮವಾದ ವೈಶಾಖಮಾಸವನ್ನು ಮನಃಪೂರ್ವಕವಾಗಿ ಸೇವಿಸಬೇಕು.

೮. ಈ ಸಮಯದಲ್ಲಿ ಸಾಧುಗಳೂ ದಯಾಭರಿತರಾಗಿ ಅನುಗ್ರಹಿಸುವರು. ಅಂತಹ ವೈಶಾಖಮಾಸವನ್ನು ಯಾವನು ತಾನೆ ಸೇವಿಸುವುದಿಲ್ಲ ?

೯–೧೦. ದರಿದ್ರರಿಗೂ, ಧನವಂತರಿಗೂ, ಕುಂಟರಿಗೂ, ಕುರುಡರಿಗೂ, ನಪುಂಸಕರಿಗೂ, ವಿಧವೆಯರಿಗೂ, ಸ್ತ್ರೀಯರಿಗೂ, ಪುರುಷರಿಗೂ, ಮಕ್ಕಳಿಗೂ, ಯುವಕಯುವತಿಯರಿಗೂ, ವೃದ್ಧರಿಗೂ, ರೋಗಪೀಡಿತರಾದವರಿಗೂ ಕೂಡ

ಮಾಸಮೇನಮನುಪ್ರಾಪ್ಯ ಧರ್ಮಾನ್ಕುರು ಇಮಾನ್ ಶುಭಾನ್ ।
ಕೋ ನ ಯತ್ನಂ ಚ ಕುರುತೇ ತಸ್ಮಾತ್ಕೋ ನ ಪರಃ ಶುಭಃ ॥ ೧೧ ॥
ಯೋಽತೀವಸುಲಭಾನ್ ಧರ್ಮಾನ್ ನ ಕರೋತಿ ನರಾಧಮಃ ।
ತಸ್ಯೈವ ಸುಲಭಾ ಲೋಕಾ ನಾರಕಾ ನಾತ್ರ ಸಂಶಯಃ ॥ ೧೨ ॥
ಅಥಾತಃ ಸಂಪ್ರವಕ್ಷ್ಯಾಮಿ ತಸ್ಮಿನ್ಮಾಸೇ ಚ ಕೋತ್ತಮಾ ।
ತಾಂ ತಿಥೀಂ ಸರ್ವಪಾಪಘ್ನೀಂ ದಧ್ನಸ್ಸಾರಮಿವೋದ್ಧೃತಾಂ ॥ ೧೩ ॥
ಚೈತ್ರೇ ಮಾಸಿ ಮಹಾಪುಣ್ಯೇ ಮೇಷಸಂಸ್ಥೇ ದಿವಾಕರೇ ।
ಪಾಪಘ್ನೀ ಪಿತೃದೈವತ್ಯಾ ಗಯಾಕೋಟಿಫಲಪ್ರದಾ ॥ ೧೪ ॥
ಅತ್ರೈವ ಶ್ರೂಯತೇ ಪುಣ್ಯಾ ಪಿತೃಗಾಥಾ ಪುರಾತನೀ ।
ಶೃಣು ತಾಂ ಸತ್ಕಥಾಂ ರಾಜನ್ ಸಾವರ್ಣೌ ಶಾಸತಿ ಕ್ಷಿತಿಂ ॥ ೧೫ ॥

---

ವೈಶಾಖಮಾಸ ಕರ್ತವ್ಯವಾದ ಧರ್ಮಾಚರಣೆಯು ಅತ್ಯಂತ ಸುಲಭಸಾಧ್ಯವಾಗಿರುವುದು.

೧೧. ಈ ಮಾಸವು ಪ್ರಾಪ್ತವಾಗಲು ಹಿಂದೆ ನಿರೂಪಿಸಿದ ಸಕಲ ಪುಣ್ಯಪ್ರದಗಳಾದ ಧರ್ಮಗಳನ್ನೂ ಆಚರಿಸು. ಇವುಗಳಲ್ಲಿ ಯಾವನು ತಾನೆ ಪ್ರಯತ್ನವನ್ನು ಮಾಡುವುದಿಲ್ಲ? ಆತನಿಗಿಂತಲೂ ಭಾಗ್ಯಶಾಲಿಯಾದವನು ಬೇರೆ ಯಾವನಿರುವನು?

೧೨. ಯಾವ ಮನುಷ್ಯಾಧಮನು ಬಹಳ ಸುಲಭಸಾಧ್ಯಗಳಾದ ಈ ಧರ್ಮಗಳನ್ನಾಚರಿಸುವುದಿಲ್ಲವೊ, ಅವನಿಗೆ ನರಕಲೋಕದ ಕಷ್ಟಗಳು ಸುಲಭವಾಗಿಯೇ ಪ್ರಾಪ್ತಗಳಾಗುವುವೆಂಬುದರಲ್ಲಿ ಸಂಶಯವಿಲ್ಲ.

೧೩. ಇನ್ನು ಆ ಮಾಸದಲ್ಲಿ ಯಾವ ತಿಥಿಯು ಸರ್ವೋತ್ತಮವೆಂದು ಕೇಳಿದ ಪ್ರಶ್ನೆಗೆ ಉತ್ತರವನ್ನು ಹೇಳುವೆನು. ಮಜ್ಜಿಗೆಯಿಂದ ಸಾರವಾದ ಬೆಣ್ಣೆಯನ್ನು ತೆಗೆದಂತೆ ಸಕಲ ತಿಥಿಗಳಲ್ಲಿಯೂ ಇದು ಸಮಸ್ತ ಪಾಪಗಳನ್ನು ಕಳೆಯುವುದೆಂದು ಪ್ರಸಿದ್ಧವಾಗಿರುವುದು.

೧೪. ಸೂರ್ಯನು ಮೇಷರಾಶಿಸ್ಥನಾಗಿರಲು ಪರಮ ಪುಣ್ಯತಮವಾದ ಚೈತ್ರಮಾಸದಲ್ಲಿ ಪಿತೃದೈವತ್ಯವೆಂಬ ಅಷ್ಟಕಾತಿಥಿಯು ಕೋಟಿಗಯಾಶ್ರಾದ್ಧಗಳ ಫಲವನ್ನು ಕೊಡುವುದಾಗಿರುವುದು.

೧೫. ಈ ವಿಷಯದಲ್ಲಿ ಪುಣ್ಯವರ್ಧಕವೂ ಪುರಾತನವೂ ಆದ ಪಿತೃಚರಿತ್ರೆಯೊಂದನ್ನು ಬಲ್ಲವರು ಹೇಳಿದುದನ್ನು ಕೇಳಿರುವೆನು. ಎಲೈ ಮಹಾರಾಜನೆ! ಸಾವರ್ಣಿಮನುವು ಪ್ರಜೆಗಳನ್ನು ರಕ್ಷಿಸುತ್ತಿದ್ದ ಕಾಲದಲ್ಲಿ ನಡೆದ ಸತ್ಕಥೆಯನ್ನು ಕೇಳುವವನಾಗು.

ತ್ರಿಂಶತ್ಕಲಿಯುಗಸ್ಯಾಂತೇ ಸರ್ವಧರ್ಮವಿವರ್ಜಿತೇ ।
ಆನರ್ತೇ ತು ದ್ವಿಜಃ ಕಶ್ಚಿತ್ ಧರ್ಮವರ್ಣ ಇತಿ ಶ್ರುತಃ ॥ ೧೬ ॥
ದೃಷ್ಟ್ವಾ ಕಲಿಯುಗೇ ರಾಜನ್ ಜನಾನ್ಪಾಪರತಾನ್ ಮುನಿಃ ।
ತಸ್ಯೈವ ಪ್ರಥಮೇ ಪಾದೇ ವರ್ಣಧರ್ಮವಿವರ್ಜಿತೇ ॥ ೧೭ ॥
ಸ ಕದಾಚಿತ್ಸತ್ರಯಾಗಂ ಮುನೀನಾಂ ತು ಮಹಾತ್ಮನಾಂ ।
ಅಗಮತ್ಪುಷ್ಕರೇ ಕ್ಷೇತ್ರೇ ಕುರ್ವತಾಂ ಮೌನಧಾರಿಣಾಂ ॥ ೧೮ ॥
ತತ್ರ ಚಾಸನ್ ಪುಣ್ಯಕಥಾ ಋಷೀಣಾಂ ಶಾಸ್ತ್ರಗೋಚರಾಃ ।
ತತ್ರ ಕೇಚಿತ್ಕಲಿಯುಗಂ ಪ್ರಶಶಂಸುಃ ಧೃತವ್ರತಾಃ ॥ ೧೯ ॥
ಕೃತೇ ಯದ್ವತ್ಸರಾತ್ಸಾಧ್ಯಂ ಪುಣ್ಯಂ ಮಾಧವತೋಷಣಂ ।
ತ್ರೇತಾಯಾಂ ಮಾಸತಸ್ಸಾಧ್ಯಂ ದ್ವಾಪರೇ ಪಕ್ಷತೋ ನೃಪ ॥ ೨೦ ॥
ತಸ್ಮಾದ್ದಶಗುಣಂ ಪುಣ್ಯಂ ಕಲೌ ವಿಷ್ಣುಸ್ಮೃತೇರ್ಭವೇತ್ ।
ಅತ್ಯಲ್ಪಮಪಿ ವೈ ಪುಣ್ಯಂ ಕಲೌ ಕೋಟಿಗುಣಂ ಭವೇತ್ ॥ ೨೧ ॥

---

೧೬. ಆ ಮನ್ವಂತರದ ಮುವ್ವತ್ತನೆಯ ಮಹಾ ಯುಗದ ಅಂತ್ಯ ಭಾಗವಾದ ಕಲಿಯುಗದಲ್ಲಿ ಸಕಲ ಧರ್ಮಗಳೂ ನಷ್ಟಗಳಾಗಿರಲು ಆನರ್ತವೆಂಬ ಹೆಸರಿನ ದೇಶದಲ್ಲಿ ಧರ್ಮವರ್ಣನಾಮಕನಾದ ಪ್ರಖ್ಯಾತನಾದ ಬ್ರಾಹ್ಮಣೋತ್ತಮನೊಬ್ಬನು ವಾಸಮಾಡುತ್ತಿದ್ದನು.

೧೭–೧೮. ಎಲೈ ರಾಜನೆ! ಕಲಿಯುಗದ ಪ್ರಥಮಪಾದವೇ ವರ್ಣಾಶ್ರಮ ಧರ್ಮರಹಿತವಾಗಿರಲು ಜನರೆಲ್ಲರೂ ಪಾಪಕೃತ್ಯಗಳಲ್ಲಿಯೇ ನಿರತರಾಗಿರುವುದನ್ನು ಕಂಡು ಆ ಮಹಾಮುನಿಯು ಒಮ್ಮೆ ಪುಷ್ಕರ ಕ್ಷೇತ್ರವನ್ನು ಸೇರಿ ಅಲ್ಲಿ ಮಹಾತ್ಮರಾದ ಮುನಿಗಳೆಲ್ಲರೂ ಮೌನಧಾರಿಗಳಾಗಿ ಸತ್ರಯಾಗವನ್ನು ಮಾಡುತ್ತಿದ್ದ ಪ್ರದೇಶಕ್ಕೆ ಆಗಮಿಸಿದನು.

೧೯. ಅಲ್ಲಿ ಶಾಸ್ತ್ರಗಳಲ್ಲಿ ನಿರೂಪಿಸಲ್ಪಟ್ಟಿರುವ ಅನೇಕ ಪುಣ್ಯಕಥೆಗಳು ಮಹರ್ಷಿಗಳಿಂದ ಅನುವಾದಮಾಡಲ್ಪಡುತ್ತಿದ್ದುವು. ಅವರಲ್ಲಿ ವ್ರತಧಾರಿಗಳಾದ ಕೆಲವರು ಕಲಿಯುಗವೇ ಸರ್ವೋತ್ತಮವಾದುದೆಂದು ಪ್ರಶಂಸೆಯನ್ನು ಮಾಡುತ್ತಿದ್ದರು.

೨೦. ಮಹಾರಾಜನೆ! ಕೃತಯುಗದಲ್ಲಿ ಒಂದು ಸಂವತ್ಸರದ ಪ್ರಯಾಸದಿಂದ ಪರಮಾತ್ಮನ ಪ್ರಸನ್ನತೆಯ ರೂಪವಾದ ಯಾವ ಪುಣ್ಯವು ಲಭಿಸುವುದೊ, ಅದನ್ನೇ ತ್ರೇತಾಯುಗದಲ್ಲಿ ಒಂದು ತಿಂಗಳಿನಲ್ಲಿಯೂ, ದ್ವಾಪರಯುಗದಲ್ಲಿ ಒಂದು ಪಕ್ಷದಿಂದಲೂ ಪಡೆಯಬಹುದು.

೨೧. ಆದರೆ ಕಲಿಯುಗದಲ್ಲಿ ಕೇವಲ ಒಂದು ಸಲ ಮಾತ್ರ ವಿಷ್ಣು ಸ್ಮರಣೆಯನ್ನು ಮಾಡಿದರೂ ಮೇಲೆ ಹೇಳಿದುದಕ್ಕೆ ದಶಗುಣವಾದ ಫಲವು

ದಯಾಪುಣ್ಯವಿಹೀನೇ ತು ದಾನಧರ್ಮವಿವರ್ಜಿತೇ ।
ದಯಾದಾನಂ ಚ ಕುರುತೇ ಸಕೃದುಚ್ಚಾರ್ಯ ವೈ ಹರಿಂ ॥ ೨೨ ॥
ಸ ಏವ ಚೋರ್ಧ್ವಗೋ ನೂನಂ ದುರ್ಭಿಕ್ಷೇ ಚಾನ್ನದಸ್ತಥಾ ।
ಏತತ್ಸಂಗಾವಸರೇ ನಾರದೋಽಭ್ಯೇತ್ಯ ವೈ ಮುನಿಃ ॥ ೨೩ ॥
ಕರೇಣೈಕೇನ ಶಿಶ್ನಂ ಚ ಜಿಹ್ವಾಂ ಚೈಕೇನ ವೈ ಹಸನ್ ।
ಪ್ರಗೃಹ್ಯೋನ್ಮತ್ತವತ್ತತ್ರ ನನರ್ತ ಮುನಿಸತ್ತಮಃ ॥ ೨೪ ॥
ಸಭ್ಯಾಸ್ತದಾ ತಮಿತ್ಯೂಚುಃ ಕಿಮೇತದಿತಿ ನಾರದ ।
ಪ್ರತ್ಯುವಾಚ ಸ ತಾನ್ ಸರ್ವಾನ್ ನೃತ್ಯಂ ಕುರ್ವನ್ಹಸನ್ ಸುಧೀಃ ॥೨೫॥
ಸಂತೋಷಾದ್ಯದಿಹ ಪ್ರೋಕ್ತಂ ನೃತ್ಯಾದಿಭಿರ್ಭಾವಿತಾತ್ಮಭಿಃ ।
ಸಿದ್ಧಾ ವಯಂ ನ ಸಂದೇಹಃ ಪುಣ್ಯೋಽಯಂ ಕಲಿರಾಗತಃ ॥ ೨೬ ॥
ತತ್ಸತ್ಯಂ ನ ಚ ಸಂದೇಹೋ ಬಹುಸ್ವಲ್ಪೇನ ಸಾಧ್ಯತೇ ।
ಸ್ಮರಣಾತ್ತೋಷಮಾಯಾತಿ ಕೇಶವಃ ಕ್ಲೇಶನಾಶನಃ ॥ ೨೭ ॥

---

ಲಭಿಸುವುದು. ಆಗ ಮಾಡಿದ ಅತ್ಯಲ್ಪ ಪುಣ್ಯಕಾರ್ಯವಾದರೂ ಕೋಟಿ ಗುಣಿತವಾದ ಫಲವನ್ನು ಕೊಡುವುದು.

೨೨. ದಯಾಪುಣ್ಯರಹಿತವೂ ದಾನಧರ್ಮವರ್ಜಿತವೂ ಆದ ಈ ಕಲಿಯುಗದಲ್ಲಿ ಒಂದು ಸಲವಾದರೂ ಶ್ರೀಹರಿಯ ನಾಮವನ್ನುಚ್ಚರಿಸುತ್ತ ಪ್ರಾಣಿಗಳಲ್ಲಿ ದಯೆಯುಳ್ಳವನಾಗಿ ದಾನವನ್ನು ಮಾಡಬೇಕು.

೨೩–೨೪. ಆತನೇ ನಿಜವಾಗಿಯೂ ಊರ್ಧ್ವಲೋಕಗಳಿಗೆ ಹೋಗಲು ಅರ್ಹನಾದವನು. ಆತನಂತೆಯೇ ದುರ್ಭಿಕ್ಷದಲ್ಲಿ ಅನ್ನದಾನವನ್ನು ಮಾಡಿದವನೂ ಸ್ವರ್ಗವನ್ನು ಪಡೆಯುವನು. ಇಂತೆಂದು ಮಹರ್ಷಿಗಳು ತಮ್ಮ ತಮ್ಮಲ್ಲಿಯೇ ವಿಚಾರವನ್ನು ಮಾಡುತ್ತಿರಲು ಮುನಿಶ್ರೇಷ್ಠನಾದ ನಾರದನು ಅಲ್ಲಿಗೆ ಬಂದು ಒಂದು ಕೈಯಲ್ಲಿ ಶಿಶ್ನವನ್ನೂ ಒಂದು ಕೈಯಲ್ಲಿ ನಾಲಿಗೆಯನ್ನೂ ಹಿಡಿದುಕೊಂಡು ಗಟ್ಟಿಯಾಗಿ ನಗುತ್ತ ಉನ್ಮತ್ತನಂತೆ ಅವರೆದುರಿನಲ್ಲಿ ನರ್ತನವನ್ನು ಮಾಡುತ್ತಿದ್ದನು.

೨೫–೨೬. ಅಲ್ಲಿ ನೆರೆದಿದ್ದ ಸಭಾಸದರೆಲ್ಲರೂ ಆತನನ್ನು ಕುರಿತು "ನಾರದನೆ? ಈ ನಿನ್ನ ಅಶ್ಲೀಲ ನರ್ತನದ ಅರ್ಥವಾದರೂ ಏನು?" ಎಂಬುದಾಗಿ ಪ್ರಶ್ನೆ ಮಾಡಲು ಆ ಪ್ರಾಜ್ಞನು ನಗುತ್ತಲೇ ನರ್ತಿಸುತ್ತಲೇ ಅವರೆಲ್ಲರನ್ನೂ ಕುರಿತು ಇಂತೆಂದನು. ಆತ್ಮಜ್ಞಾನನಿರತರಾದ ನೀವು ಉತ್ಸಾಹದಿಂದ ಕುಣಿದಾಡುತ್ತ "ನಾವು ಕೃತಕೃತ್ಯರೆಂಬುದರಲ್ಲಿ ಸಂದೇಹವಿಲ್ಲ; ಪಾವನವಾದ ಕಲಿಯುಗವು ಪ್ರಾಪ್ತವಾಗಿರುವುದು" ಎಂದು ಈಗ ಹೇಳುತ್ತಿರುವಿರಲ್ಲವೆ.

೨೭. ಅದು ಯಥಾರ್ಥವು. ಆದರ ವಿಷಯದಲ್ಲಿ ಯಾವ ಸಂಶಯವೂ

ತಥಾಪಿ ವಃ ಪ್ರವಕ್ಷ್ಯಾಮಿ ದುರ್ಘಟಂ ಚ ದ್ವಯಂ ಧ್ರುವಂ ।
ಶಿಶ್ನಸ್ಯ ನಿಗ್ರಹಃ ಪುತ್ರಾ ಜಿಹ್ವಾಯಾ ಅಪಿ ನಿತ್ಯಶಃ ॥ ೨೮ ॥
ದ್ವಯಂ ಯದ್ಧಿ ಭವೇದ್ಯಸ್ಯ ಸ ಏವ ಸ್ಯಾಜ್ಜನಾರ್ದನಃ ।
ಭವದ್ಭಿರ್ನಾತ್ರ ಸ್ಥಾತವ್ಯಂ ತಸ್ಮಾತ್ಕಲಿಯುಗಾಗಮೇ ॥ ೨೯ ॥
ಪಾಖಂಡಂ ಭಾರತಂ ಹಿತ್ವಾ ಸಂಚರಧ್ವಂ ಯಥಾಸುಖಂ ।
ಯತ್ರ ಕುತ್ರಾಪಿ ದೇಶೇಷು ಮನೋ ಯತ್ರ ಪ್ರಸೀದತಿ ॥ ೩೦ ॥
ಇತಿ ತದ್ವಚನಂ ಶ್ರುತ್ವಾ ಮುನಯಃ ಶಂಸಿತವ್ರತಾಃ ।
ಸತ್ರಂ ಸಮಾಪ್ಯ ಸಹಸಾ ಯಯುಸ್ತೇ ಚ ಯಥಾಸುಖಂ ॥ ೩೧ ॥
ಧರ್ಮವರ್ಣೋಽಪಿ ತಚ್ಛ್ರುತ್ವಾ ತ್ಯಕ್ತುಂ ಭೂಮಿಂ ಮನೋ ದಧೇ ।
ಸ ವ್ರತಂ ಚೋರ್ಧ್ವತೇಜಸ್ಕಂ ಧೃತ್ವಾ ದಂಡಕಮಂಡಲೂ ॥ ೩೨ ॥

ಇಲ್ಲವು. ಈ ಕಲಿಯುಗದಲ್ಲಿ ಸ್ವಲ್ಪ ಸಾಧನೆಯಿಂದಲೇ ಅಪರಿಮಿತವಾದ ಫಲವನ್ನು ಸಾಧಿಸಬಹುದು. ಕೇವಲ ಸ್ಮರಣೆಯಿಂದಲೇ ಸಕಲ ಕ್ಲೇಶಗಳನ್ನೂ ನಾಶಮಾಡುವ ಶ್ರೀಮನ್ನಾರಾಯಣನು ಸಂತೋಷಗೊಳ್ಳುವನು.

೨೮. ಮಕ್ಕಳಿರಾ! ಆದರೂ ನಿಮಗೊಂದು ವಿಷಯವನ್ನು ಹೇಳುತ್ತೇನೆ. ಎರಡು ಕಾರ್ಯಗಳು ಮಾತ್ರ ಈ ಯುಗದಲ್ಲಿ ಅತ್ಯಂತ ದುಸ್ಸಾಧ್ಯಗಳಾಗಿರುವುವು. ಮೊದಲನೆಯದು ಗುಹ್ಯೇಂದ್ರಿಯದ ನಿಗ್ರಹವು. ನಿರಂತರವೂ ಜಿಹ್ವೇಂದ್ರಿಯವನ್ನು ನಿಗ್ರಹಿಸುವುದೇ ಎರಡನೆಯದು.

೨೯. ಈ ಎರಡೂ ಯಾವನಿಗೆ ಸಾಧ್ಯವಾಗಿರುವುದೊ, ಅವನು ನಿಜವಾಗಿಯೂ ಜನಾರ್ದನನೇ ಆಗಿರುವನು. ಆದುದರಿಂದ ಕಲಿಯುಗವು ಪ್ರಾಪ್ತವಾಗಲು ನೀವುಗಳೆಲ್ಲರೂ ಇಲ್ಲಿ ನಿಂತಿರುವುದು ಉಚಿತವಲ್ಲವು.

೩೦. ಪಾಖಂಡಭೂಯಿಷ್ಠವಾದ ಈ ಭಾರತಭೂಮಿಯನ್ನು ಬಿಟ್ಟು ನಿಮ್ಮ ಮನಸ್ಸುಗಳು ಎಲ್ಲೆಲ್ಲಿ ಪ್ರಸನ್ನತೆಯನ್ನು ಪಡೆಯುವುವೊ, ಆಯಾ ಪ್ರದೇಶಗಳಲ್ಲಿ ನೀವು ಯಥೇಚ್ಛವಾಗಿ ಸಂಚರಿಸುತ್ತಿರಿ.

೩೧. ಇಂತೆಂದ ನಾರದನ ಅನುಜ್ಞೆಯನ್ನು ಕೇಳಿ ವ್ರತನಿರತರಾಗಿದ್ದ ಆ ಮಹಾಮುನಿಗಳೆಲ್ಲರೂ ತಮ್ಮ ಸತ್ರವನ್ನು ಜಾಗ್ರತೆಯಾಗಿ ಸಮಾಪ್ತಿಗೊಳಿಸಿ ತಮ್ಮ ಮನಬಂದಂತೆ ನಾಲ್ಕು ದಿಕ್ಕುಗಳಿಗೂ ಚೆದರಿಹೋದರು.

೩೨. ಧರ್ಮವರ್ಣನೂ ಸಹ ಈ ಸಂವಾದವೆಲ್ಲವನ್ನೂ ಕೇಳಿ ಆ ಪ್ರದೇಶವನ್ನು ತ್ಯಜಿಸಲು ಮನಸ್ಸನ್ನುಮಾಡಿದನು. ಆತನು ಉತ್ತಮವಾದ ಊರ್ಧ್ವರೇತಸರ ವ್ರತವನ್ನು ಸ್ವೀಕರಿಸಿ ದಂಡಕಮಂಡಲುಗಳನ್ನು ಧರಿಸಿದನು.

ಜಟಾವಲ್ಕಲಧಾರೀ ಚ ಭೂತ್ವಾ ಚೈವಂ ಯಯೌ ಪುನಃ ।
ಕಲೌ ಯುಗೇ ತ್ವನಾಚಾರಾನ್ ದ್ರಷ್ಟುಂ ವಿಸ್ಮಿತಮಾನಸಃ ॥ ೩೩ ॥
ತತ್ರಾಪಶ್ಯಜ್ಜನಾನ್ಘೋರಾನ್ ಪಾಪಾಚಾರರತಾನ್ ಖಲಾನ್ ।
ಪಾಖಂಡಿನೋ ದ್ವಿಜಾಸ್ಸರ್ವೇ ಶೂದ್ರಾ ಪ್ರವ್ರಾಜಿನಸ್ತಥಾ ॥ ೩೪ ॥
ಭರ್ತಾರಂ ದ್ವೇಷ್ಟಿ ಭಾರ್ಯಾ ಚ ಶಿಷ್ಯೋ ದ್ವೇಷ್ಟಿ ಗುರುಂ ತಥಾ ।
ಭೃತ್ಯಶ್ಚ ಸ್ವಾಮಿಹಂತಾ ಚ ಪುತ್ರಃ ಪಿತೃವಧೇ ರತಃ ॥ ೩೫ ॥
ಶೂದ್ರಪ್ರಾಯಾಃ ದ್ವಿಜಾಃ ಸರ್ವೇ ಬಸ್ತಪ್ರಾಯಾಶ್ಚ ಧೇನವಃ ।
ಗಾಥಾಪ್ರಾಯಾಸ್ತಥಾ ವೇದಾಃ ಕ್ರಿಯಾಸಾಮ್ಯಾ ಕ್ರಿಯಾಶ್ಶುಭಾಃ ॥ ೩೬ ॥
ಭೂತಪ್ರೇತಪಿಶಾಚಾದ್ಯಾಃ ಫಲದಾಸ್ತತ್ರದೇವತಾಃ ।
ತಾನೇವ ಶ್ರದ್ಧಯಾರ್ಚಂತಿ ಜನಾ ಪಾಪರತಾ ಶಿತಾಃ ॥ ೩೭ ॥
ಸರ್ವೇ ವ್ಯವಾಯನಿರತಾಃ ತದರ್ಥೇ ತ್ಯಕ್ತಜೀವಿತಾಃ ।
ಕೂಟಸಾಕ್ಷ್ಯಪ್ರವಕ್ತಾರಃ ಸದಾ ಕೈತವಮಾನಸಾಃ ॥ ೩೮ ॥

೩೩. ಜಡೆಗಳನ್ನೂ ನಾರುಡೆಗಳನ್ನೂ ಧರಿಸಿ ವಿಸ್ಮಯದಿಂದ ಕೂಡಿದ ಮನಸ್ಸುಳ್ಳವನಾಗಿ ಕಲಿಯುಗದಲ್ಲಿ ನಡೆಯುವ ಅನಾಚಾರಗಳೆಲ್ಲವನ್ನೂ ಕಣ್ಣಾರೆ ನೋಡಲು ಪುನಃ ತನ್ನ ದೇಶಕ್ಕೆ ಹಿಂದಿರುಗಿ ಬರುತ್ತಿದ್ದನು.

೩೪. ಅಲ್ಲಿ ಜನರು ಘೋರರೂ, ಪಾಪಕೃತ್ಯಗಳಲ್ಲಿ ನಿರತರೂ, ದುಷ್ಟರೂ ಆಗಿರುವುದನ್ನು ನೋಡಿದನು. ಬ್ರಾಹ್ಮಣರೆಲ್ಲರೂ ಮ್ಲೇಚ್ಛಾಚಾರಗಳಲ್ಲಿ ತೊಡಗಿದ್ದರು. ಶೂದ್ರರು ಸನ್ನ್ಯಾಸವನ್ನು ಸ್ವೀಕರಿಸಿ ಓಡಾಡುತ್ತಿದ್ದರು.

೩೫. ಹೆಂಡತಿಯು ಗಂಡನನ್ನು ದ್ವೇಷಿಸುವಳು. ಶಿಷ್ಯನು ಗುರುವನ್ನು ದ್ವೇಷಿಸುವನು. ಭೃತ್ಯನು ಸ್ವಾಮಿಯನ್ನು ಕೊಲ್ಲುವನು. ಮಗನು ತಂದೆಯ ವಧೆಯಲ್ಲಿ ನಿರತನಾಗಿರುವನು.

೩೬. ಬ್ರಾಹ್ಮಣರೆಲ್ಲರೂ ಆಚಾರಹೀನರಾಗಿ ಶೂದ್ರರಿಗೆ ಸಮಾನರಾಗಿದ್ದರು. ಆಕಳುಗಳೆಲ್ಲವೂ ಆಡುಗಳಂತೆ ಪ್ರಮಾಣಹೀನಗಳಾಗಿದ್ದುವು. ವೇದಗಳು ಲೌಕಿಕ ಕಾವ್ಯನಾಟಕಾದಿಗಳಿಗೆ ಸಮಾನಗಳೆನಿಸಿಕೊಂಡುವು. ವೇದಶಾಸ್ತ್ರ ವಿಹಿತಗಳಾದ ಸತ್ಕರ್ಮಗಳು ಲೌಕಿಕವ್ಯಾಪಾರಸದೃಶಗಳೆಂದೆಣಿಸಲ್ಪಟ್ಟಿದ್ದುವು.

೩೭. ಭೂತಗಳು, ಪ್ರೇತಗಳು, ಪಿಶಾಚಗಳೇ ಮುಂತಾದ ಗಣಗಳೇ ದೇವತಾಸಮಾನಗಳಾಗಿ ಫಲಗಳನ್ನು ಕೊಡುತ್ತಿದ್ದುವು. ಜನರೂ ಕೂಡ ಪಾಪ ಕರ್ಮನಿರತರೂ, ಕ್ರೂರಿಗಳೂ ಆಗಿ ಅವರನ್ನೇ ಶ್ರದ್ಧೆಯಿಂದ ಪೂಜಿಸಿ ತೃಪ್ತಿಗೊಳಿಸುತ್ತಿದ್ದರು.

೩೮. ಸಕಲರೂ ಮೈಥುನಕ್ರಿಯೆಯಲ್ಲಿಯೇ ಆಸಕ್ತಿಯುಳ್ಳವರಾಗಿ

**ಮನಸ್ಯೇಕಂ ವಚಸ್ಯೇಕಂ ಕರ್ಮಣ್ಯೇಕಂ ಸದಾ ಕಲೌ ।**
**ಸರ್ವೇಷಾಂ ಹೈತುಕೀ ವಿದ್ಯಾ ಸಾ ಪೂಜ್ಯಾ ನೃಪಮಂದಿರೇ ॥ ೩೯ ॥**
**ಗೀತಾದ್ಯಾಶ್ಚ ಕಲಾವಿದ್ಯಾ ನೃಪಾಣಾಂ ಚ ಪ್ರಿಯಾವಹಾಃ ।**
**ಹೀನಾಶ್ಚ ಪೂಜ್ಯತಾಂ ಯಾಂತಿ ನೋತ್ತಮಾಶ್ಚ ಕಲೌ ಯುಗೇ ॥ ೪೦ ॥**
**ಶ್ರೋತ್ರಿಯಾಶ್ಚ ದ್ವಿಜಾಸ್ಸರ್ವೇ ದರಿದ್ರಾಸ್ಸ್ಯುಃ ಕಲೌ ಯುಗೇ ।**
**ವಿಷ್ಣುಭಕ್ತಿರ್ನರಾಣಾಂ ತು ಪ್ರಾಯಶೋ ನೈವ ವರ್ತತೇ ॥ ೪೧ ॥**
**ಪ್ರಾಯಃ ಪಾಖಂಡಭೂಯಿಷ್ಟಂ ಪುಣ್ಯಕ್ಷೇತ್ರಂ ಭವಿಷ್ಯತಿ ।**
**ಶೂದ್ರಾ ಧರ್ಮಪ್ರವಕ್ತಾರೋ ಜಟಿಲಾಸ್ತಾಪಸಾಃ ಕಲೌ ॥ ೪೨ ॥**
**ಸರ್ವೇ ಚಾಲ್ಪಾಯುಷೋ ಮರ್ತ್ಯಾ ದಯಾಹೀನಾಃ ಶಠಾ ಜನಾಃ ।**
**ಸರ್ವೇ ಧರ್ಮಪ್ರವಕ್ತಾರಃ ಸರ್ವೇ ಚ ಗ್ರಹಣೋತ್ಸವಾಃ ॥ ೪೩ ॥**

---

ಆದಕ್ಕಾಗಿ ಪ್ರಾಣಗಳನ್ನೂ ಕಳೆದುಕೊಳ್ಳುತ್ತಿದ್ದರು. ಸುಳ್ಳುಸಾಕ್ಷ್ಯವನ್ನು ಹೇಳುವರು. ಯಾವಾಗಲೂ ಕುಟಿಲವಾದ ಮಾರ್ಗದಲ್ಲಿಯೇ ಬುದ್ಧಿಯುಳ್ಳವರಾಗಿದ್ದರು.

೩೯–೪೦. ಕಲಿಯುಗದಲ್ಲಿ ಜನರಿಗೆ ಮನಸ್ಸಿನಲ್ಲಿರುವುದೇ ಒಂದು. ಮಾತನಾಡುವುದು ಮತ್ತೊಂದು. ಕಾರ್ಯವೇ ಬೇರೊಂದು ವಿಧವಾಗಿರುವುದು. ಯಾವಾಗಲೂ ಜನರು ವಿದ್ಯೆಯನ್ನು ಜೀವನೋಪಾಯಕ್ಕಾಗಿಯೇ ಕಲಿಯುವರು. ಅಂತಹ ನೀಚವಿದ್ಯೆಯೇ ರಾಜಾಸ್ಥಾನಗಳಲ್ಲಿಯೂ ಪ್ರತಿಷ್ಠೆಯನ್ನು ಪಡೆಯುವುದು. ಸಂಗೀತವೇ ಮೊದಲಾದ ಕಲೆಗಳಿಂದ ಕೂಡಿದ ವಿದ್ಯೆಯೇ ರಾಜರಿಗೆ ಸಂತೋಷದಾಯಕವಾಗಿರುವುದು. ಹೀನರಾದವರು ಸಭಾಮರ್ಯಾದೆಯನ್ನು ಪಡೆಯುವರು. ಕಲಿಯುಗದಲ್ಲಿ ಉತ್ತಮರಿಗೆಂದಿಗೂ ಪೂಜ್ಯತೆಯು ದೊರಕುವುದಿಲ್ಲ.

೪೧. ಈ ಯುಗದ ಮಹಿಮೆಯಿಂದ ಶ್ರೋತ್ರಿಯರಾದ ಬ್ರಾಹ್ಮಣರೆಲ್ಲರೂ ದರಿದ್ರರೇ ಆಗಿರುವರು. ಸಾಧಾರಣವಾಗಿ ಮನುಷ್ಯರಲ್ಲಿ ಭಗವದ್ಭಕ್ತಿಯೆಂಬುದು ಎಂದಿಗೂ ಇರುವುದೇ ಇಲ್ಲವು.

೪೨. ಪ್ರತಿಯೊಂದು ಪುಣ್ಯಕ್ಷೇತ್ರವೂ ಅನಾಚಾರನಿರತರಿಂದಲೇ ತುಂಬಿರುವುದಾಗಿರುವುದು. ಕಲಿಯುಗದಲ್ಲಿ ಶೂದ್ರರೇ ಜಡೆಗಳನ್ನುಧರಿಸಿ ತಪಸ್ವಿಗಳೆನಿಸಿ ಜನರಿಗೆ ಧರ್ಮಗಳನ್ನು ಬೋಧಿಸುತ್ತಿರುವರು.

೪೩. ಸಕಲ ಮಾನವರೂ ಅಲ್ಪಾಯುಷ್ಯವುಳ್ಳವರಾಗಿರುವರು. ನಾಗರಿಕರು ದಯಾರಹಿತರೂ ಮೂರ್ಖರೂ ಆಗಿರುವರು. ಎಲ್ಲರೂ ಧರ್ಮೋಪದೇಶಕರೇ ಆಗಿರುವರು. ಎಲ್ಲರೂ ಪರದ್ರವ್ಯಾದಿಗಳನ್ನು ಅಪಹರಿಸುವುದರಲ್ಲಿಯೇ ಆಸಕ್ತರು.

ಸ್ವಾರ್ಚನಂ ಚಾಪಿ ಹೀಚ್ಛಂತಿ ಹೃದಾ ನಿಂದಾಪರಾಯಣಾಃ ।
ಅಸೂಯಾನಿರತಾಃ ಸರ್ವೇ ಪ್ರಭೌ ಸ್ವಗ್ರಹಮಾಗತೇ ॥ ೪೪ ॥
ಭ್ರಾತಾ ಚ ಭಗಿನೀಗಂತಾ ಪಿತಾ ಪುತ್ರೀಂ ಚ ವೈ ಕಲೌ ।
ಸರ್ವೇಽಪಿ ಶೂದ್ರೀನಿರತಾಃ ಸರ್ವೇ ವಾರಾಂಗನಾರತಾಃ ॥ ೪೫ ॥
ಸಾಧೂನ್ನೈವ ವಿಜಾನಂತಿ ಬಹುಪಾಪಾಂಶ್ಚ ಮನ್ಯತೇ ।
ವ್ಯಕ್ತೀಕುರ್ವಂತಿ ಸಾಧೂನಾಂ ದೋಷಮೇಕಂ ದುರಾಗ್ರಹಾಃ ॥ ೪೬ ॥
ಪಾಪಾನಾಂ ದೋಷಜಾತಾನಿ ಗುಣತ್ವೇನ ವದಂತಿ ಹಿ ।
ದೋಷಮೇವ ಪ್ರಗೃಹ್ಣಂತಿ ಕಲೌ ತು ವಿಗುಣಾ ಜನಾಃ ॥ ೪೭ ॥
ಜಲೌಕಾ ಧರ್ಮಸಂಯುಕ್ತಾ ರಕ್ತಂ ಪಿಬತಿ ನೋ ಪಯಃ ।
ಔಷಧ್ಯಃ ಸತ್ಯಹೀನಾ ಹಿ ಋತೂನಾಂ ವ್ಯತ್ಯಯಾಸ್ತಥಾ ॥ ೪೮ ॥
ದುರ್ಭಿಕ್ಷಂ ಸರ್ವರಾಷ್ಟ್ರೇಷು ಕನ್ಯಾ ಕಾಲೇ ನ ಸೂಯತೇ ।
ನಟನರ್ತಕವಿದ್ಯಾಸು ಪ್ರೀತಿಮಂತೋ ನರಾಃ ಕಲೌ ॥ ೪೯ ॥

---

೪೪. ಜನರು ತಮಗೆ ಇತರರೆಲ್ಲರೂ ಪೂಜೆಯನ್ನು ಮಾಡಬೇಕೆಂದೇ ಬಯಸುತ್ತಿರುವರು. ನಿಷ್ಪ್ರಯೋಜನವಾಗಿಯೇ ಇತರರನ್ನು ನಿಂದಿಸುವುದರಲ್ಲಿ ಉತ್ಸುಕರಾಗಿರುವರು. ಎಲ್ಲರೂ ಅಸೂಯೆಯಿಂದ ಕೂಡಿದವರಾಗಿ ಧನಾಢ್ಯನು ತಮ್ಮ ಮನೆಗೆ ಬರುವುದನ್ನು ಸಹಿಸಲಾರರು.

೪೫. ಭ್ರಾತೃವು ಸಹೋದರಿಯನ್ನೂ, ತಂದೆಯು ಮಗಳನ್ನೂ, ಕಲಿಯುಗ ದಲ್ಲಿ ಸೇರುವರು. ಸಕಲರೂ ಶೂದ್ರಸ್ತ್ರೀಯರಲ್ಲಿ ಆಸಕ್ತರಾಗಿರುವರು. ಸರ್ವರೂ ವೇಶ್ಯಾಸ್ತ್ರೀಯರ ಸಂಪರ್ಕವನ್ನೇ ಅಪೇಕ್ಷಿಸುತ್ತಿರುವರು.

೪೬. ಸಾಧುಸತ್ಪುರುಷರನ್ನು ಜನರು ತಿಳಿಯಲಾರರು. ಅನೇಕ ಪಾಪ ಕೃತ್ಯಗಳನ್ನು ಮಾಡಿದವರನ್ನೇ ಬಹುಮಾನದಿಂದ ಕಾಣುವರು. ದುರಾಗ್ರಹ ವುಳ್ಳವರಾಗಿ ಸಾಧುಗಳಲ್ಲಿರುವ ಅಲ್ಪದೋಷವೊಂದನ್ನಾದರೂ ಪ್ರಯಾಸದಿಂದ ಪ್ರಸಿದ್ಧಗೊಳಿಸುವರು.

೪೭. ಪಾಪಿಷ್ಠರಾದವರ ದೋಷಸಮೂಹಗಳನ್ನು ಸದ್ಗುಣಗಳೆಂದೇ ವರ್ಣಿಸುತ್ತಿರುವರು. ಕಲಿಯುಗದಲ್ಲಿ ಜನರು ಸ್ವತಃ ಗುಣಹೀನರಾಗಿರುವುದ ರಿಂದ ಇತರರ ದೋಷಗಳನ್ನೇ ಸ್ವೀಕರಿಸಿ ಅವರನ್ನೇ ಅನುಕರಣಮಾಡು ತ್ತಿರುವರು.

೪೮. ಹಾಲನ್ನು ಬಿಟ್ಟು ರಕ್ತವನ್ನು ಪಾನಮಾಡುವ ಜಲೌಕನೆಂಬ ಕೀಟವೂ ಧರ್ಮಯುಕ್ತವೆಂದೆನಿಸುವುದು. ಓಷಧಿವನಸ್ಪತಿಗಳೆಲ್ಲವೂ ಸತ್ವರಹಿತಗಳಾ ಗುವುವು. ಷಡೃತುಗಳ ಕಾರ್ಯಗಳಲ್ಲಿಯೂ ಅನೇಕ ವ್ಯತ್ಯಾಸಗಳಾಗುವುವು.

೪೯. ಸಕಲ ದೇಶಗಳಲ್ಲಿಯೂ ದುರ್ಭಿಕ್ಷವು ವ್ಯಾಪಿಸುವುದು. ಸ್ತ್ರೀಯರು

ವೇದವೇದಾಂತವಿದ್ಯಾಸು ನಿರತಾ ಯೇ ಗುಣಾಧಿಕಾಃ ।
ಭೃತ್ಯಾನ್ಪಶ್ಯಂತಿ ತಾನ್ಮೂಢಾಸ್ತೇ ಭ್ರಷ್ಟಾಶ್ಚಾಖಿಲಾ ನೃಪ ॥ ೫೦ ॥
ತ್ಯಕ್ತಶ್ರಾದ್ಧಕ್ರಿಯಾಃ ಸರ್ವೇ ತ್ಯಕ್ತವೇದೋದಿತಕ್ರಿಯಾಃ ।
ಜಿಹ್ವಾಯಾಂ ವಿಷ್ಣುನಾಮಾನಿ ನ ವರ್ತಂತೇ ಕದಾಚನ ।
ಶೃಂಗಾರರಸನಿರ್ವಾಣಾಸ್ತದ್ಗೀತಾನೇವ ತೇ ಜಗುಃ ॥ ೫೧ ॥
ನ ವಿಷ್ಣುಸೇವಾ ನ ಚ ಶಾಸ್ತ್ರವಾರ್ತಾ
ನ ಯಾಗದೀಕ್ಷಾ ನ ವಿಚಾರಲೇಶಃ ।
ನ ತೀರ್ಥಯಾತ್ರಾ ನ ಚ ದಾನಧರ್ಮಾಃ
ಕಲೌ ಜನೇ ಕ್ವಾಪಿ ಬಭೂವ ಚಿತ್ರಂ ॥ ೫೨ ॥
ತಾನ್ ದೃಷ್ಟ್ವಾ ಧರ್ಮವರ್ಣೋಽಪಿ ಸ ಭೀತೋಽತ್ಯಂತವಿಸ್ಮಿತಃ ।
ವಂಶಂ ಪಾಪಾತ್ ಕ್ಷಯಂ ಯಾಂತಂ ದೃಷ್ಟ್ವಾ ದ್ವೀಪಾಂತರೇ ಯಯೌ ॥

ಸಕಾಲದಲ್ಲಿ ಮಕ್ಕಳನ್ನು ಹೆರುವುದಿಲ್ಲ. ಕಲಿಯುಗದಲ್ಲಿ ಜನರೆಲ್ಲರೂ ನಟರ ಮತ್ತು ನರ್ತಕರ ವಿದ್ಯೆಗಳಲ್ಲಿಯೇ ಅಭಿಮಾನವುಳ್ಳವರಾಗಿರುವರು.

೫೦. ವೇದಗಳು, ವೇದಾಂತಗಳೇ ಮೊದಲಾದ ಸದ್ವಿದ್ಯೆಗಳಲ್ಲಿ ನಿರತರಾಗಿರುವ ಸದ್ಗುಣವಂತರಾದವರನ್ನು ಕಂಡರೆ ಮೂಢಮಾನವರು ಅವರನ್ನು ಸೇವಕರಂತೆ ಹೀನವಾಗಿ ಕಾಣುವರು. ಸಕಲರೂ ಧರ್ಮಭ್ರಷ್ಟರೇ ಆಗಿರುವರು.

೫೧. ಸಕಲ ಜನರೂ ಪಿತೃಶ್ರಾದ್ಧಕ್ರಿಯೆಗಳನ್ನು ತ್ಯಜಿಸುವರು. ದೇವತಾ ಕಾರ್ಯಗಳನ್ನೂ ದೂರಮಾಡುವರು. ಅವರ ನಾಲಿಗೆಯಲ್ಲಿ ಎಂದೆಂದಿಗೂ ಪರಮಾತ್ಮನ ಅನಂತನಾಮುಗಳ ಕೀರ್ತನವೆಂಬುದೇ ಇರುವುದಿಲ್ಲವು. ಶೃಂಗಾರ ರಸವನ್ನೇ ಮೋಕ್ಷಪ್ರದವನ್ನಾಗಿ ತಿಳಿದು ಅದರಲ್ಲಿಯೇ ಸೌಖ್ಯವನ್ನು ಪಡೆಯುತ್ತ ಯಾವಾಗಲೂ ಸಂಗೀತಗಳನ್ನೇ ಹಾಡುತ್ತಿರುವರು.

೫೨. ಕಲಿಯುಗದಲ್ಲಿ ಯಾವ ಪ್ರದೇಶದಲ್ಲಿಯೂ ಭಗವತ್ಸೇವೆಯಾಗಲಿ, ಶಾಸ್ತ್ರಗಳ ಪಾಠಪ್ರವಚನಗಳಾಗಲಿ, ಯಜ್ಞಯಾಗಗಳ ದೀಕ್ಷೆಯಾಗಲಿ, ಶಾಸ್ತ್ರಾರ್ಥಗಳ ವಿಚಾರದ ಲವಲೇಶವಾಗಲಿ, ತೀರ್ಥಯಾತ್ರೆಗಳಾಗಲಿ, ದಾನ ಧರ್ಮಾದಿ ಸತ್ಕ್ರಿಯೆಗಳಾಗಲಿ ಜನಗಳಲ್ಲಿ ಕಾಣಲಿಲ್ಲ. ಇದನ್ನು ಕಂಡು ಧರ್ಮವರ್ಣನು ವಿಚಿತ್ರವೆಂದೆಣಿಸಿದನು.

೫೩. ಇಂತಹ ಜನರನ್ನು ಕಂಡು ಧರ್ಮವರ್ಣನು ಭಯದಿಂದಲೂ ಆಶ್ಚರ್ಯದಿಂದಲೂ ಕೂಡಿದವನಾಗಿ ತನ್ನ ವಂಶವು ಪಾಪದಿಂದ ನಾಶವಾಗುತ್ತಿರುವುದನ್ನು ಕಂಡು ಜಂಬೂದ್ವೀಪವನ್ನು ತ್ಯಜಿಸಿ ಬೇರೆ ದ್ವೀಪಕ್ಕೆ ತೆರಳಿದನು.

ಸ ಚರನ್ಸರ್ವದ್ವೀಪೇಷು ಲೋಕೇಷ್ವೇವ ತು ಸರ್ವಶಃ ।
ಪಿತೃಲೋಕಂ ಯಯೌ ಧೀಮಾನ್ ಕದಾಚಿತ್ಕೌತುಕಾನ್ವಿತಃ ॥ ೫೪ ॥
ತತ್ರಾಽಪಶ್ಯನ್ಮಹಾಘೋರಾನ್ ಶ್ರಾಮ್ಯಮಾಣಾಂಶ್ಚ ಕರ್ಮಭಿಃ ।
ಧಾವತೋ ರುದಮಾನಾಂಶ್ಚ ಪತತಃ ಪತಿತಾನಪಿ ॥ ೫೫ ॥
ತತ್ರಾಽಪಶ್ಯಚ್ಚಾಂಧಕೂಪೇ ಪತಿತಾನ್ಸ್ವಾನ್ ಪಿತೄನಧಃ ।
ದೂರ್ವಾಗ್ರಲಂಬಿನೋ ದೀನಾನ್ ದೂರ್ವಾಚ್ಛೇದೇ ಹಿ ಶಂಕಿತಾನ್ ॥೫೬॥
ತದಾ ಪ್ರಾಪ್ತಃ ಕೋಽಪಿ ಚಾಖುರ್ದೂರ್ವಾಮೂಲಂ ತದಾಶ್ರಯಂ ।
ತೇನ ಭಾಗತ್ರಯಂ ಚಾತ್ತಮೇಕೋ ಭಾಗೋಽವಶೇಷಿತಃ ॥ ೫೭ ॥
ತಂ ದೃಷ್ಟ್ವಾ ತೇ ಕ್ಷೀಯಮಾಣಂ ಮೂಲಂ ದುಃಖೇನ ಕರ್ಷಿತಾಃ ।
ಅಧೋ ದೃಷ್ಟ್ವಾ ಚಾಽಂಧಕೂಪಂ ತಟೆಪಾತಾದಿಭೀಷಣಂ ॥ ೫೮ ॥
ದುರುತ್ತಾರಂ ಮಹಾಘೋರಂ ಕರ್ಮಣಾಪ್ತಂ ಸುದುಃಖಿತಾಃ ।
ಅಗ್ರೇ ಚಾಽಪಿ ದುರುತ್ತಾರಂ ಅವಲಂಬನಿವರ್ಜಿತಂ ॥ ೫೯ ॥

೫೪. ಇಂತು ಆತನು ಭೂಲೋಕದ ಸಕಲ ದ್ವೀಪಗಳಲ್ಲಿಯೂ ಇತರ ಲೋಕಗಳಲ್ಲಿಯೂ ಯಥೇಚ್ಛವಾಗಿ ಸಂಚರಿಸುತ್ತ ಒಮ್ಮೆ ಕುತೂಹಲವುಳ್ಳವನಾಗಿ ಪಿತೃಲೋಕವನ್ನು ಕುರಿತು ಹೊರಟನು.

೫೫. ಅಲ್ಲಿ ಅನೇಕ ಜೀವರು ತಮ್ಮ ಹಿಂದಿನ ಕರ್ಮಗಳ ಫಲವಾಗಿ ಘೋರ ರೂಪಗಳನ್ನು ತಳೆದು ಕಷ್ಟಪಡುತ್ತ ಓಡುತ್ತಿರುವುದನ್ನೂ, ರೋದನ ಮಾಡುತ್ತಿರುವುದನ್ನೂ, ಕೆಳಕ್ಕೆ ಬೀಳುತ್ತಿರುವರನ್ನೂ, ಬಿದ್ದಿರುವರನ್ನೂ ನೋಡಿದನು.

೫೬. ಮತ್ತು ಅಲ್ಲಿ ತನ್ನ ಪಿತೃದೇವತೆಗಳೂ ಅಧೋಗತಿಯನ್ನು ಹೊಂದಿ ಅಂಧಕೂಪದಲ್ಲಿ ಬಿದ್ದಿರುವುದನ್ನೂ ಕಂಡನು. ಅವರು ದೀನರಾಗಿ ಒಂದೇ ಒಂದು ಹುಲ್ಲುಕಡ್ಡಿಯನ್ನು ಹಿಡಿದುಕೊಂಡು ಜೋಲಾಡುತ್ತ ಆ ಕಡ್ಡಿಯು ಕತ್ತರಿಸಿ ಬೀಳುವುದೆಂಬ ಭಯದಿಂದ ಕಾತರರಾಗಿದ್ದರು.

೫೭. ಆಗ ಅಲ್ಲಿಗೆ ಒಂದು ಇಲಿಯು ಬಂದು ಅವರಿಗೆ ಆಶ್ರಯವಾಗಿದ್ದ ಹುಲ್ಲಿನ ಮೂಲವನ್ನು ಕಡಿಯತೊಡಗಿತು. ಇಲಿಯು ಅದರಲ್ಲಿ ಮೂರು ಭಾಗವನ್ನು ಕಡಿದು ಒಂದು ಭಾಗವನ್ನು ಮಾತ್ರ ನಿಲ್ಲಿಸಿ ಹೊರಟುಹೋಯಿತು.

೫೮. ಇಂತು ದೂರ್ವಾಮೂಲವು ಕ್ಷಯಿಸುತ್ತಿರುವುದನ್ನು ಕಂಡು ದುಃಖದಿಂದ ಕೃಶರಾಗಿದ್ದರು. ಕೆಳಗೆ ನೋಡಲು ಅಡಿಯಲ್ಲಿ ಬಿದ್ದವರಿಗೆ ಭಯಂಕರವಾದ ಅಂಧಕೂಪವು ವಿಸ್ತರಿಸಿದ್ದಿತು.

೫೯. ತಮ್ಮ ಪೂರ್ವಕರ್ಮಫಲವಾಗಿ ಆರ್ಜಿಸಲ್ಪಟ್ಟ ದುಸ್ತಾರವೂ ಮಹಾ

ತಾನ್ ದೃಷ್ಟ್ವಾ ವಿಸ್ಮಿತೋ ಭೂತ್ವಾ ದಯಾಲುರ್ವಾಕ್ಯಮಬ್ರವೀತ್ ।
ಕೇ ಯೂಯಂ ಪತಿತಾ ಹ್ಯಸ್ಮಿನ್ ಕೇನ ದುಸ್ತರಕರ್ಮಣಾ ॥ ೬೦ ॥
ಕಸ್ಯ ಗೋತ್ರೇ ಸಮುತ್ಪನ್ನಾಃ ಕಥಂ ವೋ ಮುಕ್ತಿರೂರ್ಜಿತಾ ।
ಏತದ್ಯೂಯಂ ವದಧ್ವಂ ಮೇ ಶರ್ಮ ವೋಽಥ ಭವಿಷ್ಯತಿ ॥ ೬೧ ॥
ಇತ್ಯೇವ ಮುದಿತಾಸ್ತೇನ ಪಿತರೋಽಥ ಸುದುಃಖಿತಾಃ ।
ತಮೂಚುಃ ಕರುಣಾಂ ವಾಚಂ ಧರ್ಮಶ್ರುತಿಪುರಃಸರಾಃ ॥ ೬೨ ॥

ಪಿತರ ಊಚುಃ:—

ವಯಂ ಶ್ರೀವತ್ಸಗೋತ್ರೀಯಾ ಭುವಿ ಸಂತಾನವರ್ಜಿತಾಃ
ಪಿಂಡಶ್ರಾದ್ಧವಿಹೀನಾಶ್ಚ ತೇನ ಪಾಚ್ಯಾಮಹೇ ವಯಂ ॥ ೬೩ ॥
ನಿಃಸಂತಾನೋಽಪಿ ನೋ ವಂಶೋ ಜಾತಃ ಪಾಪೈಃ ಕಲೌ ಯುಗೇ ।
ನಾಽಸ್ಮಾಕಂ ಪಿಂಡದಶ್ಚಾಸ್ತಿ ವಂಶೇ ಪಾಪಾತ್ ಕ್ಷಯಂ ಗತೇ ॥ ೬೪ ॥

ಘೋರವೂ ಆದ ಅದನ್ನು ಕಂಡು ಅತ್ಯಂತ ದುಃಖಿತರಾಗಿದ್ದರು. ಮೇಲೂ ಕೂಡ ದಾಟಿಹೋಗದಂತೆ ಅನ್ಯಾವಲಂಬನವರ್ಜಿತವಾದ ಪ್ರದೇಶವಾಗಿದ್ದಿತು.

೬೦–೬೧. ಅವರನ್ನು ಕಂಡು ವಿಸ್ಮಯಗೊಂಡು ದಯಾಳುವಾದ ಧರ್ಮವರ್ಣ ಬ್ರಾಹ್ಮಣನು ಅವರನ್ನು ಕುರಿತು ಇಂತೆಂದನು. ನೀವು ಯಾರು? ಯಾವ ದುಷ್ಕರ್ಮದ ಫಲವಾಗಿ ನೀವು ಈ ಅಂಧಕೂಪದಲ್ಲಿ ಬೀಳುತ್ತಿರುವಿರಿ? ಯಾವ ಗೋತ್ರದಲ್ಲಿ ಜನಿಸಿದವರು? ನಿಮಗೆ ಉತ್ತಮವಾದ ಮುಕ್ತಿಯು ದೊರಕುವ ಮಾರ್ಗವಾವುದು? ಇದನ್ನು ನೀವು ನನಗೆ ವಿಸ್ತರಿಸಿ ತಿಳಿಸಿರಿ. ಖಂಡಿತವಾಗಿಯೂ ನಿಮಗೆ ಶೀಘ್ರವಾಗಿಯೇ ಸೌಖ್ಯವುಂಟಾಗುವುದು.

೬೨. ಇಂತೆಂದು ಆತನಿಂದ ಕೇಳಲ್ಪಟ್ಟ ಧರ್ಮಶ್ರುತಿಯೇ ಮೊದಲಾದ ಪಿತೃದೇವತೆಗಳು ಅತ್ಯಂತ ದುಃಖಗೊಂಡು ದೀನಸ್ವರದಿಂದ ಆತನನ್ನು ಕುರಿತು ಹೇಳತೊಡಗಿದರು.

೬೩. ಪಿತೃಗಳು ಹೇಳುತ್ತಾರೆ:—ನಾವು ಶ್ರೀವತ್ಸಗೋತ್ರೋದ್ಭವರು. ಭೂಮಿಯಲ್ಲಿ ನಮ್ಮ ಸಂತಾನವು ನಷ್ಟವಾಗಿರುವುದು. ನಾವು ಪಿಂಡಶ್ರಾದ್ಧಗಳಿಲ್ಲದವರಾಗಿರುವೆವು. ಆದುದರಿಂದಲೇ ಇಂತು ದಃಖಪಡುತ್ತಿರುವೆವು.

೬೪. ಕಲಿಯುಗದಲ್ಲಿ ಪಾಪಗಳ ಬಾಹುಳ್ಯದಿಂದ ನಮ್ಮ ವಂಶವು ಸಂತಾನರಹಿತವಾಗಿ ಪರಿಣಮಿಸಿರುವುದು. ನಮಗೆ ಪಿಂಡಗಳನ್ನು ಕೊಡುವವನು ಒಬ್ಬನೂ ಇಲ್ಲದಂತೆ ಪಾಪದ ಫಲವಾಗಿ ನಮ್ಮ ವಂಶವೆಲ್ಲವೂ ನಾಶವನ್ನು ಹೊಂದಿರುವುದು.

**ತೇನಾಂಧಕೂಪೇ ಪತನಂ ನಿಸ್ತಂತೂನಾಂ ದುರಾತ್ಮನಾಂ ।**
**ಏಕೋ ಹಿ ವರ್ತತೇ ವಂಶೇ ಧರ್ಮವರ್ಣೋ ಮಹಾಯಶಾಃ ॥ ೬೫ ॥**
**ಸ ವಿರಕ್ತಶ್ಚರನ್ನೇಕೋ ನ ಗಾರ್ಹಸ್ಥ್ಯಮುಪೇಯಿವಾನ್ ।**
**ತಂತುನಾ ತೇನ ಬಿಭ್ರಾಮೋ ದೂರ್ವಾನಾಲಾವಲಂಬಿತಾಃ ॥ ೬೬ ॥**
**ನಿಸ್ತಂತುತ್ವಾಚ್ಚ ತನ್ಮೂಲಮಾಖುಃ ಖಾದತಿ ಪ್ರತ್ಯಹಂ ।**
**ಏಕಸ್ಯೈವಾವಶಿಷ್ಟತ್ವಾತ್ಕಿಂಚಿನ್ನಾಲೋಽವಶೇಷಿತಃ ॥ ೬೭ ॥**
**ಆಖುನಾ ಖಾದ್ಯಮಾನಶ್ಚ ವರ್ತತೇ ಸೌಮ್ಯ ಪಶ್ಯತಾಂ ।**
**ತಸ್ಯಚಾಽಽಯುಃಕ್ಷಯೇ ತಾತ ಶೇಷಮಾಖುರ್ಹರಿಷ್ಯತಿ ॥ ೬೮ ॥**
**ಪಶ್ಚಾತ್ಕೂಪೇ ಪತಿಷ್ಯಾಮೋ ದುರುತ್ತಾರೇಽಂಧತಾಮಸೇ ॥ ೬೯ ॥**
**ತಸ್ಮಾತ್ತ್ವಂ ಚ ಭುವಂ ಗತ್ವಾ ಧರ್ಮವರ್ಣಂ ಪ್ರಬೋಧಯ ।**
**ಅಸ್ಮದ್ವಾಕ್ಯೈರ್ದಯಾಪಾತ್ರೈರ್ಗಾರ್ಹಸ್ಥ್ಯೇ ವಿಮುಖಂ ಮುನಿಂ ॥ ೭೦ ॥**

೬೫. ಆದುದರಿಂದ ಸಂತಾನರಹಿತರೂ ದುರಾತ್ಮರೂ ಆದ ನಮಗೆ ಅಂಧಕೂಪ ಪತನವು ಪ್ರಾಪ್ತವಾಗಿರುವುದು. ನಮ್ಮ ವಂಶದಲ್ಲಿ ಮಹಾ ಯಶಸ್ಸಂಪನ್ನನಾದ ಧರ್ಮವರ್ಣನೆಂಬುವನೊಬ್ಬನು ಮಾತ್ರ ಭೂಲೋಕದಲ್ಲಿ ಜೀವಿಸುತ್ತಿರುವನು.

೬೬. ಆದರೆ ಅವನು ಸಂಸಾರದಲ್ಲಿ ವಿರಕ್ತಿಯನ್ನು ಹೊಂದಿ ಏಕಾಕಿಯಾಗಿ ಸಂಚರಿಸುತ್ತ ಗೃಹಸ್ಥಾಶ್ರಮವನ್ನು ಸ್ವೀಕರಿಸದಿರುವನು. ಆತನೊಬ್ಬನೇ ಸಂತಾನಬೀಜನಾಗಿ ಉಳಿದಿರುವುದರಿಂದ ಈ ದೂರ್ವದ ಒಂದಂಶವನ್ನು ಆಶ್ರಯಿಸಿ ತೂಗಾಡುತ್ತಿರುವೆವು.

೬೭. ನಾವು ಸಂತಾನರಹಿತರಾದುದರಿಂದ ಆ ಇಲಿಯು ಬಂದು ನಿತ್ಯವೂ ಹುಲ್ಲಿನ ಬುಡವನ್ನು ಕಡಿದುಹಾಕುತ್ತಿರುವುದು. ಆತನೊಬ್ಬನಿನ್ನೂ ಉಳಿದಿರು ವುದರಿಂದ ನಮಗೆ ಸ್ವಲ್ಪ ಆಲಂಬನವು ಇಲ್ಲಿ ನಿಂತಿರುವುದು.

೬೮. ಎಲೈ ಸೌಮ್ಯನೆ! ಇಲಿಯು ದೂರ್ವಾಮೂಲವನ್ನು ಕಡಿದುಹಾಕು ತ್ತಿರುವುದನ್ನು ನೀನು ನೋಡಿದೆಯ? ವತ್ಸನೆ! ಆತನೊಬ್ಬನು ದೇಹವನ್ನು ಬಿಟ್ಟ ಮೇಲೆ ಉಳಿದ ಶೇಷವನ್ನೂ ಈ ಇಲಿಯು ಭಕ್ಷಣಮಾಡಿಬಿಡುವುದು.

೬೯–೭೦. ಆ ಬಳಿಕ ನಾವು ದಾಟಲಸಾಧ್ಯವಾದ ಈ ಅಂಧತಮಸ್ಸಿನಿಂದ ಕೂಡಿದ ಕೂಪದಲ್ಲಿ ಬೀಳುವೆವು. ಆದುದರಿಂದ ನೀನು ಭೂಲೋಕಕ್ಕೆ ಹೋಗಿ ಧರ್ಮವರ್ಣನಿಗೆ ಈ ವಿಷಯವನ್ನು ತಿಳಿಸಿ ಎಚ್ಚರಿಸು. ಗೃಹಸ್ಥಾಶ್ರಮದಲ್ಲಿ ವಿಮುಖನಾದ ಆ ಮಹಾಮುನಿಗೆ ದಯೆಯಿಂದ ಕೇಳುವುದಕ್ಕೆ ಅರ್ಹಗಳಾದ ನಮ್ಮ ಈ ಮಾತುಗಳನ್ನು ತಿಳಿಸು.

ಪಿತರಸ್ತೇ ಭೃಶಾರ್ತಾ ಹಿ ನರಕೇ ಪತಿತಾ ಮಯಾ ।
ಅಂಧಕೂಪೇ ದುರುತ್ತಾರೇ ದೃಷ್ಟ್ವಾ ದೂರ್ವಾವಲಂಬಿತಾಃ ॥ ೭೧ ॥
ಸಾ ದೂರ್ವಾ ವಂಶರೂಪಾ ಹಿ ತನ್ಮೂಲಂ ಸತತಂ ಮುನೇ ।
ಕಾಲಾಖ್ಯೋ ಮೂಷಕಸ್ತಸ್ಯ ಮೂಲಂ ಖಾದತಿ ಪ್ರತ್ಯಹಂ ॥ ೭೨ ॥
ವಂಶನಾಶೋಽನುಕ್ರಮತ ಏಕಸ್ತ್ವಂ ತ್ವವಶೇಷಿತಃ ।
ತೇನ ಮೂಲಶ್ಚ ದೂರ್ವಾಯಾ ನಷ್ಟಂ ಭಾಗತ್ರಯಂ ಮುನೇ ॥ ೭೩ ॥
ಏಕೋ ಭಾಗೋಽವಶಿಷ್ಟೋಽತ್ರ ಯತಸ್ತ್ವಂ ವರ್ತಸೇ ಭುವಿ ।
ಕಿಂಚಿತ್ಖಾದತಿ ವೈ ತ್ವಾಽಽಖುಸ್ತವ ಚಾಽಯುಃಕ್ಷಯಕ್ರಮಾತ್ ॥ ೭೪ ॥
ಪರೇತೇ ತ್ವಯಿ ಚಾಽಸ್ಮಾಕಂ ತವಾಪಿ ಪತನಂ ಭವೇತ್ ।
ಕೂಪ ಏವಾಂಧತಾಮಿಸ್ರೇ ಸಂತಾನೇಽಪಿ ಕ್ಷಯಂ ಗತೇ ॥ ೭೫ ॥
ತಸ್ಮಾದ್ಗಾರ್ಹಸ್ಥ್ಯಮಾಸಾದ್ಯ ಕುರು ಸಂತತಿವರ್ಧನಂ ।
ತೇನಾಸ್ಮಾಕಂ ತವಾಪಿ ಸ್ಯಾದ್ಗತಿರೂರ್ಧ್ವಾ ನ ಸಂಶಯಃ ॥ ೭೬ ॥

೭೧. ನಿನ್ನ ಪಿತೃಗಳು ಅತ್ಯಂತ ಆರ್ತರಾಗಿ ನರಕದಲ್ಲಿ ದುಸ್ತಾರವಾದ ಅಂಧಕೂಪದಲ್ಲಿ ಬಿದ್ದು ಕೇವಲ ಒಂದು ಹುಲ್ಲುಕಡ್ಡಿಯನ್ನೇ ಆಶ್ರಯಿಸಿಕೊಂಡು ತೂಗಾಡುತ್ತಿರುವುದನ್ನು ನೋಡಿದೆನು.

೭೨. ಎಲೈ ಮುನಿಯೆ! ಆ ಹುಲ್ಲುಕಡ್ಡಿಯು ಸಂತತಿರೂಪವಾದುದು. ಅದರ ಮೂಲವನ್ನು ಕಾಲವೆಂಬ ಹೆಸರಿನ ಮೂಷಕವೊಂದು ನಿತ್ಯವೂ ತಿಂದು ಹಾಕುತ್ತಿರುವುದು.

೭೩. ಕ್ರಮವಾಗಿ ಅವರ ವಂಶವು ನಾಶವನ್ನು ಹೊಂದುತ್ತಿರುವುದು. ನೀನೊಬ್ಬನೇ ಉತ್ತರ ಸಂತಾನದ ಬೀಜವಾಗಿ ಉಳಿದಿರುವೆ. ಮುನಿಯೆ! ಆದುದರಿಂದ ಆ ಹುಲ್ಲಿನ ಮುಕ್ಕಾಲು ಭಾಗವು ಈಗಾಗಲೇ ನಷ್ಟವಾಗಿರುವುದು.

೭೪. ನೀನು ಭೂಮಿಯಲ್ಲಿ ಉಳಿದಿರುವುದರಿಂದ ಒಂದು ಭಾಗವು ಮಾತ್ರ ಉಳಿದಿರುವುದು. ನಿನ್ನ ಆಯುಃಪ್ರಮಾಣವು ಕಳೆಯುವುದನ್ನನುಸರಿಸಿ ಆ ಇಲಿಯೂ ಕ್ರಮವಾಗಿ ಅವರ ಅವಲಂಬನವನ್ನು ತಿಂದುಹಾಕುತ್ತಿರುವುದು.

೭೫. ನೀನು ದೇಹವನ್ನು ಬಿಡಲು ನಮಗೂ ನಿನಗೂ ಅಧಃಪತನವು ಖಂಡಿತವಾಗಿ ಉಂಟಾಗುವುದು. ಸಂತಾನವು ಸರ್ವನಾಶವನ್ನು ಹೊಂದಲು ನಾವೆಲ್ಲರೂ ಅಂಧತಮಿಸ್ರಕೂಪದಲ್ಲಿ ಬೀಳುವೆವು.

೭೬. ಆದುದರಿಂದ ನೀನು ಗಾರ್ಹಸ್ಥ್ಯವನ್ನು ಸ್ವೀಕರಿಸಿ ಸಂತಾನದ ಅಭಿವೃದ್ಧಿಯನ್ನುಂಟುಮಾಡು. ಅದರಿಂದ ನಮಗೂ ನಿನಗೂ ಉತ್ತಮ ಲೋಕಗಳ ಪ್ರಾಪ್ತಿಯಾಗುವುದರಲ್ಲಿ ಸಂದೇಹವಿಲ್ಲ.

ಏಷ್ಟವ್ಯಾ ಬಹವಃ ಪುತ್ರಾ ಯದ್ಯೇಕೋಽಪಿ ಗಯಾಂ ವ್ರಜೇತ್ ।
ಯಜೇತ ವಾಽಶ್ವಮೇಧಂ ಚ ನೀಲಂ ವಾ ವೃಷಮುತ್ಸೃಜೇತ್ ॥ ೭೭ ॥
ಯದ್ಯೇಕೋಽಪಿ ಚ ವೈಶಾಖೇ ಮಾಘೇ ವಾ ಕಾರ್ತಿಕೇಽಪಿ ಚ ।
ಅಸ್ಮಾನುದ್ದಿಶ್ಯ ವೈ ಸ್ನಾನಂ ಶ್ರಾದ್ಧಂ ದಾನಂ ಕರಿಷ್ಯತಿ ॥ ೭೮ ॥
ತೇನ ಚೋರ್ಧ್ವಗತಿರ್ಭೂಯಾನ್ನರಕಾದುದ್ಧತಿಶ್ಚ ನಃ ।
ಏಕೋ ವಾ ವಿಷ್ಣುಭಕ್ತಸ್ಸ್ಯಾ ದೇಕೋ ವಾ ಹರಿವಾಸರೇ ॥ ೭೯ ॥
ಏಕೋ ವಾ ಶೃಣುಯಾದ್ವಿಷ್ಣೋಃ ಕಥಾಂ ಪಾಪವಿನಾಶಿನೀಂ ।
ತಸ್ಯಾತೀತಂ ಕುಲಶತಂ ಭಾವಿ ಚಾಽಪಿ ಕುಲಂ ಶತಂ ॥ ೮೦ ॥
ಅಪಿ ಪಾಪವೃತಂ ಕ್ವಾಽಪಿ ನರಕಂ ನೈವ ಪಶ್ಯತಿ ।
ಕಿಮನ್ಯೈರ್ಬಹುಭಿಃ ಪುತ್ರೈಃ ದಯಾಧರ್ಮವಿವರ್ಜಿತೈಃ ।
ಯೇ ಜಾತಾ ನಾರ್ಚಯಂತ್ಯದ್ಧಾ ವಿಷ್ಣುಂ ನಾರಾಯಣಂ ಕುಲೇ ॥ ೮೧ ॥
ನಾಽಪುತ್ರಸ್ಯ ಹಿ ಲೋಕೋಽಸ್ತಿ ಸರ್ವಮೇತಜ್ಜನಾ ವಿದುಃ ।
ತತ್ರಾಪಿ ಚ ದಯಾಯುಕ್ತಂ ತತ್ಸಂತಾನಂ ಚ ದುರ್ಲಭಂ ॥ ೮೨ ॥

---

೭೭. ಮನುಷ್ಯನು ಅನೇಕ ಪುತ್ರರನ್ನು ಅಪೇಕ್ಷಿಸಬೇಕು. ಅವರಲ್ಲಿ ಒಬ್ಬನಾದರೂ ಗಯೆಗೆ ಹೋಗುವನು. ಅಥವ ಅಶ್ವಮೇಧವನ್ನು ಮಾಡುವನು. ಇಲ್ಲದಿದ್ದರೆ ಪ್ರೇತದಶಾಹದ ಸಮಯದಲ್ಲಿ ನೀಲಿಯ ವೃಷಭವನ್ನಾದರೂ ಉತ್ಸರ್ಜನೆಯನ್ನು ಮಾಡಬೇಕು.

೭೮. ಅವರಲ್ಲಿ ಯಾವೊಬ್ಬನಾದರೂ ವೈಶಾಖಮಾಸದಲ್ಲಿಯಾಗಲಿ, ಮಾಘಮಾಸದಲ್ಲಿಯಾಗಲಿ, ಕಾರ್ತಿಕಮಾಸದಲ್ಲಿಯಾಗಲಿ ನಮ್ಮ ಹೆಸರುಗಳನ್ನು ಹೇಳಿ ತೀರ್ಥಸ್ನಾನಗಳನ್ನೂ, ಶ್ರಾದ್ಧಗಳನ್ನೂ, ದಾನಾದಿಗಳನ್ನೂ ಮಾಡುವನು.

೭೯. ಆತನಿಂದ ನಮಗೆ ನರಕದಿಂದ ಉದ್ಧರಣವೂ, ಊರ್ಧ್ವಲೋಕಗಳ ಪ್ರಾಪ್ತಿಯೂ ಉಂಟಾಗುವುವು. ಅಥವ ಅವರಲ್ಲಿ ಯಾವನಾದರೂ ವಿಷ್ಣು ಭಕ್ತನಾಗಬಹುದು. ಒಬ್ಬನು ಏಕಾದಶೀವ್ರತನಿರತನಾಗಬಹುದು.

೮೦. ಯಾವನಾದರೂ ಸಕಲ ಕಲ್ಮಷಗಳನ್ನು ದೂರ ಮಾಡುವ ವಿಷ್ಣು ಚರಿತ್ರೆಯನ್ನು ಶ್ರದ್ಧೆಯಿಂದ ಕೇಳುವನು. ಅಂತಹವನ ಹಿಂದಿನ ನೂರು ತಲೆಗಳವರೂ ಅನಂತರದ ನೂರು ತಲೆಗಳವರೂ ಪುನೀತರಾಗುವರು.

೮೧–೮೨. ಅವರು ಕೇವಲ ಪಾಪಗಳನ್ನೇ ಮಾಡಿದವರಾದರೂ ನರಕವನ್ನು ಮಾತ್ರ ಎಂದಿಗೂ ಕಾಣುವುದಿಲ್ಲ. ಯಾರು ಕುಲಪ್ರಸೂತರಾಗಿ ಸರ್ವವ್ಯಾಪಿ ಯಾದ ನಾರಾಯಣನನ್ನು ಭಕ್ತಿಭರಿತರಾಗಿ ಪೂಜಿಸುವುದಿಲ್ಲವೊ, ಅಂತಹ ದಯಾಧರ್ಮಾದಿ ಸದ್ಗುಣಗಳಿಂದ ಹೀನರಾದ ಅನೇಕ ಪುತ್ರರು ಜನಿಸಿದ ಮಾತ್ರದಿಂದ ಪ್ರಯೋಜನವೇನು? ಪುತ್ರನಿಲ್ಲದವನಿಗೆ ಪರಲೋಕವಿಲ್ಲವೆಂಬ

**ಇತಿ ತಂ ಬೋಧಯಿತ್ವಾ ತು ವಾಕ್ಯೈರೇತೈಶ್ಚ ಸೂನೃತೈಃ ।**
**ವಿರಕ್ತಸ್ಯೋರ್ಧ್ವರೇತಸ್ಯ ಗಾರ್ಹಸ್ಥ್ಯೇ ತ್ವಂ ಮತಿಂ ಕುರು ॥ ೮೩ ॥**
**ಪಿತ್ರೂಣಾಂ ವಚನಂ ಶ್ರುತ್ವಾ ಧರ್ಮವರ್ಣೋಽಪಿ ವಿಸ್ಮಿತಃ ।**
**ಪ್ರಣಮ್ಯ ಪ್ರಾಂಜಲಿಃ ಪ್ರಾಹ ರುದನ್ವೈ ಜಾತವೇಪಥುಃ ॥ ೮೪ ॥**
**ನಾಮ್ನಾಽಹಂ ಧರ್ಮವರ್ಣಶ್ಚ ಯುಷ್ಮದ್ವಂಶ್ಯೋ ದುರಾಗ್ರಹೀ ।**
**ಸತ್ರೇ ಶ್ರುತ್ವಾ ತು ವಚನಂ ನಾರದಸ್ಯ ಮಹಾತ್ಮನಃ ॥ ೮೫ ॥**
**ಜಿಹ್ವಾದಾರ್ಢ್ಯಂ ಗುಹ್ಯದಾರ್ಢ್ಯಂ ನ ಕಸ್ಯಾಪಿ ಕಲೌ ಯುಗೇ ।**
**ದೃಷ್ಟ್ವಾ ಭುವಿ ಚ ಪಾಪಿಷ್ಠಾಂಸ್ತಜ್ಜನಾನಪಿ ಶಂಕಿತಃ ॥ ೮೬ ॥**
**ಭೀತೋ ದುರ್ಜನಸಂಗತ್ಯಾ ಚರನ್ ದ್ವೀಪಾಂತರೇ ವಸನ್ ।**
**ಪಾದಾಸ್ತ್ರಯೋ ಗತಾ ಹ್ಯಸ್ಯ ಕಲೇಃ ಪಾದೇಽಂತ್ಯಕೇಽಪಿ ಚ ॥ ೮೭ ॥**
**ಗತಾ ಸಾರ್ಧತ್ರಯೋ ಭಾಗಾ ಇದಾನೀಂ ಜನಕಾ ಇಮೇ ।**
**ನಾಽಹಂ ವೇದ್ಮಿ ಭವದ್ದುಃಖಂ ವೃಥಾ ಜನ್ಮ ಗತಂ ಮಮ ॥ ೮೮ ॥**

---

ಸಕಲ ವಿಷಯವನ್ನೂ ಜನರೆಲ್ಲರೂ ತಿಳಿದಿರುವರು. ಆದರೆ ಅದರಲ್ಲಿಯೂ ದಯಾ ದಾಕ್ಷಿಣ್ಯಗಳಿಂದ ಕೂಡಿದ ಸಂತಾನವು ಅತ್ಯಂತ ದುರ್ಲಭವು.

೮೩. ಸತ್ಯಸಮ್ಮಿತಗಳಾದ ಈ ವಾಕ್ಯಗಳಿಂದ ನೀನು ಧರ್ಮವರ್ಣನಿಗೆ ಉಪದೇಶವನ್ನು ಮಾಡಿ ವಿರಕ್ತನೂ ಅಖಂಡಬ್ರಹ್ಮಚಾರಿಯೂ ಆಗಿರುವ ಆತನಿಗೆ ಗೃಹಸ್ಥಾಶ್ರಮದಲ್ಲಿ ಅಭಿಲಾಷೆಯುಂಟಾಗುವಂತೆ ಪ್ರಯತ್ನವನ್ನು ಮಾಡು.

೮೪. ಪಿತೃದೇವತೆಗಳ ಈ ಮಾತುಗಳನ್ನು ಕೇಳಿ ಧರ್ಮವರ್ಣನು ಅತ್ಯಂತ ಆಶ್ಚರ್ಯವನ್ನು ತಾಳಿದನು. ಮತ್ತು ಅವರಿಗೆ ನಮಸ್ಕರಿಸಿ ಅಂಜಲಿಬಂಧವನ್ನು ಮಾಡಿಕೊಂಡು ರೋದನಮಾಡುತ್ತ ಮೈಯೆಲ್ಲವೂ ನಡುಗುತ್ತಿರಲು ಇಂತೆಂದನು.

೮೫–೮೬. ನಾನೇ ಧರ್ಮವರ್ಣನೆಂಬ ಹೆಸರಿನವನು. ನಿಮ್ಮ ವಂಶದಲ್ಲಿ ಹುಟ್ಟಿದ ದುರಾಗ್ರಹವಂತನು. ಒಮ್ಮೆ ಪುಷ್ಕರಕ್ಷೇತ್ರಕ್ಕೆ ಹೋಗಿ ಅಲ್ಲಿ ಮಹಾ ಮುನಿಗಳು ಮಾಡುತ್ತಿದ್ದ ಸತ್ರವನ್ನು ನೋಡುತ್ತಿರಲು ಮಹಾತ್ಮನಾದ ನಾರದನು ಅಲ್ಲಿಗೆ ಬಂದು "ಈ ಕಲಿಯುಗದಲ್ಲಿ ಜಿಹ್ವಾಜಯವೂ ಗುಹ್ಯೇಂದ್ರಿಯ ಜಯವೂ ಯಾವನಿಗೂ ಉಂಟಾಗಲಾರದು" ಎಂದು ಹೇಳುತ್ತಿದ್ದುದನ್ನು ಕೇಳಿದೆನು. ಅದಕ್ಕನುಸಾರವಾಗಿಯೇ ಭೂಲೋಕದಲ್ಲಿ ಜನರೂ ಸಹ ಅತ್ಯಂತ ಪಾಪಕಾರ್ಯಗಳಲ್ಲಿ ನಿರತರಾಗಿರುವುದನ್ನೇ ಕಂಡು ಮನಸ್ಸಿನಲ್ಲಿ ಅನುಮಾನ ಗೊಂಡವನಾದೆನು.

೮೭–೮೮. ದುರ್ಜನರ ಸಹವಾಸದಿಂದ ಭಯಗೊಂಡು ನಾನು ಅನೇಕ ದ್ವೀಪಾಂತರಗಳಲ್ಲಿ ವಾಸಮಾಡುತ್ತಿರಲು ಈ ಕಲಿಯುಗದ ಮೊದಲನೆಯ ಮೂರು ಪಾದಗಳೂ ಕಳೆದುಹೋದುವು. ಕೊನೆಯ ಪಾದದಲ್ಲಿಯೂ ಕೂಡ

ಯಸ್ಮಿನ್ ಕುಲೇ ತ್ವಹಂ ಜಾತಃ ಋಣಂ ಪಿತ್ರೋರ್ನ ವೈ ಹೃತಂ ।
ಕಿಂ ತೇನ ಜಾತಮಾತ್ರೇಣ ಭೂಭಾರೇಣಾತ್ರ ಶತ್ರುಣಾ ॥ ೮೯ ॥
ಯೋ ಜಾತೋ ನಾರ್ಚಯೇದ್ವಿಷ್ಣುಂ
ಪಿತೄನ್ ದೇವಾನ್ ಋಷೀನ್‌ಸ್ತಥಾ ।
ಯುಷ್ಮದಾಜ್ಞಾಂ ಕರಿಷ್ಯಾಮಿ
ಮಾಮಾಽಜ್ಞಾಪಯತಕ್ಷಿತೌ ॥ ೯೦ ॥
ಯಥಾ ನ ಕಲಿಬಾಧಾ ಸ್ಯಾತ್ತತ್ರ ಸಂಸಾರತೋಽಪಿ ವಾ ।
ಕರ್ತವ್ಯಾನ್ಯಪಿ ಕೃತ್ಯಾನಿ ಮಯಾ ಪುತ್ರೇಣ ಭೂತಲೇ ॥ ೯೧ ॥
ಇತ್ಯುಕ್ತಾಸ್ತೇನ ವಂಶ್ಯೇನ ಧರ್ಮವರ್ಣೇನ ಧೀಮತಾ ।
ಕಿಂಚಿದಾಶ್ವಸ್ತಮನಸ ಇದಮೂಚುರ್ಮಹೀಪತೇ ॥ ೯೨ ॥
ಪುತ್ರ ಪಶ್ಯ ದಶಾಮೇತಾಂ ಪಿತೄಣಾಂ ತೇ ಮಹಾತ್ಮನಾಂ ।
ಸಂತತ್ಯಭಾವಾತ್ಪತತಾಂ ದೂರ್ವಾಮಾತ್ರಾವಲಂಬಿನಾಂ ॥ ೯೩ ॥

ಮೂರೂವರೆ ಭಾಗಗಳು ಇಲ್ಲಿಯವರೆವಿಗೆ ಆಗಿಹೋಗಿರುವುವು. ಪಿತೃಗಳಿರಾ! ನಾನು ಇಷ್ಟು ದಿನಗಳಾದರೂ ನಿಮ್ಮ ಕಷ್ಟವನ್ನು ತಿಳಿಯಲಿಲ್ಲ. ನನ್ನ ಜನ್ಮವೆಲ್ಲವೂ ವ್ಯರ್ಥವಾಗಿಯೇ ಕಳೆದುಹೋಯಿತು.

೮೯. ಯಾವ ಸತ್ಕುಲದಲ್ಲಿ ನಾನು ಜನಿಸಿದೆನೋ, ಆ ಕುಲಪಿತೃಗಳ ಋಣವನ್ನು ತೀರಿಸದಿದ್ದ ಮೇಲೆ ನಾನು ಹುಟ್ಟಿದ ಮಾತ್ರದಿಂದೇನು ಪ್ರಯೋಜನವು? ನಿಜವಾಗಿಯೂ ನಾನು ಭೂಮಿಗೆ ಭಾರಪ್ರಾಯನಾದ ಕುಲ ಶತ್ರುವೇ ಆಗಿರುವೆನು.

೯೦. ನಾನು ಸತ್ಕುಲದಲ್ಲಿ ಜನ್ಮಮಾತ್ರವನ್ನು ಪಡೆದೆನೇ ಹೊರತು ಮಹಾ ವಿಷ್ಣುವನ್ನಾಗಲಿ, ಪಿತೃಗಳನ್ನಾಗಲಿ, ದೇವತೆಗಳನ್ನಾಗಲಿ, ಮಹರ್ಷಿಗಳನ್ನಾಗಲಿ ಎಂದೂ ಪೂಜಿಸಿದವನಲ್ಲ. ಈಗ ಭೂಲೋಕದಲ್ಲಿ ನಿಮ್ಮ ಅಪ್ಪಣೆಯನ್ನೇ ನಡೆಸಿ ಕೊಂಡು ಬರುವೆನು. ನನಗೆ ಆಜ್ಞೆಯನ್ನು ಮಾಡಿರಿ.

೯೧. ಸಂಸಾರದಲ್ಲಿದ್ದರೂ ನನಗೆ ಕಲಿಸಂಕರವು ಆಗದಿರುವಂತಹ ಕ್ರಮವನ್ನೂ, ನಿಮ್ಮ ಪುತ್ರನಾದ ನಾನು ನಿಮ್ಮ ಉದ್ಧಾರಕ್ಕಾಗಿ ಮಾಡಬೇಕಾದ ಕರ್ತವ್ಯಗಳನ್ನೂ ವಿಸ್ತಾರವಾಗಿ ಉಪದೇಶಿಸಿರಿ.

೯೨. ಎಲೈ ಮಹಾರಾಜನೆ! ತಮ್ಮ ವಂಶೋದ್ಭವನೂ ಸಕಲ ಶಾಸ್ತ್ರ ಸಂಪನ್ನನೂ ಆದ ಧರ್ಮವರ್ಣನು ಇಂತು ಬಿನ್ನವಿಸುತ್ತಿರಲು ಅವರು ಸ್ವಲ್ಪ ಮಟ್ಟಿಗೆ ಮನಸ್ಸಿನಲ್ಲಿ ಸಮಾಧಾನವನ್ನು ಹೊಂದಿದವರಾಗಿ ಹೇಳತೊಡಗಿದರು.

೯೩. ಮಗನೆ! ಮಹಾತ್ಮರಾದ ನಿನ್ನ ಪಿತೃದೇವತೆಗಳ ಕಷ್ಟದಶೆಯನ್ನು

**ತ್ವಂ ಗಾರ್ಹಸ್ಥ್ಯಮುಪಾಲಭ್ಯ ಸಂತತ್ಯಾಸ್ಮಾನ್ ಸಮುದ್ಧರ ॥ ೯೪ ॥**
**ಯೇ ಚ ವಿಷ್ಣುಕಥಾರಕ್ತಾ ಯೇ ಸ್ಮರಂತ್ಯನಿಶಂ ಹರಿಂ ।**
**ಯೇ ಸದಾಚಾರನಿರತಾ ನ ತಾನ್ ವೈ ಬಾಧತೇ ಕಲಿಃ ॥ ೯೫ ॥**
**ಶಾಲಿಗ್ರಾಮಶಿಲಾ ಯಸ್ಯ ಗೃಹೇ ತಿಷ್ಠತಿ ಮಾನದ ।**
**ಅಥ ವಾ ಭಾರತಂ ಗೇಹೇ ನ ತಂ ವೈ ಬಾಧತೇ ಕಲಿಃ ॥ ೯೬ ॥**
**ಯಶ್ಚ ವೈಶಾಖನಿರತೋ ಮಾಘಸ್ನಾನಪರಶ್ಚ ಯಃ ।**
**ಕಾರ್ತಿಕೇ ದೀಪದಾತಾ ಯೋ ನ ತಂ ವೈ ಬಾಧತೇ ಕಲಿಃ ॥ ೯೭ ॥**
**ಪ್ರತ್ಯಹಂ ಶೃಣುಯಾದ್ಯಸ್ತು ಕಥಾಂ ವಿಷ್ಣೋರ್ಮಹಾತ್ಮನಃ ।**
**ಪಾಪಘ್ನೀಂ ಮೋಕ್ಷದಾಂ ದಿವ್ಯಾಂ ನ ತಂ ವೈ ಬಾಧತೇ ಕಲಿಃ ॥ ೯೮ ॥**
**ಯದ್ಗೃಹೇ ವೈಶ್ವದೇವಶ್ಚ ಯದ್ಗೃಹೇ ತುಲಸೀ ಶುಭಾ ।**
**ಯದಂಗಣೇ ಶುಭಾ ಗೌಶ್ಚ ನ ತಂ ವೈ ಬಾಧತೇ ಕಲಿಃ ॥ ೯೯ ॥**

ನೋಡುತ್ತಿರುವೆಯಲ್ಲವೆ. ಅವರು ಸಂತಾನಾಭಾವದಿಂದ ಅಂಧತಮಸ್ಸಿಗೆ ಬಿದ್ದು ಒಂದು ಹುಲ್ಲುಕಡ್ಡಿಯನ್ನು ಮಾತ್ರ ಅವಲಂಬಿಸಿಕೊಂಡಿರುವರು.

೯೪–೯೫. ನೀನು ಗೃಹಸ್ಥಧರ್ಮವನ್ನನುಸರಿಸುತ್ತ ಸಂತತಿಯನ್ನಭಿವೃದ್ಧಿಗೊಳಿಸಿ ನಮ್ಮನ್ನೂ ಈ ಕಷ್ಟದಿಂದ ಉದ್ಧರಿಸು. ಯಾರು ವಿಷ್ಣುಕಥೆಗಳಲ್ಲಿ ಆಸಕ್ತರಾಗಿರುವರೊ, ಯಾರು ನಿರಂತರವೂ ಶ್ರೀಹರಿಯನ್ನು ಧ್ಯಾನಿಸುತ್ತಿರುವರೊ, ಯಾರು ಸದಾಚಾರಗಳಲ್ಲಿಯೇ ನಿರತರಾಗಿರುವರೊ, ಅವರನ್ನು ಕಲಿಯು ಎಂದಿಗೂ ಬಾಧಿಸಲಾರನು.

೯೬. ವತ್ಸನೆ! ಯಾವನ ಮನೆಯಲ್ಲಿ ಸಾಲಗ್ರಾಮಶಿಲೆಯಿರುವುದೊ, ಅಥವ ಭಾರತ ಗ್ರಂಥದ ಪಠನಶ್ರವಣಗಳು ನಡೆಯುತ್ತಿರುವುವೊ, ಅವನನ್ನು ಕಲಿಪುರುಷನು ಎಂದಿಗೂ ಕಷ್ಟಪಡಿಸಲಾರನು.

೯೭. ಯಾವನು ವೈಶಾಖಮಾಸದ ವ್ರತಗಳನ್ನು ನಡೆಸುವನೊ, ಮಾಘಮಾಸದಲ್ಲಿ ತೀರ್ಥಸ್ನಾನಗಳನ್ನು ಮಾಡುವನೊ, ಕಾರ್ತಿಕಮಾಸದಲ್ಲಿ ದೀಪಗಳನ್ನು ದಾನಮಾಡುವನೊ, ಅವನನ್ನು ಕಲಿಪುರುಷನು ಬಾಧಿಸಲು ಶಕ್ತನಲ್ಲ.

೯೮. ಯಾವನು ಪ್ರತಿನಿತ್ಯವೂ ಪಾಪಾಪನೋದಕವೂ, ಮೋಕ್ಷಪ್ರದವೂ, ಆದ ಮಹಾಮಹಿಮನಾದ ವಿಷ್ಣುವಿನ ಚರಿತ್ರೆಯನ್ನು ಶ್ರದ್ಧಾನ್ವಿತನಾಗಿ ಕೇಳುತ್ತಿರುವನೊ, ಅವನನ್ನು ಕಲಿಯು ಬಾಧೆಗೊಳಿಸುವುದಿಲ್ಲ.

೯೯. ಯಾವನ ಮನೆಯಲ್ಲಿ ವೈಶ್ವದೇವಾಗ್ನಿಯಿರುವುದೊ, ಯಾವನ ಮನೆಯಲ್ಲಿ ಪವಿತ್ರವಾದ ತುಲಸೀ ಬೃಂದಾವನವಿರುವುದೊ, ಯಾವನ

ತಸ್ಮಾನ್ನೋ ಭೀತಿರಸ್ತೀಹ ಯುಗೇ ಪಾಪಾತ್ಮಕೇಽಪಿ ಚ ।
ಶೀಘ್ರಂ ಗಚ್ಛ ಭುವಂ ಪುತ್ರ ಮಾಸೋಽಯಂ ಮಾಧವಾಹ್ವಯಃ ॥೧೦೦॥
ಸರ್ವೇಷಾಮುಪಕಾರಾಯ ಮೇಷಸಂಸ್ಥೇ ದಿವಾಕರೇ ।
ತ್ರಿಂಶಚ್ಚ ತಿಥಯಃ ಪುಣ್ಯಾ ಮೇಷಸಂಸ್ಥೇ ದಿವಾಕರೇ ॥ ೧೦೧ ॥
ಏಕೈಕಸ್ಯಾಂ ಕೃತಂ ಪುಣ್ಯಂ ಕೋಟಿಕೋಟಿಗುಣಂ ಭವೇತ್ ।
ತತ್ರಾಪಿ ಚೈತ್ರಬಹುಲೋ ದರ್ಶೋ ನೃಣಾಂ ಚ ಮುಕ್ತಿದಃ ॥ ೧೦೨ ॥
ಪ್ರಿಯಶ್ಚ ಪಿತೃದೇವಾನಾಂ ಸದ್ಯೋಮುಕ್ತಿವಿಧಾಯಕಃ ।
ಯೇ ವೈ ಪಿತೄನ್ ಸಮುದ್ದಿಶ್ಯ ಶ್ರಾದ್ಧಂ ಕುರ್ವಂತಿ ತದ್ದಿನೇ
ಸೋದಕುಂಭಂ ಪಿಂಡದಾನಂ ತದಕ್ಷಯ್ಯಫಲಂ ಭವೇತ್ ॥ ೧೦೩ ॥
ಯೇ ಚ ಕುರ್ವಂತಿ ವೈ ಶ್ರಾದ್ಧಮಮಾಯಾಂ ಚ ಮಧೌ ಸುತ ।
ತೈಃ ಕೃತಂ ತು ಗಯಾಕ್ಷೇತ್ರೇ ಶ್ರಾದ್ಧಂ ಕೋಟಿಗುಣಂ ಭವೇತ್ ॥೧೦೪॥

ಗೃಹಾಂಗಣದಲ್ಲಿ ಶುಭಲಕ್ಷಣವಾದ ಗೋವು ಸುಳಿದಾಡುತ್ತಿರುವುದೊ, ಅವನನ್ನು ಕಲಿಯು ಬಾಧಿಸುವುದಿಲ್ಲ.

೧೦೦. ಆದುದರಿಂದ ಕಲಿಯು ಮಹಾ ಪಾಪಾತ್ಮಕವಾದ ಯುಗವೆನಿಸಿದ್ದರೂ ಕೂಡ ನಿನಗೆ ಯಾವ ವಿಧವಾದ ಭಯಕ್ಕೂ ಕಾರಣವಿಲ್ಲ. ಪುತ್ರನೆ! ನೀನು ಬೇಗನೆ ಭೂಲೋಕಕ್ಕೆ ಹೊರಡು. ಈಗ ಅಲ್ಲಿ ವೈಶಾಖಮಾಸವು ನಡೆಯುತ್ತಿರುವುದು.

೧೦೧. ಸೂರ್ಯದೇವನು ಮೇಷರಾಶಿಯಲ್ಲಿ ಸಂಚರಿಸುತ್ತಿರಲು ಸಕಲರಿಗೂ ಉಪಕಾರವನ್ನು ಮಾಡಲು ಮುವ್ವತ್ತು ತಿಥಿಗಳೂ ಪ್ರಶಸ್ತಗಳಾಗಿರುವುವು.

೧೦೨. ಒಂದೊಂದು ತಿಥಿಯಲ್ಲಿ ಮಾಡಿದ ಪುಣ್ಯಕರ್ಮವೂ ಕೋಟಿ ಗುಣಿತವಾದ ಫಲವನ್ನು ಕೊಡುವುದಾಗುವುದು. ಅದರಲ್ಲಿಯೂ ಚೈತ್ರಮಾಸದ ಬಹುಳಾಮಾವಸ್ಯೆಯ ತಿಥಿಯು ಮನುಷ್ಯರಿಗೆ ಮೋಕ್ಷವನ್ನೇ ಕೈಗೂಡಿಸುವುದು.

೧೦೩. ಆ ದಿವಸವು ಪಿತೃದೇವತೆಗಳಿಗೆ ಅತ್ಯಂತ ಪ್ರಿಯವಾದುದು. ಕ್ಷಣಮಾತ್ರದಲ್ಲಿಯೇ ಮೋಕ್ಷವನ್ನು ಕೊಡುವುದು. ಯಾವ ಮಾನವರು ಆ ದಿನದಲ್ಲಿ ಪಿತೃಗಳನ್ನುದ್ದೇಶಿಸಿ ಶ್ರಾದ್ಧವನ್ನು ಮಾಡಿ ಉದಕುಂಭವನ್ನೂ ಪಿಂಡಗಳನ್ನೂ ದಾನಮಾಡುವರೊ, ಅವರ ಕರ್ಮವು ಅಕ್ಷಯಫಲದಾಯಕವಾಗುವುದು.

೧೦೪. ಪುತ್ರನೆ! ಚೈತ್ರಮಾಸದ ಅಮಾವಾಸ್ಯೆಯಲ್ಲಿ ಯಾರು ಪಿತೃಶ್ರಾದ್ಧವನ್ನು ಮಾಡುವರೊ, ಅವರಿಂದ ಗಯಾಕ್ಷೇತ್ರದಲ್ಲಿ ಒಂದು ಕೋಟಿ ಶ್ರಾದ್ಧಗಳು ಮಾಡಲ್ಪಟ್ಟುವೆಂದು ಎಣಿಸಬೇಕು.

ಯದಿ ಶ್ರಾದ್ಧಂ ಮಧೌ ದರ್ಶೇ ಶಾಕೇನಾಪಿ ಕರೋತಿ ಚ ।
ಕೋಟಿಶ್ರಾದ್ಧಂ ಗಯಾಯಾಂ ತು ಕೃತಂ ತೇನ ನ ಸಂಶಯಃ ॥ ೧೦೫ ॥
ಕುಂಭಂ ಚ ಪಾನಕೈಃ ಪೂರ್ಣಂ ಕರ್ಪೂರಾಗುರುವಾಸಿತಂ ।
ಯೋ ನ ದದ್ಯಾನ್ಮಧೌ ದರ್ಶೇ ಸ ಪಿತೃಘ್ನೋ ನ ಸಂಶಯಃ ॥ ೧೦೬ ॥
ಯೋ ದದ್ಯಾಚ್ಚ ಮಧೌ ದರ್ಶೇ ಸಪಾನೀಯಂ ಕರೀರಕಂ ।
ಶ್ರಾದ್ಧಂ ಚ ಭಕ್ತಿಸಂಯುಕ್ತಃ ಕುರುತೇ ಚ ಕುಲೋದ್ಧೃತಿಂ ॥ ೧೦೭ ॥
ಪಿತೄಣಾಂ ಚ ತಥಾ ಲೋಕೇ ನದೀ ಚಾಽಮೃತವರ್ಷಿಣೀ ॥ ೧೦೮ ॥
ಕುಂಭದಾನಾತ್ಪ್ರಸರತಿ ಶ್ರಾದ್ಧದಾನಾದಿದಾಯಿನಾಂ ।
ಅನ್ನಸೂಪಘೃತಾಪೂಪಲೇಹ್ಯಪಾಯಸಕರ್ದಮಾನ್ ॥ ೧೦೯ ॥
ತಸ್ಮಾಜ್ಝಟಿತಿ ತ್ವಂ ಗಚ್ಛ ಯದಾ ವಾಮಾ ಭವಿಷ್ಯತಿ ।
ಕುರು ಶ್ರಾದ್ಧಂ ಪಿಂಡದಾನಂ ಸೋದಕುಂಭಂ ಮಹಾಮತೇ ॥ ೧೧೦ ॥

೧೦೫. ಚೈತ್ರಾಮಾವಾಸ್ಯೆಯಲ್ಲಿ ಯಾವನು ಶಾಕದಿಂದಲಾದರೂ ಪಿತೃಶ್ರಾದ್ಧವನ್ನು ಮಾಡುವನೊ, ಅವನು ಗಯೆಯಲ್ಲಿ ಕೋಟಿ ಶ್ರಾದ್ಧಗಳನ್ನು ಮಾಡಿದವನೆಂದು ತಿಳಿಯಬೇಕು. ಇದರಲ್ಲಿ ಸಂದೇಹವಿಲ್ಲ.

೧೦೬. ಕರ್ಪೂರ, ಅಗರುಗಳಿಂದ ಸುವಾಸನೆಗೊಳಿಸಿದ ಪಾನಕದ ಕುಂಭವನ್ನು ಚೈತ್ರಾಮಾವಾಸ್ಯೆಯಲ್ಲಿ ಯಾವನು ಬ್ರಾಹ್ಮಣನಿಗೆ ದಾನಮಾಡುವುದಿಲ್ಲವೊ, ಅವನು ಪಿತೃಘಾತಕನೆಂಬುದರಲ್ಲಿ ಯಾವ ಸಂದೇಹವೂ ಇರಲಾರದು.

೧೦೭. ಆ ತಿಥಿಯಲ್ಲಿ ಪಾನೀಯವನ್ನೂ ಉದಕುಂಭವನ್ನೂ ದಾನಮಾಡಿ ಭಕ್ತಿಯುಕ್ತನಾಗಿ ಶ್ರಾದ್ಧಕರ್ಮವನ್ನು ಯಾವನು ಆಚರಿಸುವನೊ, ಅವನು ತನ್ನ ಕುಲದ ಉದ್ಧಾರವನ್ನೇ ಮಾಡುವನು.

೧೦೮–೧೦೯. ಯಾವನು ಶ್ರಾದ್ಧಕಾಲದಲ್ಲಿ ದಾನಗಳನ್ನು ಮಾಡುತ್ತ ಉದಕುಂಭವನ್ನು ಬ್ರಾಹ್ಮಣನಿಗೆ ಸಮರ್ಪಿಸುವನೊ, ಅವನ ದಾನದಿಂದ ಪಿತೃಲೋಕದಲ್ಲಿ ಅಮೃತೋದಕದಿಂದ ಕೂಡಿದ ನದಿಯೇ ಪ್ರವಹಿಸಿ ಅವರನ್ನು ತೃಪ್ತಿಗೊಳಿಸುವುದು. ಆ ತಿಥಿಯಲ್ಲಿಯೇ ಅನ್ನ, ತೊವ್ವೆ, ತುಪ್ಪ, ಅಪೂಪಗಳು, ಲೇಹ್ಯಗಳು, ಕರ್ದಮಸದೃಶಗಳಾದ ಪಾಯಸಗಳು ಮುಂತಾದುವುಗಳನ್ನೂ ದಾನಮಾಡಬೇಕು.

೧೧೦. ಎಲೈ ಮಹಾಪ್ರಾಜ್ಞನೆ! ಆದುದರಿಂದ ನೀನು ಬೇಗನೆ ಭೂಲೋಕಕ್ಕೆ ಹೊರಡು. ಅಮಾವಾಸ್ಯೆಯು ಸಂಭವಿಸುವ ದಿನದಲ್ಲಿ ಶ್ರಾದ್ಧವನ್ನೂ, ಪಿಂಡದಾನವನ್ನೂ, ಉದಕುಂಭದಾನವನ್ನೂ ಮಾಡುವವನಾಗು.

**ಸರ್ವೇಷಾಮುಪಕಾರಾಯ ಗಾರ್ಹಸ್ಥ್ಯಂ ಚ ಸಮಾಶ್ರಯ ।**
**ಧರ್ಮಾರ್ಥಕಾಮ್ಯೈಃ ಸಂತುಷ್ಟಃ ಪ್ರಾಪ್ಯ ಸಂತಾನಮುತ್ತಮಂ ॥ ೧೧೧ ॥**
**ಪುನಶ್ಚ ಮುನಿವೃತ್ತಿಸ್ತ್ವಂ ಸುಖಂ ದ್ವೀಪೇಷು ಸಂಚರ ।**
**ಇತ್ಯಾದಿಷ್ಟಃ ಪಿತೃಭಿಶ್ಚ ತೂರ್ಣಂ ಭೂಮಿಂ ಯಯೌ ಮುನಿಃ ॥ ೧೧೨ ॥**
**ಚೈತ್ರೇ ಮಾಸೇ ಮೇಷಸಂಸ್ಥೇ ಪುಣ್ಯೇ ಮಾಸೇ ದಿವಾಕರೇ ।**
**ಪ್ರಾತಃ ಸ್ನಾತ್ವಾ ಚ ಸಂತರ್ಪ್ಯ ಪಿತ್ರೂನ್ ದೇವಾನ್ ಋಷೀನ್ಸ್ತಥಾ ॥**
**ಸೋದಕುಂಭಂ ತಥಾ ಶ್ರಾದ್ಧಂ ಕೃತ್ವಾ ಪಾಪವಿನಾಶನಂ ।**
**ತೇನ ದತ್ವಾ ಪಿತ್ರೂಣಾಂ ಚ ಮುಕ್ತಿಮಾವೃತ್ತಿವರ್ಜಿತಾಂ ॥ ೧೧೪ ॥**
**ಸ್ವಯಂ ವಿವಾಹಮಕರೋತ್ಸಂತತಿಂ ಪ್ರಾಪ್ಯ ವೈ ಸತೀಂ ।**
**ಲೋಕೇ ಪ್ರಖ್ಯಾಪಯಾಮಾಸ ತಾಂ ತಿಥಿಂ ಪಾಪನಾಶಿನೀಂ ॥ ೧೧೫ ॥**
**ಸ್ವಯಂ ಪುನರ್ಮುದಾ ಭಕ್ತ್ಯಾ ಗಂಧಮಾದನಮಾಯಯೌ ॥ ೧೧೬ ॥**

೧೧೧–೧೧೨. ಸಕಲರಿಗೂ ಉಪಕಾರವನ್ನು ಮಾಡುವ ಬುದ್ಧಿಯಿಂದ ನೀನು ಗೃಹಸ್ಥಾಶ್ರಮವನ್ನು ಆಶ್ರಯಿಸು. ಧರ್ಮ, ಅರ್ಥ, ಕಾಮಗಳೆಂಬ ಮೊದಲಿನ ಮೂರು ಪುರುಷಾರ್ಥಗಳನ್ನೂ ಪಡೆದು ಸಂತೋಷಗೊಂಡು ಉತ್ತಮವಾದ ಸಂತಾನವನ್ನು ಪಡೆದು, ವಂಶವನ್ನು ಬೆಳೆಸಿ, ಬಳಿಕ ಪುನಃ ಸನ್ಯಾಸವನ್ನು ಸ್ವೀಕರಿಸಿ ಯಥಾಸುಖವಾಗಿ ಭೂಮಂಡಲವೆಲ್ಲವನ್ನೂ ಸಂಚರಿಸುತ್ತಿರು. ಇಂತೆಂದು ಪಿತೃಗಳಿಂದ ಆಜ್ಞಪ್ತನಾದ ಧರ್ಮವರ್ಣನು ಮರುಮಾತನ್ನಾಡದೆ ಭೂಲೋಕಕ್ಕೆ ಮರಳಿ ಬಂದನು.

೧೧೩. ಚೈತ್ರವೆಂಬ ಪುಣ್ಯಕರವಾದ ಮಾಸವು ಪ್ರಾಪ್ತವಾಗಿ ಸೂರ್ಯನು ಮೇಷರಾಶಿಯನ್ನು ಪ್ರವೇಶಿಸಲು ಪ್ರಾತಃಕಾಲದಲ್ಲಿ ಎದ್ದು ಸ್ನಾನವನ್ನು ಮಾಡಿ ಪಿತೃಗಳಿಗೂ, ದೇವತೆಗಳಿಗೂ ಋಷಿಗಳಿಗೂ ತರ್ಪಣಗಳನ್ನು ಕೊಡುತ್ತಿದ್ದನು.

೧೧೪. ಸಕಲ ಪಾತಕಗಳನ್ನು ನಾಶಗೊಳಿಸುವ ಉದಕುಂಭಸಹಿತವಾದ ಶ್ರಾದ್ಧವನ್ನು ಮಾಡಿ ಅದರಿಂದ ಪಿತೃಗಳಿಗೆ ಪುನರಾವೃತ್ತಿವರ್ಜಿತವಾದ ಮೋಕ್ಷವನ್ನು ಸಂಪಾದಿಸಿಕೊಟ್ಟನು.

೧೧೫. ಬಳಿಕ ತಾನೂ ಮದುವೆಯನ್ನು ಮಾಡಿಕೊಂಡು ಉತ್ತಮವಾದ ಸಂತಾನವನ್ನು ಪಡೆದು ಪ್ರಪಂಚದಲ್ಲೆಲ್ಲ ಪಾಪನಾಶಕವಾದ ಆ ತಿಥಿಯಲ್ಲಿ ಮಾಡಬೇಕಾದ ಕರ್ಮಕಲಾಪವನ್ನು ಶಾಶ್ವತವಾಗಿ ನೆಲೆಗೊಳಿಸಿದನು.

೧೧೬. ಬಹಳ ಕಾಲವಾದ ಮೇಲೆ ತಾನೂ ಸಂತೋಷದಿಂದ ಭಕ್ತಿಯುಕ್ತ

ತಸ್ಮಾತ್ಪುಣ್ಯತಮಾ ಚೈಷಾ ಮಧೌ ದರ್ಶಾಹ್ವಯಾ ತಿಥಿಃ ।
ನಾಽನಯಾ ಸದೃಶೀ ಲೋಕೇ ತಿಥಿರ್ದೃಷ್ಟ್ವಾ ಶ್ರುತಾಪಿ ವಾ ॥ ೧೧೭ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ದ್ವಿತೀಯೇ ವೈಷ್ಣವಖಂಡೇ ವೈಶಾಖಮಾಸಮಾಹಾತ್ಮ್ಯೇ ನಾರದಾಂಬರೀಷಸಂವಾದೇ "ಕಲಿಧರ್ಮನಿರೂಪಣೇ ಪಿತೃಮುಕ್ತಿವರ್ಣನಂ" ನಾಮ ದ್ವಾವಿಂಶೋಽಧ್ಯಾಯಃ

ನಾಗಿ ಪರಮಾತ್ಮನನ್ನಾರಾಧಿಸಲು ಗಂಧಮಾದನ ಪರ್ವತವನ್ನು ಕುರಿತು ಪ್ರಯಾಣವನ್ನು ಮಾಡಿದವನಾದನು.

೧೧೭. ಆದುದರಿಂದ ಚೈತ್ರಮಾಸದ ಅಮಾವಾಸ್ಯೆಯ ತಿಥಿಯು ಅತ್ಯಂತ ಪುಣ್ಯತಮವಾದುದೆನಿಸಿರುವುದು. ಇದಕ್ಕೆ ಸಮಾನವಾದ ಮತ್ತೊಂದು ತಿಥಿಯನ್ನು ನಾನು ಎಂದೂ ನೋಡಿದುದಿಲ್ಲ, ಕೇಳಿದುದೂ ಇಲ್ಲವು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀ ಸ್ಕಾಂದಮಹಾಪುರಾಣದ ಎರಡನೆಯ ವೈಷ್ಣವಖಂಡದ ವೈಶಾಖಮಾಸಮಾಹಾತ್ಮ್ಯದ ನಾರದಾಂಬರೀಷಸಂವಾದದಲ್ಲಿ "ಕಲಿಮಾಹಾತ್ಮ್ಯನಿರೂಪಣ— ಪಿತೃಮುಕ್ತಿ ವರ್ಣನ" ವೆಂಬ ಇಪ್ಪತ್ತೆರಡನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥ ತ್ರಯೋವಿಂಶೋಽಧ್ಯಾಯಃ

### ಅಕ್ಷಯತೃತೀಯಾಯಾಃ ಶ್ರೇಷ್ಠತ್ವಕಥನಂ

**ಶ್ರುತದೇವ ಉವಾಚ :—**

**ಅಥಾತಃ ಸಂಪ್ರವಕ್ಷ್ಯಾಮಿ ಮಾಹಾತ್ಮ್ಯಂ ಪಾಪನಾಶನಂ ।**
**ಅಕ್ಷಯ್ಯಾಯಾಸ್ತೃತೀಯಾಯಾಃ ಸಿತೇ ಪಕ್ಷೇ ಚ ಮಾಧವೇ ॥ ೧ ॥**
**ಯೇ ಕುರ್ವಂತಿ ಚ ತಸ್ಯಾಂ ವೈ ಪ್ರಾತಃಸ್ನಾನಂ ಭಗೋದಯೇ ।**
**ತೇ ಸರ್ವೇ ಪಾಪನಿರ್ಮುಕ್ತಾ ಯಾಂತಿ ವಿಷ್ಣೋಃ ಪರಂ ಪದಂ ॥ ೨ ॥**
**ದೇವಾನ್ ಪಿತೄನ್ ಮುನೀನ್ಯಸ್ತು ಕುರ್ಯಾದುದ್ದಿಶ್ಯ ತರ್ಪಣಂ ।**
**ತೇನಾಧೀತಂ ಚ ತೇನೇಷ್ಟಂ ತೇನ ಶ್ರಾದ್ಧಶತಂ ಕೃತಂ ॥ ೩ ॥**
**ಮಧುಸೂದನಮಭ್ಯರ್ಚ್ಯ ಕಥಾಂ ಶೃಣ್ವಂತಿ ಯೇ ನರಾಃ ।**
**ಅಕ್ಷಯ್ಯಾಯಾಂ ತೃತೀಯಾಯಾಂ ತೇ ನರಾ ಮುಕ್ತಿಭಾಗಿನಃ ॥ ೪ ॥**
**ಯೇ ದಾನಂ ತತ್ರ ಕುರ್ವಂತಿ ಮಧುದ್ವಿಟ್ಪ್ರೀತಯೇ ಶುಭಂ ।**
**ತದಕ್ಷಯ್ಯಂ ಫಲತ್ಯೇವ ಮಧುಶಾಸನಶಾಸನಾತ್ ॥ ೫ ॥**

---

### ಕನ್ನಡದ ಅನುವಾದ

#### ಅಕ್ಷಯತೃತೀಯಾಶ್ರೇಷ್ಠತ್ವ ವರ್ಣನ

೧. ಶ್ರುತದೇವನು ಹೇಳುತ್ತಾನೆ:—ಇನ್ನು ವೈಶಾಖಮಾಸದ ಶುಕ್ಲ ಪಕ್ಷದಲ್ಲಿ ಬರುವ ಅಕ್ಷಯತೃತೀಯೆಯೆಂಬ ತಿಥಿಯ ಪಾಪನಾಶಕವಾದ ಮಾಹಾತ್ಮ್ಯೆಯನ್ನು ವಿಸ್ತರಿಸಿ ಹೇಳುವೆನು.

೨. ಯಾರು ಆ ದಿನದಲ್ಲಿ ಸೂರ್ಯೋದಯಕಾಲಕ್ಕೆ ಸರಿಯಾಗಿ ಪ್ರಾತಃ ಸ್ನಾನವನ್ನು ಮಾಡುವರೊ, ಅವರು ಎಲ್ಲರೂ ಪಾಪಗಳನ್ನು ಕಳೆದುಕೊಂಡು ಮಹಾವಿಷ್ಣುವಿನ ಪರಾತ್ಪರವಾದ ವೈಕುಂಠವನ್ನು ಸೇರುವರು.

೩. ಯಾವನು ಅಂದು ದೇವತೆಗಳಿಗೂ, ಪಿತೃಗಳಿಗೂ, ಮಹರ್ಷಿಗಳಿಗೂ ಮನಃಪೂರ್ವಕವಾಗಿ ತರ್ಪಣಗಳನ್ನು ಕೊಡುವನೊ, ಅವನ ಅಧ್ಯಯನವೂ ಯಜ್ಞವೂ ಸಫಲವಾಗಿ ಒಂದು ನೂರು ಶ್ರಾದ್ಧಗಳನ್ನು ಮಾಡಿದ ಫಲವು ದೊರಕುವುದು.

೪. ಅಕ್ಷಯತೃತೀಯೆಯ ದಿನದಲ್ಲಿ ಯಾವ ಮಾನವರು ಮಧುಸೂದನನ ಪೂಜೆಯನ್ನು ಮಾಡಿ ಆತನ ಲೀಲೆಗಳ ಸತ್ಕಥೆಯನ್ನು ಶ್ರದ್ಧೆಯಿಂದ ಕೇಳುವರೊ, ಅವರು ಮೋಕ್ಷಕ್ಕೆ ಭಾಗಿಗಳಾಗುವರು.

೫. ಯಾರು ಶ್ರೀಕೃಷ್ಣನ ಪ್ರೀತಿಗಾಗಿ ದಾನಗಳನ್ನು ಮಾಡುವರೊ, ಅವರ ದಾನಗಳೆಲ್ಲವೂ ಪರಮಾತ್ಮನ ಅಪ್ಪಣೆಯಂತೆ ಅಕ್ಷಯ ಫಲವನ್ನು ಕೊಡುವುವು.

ದೇವರ್ಷಿಪಿತೃದೈವತ್ಯಾ ತಿಥಿರೇಷಾ ಮಹಾಶುಭಾ ।
ತ್ರಯಾಣಾಂ ತೃಪ್ತಿದಾತ್ರೀ ಚ ಕೃತೇ ಧರ್ಮೇ ಸನಾತನೇ ॥ ೬ ॥
ಪ್ರಖ್ಯಾತಿಶ್ಚ ತಿಥೇರಸ್ಯಾಃ ಕೇನ ಚಾಸ್ತಿ ತದಸ್ಯಹಂ ।
ವಕ್ಷ್ಯಾಮಿ ನೃಪಶಾರ್ದೂಲ ಸಾವಧಾನಮನಾಃ ಶೃಣು ॥ ೭ ॥
ಪುರಾ ಪುರಂದರಸ್ಯಾಽಽಸೀದ್ಯುದ್ಧಂ ಚ ಬಲಿನಾ ಸಹ ।
ದೇವಾನಾಂ ಚೈವ ದೈತ್ಯಾನಾಂ ದ್ವಂದ್ವಯುದ್ಧಮಭೂತ್ತತಃ ॥ ೮ ॥
ಸ ನಿರ್ಜಿತ್ಯ ಬಲಿಂ ದೈತ್ಯಂ ಪಾತಾಲತಲವಾಸಿನಂ ।
ಪುನರ್ಭುವಂ ಸಮಾಸಾದ್ಯ ಚೋತಥ್ಯಸ್ಯಾಶ್ರಮಂ ಯಯೌ ॥ ೯ ॥
ತತ್ರಾಪಶ್ಯಚ್ಚ ತತ್ಪತ್ನೀಂ ಗುರ್ವಿಣೀಂ ಮಂದಗಾಮಿನೀಂ ।
ಚಲಚ್ಛ್ರೋಣಿತಟಾಬದ್ಧಕಾಂಚೀದಾಮ್ನಾ ಸುಮಂಡಿತಾಂ ॥ ೧೦ ॥
ಕ್ವಣತ್ಕಂಕಣನಿರ್ಘೋಷಜಿತಮತ್ತಾಲಿಕೋಕಿಲಾಂ ।
ವಲ್ಗುಚಿತ್ರಾಂಬರಾಂ ರಾಮಾಂ ಮಂಜುವಾಚಂ ಶುಚಿಸ್ಮಿತಾಂ ॥ ೧೧ ॥

---

೬. ಈ ತಿಥಿಯು ದೇವತೆಗಳಿಗೂ ಮಹರ್ಷಿಗಳಿಗೂ ಪಿತೃದೇವತೆಗಳಿಗೂ ಪ್ರಿಯವಾಗಿ ಅತ್ಯಂತ ಪವಿತ್ರವಾಗಿರುವುದು. ಅಂದು ಸನಾತನಧರ್ಮಗಳಾದ ಯಜ್ಞಗಳನ್ನಾಚರಿಸಲು ಆ ಮೂರು ವರ್ಗದವರೂ ಸಂತೋಷವನ್ನು ಹೊಂದುವರು.

೭. ಮಹಾರಾಜಕುಲೋತ್ತುಂಗನೆ! ಈ ಪುಣ್ಯದಿವಸದ ಪ್ರಖ್ಯಾತಿಯು ಲೋಕದಲ್ಲಿ ಯಾರಿಂದುಂಟಾಯಿತೆಂಬ ವಿಷಯವನ್ನು ನಾನು ಈಗ ವಿವರಿಸುವೆನು. ಸಾವಧಾನಚಿತ್ತದಿಂದ ಕೇಳುವವನಾಗು.

೮. ಪೂರ್ವದಲ್ಲಿ ಮಹೇಂದ್ರನಿಗೊಮ್ಮೆ ಬಲಿಚಕ್ರವರ್ತಿಯೊಡನೆ ಯುದ್ಧವು ಪ್ರಸಕ್ತವಾಯಿತು. ಆಗ ದೇವತೆಗಳಿಗೂ ದೈತ್ಯರಿಗೂ ಭಯಂಕರವಾದ ದ್ವಂದ್ವ ಯುದ್ಧವು ಸಂಭವಿಸಿತು.

೯. ಆಗ ಮಹೇಂದ್ರನು ಪಾತಾಲ ಲೋಕದಲ್ಲಿ ವಾಸಮಾಡುವ ದೈತ್ಯ ರಾಜನಾದ ಬಲಿಯನ್ನು ಜಯಿಸಿದವನಾಗಿ ಹಿಂದಿರುಗುತ್ತ ಭೂಲೋಕಕ್ಕೆ ಬಂದು ಉತಥ್ಯನೆಂಬ ಮಹಾ ಪುರುಷನ ಆಶ್ರಮವನ್ನು ಸೇರಿದನು.

೧೦. ಅಲ್ಲಿ ಗರ್ಭಿಣಿಯಾಗಿ ಮೆಲ್ಲಮೆಲ್ಲಗೆ ಓಡಾಡುತ್ತಿರುವ ಆತನ ಪತ್ನಿಯನ್ನು ಕಂಡನು. ಆಕೆಯು ಚಲಿಸುತ್ತಿರುವ ನಿತಂಬಗಳ ಮೇಲೆ ಕಟ್ಟಿರುವ ಕಾಂಚೀದಾಮದಿಂದಲಂಕೃತಳಾಗಿದ್ದಳು.

೧೧. ತನ್ನ ಕೈಬಳೆಗಳ ಶಿಂಜಿತದಿಂದ ಮದಿಸಿದ ದುಂಬಿಗಳನ್ನೂ ಕೋಗಿಲೆಗಳನ್ನೂ ತಿರಸ್ಕರಿಸುತ್ತಿದ್ದಳು. ಸೂಕ್ಷ್ಮವಾದ ವಿಚಿತ್ರ ವಸ್ತ್ರವನ್ನುಟ್ಟು ಮೃದು ವಾಣಿಯಿಂದಲೂ ಶುಚಿಯಾದ ಎಳನಗೆಯಿಂದಲೂ ಮನೋಹರಳಾಗಿದ್ದಳು.

**ಲಸತ್ಕುಂಭಸ್ಥಲಾಭ್ಯಾಂ ಚ ಕುಚಾಭ್ಯಾಮುಪಶೋಭಿತಾಂ ।**
**ಲಸತ್ಪದ್ಮಮುಖಾಂ ದಿವ್ಯಾಂ ನೀಲೋತ್ಪಲಸುಲೋಚನಾಂ ॥ ೧೨ ॥**
**ಕೇತಕ್ಯುದರಪಾಂಡುಭ್ಯಾಂ ಗಂಡಾಭ್ಯಾಂ ಚ ಮನೋರಮಾಂ ।**
**ಶ್ರಮೋಚ್ಛ್ವಸಂತೀಂ ದೀನಾಕ್ಷೀಂ ಪರ್ಣಶಾಲಾಮುಖೇ ಸ್ಥಿತಾಂ ॥ ೧೩ ॥**
**ಸ್ವಪತೀಂ ಶಯನೇ ಕ್ವಾಪಿ ತಾಂ ದೃಷ್ಟ್ವಾ ಮೋಹಮಾಗತಃ ।**
**ಬಲಾತ್ಕಾರೇಣ ಬುಭುಜೇ ಗುರ್ವಿಣೀಂ ಪಾಕಶಾಸನಃ ॥ ೧೪ ॥**
**ಗರ್ಭಸ್ಥಸ್ತು ತದಾ ಪಿಂಡಃ ಸ್ವಸ್ಯ ಪಾತವಿಶಂಕಯಾ ।**
**ಛಾದಯಾಮಾಸ ವೈ ಯೋನಿಂ ದ್ವಾರೇ ಪಾದೇನ ದುಃಖಿತಃ ॥ ೧೫ ॥**
**ತತಶ್ಚಸ್ಕಂದ ವೀರ್ಯಂ ತದ್ಭೂಮಾವೇವ ಬಲಿದ್ವಿಷಃ ।**
**ಗರ್ಭಸ್ಥಾಯ ಚುಕೋಪಾಸೌ ಭಗವಾನ್ ಪಾಕಶಾಸನಃ ॥ ೧೬ ॥**
**ತಂ ಶಶಾಪ ಚ ಗರ್ಭಸ್ಥಂ ರುಷಾ ತಾಮ್ರಾಂತಲೋಚನಃ ।**
**ಜಾತ್ಯಂಧೋ ಭವ ದುರ್ಬುದ್ಧೇ ಮಾಽವಮಂಸ್ಥಾ ಯತಃ ಪದಾ ॥ ೧೭ ॥**

---

೧೨. ಉನ್ನತಗಳಾದ ಆನೆಯ ಕುಂಭಸ್ಥಳಗಳಂತೆ ತೋರುವ ಕುಚಗಳಿಂದ ಶೋಭಿಸುವವಳಾಗಿ ನಗೆಯಿಂದ ಕೂಡಿದ ಕಮಲ ಮುಖದಿಂದಲೂ, ನೀಲೋತ್ಪಲಗಳನ್ನು ಹೋಲುವ ನೇತ್ರಗಳಿಂದಲೂ ದಿವ್ಯಸುಂದರಿಯೆನಿಸಿದ್ದಳು.

೧೩. ಆಕೆಯು ಕೇತಕೀಪುಷ್ಪದ ಗರ್ಭದಂತೆ ಬೆಳ್ಳಗಿರುವ ಕಪೋಲಗಳುಳ್ಳವಳಾಗಿ, ನೋಡುವವರ ಮನಸ್ಸನ್ನಾಕರ್ಷಿಸುತ್ತ, ಶ್ರಮದಿಂದ ನಿಟ್ಟುಸಿರನ್ನು ಬಿಡುತ್ತ, ದೀನದೃಷ್ಟಿಯುಳ್ಳವಳಾಗಿ ಪರ್ಣಶಾಲೆಯ ದ್ವಾರದಲ್ಲಿ ಮಲಗಿದ್ದಳು.

೧೪. ಇಂತು ಉತ್ತಮಾಸನದಲ್ಲಿ ಮಲಗಿದ್ದ ಆಕೆಯನ್ನು ಕಂಡು ಮಹೇಂದ್ರನು ನಿದ್ರಿಸುತ್ತಿದ್ದ ಆಕೆಯಲ್ಲಿ ಮೋಹವನ್ನು ಪಡೆದನು. ಮತ್ತು ಗರ್ಭಿಣಿಯಾದ ಆಕೆಯನ್ನು ಬಲಾತ್ಕಾರದಿಂದುಪಭೋಗಿಸಿದನು.

೧೫. ಆಕೆಯ ಗರ್ಭದಲ್ಲಿದ್ದ ಪಿಂಡವು ಇದನ್ನು ಕಂಡು ಹೊಸ ಗರ್ಭದಿಂದ ತನ್ನ ಪತನವಾಗುವುದೆಂಬ ಭಯದಿಂದ ಕಾತರಗೊಂಡು ಯೋನಿಯ ದ್ವಾರವನ್ನು ತನ್ನ ಪಾದದಿಂದ ಮುಚ್ಚಿಬಿಟ್ಟಿತು.

೧೬. ಆದುದರಿಂದ ಮಹೇಂದ್ರನ ವೀರ್ಯವು ಭೂಮಿಯಲ್ಲಿಯೇ ಬಿದ್ದು ಹೋಯಿತು. ಆಗ ಅಮೋಘವೀರ್ಯನಾದ ಮಹೇಂದ್ರನು ಆ ಗರ್ಭದಲ್ಲಿದ್ದ ಪಿಂಡದ ಮೇಲೆ ಆಗ್ರಹವನ್ನು ಮಾಡಿದನು.

೧೭. ಕೋಪದಿಂದ ಕಿಡಿಗಳನ್ನು ಕಾರುವ ಕುಡಿಗಣ್ಣುಗಳುಳ್ಳವನಾಗಿ ಗರ್ಭಸ್ಥವಾದ ಶಿಶುವನ್ನು ಕುರಿತು "ಎಲೈ ದುರ್ಬುದ್ಧಿಯೆ! ನನ್ನ ವೀರ್ಯವನ್ನು ಪಾದದಿಂದೊದೆದು ಅವಮಾನಗೊಳಿಸಿದೆಯಾದಕಾರಣದಿಂದ ನೀನು ಹುಟ್ಟು ಕುರುಡನಾಗಿ ಜನಿಸು" ಎಂದು ಶಾಪವನ್ನು ಕೊಟ್ಟನು.

ಪ್ರಚ್ಛಾದ್ಯ ಯೋನಿದ್ವಾರಂ ಚ ತತೋ ದೀರ್ಘತಪಾಹ್ವಯಃ ।
ಪದಾ ಪ್ರಸ್ಕಂದಿತಾದ್ವೀರ್ಯಾಜ್ಜಾಲತಸ್ಸಮಜಾಯತ ॥ ೧೮ ॥
ಪಶ್ಚಾದಿಂದ್ರೋ ಯಯೌ ಶೀಘ್ರಂ ಮುನೇಃ ಶಾಪವಿಶಂಕಿತಃ ।
ಪಲಾಯಂತಂ ಹರಿಂ ದೃಷ್ಟ್ವಾ ಜಹಸುರ್ಬಟವೋಽಖಿಲಾಃ ॥ ೧೯ ॥
ತತಸ್ತು ವ್ರೀಡಿತೋ ಭೂತ್ವಾ ಯಯೌ ಮೇರೋರ್ಗುಹಾಂ ಶುಭಾಂ ।
ತತ್ರ ಲೀನಶ್ಚಚಾರಾಸೌ ದುಸ್ತರಂ ವೈ ತಪೋ ಮಹತ್ ॥ ೨೦ ॥
ಮೇರೌ ವಿಲೀಯ ವಸತಿ ದೇವೇಂದ್ರೇ ಲಜ್ಜಯಾನ್ವಿತೇ
ಗೂಢೈರ್ವಿಜ್ಞಾಯ ತಾಂ ವಾರ್ತಾಂ ದೈತೇಯಾ ಬಲಿಪೂರ್ವಕಾಃ ।
ಸುರಾನಾಕ್ರಮ್ಯ ಬುಭುಜುರ್ಬಲೀಂದ್ರಶ್ಚಾಮರಾವತೀಂ ॥ ೨೧ ॥
ದಿಕ್ಪಾಲಾನಾಂ ವಿಭೂತೀಶ್ಚ ಶಂಬರಾದ್ಯಾ ಬಲೀಯಸಃ ।
ಬಲಾದ್ಬುಭುಜಿರೇ ಹೀನನಾಥೇ ರಾಷ್ಟ್ರೇ ದಿವೌಕಸಾಂ ॥ ೨೨ ॥

---

೧೮. ಇಂತು ತಾಯಿಯ ಯೋನಿದ್ವಾರವು ಪ್ರಚ್ಛಾದಿತವಾಗಿ ಭೂಮಿಗೆ ಬಿದ್ದ ವೀರ್ಯದಿಂದ ದೀರ್ಘತಪನೆಂಬ ಮಹಾತ್ಮನೊಬ್ಬನು ಜಾಲದಲ್ಲಿ ಉದ್ಭವಿಸಿದನು.

೧೯. ಬಳಿಕ ಮಹೇಂದ್ರನು ಉತಥ್ಯ ಮಹರ್ಷಿಯ ಶಾಪದ ದೆಸೆಯಿಂದ ಭಯಗೊಂಡವನಾಗಿ ಶೀಘ್ರವಾಗಿ ಆಶ್ರಮವನ್ನು ಬಿಟ್ಟು ಹೊರಟನು. ಓಡಿ ಹೋಗುತ್ತಿರುವ ಇಂದ್ರನನ್ನು ಕಂಡು ಆಶ್ರಮವಾಸಿಗಳಾದ ಬ್ರಹ್ಮಚಾರಿಗಳೆಲ್ಲರೂ ಹಾಸ್ಯಮಾಡಿ ನಗುತ್ತಿದ್ದರು.

೨೦. ಆದರಿಂದ ನಾಚಿಕೆಗೊಂಡು ಇಂದ್ರನು ಪವಿತ್ರವಾದ ಮೇರು ಪರ್ವತದ ಗುಹೆಯೊಂದನ್ನಾಶ್ರಯಿಸಿದನು. ಅಲ್ಲಿ ತನ್ನ ಸ್ವರೂಪವನ್ನು ಮರೆಮಾಚಿಕೊಂಡು ತನ್ನ ಪಾಪದ ಪ್ರಾಯಶ್ಚಿತ್ತಕ್ಕಾಗಿ ಬಹು ದುಸ್ತರವಾದ ತಪಸ್ಸನ್ನು ಮಾಡುತ್ತಿದ್ದನು.

೨೧. ಇಂತು ದೇವೇಂದ್ರನು ಲಜ್ಜಾಭರದಿಂದ ಕೂಡಿ ಮೇರುಪರ್ವತದಲ್ಲಿ ತನ್ನ ಸ್ವರೂಪವನ್ನು ಮರೆಮಾಚಿಕೊಂಡು ವಾಸಿಸುತ್ತಿರಲು ಬಲಿಚಕ್ರವರ್ತಿಯೇ ಮುಂತಾದ ರಾಕ್ಷಸರು ತಮ್ಮ ಗೂಢಚಾರರ ಮೂಲಕ ಈ ವಿಷಯವನ್ನು ತಿಳಿದುಕೊಂಡು ದೇವತೆಗಳನ್ನು ಬಲಾತ್ಕಾರದಿಂದ ನಿಗ್ರಹಿಸಿ ಐಶ್ವರ್ಯವೆಲ್ಲವನ್ನೂ ಅನುಭವಿಸುತ್ತಿದ್ದರು. ಬಲಿಯು ಅಮರಾವತಿಯನ್ನು ಆಕ್ರಮಿಸಿ ಆಳುತ್ತಿದ್ದನು.

೨೨. ಅಷ್ಟದಿಕ್ಪಾಲಕರ ಸಕಲೈಶ್ವರ್ಯಗಳನ್ನೂ ಶಂಬರನೇ ಮೊದಲಾದ ಬಲಿಷ್ಠರಾದ ರಾಕ್ಷಸರು ಬಲಾತ್ಕಾರವಾಗಿ ಉಪಭೋಗಿಸುತ್ತಿರಲು ದೇವತೆಗಳ ರಾಜ್ಯವೆಲ್ಲವೂ ಅನಾಯಕವಾಗಿ ಪರಿಣಮಿಸಿತು.

ರಕ್ಷಿತಾರಮನುಜಾನಂತಃ ದೇವಾಶ್ಚಾಗ್ನಿಪುರೋಗಮಾಃ ।
ಪಪ್ರಚ್ಛುರ್ಧಿಷಣಂ ದೇವಂ ದೇವಾಚಾರ್ಯಮಕಲ್ಮಷಂ ॥ ೨೩ ॥
ಪಪ್ರಚ್ಛುರಿಂದ್ರವೃತ್ತಾಂತಂ ಕ್ವ ಸ್ಥಿತಿಸ್ತ್ವಿತಿ ನಃ ಪ್ರಭುಃ ।
ದೈತ್ಯಾಕ್ರಾಂತಮಿದಂ ರಾಷ್ಟ್ರಂ ಹೀನನಾಥಂ ದಿವೌಕಸಾಂ ॥ ೨೪ ॥
ಕುತೋ ನಾಽಯಾತಿ ದೇವೋಽಸೌ ಭೂಯಾನ್ಕಾಲೋ ಗತೋ ವಿಭೋ ।
ತಂ ಯಾಮೋ ಯತ್ರ ಧಿಷಣ ಪ್ರಾರ್ಥಯಾಮಶ್ಚ ತಂ ವಿಭುಂ ॥ ೨೫ ॥
ಇತಿ ಪೃಷ್ಟಸ್ತದಾ ದೇವಾನ್ ಧಿಷಣಸ್ತಾನುವಾಚ ಹ ॥ ೨೬ ॥
ರಸಾತಲೇ ಬಲಿಂ ಜಿತ್ವಾ ಚೋತಥ್ಯಸ್ಯಾಶ್ರಮಂ ಯಯೌ ।
ಭುಕ್ತ್ವಾ ಪತ್ನೀಂ ಚ ದಾರ್ಢ್ಯೇನ ತಚ್ಛಿಷ್ಯೈರೇವ ನಿಂದಿತಃ ॥ ೨೭ ॥
ವ್ರೀಡಿತಸ್ತು ದಿವಂ ಯಾತುಂ ಗುಹಾಂ ಮೇರೋರ್ವಿವೇಶ ಹ ।
ತತ್ರೈವಾಸ್ತೇ ಶಚೀಯುಕ್ತಃ ಸ್ವಕೃತಂ ಚಿಂತಯನ್ವಿಭುಃ ॥ ೨೮ ॥

೨೩. ಆಗ ಅಗ್ನಿಯೇ ಮುಂತಾದ ದೇವತೆಗಳು ತಮ್ಮನ್ನು ರಕ್ಷಿಸುವ ಪ್ರಭುವನ್ನು ಕಾಣದೆ ಜ್ಞಾನಸಂಪನ್ನನೂ, ದೇವತೆಗಳ ಗುರುವೂ, ನಿಷ್ಕಲ್ಮಷನೂ ಆದ ಬೃಹಸ್ಪತಿಯನ್ನು ಪ್ರಶ್ನೆಮಾಡತೊಡಗಿದರು.

೨೪. ಮಹೇಂದ್ರನ ವೃತ್ತಾಂತವನ್ನು ಅವರು ಪ್ರಶ್ನೆಮಾಡಿದರು. ಎಲೈ ಬೃಹಸ್ಪತಿಯೆ! ನಮ್ಮ ಸ್ವಾಮಿಯಾದ ಮಹೇಂದ್ರನು ಈಗ ಎಲ್ಲಿ ನೆಲಸಿರುವನು? ನಾಯಕರಹಿತವಾಗಿರುವ ಈ ದೇವತೆಗಳ ಸಾಮ್ರಾಜ್ಯವೆಲ್ಲವೂ ರಾಕ್ಷಸರಿಂದ ಆಕ್ರಮಿಸಲ್ಪಟ್ಟಿರುವುದು.

೨೫. ಗುರುವೆ? ನಮ್ಮ ಸ್ವಾಮಿಯು ಏಕೆ ಬಾರದಿರುವನು? ಆತನು ಕಾಣದೆ ಬಹಳ ಕಾಲವು ಕಳೆದು ಹೋಗಿರುವುದಲ್ಲವೆ. ಬೃಹಸ್ಪತಿಯೆ! ಆತನಿರುವೆಡೆಗೆ ಹೋಗಿ ಒಡೆಯನಾದ ಆತನನ್ನು ಹಿಂದಿರುಗುವಂತೆ ಪ್ರಾರ್ಥಿಸೋಣ.

೨೬. ಇಂತೆಂದು ದೇವತೆಗಳು ಕಾತರರಾಗಿ ಪ್ರಶ್ನೆಮಾಡುತ್ತಿರಲು ಬೃಹಸ್ಪತ್ಯಾಚಾರ್ಯನು ಅವರಿಗೆ ಹಿಂದಿನ ವೃತ್ತಾಂತವನ್ನು ತಿಳಿಸಿದನು.

೨೭. ಮಹೇಂದ್ರನು ಹಿಂದೆ ರಸಾತಲಲೋಕಕ್ಕೆ ಹೋಗಿ ಬಲಿಯನ್ನು ಗೆದ್ದು ಹಿಂದಿರುಗುತ್ತ ಭೂಲೋಕದಲ್ಲಿ ಉತಥ್ಯಮಹಾಮುನಿಯ ಆಶ್ರಮಕ್ಕೈತಂದನು. ಆತನ ಪತ್ನಿಯಲ್ಲಿ ಮೋಹಗೊಂಡು ಆಕೆಯನ್ನು ಬಲಾತ್ಕಾರದಿಂದುಪಭೋಗಿಸಿ ಶಿಷ್ಯಮಂಡಲಿಯ ತೀವ್ರ ನಿಂದೆಗೆ ಗುರಿಯಾದನು.

೨೮. ಮತ್ತು ಪುನಃ ಸ್ವರ್ಗಲೋಕಕ್ಕೆ ಬರಲು ನಾಚಿಕೆಪಟ್ಟುಕೊಂಡು ಮೇರುಪರ್ವತದ ಒಂದು ಗುಹೆಯನ್ನು ಪ್ರವೇಶಿಸಿದನು. ಈಗಲೂ ಆತನು

ಇತಿ ತಸ್ಯ ವಚಃ ಶ್ರುತ್ವಾ ದೇವಾ ಅಗ್ನಿಪುರೋಗಮಾಃ ।
ಗುಹಾಂ ಮೇರೋರ್ಯಯುಶ್ಶೀಘ್ರಂ ದೃಷ್ಟ್ವಾ ಪ್ರಾರ್ಥಯಿತುಂ ವಿಭುಂ॥
ತತ್ರ ದೃಷ್ಟ್ವಾ ಗುಹಾಲೀನಂ ದೇವೇಂದ್ರಂ ಪಾಕಶಾಸನಂ ।
ತುಷ್ಟುವುರ್ವಿವಿಧೈಸ್ತೋತ್ರೈಸ್ತದೀಯೈರ್ಲೋಕವಿಶ್ರುತೈಃ ॥ ೩೦ ॥
ಇಂದ್ರ ತುಭ್ಯಂ ನಮಸ್ತೇಽಸ್ತು ಸರ್ವದೇವಾಧಿಪಾಯ ತೇ ।
ವಯಂ ದೈತ್ಯೈರರ್ದಿತಾಶ್ಚ ತ್ವಯಾ ಹೀನಾ ಭೃಶಾರ್ದಿತಾಃ ॥ ೩೧ ॥
ಸ್ಥಾನಭ್ರಷ್ಟಾಶ್ಚರಾಮೋಽಂಗ ನಾನಾದೇಶೇಷು ದುಃಖಿತಾಃ ।
ತಸ್ಮಾದಾಗತ್ಯ ದೇವೇಂದ್ರ ಜಹಿ ಶತ್ರೂನರಿಂದಮ ॥ ೩೨ ॥
ಇತಿ ಸ್ತುತಸ್ತದಾ ದೇವೈರ್ನಿಶ್ಚಕ್ರಾಮ ಗುಹಾಮುಖಾತ್ ।
ಲಜ್ಜಯಾವನತೋ ಭೂತ್ವಾ ಪಶ್ಯನ್ ಭೂಮಿಂ ಚ ಚಕ್ಷುಷಾ ॥ ೩೩ ॥
ನ ಕಿಂಚಿದಪಿ ಚೋವಾಚ ದುಃಖಾದ್ಗದ್ಗದಭಾಷಣಃ ।
ತದ್ಜ್ಞಾತ್ವಾ ಧಿಷಣಃ ಪ್ರಾಹ ತಂ ಸುರೇಂದ್ರಂ ಭಯಾನಕಂ ॥ ೩೪ ॥

---

ತಾನು ಮಾಡಿದ ಮಹದಪಚಾರವನ್ನು ಕುರಿತು ಚಿಂತಿಸುತ್ತ ಶಚೀಸಮೇತನಾಗಿ ಅಲ್ಲಿಯೇ ವಾಸಮಾಡುತ್ತಿರುವನು.

೨೯. ಇಂತೆಂದ ಬೃಹಸ್ಪತಿಯ ಮಾತುಗಳನ್ನು ಕೇಳಿ ಅಗ್ನಿಯೇ ಮೊದಲಾದ ದೇವತೆಗಳೆಲ್ಲರೂ ದೇವೇಶ್ವರನನ್ನು ಕಂಡು ಪ್ರಾರ್ಥನೆಯನ್ನು ಮಾಡಲು ವೇಗವಾಗಿ ಮೇರುಪರ್ವತದ ಗುಹೆಯನ್ನು ಕುರಿತು ಹೊರಟರು.

೩೦. ಅಲ್ಲಿ ಒಂದು ಗುಹೆಯಲ್ಲಿ ತನ್ನ ರೂಪವನ್ನು ಮರೆಸಿಕೊಂಡು ವಾಸಿಸುತ್ತಿದ್ದ ಪಾಕಶಾಸನನಾದ ದೇವೇಂದ್ರನನ್ನು ಕಂಡು ಲೋಕವಿಖ್ಯಾತಗಳಾದ ಆತನ ಪರಾಕ್ರಮಗಳನ್ನು ಪ್ರಕಾಶಗೊಳಿಸುವ ಬಹುವಿಧಸ್ತೋತ್ರಗಳಿಂದ ಆತನನ್ನು ಹೊಗಳಿದರು.

೩೧. ಸರ್ವೈಶ್ವರ್ಯಸಹಿತನೂ ಸಕಲದೇವತೆಗಳಿಗೆ ಅಧೀಶ್ವರನೂ ಆದ ನಿನಗೆ ನಮಸ್ಕರಿಸುವೆವು. ನಾವು ನಾಯಕನಾದ ನಿನ್ನಿಂದ ತ್ಯಕ್ತರಾಗಿ ದೈತ್ಯರಿಂದ ಬಹುವಾಗಿ ಪರಾಭವವನ್ನು ಪಡೆದು ಕಷ್ಟಪಡುತ್ತಿರುವೆವು.

೩೨. ಸ್ವಾಮಿಯೆ! ನಾವು ನಮ್ಮ ನಮ್ಮ ಸ್ಥಾನಗಳಿಂದ ಭ್ರಷ್ಟರಾಗಿ ದುಃಖಗಳನ್ನನುಭವಿಸುತ್ತ ಅನೇಕ ದೇಶಗಳಲ್ಲಿ ಸಂಚರಿಸುತ್ತಿರುವೆವು. ಶತ್ರುನಾಶಕನಾದ ಮಹೇಂದ್ರನೆ! ನೀನು ಬಂದು ಶತ್ರುಗಳೆಲ್ಲರನ್ನೂ ನಿಗ್ರಹಿಸು.

೩೩. ಇಂತೆಂದು ದೇವತೆಗಳು ಸ್ತೋತ್ರಮಾಡುತ್ತಿರಲು ದೇವೇಂದ್ರನು ನಾಚಿಕೆಯಿಂದ ಕೂಡಿ ತಲೆಯನ್ನು ಬಗ್ಗಿಸಿಕೊಂಡು ಭೂಮಿಯನ್ನೇ ನೋಡುತ್ತ ಗುಹೆಯ ಬಾಗಿಲಿನಿಂದ ಹೊರಕ್ಕೆ ಹೊರಟುಬಂದನು.

೩೪. ದುಃಖದಿಂದ ಕಂಠವು ಗದ್ಗದಿತವಾಗುತ್ತಿರಲು ಆತನು ಏನನ್ನೂ

ಮಾ ಶಂಕಾ ತೇ ಸುರಪತೇ ಕರ್ಮಾಧೀನಮಿದಂ ಜಗತ್ ।
ಮಾನಾಮಾನೌ ಸುಖಂ ದುಃಖಂ ಲಾಭಾಲಾಭೌ ಜಯಾಜಯೌ ॥ ೩೫ ॥
ಪೂರ್ವಕರ್ಮಾಽನುರೋಧೇನ ಭವಂತ್ಯೇತೇ ನ ಸಂಶಯಃ ।
ಜೀವಃ ಕರ್ಮಾನುಗೋ ದುಃಖಂ ದಿಷ್ಟಂ ದೈವೇನ ಕಾಲತಃ ॥ ೩೬ ॥
ಪ್ರಾಜ್ಞಾಃ ಪ್ರಾಯೋ ನ ಶೋಚಂತಿ ನ ಪ್ರಹೃಷ್ಯಂತಿ ವೈ ಸುಖಾತ್ ।
ತಸ್ಮಾತ್ಪ್ರಾರಬ್ಧತಃ ಪ್ರಾಪ್ತಂ ದುಃಖಂ ಚೇದಂ ತವ ಪ್ರಭೋ ॥ ೩೭ ॥
ತತ್ಪ್ರಾಪ್ಯ ಮಘವನ್ ದುಃಖಂ ನೈವ ಶೋಚಿತುಮರ್ಹಸಿ ।
ಇತ್ಯುಕ್ತೋ ಗುರುಣಾ ಚಾಽಹ ಮಘವಾನಮರಾಧಿಪಾನ್ ॥ ೩೮ ॥

ಇಂದ್ರ ಉವಾಚ:—

ಪರಸ್ತ್ರೀಸಂಗದೋಷೇಣ ಬಲಂ ವೀರ್ಯಂ ಯಶೋಽಮಲಂ ।
ಮಂತ್ರಶಕ್ತಿಶ್ಶಾಸ್ತ್ರಶಕ್ತಿರ್ವಿದ್ಯಾಶಕ್ತಿಶ್ಚ ಮಾನದ ॥ ೩೯ ॥

---

ಹೇಳಲಾರದವನಾಗಿ ನಿಂತಿದ್ದನು. ಆತನ ಅವಸ್ಥೆಯನ್ನು ಕಂಡು ಬೃಹಸ್ಪತಿಯು ಭಯದಿಂದ ನಡುಗುತ್ತಿರುವ ದೇವೇಂದ್ರನಿಗೆ ಹೇಳತೊಡಗಿದನು.

೩೫–೩೬. ಸುರನಾಯಕನೆ! ನಿನ್ನ ದುಷ್ಕೃತ್ಯದ ವಿಷಯದಲ್ಲಿ ಚಿಂತೆಯನ್ನು ಮಾಡಬೇಡ. ಈ ಜಗತ್ತೆಲ್ಲವೂ ಕರ್ಮಾಧೀನವಾಗಿರುವುದು. ಮಾನ, ಅವಮಾನ, ಸುಖ, ದುಃಖ, ಲಾಭ, ನಷ್ಟ, ಜಯ, ಪರಾಜಯಗಳೇ ಮೊದಲಾದ ಸಕಲ ದ್ವಂದ್ವಗಳೂ ಪೂರ್ವಕರ್ಮಗಳ ಪರಿಪಾಕದ ರೂಪವಾಗಿಯೇ ಸಂಭವಿಸುವುವು. ಇದರಲ್ಲಿ ಸಂದೇಹವಿಲ್ಲ. ಜೀವನು ತನ್ನ ಕರ್ಮವನ್ನನುಸರಿಸಿಯೇ ನಡೆಯುತ್ತಾನೆ. ಕರ್ಮಫಲಗಳನ್ನನುಭವಿಸಬೇಕಾದ ಕಾಲವನ್ನು ತಿಳಿದೇ ದೈವವು ಮನುಷ್ಯನಿಗೆ ದುಃಖಗಳನ್ನು ಕೊಡುತ್ತಿರುವುದು.

೩೭. ಈ ಸೂಕ್ಷ್ಮವನ್ನು ತಿಳಿದವನು ಕಷ್ಟಗಳು ಸಂಭವಿಸಲು ಪ್ರಾಯಿಕವಾಗಿ ದುಃಖಗೊಳ್ಳುವುದಿಲ್ಲ. ಸುಖಗಳುಂಟಾಗಲು ಸಂತೋಷವನ್ನು ಹೊಂದುವುದಿಲ್ಲ. ಸ್ವಾಮಿಯೆ! ಆದುದರಿಂದ ನಿನ್ನ ಈ ದುಃಖವು ಪ್ರಾರಬ್ಧಕರ್ಮದ ಫಲವಾಗಿಯೇ ಪ್ರಾಪ್ತವಾಗಿರುವುದು.

೩೮. ಮಹೇಂದ್ರನೆ! ಆದುದರಿಂದ ಈ ದುಃಖವನ್ನು ಹೊಂದಿದ ಮಾತ್ರದಿಂದಲೇ ನೀನು ಶೋಕಗೊಳ್ಳಬಾರದು. ಇಂತೆಂದು ದೇವಗುರುವಾದ ಬೃಹಸ್ಪತಿಯು ನಿರೂಪಿಸುತ್ತಿರಲು ಮಹೇಂದ್ರನು ದೇವೋತ್ತಮರನ್ನು ಕುರಿತು ಹೇಳತೊಡಗಿದನು.

೩೯–೪೧. ಇಂದ್ರನು ಹೇಳುತ್ತಾನೆ:—ಪೂಜ್ಯನಾದ ಆಚಾರ್ಯನೆ! ಪರಸ್ತ್ರೀಯನ್ನು ಬಲಾತ್ಕಾರದಿಂದ ಸಂಭೋಗಿಸಿದ ಕಾರಣ ನನ್ನ ಬಲವೂ, ಪರಾಕ್ರಮವೂ, ನಿರ್ಮಲವಾದ ಯಶಸ್ಸೂ, ಮಂತ್ರಶಕ್ತಿಯೂ, ಶಾಸ್ತ್ರ

ಅಭವನ್ನಷ್ಟವೀರ್ಯಂ ಮೇ ತೂಷ್ಣೀಂ ತೇನ ವಸಾಮ್ಯಹಂ ।
ಪಾಕಶಾಸನವಾಕ್ಯಂ ತು ಶ್ರುತ್ವಾ ಸ್ವಾಚಾರ್ಯಸಂಯುತಾಃ ॥ ೪೦ ॥
ಮಂತ್ರಯಾಮಾಸುರೇಕಾಂತೇ ಪುನಸ್ತಸ್ಯ ಬಲಾಪ್ತಯೇ ।
ತದಾ ಗುರುಶ್ಚ ತಾನ್ ಪ್ರಾಹ ಕರುಣಂ ಚ ವಿದುತ್ತಮಃ ॥ ೪೧ ॥

ಬೃಹಸ್ಪತಿರುವಾಚ :—

ಮಾಸೋ ವೈಶಾಖನಾಮಾಽಯಂ ಪ್ರಿಯೋ ವೈ ಮಧುಘಾತಿನಃ ।
ಸರ್ವಾಶ್ಚ ತಿಥಯಃ ಪುಣ್ಯಾ ಮಾಸೇಽಸ್ಮಿನ್ ಮಾಧವಪ್ರಿಯೇ ॥ ೪೨ ॥
ತತ್ರಾಪಿ ಚ ಸಿತೇ ಪಕ್ಷೇ ಮಾಸೇಽಸ್ಮಿನ್ ಅಕ್ಷಯಾಹ್ವಯಾ ।
ಯಾ ತಸ್ಯಾಂ ಸ್ನಾನದಾನಾದಿ ಶ್ರದ್ಧಯಾ ಚ ಕರೋತಿ ವೈ ॥ ೪೩ ॥
ತಸ್ಯ ಪಾಪಸಹಸ್ರಾಣಿ ನಶ್ಯಂತ್ಯೇವ ನ ಸಂಶಯಃ ।
ಅನವದ್ಯಂ ತಥೈಶ್ವರ್ಯಂ ಬಲಂ ಧೈರ್ಯಂ ಭವಂತಿ ಚ ॥ ೪೪ ॥
ತಸ್ಮಾತ್ತಸ್ಯಾಂ ತೃತೀಯಾಯಾಂ ಹರಿಣಾ ಬಲವಿದ್ವಿಷಾ ।
ಸ್ನಾನದಾನಾದಿಸದ್ಧರ್ಮಾನ್ ಕಾರಯಾಮೋ ಹಿತಾಽಪ್ತಯೇ ॥ ೪೫ ॥

---

ಜ್ಞಾನವೂ, ವಿದ್ಯಾಬಲವೂ ವೀರ್ಯರಹಿತಗಳಾಗಿ ಹತಪ್ರಾಯಗಳೆನಿಸಿರುವುವು. ಆದುದರಿಂದಲೇ ನಾನು ಸುಮ್ಮನೆ ಇಲ್ಲಿ ವಾಸಮಾಡುತ್ತಿರುವೆನು. ಇಂತೆಂದ ಪಾಕಶಾಸನನ ಮಾತುಗಳನ್ನು ಕೇಳಿ ದೇವತೆಗಳೆಲ್ಲರೂ ಬೃಹಸ್ಪತಿಯೊಡನೆ ಒಂದು ಏಕಾಂತಪ್ರದೇಶದಲ್ಲಿ ಕುಳಿತು ಇಂದ್ರನಿಗೆ ಪುನಃ ಬಲವನ್ನು ಸಂಪಾದಿಸುವ ಮಾರ್ಗದ ವಿಷಯದಲ್ಲಿ ಮಂತ್ರಾಲೋಚನೆಯನ್ನು ನಡೆಸಿದರು. ಆಗ ಶಾಸ್ತ್ರಜ್ಞರಲ್ಲಿ ಅಗ್ರೇಸರನಾದ ಬೃಹಸ್ಪತಿಯು ಕನಿಕರಗೊಂಡು ದೇವತೆಗಳನ್ನು ಕುರಿತು ಉಪಾಯವನ್ನು ಹೇಳಿದನು.

೪೨. ಬೃಹಸ್ಪತಿಯು ಹೇಳುತ್ತಾನೆ :—"ಈಗ ವೈಶಾಖಮಾಸವು ನಡೆಯುತ್ತಿರುವುದು. ಈ ತಿಂಗಳು ಮಧುಸೂದನನಿಗೆ ಅತ್ಯಂತಪ್ರಿಯವಾಗಿರುವುದು. ಲಕ್ಷ್ಮೀರಮಣನಿಗೆ ಪ್ರಿಯವಾದ ಈ ಮಾಸದಲ್ಲಿ ಸಕಲ ತಿಥಿಗಳೂ ಪುಣ್ಯಪ್ರದಗಳಾಗಿರುವುವು.

೪೩. ಅವುಗಳಲ್ಲಿಯೂ ಮಾಸದ ಶುಕ್ಲಪಕ್ಷದಲ್ಲಿ ಯಾವ ತಿಥಿಯು ಅಕ್ಷಯತೃತೀಯೆಯೆಂದು ಪ್ರಸಿದ್ಧಿಯನ್ನು ಪಡೆದಿರುವುದೋ, ಅದರಲ್ಲಿ ಪ್ರತಿಯೊಬ್ಬನೂ ಸ್ನಾನದಾನಗಳೇ ಮುಂತಾದ ಸತ್ಕಾರ್ಯಗಳನ್ನು ಶ್ರದ್ಧೆಯಿಂದ ಮಾಡಬೇಕು.

೪೪. ಆತನಿಗೆ ಸಾವಿರಾರು ಪಾತಕಗಳೂ ನಾಶವನ್ನು ಹೊಂದುವುದರಲ್ಲಿ ಸಂದೇಹವೇ ಇಲ್ಲವು. ಮತ್ತು ಆತನು ನಾಶರಹಿತವಾದ ಐಶ್ವರ್ಯವನ್ನೂ, ಬಲವನ್ನೂ, ಧೈರ್ಯವನ್ನೂ ಪಡೆಯುವನು.

೪೫. ಆದುದರಿಂದ ಆ ತೃತೀಯಾದಿನದಲ್ಲಿ ನಮ್ಮ ಹಿತವನ್ನು ಸಾಧಿಸುವ

ಭವಿಷ್ಯತಿ ಚ ಸಾ ಶಕ್ತಿರ್ವಿದ್ಯಾಯಾ ಮಂತ್ರಶಾಸ್ತ್ರಯೋಃ ।
ಬಲಂ ಧೈರ್ಯಂ ಯಶಶ್ಚೈವ ಯಥಾಪೂರ್ವಂ ಭವಿಷ್ಯತಿ ॥ ೪೬ ॥
ಇತ್ಯೇವಂ ತು ವಿಚಾರ್ಯಾಥ ಗುರುರ್ದೇವೈಸ್ಸಮಾಹಿತಃ ।
ಇಂದ್ರೇಣ ಕಾರಯಾಮಾಸ ಧರ್ಮಾನೇತಾನ್ ಹರಿಪ್ರಿಯಾನ್ ॥ ೪೭ ॥
ಅಕ್ಷಯ್ಯಾಯಾಂ ತೃತೀಯಾಯಾಂ ಭುಕ್ತಿಮುಕ್ತಿಫಲಪ್ರದಾನ್ ।
ತೇನ ಪೂರ್ವವದೇವಾಸೀದ್ಬಲಂ ಧೈರ್ಯಾದಿಕಂ ವಿಭೋಃ ॥ ೪೮ ॥
ಪರಸ್ತ್ರೀಸಂಗದೋಷೋಽಪಿ ಸದ್ಯ ಏವ ವ್ಯಲೀಯತ ।
ಪಶ್ಚಾದ್ಧತಾಶುಭಃ ಶಕ್ರೋ ರಾಹೋರ್ಮುಕ್ತ ಇವೋಡುಪಃ ॥ ೪೯ ॥
ದೇವತಾನಾಂ ತಥಾ ಮಧ್ಯೇ ಶುಶುಭೇ ಚ ಹರಿರ್ಯಥಾ ।
ಪಶ್ಚಾದ್ದೇವೈಃ ಸಮಾಯುಕ್ತೋ ವಿನಿರ್ಜಿತ್ಯ ತಥಾಽಸುರಾನ್ ॥ ೫೦ ॥
ತೃತೀಯಾಯಾಶ್ಚ ಮಾಹಾತ್ಮ್ಯಾದ್ಭಾಗ್ಯಯುಕ್ತೋಽಮರಾವತೀಂ ।
ವಿವೇಶ ವಿಭವೈಸ್ಸಾರ್ಧಂ ಶಂಖತೂರ್ಯಾದಿನಿಸ್ವನೈಃ ॥ ೫೧ ॥

ಉದ್ದೇಶದಿಂದ ಬಲವೈರಿಯಾದ ಮಹೇಂದ್ರನೊಡಗೂಡಿ ಪ್ರಾತಃಸ್ನಾನ, ದಾನಗಳೇ ಮೊದಲಾದ ಅನೇಕ ಧರ್ಮಕಾರ್ಯಗಳನ್ನು ನೆರವೇರಿಸೋಣ.

೪೬. ಆದರ ಫಲವಾಗಿ ನಿಜವಾಗಿಯೂ ಆತನಿಗೆ ವಿದ್ಯಾಶಕ್ತಿಯೂ, ಮಂತ್ರಬಲವೂ, ಶಾಸ್ತ್ರಜ್ಞಾನವೂ ಪುನಃ ಉಂಟಾಗುವುವು. ಪೂರ್ವದಲ್ಲಿದ್ದ ಬಲವೂ, ಧೈರ್ಯವೂ, ಪ್ರಖ್ಯಾತಿಯೂ ಮತ್ತೆ ಲಭಿಸುವುವು.''

೪೭. ಇಂತೆಂದು ಹೇಳಿ ಬೃಹಸ್ಪತಿಯು ಸಕಲದೇವತೆಗಳಿಂದೊಡಗೂಡಿ ಇಂದ್ರನ ಕೈಯಿಂದ ವಿಷ್ಣುಪ್ರೀತಿಕರಗಳಾದ ವೈಶಾಖಧರ್ಮಗಳೆಲ್ಲವನ್ನೂ ಅಕ್ಷಯ ತೃತೀಯೆಯ ದಿನದಲ್ಲಿ ಮಾಡಿಸಿದನು.

೪೮. ಇಂತು ಅಕ್ಷಯ ತೃತೀಯೆಯ ತಿಥಿಯಲ್ಲಿ ಐಹಿಕಾಮುಷ್ಮಿಕ ಫಲಗಳನ್ನೆಲ್ಲ ಕೊಡುವ ಧರ್ಮಕಾರ್ಯವನ್ನು ಮಾಡಲು ಮಹೇಂದ್ರನಿಗೆ ಹಿಂದಿದ್ದಂತೆಯೇ ಬಲವೂ, ಧೈರ್ಯವೂ, ಇತರ ಸದ್ಗುಣಗಳೂ ಉಂಟಾದುವು.

೪೯. ಪರಸ್ತ್ರೀಸಂಪರ್ಕದಿಂದುಂಟಾದ ದೋಷವೂ ಕ್ಷಣಮಾತ್ರದಲ್ಲಿಯೇ ನಾಶವನ್ನು ಹೊಂದಿತು. ಬಳಿಕ ಮಹೇಂದ್ರನು ಸಮಸ್ತಪಾತಕಗಳಿಂದಲೂ ಮುಕ್ತನಾಗಿ ರಾಹುವಿನ ಕೈಯಿಂದ ಬಿಡುಗಡೆಯನ್ನು ಹೊಂದಿದ ಚಂದ್ರನಂತೆ ಕಾಣುತ್ತಿದ್ದನು.

೫೦–೫೧. ದೇವತೆಗಳ ಸಮೂಹದ ಮಧ್ಯದಲ್ಲಿ ಆತನು ಮಹಾವಿಷ್ಣುವಿನಂತೆಯೇ ವಿರಾಜಿಸುತ್ತಿದ್ದನು. ಬಳಿಕ ಆ ದೇವತೆಗಳ ಸೈನ್ಯದಿಂದೊಡಗೂಡಿದವನಾಗಿ ಸಕಲ ರಾಕ್ಷಸರನ್ನೂ ಜಯಿಸಿ ಅಕ್ಷಯ ತೃತೀಯೆಯ ವ್ರತದ

ಅನುಜ್ಞಾತಾಶ್ಚ ಶಕ್ರೇಣ ಸ್ವಧಾಮಾನಿ ಯಯುಃ ಸುರಾಃ ।
ತತಸ್ತೇ ಯಜ್ಞಭಾಗಾಂಶ್ಚ ಲೇಭಿರೇ ಚ ಯಥಾ ಪುರಾ ॥ ೫೨ ॥
ಪಿಂಡಭಾಗಾಂಶ್ಚ ಪಿತರೋ ಯಥಾಪೂರ್ವಂ ಪ್ರಪೇದಿರೇ ।
ಸ್ವಾಧ್ಯಾಯೇ ಮುನಯಸ್ತುಷ್ಟಾ ದೈತ್ಯಾನಾಂ ಚ ಪರಾಜಯಃ ॥ ೫೩ ॥
ತದಾ ಪ್ರಭೃತಿ ಲೋಕೇಽಸ್ಮಿನ್ ತೃತೀಯಾ ಚಾಽಕ್ಷಯಾಽಹ್ವಯಾ ।
ಪ್ರಖ್ಯಾತಾ ಸರ್ವಲೋಕೇಷು ದೇವರ್ಷಿಪಿತೃತುಷ್ಟಿದಾ ॥ ೫೪ ॥
ತಸ್ಮಾತ್ಪುಣ್ಯತಮಾ ಚೈಷಾ ಸರ್ವಕರ್ಮನಿಕೃಂತನೀ ।
ಭುಕ್ತಿಮುಕ್ತಿಪ್ರದಾ ನೃಣಾಂ ತೃತೀಯಾ ಚಾಽಕ್ಷಯಾಽಹ್ವಯಾ ॥ ೫೫ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ದ್ವಿತೀಯೇ ವೈಷ್ಣವಖಂಡೇ ವೈಶಾಖಮಾಸಮಾಹಾತ್ಮ್ಯೇ ನಾರದಾಂಬರೀಷಸಂವಾದೇ "ಅಕ್ಷಯ್ಯತೃತೀಯಾಯಾಃ ಶ್ರೇಷ್ಠತ್ವಕಥನಂ"ನಾಮ ತ್ರಯೋವಿಂಶೋಽಧ್ಯಾಯಃ

---

ಮಾಹಾತ್ಮ್ಯೆಯ ಪುಣ್ಯದಿಂದ ಶಂಖ ಭೇರ್ಯಾದಿ ವಾದ್ಯಗಳು ಘೋರ್ಗರೆಯುತ್ತಿರಲು ಸಕಲ ವೈಭವಗಳೊಡನೆ ರಾಜಧಾನಿಯಾದ ಅಮರಾವತೀ ನಗರವನ್ನು ಪ್ರವೇಶಿಸಿದನು.

೫೨. ಬಳಿಕ ಆತನ ಅನುಜ್ಞೆಯನ್ನು ಪಡೆದು ಇತರ ದೇವತೆಗಳೆಲ್ಲರೂ ತಮ್ಮ ತಮ್ಮ ಪೂರ್ವದ ಅಧಿಕಾರಗಳನ್ನು ವಹಿಸಿಕೊಂಡರು. ಮತ್ತು ಮುನ್ನಿನಂತೆಯೇ ಯಜ್ಞಯಾಗಗಳಲ್ಲಿ ಹವಿರ್ಭಾಗಗಳನ್ನು ಪಡೆದು ಸುಖವಾಗಿದ್ದರು.

೫೩. ಪಿತೃದೇವತೆಗಳೂ ಪೂರ್ವದಲ್ಲಿದ್ದಂತೆಯೇ ತಮ್ಮ ಪಿಂಡಭಾಗಗಳನ್ನು ಹೊಂದಿದವರಾದರು. ಮಹಾಮುನಿಗಳೆಲ್ಲರೂ ನಿರ್ಭಯದಿಂದ ವೇದಾಧ್ಯಯನಗಳನ್ನು ಮಾಡುತ್ತ ಸಂತುಷ್ಟರಾದರು. ದೈತ್ಯರಿಗೆ ಪರಾಜಯವುಂಟಾಯಿತು.

೫೪. ಅಂದು ಮೊದಲುಗೊಂಡು ಈ ಅಕ್ಷಯತೃತೀಯೆಯೆಂಬ ಹೆಸರಿನ ಶುಭತಿಥಿಯು ಈ ಲೋಕದಲ್ಲಿಯೂ, ಲೋಕಾಂತರಗಳಲ್ಲಿಯೂ ಪ್ರಖ್ಯಾತಿಯನ್ನು ಪಡೆದು ದೇವತೆಗಳಿಗೂ, ಮಹರ್ಷಿಗಳಿಗೂ, ಪಿತೃಗಳಿಗೂ ಸಂತೋಷಕಾರಕವಾಗಿರುವುದು.

೫೫. ಆದುದರಿಂದ ಅಕ್ಷಯಫಲದಾಯಕವಾದ ಈ ತೃತೀಯಾತಿಥಿಯು ಅತ್ಯಂತ ಪವಿತ್ರತಮವೂ, ಸಕಲ ಕರ್ಮಬಂಧಚ್ಛೇದಕವೂ, ಮಾನವರಿಗೆ ಭುಕ್ತಿಮುಕ್ತಿಗಳೆರಡನ್ನೂ ಸಂಪಾದಿಸಿ ಕೊಡುವ ಮಹಿಮೆಯುಳ್ಳುದೂ ಆಗಿರುವುದು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀಸ್ಕಾಂದಮಹಾಪುರಾಣದ ಎರಡನೆಯ ವೈಷ್ಣವಖಂಡದ ವೈಶಾಖಮಾಸಮಾಹಾತ್ಮ್ಯದ ನಾರದಾಂಬರೀಷಸಂವಾದದಲ್ಲಿ "ಅಕ್ಷಯತೃತೀಯಾಶ್ರೇಷ್ಠತ್ವ ವರ್ಣನ"ವೆಂಬ ಇಪ್ಪತ್ತುಮೂರನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

# ಅಥ ಚತುರ್ವಿಂಶೋಽಧ್ಯಾಯಃ

### ಶುನೀಮೋಕ್ಷಪ್ರಾಪ್ತಿವರ್ಣನ

ಶ್ರುತದೇವ ಉವಾಚ:—

ತಿಥಿಷ್ವೇತಾಸು ಪುಣ್ಯಾಸು ದ್ವಾದಶೀ ಸಿತಪಕ್ಷಿಣೀ ।
ವೈಶಾಖಮಾಸೇ ರಾಜೇಂದ್ರ ಸರ್ವಾಘೌಘವಿನಾಶಿನೀ ॥ ೧ ॥
ಕಿಂ ದಾನೈಃ ಕಿಂ ತಪೋಭಿಶ್ಚ ಕಿಮುಪೋಷ್ಯೈರ್ವ್ರತೈಶ್ಚ ಕಿಂ ।
ಕಿಮಿಷ್ಟೈಶ್ಚೈವ ಪೂರ್ತೈಶ್ಚ ದ್ವಾದಶೀ ಯೈರ್ನಸೇವಿತಾ ॥ ೨ ॥
ಗಂಗಾಯಾಮುಪರಾಗೇ ತು ಯೋ ದದ್ಯಾದ್ಗೋಸಹಸ್ರಕಂ ।
ತತ್ಫಲಂ ಸಮವಾಪ್ನೋತಿ ಪ್ರಾತಃ ಸ್ನಾತ್ವಾ ಹರೇರ್ದಿನೇ ॥ ೩ ॥
ಯದ್ದತ್ತಂ ಚಾರ್ಹತೇ ಚಾನ್ನಂ ದ್ವಾದಶ್ಯಾಂ ಚ ಸಿತೇ ಶುಭೇ ।
ಸಿಕ್ಥೇಸಿಕ್ಥೇ ಭವೇತ್ತಸ್ಯ ಕೋಟಿಬ್ರಾಹ್ಮಣಭೋಜನಂ ॥ ೪ ॥

## ಕನ್ನಡದ ಅನುವಾದ

### ಶುನೀಮೋಕ್ಷಪ್ರಾಪ್ತಿ ವರ್ಣನ

೧. ಶ್ರುತದೇವನು ಹೇಳುತ್ತಾನೆ:—ರಾಜೇಂದ್ರನೆ! ವೈಶಾಖಮಾಸದ ಸಕಲ ತಿಥಿಗಳೂ ಪುಣ್ಯತಮಗಳಾಗಿದ್ದರೂ ವಿಶೇಷವಾಗಿ ಶುಕ್ಲಪಕ್ಷದ ದ್ವಾದಶೀ ತಿಥಿಯು ಸಕಲ ಪಾಪಸಮೂಹಗಳನ್ನೂ ನಾಶಗೊಳಿಸುವುದು.

೨. ಯಾರು ಈ ದ್ವಾದಶಿಯ ವ್ರತವನ್ನಾಚರಿಸುವುದಿಲ್ಲವೊ, ಅವರು ಮಾಡುವ ದಾನಗಳಿಂದಲೂ, ತಪಸ್ಸುಗಳಿಂದಲೂ, ಉಪವಾಸಗಳಿಂದಲೂ, ವ್ರತಾಚರಣೆಗಳಿಂದಲೂ, ಯಜ್ಞಯಾಗಗಳಿಂದಲೂ, ವಾಪೀನಿರ್ಮಾಣಾದಿ ಧರ್ಮಕಾರ್ಯಗಳಿಂದಲೂ ಫಲವೇನು ?

೩. ಶ್ರೀಹರಿಗೆ ಪ್ರಿಯದಿನವಾದ ಈ ತಿಥಿಯಲ್ಲಿ ಪ್ರಾತಃಸ್ನಾನವನ್ನು ಮಾಡಿದವನು ಗಂಗಾತೀರದಲ್ಲಿ ಗ್ರಹಣಕಾಲದಲ್ಲಿ ಒಂದು ಸಾವಿರ ಗೋವುಗಳನ್ನು ದಾನಮಾಡಿದ ಸುಕೃತವನ್ನು ಹೊಂದುವನು.

೪. ಯಾವನು ಪವಿತ್ರವಾದ ಈ ದ್ವಾದಶಿಯ ದಿನದಲ್ಲಿ ಯೋಗ್ಯನಾದ ಬ್ರಾಹ್ಮಣನನ್ನು ಕರೆದು ಅನ್ನವನ್ನು ನೀಡುವನೊ, ಅವನು ಭೋಜನಮಾಡುವ ಒಂದೊಂದು ತುತ್ತಿಗೂ ಕೋಟಿ ಬ್ರಾಹ್ಮಣರಿಗೆ ಭೋಜನವನ್ನು ಮಾಡಿಸಿದ ಪುಣ್ಯವು ಲಭಿಸುವುದು.

ಯೋ ದದ್ಯಾತ್ತಿಲಪಾತ್ರಂ ತು ದ್ವಾದಶ್ಯಾಂ ಮಧುಸಂಯುತಂ ।
ನಿರ್ಧೂತಾಖಿಲಬಂಧಸ್ತು ವಿಷ್ಣುಲೋಕೇ ಮಹೀಯತೇ ॥ ೫ ॥
ಏಕಾದಶ್ಯಾಂ ಸಿತೇ ಪಕ್ಷೇ ಕುರ್ಯಾಜ್ಜಾಗರಣಂ ಹರೇಃ ।
ಸ ಜೀವನ್ನೇವ ಮುಕ್ತಸ್ಸ್ಯಾತ್ತುಷ್ಟಾಃ ಸ್ಯುಃ ಸರ್ವದೇವತಾಃ ॥ ೬ ॥
ಕೋಟೀಂದುಸೂರ್ಯಗ್ರಹಣೇ ತೀರ್ಥಾನ್ಯುತ್ಸ್ನಾಪ್ಯ ಯತ್ಫಲಂ ।
ತತ್ಫಲಂ ಸಮವಾಪ್ನೋತಿ ಪ್ರಾತಃ ಸ್ನಾತ್ವಾ ಹರೇರ್ದಿನೇ ॥ ೭ ॥
ತುಲಸ್ಯಾಃ ಕೋಮಲೈಃ ಪತ್ರೈರ್ದ್ವಾದಶ್ಯಾಂ ವಿಷ್ಣುಮರ್ಚಯೇತ್ ।
ಸಮಸ್ತಕುಲಮುದ್ಧೃತ್ಯ ವಿಷ್ಣುಲೋಕಾಧಿಪೋ ಭವೇತ್ ॥ ೮ ॥
(ಕ್ಷೇಪಕಃ— ತುಲಸೀಪತ್ರಪುಷ್ಪೈಶ್ಚ ವೈಶಾಖೇಽಶ್ವತ್ಥಪೂಜನಂ ।
ಪುಷ್ಪಾದ್ಯಭಾವೇ ಧಾನ್ಯೈರ್ವಾ ಪೂಜಯೇನ್ಮಧುಸೂದನಂ॥)
ಯಮಂ ಪಿತೄನ್ ಗುರೂನ್ ದೇವಾನ್ ವಿಷ್ಣುಮುದ್ದಿಶ್ಯ ಮಾನವಃ ।
ಮಾಧವೇ ಶುಕ್ಲದ್ವಾದಶ್ಯಾಂ ಸೋದಕುಂಭಂ ಸ ದಕ್ಷಿಣಂ ॥ ೯ ॥

---

೫. ಯಾವನು ಜೇನುತುಪ್ಪದೊಡನೆ ತಿಲಪಾತ್ರೆಯನ್ನು ದ್ವಾದಶಿಯ ದಿನದಲ್ಲಿ ದಾನಮಾಡುವನೊ, ಅವನು ಸಕಲ ಸಂಸಾರಬಂಧಗಳನ್ನೂ ಕಳೆದು ಕೊಂಡು ವಿಷ್ಣುಲೋಕದಲ್ಲಿ ಮಾನ್ಯಸ್ಥಾನವನ್ನು ಪಡೆಯುವನು.

೬. ಆ ದಿನದ ಹಿಂದಿನ ಏಕಾದಶಿಯ ರಾತ್ರಿಯಲ್ಲಿ ಶ್ರೀಹರಿಯ ಪ್ರೀತಿಗಾಗಿ ಮನುಷ್ಯನು ಜಾಗರಣೆಯನ್ನು ಮಾಡಬೇಕು. ಅಂತಹನು ಜೀವಂತನಾಗಿಯೇ ಮುಕ್ತನೆನಿಸಿಕೊಳ್ಳುವನು. ಆತನಿಂದ ಸಕಲ ದೇವತೆಗಳೂ ಸಂತೋಷವನ್ನು ಹೊಂದುವರು.

೭. ಒಂದು ಕೋಟಿ ಸೂರ್ಯ ಚಂದ್ರ ಗ್ರಹಣಗಳಲ್ಲಿ ಸಕಲ ತೀರ್ಥಗಳಲ್ಲಿಯೂ ಸ್ನಾನವನ್ನು ಮಾಡಿದುದರಿಂದ ಯಾವ ಫಲವುಂಟೊ, ಶ್ರೀಹರಿಗೆ ಪ್ರಿಯವಾದ ಆ ದಿನದಲ್ಲಿ ಪ್ರಾತಃಕಾಲದ ಸ್ನಾನವನ್ನು ಮಾಡಲು ಮನುಷ್ಯನು ಆ ಫಲವನ್ನೇ ಪಡೆಯುವನು.

೮. ದ್ವಾದಶೀದಿನದಲ್ಲಿ ತುಲಸಿಯ ಕೋಮಲಗಳಾದ ದಳಗಳಿಂದ ಮಹಾವಿಷ್ಣುವಿನ ಪೂಜೆಯನ್ನು ಮಾಡಬೇಕು. ಅಂತಹನು ತನ್ನ ಸಕಲ ಕುಲದವರನ್ನೂ ಉದ್ಧರಿಸಿ ವಿಷ್ಣುಲೋಕದಲ್ಲಿ ಅಧಿಪತಿಯಾಗಿರುವನು.

(ವೈಶಾಖಮಾಸದಲ್ಲಿ ವಿಶೇಷವಾಗಿ ತುಲಸೀದಳಗಳಿಂದಲೂ ಪುಷ್ಪಗಳಿಂದಲೂ ಅಶ್ವತ್ಥವೃಕ್ಷದ ಪೂಜೆಯನ್ನು ಮಾಡಬೇಕು. ಪುಷ್ಪಾದಿ ಪರಿಕರಗಳಿಲ್ಲದಿರಲು ಮಧುಸೂದನನನ್ನು ಅಕ್ಕಿ, ಗೋಧಿಗಳೇ ಮುಂತಾದ ಧಾನ್ಯಗಳಿಂದಾದರೂ ಪೂಜಿಸಬೇಕು.)

೯–೧೧. ಯಮಧರ್ಮನನ್ನೂ, ಪಿತೃದೇವತೆಗಳನ್ನೂ, ಗುರುಗಳನ್ನೂ,

ದಧ್ಯನ್ನಂ ಚೈವ ಯೋ ದದ್ಯಾತ್ತಸ್ಯ ಪುಣ್ಯಫಲಂ ಶೃಣು ।
ಪ್ರಯಾಗೇ ಪ್ರತ್ಯಹಂ ಚೈವ ಕುರ್ಯಾದ್ಯಃ ಕೋಟಿಭೋಜನಂ ॥ ೧೦ ॥
ಯಾವತ್ಸಂವತ್ಸರಂ ಪುಣ್ಯಂ ಷಡ್ರಸಾನ್ನೈರ್ಮನೋರಮೈಃ ।
ತತ್ಫಲಂ ಸಮವಾಪ್ನೋತಿ ಮಧುಶಾಸನಶಾಸನಾತ್ ॥ ೧೧ ॥
ಶಾಲಿಗ್ರಾಮಶಿಲಾದಾನಂ ಯಃ ಕುರ್ಯಾದ್ದ್ವಾದಶೀದಿನೇ ।
ವೈಶಾಖೇ ಶುಕ್ಲಪಕ್ಷೇ ತು ಸರ್ವಪಾಪೈಃ ಪ್ರಮುಚ್ಯತೇ ॥ ೧೨ ॥
ದ್ವಾದಶ್ಯಾಂ ಪಯಸಾ ಯಸ್ತು ಸ್ನಾಪಯೇನ್ಮಧುಸೂದನಂ ।
ರಾಜಸೂಯಾಶ್ವಮೇಧಾಭ್ಯಾಂ ಯತ್ಫಲಂ ಪರಿಜಾಯತೇ ॥ ೧೩ ॥
ತ್ರಯೋದಶ್ಯಾಂ ಯಜೇದ್ವಿಷ್ಣುಂ ಪಯೋದಧಿವಿಮಿಶ್ರಿತೈಃ ।
ಶರ್ಕರಾಮಧುಭಿರ್ದ್ರವ್ಯೈರ್ಮಧುಸೂದನಪ್ರೀತಯೇ ।
ತತ್ಫಲಂ ಸಮವಾಪ್ನೋತಿ ಗಂಗಾಯಾಂ ನಾತ್ರ ಸಂಶಯಃ ॥ ೧೪ ॥
ಪಂಚಾಮೃತೈಶ್ಚ ಯೋ ವಿಷ್ಣುಂ ಭಕ್ತ್ಯಾ ಸಂಸ್ನಾಪಯೇದ್ವಿಭುಂ ।
ಸ ಸರ್ವಕುಲಮುದ್ಧೃತ್ಯ ವಿಷ್ಣುಲೋಕೇ ಮಹೀಯತೇ ॥ ೧೫ ॥

---

ದೇವತೆಗಳನ್ನೂ, ಮಹಾವಿಷ್ಣುವನ್ನೂ ಉದ್ದೇಶಿಸಿ ವೈಶಾಖಮಾಸದ ಶುಕ್ಲ ದ್ವಾದಶಿಯ ದಿನದಲ್ಲಿ ಯಾವ ಮಾನವನು ಉದಕುಂಭ ಮತ್ತು ದಕ್ಷಿಣೆಗಳೊಡನೆ ದಧ್ಯನ್ನವನ್ನು ದಾನಮಾಡುವನೊ, ಅವನಿಗೆ ಲಭಿಸುವ ಪುಣ್ಯಫಲವನ್ನು ಕೇಳು. ಪ್ರಯಾಗಕ್ಷೇತ್ರದಲ್ಲಿ ಒಂದು ಸಂವತ್ಸರದ ಪರ್ಯಂತವೂ ಮನೋಹರಗಳಾದ ಷಡ್ರಸಾನ್ನಗಳಿಂದ ಪ್ರತಿದಿವಸವೂ ಒಂದು ಕೋಟಿ ಬ್ರಾಹ್ಮಣರಿಗೆ ಯಾವನು ಭೋಜನವನ್ನು ಮಾಡಿಸುವನೊ, ಆ ಫಲವನ್ನೇ ದ್ವಾದಶೀ ದಧ್ಯನ್ನದಾತೃವು ಪಡೆಯುವನೆಂದು ಮಧುಸೂದನನ ಶಾಸನವಾಗಿರುವುದು.

೧೨. ಈ ದ್ವಾದಶೀ ತಿಥಿಯಲ್ಲಿ ಯಾವನು ಸಾಲಗ್ರಾಮ ಶಿಲೆಯನ್ನು ದಾನಮಾಡುವನೊ, ಅವನು ಸಕಲ ಪಾಪಗಳಿಂದಲೂ ಮುಕ್ತನಾಗುವನು.

೧೩. ದ್ವಾದಶಿಯ ದಿನದಲ್ಲಿ ಯಾವನು ಮಹಾವಿಷ್ಣುವಿಗೆ ಕ್ಷೀರಾಭಿಷೇಕವನ್ನು ಮಾಡುವನೊ, ಅವನು ರಾಜಸೂಯ ಮತ್ತು ಅಶ್ವಮೇಧಗಳೆಂಬ ಎರಡು ಮಹಾ ಯಜ್ಞಗಳನ್ನು ಮಾಡಿದ ಫಲವನ್ನು ಹೊಂದುವನು.

೧೪. ತ್ರಯೋದಶಿಯ ದಿವಸ ಹಾಲು ಮೊಸರುಗಳಿಂದ ಕೂಡಿ ಸಕ್ಕರೆಯಿಂದ ಸಿಹಿಗೊಳಿಸಿರುವ ಪದಾರ್ಥಗಳಿಂದ ಮಹಾವಿಷ್ಣುವಿನ ಪೂಜೆಯನ್ನು ಮಾಡಲು ಆತನು ಸುಪ್ರೀತನಾಗುವನು. ಮತ್ತು ಗಂಗಾಭಿಷೇಕವನ್ನು ಮಾಡುವುದರಿಂದಲೂ ಭಕ್ತನು ಅದೇ ಫಲವನ್ನೇ ಪಡೆಯುವನೆಂಬುದರಲ್ಲಿ ಸಂಶಯವಿಲ್ಲ.

೧೫. ಯಾವನು ಸರ್ವವ್ಯಾಪಿಯಾದ ಪರಮಾತ್ಮನನ್ನು ಭಕ್ತಿಯುಕ್ತನಾಗಿ

ಯೋ ದದ್ಯಾತ್ಪಾನಕಂ ಹ್ಯಸ್ಯಾಂ ಸಾಯಾಹ್ನೇ ಪ್ರೀತಯೇ ಹರೇಃ ।
ಜೀರ್ಣಂ ಪಾಪಂ ಜಹಾತ್ಯಾಶು ಜೀರ್ಣಾಂ ತ್ವಚಮಿವೋರಗಃ ॥ ೧೬ ॥
ಸಾಯಾಹ್ನೇ ಚೈವ ಯೋ ದದ್ಯಾದುರ್ವಾರುಕರಸಾಯನಂ ।
ಭವೇನ್ಮುಕ್ತಃ ಕರ್ಮಬಂಧಾದುರ್ವಾರುಕರಸಾಯನಾತ್ ॥ ೧೭ ॥
ಇಕ್ಷುದಂಡಂ ಚೂತಫಲಂ ದದ್ಯಾದ್ದ್ರಾಕ್ಷಾಫಲಾನಿ ಚ ।
ನ ವಿಚ್ಛಿತ್ತಿಃ ಸಂತತೇಸ್ಸ್ಯಾತ್ತಸ್ಯ ವೈ ಶತಪೂರುಷಂ ॥ ೧೮ ॥
ಯೋ ದದ್ಯಾದ್ಗಂಧಲೇಪಂ ತು ಸಾಯಾಹ್ನೇ ದ್ವಾದಶೀದಿನೇ ।
ಬಾಹ್ಯೋಪಘಾತೈಃ ಸಕಲೈರ್ಮುಚ್ಯತೇ ನಾತ್ರ ಸಂಶಯಃ ॥ ೧೯ ॥
ಯತ್ಕಿಂಚಿತ್ಕುರುತೇ ಪುಣ್ಯಂ ದ್ವಾದಶ್ಯಾಂ ರಾಜಸತ್ತಮ ।
ಮಾಧವೇ ತು ಸಿತೇಪಕ್ಷೇ ತದಕ್ಷಯ್ಯಫಲಂ ಭವೇತ್ ॥ ೨೦ ॥
ಪ್ರಖ್ಯಾತಿಮಸ್ಯಾ ವಕ್ಷ್ಯಾಮಿ ಯೇನ ಜಾತಾ ಭುವೀತಿ ಚ ।
ಸರ್ವೇಷಾಂ ಸರ್ವಪಾಪಘ್ನೀಂ ಸರ್ವಮಂಗಲದಾಯಿನೀಂ ॥ ೨೧ ॥

---

ಪಂಚಾಮೃತಗಳಿಂದ ಸ್ನಾನಮಾಡಿಸುವನೊ, ಅವನು ತನ್ನ ಕುಲವೆಲ್ಲವನ್ನೂ ನರಕದಿಂದುದ್ಧರಿಸಿ ವಿಷ್ಣುಲೋಕದಲ್ಲಿ ಪೂಜ್ಯನಾಗುವನು.

೧೬. ಯಾವನು ಶ್ರೀಹರಿಯ ಪ್ರೀತ್ಯರ್ಥವಾಗಿ ಅಂದಿನ ಸಾಯಂಕಾಲದಲ್ಲಿ ಪಾನಕವನ್ನು ದಾನಮಾಡುವನೊ, ಅವನು ಸರ್ಪವು ಜೀರ್ಣಚರ್ಮವನ್ನು ತ್ಯಜಿಸುವಂತೆ ತನ್ನ ಪಾಪಸಮೂಹವನ್ನು ಕಳೆದುಕೊಳ್ಳುವನು.

೧೭. ಯಾವನು ಸಾಯಂಕಾಲದಲ್ಲಿ ಕೆಕ್ಕರಿಕೆಹಣ್ಣಿನ ರಸಾಯನವನ್ನು ದಾನಮಾಡುವನೊ, ಅವನು ದಾನದ ಫಲವಾಗಿ ಕರ್ಮಪಾಶದ ಬಂಧನದಿಂದ ಬಿಡುಗಡೆಯನ್ನು ಹೊಂದುವನು.

೧೮. ಕಬ್ಬಿನಜಲ್ಲೆ, ಮಾವಿನಹಣ್ಣು, ದ್ರಾಕ್ಷಾಫಲಗಳನ್ನು ದಾನಮಾಡಿದ ಭಕ್ತನ ಸಂತಾನವು ನೂರು ತಲೆಗಳು ಕಳೆಯುವವರೆಗೂ ವಿಚ್ಛೇದವನ್ನು ಹೊಂದುವುದಿಲ್ಲ.

೧೯. ಶುಕ್ಲದ್ವಾದಶೀದಿನದ ಸಾಯಂಸಮಯದಲ್ಲಿ ಯಾವನು ಇತರರಿಗೆ ಸುಗಂಧಲೇಪಗಳನ್ನು ಸಮರ್ಪಿಸುವನೊ, ಅವನು ಹೊರಗಿನ ವಾಹನಭಯಾದಿ ಸಕಲ ಉಪಘಾತಗಳಿಂದಲೂ ಮುಕ್ತನಾಗುವುದರಲ್ಲಿ ಸಂದೇಹವೇ ಇಲ್ಲವು.

೨೦–೨೧. ರಾಜೇಶ್ವರನೆ! ವೈಶಾಖಮಾಸದ ಶುದ್ಧ ಪಕ್ಷದ ದ್ವಾದಶಿಯ ದಿನದಲ್ಲಿ ಮಾಡಿದ ಯಾವ ಸ್ವಲ್ಪ ಪುಣ್ಯವಾದರೂ ಅಕ್ಷಯಫಲವನ್ನು ಕೊಡುತ್ತದೆ. ಸಕಲ ಜನರ ಸಮಸ್ತ ಪಾತಕಗಳನ್ನು ನಾಶಗೊಳಿಸಿ ಸಕಲ ಕಲ್ಯಾಣಗಳನ್ನೊದಗಿಸುವ ಈ ಶುಭದಿವಸದ ಮಹಿಮೆಯು ಭೂಲೋಕದಲ್ಲಿ ಯಾರಿಂದ ಪ್ರಖ್ಯಾತವಾಯಿತೆಂಬುದನ್ನು ಹೇಳುವೆನು.

ಪುರಾ ಕಾಶ್ಮೀರದೇಶೇ ತು ದ್ವಿಜೋ ದೇವವ್ರತಾಽಹ್ವಯಃ ।
ತಸ್ಯಾಸೀನ್ಮಾಲಿನೀನಾಮ ತನಯಾ ಚಾರುರೂಪಿಣೀ ॥ ೨೨ ॥
ದದೌ ತಾಂ ಸತ್ಯಶೀಲಾಯ ವಿಪ್ರವರ್ಯಾಯ ಧೀಮತೇ ।
ತಾಮುದ್ವಾಹ್ಯ ಯಯೌ ಧೀಮಾನ್ ಸ್ವದೇಶಂ ಯವನಾಽಹ್ವಯಂ ॥೨೩॥
ರೂಪಯೌವನಸಂಪನ್ನಾ ತಸ್ಯ ನೈವ ಪ್ರಿಯಾಽಭವತ್ ।
ಸದಾ ವಿದ್ವೇಷಸಂಯುಕ್ತ ಸ್ತಸ್ಯಾಂ ತಿಷ್ಠತಿ ನಿಷ್ಠುರಃ ॥ ೨೪ ॥
ನಾನ್ಯಸ್ಯ ಕಸ್ಯಚಿದ್ವೇಷ್ಟಿ ತಾಂ ವಿನಾ ನೃಪತೇ ಪತಿಃ ।
ತಸ್ಮಿನ್ ಸಾ ಕ್ರೋಧಸಂಯುಕ್ತಾ ವಶೀಕರಣಲಂಪಟಾ ॥ ೨೫ ॥
ಅಪೃಚ್ಛತ್ಸ್ತ್ರಿಮುದಾ ರಾಜನ್ ತ್ಯಕ್ತಾಶ್ಚ ಪತಿಭಿಃ ಪುರಾ ।
ತಾಭಿರುಕ್ತಾ ತು ಸಾಭೂಪ ವಶ್ಯೋಽಭರ್ತಾ ಭವಿಷ್ಯತಿ ॥ ೨೬ ॥
ಅಸ್ಮಾಕಂ ಪ್ರತ್ಯಯೋ ಜಾತೋ ಭರ್ತೃತ್ಯಾಗಾವಮಾನಿನಾಂ ।
ಪ್ರಯುಜ್ಯ ಭೇಷಜಂ ವಶ್ಯಂ ನೀತಾ ಹಿ ಪತಯಃ ಪುರಾ ॥ ೨೭ ॥

೨೨. ಪೂರ್ವದಲ್ಲಿ ಕಾಶ್ಮೀರದೇಶದಲ್ಲಿ ದೇವವ್ರತನೆಂಬ ಹೆಸರುಳ್ಳ ಬ್ರಾಹ್ಮಣೋತ್ತಮನೊಬ್ಬನಿದ್ದನು. ಆತನಿಗೆ ಮಾಲಿನಿಯೆಂಬ ಸರ್ವಾಂಗ ಸುಂದರಿಯಾದ ಮಗಳೊಬ್ಬಳಿದ್ದಳು.

೨೩. ಆಕೆಯನ್ನು ಮಹಾಪ್ರಾಜ್ಞನಾದ ಸತ್ಯಶೀಲನೆಂಬ ಬ್ರಾಹ್ಮಣ ಶ್ರೇಷ್ಠನಿಗೆ ಕೊಟ್ಟು ಮದುವೆಯನ್ನು ಮಾಡಿದನು. ಆತನೂ ವಿವಾಹಕಾರ್ಯ ವನ್ನು ಮುಗಿಸಿಕೊಂಡು ಹೆಂಡತಿಯನ್ನು ಕರೆದುಕೊಂಡು ತನ್ನ ವಾಸಸ್ಥಳವಾದ ಯವನದೇಶವನ್ನು ಕುರಿತು ಪ್ರಯಾಣಮಾಡಿದನು.

೨೪. ಆಕೆಯು ರೂಪಯೌವನಗಳಿಂದ ಕೂಡಿದ್ದರೂ ಆತನಿಗೆ ಪ್ರಿಯ ಪತ್ನಿಯಾಗಲಿಲ್ಲ. ಆತನು ಕ್ರೂರಿಯಾಗಿ ಯಾವಾಗಲೂ ಆಕೆಯ ವಿಷಯದಲ್ಲಿ ದ್ವೇಷವನ್ನೇ ತೋರಿಸುತ್ತಿದ್ದನು.

೨೫. ಮಹಾರಾಜನೆ! ಆಕೆಯನ್ನುಳಿದು ಆತನು ಮತ್ತೆ ಯಾವ ಸ್ತ್ರೀಯರನ್ನೂ ದ್ವೇಷಿಸುತ್ತಿರಲಿಲ್ಲ. ಅದರಿಂದ ಆತನಲ್ಲಿ ಆಕೆಯೂ ಕೋಪಗೊಂಡವಳಾಗಿ ಆತನನ್ನು ವಶಪಡಿಸಿಕೊಳ್ಳುವ ಅಭಿಲಾಷೆಯುಳ್ಳವಳಾಗಿದ್ದಳು.

೨೬. ರಾಜೇಂದ್ರನೆ! ಆಕೆಯು ಪೂರ್ವದಲ್ಲಿ ಗಂಡಂದಿರಿಂದ ಪರಿತ್ಯಕ್ತ ರಾದ ಕೆಲವು ಸ್ತ್ರೀಯರಲ್ಲಿ ಈ ವಿಷಯನ್ನು ಪ್ರಸ್ತಾಪಿಸಿದಳು. ಅವರೆಲ್ಲರೂ ಆಕೆಗೆ ಹೇಳತೊಡಗಿದರು. "ನಿನ್ನ ಪತಿಯು ನಿನಗೆ ವಶನಾಗುವನು.

೨೭. ಗಂಡಂದಿರಿಂದ ತ್ಯಕ್ತರಾಗಿ ಅವಮಾನಗೊಂಡಿರುವ ನಮಗೆ ಈ ವಿಷಯದಲ್ಲಿ ನಿಶ್ಚಯ ಜ್ಞಾನವುಂಟಾಗಿರುವುದು. ಹಿಂದೆ ನಾವೆಲ್ಲರೂ

ಯೋಗಿನೀಂ ತ್ವಂ ತು ಗಚ್ಛಾದ್ಯ ದಾಸ್ಯತೇ ಭೇಷಜಂ ಶುಭಂ ।
ನ ವಿಕಲ್ಪಸ್ತ್ವಯಾ ಕಾರ್ಯೋ ಭವಿತಾ ದಾಸವತ್ಪತಿಃ ॥ ೨೮ ॥
ಯೋಗಿನೀಮಂದಿರೇ ಗತ್ವಾ ತಾಸಾಂ ವಾಕ್ಯೇನ ಭೂಪತೇ ।
ಪ್ರಸಾದಮತುಲಂ ತಸ್ಯಾ ಲೇಭೇ ದುಶ್ಚಾರಿಣೀ ಸತೀ ॥ ೨೯ ॥
ಶತಸ್ತಂಭಸಮಾಯುಕ್ತಾಂ ಕುಟೀಂ ಭೇಜೇ ತ್ವರಾನ್ವಿತಾ ।
ಸುವಿಶ್ರುತಾಂ ಸವರ್ಚಸ್ಕಾಂ ತಥೈವಾಽಯಾತಯಾಮಿಕಾಂ ॥ ೩೦ ॥
ಪ್ರಾವೃತಾ ದೀರ್ಘವಸ್ತ್ರೇಣ ಸನ್ನಿಧಿಂ ತೇನ ಯೋಗಿನೀ ।
ದೀರ್ಘಾಭಿಶ್ಚ ಸಟಾಭಿಸ್ತು ಪ್ರಾವೃತಾ ದೀಪ್ತಿಸಂಯುತಾ ॥ ೩೧ ॥
ಪರಿಚಾರಸಮೋಪೇತಾ ವೀಕ್ಷಮಾಣಾ ಶನೈಶ್ಶನೈಃ ।
ಅಕ್ಷಸೂತ್ರಕರಾ ಸಾ ತು ಜಪಂತೀ ಪ್ರಾರ್ಥಿತಾ ತಯಾ ॥ ೩೨ ॥
ದದೌ ವಶ್ಯಕರಂ ಮಂತ್ರಂ ಕ್ಷೋಭಕಂ ಪ್ರತ್ಯಯಾತ್ಮಕಂ ।
ತತಃ ಸಾ ಪ್ರಣತಾಭೂತ್ವಾ ದದೌ ದ್ರವ್ಯಾಂಗುಲೀಯಕಂ ॥ ೩೩ ॥

---

ಒಂದಾನೊಂದು ಔಷಧವನ್ನು ಪ್ರಯೋಗಿಸಲು ನಮ್ಮ ಪತಿಗಳೆಲ್ಲರೂ ನಮ್ಮ ಸ್ವಾಧೀನಕ್ಕೊಳಪಟ್ಟರು.

೨೮–೨೯. ನೀನು ಇಂದೇ ಯೋಗಿನಿಯ ಬಳಿಗೆ ಹೋಗು. ಆಕೆಯು ನಿನಗೆ ಪರಮಪವಿತ್ರವಾದ ಔಷಧವೊಂದನ್ನು ಕೊಡುವಳು. ಈ ವಿಷಯದಲ್ಲಿ ನೀನು ಸಂದೇಹಗೊಳ್ಳಬೇಡ. ಖಂಡಿತವಾಗಿಯೂ ಪತಿಯು ನಿನಗೆ ದಾಸಸದೃಶನಾಗುವನು.'' ಮಹಾರಾಜನೆ! ಅವರ ಮಾತುಗಳನ್ನು ಕೇಳಿ ಮಾಲಿನಿಯು ಆ ಯೋಗಿನಿಯ ವಾಸಸ್ಥಾನವನ್ನು ಸೇರಿದಳು. ದುಶ್ಚರಿತ್ರೆಯಾದ ಆಕೆಯು ಅವಳ ಕೈಯಿಂದ ಅಸಮಾನವಾದ ಔಷಧವೊಂದನ್ನು ಪಡೆದಳು.

೩೦. ಆಕೆಯು ಸಂಭ್ರಮದಿಂದ ಆ ಯೋಗಿನಿಯ ಗುಡಿಸಿಲಿನ ಬಳಿಗೆ ಬಂದಳು. ಅವಳ ಪರ್ಣಶಾಲೆಯು ನೂರು ಕಂಭಗಳುಳ್ಳದ್ದಾಗಿ ವಿಶಾಲವೂ, ತೇಜೋಯುಕ್ತವೂ, ಅತ್ಯಂತ ನೂತನವೂ ಆಗಿ ಕಂಗೊಳಿಸುತ್ತಿದ್ದಿತು.

೩೧. ಆ ಯೋಗಿನಿಯಾದರೊ, ಅವಳ ಸಮ್ಮುಖದಲ್ಲಿ ನಿಂತಳು. ಅವಳೂ ಉದ್ದವಾದ ವಸ್ತ್ರದ ಪ್ರಾವರಣವನ್ನು (ಬುರ್ಕಿಯನ್ನು) ಧರಿಸಿದವಳಾಗಿ, ಉದ್ದವಾದ ಜಡೆಗಳನ್ನು ಹೊಂದಿ ತೇಜಸ್ಸಿನಿಂದ ಮೆರೆಯುತ್ತಿದ್ದಳು.

೩೨. ತನ್ನ ಪರಿಚಾರಿಕೆಯರಿಂದ ಕೂಡಿದವಳಾಗಿ ಮೆಲ್ಲಮೆಲ್ಲಗೆ ಸುತ್ತಲೂ ನೋಡುತ್ತಿದ್ದಳು. ಕೈಯಲ್ಲಿ ಅಕ್ಷಮಾಲೆಯನ್ನು ಹಿಡಿದು ಜಪವನ್ನು ಮಾಡುತ್ತಿದ್ದಳು. ಇಂತಹ ಯೋಗಿನಿಯನ್ನು ಮಾಲಿನಿಯು ವಶೀಕರಣೌಷಧಿಯನ್ನು ಕೊಡುವಂತೆ ಪ್ರಾರ್ಥಿಸಿದಳು.

೩೩. ಆಕೆಯೂ ಅವಳ ಗಂಡನಿಗೆ ಕ್ಷೋಭೆಯನ್ನುಂಟುಮಾಡಿ ಆಕೆಯಲ್ಲಿ

ವಜ್ರಮಾಣಿಕ್ಯಸಂಯುಕ್ತಂ ಅತಿರಕ್ತಪ್ರಭಾನ್ವಿತಂ ।
ಮೃದುಕಾಂಚನಸಂಯುಕ್ತಂ ಭಾನುರಶ್ಮಿಸಮದ್ಯುತಿ ॥ ೩೪ ॥
ತತೋ ದೃಷ್ಟ್ವಾ ತು ಸಂತುಷ್ಟಾ ಪಾದಸ್ಥಂ ಚಾಂಗುಲೀಯಕಂ ।
ಹೃದಯಂ ಚ ತಯಾ ಜ್ಞಾತಂ ತತ್ಪತೇರವಮಾನಜಂ ॥ ೩೫ ॥
ತದೋಕ್ತಾ ಹಿ ತಯಾ ಭೂಪ ತಾಪಸ್ಯಾಹಿತಯುಕ್ತಯಾ ।
ಚೂರ್ಣೋ ರಕ್ಷಾನ್ವಿತೋ ಹ್ಯೇಷ ಸರ್ವಭೂತವಶಂಕರಃ ॥ ೩೬ ॥
ಚೂರ್ಣಂ ಭರ್ತರಿ ಸಂಯುಜ್ಯ ರಕ್ಷಾಂ ಗ್ರೀವಾಶ್ರಯಾಂ ಕುರು ।
ಭವಿಷ್ಯತಿ ಪತಿರ್ವಶ್ಯೋ ನಾಽನ್ಯಾಂ ಯಾಸ್ಯತಿ ಸುಂದರೀಂ ॥ ೩೭ ॥
ನಾಪ್ರಿಯಂ ವದತಿ ಕ್ವಾಪಿ ದುಶ್ಚಾರಿಣ್ಯಾಸ್ತವಾಪಿ ಚ ।
ಚೂರ್ಣರಕ್ಷಾಂ ಗೃಹೀತ್ವಾ ಸಾ ಪ್ರಾಪ ಭರ್ತೃಗೃಹಂ ಪುನಃ ॥ ೩೮ ॥

ಅನುರಾಗವನ್ನು ಹುಟ್ಟಿಸುವುದಕ್ಕೆ ಉಚಿತವಾದ ಒಂದು ವಶೀಕರಣ ಮಂತ್ರವನ್ನು ಉಪದೇಶಿಸಿದಳು. ಬಳಿಕ ಮಾಲಿನಿಯು ಆ ಯೋಗಿನಿಗೆ ನಮಸ್ಕರಿಸಿ ದಿವ್ಯವಾದ ಒಂದು ಉಂಗುರವನ್ನು ಸಮರ್ಪಿಸಿದಳು.

೩೪. ಆ ಉಂಗುರವು ವಜ್ರಗಳಿಂದಲೂ ಮಾಣಿಕ್ಯಗಳಿಂದಲೂ ಖಚಿತವಾದುದೂ, ಕೆಂಪಾದ ಕಾಂತಿಯಿಂದೊಡಗೂಡಿದುದೂ, ಮೃದುವಾದ ಅಪರಂಜಿಯ ಚಿನ್ನದಿಂದ ಮಾಡಲ್ಪಟ್ಟುದೂ, ಸೂರ್ಯನ ರಶ್ಮಿಗಳಿಗೆ ಸಮಾನವಾದ ಕಾಂತಿಯುಳ್ಳದುದೂ ಆಗಿದ್ದಿತು.

೩೫-೩೬. ಆ ಯೋಗಿನಿಯಾದರೊ, ತನ್ನ ಪಾದತಲದಲ್ಲಿ ಸಮರ್ಪಿಸಲ್ಪಟ್ಟಿರುವ ಅಮೂಲ್ಯವಾದ ಆ ಉಂಗುರವನ್ನು ಕಂಡು ಸಂತೋಷಗೊಂಡಳಲ್ಲದೆ ಗಂಡನಿಂದ ಅವಮಾನಿತಳಾದ ಮಾಲಿನಿಯ ಅಂತರಂಗವನ್ನೂ ಚೆನ್ನಾಗಿ ತಿಳಿದಳು. ಭೂಪಾಲಕನೆ! ಬಳಿಕ ಅಹಿತಗಳಲ್ಲಿಯೇ ನಿರತಳಾಗಿದ್ದ ಆ ತಾಪಸಿಯು ಆಕೆಗೆ ಹೇಳತೊಡಗಿದಳು. "ರಕ್ಷೆಯಿಂದ (ಯಂತ್ರದಿಂದ) ಒಡಗೂಡಿದ ಈ ಚೂರ್ಣವು ಸಕಲ ಭೂತಗಳನ್ನೂ ವಶಪಡಿಸುವ ಶಕ್ತಿಯುಳ್ಳದ್ದಾಗಿರುವುದು.

೩೭. ಈ ಚೂರ್ಣವನ್ನು ಆತನ ಆಹಾರದಲ್ಲಿ ಪ್ರಯೋಗಮಾಡಿ ಈ ರಕ್ಷೆಯನ್ನು ಅವನ ಕಂಠದಲ್ಲಿ ಕಟ್ಟುವವಳಾಗು. ಅದರಿಂದ ನಿನ್ನ ಪತಿಯು ನಿನಗೆ ವಶನಾಗಿರುವನು. ಬೇರೆ ಯಾವ ಸುಂದರಿಯನ್ನೂ ಅವನು ಸೇರಲಾರನು.

೩೮. ನೀನು ಎಷ್ಟೇ ದುರಾಚಾರನಿರತಳಾಗಿದ್ದರೂ ಅವನು ಒಂದು ಅಪ್ರಿಯವಚನವನ್ನಾದರೂ ಆಡುವುದಿಲ್ಲ." ಇಂತೆಂದ ಯೋಗಿನಿಯ ಮಾತುಗಳನ್ನು ಕೇಳಿ ಆಕೆಯು ಚೂರ್ಣವನ್ನೂ ರಕ್ಷೆಯನ್ನೂ ತೆಗೆದುಕೊಂಡು ಪುನಃ ತನ್ನ ಪತಿಯ ಮನೆಗೆ ಹಿಂದಿರುಗಿದಳು.

ಪ್ರದೇಶೇ ಪಯಸಾ ಯುಕ್ತಶ್ಚೂರ್ಣೋ ಭರ್ತರಿ ಯೋಜಿತಃ ।
ಗ್ರೀವಾಯಾಂ ಹಿ ಕೃತಾ ರಕ್ಷಾ ನ ವಿಚಾರಃ ಕೃತಸ್ತಯಾ ॥ ೩೯ ॥
ತದಾ ಸ ಪೀತಚೂರ್ಣಸ್ತು ಭರ್ತಾ ನೃಪವರೋತ್ತಮ ।
ತಚ್ಚೂರ್ಣಾತ್ ಕ್ಷಯ ರೋಗೋಽಭೂತ್ಪತಿಃ ಕ್ಷೀಣೋ ದಿನೇದಿನೇ॥೪೦॥
ಗುಹ್ಯೇತು ಕೃಮಯೋ ಜಾತಾ ಘೋರಾ ದುಷ್ಟವ್ರಣೋದ್ಭವಾಃ ।
ದಿನೈಃ ಕತಿಪಯೈ ರಾಜನ್ ಪತ್ಯುರ್ನೈವ ವ್ಯವಸ್ಥಿತಿಃ ॥ ೪೧ ॥
ಉವಾಸ ಸ್ವೇಚ್ಛಯಾ ಸಾಪಿ ಪುಂಶ್ಚಲೀ ದುಷ್ಟಚಾರಿಣೀ ।
ಹತತೇಜಾಸ್ತತೋ ಭರ್ತಾ ತಾಮುವಾಚಾಽಕುಲೇಂದ್ರಿಯಃ ॥ ೪೨ ॥
ಕ್ರಂದಮಾನೋ ದಿವಾರಾತ್ರೌ ದಾಸೋಽಸ್ಮಿ ತವ ಶೋಭನೇ ।
ತ್ರಾಹಿ ಮಾಂ ಶರಣಂ ಪ್ರಾಪ್ತಂ ನೇಚ್ಛೇಽಹಮಪರಾಂ ಸ್ತ್ರಿಯಂ ॥ ೪೩ ॥
ತತ್ತಸ್ಯ ವಿದಿತಂ ಜ್ಞಾತ್ವಾ ಭೀತಾ ಸಾ ಮೇದಿನೀಪತೇ ।
ಅಲಂಕಾರಕೃತೇ ಪತ್ಯುರ್ಜೀವನೇಚ್ಛುರ್ನವೈ ಹಿತಾ ॥ ೪೪ ॥

---

೩೯. ಮಾರನೆಯ ದಿನದ ಪ್ರಾತಃಕಾಲದಲ್ಲಿ ಆ ಚೂರ್ಣವು ಹಾಲಿನಲ್ಲಿ ಬೆರೆಸಲ್ಪಟ್ಟು ಗಂಡನಲ್ಲಿ ಪ್ರಯೋಜಿತವಾಯಿತು. ಆ ರಕ್ಷಾಯಂತ್ರವೂ ಗಂಡನ ಕೊರಳಿನಲ್ಲಿ ಕಟ್ಟಲ್ಪಟ್ಟಿತು. ಮೂಢಳಾದ ಆಕೆಯು ಈ ವಿಷಯದಲ್ಲಿ ದೀರ್ಘಾಲೋಚನೆಯನ್ನೇ ಮಾಡಲಿಲ್ಲ.

೪೦. ಎಲೈ ಮಹಾರಾಜವರ್ಯನೆ! ಪತಿಯಾದ ಸತ್ಯಶೀಲನು ಆ ಚೂರ್ಣಸಹಿತವಾದ ಹಾಲನ್ನು ಕುಡಿದುದರ ಫಲವಾಗಿ ಕ್ಷಯರೋಗಸಹಿತನಾಗಿ ದಿನದಿನಕ್ಕೂ ಕೃಶನಾಗುತ್ತಿದ್ದನು.

೪೧. ಗುಹ್ಯಪ್ರದೇಶದಲ್ಲಿ ದುಷ್ಟವ್ರಣವೊಂದು ಸಂಭವಿಸಿ ಅದರಲ್ಲಿ ಭಯಂಕರಗಳಾದ ಕ್ರಿಮಿಗಳುಂಟಾದುವು. ರಾಜನೆ! ಕೆಲವು ದಿನಗಳು ಕಳೆಯಲಾಗಿ ಪತಿಗೆ ಕುಳಿತುಕೊಳ್ಳುವುದೂ ಅಸಾಧ್ಯವಾಗಿ ಪರಿಣಮಿಸಿತು.

೪೨. ಬಳಿಕ ಅವಳು ಸ್ವೇಚ್ಛೆಯಾಗಿ ವಿಹರಿಸುತ್ತ ವಿಟಪುರುಷರನ್ನೇ ಕೂಡಿಕೊಂಡು ದುರಾಚಾರನಿರತಳಾಗಿದ್ದಳು. ಆಗ ಪತಿಯು ನಿಸ್ತೇಜಸ್ಕನಾಗಿ ಇಂದ್ರಿಯಗಳ ಪಾಶಕ್ಕೆ ಸಿಕ್ಕಿ ವ್ಯಾಕುಲಪಡುತ್ತ ಅವಳನ್ನು ಕುರಿತು ಇಂತೆಂದನು.

೪೩. "ಮಂಗಳಾಂಗಿಯೆ! ಹಗಲುರಾತ್ರಿಗಳಲ್ಲಿಯೂ ರೋಗದಿಂದ ನರಳುತ್ತ ಆಕ್ರಂದನಮಾಡುತ್ತಿರುವ ನಾನು ನಿನಗೆ ದಾಸನಾಗಿರುವೆನು. ನಿನ್ನನ್ನು ಶರಣುಹೊಂದಿರುವ ನನ್ನನ್ನು ಕಾಪಾಡು. ಮತ್ತೆ ಯಾವ ಸ್ತ್ರೀಯಳನ್ನೂ ನಾನು ಅಪೇಕ್ಷಿಸುವುದಿಲ್ಲ."

೪೪. ಶ್ರುತಕೀರ್ತಿಮಹಾರಾಜನೆ! ಗಂಡನ ಈ ಮಾತುಗಳ ಗೂಢಾರ್ಥವನ್ನು ತಿಳಿದು ಆ ಮಾಲಿನಿಯು ಭಯಗ್ರಸ್ತಳಾದಳು. ಗಂಡನು ಪರಲೋಕ

ಯೋಗಿನೀಂ ಚ ಯಯೌ ಶೀಘ್ರಂ ತಸ್ಯೈ ಸರ್ವಂ ನ್ಯವೇದಯತ್ ।
ತಯಾ ಚ ಭೇಷಜಂ ದತ್ತಂ ದ್ವಿತೀಯಂ ದಾಹಶಾಂತಯೇ ॥ ೪೫ ॥
ದತ್ತೇ ಚ ಭೇಷಜೇತಸ್ಮಿನ್ ಸ್ವಸ್ಥೋಽಭೂತ್ಕ್ಷಣಾತ್ಪತಿಃ ।
ತಿಷ್ಠತ್ಯುಪಪತಿರ್ಗೇಹೇ ಗೃಹಕೃತ್ಯಾಽಪದೇಶತಃ ॥ ೪೬ ॥
ಸರ್ವವರ್ಣಸಮುದ್ಭೂತಾ ಜಾರಾಸ್ತಿಷ್ಠಂತಿ ವೈ ಗೃಹೇ ।
ನ ಕಿಂಚಿದ್ವಚನೇ ಶಕ್ತಿರ್ಭರ್ತುರ್ಜಾತಾ ಕಥಂಚನ ॥ ೪೭ ॥
ತತಸ್ತೇನೈವ ದೋಷೇಣ ಸರ್ವಾಂಗೇಷು ಚ ಜಜ್ಞಿರೇ ।
ಕೃಮಯಶ್ಚಾಸ್ಥಿ ಭೇತ್ತಾರಃ ಕಾಲಾಂತಕಯಮೋಪಮಾಃ ॥ ೪೮ ॥
ತೈರ್ನಾಸಾಜಿಹ್ವಯೋಶ್ಚಾಽಽಸೀಚ್ಛೇದಃ ಕರ್ಣದ್ವಯಸ್ಯ ಚ ।
ಸ್ತನಯೋಶ್ಚಾಂಗುಲೀನಾಂ ಚ ಪಂಗುತ್ವಂ ಚಾಭಿಚಾಽಗತಂ ॥ ೪೯ ॥
ತೇನ ಪಂಚತ್ವಮಾಪನ್ನಾ ಗತಾ ನರಕಯಾತನಾಃ ।
ತಾಮ್ರಭಾಂಡೇ ಚ ಸಾ ದಗ್ಧಾಽಯುತಾನಿ ದಶಪಂಚ ಚ ॥ ೫೦ ॥

---

ಗತನಾಗಲು ತಾನು ಅಲಂಕಾರಾದಿಗಳನ್ನು ಧರಿಸಲವಕಾಶವಿಲ್ಲವಾದುದರಿಂದ ಆತನು ಜೀವಿಸಿರಬೇಕೆಂದು ಇಚ್ಛಿಸಿದಳೇ ಹೊರತು ಆತನ ಹಿತದಲ್ಲೆಂದಿಗೂ ಆಸಕ್ತಿಯುಳ್ಳವಳಲ್ಲ.

೪೫. ವೇಗವಾಗಿ ಪುನಃ ಯೋಗಿನಿಯ ಬಳಿಗೆ ಹೋಗಿ ಸಕಲವೃತ್ತಾಂತ ವನ್ನೂ ಅವಳಿಗೆ ನಿವೇದಿಸಿದಳು. ಆತನ ದಾಹವು ಶಾಂತವಾಗಲು ಯೋಗಿನಿಯು ಎರಡನೆಯ ಔಷಧವನ್ನು ಕೊಟ್ಟಳು.

೪೬. ಆ ಔಷಧವನ್ನು ಆತನಿಗೆ ಸೇವಿಸುವುದಕ್ಕೆ ಕೊಡಲು ಕ್ಷಣಮಾತ್ರ ದಲ್ಲಿಯೇ ಅವನು ನೀರೋಗಿಯಾದನು. ಬಳಿಕ ಆತನು ಗೃಹಕೃತ್ಯವನ್ನು ನಡೆಸುವುದಕ್ಕೆ ನಿಮಿತ್ತಮಾತ್ರನಾಗಿ ಕೇವಲ ವಿಟಪುರುಷನಿಗೆ ಸಮಾನನಾಗಿ ಮನೆಯಲ್ಲಿ ಓಡಾಡಿಕೊಂಡಿದ್ದನು.

೪೭. ಸಕಲವರ್ಣಗಳಲ್ಲಿ ಜನಿಸಿದ ವಿಟಪುರುಷರೂ ಆ ಮನೆಯಲ್ಲಿ ವಾಸ ಮಾಡುತ್ತಿದ್ದರು. ಗಂಡನಾದರೊ ಹೆಂಡತಿಯ ವಿಷಯವಾಗಿ ಒಂದು ಮಾತ ನ್ನಾದರೂ ಆಡಲು ಶಕ್ತನಾಗಿರಲಿಲ್ಲ.

೪೮. ಕೆಲವುಕಾಲದ ಮೇಲೆ ಆ ದೋಷದಿಂದಲೇ ಅವಳಿಗೆ ಸರ್ವಾಂಗಗ ಳಲ್ಲಿಯೂ ಮೂಳೆಗಳನ್ನು ಭೇದಿಸುವ ಪ್ರಳಯಕಾಲದ ಯಮನಿಗೆ ಸಮಾನ ಗಳಾದ ಕ್ರಿಮಿಗಳು ಕಾಣಿಸಿಕೊಂಡುವು.

೪೯. ಅವುಗಳಿಂದ ಮೂಗು, ನಾಲಿಗೆ, ಕಿವಿಗಳು, ಸ್ತನಗಳು, ಬೆರಳುಗಳು ಸಂಪೂರ್ಣನಾಶವಾಗಿ ಕುಂಟತನವೂ ಪ್ರಾಪ್ತವಾಯಿತು.

೫೦. ಆ ರೋಗದಿಂದಲೇ ಅವಳು ಮೃತಳಾಗಿ ಬಹುವಿಧನರಕಯಾತನೆ

ಶ್ವಾನಯೋನಿಷು ಸಂಜಾತಾ ಶತವಾರಂ ಪುನಃ ಪುನಃ ॥ ೫೧ ॥
ಛಿನ್ನನಾಸಾ ಛಿನ್ನಕರ್ಣಾ ಕೃಮಿಮೂರ್ಧಾ ನಿರಂತರಂ ।
ಛಿನ್ನಪುಚ್ಛಾ ಭಗ್ನಪಾದಾ ತಾಡಿತಾ ಚ ಗೃಹೇ ಗೃಹೇ ॥ ೫೨ ॥
ಪಶ್ಚಾತ್ಸೌವೀರದೇಶೇಷು ಪದ್ಮಬಂಧೋರ್ದ್ವಿಜಸ್ಯ ಚ ।
ದಾಸ್ಯಾ ಗೃಹೇ ಶುನೀ ಜಾತಾ ಬಹುದುಃಖಸಮಾಕುಲಾ ॥ ೫೩ ॥
ಛಿನ್ನಕರ್ಣಾ ಛಿನ್ನನಾಸಾ ಛಿನ್ನಪುಚ್ಛಾಂಘ್ರಿರಾತುರಾ ।
ಕೃಮಿಪೂರ್ಣಶಿರಾ ನಿತ್ಯಂ ಕೃಮಿಯೋನಿಶ್ಚ ತಿಷ್ಠತಿ ॥ ೫೪ ॥
ಏವಂ ತ್ರಿಂಶದ್ಗತಾ ವರ್ಷಾ ಅಸ್ಮಿನ್ ಜನ್ಮನಿ ಭೂಮಿಪ ।
ದೈವಾತ್ಕರ್ಮವಿಪಾಕೇನ ವೈಶಾಖೇ ಮೇಷಗೇ ರವೌ ॥ ೫೫ ॥
ಶುಕ್ಲಪಕ್ಷೇ ತು ದ್ವಾದಶ್ಯಾಂ ಪದ್ಮಬಂಧೋಸ್ತನೂದ್ಭವಃ ।
ನದ್ಯಾಂ ಸ್ನಾತ್ವಾ ಶುಚಿರ್ಭೂತ್ವಾ ಸಾರ್ದ್ರವಸ್ತ್ರೋ ಗೃಹಂ ಯಯೌ ॥ ೫೬ ॥
ತುಲಸೀವೇದಿಕಾಂ ಪ್ರಾಪ್ಯ ಪಾದಾವವನಿಜೇ ನಿಜೌ ।
ವೇದಿಕಾಯಾ ಮಧೋದೇಶೇ ಸಾ ಶುನೀ ಸ್ವಾಪಮಾಗತಾ ॥ ೫೭ ॥

---

ಗಳನ್ನನುಭವಿಸಿದಳು. ಹದಿನೈದು ಅಯುತ (ಒಂದೂವರೆ ಲಕ್ಷ) ವರ್ಷಗಳ ವರೆಗೂ ತಾಮ್ರಭಾಂಡದಲ್ಲಿ ಬೇಯಿಸಲ್ಪಟ್ಟಳು.

೫೧–೫೨. ನೂರು ಜನ್ಮಗಳಲ್ಲಿ ಮತ್ತೆ ಮತ್ತೆ ನಾಯಿಯಾಗಿ ಜನಿಸಿದಳು. ಎಲ್ಲ ಜನ್ಮಗಳಲ್ಲಿಯೂ ಅವಳಿಗೆ ಮೂಗು, ಕಿವಿ, ಬಾಲ, ಕಾಲುಗಳ ಭಗ್ನತೆಯುಂಟಾಗಿ ಯಾವಾಗಲೂ ತಲೆಯಲ್ಲಿ ಕ್ರಿಮಿಗಳು ತುಂಬಿಕೊಂಡಿರಲು ಮನೆ ಮನೆಯಲ್ಲಿಯೂ ಪೆಟ್ಟುತಿನ್ನುತ್ತಿದ್ದಳು.

೫೩–೫೪. ಬಳಿಕ ಸೌವೀರದೇಶಸ್ಥನಾದ ಪದ್ಮಬಂಧುವೆಂಬ ಬ್ರಾಹ್ಮಣೋತ್ತಮನ ದಾಸಿಯ ಮನೆಯಲ್ಲಿ ಬಹುವಿಧ ರೋಗಯುಕ್ತವಾದ ಹೆಣ್ಣುನಾಯಿಯಾಗಿ ಜನಿಸಿದಳು. ಮೂಗು, ಕಿವಿ, ಬಾಲ, ಕಾಲುಗಳು ಛೇದವನ್ನು ಹೊಂದಿರಲು ಕಾತರಗೊಂಡು ತಲೆಯ ತುಂಬ ಕ್ರಿಮಿಗಳನ್ನು ಹೊಂದಿ ಕ್ರಿಮಿಪೂರಿತ ಯೋನಿಯುಳ್ಳವಳಾಗಿದ್ದಳು.

೫೫–೫೬. ಮಹಾರಾಜನೆ! ಇಂತು ಆ ಹೆಣ್ಣುನಾಯಿಯ ಜನ್ಮದಲ್ಲಿಯೂ ಅವಳಿಗೆ ಮೂವತ್ತು ವರ್ಷಗಳು ಕಳೆದುಹೋದುವು. ಒಮ್ಮೆ ಅವಳ ಕರ್ಮದ ಪರಿಪಕ್ವದೆಸೆಯಿಂದಲೂ, ದೈವಾನುಗ್ರಹದಿಂದಲೂ ಸೂರ್ಯನು ಮೇಷರಾಶಿಗತನಾದ ವೈಶಾಖಮಾಸದಲ್ಲಿ ಶುಕ್ಲಪಕ್ಷದ ದ್ವಾದಶೀದಿನದಲ್ಲಿ ಪದ್ಮಬಂಧು ಬ್ರಾಹ್ಮಣನ ಪುತ್ರನೊಬ್ಬನು ನದಿಯಲ್ಲಿ ಸ್ನಾನವನ್ನುಮಾಡಿಕೊಂಡು ಶುಚಿರ್ಭೂತನಾಗಿ ಒದ್ದೆಯ ಬಟ್ಟೆಯಲ್ಲಿಯೇ ಮನೆಗೆ ಹಿಂದಿರುಗಿದನು.

೫೭. ಬಳಿಕ ತುಲಸೀಬೃಂದಾವನದ ಬಳಿಗೆ ಬಂದು ತನ್ನ ಪಾದಗಳೆರ

ಪ್ರಾಕ್ಸೂರ್ಯೋದಯವೇಲಾಯಾಂ ಪಾದೋದಕಪರಿಪ್ಲುತಾ ।
ಸದ್ಯೋ ಧ್ವಸ್ತಾಽಶುಭಾ ಜಾತಾ ಜಾತಸ್ಮೃತಿರಭೂತ್ಕ್ಷಣಾತ್ ॥ ೫೮ ॥
ಸ್ಮೃತ್ವಾ ಕರ್ಮ ಕೃತಂ ಪೂರ್ವಂ ಸಾಶುನೀ ತಾಪಸಂ ತದಾ ।
ಚುಕ್ರೋಶ ಕರುಣಾ ದೀನಾ ಮುನೇ ತ್ರಾಹೀತಿ ವೈ ಪುನಃ ॥ ೫೯ ॥
ಸ್ವಕರ್ಮ ಚ ಮುನೀಂದ್ರಾಯ ಸ್ಮೃತ್ವಾ ಚಖ್ಯೇ ಭಯಾಕುಲಾ ।
ಭರ್ತುರ್ವಿಷಪ್ರಯೋಗಂ ತು ಸ್ವಸ್ಯ ದುಶ್ಚರಿತಂ ತಥಾ ॥ ೬೦ ॥
ಯಾನ್ಯಾಪಿ ಯುವತೀ ಬ್ರಹ್ಮನ್ ಭರ್ತುರ್ವಶ್ಯಂ ಸಮಾಚರೇತ್ ।
ವೃಥಾ ಧರ್ಮಾ ದುರಾಚಾರಾ ಪಚ್ಯತೇ ತಾಮ್ರಭಾಜನೇ ॥ ೬೧ ॥
ಭರ್ತಾ ನಾಥೋ ಗುರುರ್ಭರ್ತಾ ಭರ್ತಾದೈವತಮುತ್ತಮಂ ।
ವಿಕ್ರಿಯಾಂ ಕೃತ್ಯ ಸಾಧ್ವೀ ಸಾ ಕಥಂ ಸುಖಮವಾಪ್ನುಯಾತ್ ॥ ೬೨ ॥

ಡನ್ನೂ ತೊಳೆದುಕೊಂಡನು. ಆ ಬೃಂದಾವನದ ಕೆಳಗಡೆಯಲ್ಲಿಯೇ ಹೆಣ್ಣು ನಾಯಿಯೂ ನಿದ್ರೆಯನ್ನು ಮಾಡುತ್ತಿದ್ದಿತು.

೫೮. ಸೂರ್ಯೋದಯವಾಗುವುದಕ್ಕೆ ಮುಂಚೆಯೇ ನಾಯಿಯು ಆ ಬ್ರಾಹ್ಮಣನ ಪಾದೋದಕದಿಂದ ಪ್ರೋಕ್ಷಿತವಾಯಿತು. ಅದರ ಫಲವಾಗಿ ತತ್‌ಕ್ಷಣವಲ್ಲಿಯೇ ಸಕಲ ಪಾತಕಗಳೂ ನಾಶವಾಗಲು ಅದಕ್ಕೆ ಪೂರ್ವ ಜನ್ಮಗಳ ಸ್ಮರಣೆಯುಂಟಾಯಿತು.

೫೯. ಪೂರ್ವದಲ್ಲಿ ತಾನು ಮಾಡಿದ ದುಷ್ಕೃತ್ಯಗಳೆಲ್ಲವನ್ನೂ ಸ್ಮರಿಸಿಕೊಂಡು ಆ ನಾಯಿಯು ಆ ಬ್ರಾಹ್ಮಣನನ್ನು ಕುರಿತು ಕರುಣೆಯುಂಟಾಗುವಂತೆ ದೀನ ಸ್ವರದಿಂದ "ಮಹಾ ಮುನಿಯೆ! ನನ್ನನ್ನು ಕಾಪಾಡು" ಎಂಬುದಾಗಿ ಪುನಃ ಪುನಃ ಆಕ್ರಂದನವನ್ನುಮಾಡಿತು.

೬೦. ಭಯದಿಂದ ಕೂಡಿದುದಾಗಿ ತನ್ನ ಪೂರ್ವಾಚಾರವೆಲ್ಲವನ್ನೂ ಸ್ಮರಿಸಿಕೊಂಡು ಗಂಡನಿಗೆ ವಿಷಪ್ರಯೋಗವನ್ನು ಮಾಡಿದುದು, ತನ್ನ ದುಶ್ಚಾರಿತ್ರ ಮುಂತಾದ ಸಕಲ ವೃತ್ತಾಂತವನ್ನೂ ಆ ಮುನೀಂದ್ರನಿಗೆ ಬಿನ್ನವಿಸಿತು.

೬೧. "ಬ್ರಾಹ್ಮಣೋತ್ತಮನೆ! ಯಾವ ಇತರ ಸ್ತ್ರೀಯು ಗಂಡನ ವಿಷಯದಲ್ಲಿ ವಶ್ಯಾದಿಗಳನ್ನು ಪ್ರಯೋಗಿಸುವಳೊ, ಅವಳ ಧರ್ಮಾಚರಣೆಯೆಲ್ಲವೂ ವ್ಯರ್ಥವಾಗಿ ಅವಳು ತಾಮ್ರಭಾಜನ ನರಕದಲ್ಲಿ ತಾಪಕ್ಕೆ ಗುರಿಯಾಗುವಳು.

೬೨. ಸ್ತ್ರೀಯಳಿಗೆ ಗಂಡನೇ ಯಜಮಾನನು. ಅವನೇ ಗುರುವು. ಅವನೇ ಸರ್ವೋತ್ತಮವಾದ ದೈವತವು. ಸಾಧುಸ್ತ್ರೀಯಾದವಳು ಆತನಿಗೆ ಅಹಿತವನ್ನಾಚರಿಸಿ ಹೇಗೆತಾನೆ ಸೌಖ್ಯವನ್ನು ಪಡೆದಾಳು?

ತಿರ್ಯಗ್ಯೋನಿಶತಂ ಯಾತಿ ಕ್ರಿಮಿಕೋಟಿಶತಾನಿ ಚ ।
ತಸ್ಮಾದ್ಭೂಸುರ ಕರ್ತವ್ಯಂ ಸ್ತ್ರೀಭಿರ್ಭರ್ತುರ್ವಚಃ ಸದಾ ॥ ೬೩ ॥
ಸಾಽಹಂ ಪಶ್ಯ ಪುನರ್ಯೋನಿಂ ಕುತ್ಸಿತಾಂ ಯಾತನಾನ್ವಿತಾಂ ।
ಯದಿ ನೋದ್ಧರಸೇ ಬ್ರಹ್ಮನ್ನದ್ಯ ತ್ವದ್ದೃಷ್ಟಿಸಂಮುಖಾಂ ॥ ೬೪ ॥
ತಸ್ಮಾದುದ್ಧರ ಮಾಂ ಬ್ರಹ್ಮನ್ ದುಷ್ಕೃತಾಂ ಪಾಪಚಾರಿಣೀಂ ।
ಸುಕೃತಸ್ಯ ಪ್ರದಾನೇನ ವೈಶಾಖೇ ಶುಕ್ಲಪಕ್ಷಕೇ ॥ ೬೫ ॥
ಯಾ ಕೃತಾ ತು ತ್ವಯಾ ಬ್ರಹ್ಮನ್ ದ್ವಾದಶೀ ಪುಣ್ಯವರ್ಧಿನೀ ।
ತಸ್ಯಾಂ ತ್ವಯಾ ಕೃತಂ ಪುಣ್ಯಂ ಸ್ನಾನದಾನಾನ್ನಭೋಜನೈಃ ।
ದುಶ್ಚಾರಿಣ್ಯಾ ಅಪಿ ಬ್ರಹ್ಮಂ ಸ್ತೇನ ಮುಕ್ತಿರ್ಭವಿಷ್ಯತಿ ॥ ೬೬ ॥
ಯಸ್ಯಾಂ ತು ಭೂಸುರಃ ಸ್ನಾತಃ ಸ್ವಗೃಹೇ ಮನುಜಃ ಕಿಲ ।
ಸರ್ವತೀರ್ಥಫಲಾಽವಾಪ್ತಿರ್ಲಭತೇ ನಾತ್ರ ಸಂಶಯಃ ॥ ೬೭ ॥
ತಪ್ತಂ ದತ್ತಂ ಹುತಂ ಯತ್ರ ಕೃತಂ ದೇವಾರ್ಚನಾದಿ ಯತ್ ।
ತದಕ್ಷಯ್ಯಫಲಂ ಜ್ಞೇಯಂ ಯತ್ಕೃತಂ ದ್ವಾದಶೀದಿನೇ ॥ ೬೮ ॥

---

೬೩–೬೪. ಅಂತಹ ಹೆಂಗಸು ತಿರ್ಯಗ್ಯೋನಿಗಳಲ್ಲಿ ನೂರು ಜನ್ಮಗಳನ್ನು ಪಡೆದು ನೂರುಕೋಟಿಕ್ರಿಮಿಗಳ ಬಾಧೆಯನ್ನು ಸಹಿಸಬೇಕಾಗುವುದು. ಎಲೈ ಭೂಸುರನೆ! ಆದುದರಿಂದ ಸ್ತ್ರೀಯರು ತಮ್ಮ ಗಂಡಂದಿರ ಮಾತುಗಳನ್ನೇ ಕೇಳುತ್ತ ವಿಧೇಯರಾಗಿ ನಡೆದುಕೊಳ್ಳಬೇಕು. ಅಂತಹ ದುಶ್ಚರಿತ್ರೆಯಾದ ನಾನು ನಿನ್ನ ದೃಷ್ಟಿಪಥಕ್ಕೆ ಬಿದ್ದಿರುವೆನು. ಈಗ ನನ್ನನ್ನು ಉದ್ಧರಿಸದಿದ್ದರೆ ನಾನು ಯಾತನೆಗಳ ನೆಲೆವೀಡಾದ ನೀಚಯೋನಿಯಲ್ಲಿ ಪುನಃ ಜನ್ಮವನ್ನು ತಾಳಬೇಕಾಗುವುದು.

೬೫. ಬ್ರಾಹ್ಮಣನೆ! ಆದುದರಿಂದ ವೈಶಾಖಮಾಸದ ಶುಕ್ಲಪಕ್ಷದಲ್ಲಿ ಮಾಡಿದ ಸುಕೃತವನ್ನು ದಾನಮಾಡುವುದರಿಂದ ದುಷ್ಕಾರ್ಯನಿರತಳೂ ಪಾಪ ಚರಿತ್ರೆಯುಳ್ಳವಳೂ ಆದ ನನ್ನನ್ನು ಉದ್ಧಾರಮಾಡು.

೬೬. ಬ್ರಾಹ್ಮಣೋತ್ತಮನೆ! ನೀನು ವೈಶಾಖ ಶುಕ್ಲ ದ್ವಾದಶಿಯ ಪುಣ್ಯ ವರ್ಧಕವಾದ ವ್ರತವನ್ನಾಚರಿಸಿರುವೆಯಷ್ಟೆ. ಅಂದಿನ ದಿನದಲ್ಲಿ ಮಾಡಿದ ಸ್ನಾನ, ದಾನ, ಬ್ರಾಹ್ಮಣಭೋಜನಾದಿಗಳಿಂದ ಯಾವ ಪುಣ್ಯವನ್ನು ಪಡೆದಿರು ವೆಯೊ, ಅದನ್ನು ದುಷ್ಟಚಾರಿತ್ರಳಾದ ನನಗೆ ಅನುಗ್ರಹಿಸು. ಅದರಿಂದಲೇ ನನಗೆ ಮೋಚನೆಯುಂಟಾಗುವುದು.

೬೭. ಆ ತಿಥಿಯ ದಿವಸದ ಪ್ರಾತಃಕಾಲದಲ್ಲಿ ಬ್ರಾಹ್ಮಣನು ಮನೆಯಲ್ಲಿಯೇ ಸ್ನಾನವನ್ನು ಮಾಡಿದರೂ ಸಹ ಸಕಲ ತೀರ್ಥಗಳಲ್ಲಿ ಮಿಂದ ಫಲವನ್ನು ಹೊಂದುವನೆಂಬ ವಿಷಯದಲ್ಲಿ ಸಂದೇಹವಿಲ್ಲ.

೬೮. ಆ ದ್ವಾದಶಿಯ ದಿನದಲ್ಲಿ ಮಾಡಿದ ತಪಸ್ಸು, ದಾನ, ಹೋಮ,

ಏವಂ ವಿಧಫಲಂ ಯತ್ಸ್ಯಾತ್ತದ್ದೇಹಿ ಸಕಲಂ ಮಮ ॥ ೬೯ ॥
ದ್ವಾದಶ್ಯಾಮುಪವಾಸೇನ ತ್ರಯೋದಶ್ಯಾಂ ತು ಪಾರಣಾತ್ ।
ಯತ್ಫಲಂ ಸ್ಯಾತ್ತದಪ್ಯದ್ಧಾ ತೇನ ಮುಕ್ತಿರ್ಭವಿಷ್ಯತಿ ॥ ೭೦ ॥
ದಯಾಂ ಕುರು ಮಹಾಭಾಗ ದೀನಾಯಾಂ ದೀನವತ್ಸಲ ।
ದೀನನಾಥೋ ಜಗನ್ನಾಥೋ ಯುಷ್ಮನ್ನಾಥೋ ಜನಾರ್ದನಃ ॥ ೭೧ ॥
ತದೀಯಾಸ್ತಾದೃಶ್ಯಾವ ಯಥಾರಾಜಾ ತಥಾಪ್ರಜಾಃ ।
ವೈವಸ್ವತಪದಧ್ವಂಸಿನ್ ಪರಿತ್ರಾಹಿ ಸುದುಃಖಿತಾಂ ॥ ೭೨ ॥
ತ್ವದ್ದ್ವಾರವಾಸಿನೀಂ ದೀನಾಂ ಶುನೀಂ ಮಾಂ ದೀನವತ್ಸಲ ।
ಬ್ರಹ್ಮಹತ್ಯಾಸಹಸ್ರಂ ವಾ ಗೋಹತ್ಯಾನಾಂ ಸಹಸ್ರಕಂ ॥ ೭೩ ॥
ಅಗಮ್ಯಾನಾಂ ಚ ಕೋಟೀಶ್ಚ ದಹತ್ಯೇವ ಶುಭಾ ತಿಥಿಃ ।
ತಸ್ಯಾಂ ಕೃತಂ ಮಹಾಪುಣ್ಯಂ ಮಹ್ಯಂ ದತ್ವಾ ಮಹಾಮುನೇ ॥ ೭೪ ॥

---

ದೇವತಾರ್ಚನೆ ಮುಂತಾದ ಸಕಲ ಸತ್ಕರ್ಮಗಳೂ ಅಕ್ಷಯಗುಣಿತವಾದ ಫಲ ವನ್ನು ಕೊಡುವುವೆಂದು ತಿಳಿಯಬೇಕು.

೬೯–೭೦. ಈ ವಿಧವಾದ ಫಲವು ನಿನ್ನಲ್ಲಿ ಯಾವುದಿರುವುದೊ, ಅದನ್ನೆಲ್ಲ ವನ್ನೂ ನನಗೆ ದಾನಮಾಡು. ದ್ವಾದಶಿಯ ದಿನ ಉಪವಾಸವನ್ನು ಮಾಡಿ ತ್ರಯೋದಶಿಯ ದಿನದಲ್ಲಿ ಪಾರಣೆಯನ್ನುಮಾಡಿದ ಯಾವ ಪುಣ್ಯವಿರುವುದೊ, ಅದನ್ನೂ ಸಹ ಈಗಲೇ ನನಗೆ ಧಾರೆಯೆರೆದುಕೊಡು. ಅದರಿಂದ ನನಗೆ ಮೋಕ್ಷವು ಲಭಿಸುವುದು.

೭೧. ಮಹಾಭಾಗನೆ! ದೀನಾನುಕಂಪಿಯೆ! ದೀನಳಾದ ನನ್ನಲ್ಲಿ ದಯೆ ಯನ್ನು ತೋರು. ನಿನ್ನ ನಾಥನೂ ಜಗದೊಡೆಯನೂ ಆದ ಜನಾರ್ದನನೂ ದೀನಾನಾಥರಿಗೆ ನಾಥನಾಗಿರುವನಲ್ಲವೆ.

೭೨. ಆತನ ಭಕ್ತರೂ ಆತನಂತೆಯೇ ಇರುವರು. ರಾಜನು ಹೇಗೆ ಮೇಲ್ಪಂಕ್ತಿಯನ್ನಿಡುವನೊ, ಪ್ರಜೆಗಳೂ ಹಾಗೆಯೇ ನಡೆದುಕೊಳ್ಳುವರು. ಯಮಧರ್ಮನ ಅಧಿಕಾರವನ್ನು ಧ್ವಂಸಮಾಡಿರುವ ಮಹನೀಯನೆ! ಅತ್ಯಂತ ಕಷ್ಟದಲ್ಲಿ ನರಳುತ್ತಿರುವ ನನ್ನನ್ನು ಕಾಪಾಡು.

೭೩–೭೪. ದೀನಾನುಕಂಪಿಯಾದ ನೀನು ನಿನ್ನ ಮನೆಯ ಬಾಗಿಲಿನಲ್ಲಿ ವಾಸಿಸುತ್ತಿರುವ ಹೆಣ್ಣುನಾಯಿಯಾಗಿರುವ ದೀನಳಾದ ನನ್ನನ್ನು ಅನುಗ್ರಹಿಸು. ಈ ದ್ವಾದಶೀಶುಭತಿಥಿಯು ಒಂದು ಸಾವಿರ ಬ್ರಹ್ಮಹತ್ಯೆಗಳ ಪಾಪವನ್ನೂ, ಒಂದು ಸಾವಿರ ಗೋಹತ್ಯೆಗಳನ್ನೂ, ಕೋಟಿ ಅಗಮ್ಯಸ್ತ್ರೀಯರ ಸಂಗದ ದೋಷವನ್ನೂ ಸುಟ್ಟುಬಿಡುವುದು. ಮಹಾಮುನಿಯೆ! ಆ ಶುಭ ತಿಥಿಯಲ್ಲಿ ನೀನು ಗಳಿಸಿರುವ ಮಹಾ ಪುಣ್ಯವೆಲ್ಲವನ್ನೂ ನನಗೆ ದಾನಮಾಡು.

ಮಾಮುದ್ಧರ ಸಮುದ್ವಿಗ್ನಾಂ ದೀನಾಂ ನಾಥ ಸಮುದ್ಧರ ।
ಅಂತೇ ತುಭ್ಯಂ ದ್ವಿಜೇಂದ್ರಾಯ ನಮ ಉಕ್ತಿಂ ವದಾಮ್ಯಹಂ ॥ ೭೫ ॥
ಇತಿ ತಸ್ಯಾ ವಚಃ ಶ್ರುತ್ವಾ ಶುನೀಮಾಹ ಮುನೇಃ ಸುತಃ ।
ಸ್ವಕೃತಂ ಜಂತವೋಽಶ್ನಂತಿ ಸುಖದುಃಖಾತ್ಮಕಂ ಶುನಿ ॥ ೭೬ ॥
ತಸ್ಮಾತ್ಕಿಮು ತ್ವಯಾ ಕಾರ್ಯಂ ಕ್ಷುದ್ರಯಾ ಪಾಪಶೀಲಯಾ ।
ಯಯಾ ಭರ್ತಾ ವಶಂ ನೀತೋ ರಕ್ಷಾಚೂರ್ಣಾದಿಭಿರ್ದ್ವಿಜಃ ॥ ೭೭ ॥
ಸಾಧುಭ್ಯೋ ಯತ್ಕೃತಂ ಪಾಪಂ ಸ್ವಸ್ಯ ದುಃಖಕರಂ ಭವೇತ್ ।
ಸಾಧುಭ್ಯೋ ಯತ್ಕೃತಂ ಪುಣ್ಯಂ ಸ್ವಸ್ಯ ದುಃಖಹರಂ ಭವೇತ್ ॥ ೭೮ ॥
ಉಭಯಂ ಭ್ರಂಶತಾಮೇತಿ ಪಾಪೇಭ್ಯೋ ಯತ್ಕೃತಂ ಭವೇತ್ ।
ಶರ್ಕರಾಮಿಶ್ರಿತಂ ಕ್ಷೀರಂ ಕಾದ್ರವೇಯನಿವೇದಿತಂ ॥ ೭೯ ॥
ವಿಷವೃದ್ಧಿಕರಂ ದೃಷ್ಟಮೇವಂ ಪಾಪಕರಂ ಭವೇತ್ ॥ ೮೦ ॥

೭೫. ಅನೇಕ ಕಷ್ಟಗಳಲ್ಲಿ ತೊಳಲಿ ಬಳಲಿ ಉದ್ವಿಗ್ನಳಾಗಿರುವ ದೀನಳಾದ ನನ್ನನ್ನು ಉದ್ಧಾರಮಾಡು. ಕೊನೆಯದಾಗಿ ಬ್ರಾಹ್ಮಣೋತ್ತಮನಾದ ನಿನಗೆ ಪುನಃ ಪುನಃ ನಮಸ್ಕಾರಗಳನ್ನು ಹೇಳುತ್ತಿರುವೆನು.''

೭೬. ಇಂತೆಂದ ನಾಯಿಯ ಮಾತುಗಳನ್ನು ಕೇಳಿ ಆ ಬ್ರಾಹ್ಮಣಪುತ್ರನು ಅದನ್ನು ಕುರಿತು ಹೇಳತೊಡಗಿದನು. ''ನಾಯಿಯೆ! ಸಕಲ ಜಂತುಗಳೂ ಪೂರ್ವ ಕರ್ಮದ ಫಲವನ್ನೇ ಸುಖದುಃಖಗಳ ರೂಪದಿಂದ ಅನುಭವಿಸುತ್ತಿರುವರು.

೭೭. ಆದುದರಿಂದ ನೀಚಯೋನಿಜನಿತೆಯೂ ಪಾಪಕೃತ್ಯನಿರತಳೂ ಆದ ನೀನು ಯಾವ ಪುಣ್ಯಕಾರ್ಯವನ್ನು ಮಾಡಬಲ್ಲೆ? ಹಿಂದೆ ಗಂಡನಾದ ಬ್ರಾಹ್ಮಣನು ಚೂರ್ಣ, ರಕ್ಷಾದಿ ನೀಚೋಪಾಯಗಳಿಂದ ನಿನ್ನ ವಶವರ್ತಿಯಾಗಿ ಮಾಡಲ್ಪಡಲಿಲ್ಲವೆ?

೭೮. ಸಾಧುಗಳ ವಿಷಯದಲ್ಲಿ ಮಾಡಿದ ಸ್ವಲ್ಪವಾದ ಪಾಪವೂ ದುಃಖ ಕಾರಕವೇ ಆಗಿ ಪರಿಣಮಿಸುವುದು. ಸಾಧುಗಳಿಗೆ ಮಾಡಿದ ಸೇವಾದಿ ಪುಣ್ಯ ಕರ್ಮವು ಮನುಷ್ಯನ ದುಃಖಗಳನ್ನೆಲ್ಲ ಪರಿಹರಿಸುವುದು.

೭೯. ಆದರೆ ಪಾಪಿಷ್ಠರಾದವರಿಗೆ ಮಾಡಿದ ಸತ್ಕರ್ಮದುಷ್ಕರ್ಮಗಳೆರಡೂ ಕೇವಲ ನಿಷ್ಫಲಗಳಾಗಿಯೇ ಪರಿಣಮಿಸುವುವು. ಅಲ್ಲದೆ ವಿಷಸರ್ಪಕ್ಕೆ ಆಹಾರ ವಾಗಿ ಕೊಟ್ಟ ಸಕ್ಕರೆ ಬೆರಸಿದ ಹಾಲಿನಂತೆ ಅವರಿಗೆ ಮಾಡಿದ ಉಪಕಾರವೂ ವಿಪರೀತವಾಗಿಯೇ ಪರಿಣಮಿಸುವುದು.

೮೦. ಹೇಗೆ ಹಾವುಗಳ ಪಯಃಪಾನವು ಕೇವಲ ವಿಷವರ್ಧಕವಾಗುವುದೊ, ಹಾಗೆಯೇ ಪಾಪಿಗಳಲ್ಲಿ ಮಾಡಿದ ಉಪಕಾರವೂ ಪಾಪಕರವೇ ಆಗುವುದು.''

ವದತ್ಯೇವಂ ಮುನಿಸುತೇ ಶುನೀ ದುಃಖೈಕರೂಪಿಣೀ ।
ಪುನಶ್ಚುಕ್ರೋಶೋರ್ಧ್ವಸ್ವರಂ ತತ್ಪಿತ್ರೇ ಬಹುಭಾಷಿಣೀ ॥ ೮೧ ॥
ಪದ್ಮಬಂಧೋ ಪರಿತ್ರಾಹಿ ಶುನೀಂ ತ್ವದ್ದ್ವಾರವಾಸಿನೀಂ ।
ತ್ವದುಚ್ಛಿಷ್ಟಾಶಿನೀಂ ನಿತ್ಯಂ ತ್ವಂ ಸಾಹೀತಿ ಪುನಃ ಪುನಃ ॥ ೮೨ ॥
ಸ್ವಪೋಷ್ಯಾ ಯೇ ಹಿ ವರ್ತಂತೇ ಗೃಹಸ್ಥಸ್ಯ ಮಹಾತ್ಮನಃ ।
ತೇಷಾಮುದ್ಧರಣಂ ಕಾರ್ಯಮಿತಿವೇದವಿದಾಂ ಮತಂ ॥ ೮೩ ॥
ಚಂಡಾಲಾ ವಾಯಸಾಶ್ಚೈವ ಸಾರಮೇಯಾಶ್ಚ ನಿತ್ಯಶಃ ।
ಗೃಹಸ್ಥಾನಾಂ ದಯಾಪಾತ್ರಂ ಪ್ರತ್ಯಹಂ ಬಲಿಭೋಜಿನಃ ॥ ೮೪ ॥
ಅಶಕ್ತಂ ನೋದ್ಧರೇತ್ ಪೋಷ್ಯಂ ರೋಗಾದ್ಯುಪಹತಂ ಯದಿ ।
ಸೋಽಧಃಪತೇನ್ನ ಸಂದೇಹ ಇತಿ ವೇದವಿದಾಂ ಮತಂ ॥ ೮೫ ॥

ಕರ್ತಾರಮೇಕಂ ಜಗತಾಂ ಹಿ ಕರ್ತಾ
ಕೃತ್ವಾತ್ಮನಾ ಪಾತಿ ಸಮಸ್ತಜಂತೂನ್ ।
ದಾರಾದಿರೂಪವ್ಯಪದೇಶತೋ ಹರಿ
ಸ್ತಸ್ಮಾತ್ತದಾಜ್ಞಾ ಖಲು ಪೋಷ್ಯರಕ್ಷಾ ॥ ೮೬ ॥

೮೧. ಮುನಿಪುತ್ರನು ಇಂತು ಪ್ರತ್ಯುತ್ತರವನ್ನು ಕೊಡುತ್ತಿರಲು ಕೇವಲ ದುಃಖದ ರೂಪವಾಗಿಯೇ ಕಾಣುತ್ತಿದ್ದ ಆ ನಾಯಿಯು ಬಹುವಾಗಿ ಪ್ರಲಾಪ ವನ್ನು ಮಾಡುತ್ತ ಪುನಃ ಉಚ್ಚಸ್ವರದಿಂದ ಕೂಗುತ್ತ ಆತನ ತಂದೆಯನ್ನು ಕುರಿತು ಮಾತನಾಡತೊಡಗಿತು.

೮೨. "ಪದ್ಮಬಂಧುವೆ! ನಿನ್ನ ಮನೆಯ ಬಾಗಿಲಿನಲ್ಲಿ ವಾಸಿಸುತ್ತಿರುವ ಹೆಣ್ಣು ನಾಯಿಯಾದ ನನ್ನನ್ನು ಸಂರಕ್ಷಿಸು. ನಿತ್ಯವೂ ನಿನ್ನ ಉಚ್ಛಿಷ್ಟವನ್ನು ಭೋಜನಮಾಡುತ್ತಿರುವ ನನ್ನನ್ನು ನೀನೇ ಕಾಪಾಡಬೇಕು.

೮೩. ಮಹಾತ್ಮನಾದ ಗೃಹಸ್ಥನಿಗೆ ಮನೆಯ ಪೋಷ್ಯವರ್ಗದಲ್ಲಿ ಯಾರು ಯಾರಿರುವರೊ, ಅವರೆಲ್ಲರ ಉದ್ಧಾರವೂ ಯಜಮಾನನ ಕರ್ತವ್ಯವೆಂಬುದಾಗಿ ವೇದಗಳನ್ನು ತಿಳಿದವರ ಮತವಾಗಿರುವುದು.

೮೪. ಚಂಡಾಲರಾಗಲಿ, ಕಾಗೆಗಳಾಗಲಿ, ನಾಯಿಗಳಾಗಲಿ, ಪ್ರತಿನಿತ್ಯ ದಲ್ಲಿಯೂ ಯಾರ ಮನೆಯ ಬಲಿಯನ್ನು ಭೋಜನಮಾಡುತ್ತಿರುವರೊ ಅವರೆಲ್ಲರೂ ಗೃಹಸ್ಥನಾದವನ ದಯೆಗೆ ಉತ್ತಮ ಪಾತ್ರಗಳಾಗಿರುವರು.

೮೫. ಪೋಷ್ಯವರ್ಗಕ್ಕೆ ಸೇರಿದ ಅಶಕ್ತನನ್ನೂ ರೋಗಾದಿಪೀಡಿತನನ್ನೂ ಕಾಪಾಡದಿರುವ ಗೃಹಸ್ಥನು ಅಧೋಲೋಕಗಳಲ್ಲಿ ಬೀಳುವುದರಲ್ಲಿ ಸಂದೇಹವಿಲ್ಲ ವೆಂಬುದೇ ವೇದಶಾಸ್ತ್ರಜ್ಞರ ಅಭಿಪ್ರಾಯವಾಗಿರುವುದು.

೮೬. ಲೋಕಗಳ ಕರ್ತೃವಾದ ಶ್ರೀಮನ್ನಾರಾಯಣನು ಜಗತ್ಸ್ರಷ್ಟೃವಾದ

ಸ್ವಪೋಷ್ಯರಕ್ಷಾಂ ಪರಿಹೃತ್ಯ ಜಂತು
ರ್ದೈವೇನ ಕ್ಲ್ಪಪ್ತಾಂ ಯದಿ ವರ್ತತೇಽನಧೀಃ ।
ಸ ದೇವದ್ರೋಗ್ಧಾ ಸಕಲಸ್ಯ ಹಂತಾ
ಕೀನಾಶಲೋಕಾನನು ಸಂಪ್ರಯಾತಿ ॥ ೮೭ ॥
ಕರ್ತವ್ಯತ್ವಾದ್ದಯಾಲುತ್ವಾದೇತಾಮುದ್ಧರ ದುರ್ಮತಿಂ ।
ಇತಿ ತಸ್ಯಾ ವಚಃ ಶ್ರುತ್ವಾ ದುಃಖಾರ್ತಾಯಾ ಗೃಹೇ ಸುತಃ ।
ನಿಶ್ಚಕ್ರಾಮ ಗೃಹಾತ್ತೂರ್ಣಂ ಪದ್ಮಬಂಧುರ್ದಯಾನಿಧಿಃ ॥ ೮೮ ॥
ಕಿಮೇತದಿತಿ ತಾಂ ಪ್ರಾಹ ಪುತ್ರಃ ಸರ್ವಂ ನ್ಯವೇದಯತ್ ।
ಸ ತತ್ ಪುತ್ರವಚಃ ಶ್ರುತ್ವಾ ತಮೇವಂ ಪ್ರಾಹ ವಿಸ್ಮಿತಃ ॥ ೮೯ ॥

---

ಬ್ರಹ್ಮದೇವನೊಬ್ಬನನ್ನು ಸೃಜಿಸಿ ತನ್ನ ಅಂಶರೂಪನಾದ ಆತನ ಮೂಲಕ ವಾಗಿಯೇ ಸಕಲ ಪ್ರಾಣಿಗಳನ್ನೂ ಸಂರಕ್ಷಿಸುತ್ತಿರುವನು. ಆ ಶ್ರೀಹರಿಯೇ ಹೆಂಡತಿ ಮಕ್ಕಳೆಂಬ ಅನೇಕ ರೂಪಗಳಾಗಿ ವ್ಯಾಜದಿಂದ ಕಾಣುತ್ತಿರುವನು. ಆದುದರಿಂದ ಪೋಷ್ಯವರ್ಗದವರ ಸಂರಕ್ಷಣೆಯೂ ಆತನ ಆಜ್ಞೆಯನ್ನು ಪಾಲಿಸುವ ಕ್ರಮವೇ ಆಗಿರುವುದು.

(ಜಗತ್ಕರ್ತೃವಾದ ಪರಮಾತ್ಮನು ತನ್ನ ಅಂಶದಿಂದಲೇ ಗೃಹಸ್ವಾಮಿಯೆಂಬೊಬ್ಬನನ್ನು ಸೃಷ್ಟಿಮಾಡಿ, ಪತ್ನೀಪುತ್ರಾದಿ ವ್ಯಕ್ತಿಗಳ ವ್ಯಾಜದಿಂದ ಆತನನ್ನು ಅಭಿಮಾನಕ್ಕೊಳಪಡಿಸಿ, ಸಕಲ ಜಂತುಗಳನ್ನೂ ತಾನೇ ಸಂರಕ್ಷಿಸುತ್ತಿರುವನು. ಆದುದರಿಂದ ಆತನ ಆಜ್ಞಾನುಸಾರವಾಗಿಯೇ ಪೋಷ್ಯವರ್ಗದ ಸಂರಕ್ಷಣೆಯೂ ನಡೆಯುತ್ತಿರುವುದಲ್ಲವೆ.)

೮೭. ಯಾವನು ಇಂತು ದೈವಯೋಗದಿಂದ ನಿಯಮಿತವಾಗಿರುವ ತನ್ನ ಭೃತ್ಯವರ್ಗದ ರಕ್ಷಣೆಯನ್ನು ತ್ಯಜಿಸಿ ಇತರ ವಿಷಯಗಳಲ್ಲಿ ವ್ಯಗ್ರವಾದ ಬುದ್ಧಿಯುಳ್ಳವನಾಗುವನೊ, ಅವನೇ ದೇವದ್ರೋಹಿಯು. ತನ್ನ ಸಕಲ ಕರ್ಮವನ್ನೂ ನಾಶಮಾಡಿಕೊಂಡು ನೀಚಗಳಾದ ಪಾತಾಳಾದಿ ಯಮಲೋಕಗಳಿಗೆ ಹೋಗಿ ದುಃಖಗಳನ್ನನುಭವಿಸುವನು.

೮೮. ನಿನ್ನ ಕರ್ತವ್ಯವಾಗಿರುವುದರಿಂದಲೂ, ನೀನು ದಯಾಳುವಾಗಿರುವುದರಿಂದಲೂ ದುರ್ಬುದ್ಧಿಯುಳ್ಳ ನನ್ನನ್ನು ಉದ್ಧಾರಮಾಡು.'' ಇಂತೆಂದು ದುಃಖದಿಂದ ಬಳಲುತ್ತಿರುವ ಆ ಹೆಣ್ಣುನಾಯಿಯ ಆಕ್ರಂದನವನ್ನು ಕೇಳಿ ಮುನಿಪುತ್ರನು ಮನೆಯೊಳಕ್ಕೆ ಹೋಗುತ್ತಿದ್ದನು. ಆ ಕಾಲಕ್ಕೆ ಸರಿಯಾಗಿ ದಯಾಸಮುದ್ರನಾದ ಪದ್ಮಬಂಧುವೂ ಸಂಭ್ರಮದಿಂದ ಮನೆಯನ್ನು ಬಿಟ್ಟು ಹೊರಕ್ಕೆ ಬರುತ್ತಿದ್ದನು.

೮೯. ನಿನ್ನ ವೃತ್ತಾಂತವೇನೆಂದು ತಂದೆಯು ನಾಯಿಯನ್ನು ಕೇಳ

ಪದ್ಮಬಂಧುರುವಾಚ :—

ಮಮಾತ್ಮಜ ಕಥಂ ವಾಕ್ಯಮೀದೃಶಂ ವ್ಯಾಹೃತಂ ತ್ವಯಾ ।
ನ ಸಾಧೂನಾಮಿದಂ ವಾಕ್ಯಂ ಭವತೀಹ ವರಾನನ ॥ ೯೦ ॥
ಆತ್ಮಸೌಖ್ಯಕರಾಃ ಪಾಪಾ ಭವಂತಿ ಪರಿಭಾವಿತಾಃ ।
ಪಶ್ಯ ಪುತ್ರ ಜನಾಃ ಸರ್ವೇ ಪರೋಪಕರಣಾಯ ವೈ ॥ ೯೧ ॥
ಶಶೀ ಸೂರ್ಯೋಽಥ ಪವನೋ ರಜನೀ ಹುತಭುಗ್ಜಲಂ ।
ಚಂದನಂ ಪಾದಪಾಸ್ಸಂತಃ ಪರೋಪಕರಣೇ ಸ್ಥಿತಾಃ ॥ ೯೨ ॥
ಅಸ್ಥಿದಾನಂ ಕೃತಂ ಪುತ್ರ ಕೃಪಯಾ ಹಿ ದಧೀಚಿನಾ ।
ದೇವಾನಾಮುಪಕಾರಾಯ ಜ್ಞಾತ್ವಾ ದೈತ್ಯಾನ್ಮಹಾಬಲಾನ್ ॥ ೯೩ ॥
ಕಪೋತಾರ್ಥೇ ಸ ಮಾಂಸಾನಿ ಶಿಬಿನಾ ಭೂಭುಜಾ ಪುರಾ ।
ಪ್ರದತ್ತಾನಿ ಮಹಾಭಾಗ ಶ್ಯೇನಾಯ ಕ್ಷುಧಿತಾಯ ವೈ ॥ ೯೪ ॥

---

ತ್ತಿರಲು ಮಗನು ನಡೆದ ವೃತ್ತಾಂತವೆಲ್ಲವನ್ನೂ ಬಿನ್ನವಿಸಿದನು. ಆತನೂ ಮಗನ ಮಾತುಗಳೆಲ್ಲವನ್ನೂ ಕೇಳಿ ವಿಸ್ಮಯಗೊಂಡು ಇಂತೆಂದು ಹೇಳ ತೊಡಗಿದನು.

೯೦. ಪದ್ಮಬಂಧುವು ಹೇಳುತ್ತಾನೆ:—“ನನ್ನ ಪ್ರಿಯ ಪುತ್ರನಾದ ನಿನ್ನ ಬಾಯಿಂದ ಇಂತಹ ಕಠಿನವಾಕ್ಯವು ಹೇಗೆ ಹೊರಬಂದಿತು? ಸುಮುಖನೆ! ಸಾಧುಗಳಿಗೆಂದಿಗೂ ಈ ವಿಧವಾದ ಮಾತುಗಳನ್ನು ಬಾಯಿಯಲ್ಲಿ ಹೊರಡು ವುದಿಲ್ಲವು.

೯೧. ತಮ್ಮ ಸೌಖ್ಯಗಳನ್ನೇ ಸಾಧಿಸಿಕೊಳ್ಳುವ ಪಾಪಿಜನಗಳು ನಿತ್ಯವೂ ಪರಿಭವಗಳನ್ನು ಹೊಂದುತ್ತಿರುವರು. ಮಗನೆ! ಲೋಕವನ್ನು ನೋಡಿದೆಯಾ! ಸಕಲ ಜನರೂ ಪರೋಪಕಾರವನ್ನು ಮಾಡುವ ಬುದ್ಧಿಯಿಂದಲೇ ವರ್ತಿಸುತ್ತಿರು ವರಲ್ಲವೆ?

೯೨. ಚಂದ್ರ, ಸೂರ್ಯ, ವಾಯುದೇವ, ರಾತ್ರಿ, ಅಗ್ನಿ, ಜಲ, ಚಂದನ ವೃಕ್ಷ, ಇತರ ವೃಕ್ಷಗಳೂ ಎಲ್ಲವೂ ಪರರಿಗೆ ಉಪಕಾರಗಳನ್ನೇ ಮಾಡುತ್ತಿರು ವುವಲ್ಲವೆ.

೯೩. ಪುತ್ರನೆ! ಪೂರ್ವದಲ್ಲಿ ದೈತ್ಯರು ಮಹಾ ಬಲಶಾಲಿಗಳಾದುದನ್ನು ತಿಳಿದು ದೇವತೆಗಳಿಗೆ ಉಪಕಾರವನ್ನು ಮಾಡಲು ದಧೀಚಿಯೆಂಬ ಮಹರ್ಷಿಯು ತನ್ನ ಬೆನ್ನು ಮೂಳೆಯನ್ನೇ ದಾನಮಾಡಿದನು.

೯೪. ಶಿಬಿಯೆಂಬ ಚಕ್ರವರ್ತಿಯು ಮುನ್ನು ತನ್ನನ್ನು ಶರಣುಹೊಂದಿದ ಕಪೋತವನ್ನು ಬಿಟ್ಟುಕೊಡಲಾರದೆ ಹಸಿವಿನಿಂದ ಆತುರಗೊಂಡಿದ್ದ ಗಿಡುಗನಿಗೆ ತನ್ನ ಮೈಯೊಳಗಿನ ಮಾಂಸಖಂಡಗಳನ್ನೇ ಕತ್ತರಿಸಿಕೊಟ್ಟನು.

ಜೀಮೂತವಾಹನೋ ರಾಜಾ ಪುರಾಸೀತ್ ಕ್ಷಿತಿಮಂಡಲೇ ।
ತೇನಾಪಿ ಜೀವಿತಂ ದತ್ತಂ ಗರುಡಾಯ ಮಹಾತ್ಮನೇ ॥ ೯೫ ॥
ತಸ್ಮಾದ್ದಯಾಲುನಾ ಭಾವ್ಯಂ ಭೂಸುರೇಣ ವಿಪಶ್ಚಿತಾ ।
ಶುದ್ಧೇ ವರ್ಷತಿ ದೇವಸ್ತು ಕಿಮಶುದ್ಧೇನ ವರ್ಷತಿ ॥ ೯೬ ॥
ಕಿನ್ನ ದೀಪಯತೇ ಚಂದ್ರಶ್ಚಂಡಾಲಾನಾಂ ಗೃಹೇ ಸದಾ ।
ತಸ್ಮಾದಹಂ ಶುನೀಮೇತಾಂ ಯಾಚಂತೀಂ ಚ ಪುನಃ ಪುನಃ ॥ ೯೭ ॥
ಉದ್ಧರಿಷ್ಯೇ ನಿಜೈಃ ಪುಣ್ಯೈಃ ಪಂಕಮಗ್ನಾಂ ಚ ಗಾಂ ಯಥಾ ।
ಇತಿ ಪುತ್ರಂ ನಿರಾಕೃತ್ಯ ಪ್ರತಿಜಜ್ಞೇ ಮಹಾಮತಿಃ ॥ ೯೮ ॥
ದತ್ತಂ ದತ್ತಂ ಮಹಾಪುಣ್ಯಂ ದ್ವಾದಶೀದಿನಸಂಭವಂ ।
ಶುನಿ ಗಚ್ಛ ಹರೇರ್ಧಾಮ ನಿರ್ಧೂತಾಽಖಿಲಕಲ್ಮಷಾ ॥ ೯೯ ॥
ತದ್ವಾಕ್ಯಾತ್ಸಹಸಾ ಭೂಪ ದಿವ್ಯಾಭರಣಭೂಷಿತಾ ।
ವಿಮುಚ್ಯ ದೇಹಂ ಜೀರ್ಣಂ ತು ದಿವ್ಯರೂಪಧರಾ ಶುಭಾ ॥ ೧೦೦ ॥

---

೯೫. ಹಿಂದಿನ ಕಾಲದಲ್ಲಿ ಭೂಲೋಕದಲ್ಲಿ ಜೀಮೂತವಾಹನನೆಂಬ ಮಹಾರಾಜನೊಬ್ಬನಿದ್ದನು. ಅವನೂ ಸಹ ಮಹಾತ್ಮನಾದ ಗರುಡನಿಗೆ ಆಹಾರಾರ್ಥವಾಗಿ ತನ್ನ ಶರೀರವನ್ನೇ ದಾನಮಾಡಿದನು.

೯೬. ಆದುದರಿಂದ ಶಾಸ್ತ್ರಾರ್ಥಗಳನ್ನು ತಿಳಿದ ಬ್ರಾಹ್ಮಣನು ಮುಖ್ಯವಾಗಿ ದಯಾಳುವಾಗಿರಬೇಕು. ಪಾತ್ರಾಪಾತ್ರಗಳ ವಿಚಾರವನ್ನು ವಿಶೇಷವಾಗಿ ಮಾಡಬಾರದು. ದೇವೋತ್ತಮನಾದ ಮಹೇಂದ್ರನು ಶುದ್ಧ ಪ್ರದೇಶಗಳಲ್ಲಿ ಮಾತ್ರ ವರ್ಷವನ್ನು ಕೊಟ್ಟು ಅಶುದ್ಧಸ್ಥಳದಲ್ಲಿ ಮಳೆಯನ್ನು ಕರೆಯದಿರುವನೆ?

೯೭-೯೮. ಲೋಕಾಹ್ಲಾದಕರನಾದ ಚಂದ್ರನು ನಿತ್ಯವೂ ಚಂಡಾಲರ ಮನೆಗಳಲ್ಲಿಯೂ ತನ್ನ ಅಮೃತಕಿರಣಗಳನ್ನು ಬೀರುತ್ತಿರುವುದಿಲ್ಲವೆ? ಆದುದರಿಂದ ಮತ್ತೆ ಮತ್ತೆ ಯಾಚಿಸುತ್ತಿರುವ ಈ ಹೆಣ್ಣು ನಾಯಿಯನ್ನು ಕೆಸರಿನಲ್ಲಿ ಸಿಕ್ಕಿಕೊಂಡ ಹಸುವನ್ನು ಮೇಲಕ್ಕೆತ್ತುವಂತೆ ನನ್ನ ಪುಣ್ಯಕರ್ಮಗಳ ಬಲದಿಂದ ಉದ್ಧಾರಮಾಡುತ್ತೇನೆ.'' ಇಂತೆಂದು ಮಗನ ಮಾತುಗಳನ್ನು ತಿರಸ್ಕರಿಸಿ ಮಹಾಮತಿಯಾದ ಪದ್ಮಬಂಧುವು ಪ್ರತಿಜ್ಞೆಯನ್ನು ಮಾಡಿದನು.

೯೯. ''ಎಲೈ ನಾಯಿಯೆ! ನಾನು ದ್ವಾದಶೀದಿನದ ವ್ರತವನ್ನಾಚರಿಸಿದುದರಿಂದ ಸಂಪಾದಿಸಿರುವ ಮಹಾ ಪುಣ್ಯವೆಲ್ಲವನ್ನೂ ತ್ರಿಕರಣಶುದ್ಧಿಯಾಗಿ ನಿನಗೆ ದಾನಮಾಡಿರುವೆನು. ಅದರಿಂದ ನಿನ್ನ ಸಕಲ ಕಲ್ಮಷಗಳನ್ನೂ ಕಳೆದುಕೊಂಡು ಶ್ರೀಹರಿಯ ದಿವ್ಯಧಾಮವನ್ನು ಸೇರು.''

೧೦೦. ಎಲೈ ಮಹಾರಾಜನೆ! ಆ ಬ್ರಾಹ್ಮಣನು ಮಾತನಾಡಿದ ಉತ್ತರಕ್ಷಣದಲ್ಲಿಯೇ ಆ ನಾಯಿಯು ಜರ್ಝರಿತವಾದ ತನ್ನ ದೇಹವನ್ನು ತ್ಯಜಿಸಿ

ಶತಾಽದಿತ್ಯಪ್ರಭಾ ಜಾತಾ ಸಾವಿತ್ರೀಪ್ರತಿಮಾ ಯಥಾ ।
ಜಗಾಮಾಽಮಂತ್ರ್ಯ ತಂ ವಿಪ್ರಂ ದ್ಯೋತಯಂತೀ ದಿಶೋ ದಶ ॥ ೧೦೧ ॥
ಭುಕ್ತ್ವಾ ದಿವಿ ಮಹಾಭೋಗಾನ್ಸಶ್ಚಾಜ್ಜಾತಾ ಮಹೀತಲೇ ।
ನರನಾರಾಯಣಾದ್ದೇವಾದುರ್ವಶೀ ನಾಮ ನಾಮತಃ ॥ ೧೦೨ ॥
ವೈಶಾಖಶುದ್ಧದ್ವಾದಶ್ಯಾಃ ಪ್ರಭಾವೇಣ ವರಾಂಗನಾ ।
ದೇವಾನಾಂ ಚ ಪ್ರಿಯಾ ಜಾತಾ ಅಪ್ಸರಸ್ತ್ವಂ ಚ ಸಾ ಯಯೌ ॥೧೦೩॥

ಯದ್ಯೋಗಿಗಮ್ಯಂ ಹುತಭುಕ್ಪ್ರಕಾಶಂ
ವರಂ ವರೇಣ್ಯಂ ಪರಮಾರ್ಥರೂಪಂ ।
ಯತ್ಪ್ರಾಪ್ಯ ಸಂತೋಽಪಿ ಹಿ ಯಾಂತಿ ಮೋಹಂ
ತತ್ಪ್ರಾಪ ರೂಪಂ ಚ ಶುನೀ ಹಿ ದೇವೀ ॥ ೧೦೪ ॥

ಪಶ್ಚಾತ್ಸ ಪದ್ಮಬಂಧುರ್ಹಿ ತಾಂ ತಿಥಿಂ ಪುಣ್ಯವರ್ಧಿನೀಂ ।
ಲೋಕೇಟೀಂ ಖ್ಯಾಪಯಾಮಾಸ ಮಧುದ್ವಿಟ್ಪ್ರಾಣವಲ್ಲಭಾಂ ॥೧೦೫॥

---

ದಿವ್ಯಾಲಂಕಾರಭೂಷಿತೆಯಾಗಿ ದಿವ್ಯರೂಪದಿಂದ ಸರ್ವಾಂಗ ಸುಂದರಿಯಾದ ಸ್ತ್ರೀಯ ರೂಪವನ್ನು ಸ್ವೀಕರಿಸಿತು.

೧೦೧. ಆ ಸ್ತ್ರೀಯು ನೂರು ಸೂರ್ಯರ ಕಾಂತಿಯಿಂದ ಬೆಳಗುತ್ತ ಸಾವಿತ್ರಿಗೆ ಸಮಾನಳೆನಿಸಿ ಕಂಗೊಳಿಸುತ್ತಿದ್ದಳು. ಅವಳು ಆ ಬ್ರಾಹ್ಮಣೋತ್ತಮನಿಗೆ ನಮಸ್ಕರಿಸಿ ಆತನ ಅಪ್ಪಣೆಯನ್ನು ಪಡೆದು ದೇಹಕಾಂತಿಯಿಂದ ಹತ್ತು ದಿಕ್ಕುಗಳನ್ನೂ ಬೆಳಗಿಸುತ್ತ ಸ್ವರ್ಗಲೋಕಕ್ಕೆ ಹೊರಟುಹೋದಳು.

೧೦೨. ಬಹಳ ಕಾಲದವರೆವಿಗೂ ದೇವಲೋಕದಲ್ಲಿ ಮಹಾ ಭೋಗಗಳನ್ನನುಭವಿಸಿದ ಬಳಿಕ ಭೂಲೋಕದಲ್ಲಿ ನರನಾರಾಯಣರೂಪಿಯಾದ ಶ್ರೀಹರಿಗೆ ಊರ್ವಶಿಯೆಂಬ ನಾಮದಿಂದ ಪ್ರಖ್ಯಾತಳಾದ ಮಗಳಾಗಿ ಜನಿಸಿದಳು.

೧೦೩. ವೈಶಾಖಶುದ್ಧದ್ವಾದಶೀವ್ರತದ ಫಲದ ಪ್ರಭಾವದಿಂದ ಆ ಸ್ತ್ರೀರತ್ನವು ದೇವತೆಗಳ ಅತ್ಯಂತ ಪ್ರೀತಿಗೆ ಪಾತ್ರಳಾಗಿ ಅಪ್ಸರಸೆಯಾಗಿ ಸ್ವರ್ಗದಲ್ಲಿಯೇ ನಿಂತಳು.

೧೦೪. ಯಾವುದನ್ನು ನೋಡಲು ಸತ್ಪುರುಷರೂ ಕೂಡ ಮೋಹಗೊಳ್ಳುವರೊ, ಯಾವುದು ಯೋಗಿಗಳಿಗೆ ಮಾತ್ರ ಪ್ರಾಪ್ಯವಾಗಿ ಅಗ್ನಿಯಂತೆ ಪ್ರಕಾಶಿಸುತ್ತ ಸುಂದರವೂ ಸರ್ವೋತ್ತಮವೂ ಆದ ಪರಮಾರ್ಥರೂಪವೇ ಆಗಿರುವುದೊ, ಅಂತಹ ಸುಂದರರೂಪವನ್ನು ತಳೆದು ಹೆಣ್ಣುನಾಯಿಯು ದೇವತೆಯಾಗಿ ಮೆರೆಯುತ್ತಿದ್ದಳು.

೧೦೫. ಬಳಿಕ ಪದ್ಮಬಂಧುವೆಂಬ ಆ ಬ್ರಾಹ್ಮಣೋತ್ತಮನು ಸಕಲ ಪುಣ್ಯಗಳನ್ನೂ ಸಂಪಾದಿಸಿಕೊಡುವುದೂ ಮಧುಸೂದನನಿಗೆ ಪ್ರಾಣದಂತೆ ಪ್ರಿಯತಮ

ಕೋಟೀಂದುಸೂರ್ಯಗ್ರಹಣಾಧಿಕಾ ಸಾ
ಸಮಸ್ತರೂಪಾಧಿಕ ಪುಣ್ಯರೂಪಾ ।
ಯಜ್ಞೈ ಸಮಸ್ತೈರತಿರಿಚ್ಯಮಾನಾ
ದ್ವಿಜೇನ ಖ್ಯಾತಾ ಭುವನತ್ರಯೇ ಚ ॥ ೧೦೬ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ದ್ವಿತೀಯೇ ವೈಷ್ಣವಖಂಡೇ ವೈಶಾಖಮಾಸಮಾಹಾತ್ಮ್ಯೇ ನಾರದಾಂಬರೀಷಸಂವಾದೇ "ಶುನೀಮೋಕ್ಷಪ್ರಾಪ್ತಿವರ್ಣನಂ" ನಾಮ ಚತುರ್ವಿಂಶೋಽಧ್ಯಾಯಃ

ವಾಗಿರುವುದೂ ಆದ ಈ ದ್ವಾದಶೀ ತಿಥಿಯ ವ್ರತವನ್ನು ಲೋವೇಟಿಯೆಂಬ ಹೆಸರಿನಿಂದ ಭೂಮಂಡಲದಲ್ಲೆಲ್ಲ ವಿಸ್ತರಿಸುವಂತೆ ಮಾಡಿ ಶಾಶ್ವತವಾಗಿ ನಡೆಯುವಂತೆ ನೆಲೆಗೊಳಿಸಿದನು.

೧೦೬. ಮೂರು ಲೋಕಗಳಲ್ಲಿಯೂ ಆ ಬ್ರಾಹ್ಮಣನಿಂದ ಪ್ರಖ್ಯಾತವಾದ ದ್ವಾದಶೀವ್ರತವು ಒಂದುಕೋಟಿ ಸೂರ್ಯಚಂದ್ರರ ಗ್ರಹಣಾಚರಣೆಗಳಿಗಿಂತಲೂ ಅಧಿಕಫಲದಾಯಕವೂ, ಸಕಲ ವ್ರತಾದಿಗಳ ರೂಪಗಳಿಗಿಂತಲೂ ಅಧಿಕಪುಣ್ಯ ರೂಪವುಳ್ಳದ್ದೂ, ಸಕಲ ಯಜ್ಞಗಳನ್ನು ಮೀರಿದ ಮಹಿಮೆಯುಳ್ಳದ್ದೂ ಆಗಿರುವುದು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀ ಸ್ಕಾಂದಮಹಾಪುರಾಣದ ಎರಡನೆಯ ವೈಷ್ಣವಖಂಡದ ವೈಶಾಖಮಾಸಮಾಹಾತ್ಮ್ಯದ ನಾರದಾಂಬರೀಷಸಂವಾದದಲ್ಲಿ "ಶುನೀಮೋಕ್ಷಪ್ರಾಪ್ತಿ ವರ್ಣನ"ವೆಂಬ ಇಪ್ಪತ್ತನಾಲ್ಕನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥ ಪಂಚವಿಂಶೋಽಧ್ಯಾಯಃ

### ಫಲಶ್ರುತಿಕಥನಂ

ಶ್ರುತದೇವ ಉವಾಚ :—

ಯಾಸ್ತಿಸ್ರಸ್ತಿಥಯಃ ಪುಣ್ಯಾ ಅಂತಿಮಾ ಶುಕ್ಲಪಕ್ಷಕೇ ।
ವೈಶಾಖಮಾಸಿ ರಾಜೇಂದ್ರ ಪೂರ್ಣಿಮಾಂತಾಃ ಶುಭಾವಹಾಃ ॥ ೧ ॥
ಅಂತ್ಯಾ ಪುಷ್ಕರಿಣೀಸಂಜ್ಞಾಃ ಸರ್ವಪಾಪಕ್ಷಯಾವಹಾಃ ।
ಮಾಧವೇ ಮಾಸಿ ಯಃ ಪೂರ್ಣಂ ಸ್ನಾನಂ ಕರ್ತುಂ ನ ಚ ಕ್ಷಮಃ ॥ ೨ ॥
ತಿಥಿಷ್ವೇತಾಸು ಸಸ್ನಾಯಾತ್ ಪೂರ್ಣಮೇವ ಫಲಂ ಲಭೇತ್ ।
ಸರ್ವೇ ದೇವಾಸ್ತ್ರಯೋದಶ್ಯಾಂ ಸ್ಥಿತ್ವಾ ಜಂತೂನ್ ಪುನಂತಿ ಹಿ ॥ ೩ ॥
ಪೂರ್ಣಾಯಾಂ ಸರ್ವತೀರ್ಥೈಶ್ಚ ವಿಷ್ಣುನಾ ಸಹ ಸಂಸ್ಥಿತಾಃ ।
ಚತುರ್ದಶ್ಯಾಂ ಸಯಜ್ಞಾಶ್ಚ ದೇವಾ ಏತಾನ್ ಪುನಂತಿ ಹಿ ॥ ೪ ॥
ಬ್ರಹ್ಮಘ್ನಂ ವಾ ಸುರಾಪಂ ವಾ ಸರ್ವಾನೇತಾನ್ ಪುನಂತಿ ಹಿ ।
ಏಕಾದಶ್ಯಾಂ ಪುರಾ ಜಜ್ಞೇ ವೈಶಾಖ್ಯಾಮಮೃತಂ ಶುಭಂ ॥ ೫ ॥

## ಕನ್ನಡದ ಅನುವಾದ

### ಫಲಶ್ರುತಿಕಥನ

೧. ಶ್ರುತದೇವನು ಹೇಳುತ್ತಾನೆ:—ರಾಜೇಂದ್ರನೆ! ವೈಶಾಖಮಾಸದಲ್ಲಿ ಶುಕ್ಲಪಕ್ಷದ ಪೂರ್ಣಿಮಾಂತಗಳಾದ ಯಾವ ಮೂರು ತಿಥಿಗಳಿರುವುವೊ, ಅವುಗಳು ಪುಣ್ಯಗಳೂ ಶುಭಾವಹಗಳೂ ಆಗಿರುವುವು.

೨-೩. ಈ ಪಕ್ಷಾಂತ್ಯದ ಮೂರುತಿಥಿಗಳೂ ಪುಷ್ಕರಿಣೀ ನಾಮದಿಂದ ಪ್ರಸಿದ್ಧಗಳಾಗಿ ಸಕಲ ಪಾತಕಗಳನ್ನೂ ಕಳೆಯುವ ಮಹಿಮೆಯುಳ್ಳವುಗಳಾಗಿರುವುವು. ವೈಶಾಖಮಾಸದಲ್ಲಿ ಮುವ್ವತ್ತು ದಿವಸಗಳಲ್ಲಿಯೂ ಯಾವನು ಉಷಃಕಾಲದ ಸ್ನಾನವನ್ನು ಮಾಡಲು ಅಸಮರ್ಥನಾಗಿರುವನೊ, ಅವನು ಈ ತಿಥಿಗಳಲ್ಲಿಯಾದರೂ ಸ್ನಾನವನ್ನು ಮಾಡುವುದರಿಂದ ಪೂರ್ಣಮಾಸದ ಸ್ನಾನದ ಫಲವನ್ನು ಪಡೆಯುವನು. ತ್ರಯೋದಶಿಯ ದಿನ ಸಕಲ ದೇವತೆಗಳೂ ತೀರ್ಥದಲ್ಲಿ ಸನ್ನಿಹಿತರಾಗಿ ಪ್ರಾಣಿಗಳನ್ನು ಪವಿತ್ರಗೊಳಿಸುವರು.

೪. ಪೂರ್ಣಿಮಾ ತಿಥಿಯಲ್ಲಿ ಸರ್ವತೀರ್ಥಾಭಿಮಾನಿದೇವತೆಗಳೂ ಮಹಾವಿಷ್ಣುವಿನಿಂದಲೂ ಕೂಡಿರುವರು. ಚತುರ್ದಶಿಯ ದಿವಸ ಯಜ್ಞಸಹಿತರಾದ ದೇವತೆಗಳು ಜನರನ್ನು ಪುನೀತರನ್ನಾಗಿ ಮಾಡುವರು.

೫. ಬ್ರಹ್ಮಘಾತಕನು, ಸುರಾಪಾನರತನು ಮುಂತಾದ ಸಕಲ ಜಂತು

ದ್ವಾದಶ್ಯಾಂ ಫಲಿತಂ ತಚ್ಚ ವಿಷ್ಣುನಾ ಪ್ರಭವಿಷ್ಣುನಾ ।
ತ್ರಯೋದಶ್ಯಾಂ ಸುಧಾಂ ದೇವಾನ್‌ಪಾಯಯಾಮಾಸ ವೈ ಹರಿಃ ॥ ೬ ॥
ಜಘಾನ ಚ ಚತುರ್ದಶ್ಯಾಂ ದೈತ್ಯಾನ್ ದೇವವಿರೋಧಿನಃ ।
ಪೂರ್ಣಾಯಾಂ ಸರ್ವದೇವಾನಾಂ ಸಾಮ್ರಾಜ್ಯಾಽಪ್ತಿರ್ಬಭೂವ ಹ ॥೭॥
ತತೋ ದೇವಾಃ ಸುಸಂತ್ರುಷ್ಟಾ ಏತಾಸಾಂ ಚ ವರಂ ದದುಃ ।
ತಿಸೃಣಾಂ ಚ ತಿಥೀನಾಂ ವೈ ಪ್ರೀತ್ಯೋತ್ಫುಲ್ಲವಿಲೋಚನಾಃ ॥ ೮ ॥
ಏತಾ ವೈಶಾಖಮಾಸಸ್ಯ ತಿಸ್ರಶ್ಚ ತಿಥಯಃ ಶುಭಾಃ ।
ಪುತ್ರಪೌತ್ರಾದಿಫಲದಾ ನರಾಣಾಂ ಪಾಪಹಾನಿದಾಃ ॥ ೯ ॥
ಯೋಽಸ್ಮಿನ್ಮಾಸೇ ಚ ಸಂಪೂರ್ಣೇ ನ ಸ್ನಾತೋ ಮನುಜಾಧಮಃ ।
ತಿಥಿತ್ರಯೇ ತು ಸ ಸ್ನಾತ್ವಾ ಪೂರ್ಣಮೇವ ಫಲಂ ಲಭೇತ್ ॥ ೧೦ ॥
ತಿಥಿತ್ರಯೇಽಪ್ಯಕುರ್ವಾಣಃ ಸ್ನಾನಾದಾನಾದಿಕಂ ನರಃ ।
ಚಾಂಡಾಲೀಂ ಯೋನಿಮಾಸಾದ್ಯ ಪಶ್ಚಾದ್ರೌರವಮಶ್ನುತೇ ॥ ೧೧ ॥

---

ಗಳನ್ನೂ ದೇವತೆಗಳು ಆ ದಿವಸಗಳಲ್ಲಿ ಪವಿತ್ರರನ್ನಾಗಿ ಮಾಡುವರು. ಪೂರ್ವದಲ್ಲಿ ವೈಶಾಖಮಾಸದ ಶುಕ್ಲೈಕಾದಶಿಯ ದಿವಸವೇ ಕ್ಷೀರಸಾಗರದಿಂದ ಪವಿತ್ರವಾದ ಅಮೃತವು ಉದ್ಭವಿಸಿತು.

೬. ದ್ವಾದಶಿಯ ದಿನದಲ್ಲಿ ಲೋಕಕಲ್ಯಾಣಕರ್ತನಾದ ಮಹಾವಿಷ್ಣುವು ಅದನ್ನು ತನ್ನಲ್ಲಿಯೇ ಇಟ್ಟುಕೊಂಡು ರಕ್ಷಿಸಿದನು. ತ್ರಯೋದಶಿಯ ದಿನವೇ ಶ್ರೀ ಹರಿಯು ದೇವತೆಗಳಿಗೆಲ್ಲ ಅಮೃತಪ್ರಾಶನವನ್ನು ಮಾಡಿಸಿದನು.

೭. ಚತುರ್ದಶಿಯಲ್ಲಿ ದೇವತೆಗಳಿಗೆ ವಿರೋಧಿಗಳಾಗಿದ್ದ ರಾಕ್ಷಸರನ್ನೆಲ್ಲ ನಿಗ್ರಹಿಸಿದನು. ಹುಣ್ಣಿಮೆಯ ದಿವಸ ಸಕಲ ದೇವತೆಗಳಿಗೂ ಸ್ವರ್ಗಲೋಕದ ಆಧಿಪತ್ಯವು ದೊರಕಿತು.

೮. ಆದುದರಿಂದ ದೇವತೆಗಳೆಲ್ಲರೂ ಸಂತೋಷಗೊಂಡು ಪ್ರೀತಿಯಿಂದ ಅರಳಿದ ಕಣ್ಣುಗಳುಳ್ಳವರಾಗಿ ಈ ಮೂರು ತಿಥಿಗಳಿಗೂ ವರವನ್ನು ಕೊಡುವವರಾದರು.

೯. ವೈಶಾಖಮಾಸದ ಶುಕ್ಲತ್ರಯೋದಶಿ, ಚತುರ್ದಶಿ, ಪೌರ್ಣಮಿಗಳು ಶುಭ ತಿಥಿಗಳಾಗಿರುವುವು. ಮನುಷ್ಯರಿಗೆ ಪುತ್ರಪೌತ್ರ ಸಂತಾನವನ್ನೂ ಪಾತಕಗಳ ಹಾನಿಯನ್ನೂ ಸಂಪಾದಿಸಿ ಕೊಡುವುವು.

೧೦. ಯಾವ ಮನುಷ್ಯಾಧಮನು ಸಂಪೂರ್ಣ ಮಾಸದಲ್ಲಿ ಪ್ರಾತಃ ಸ್ನಾನವನ್ನು ಮಾಡುವುದಿಲ್ಲವೊ ಅವನು ಈ ಮೂರು ದಿವಸಗಳಲ್ಲಿಯಾದರೂ ಸ್ನಾನವನ್ನು ಮಾಡಲು ಸಾದ್ಯಂತ ಮಾಸಸ್ನಾನದ ಫಲವನ್ನೇ ಪಡೆಯುವನು.

೧೧. ಈ ಮೂರು ತಿಥಿಗಳಲ್ಲಿಯೂ ಸ್ನಾನದಾನಾದಿಗಳನ್ನು ಮಾಡದಿರುವ

ಉಷ್ಣೋದಕೇನ ಯಃ ಸ್ನಾತಿ ಮಾಧವೇ ಚ ತಿಥಿತ್ರಯೇ ।
ರೌರವಂ ನರಕಂ ಯಾತಿ ಯಾವದಿಂದ್ರಾಶ್ಚತುರ್ದಶ ॥ ೧೨ ॥
ಪಿತೄನ್ ದೇವಾನ್ ಸಮುದ್ದಿಶ್ಯ ದಧ್ಯನ್ನಂ ನ ದದಾತಿ ಯಃ ।
ಪೈಶಾಚೀಂ ಯೋನಿಮಾಸಾದ್ಯ ತಿಷ್ಠತ್ಯಾಭೂತಸಂಪ್ಲವಂ ॥ ೧೩ ॥
ಪ್ರವೃತ್ತಾನಾಂ ಚ ಕಾಮಾನಾಂ ಮಾಧವೇ ನಿಯತೇ ಕೃತೇ ।
ಅವಶ್ಯಂ ವಿಷ್ಣುಸಾಯುಜ್ಯಂ ಯುಜ್ಯತೇ ನಾತ್ರ ಸಂಶಯಃ ॥ ೧೪ ॥
ಆಮಾಸಂ ನಿಯಮಾಸಕ್ತಃ ಕುರ್ಯಾದ್ಯದಿ ದಿನತ್ರಯೇ ।
ತೇನ ಪೂರ್ಣಫಲಂ ಪ್ರಾಪ್ಯ ಮೋದತೇ ವಿಷ್ಣುಮಂದಿರೇ ॥ ೧೫ ॥
ಯೋ ವೈ ದೇವಾನ್ ಪಿತೄನ್ ವಿಷ್ಣುಂ ಗುರುಮುದ್ದಿಶ್ಯ ಮಾನವಃ ।
ನ ಸ್ನಾನಾದಿ ಕರೋತ್ಯದ್ಧಾಽಮುಷ್ಯ ಶಾಪಪ್ರದಾ ವಯಂ ॥ ೧೬ ॥
ನಿಃಸಂತಾನೋ ನಿರಾಯುಶ್ಚ ನಿಶ್ರೀಯಸ್ಕೋ ಭವೇದಿತಿ ।
ಇತಿ ದೇವಾ ವರಂ ದತ್ವಾ ಸ್ವಧಾಮಾನಿ ಯಯುಃ ಪುರಾ ॥ ೧೭ ॥

---

ಮನುಷ್ಯನು ಚಂಡಾಲ ಸ್ತ್ರೀಯ ಗರ್ಭದಲ್ಲಿ ಜನ್ಮವನ್ನು ಪಡೆದು ಬಳಿಕ ರೌರವ ನರಕಯಾತನೆಯನ್ನನುಭವಿಸುವನು.

೧೨. ವೈಶಾಖಮಾಸದ ಈ ಮೂರು ತಿಥಿಗಳಲ್ಲಿ ಯಾವ ಮನುಷ್ಯನು ಮನೆಯಲ್ಲಿ ಬಿಸಿನೀರಿನಲ್ಲಿ ಸ್ನಾನವನ್ನು ಮಾಡುವನೊ, ಅವನು ಹದಿನಾಲ್ಕು ಮಹೇಂದ್ರಕಲ್ಪಗಳವರೆಗೂ ರೌರವನರಕದಲ್ಲಿ ಬಿದ್ದಿರುವನು.

೧೩. ಈ ದಿವಸಗಳಲ್ಲಿ ಪಿತೃಗಳನ್ನೂ ದೇವತೆಗಳನ್ನೂ ಉದ್ದೇಶಿಸಿ ದಧ್ಯನ್ನವನ್ನು ದಾನಮಾಡದಿರುವ ಮನುಷ್ಯನು ಮಹಾ ಪ್ರಳಯವಾಗುವವರೆಗೂ ಪಿಶಾಚದ ಜನ್ಮವನ್ನು ಪಡೆದು ತಿರುಗುತ್ತಿರುವನು.

೧೪. ವೈಶಾಖ ಧರ್ಮಗಳನ್ನು ನಿಯಮದಿಂದಾಚರಿಸಲು ಸಕಲ ಇಷ್ಟಾರ್ಥಗಳೂ ಕೈಗೂಡುವುವು. ಮತ್ತು ವಿಷ್ಣುವಿನ ಸಾಯುಜ್ಯರೂಪವಾದ ಮೋಕ್ಷವು ಅವಶ್ಯಕವಾಗಿಯೂ ದೊರಕುವುದರಲ್ಲಿ ಸಂದೇಹವಿಲ್ಲ.

೧೫. ಮಾಸದ ಆದ್ಯಂತವೂ ನಿಯಮಗಳನ್ನು ಪಾಲಿಸಲು ಅಶಕ್ತನಾದವನು ಈ ಮೂರು ದಿನಗಳಲ್ಲಿ ಮಾತ್ರ ನಿಯಮಸಹಿತನಾಗಿದ್ದರೂ ಕೂಡ ಮಾಸಾಚರಣೆಯ ಸಂಪೂರ್ಣ ಫಲವನ್ನು ಹೊಂದಿ ವಿಷ್ಣುಲೋಕದಲ್ಲಿ ಆನಂದಗೊಳ್ಳುವನು.

೧೬. ಯಾವನು ದೇವತೆಗಳನ್ನೂ, ಪಿತೃಗಳನ್ನೂ, ಮಹಾವಿಷ್ಣುವನ್ನೂ, ಗುರುವನ್ನೂ ಉದ್ದೇಶಿಸಿ ಈ ಮಾಸದಲ್ಲಿ ಸ್ನಾನಾದಿ ಕಾರ್ಯಗಳನ್ನು ಮಾಡುವುದಿಲ್ಲವೊ, ಅವನಲ್ಲಿ ನಾವು ಶಾಪವನ್ನು ಕೊಡುವೆವು.

೧೭. ಅವನು ಸಂತಾನರಹಿತನೂ, ಅಲ್ಪಾಯುಷ್ಯವಂತನೂ, ಐಶ್ವರ್ಯ

ತಸ್ಮಾತ್ತಿಥಿತ್ರಯಂ ಪುಣ್ಯಂ ಸರ್ವಾಘೌಘವಿನಾಶನಂ ।
ಅಂತ್ಯಂ ಪುಷ್ಕರಿಣೀಸಂಜ್ಞಂ ಪುತ್ರಪೌತ್ರವಿವರ್ಧನಂ ॥ ೧೮ ॥
ಯಾ ನಾರೀ ಸುಭಗಾಽಪೂಪಪಾಯಸಂ ಪೂರ್ಣಿಮಾದಿನೇ ।
ಬ್ರಾಹ್ಮಣಾಯ ಸಕೃದ್ದದ್ಯಾತ್ಕೀರ್ತಿಮಂತಂ ಸುತಂ ಲಭೇತ್ ॥ ೧೯ ॥
ಗೀತಾಪಾಠಂ ತು ಯಃ ಕುರ್ಯಾದಂತಿಮೇ ಚ ದಿನತ್ರಯೇ ।
ದಿನೇ ದಿನೇಽಶ್ವಮೇಧಾನಾಂ ಫಲಮೇತಿ ನ ಸಂಶಯಃ ॥ ೨೦ ॥
ಸಹಸ್ರನಾಮಪಠನಂ ಯಃ ಕುರ್ಯಾಚ್ಚ ದಿನತ್ರಯೇ ।
ತಸ್ಯ ಪುಣ್ಯಫಲಂ ವಕ್ತುಂ ಕಃ ಶಕ್ತೋ ದಿವಿ ವಾ ಭುವಿ ॥ ೨೧ ॥
ಸಹಸ್ರನಾಮಭಿರ್ದೇವಂ ಪೂರ್ಣಾಯಾಂ ಮಧುಸೂದನಂ ।
ಪಯಸಾ ಸ್ನಾಪ್ಯ ವೈ ಯಾತಿ ವಿಷ್ಣುಲೋಕಮಕಲ್ಮಷಂ ॥ ೨೨ ॥

ರಹಿತನೂ ಆಗಿರುವಂತೆ ಶಪಿಸುವೆವು. ಇಂತೆಂದು ದೇವತೆಗಳು ಆ ಮೂರು ತಿಥಿಗಳ ವಿಷಯವಾಗಿ ವರವನ್ನು ಕೊಟ್ಟು ತಮ್ಮ ತಮ್ಮ ವಾಸಸ್ಥಾನಗಳಿಗೆ ಹೊರಟುಹೋದರು.

೧೮. ಆದದುರಿಂದ ಈ ಮೂರು ತಿಥಿಗಳ ಕಾಲವು ಪುಣ್ಯಪ್ರದವು. ಸಕಲ ಪಾತಕಸಮೂಹವನ್ನು ನಾಶಗೊಳಿಸುವುದೂ ಆಗಿರುವುದು. ಪುಷ್ಕರಿಣೀ ನಾಮಕವಾದ ಈ ಪಕ್ಷಾಂತ್ಯಕಾಲವು ಮಕ್ಕಳು, ಮೊಮ್ಮಕ್ಕಳೇ ಮೊದಲಾದ ಸಂತತಿಯನ್ನಭಿವೃದ್ಧಿಗೊಳಿಸುವುದು.

೧೯. ಸುಮಂಗಲಿಯಾದ ಯಾವ ಸ್ತ್ರೀಯಳು ಪೂರ್ಣಿಮಾ ತಿಥಿಯಲ್ಲಿ ಅಪೂಪ ಪಾಯಸಗಳನ್ನು ಬ್ರಾಹ್ಮಣನಿಗೆ ಒಮ್ಮೆಯಾದರೂ ದಾನಮಾಡುವಳೊ, ಅವಳು ಲೋಕವಿಖ್ಯಾತಿಯನ್ನು ಪಡೆಯುವ ಉತ್ತಮ ಪುತ್ರನನ್ನು ಪಡೆಯುವಳು.

೨೦. ಯಾವನು ಈ ಕೊನೆಯ ಮೂರು ದಿನಗಳಲ್ಲಿ ಭಗವದ್ಗೀತೆಯ ಪಾರಾಯಣವನ್ನು ಮಾಡುವನೊ, ಅವನು ಒಂದೊಂದು ದಿನದಲ್ಲಿಯೂ ಅನೇಕ ಅಶ್ವಮೇಧಯಜ್ಞಗಳನ್ನು ಮಾಡಿದ ಸುಕೃತನನ್ನು ಪಡೆಯುವುದರಲ್ಲಿ ಸಂದೇಹವಿಲ್ಲ.

೨೧. ಈ ದಿನತ್ರಯದಲ್ಲಿ ಯಾವನು ವಿಷ್ಣುಸಹಸ್ರನಾಮದ ಪಠನವನ್ನು ಶ್ರದ್ಧೆಯಿಂದ ಮಾಡುವನೊ, ಆತನು ಆರ್ಜಿಸಿದ ಅಪಾರವಾದ ಪುಣ್ಯಫಲವನ್ನು ಹೇಳಲು ಸ್ವರ್ಗದಲ್ಲಾಗಲಿ, ಭೂಲೋಕದಲ್ಲಾಗಲಿ ಯಾರು ತಾನೆ ಶಕ್ತರಿರುವರು ?

೨೨. ಪೂರ್ಣಿಮೆಯ ದಿನದಲ್ಲಿ ವಿಷ್ಣು ಸಹಸ್ರನಾಮಾವಳಿಯನ್ನು ಪಠಿಸುತ್ತ ದೇವದೇವನಾದ ಮಧುಸೂದನನಿಗೆ ನಾಮನಾಮಕ್ಕೂ ಕ್ಷೀರಾಭಿಷೇಕವನ್ನು

ಸಮಸ್ತವಿಭವೈರ್ಯಸ್ತು ಪೂಜಯೇನ್ಮಧುಸೂದನಂ ।
ನ ತಸ್ಯ ಲೋಕಾಃ ಕ್ಷೀಯಂತೇ ಯುಗಕಲ್ಪಾದಿವ್ಯತ್ಯಯೇ ॥ ೨೩ ॥
ಅಸ್ನಾತ್ವಾ ಚಾಪ್ಯದತ್ವಾ ಚ ವೈಶಾಖೋ ನಯತೇ ಯದಿ ।
ಸ ಬ್ರಹ್ಮಹಾ ಗುರುಘ್ನಶ್ಚ ಪಿತೄಣಾಂ ಘಾತಕಸ್ತಥಾ ॥ ೨೪ ॥
ಶ್ಲೋಕಾರ್ಧಂ ಶ್ಲೋಕಪಾದಂ ವಾ ನಿತ್ಯಂ ಭಾಗವತೋದ್ಭವಂ ।
ವೈಶಾಖೇ ಚ ಪಠನ್ ಮರ್ತ್ಯೋ ಬ್ರಹ್ಮತ್ವಂಚೋಪಪದ್ಯತೇ ॥ ೨೫ ॥
ಯೋ ವೈ ಭಾಗವತಂ ಶಾಸ್ತ್ರಂ ಶೃಣೋತ್ಯೇತದ್ದಿನತ್ರಯೇ ।
ನ ಪಾಪೈರ್ಲಿಪ್ಯತೇ ಕ್ವಾಪಿ ಪದ್ಮಪತ್ರಮಿವಾಂಭಸಾ ॥ ೨೬ ॥
ದೇವತ್ವಂ ಮನುಜೈಃ ಪ್ರಾಪ್ತಂ ಕೈಶ್ಚಿತ್ ಸಿದ್ಧತ್ವಮೇವ ಚ ।
ಕೈಶ್ಚಿತ್ಪ್ರಾಪ್ತೋ ಬ್ರಹ್ಮಭಾವೋ ದಿನತ್ರಯನಿಷೇವಣಾತ್ ॥ ೨೭ ॥
ಬ್ರಹ್ಮಜ್ಞಾನೇನ ವೈ ಮುಕ್ತಿಃ ಪ್ರಯಾಗಮರಣೇನ ವಾ ।
ಅಥವಾ ಮಾಸಿ ವೈಶಾಖೇ ನಿಯಮೇನ ಜಲಾಪ್ಲುತೇಃ ॥ ೨೮ ॥

---

ಮಾಡುವುದರಿಂದ ಮಾನವನು ನಿಷ್ಕಲ್ಮಷವಾದ ವಿಷ್ಣುಲೋಕವನ್ನು ಪಡೆಯುವನು.

೨೩. ಯಾವನು ತನ್ನ ಸಕಲೈಶ್ವರ್ಯಗಳಿಂದಲೂ ಈ ದಿವಸಗಳಲ್ಲಿ ಮಧುಸೂದನನ ಪೂಜೆಯನ್ನು ಮಾಡುವನೊ, ಅವನಿಗೆ ಯುಗಕಲ್ಪಾದಿಗಳ ಪರಿವರ್ತನೆಯಾದರೂ ಊರ್ಧ್ವಲೋಕಗಳ ಸೌಖ್ಯಗಳು ಕ್ಷಯವನ್ನು ಹೊಂದುವುದಿಲ್ಲವು.

೨೪. ಪ್ರಾತಃಸ್ನಾನಗಳನ್ನು ಮಾಡದೆ ದಾನಗಳನ್ನೂ ಕೊಡದೆ ಯಾವನು ವೈಶಾಖಮಾಸವನ್ನು ವ್ಯರ್ಥವಾಗಿಯೇ ಕಳೆಯುವನೊ, ಅವನೇ ಬ್ರಹ್ಮಘಾತಕನು; ಗುರುದ್ರೋಹಿಯು; ಪಿತೃಘಾತಕನೂ ಅವನೇ ಆಗಿರುವನು.

೨೫. ವೈಶಾಖಮಾಸದಲ್ಲಿ ಪ್ರತಿದಿನದಲ್ಲಿಯೂ ಶ್ಲೋಕಾರ್ಧವನ್ನಾಗಲಿ, ಶ್ಲೋಕದ ಪಾದವನ್ನಾದರೂ ಆಗಲಿ, ಶ್ರೀಮದ್ಭಾಗವತಗ್ರಂಥದಿಂದ ಪಾರಾಯಣ ಮಾಡುತ್ತಿರುವ ಮನುಷ್ಯನು ಬ್ರಹ್ಮಪದವಿಯನ್ನು ಹೊಂದುವನು.

೨೬. ಯಾವ ಮನುಷ್ಯನು ಈ ಮೂರು ದಿನಗಳಲ್ಲಿ ಸಮಗ್ರ ಭಾಗವತ ಶಾಸ್ತ್ರವನ್ನು ಶ್ರದ್ಧೆಯಿಂದ ಕೇಳುವನೊ, ಅವನು ಜಲಬಿಂದುಗಳನ್ನೊಳಕೊಂಡ ಪದ್ಮಪತ್ರದಂತೆ ಪಾಪಗಳ ಲೇಪವನ್ನು ಹೊಂದದಿರುವನು.

೨೭. ಈ ಮೂರು ದಿವಸಗಳ ಭಕ್ತಿಯುಕ್ತವಾದ ವ್ರತಾಚರಣೆಯಿಂದ ಅನೇಕ ಮನುಷ್ಯರು ದೇವತ್ವವನ್ನು ಹೊಂದಿರುವರು. ಕೆಲವರು ಸಿದ್ಧಪದವಿಯನ್ನು ಪಡೆದಿರುವರು. ಕೆಲವರು ಬ್ರಹ್ಮಭಾವವನ್ನೂ ಹೊಂದಿರುವರು.

೨೮. ಮನುಷ್ಯನಿಗೆ ಮೋಕ್ಷಮಾರ್ಗಗಳು ಮೂರೇ ಎಂದು ನಿರ್ಣಯಿಸಲ್ಪ

ನೀಲಂ ವೃಷಂ ಸಮುತ್ಸೃಜ್ಯ ವೈಶಾಖ್ಯಾಂ ಚ ಜಲಾಪ್ಲುತೇಃ ।
ಸಮಸ್ತಬಂಧನಿರ್ಮುಕ್ತಃ ಪುಮಾನ್ಯಾತಿ ಪರಂ ಪದಂ ॥ ೨೯ ॥
ಗಾಂ ಸವತ್ಸಾಂ ದ್ವಿಜೇಂದ್ರಾಯ ಸೀದತೇ ಚ ಕುಟುಂಬಿನೇ ।
ಇಹಾಪಮೃತ್ಯುನಿರ್ಮುಕ್ತಃ ಪರತ್ರ ಚ ಪರಂ ವ್ರಜೇತ್ ॥ ೩೦ ॥
ಸ್ನಾನದಾನವಿಹೀನಸ್ತು ವೈಶಾಖೀಂ ಚೈವ ಯೋ ನಯೇತ್ ।
ಶ್ವಾನಯೋನಿಶತಂ ಪ್ರಾಪ್ಯ ವಿಷ್ಠಾಯಾಂ ಜಾಯತೇ ಕ್ರಿಮಿಃ ॥ ೩೧ ॥
ತಿಸ್ರಃ ಕೋಟ್ಯೋಽರ್ಧಕೋಟಿಶ್ಚ ತೀರ್ಥಾನಿ ಭುವನತ್ರಯೇ ।
ಸಂಭೂಯ ಮಂತ್ರಯಾಂಚಕ್ರುಃ ಪಾಪಸಂಘಾತಶಂಕಿತಾಃ ॥ ೩೨ ॥
ಜನಾ ಅಸ್ಮಾಸು ಪಾಪಿಷ್ಠಾ ವಿಸೃಜಂತಿ ಸ್ವಕಂ ಮಲಂ ।
ತದಸ್ಮಾಕಂ ಕಥಂ ಗಚ್ಛೇದಿತಿ ಚಿಂತಾಸಮನ್ವಿತಾಃ ॥ ೩೩ ॥

ಟ್ಟಿರುವುವು. ಮೊದಲನೆಯದು ಬ್ರಹ್ಮಜ್ಞಾನವು. ಎರಡನೆಯದು ಪ್ರಯಾಗದಲ್ಲಿ ದೇಹತ್ಯಾಗವು. ಮೂರನೆಯದೇ ಸುಲಭತರವಾದ ವೈಶಾಖಮಾಸದಲ್ಲಿ ನಿಯಮಸಹಿತವಾಗಿ ತೀರ್ಥೋದಕಗಳಲ್ಲಿ ಸ್ನಾನವನ್ನುಮಾಡುವುದು.

೨೯. ನೀಲವರ್ಣದ ಕರುವಿನ ವೃಷೋತ್ಸರ್ಗದಿಂದಲೂ ವೈಶಾಖಮಾಸದ ಶೀತೋದಕ ಸ್ನಾನಗಳಿಂದಲೂ, ಮನುಷ್ಯನು ಸಕಲಕರ್ಮಬಂಧಗಳನ್ನೂ ಕಳೆದುಕೊಂಡು ಪರಮಪದವಾದ ವೈಕುಂಠವನ್ನು ಹೊಂದುವನು.

೩೦. ಈ ಮಾಸದಲ್ಲಿ ದರಿದ್ರನೂ ಗೃಹಸ್ಥಾಶ್ರಮಿಯೂ ಆದ ಬ್ರಾಹ್ಮಣೋತ್ತಮನಿಗೆ ಕರುವಿನಿಂದ ಕೂಡಿದ ಕರೆಯುವ ಆಕಳನ್ನು ದಾನಮಾಡಿದ ಮಾನವನು ಇಲ್ಲಿ ಅಪಮೃತ್ಯುವಿನ ಭಯವಿಲ್ಲದವನಾಗಿ ಪರಲೋಕದಲ್ಲಿಯೂ ಉತ್ತಮಗತಿಯನ್ನು ಪಡೆಯುವನು.

೩೧. ಸ್ನಾನವನ್ನಾಗಲಿ, ದಾನವನ್ನಾಗಲಿ ಮಾಡದೆ ಯಾವನು ವೈಶಾಖಮಾಸವನ್ನು ನಿರರ್ಥಕವಾಗಿ ಕಳೆಯುವನೊ, ಅವನು ಒಂದು ನೂರು ಸಲ ನಾಯಿಯ ಜನ್ಮವನ್ನು ಪಡೆದು ಬಳಿಕ ಅಮೇಧ್ಯದಲ್ಲಿ ಕ್ರಿಮಿಯಾಗಿ ಜನಿಸಿ ಕ್ಲೇಶಪಡುವನು.

೩೨. ಭೂಮಂಡಲದಲ್ಲಿ ಮೂರುವರೆ ಕೋಟಿ ತೀರ್ಥಗಳು ಎಲ್ಲೆಲ್ಲಿಯೂ ನೆಲಸಿರುವುವು. ಒಮ್ಮೆ ಅವುಗಳೆಲ್ಲವೂ ಒಂದೆಡೆಯಲ್ಲಿ ಗುಂಪುಗೂಡಿಕೊಂಡು ತಮ್ಮಲ್ಲಿ ನಿತ್ಯವೂ ಶೇಖರಿಸುತ್ತಿರುವ ಪಾಪಸಮೂಹಗಳ ದೆಸೆಯಿಂದ ಭಯಗೊಂಡು ಮಂತ್ರಾಲೋಚನೆಯನ್ನು ನಡೆಸಿದುವು.

೩೩. ಪಾಪಿಗಳಾದ ಜನರೆಲ್ಲರೂ ತಮ್ಮ ಕಲ್ಮಷವನ್ನು ನಮ್ಮಲ್ಲಿ ತ್ಯಜಿಸಿ ಪವಿತ್ರರಾಗಿ ಹೊರಟುಹೋಗುವರು. ಇಂತು ನಮ್ಮಲ್ಲಿ ಸಂಗ್ರಹವಾಗುತ್ತಿರುವ

ತೀರ್ಥಪಾದಂ ಹರಿಂ ಜಗ್ಮುಃ ಶರಣ್ಯಂ ಶರಣಂ ವಿಭುಂ ।
ಸ್ತುತ್ವಾ ತು ಬಹುಭಿಸ್ತೋತ್ರೈಃ ಪ್ರಾರ್ಥಯಾಮಾಸುರಂಜಸಾ ॥ ೩೪ ॥
ದೇವದೇವ ಜಗನ್ನಾಥ ಸರ್ವಾಘೌಘವಿನಾಶನ ।
ಜನಾ ಅಸ್ಮಾಸು ಪಾಪಿಷ್ಠಾಃ ಸ್ನಾತ್ವಾ ಪಾಪಾನಿ ಸರ್ವಶಃ ॥ ೩೫ ॥
ವಿಸೃಜ್ಯ ತ್ವತ್ಪದಂ ಯಾಂತಿ ತ್ವದಾಜ್ಞಾಧಾರಿಣೋ ಭುವಿ ।
ಅಸ್ಮಾಕಂ ಚೈವ ತತ್ಪಾಪಂ ಕಥಂ ಗಚ್ಛೇಜ್ಜನಾರ್ದನ ।
ತದುಪಾಯಂ ವದಾಸ್ಮಾಕಂ ತ್ವತ್ಪಾದಶರಣೈಷಿಣಾಂ ॥ ೩೬ ॥
ಇತಿ ತೀರ್ಥೈಃ ಪ್ರಾರ್ಥಿತಸ್ತು ಭಗವಾನ್ ಭೂತಭಾವನಃ ।
ಪ್ರಹಸನ್ ಪ್ರಾಹ ತೀರ್ಥಾನಿ ಮೇಘಗಂಭೀರಯಾ ಗಿರಾ ॥ ೩೭ ॥

ಶ್ರೀ ಭಗವಾನುವಾಚ :—

ಸಿತೇ ಪಕ್ಷೇ ಮೇಷಸೂರ್ಯೇ ವೈಶಾಖಾಂತೇ ದಿನತ್ರಯೇ ।
ಸರ್ವತೀರ್ಥಮಯೇ ಪುಣ್ಯೇ ಮಮಾಪಿ ಪ್ರಾಣವಲ್ಲಭೇ ॥ ೩೮ ॥

---

ಪಾಪರಾಶಿಯು ಹೇಗೆ ನಾಶವಾಗುವುದು? ಇಂತೆಂಬ ಚಿಂತೆಯಿಂದ ಕೂಡಿದವುಗಳಾಗಿದ್ದುವು.

೩೪. ಸಕಲ ತೀರ್ಥಗಳಲ್ಲಿ ಉತ್ತಮವಾದ ಗಂಗೆಯನ್ನೇ ಪಾದದಲ್ಲಿ ತಳೆದ ಶ್ರೀಹರಿಯೇ ಶರಣಾಗತರಕ್ಷಕನೂ ಸರ್ವೇಶ್ವರನೂ ಆಗಿರುವನೆಂಬುದನ್ನು ತಿಳಿದು ಅವನ ಬಳಿಗೈದಿ ಬಹುವಿಧಸ್ತೋತ್ರಗಳಿಂದ ಆತನನ್ನು ಹೊಗಳಿ ಪ್ರಾರ್ಥನೆಯನ್ನು ಮಾಡತೊಡಗಿದವು.

೩೫-೩೬. "ದೇವೇಶ್ವರನೆ! ಜಗನ್ನಾಥನೆ! ಸಕಲಪಾತಕಕೋಟಿಗಳನ್ನು ನಿವಾರಿಸುವವನೆ! ಭೂಲೋಕದ ಪಾಪಿಗಳಾದ ಜನರೆಲ್ಲರೂ ನಮ್ಮಲ್ಲಿ ಸ್ನಾನವನ್ನು ಮಾಡಿ ತಮ್ಮ ಸಮಸ್ತ ಪಾತಕಗಳನ್ನೂ ನಮ್ಮಲ್ಲಿ ಬಿಟ್ಟು ಪುನೀತರಾಗಿ ನಿನ್ನ ನಿವಾಸವನ್ನು ಪಡೆಯುತ್ತಿರುವರು. ನಾವಾದರೊ ನಿನ್ನ ಅಪ್ಪಣೆಯನ್ನು ಶಿರಸಾವಹಿಸಿ ಭೂಲೋಕದಲ್ಲಿಯೇ ವಾಸಮಾಡುತ್ತಿರುವೆವು, ಜನಾರ್ದನನೆ! ನಮ್ಮಲ್ಲಿ ನಿತ್ಯವೂ ಕೂಡುತ್ತಿರುವ ಈ ಪಾತಕರಾಶಿಯು ಹೇಗೆ ಪರಿಹರಿಸಲ್ಪಡುವುದು? ನಿನ್ನ ಪಾದಗಳನ್ನೇ ಶರಣಾಗತಿಸ್ಥಾನವೆಂದು ನಂಬಿ ಬಂದಿರುವ ನಮಗೆ ಪಾಪಗಳನ್ನು ಕಳೆದುಕೊಳ್ಳುವ ಉಪಾಯವನ್ನು ಹೇಳು."

೩೭. ಇಂತು ತೀರ್ಥಾಭಿಮಾನಿದೇವತೆಗಳಿಂದ ಪ್ರಾರ್ಥಿಸಲ್ಪಟ್ಟವನಾಗಿ ಇಚ್ಛಾಮಾತ್ರದಿಂದಲೇ ಲೋಕಸೃಷ್ಟಿಯನ್ನು ಮಾಡಲು ಶಕ್ತನಾದ ಭಗವಂತನು ನಗುತ್ತ ಮೇಘಗರ್ಜನೆಯಂತೆ ಗಂಭೀರವಾದ ವಾಣಿಯಿಂದ ತೀರ್ಥಗಳನ್ನು ಕುರಿತು ಹೇಳತೊಡಗಿದನು :—

೩೮. ಭಗವಂತನು ಹೇಳುತ್ತಾನೆ :—"ಸೂರ್ಯನು ಮೇಷರಾಶಿ

ಸೂರ್ಯಂ ಭಗೋದಯಾತ್ಪೂರ್ವಂ ಬಹಿಃಸಂಸ್ಥಜಲಾಪ್ಲುತಾಃ ।
ನಿರ್ಮುಕ್ತೌಘಾಃ ಪುಣ್ಯರೂಪಾ ಭವಂತ್ವಾಶು ಸುನಿರ್ಮಲಾಃ ॥ ೩೯ ॥
ಭವದ್ಭಿಶ್ಚ ವಿಮುಕ್ತಾಘೈರ್ಯೈರ್ನ ಸ್ನಾತಾ ದಿನತ್ರಯೇ ।
ತೇಷು ತಿಷ್ಠತು ತತ್ಪಾಪಂ ಜನ್ಯೈರ್ಯುಷ್ಮದ್ವಿರೇಚಿತಂ ॥ ೪೦ ॥
ಇತಿ ತೀರ್ಥಪದೋ ವಿಷ್ಣುಸ್ತೀರ್ಥಾನಾಂ ಚ ವರಂ ದದೌ ।
ಅನುಜ್ಞಾಪ್ಯ ಚ ತಾನ್ಯೋಗಾತ್ತತ್ರೈವಾಂತರಧೀಯತ ॥ ೪೧ ॥
ಸ್ವಧಾಮಾನಿ ಪುನಃ ಪ್ರಾಪ್ಯ ತಾನಿ ತೀರ್ಥಾನಿ ನಿತ್ಯಶಃ ॥ ೪೨ ॥
ಪ್ರತಿವರ್ಷಂ ತು ವೈಶಾಖೇ ತಥೈವಾಂತ್ಯದಿನತ್ರಯೇ ।
ತೇನಾಘೌಘಂ ವಿಮುಚ್ಯೈವ ಯಾಂತಿ ನಿರ್ಮಲತಾಮಹೋ ॥ ೪೩ ॥
ಯೇ ತು ಸ್ನಾನಂ ನ ಕುರ್ವಂತಿ ವೈಶಾಖಾಂತದಿನತ್ರಯೇ ।
ತೇ ಭವಂತು ಸಮುಸ್ತಾನಾಂ ಜನಾನಾಂ ಪಾತಕಾಶ್ರಯಾಃ ॥ ೪೪ ॥

ಯಲ್ಲಿರಲು ವೈಶಾಖಮಾಸದ ಶುಕ್ಲಪಕ್ಷದ ಕೊನೆಯ ಮೂರು ದಿನಗಳ ಅವಕಾಶವು ಸಕಲ ತೀರ್ಥಗಳಿಂದ ಕೂಡಿದುದೂ, ಪರಮಪಾವನವೂ, ನನಗೂ ಸಹ ಪ್ರಾಣಕ್ಕಿಂತಲೂ ಪ್ರಿಯತಮವೂ ಆಗಿರುವುದು.

೩೯. ಆ ಮೂರು ದಿವಸಗಳಲ್ಲಿ ನೀವು ಸೂರ್ಯೋದಯಕ್ಕೆ ಮೊದಲೇ ಹೊರಗಿರುವ ಜಲಾಶಯಗಳಲ್ಲಿ ಸ್ನಾನಗಳನ್ನು ಮಾಡಬೇಕು. ಅದರಿಂದ ಕ್ಷಣಮಾತ್ರದಲ್ಲಿಯೇ ಪಾಪರಹಿತರೂ, ಪುಣ್ಯರೂಪರೂ, ಪರಿಶುದ್ಧಗಾತ್ರರೂ ಆಗುವಿರಿ.

೪೦. ಯಾರು ಆ ಮೂರು ದಿನಗಳಲ್ಲಿ ಇಂತು ಸ್ನಾನಮಾಡುವುದಿಲ್ಲವೊ, ಅವರಲ್ಲಿ ನಿಷ್ಪಾಪರಾದ ನೀವೆಲ್ಲರೂ ಹೊರಗೆಡಹಿದ ಪಾಪರಾಶಿಯು ಸ್ಥಿರವಾಗಿ ನಿಲ್ಲಲಿ."

೪೧. ಇಂತೆಂದು ತೀರ್ಥಪಾದನಾದ ಮಹಾವಿಷ್ಣುವು ಎಲ್ಲ ತೀರ್ಥಗಳಿಗೂ ವರವನ್ನು ಕೊಟ್ಟನು. ಅವರೆಲ್ಲರನ್ನೂ ಬೀಳ್ಕೊಟ್ಟು ಯೋಗಶಕ್ತಿಯ ಸಹಾಯದಿಂದ ಅವರು ನೋಡುತ್ತಿರುವಂತೆಯೇ ಕಣ್ಮರೆಯಾದನು.

೪೨–೪೩. ಬಳಿಕ ಆ ತೀರ್ಥಗಳೆಲ್ಲವೂ ತಮ್ಮ ತಮ್ಮ ಸ್ಥಳಗಳನ್ನು ಸೇರಿ ಅಂದು ಮೊದಲುಗೊಂಡು ಪ್ರತಿ ಸಂವತ್ಸರದಲ್ಲಿಯೂ ವೈಶಾಖ ಶುಕ್ಲಪಕ್ಷಾಂತ್ಯದ ಮೂರು ದಿವಸಗಳ ಅವಧಿಯಲ್ಲಿ ಬಹಿಃಸ್ನಾನಗಳನ್ನು ಮಾಡಿ ಅದರಿಂದ ತಮ್ಮ ಪಾಪರಾಶಿಗಳೆಲ್ಲವನ್ನೂ ಕಳೆದುಕೊಂಡು ನಿರ್ಮಲತ್ವವನ್ನು ಪಡೆಯುತ್ತಿರುವುವು.

೪೪. ವೈಶಾಖಮಾಸದ ಈ ಮೂರು ದಿವಸಗಳಲ್ಲಿ ಹೊರಗಿನ ಜಲಾಶಯ

ಇತಿ ಶಾಪಂ ಚ ತೀರ್ಥಾನಿ ಹ್ಯಸ್ನಾತಾನಾಂ ವದಂತಿ ಚ ।
ನ ತೇನ ಸದೃಶಃ ಪಾಪೋ ಯೋ ನ ಸ್ನಾತೋ ದಿನತ್ರಯೇ ॥ ೪೫ ॥
ವಿಚಾರಿತೇಷು ಶಾಸ್ತ್ರೇಷು ನ ದೃಷ್ಟೋ ನ ಚ ವೈ ಶ್ರುತಃ ।
ತಸ್ಮಾದ್ದಿನತ್ರಯೇ ಕಾರ್ಯಂ ಸ್ನಾನದಾನಾರ್ಚನಾದಿಕಂ ॥ ೪೬ ॥
ಅನ್ಯಥಾ ನರಕಂ ಯಾತಿ ಯಾವದಿಂದ್ರಾಶ್ಚತುರ್ದಶ ।
ಇತ್ಯೇತತ್ಸರ್ವಮಾಖ್ಯಾತಂ ಶ್ರುತಕೀರ್ತೇ ಮಹಾಮತೇ ॥ ೪೭ ॥
ದೃಷ್ಟಂ ವೈಶಾಖಮಾಹಾತ್ಮ್ಯಂ ಯಥಾದೃಷ್ಟಂ ಯಥಾಶ್ರುತಂ ।
ಮಾಹಾತ್ಮ್ಯಸ್ಯ ಚ ಲೇಶೋಽಯಂ ಮಾಧವಸ್ಯ ಚ ವರ್ಣಿತಃ ॥ ೪೮ ॥
ಕಾತ್ಸ್ನ್ಯೇರ್ನ ವಕ್ತುಂ ಚ ಬ್ರಹ್ಮಾಪಿ ನಾಽಲಂ ವರ್ಷಶತೈರಪಿ ।
ಪುರಾ ಕೈಲಾಸಶಿಖರೇ ಪಾರ್ವತ್ಯೈ ಶಂಕರಃ ಸ್ವಯಂ ॥ ೪೯ ॥
ಆಹ ಮಾಧವಮಾಹಾತ್ಮ್ಯಂ ಪೃಚ್ಛತ್ಯೈ ಶತವತ್ಸರಂ ।
ತಥಾಪಿ ನಾಂತಮುಮದಶಕ್ತೋ ವಿರರಾಮ ಸಃ ॥ ೫೦ ॥

---

ಗಳಲ್ಲಿ ಯಾರು ಸ್ನಾನವನ್ನು ಮಾಡುವುದಿಲ್ಲವೊ, ಅವರು ಸಮಸ್ತ ಜನರ ಪಾತಕಗಳಿಗೂ ಆಶ್ರಯಭೂತರಾಗಲಿ.

೪೫. ಇಂತೆಂದು ತೀರ್ಥಾಭಿಮಾನಿದೇವತೆಗಳು ಸ್ನಾನಮಾಡದವರ ವಿಷಯದಲ್ಲಿ ಶಾಪವನ್ನು ಕೊಡುತ್ತಿರುವರು. ಆದುದರಿಂದ ಈ ಮೂರು ದಿನಗಳಲ್ಲಿ ಸ್ನಾನವನ್ನು ಮಾಡದಿರುವ ಮನುಷ್ಯನಿಗೆ ಸಮಾನವಾದ ಪಾಪಿಯು ಬೇರೊಬ್ಬನಿಲ್ಲ.

೪೬. ಸಕಲಶಾಸ್ತ್ರಗಳನ್ನು ವಿಚಾರಿಸಿ ನೋಡಿದರೂ ಅಂತಹ ಪಾತಕಿಯು ಎಲ್ಲಿಯೂ ಕಾಣಲಿಲ್ಲ ಅಥವ ಕೇಳಲಿಲ್ಲ; ಆದುದರಿಂದ ಆ ದಿನತ್ರಯದಲ್ಲಿ ವಿಶೇಷವಾಗಿ ಸ್ನಾನ, ದಾನ, ದೇವತಾರ್ಚನೆಗಳನ್ನು ಮಾಡಬೇಕು.

೪೭. ಇಲ್ಲದಿದ್ದರೆ ಹದಿನಾಲ್ಕು ಇಂದ್ರರು ಕಳೆಯುವವರೆಗೂ ಮನುಷ್ಯನು ನರಕಭಾಜನನಾಗುವನು. ಮಹಾ ಪ್ರಾಜ್ಞನಾದ ಶ್ರುತಕೀರ್ತಿ ಮಹಾರಾಜನೆ! ಇಂತು ನಿನಗೆ ಸಕಲ ವೃತ್ತಾಂತವನ್ನೂ ವಿವರಿಸಿರುವೆನು.

೪೮. ನೀನು ಕೇಳಿದ ವೈಶಾಖಮಾಸದ ಮಾಹಾತ್ಮ್ಯೆಯನ್ನು ನಾನು ಹಿಂದೆ ಕೇಳಿ ನೋಡಿರುವಂತೆ ನಿಸ್ಸಂಕೋಚವಾಗಿ ತಿಳಿಸಿರುವೆನು. ಮತ್ತು ಆ ಮಾಸದಲ್ಲಿ ಮಾಡಬೇಕಾದ ನಿಯಮಾವಳಿಯೂ ನಿನಗೆ ವರ್ಣಿತವಾಗಿರುವುದು.

೪೯–೫೦. ಇದೆಲ್ಲವನ್ನೂ ಸಮಗ್ರವಾಗಿ ವರ್ಣಿಸಿ ಹೇಳಲು ಬ್ರಹ್ಮದೇವನಿಗೂ ಸಹ ನೂರಾರು ವರ್ಷಗಳಲ್ಲಿಯೂ ಸಾಧ್ಯವಾಗಲಾರದು. ಪೂರ್ವದಲ್ಲಿ ಕೈಲಾಸಪರ್ವತದ ಶಿಖರದಲ್ಲಿ ಕುಳಿತಿದ್ದ ಮಹೇಶ್ವರನು ಈ ವೈಶಾಖ

ಕೋ ಹಿ ವರ್ಣಯಿತುಂ ಶಕ್ತಃ ಕಾರ್ತ್ಸ್ನ್ಯೇನ್ಮಾಹಾತ್ಮ್ಯಮುತ್ತಮಂ ।
ವಿನಾ ವಿಷ್ಣುಂ ಜಗನ್ನಾಥಂ ನಾರಾಯಣಮನಾಮಯಂ ॥ ೫೧ ॥
ಪುರಾ ಸರ್ವೇಽಪಿ ಋಷಯೋ ಮಾಹಾತ್ಮ್ಯಂ ಪಾಪನಾಶನಂ ।
ಲೇಶಸ್ಯ ಲೇಶಂ ವ್ಯಾಚಖ್ಯುರ್ಜನಾನಾಂ ಹಿತಕಾಮ್ಯಯಾ ॥ ೫೨ ॥
ನಾಂತಃ ಕೇನಾಪಿ ವ್ಯಾಖ್ಯಾತೋ ಹ್ಯಶಕ್ತತ್ವಾನ್ಮಹೀಪತೇ ।
ತ್ವಂ ಚ ಮಾಸೇ ತು ವೈಶಾಖೇ ಕುರು ದಾನಾದಿಸತ್ಕ್ರಿಯಾಃ ॥ ೫೩ ॥
ತೇನ ಭುಕ್ತಿಂ ಚ ಮುಕ್ತಿಂ ಚ ಸಂಪ್ರಾಪ್ಸ್ಯೇಽಸಿ ನ ಸಂಶಯಃ ।
ಇತಿ ತಾಂ ಬೋಧಯಿತ್ವಾ ಚ ಮೈಥಿಲಂ ಜನಕಾಹ್ವಯಂ ॥ ೫೪ ॥
ಶ್ರುತದೇವಸ್ತಮಾಮಂತ್ರ್ಯ ಗಂತುಂ ಚಕ್ರೇ ಮನಸ್ತತಃ ।
ಜಾತಾಹ್ಲಾದಃ ಸ ರಾಜರ್ಷಿರ್ಗಲದ್ಬಾಷ್ಪಾಕುಲೇಕ್ಷಣಃ ॥ ೫೫ ॥

ಮಾಹಾತ್ಮ್ಯವನ್ನು ಕುರಿತು ಪ್ರಶ್ನೆಮಾಡಿದ ಪಾರ್ವತೀದೇವಿಗೆ ತಾನೇ ಒಂದು ನೂರು ವರ್ಷಗಳವರೆಗೂ ವಿವರಿಸಿದನು. ಹಾಗಾದರೂ ಪೂರ್ಣಗೊಳಿಸಲಾಗದೆ ಅಶಕ್ತನಾಗಿ ಮೌನವನ್ನು ತಾಳಿದನು.

೫೧. ಜಗದ್ವ್ಯಾಪಕನೂ, ಲೋಕೇಶ್ವರನೂ, ವಿಕಾರರಹಿತನೂ ಆದ ನಾರಾಯಣನೊಬ್ಬನನ್ನುಳಿದರೆ ಉತ್ತಮವಾದ ಈ ಮಾಹಾತ್ಮ್ಯವನ್ನು ಸಂಪೂರ್ಣವಾಗಿ ವರ್ಣಿಸಲು ಯಾವನು ತಾನೆ ಸಮರ್ಥನಾಗುವನು?

೫೨. ಪೂರ್ವದಲ್ಲಿ ಸಕಲಮಹರ್ಷಿಗಳೂ ಕೂಡಿ ಜನಗಳಿಗೆಲ್ಲ ಹಿತವನ್ನುಂಟುಮಾಡುವ ಉದ್ದೇಶದಿಂದ ಸಕಲ ಪಾಪಗಳನ್ನು ನೀಗಿಸುವ ಈ ಮಾಹಾತ್ಮ್ಯದ ಒಂದಂಶದಲ್ಲಿ ಸೂಕ್ಷ್ಮಾಂಶವನ್ನು ಪ್ರಸಿದ್ಧಗೊಳಿಸಿರುವರು.

೫೩. ಎಲೈ ಮಹಾರಾಜನೆ! ಎಲ್ಲರೂ ಅಶಕ್ತರಾದುದರಿಂದ ಇದರ ಅಂತವನ್ನು ಯಾರೂ ವ್ಯಾಖ್ಯಾನಮಾಡಲಾಗಲಿಲ್ಲವು. ನೀನು ಮಾತ್ರ ಉತ್ತಮವಾದ ಈ ವೈಶಾಖಮಾಸದಲ್ಲಿ ಸ್ನಾನದಾನಾದಿ ಸತ್ಕಾರ್ಯಗಳನ್ನು ಶ್ರದ್ಧೆಯಿಂದ ನಡೆಸುವವನಾಗು.

೫೪–೫೫. ಅದರಿಂದ ಇಹದಲ್ಲಿ ಭುಕ್ತಿಯನ್ನೂ, ಪರದಲ್ಲಿ ಮುಕ್ತಿಯನ್ನೂ ಹೊಂದುವೆಯೆಂಬುದರಲ್ಲಿ ಸಂದೇಹವಿಲ್ಲ. ಇಂತೆಂದು ಶ್ರುತಕೀರ್ತಿರಾಜನಿಗೆ ಜ್ಞಾನೋಪದೇಶವನ್ನು ಮಾಡಿ ಶ್ರುತಕೀರ್ತಿ ಬ್ರಾಹ್ಮಣನು ಆತನ ಅನುಜ್ಞೆಯನ್ನು ಪಡೆದು ಹೊರಟುಹೋಗಲು ಮನಸ್ಸನ್ನು ಮಾಡಿದನು. ಇಂತೆಂದ ಬ್ರಾಹ್ಮಣನ ಮಾತುಗಳನ್ನು ಕೇಳಿ ಜನಕನೆಂಬ ಹೆಸರಿನ ಆ ರಾಜರ್ಷಿಯು ಅತ್ಯಂತ ಸಂತೋಷಗೊಂಡವನಾಗಿ ತೊಟ್ಟಿಕ್ಕುತ್ತಿರುವ ಆನಂದಬಾಷ್ಪಗಳಿಂದ ತುಂಬಿದ ಕಣ್ಣುಗಳುಳ್ಳವನಾಗಿದ್ದನು.

ಉತ್ಸವಂ ಕಾರಯಾಮಾಸ ಸ್ವಾಭಿವೃದ್ಧ್ಯೈ ಮನೋರಮಂ ।
ಗ್ರಾಮಂ ಪ್ರದಕ್ಷಿಣೀಕೃತ್ಯ ಶಿಬಿಕಾಮಧಿರೋಪ್ಯ ತಂ ॥ ೫೬ ॥
ಚತುರಂಗಬಲೈರ್ಯುಕ್ತಃ ಸ್ವಯಂ ಪೃಷ್ಠಮಥಾನ್ವಗಾತ್ ।
ಪುನಶ್ಚಾಂತಃಪುರಂ ಪ್ರಾಪ್ಯ ಸಕಲೈರ್ವಿಭವೈರಪಿ ॥ ೫೭ ॥
ವಸ್ತ್ರೈರಾಭರಣೈಶ್ಚೈವ ಗೋಭೂತಿಲಹಿರಣ್ಯಕೈಃ ।
ಪ್ರಣಮ್ಯ ಚ ಪರಿಕ್ರಮ್ಯ ತಸ್ಥೌ ಪ್ರಾಂಜಲಿರಗ್ರತಃ ॥ ೫೮ ॥
ತತಃ ಸ ತು ಮಹಾತೇಜಾಃ ಶ್ರುತದೇವೋ ಮಹಾಯಶಾಃ ।
ಸಂತುಷ್ಟಃ ಪರಮಪ್ರೀತೋ ಯಯೌ ಧಾಮ ಸ್ವಕಂ ಮುನಿಃ ॥ ೫೯ ॥
ತ್ರಯೋದಶ್ಯಾಂ ಚತುರ್ದಶ್ಯಾಂ ಪೌರ್ಣಮಾಸ್ಯಾಂ ಚ ಮಾಧವೇ ।
ಸ್ನಾನಂ ದಾನಂ ಭೋಜನಂ ಚ ಕಥಾಶ್ರವಣಮೇವ ಚ ॥ ೬೦ ॥
ವೈಶಾಖಧರ್ಮನಿರತಃ ಸ ವೈ ಮೋಕ್ಷಮವಾಪ್ನುಯಾತ್ ।
ಧನಶರ್ಮಾ ಬ್ರಾಹ್ಮಣಶ್ಚ ಪ್ರೇತಾಶ್ಚೈವ ಯಥಾ ಪುರಾ ॥ ೬೧ ॥

೫೬–೫೮. ಬಳಿಕ ತನ್ನ ವಂಶದ ಅಭಿವೃದ್ಧಿಗಾಗಿಯೇ ಆ ಬ್ರಾಹ್ಮಣನಿಗೆ ಮನೋಹರವಾದ ಉತ್ಸವವನ್ನು ಮಾಡಿಸಿದನು. ಆತನನ್ನು ಒಂದು ಪಲ್ಲಕ್ಕಿಯಲ್ಲಿ ಕೂಡಿಸಿ ಗ್ರಾಮ ಪ್ರದಕ್ಷಿಣೆಯನ್ನು ಮಾಡಿಸುತ್ತ ತಾನೂ ಚತುರಂಗ ಸೈನ್ಯಸಮೇತನಾಗಿ ಅದರ ಹಿಂದೆಯೇ ಮೆರವಣಿಗೆಯಲ್ಲಿ ಬರುತ್ತಿದ್ದನು. ಆ ಮೇಲೆ ಪುನಃ ಆತನನ್ನು ಅಂತಃಪುರದೊಳಗೆ ಕರೆದುಕೊಂಡು ಹೋಗಿ ತನ್ನ ಸಕಲ ವೈಭವವನ್ನೂ ಅರ್ಪಿಸಿ ವಸ್ತ್ರಗಳಿಂದಲೂ, ಆಭರಣಗಳಿಂದಲೂ, ಗೋಭೂತಿಲಹಿರಣ್ಯಾದಿ ದಶಮಹಾದಾನಗಳಿಂದಲೂ ಆತನನ್ನು ಪೂಜೆಮಾಡಿ ಸಾಷ್ಟಾಂಗನಮಸ್ಕಾರವನ್ನು ಮಾಡಿ ಪ್ರದಕ್ಷಿಣೆಗೈದು ಅಂಜಲಿಬಂಧವನ್ನು ಮಾಡಿಕೊಂಡು ಆತನೆದುರಿನಲ್ಲಿ ವಿನೀತನಾಗಿ ನಿಂತಿದ್ದನು.

೫೯. ಬಳಿಕ ಮಹಾತೇಜಸ್ಸಂಪನ್ನನೂ ಪ್ರಖ್ಯಾತ ಯಶಸ್ಸುಳ್ಳವನೂ ಆದ ಆ ಶ್ರುತದೇವಬ್ರಾಹ್ಮಣನು ಸಂತೋಷಗೊಂಡು ಆತನಲ್ಲಿ ಪರಮಾನುಗ್ರಹವನ್ನು ಮಾಡಿ ತನ್ನ ನಿವಾಸವನ್ನು ಕುರಿತು ಹೊರಟುಹೋದನು.

೬೦–೬೧. ಯಾವನು ವೈಶಾಖಮಾಸದ ಶುಕ್ಲಪಕ್ಷದ ತ್ರಯೋದಶಿ, ಚತುರ್ದಶಿ ಮತ್ತು ಪೌರ್ಣಿಮೆಗಳಲ್ಲಿ ಬಹಿಸ್ತೀರ್ಥಸ್ನಾನವನ್ನೂ ಶಕ್ತ್ಯನುಸಾರವಾದ ದಾನಗಳನ್ನೂ, ವಿಷ್ಣುಪೂಜೆಯನ್ನೂ, ವಿಷ್ಣುಸತ್ಕಥಾಶ್ರವಣವನ್ನೂ ಮಾಡುತ್ತ ವೈಶಾಖಮಾಸವ್ರತದ ಧರ್ಮಗಳಲ್ಲಿಯೇ ನಿರತನಾಗಿರುವನೊ, ಅವನು ಬ್ರಾಹ್ಮಣನಾದ ಧನಶರ್ಮನೂ ಪ್ರೇತಗಳೂ ಹಿಂದೆ ಮುಕ್ತರಾದಂತೆ ತಾನೂ ಮೋಕ್ಷಸಾಮ್ರಾಜ್ಯವನ್ನು ಪಡೆಯುವನು.

ನಾರದ ಉವಾಚ :—

ಇತ್ಯೇತತ್ಪರಮಾಖ್ಯಾನಮಂಬರೀಷ ತವೋದಿತಂ ।
ಶ್ರವಣಾತ್ಸರ್ವಪಾಪಘ್ನಂ ಸರ್ವಸಂಪದ್ವಿಧಾಯಕಂ ॥ ೬೨ ॥
ತೇನ ಭುಕ್ತಿಂ ಚ ಮುಕ್ತಿಂ ಚ ಜ್ಞಾನಂ ಮೋಕ್ಷಂ ಚ ವಿಂದತಿ ॥ ೬೩ ॥
ಇತಿ ತಸ್ಯ ವಚಃ ಶ್ರುತ್ವಾ ಅಂಬರೀಷೋ ಮಹಾಯಶಾಃ ।
ಪ್ರಹೃಷ್ಟಾಂತರವೃತ್ತಿಶ್ಚ ಬಾಹ್ಯವ್ಯಾಪಾರವರ್ಜಿತಃ ॥ ೬೪ ॥
ಪ್ರಣನಾಮ ತಥಾ ಮೂರ್ಧ್ನಾ ದಂಡವತ್ಪತಿತೋ ಭುವಿ ।
ವಿಭವೈರಖಿಲೈಶ್ಚಾಪಿ ಪೂಜಯಾಮಾಸ ತಂ ಪುನಃ ॥ ೬೫ ॥
ಸಂಪೂಜಿತಸ್ತಮಾಮಂತ್ರ್ಯ ನಾರದೋ ಭಗವಾನ್ಮುನಿಃ ।
ಲೋಕಾಂತರಂ ಯಯೌ ಧೀಮಾನ್ ಶಾಪಾನ್ನೈಕತ್ರ ಸಂಸ್ಥಿತಿಃ ॥ ೬೬ ॥
ಅಂಬರೀಷೋಽಪಿ ರಾಜರ್ಷಿರ್ನಾರದೋಕ್ತಾನ್ ಇಮಾನ್ ಶುಭಾನ್ ।
ಧರ್ಮಾನ್ ಕೃತ್ವಾ ವಿಲೀನೋ ಭೂತ್ ಪರೇ ಬ್ರಹ್ಮಣಿ ನಿರ್ಗುಣೇ॥ ೬೭ ॥

---

೬೨-೬೩. ನಾರದನು ಹೇಳುತ್ತಾನೆ:—"ಎಲೈ ಅಂಬರೀಷ ಮಹಾರಾಜನೆ! ಇಂತು ನಿನಗೆ ಸರ್ವೋತ್ತಮವಾದ ಆಖ್ಯಾನವನ್ನು ವಿಸ್ತಾರವಾಗಿ ತಿಳಿಸಿರುವೆನು. ಈ ಚರಿತ್ರೆಯು ಕೇಳುವ ಮಾತ್ರದಿಂದಲೇ ಸಕಲ ಪಾತಕಗಳನ್ನೂ ನಿರ್ಮೂಲ ಗೊಳಿಸಿ ಸಕಲೈಶ್ವರ್ಯಗಳನ್ನೂ ಕೈಗೂಡಿಸುವುದು. ಇದರ ಶ್ರವಣದಿಂದ ಭುಕ್ತಿಯನ್ನೂ, ಸ್ವರ್ಗವನ್ನೂ, ಜ್ಞಾನವನ್ನೂ, ಮೋಕ್ಷವನ್ನೂ ಮನುಷ್ಯನು ಪಡೆಯುವನು."

೬೪. ಇಂತೆಂದ ನಾರದನ ಮಾತುಗಳನ್ನು ಕೇಳಿ ಮಹಾ ಯಶಸ್ವಿಯಾದ ಅಂಬರೀಷ ಮಹಾರಾಜನು ತನ್ನ ಅಂತರಂಗವೆಲ್ಲವೂ ಸಂತೋಷದಿಂದ ತುಂಬಿ ತುಳುಕುತ್ತಿರಲು ಲೌಕಿಕ ವ್ಯಾಪಾರವನ್ನೇ ಮರೆತು ನಿಂತಿದ್ದನು.

೬೫. ಕೆಲವು ಕಾಲದ ಮೇಲೆ ದಂಡದಂತೆ ಭೂಮಿಯಲ್ಲಿ ಬಿದ್ದು ತಲೆಯನ್ನು ಆತನ ಪಾದಗಳಲ್ಲಿಟ್ಟು ಸಾಷ್ಟಾಂಗಪ್ರಣಾಮವನ್ನು ಮಾಡಿದನು. ಬಳಿಕ ತನ್ನ ಅಖಿಲ ವೈಭವಗಳಿಂದಲೂ ಆತನಿಗೆ ಅನೇಕ ವಿಧವಾದ ಸತ್ಕಾರವನ್ನೆಸಗಿದನು.

೬೬. ಆತನ ಪೂಜೆಯೆಲ್ಲವನ್ನೂ ಸ್ವೀಕರಿಸಿ ಸರ್ವಜ್ಞನಾದ ನಾರದ ಮಹರ್ಷಿಯು ಲೋಕಾಂತರವನ್ನು ಕುರಿತು ಹೊರಟುಹೋದನು. ಬುದ್ಧಿಸಾಗರ ನಾದ ಆತನಿಗೂ ಶಾಪದ ಫಲವಾಗಿ ಒಂದೆಡೆಯಲ್ಲಿ ನಿಲ್ಲಲು ಅವಕಾಶವಿಲ್ಲವಷ್ಟೆ.

೬೭. ಅಂಬರೀಷ ಮಹಾರಾಜನೂ ನಾರದನಿಂದ ಉಪದೇಶಿಸಲ್ಪಟ್ಟ ಪವಿತ್ರಗಳಾದ ಈ ವೈಶಾಖ ಧರ್ಮಗಳೆಲ್ಲವನ್ನೂ ಸಮಗ್ರವಾಗಿ ಆಚರಿಸಿದವನಾಗಿ ತ್ರಿಗುಣಾತೀತವಾದ ಪರಬ್ರಹ್ಮ ವಸ್ತುವಿನಲ್ಲಿ ಸ್ವರೂಪಲಯವನ್ನು ಹೊಂದಿದನು.

ಸೂತ ಉವಾಚ :—

ಯ ಇದಂ ಪರಮಾಖ್ಯಾನಂ ಪಾಪಘ್ನಂ ಪುಣ್ಯವರ್ಧನಂ ।
ಶೃಣುಯಾದ್ವಾ ಪಠೇದ್ವಾಪಿ ಸ ಯಾತಿ ಪರಮಾಂ ಗತಿಂ ॥ ೬೮ ॥
ಲಿಖಿತಂ ಪುಸ್ತಕಂ ಯೇಷಾಂ ಗೃಹೇ ತಿಷ್ಠತಿ ಮಾನದಾಃ ।
ತೇಷಾಂ ಮುಕ್ತಿಃ ಕರಸ್ಥಾ ಹಿ ಕಿಮು ತಚ್ಛ್ರವಣಾತ್ಮನಾಂ ॥ ೬೯ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ದ್ವಿತೀಯೇ ವೈಷ್ಣವಖಂಡೇ ವೈಶಾಖಮಾಸಮಾಹಾತ್ಮ್ಯೇ ನಾರದಾಂಬರೀಷಸಂವಾದೇ "ಫಲಶ್ರುತಿಕಥನಂ" ನಾಮ ಪಂಚವಿಂಶೋಽಧ್ಯಾಯಃ

## ವೈಶಾಖಮಾಸಮಾಹಾತ್ಮ್ಯಂ ಸಂಪೂರ್ಣಂ

೬೮. ಸೂತನು ಹೇಳುತ್ತಾನೆ:—ಸಮಸ್ತ ಕಲ್ಮಷಾಪನೋದಕವೂ ಪುಣ್ಯವರ್ಧಕವೂ ಆದ ಈ ಸರ್ವೋತ್ತಮವಾದ ಉಪಾಖ್ಯಾನವನ್ನು ಯಾವ ಮನುಷ್ಯನು ಕೇಳುವನೊ, ಅಥವಾ ಓದುವನೊ, ಅವನು ಪರಾತ್ಪರವಾದ ವೈಕುಂಠಪದವನ್ನು ಸೇರುವನು.

೬೯. ಎಲೈ ಮಹರ್ಷಿಗಳಿರಾ! ಈ ಉಪಾಖ್ಯಾನದ ಕೈಬರಹದ ಪುಸ್ತಕವು ಯಾರ ಮನೆಯಲ್ಲಿ ಪೂಜಿಸಲ್ಪಡುತ್ತಿರುವುದೊ, ಅವರಿಗೇ ಮುಕ್ತಿಯು ಕರತಲಾಮಲಕದಂತೆ ಸುಲಭವಾಗಿರುವುದೆಂದಮೇಲೆ ಅದರ ಶ್ರವಣದಲ್ಲಿ ಆಸಕ್ತಿಯುಳ್ಳ ಮಾನವರ ವಿಷಯವನ್ನು ಬೇರೆ ಹೇಳಲೇಕೆ?

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀ ಸ್ಕಾಂದಮಹಾಪುರಾಣದ ಎರಡನೆಯ ವೈಷ್ಣವಖಂಡದ ವೈಶಾಖಮಾಸಮಾಹಾತ್ಮ್ಯದ ನಾರದಾಂಬರೀಷಸಂವಾದದಲ್ಲಿ "ಫಲಶ್ರುತಿ ಕಥನ"ವೆಂಬ ಇಪತ್ತೈದನೆಯ ಅಧ್ಯಾಯವು ಮುಗಿದುದು

## ವೈಶಾಖಮಾಸಮಾಹಾತ್ಮ್ಯವು ಸಂಪೂರ್ಣವಾದುದು